


# ಕನ್ನಡ ಶಾಸನಗಳ

# ಸಾಂಸ್ಕೃತಿಕ ಅಧ್ಯಯನ

ಕ್ರಿ. ಶ. 450–ಕ್ರಿ. ಶ. 1150

**ಡಾ. ಎಂ. ಚಿದಾನಂದಮೂರ್ತಿ,** ಎಂ.ಎ., ಪಿಎಚ್.ಡಿ
ಕನ್ನಡ ಪ್ರಾಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ

ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
**1979**

# ಅರ್ಪಣೆ



ಗುರುವರ್ಯ ಪ್ರೊ. ತೀ. ನಂ. ಶ್ರೀಕಂಠಯ್ಯನವರು




# ಕನ್ನಡ ಶಾಸನಗಳ
# ಸಾಂಸ್ಕೃತಿಕ ಅಧ್ಯಯನ

ಕ್ರಿ. ಶ. 450–ಕ್ರಿ. ಶ. 1150

**ಡಾ. ಎಂ. ಚಿದಾನಂದಮೂರ್ತಿ,** ಎಂ.ಎ., ಪಿಎಚ್.ಡಿ.
ಕನ್ನಡ ಪ್ರಾಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ

**ಪ್ರಸಾರಾಂಗ**
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು
**1979**

Kannaḍa Śāsanagaḷa Sāmskṛtika Adhyayana
(" *A Cultural Study of Kannada Inscriptions, 450 A.D.–1150 A.D.*")
by Dr. M. Chidanandamurthy, Bangalore University.
Second revised edition 1979 Published by the Director, " Prasārānga",
University of Mysore, Mysore.
pp. xvi +480+ 102 illustrations; Price Rs. [illegible]-00, Special Rs. [illegible]-00

ಮೊದಲ ಮುದ್ರಣ 1966
ಎರಡನೆಯ (ಪರಿಷ್ಕೃತ) ಮುದ್ರಣ 1979



ಸಾದಾ ಪ್ರತಿ : ರೂ. [illegible]
ಉತ್ತಮ ಪ್ರತಿ : ರೂ. [illegible]

ಪ್ರಕಾಶಕರು :
ನಿರ್ದೇಶಕರು, ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ

ಮುದ್ರಣ :
ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯ, ಮೈಸೂರು

ಮೈಸೂರು ವಿಶ್ವವಿದ್ಯಾನಿಲಯಕ್ಕೆ
ಅರ್ಪಿಸಿದ
ಪಿಎಚ್.ಡಿ. ನಿಬಂಧ

## ಪ್ರಕಾಶಕರ ಮಾತು

ಡಾ. ಎಂ. ಚಿದಾನಂದಮೂರ್ತಿ ಅವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಈ ವಿದ್ವತ್ ಪ್ರಬಂಧವನ್ನು ಕನ್ನಡಿಗರಿಗೆ ಬಹಳ ಸಂತೋಷದಿಂದ ಸಮರ್ಪಿಸುತ್ತಿದ್ದೇವೆ. ಇದರ ಪ್ರಕಟಣೆಯ ಕಾರ್ಯವನ್ನು ನಮಗೆ ವಹಿಸಿಕೊಟ್ಟ ಶ್ರೀಯುತರಿಗೆ ನಮ್ಮ ವಂದನೆಗಳು.

ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದವರು (University Grants Commission) ಇದರ ಪ್ರಕಟಣೆಯ ವೆಚ್ಚವನ್ನು ಭಾಗಶಃ ವಹಿಸಿಕೊಂಡಿದ್ದಾರೆ. ಅವರ ಉದಾರ ಸಹಾಯಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ಮೈಸೂರು
15-9-1966

**ಪ್ರಭುಶಂಕರ**
ನಿರ್ದೇಶಕರು

# ಮೊದಲ ಅರಿಕೆ

(1966ರ ಮುದ್ರಣಕ್ಕೆ)

ಕನ್ನಡದ ಆದಿಕವಿಯೆಂದು ಪ್ರಸಿದ್ಧನಾಗಿರುವ ಪಂಪನಿಗೆ ಹಿನ್ನೆಲೆಯಾದ ಸಾಮಾಜಿಕ ಜೀವನವನ್ನು ಚಿತ್ರಿಸಲು ಪ್ರೊ|| ಡಿ. ಎಲ್. ನರಸಿಂಹಾಚಾರ್ಯರ ಸೂಚನೆಯ ಪ್ರಕಾರ ಒಂಬತ್ತು, ಹತ್ತು ಮತ್ತು ಹನ್ನೊಂದನೆಯ ಶತಮಾನಗಳ ಶಾಸನಗಳನ್ನು ಅಧ್ಯಯನಮಾಡುವ ಅವಕಾಶ ಕೆಲವು ವರ್ಷಗಳ ಹಿಂದೆ ಒದಗಿತು. ಅದರ ಫಲವಾಗಿ ಮೂಡಿಬಂದ 'ಪಂಪಕವಿ ಮತ್ತು ಮೌಲ್ಯಪ್ರಸಾರ' ಎಂಬ ಲೇಖನವು ಮುಂದೆ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಯಿತು. ಶಾಸನಗಳಲ್ಲಿ ನಿಕ್ಷಿಪ್ತವಾಗಿರುವ ವಿಷಯಸಂಪತ್ತಿನ ಕಡೆಗೆ ನನ್ನ ಗಮನವು ಹೊರಳಿದ್ದು ಆಗಲೇ. ನನ್ನ ಈ ಆಸಕ್ತಿಯನ್ನು ದಿ. ಪ್ರೊ|| ತೀ. ನಂ. ಶ್ರೀಕಂಠಯ್ಯನವರ ಮುಂದೆ ಹೇಳಿಕೊಂಡಾಗ, ಶಾಸನಗಳ ಅಧ್ಯಯನವನ್ನೇ ಏಕೆ ಮುಂದುವರಿಸಬಾರದು ಎಂಬ ಸಲಹೆಯನ್ನಿತ್ತರು. ಅವರ ಪ್ರೋತ್ಸಾಹದ ಮತ್ತು ಮಾರ್ಗದರ್ಶನದ ಫಲವೇ ಈ ನಿಬಂಧ.

ನನ್ನ ಅಧ್ಯಯನದ ರೀತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ಸಣ್ಣ ಸಣ್ಣ ಪಟ್ಟಿಕೆಗಳ (slips) ಮೇಲೆ ವಿಷಯಗಳನ್ನು—ಒಂದು ಪಟ್ಟಿಕೆಗೆ ಒಂದೇ ಅಂಶದಂತೆ—ಸಂಗ್ರಹಿಸುವ, ಮುಂದೆ ಆ ಪಟ್ಟಿಕೆಗಳನ್ನು ಬೇಕಾದಂತೆ ಜೋಡಿಸಿಕೊಳ್ಳುವ ಪದ್ಧತಿ ವಿಶೇಷವಾಗಿ ಪಾಶ್ಚಾತ್ಯರಲ್ಲಿ ರೂಢಿಯಲ್ಲಿದೆ. ಈ ಪದ್ಧತಿಯ ಪರಿಚಯವಾದುದು ಪ್ರೊ|| ತೀ. ನಂ. ಶ್ರೀಕಂಠಯ್ಯನವರಿಂದಲೇ. ಈ ಪದ್ಧತಿಯು ನನ್ನ ಅಧ್ಯಯನದಂತಹ ಅಧ್ಯಯನಗಳಲ್ಲಂತೂ ತೀರ ಅಗತ್ಯವಾದುದು. ಒಂದೊಂದು ವಿಷಯವನ್ನು ಮಾತ್ರ ಲಿಖಿಸಿರುವ ಅಂತಹ ಪಟ್ಟಿಕೆಗಳಿದ್ದರೆ ಅವುಗಳನ್ನು ವಿಷಯಾನುಕ್ರಮವಾಗಿ, ಕಾಲಾನುಕ್ರಮವಾಗಿ, ನಮಗೆ ಅನುಕೂಲವಾದ ರೀತಿಯಲ್ಲಿ ಜೋಡಿಸಿಕೊಳ್ಳಬಹುದು ; ಅರ್ಥಕೋಶದಲ್ಲಿ ನಮಗೆ ಬೇಕಾದ ಪದದ ಮೇಲೆ ಸುಲಭವಾಗಿ ಕೈಹಾಕುವಂತೆ ನಮಗೆ ಬೇಕಾದ ವಿಷಯದ ಪಟ್ಟಿಕೆಯನ್ನು ಸುಲಭವಾಗಿ ಎತ್ತಿಕೊಳ್ಳಬಹುದು. ಈ ಪಟ್ಟಿಕೆಗಳ ಪದ್ಧತಿಯು ಭಾರತದಲ್ಲಿ ಹೆಚ್ಚು ಹೆಚ್ಚು ಪ್ರಚಾರಕ್ಕೆ ಬರುತ್ತಿದೆ.

ನಾನು ಇತಿಹಾಸವನ್ನೇ ಪ್ರಧಾನ ವಿಷಯವನ್ನಾಗಿ ತೆಗೆದುಕೊಂಡು ಓದಿದ ವಿದ್ಯಾರ್ಥಿಯಲ್ಲ. ಆದರೆ ಕನ್ನಡ ಬಿ.ಎ. ಆನರ್ಸ್ ತರಗತಿಯಲ್ಲಿ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸಗಳಿಗೆ ಸಂಬಂಧಿಸಿದ ಪಾಠಗಳನ್ನು ಹಿರಿಯ ವಿದ್ವಾಂಸರಾದ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳವರಿಂದ ಕೇಳುವ ಸದವಕಾಶವು ಒದಗಿದ್ದಿತು. ಮೊದಲಿನಿಂದಲೂ ಇತಿಹಾಸ ಸಂಸ್ಕೃತಿಗಳ ವಿಷಯದಲ್ಲಿ ಬಹುವಾದ ಆಸಕ್ತಿಯನ್ನು ಹೊಂದಿದ್ದ ನಾನು ಅದನ್ನು ಬೆಳಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಕನ್ನಡ ಭಾಷಾ ಸಾಹಿತ್ಯಗಳ ವಿದ್ಯಾರ್ಥಿಯಾದ ನಾನು ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಂಡದ್ದು ಕೆಲವರಿಗೆ ಆಶ್ಚರ್ಯವನ್ನುಂಟುಮಾಡಿತು. ನನ್ನ ಅನುಭವದಿಂದ ಹೇಳುವುದಾದರೆ ಈ ಅಧ್ಯಯನದ ಸಮಯದಲ್ಲಿ ವಿಷಯಕ್ಕೆ ನಾನು ಹೊಸಬನೆಂಬ ಭಾವನೆಯೇ ಬರಲಿಲ್ಲ. ಇಲ್ಲಿ ನಾನು ನೀರಸ ಸಂಗತಿಗಳನ್ನು ಬರಿಯ ಪಟ್ಟಿಮಾಡುವ ಕೆಲಸಕ್ಕೆ ಕೈಹಾಕಿಲ್ಲ ; ಅವುಗಳನ್ನು ಸರಿಯಾದ ಕ್ರಮದಲ್ಲಿ ಜೋಡಿಸಿಕೊಡಲು, ಪರಸ್ಪರ ಸಂಬಂಧ ಕಲ್ಪಿಸಿ ವ್ಯಾಖ್ಯಾನಿಸಲು ಪ್ರಯತ್ನಿಸಿದ್ದೇನೆ. ಇಂತಹ ಒಂದು ಅಧ್ಯಯನವು ಕನ್ನಡ ಶಾಸನಗಳ ವಿಷಯದಲ್ಲಿ ಇಲ್ಲಿಯವರೆಗೆ ಇಷ್ಟು ಕ್ರಮಬದ್ಧವಾಗಿ ನಡೆದಿರಲಿಲ್ಲವೆಂದು ವಿನಯದಿಂದ ಸೂಚಿಸಲು ಇಚ್ಛಿಸುತ್ತೇನೆ.

ನನಗೆ ನಿಬಂಧದ ವಿಷಯವನ್ನು ಸೂಚಿಸಿದ್ದಲ್ಲದೆ ಉದ್ದಕ್ಕೂ ಮಾರ್ಗದರ್ಶಕರಾಗಿ ನಿಂತು ನನ್ನಿಂದ ಕೆಲಸ ಮಾಡಿಸಿದ ನನ್ನ ಪೂಜ್ಯ ಗುರುಗಳಾದ ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಈ ನಿಬಂಧವು ಒಂದು ರೂಪವನ್ನು ತಳೆಯಲು ಬಹುಮಟ್ಟಿಗೆ ಕಾರಣ. ಅವರು ನನ್ನಿಂದ ಕಷ್ಟಪಟ್ಟು ಕೆಲಸಮಾಡಿಸಿದ್ದಾರೆ ; ಒಂದೊಂದು ಅಧ್ಯಾಯ

ವನ್ನೂ ಕೂಲಂಕಷವಾಗಿ ಓದಿ, ವಿಚಾರವಿಮರ್ಶಿಸಿದ್ದಾರೆ; ಸಲಹೆಗಳನ್ನಿತ್ತಿದ್ದಾರೆ, ತಿದ್ದಿದ್ದಾರೆ; ಭಿನ್ನಾಭಿಪ್ರಾಯಗಳಿದ್ದಾಗ ತಮ್ಮ ಅಭಿಪ್ರಾಯಗಳನ್ನು ಸೂಚಿಸಿ ಅಂತಿಮ ತೀರ್ಮಾನವನ್ನು ನನ್ನ ಇಚ್ಛೆಗೇ ಬಿಟ್ಟಿದ್ದಾರೆ. ಅಂತಹ ಚರ್ಚೆಗಳ ಸಮಯದಲ್ಲಿ ಅವರ ಮಾತುಗಳನ್ನು ಕೇಳುವುದೇ ಒಂದು ಸೊಗಸು, ಒಂದು ವಿದ್ಯಾಭ್ಯಾಸ. ಈ ನಿಬಂಧದ ಶ್ರೇಯಸ್ಸಿನ ಬಹುಭಾಗ ಅವರಿಗೆ ಸಲ್ಲಬೇಕು.

ನನಗೆ ಪಿಎಚ್.ಡಿ. ಪ್ರಶಸ್ತಿಯು ದೊರೆತಾಗ ಅವರು ತಮಗೆ ಪುತ್ರೋತ್ಸವವಾದಷ್ಟು ಸಂತೋಷವಾಗಿದೆಯೆಂದು ಅನೇಕರ ಮುಂದೆ ಹೇಳಿಕೊಂಡು ಹಿಗ್ಗಿದರು. ಈ ಗ್ರಂಥವು ಬೇಗ ಪ್ರಕಟವಾಗಲೆಂದು ಹಾರೈಸಿದರು. ಅವರ ಹಾರೈಕೆಯ ಫಲವೋ ಏನೋ ಎಂಬಂತೆ ಇದು ಬಹುಬೇಗ ಅಚ್ಚಿನ ಮನೆಗೂ ಹೋಯಿತು; ಅಚ್ಚಿನ ಕಾರ್ಯವೂ ಮುಗಿಯಿತು. ಆರಂಭದ ಈ ಪುಟಗಳ ಪ್ರೂಫುಗಳೂ ಕೈಗೆ ಬಂದವು. ಅವುಗಳನ್ನು ತಿದ್ದಿಕೊಟ್ಟಿದೆ; ಇನ್ನೇನು ಅವು ಅಚ್ಚಾಗಿಬಿಟ್ಟಿದ್ದರೆ ಅಚ್ಚಿನ ಕೆಲಸ ಸಂಪೂರ್ಣವಾದಂತಾಗಿ ಗ್ರಂಥವು ಹೊಲಿಗೆಗೆ ಸಿದ್ಧವಾಗುತ್ತಿದ್ದಿತು. ಪ್ರೊ|| ತೀ. ನ. ಶ್ರೀ. ಯವರಿಗೆ ನಾನು ಎಷ್ಟು ವಿಧಗಳಲ್ಲಿ ಋಣಿ ಎಂಬುದನ್ನು ಸ್ಮರಿಸಿದಾಗ ಕಣ್ಣಲ್ಲಿ ನೀರು ಚಿಮ್ಮುತ್ತದೆ. ನನ್ನನ್ನು ತಮ್ಮ ವಿದ್ಯಾರ್ಥಿ ಎಂಬುದಕ್ಕಿಂತ ಹೆಚ್ಚು ಆತ್ಮೀಯವಾಗಿ ನಡೆಸಿಕೊಂಡಿದ್ದರು. ಈ ಮಧುರ ಸಂಬಂಧದ ಸ್ಮರಣೆಗಾಗಿ ನಾನು ಈ ನಿಬಂಧವನ್ನು ಅವರಿಗೆ ಅರ್ಪಿಸುವುದಾಗಿಯೂ ಅದಕ್ಕೆ ಒಪ್ಪಿಗೆ ಕೊಡಬೇಕೆಂದೂ ಕೇಳಿಕೊಂಡಿದ್ದೆ. ಅವರು ಉದಾರವಾದ ಮನಸ್ಸಿನಿಂದ, ಸಂತೋಷದಿಂದ ಒಪ್ಪಿಗೆಯನ್ನೂ ಕೊಟ್ಟಿದ್ದರು. ಆದರೆ ಪೂರ್ತಿ ಸಿದ್ಧವಾದ ಗ್ರಂಥವನ್ನು ಅವರಿಗೆ ಒಪ್ಪಿಸಲು ವಿಧಿ ನನಗೆ ಅವಕಾಶವನ್ನು ಕೊಡದೇ ಹೋಯಿತು. ಅಸಂಖ್ಯಾತ ಆತ್ಮೀಯರನ್ನೂ ಅಭಿಮಾನಿಗಳನ್ನೂ ಅಪಾರವಾದ ದುಃಖದಲ್ಲಿ ಅದ್ದಿ ಅವರು ಸೆಪ್ಟೆಂಬರ್ ಏಳನೇ ತಾರೀಖು ಈ ಲೋಕದಿಂದ ನಡೆದೇಬಿಟ್ಟರು. ಇನ್ನು ಹೇಳುವುದು ಏನಾದರೂ ಉಳಿದಿದೆಯೇ?

ಆಧುನಿಕ ಸಂಶೋಧನೆಯ ಪ್ರತೀಕದಂತಿದ್ದ ನನ್ನ ಆ ಪ್ರಿಯಗುರುಗಳಿಗೆ ನಾನು ಈ ಗ್ರಂಥವನ್ನು ಪ್ರೀತಿಯಿಂದ ಮತ್ತು ಕೃತಜ್ಞತೆಯಿಂದ ಸಮರ್ಪಿಸಿದ್ದೇನೆ.

ನನ್ನ ಇನ್ನೊಬ್ಬ ಪೂಜ್ಯ ಗುರುಗಳಾದ ಪ್ರೊ|| ಡಿ. ಎಲ್. ನರಸಿಂಹಾಚಾರ್ಯರು ಆಗಾಗ್ಗೆ ನನ್ನ ಕೆಲಸದ ಪ್ರಗತಿಯ ವಿಷಯದಲ್ಲಿ ಆಸಕ್ತಿಯನ್ನು ತೋರಿ ವಿಚಾರಿಸುತ್ತಿದ್ದರು. ಅವರ ಬಳಿಯೂ ಕುಳಿತು ಹಲವು ವಿಷಯಗಳನ್ನು ಚರ್ಚಿಸಿದ್ದೇನೆ; ಅಮೂಲ್ಯ ಸಲಹೆಗಳ ಲಾಭವನ್ನು ಪಡೆದಿದ್ದೇನೆ.

ನಾನು ಈ ಕೆಲಸವನ್ನು ಕೈಗೊಳ್ಳಲು ಒಪ್ಪಿಗೆಯಿತ್ತು ಮೈಸೂರು ವಿಶ್ವವಿದ್ಯಾನಿಲಯವು ಆಶ್ರಯವನ್ನು ನೀಡಿತು. ತಮ್ಮ ಪುಸ್ತಕ ಭಂಡಾರದಲ್ಲಿ ನನಗೆ ಬೇಕಾದ ಸಕಲ ಸೌಲಭ್ಯಗಳನ್ನೂ ಮೈಸೂರು ವಿಶ್ವವಿದ್ಯಾನಿಲಯದ ಪುಸ್ತಕಭಂಡಾರದ ಅಧಿಕಾರಿಗಳು ಒದಗಿಸಿಕೊಟ್ಟರು.

ಪ್ರಿಯಮಿತ್ರ ಶ್ರೀ ಆರ್. ಎಲ್. ಅನಂತರಾಮಯ್ಯನವರು ನನ್ನ ನಿಬಂಧದ ಪ್ರತಿ ಮಾಡುವ ಶ್ರಮದಾಯಕ ಕೆಲಸವನ್ನು ಸಂತೋಷದಿಂದ ವಹಿಸಿ ಸುಂದರವಾದ, ತಪ್ಪಿಲ್ಲದ ರೀತಿಯಲ್ಲಿ ಮುಗಿಸಿದರು.

ಈ ಗ್ರಂಥವು ಅಚ್ಚಾಗಿ ಹೊರಬರಲು ಮುಖ್ಯ ಕಾರಣ ಮೈಸೂರು ವಿಶ್ವವಿದ್ಯಾನಿಲಯ. 'ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ'ದ ಧನಸಹಾಯವನ್ನು ಪಡೆದು ವಿಶ್ವವಿದ್ಯಾನಿಲಯವು ಇದನ್ನು ಪ್ರಕಟಿಸುತ್ತಿದೆ. ಪ್ರಸಾರಾಂಗದ ಡೈರೆಕ್ಟರ್ ಡಾ. ಪ್ರಭುಶಂಕರ ಮತ್ತು ಅಸಿಸ್ಟೆಂಟ್ ಡೈರೆಕ್ಟರ್ ಶ್ರೀ ಕೆ. ಟಿ. ವೀರಪ್ಪನವರು ಈ ಗ್ರಂಥಪ್ರಕಟಣೆಯ ವಿಷಯದಲ್ಲಿ ಮೊದಲಿನಿಂದ ವೈಯಕ್ತಿಕ ಆಸಕ್ತಿಯನ್ನೂ ಉತ್ಸಾಹವನ್ನೂ ತೋರಿದ್ದಾರೆ.

ಇದು ಅಚ್ಚಾದದ್ದು ಮೈಸೂರು ವಿಶ್ವವಿದ್ಯಾನಿಲಯದ ಮುದ್ರಣಾಲಯದಲ್ಲಿ. ಮುದ್ರಣಾಲಯದ ಡೆಪ್ಯುಟಿ ಡೈರೆಕ್ಟರ್ ಶ್ರೀ ಎಚ್. ನರಸಣ್ಣನವರು ಆಗಾಗ್ಗೆ ನಾನು ಕೊಡುತ್ತಿದ್ದ ಕಿರುಕುಳಗಳನ್ನು ತಪ್ಪು ತಿಳಿಯದೆ, ಈ ಪುಸ್ತಕವು ಇಷ್ಟು ಸುಂದರವಾಗಿ ಶೀಘ್ರವಾಗಿ ಹೊರಬರಲು ಕಾರಣಕರ್ತರಾಗಿದ್ದಾರೆ. ಅದೇ ಮುದ್ರಣಾಲಯದ ಶ್ರೀ ಬಿ. ಜಿ. ದೇವಣ್ಣನವರೂ, ಶ್ರೀ ವಿ. ಎನ್. ಶ್ರೀನಿವಾಸಮೂರ್ತಿಯವರೂ ನನಗೆ ಹಲವು ವಿಧಗಳಲ್ಲಿ ಸಹಾಯ ಮಾಡಿದ್ದಾರೆ. ಅಲ್ಲಿಯ ಕೆಲಸಗಾರರು ಈ ಪುಸ್ತಕವು ಅತ್ಯುತ್ತಮವಾದ ಮತ್ತು ತಪ್ಪಿಲ್ಲದ ರೀತಿಯಲ್ಲಿ ಹೊರಬರಲು

ನಿಜವಾಗಿಯೂ ಶ್ರಮಿಸಿದ್ದಾರೆ. ಈ ಪುಸ್ತಕದ ಅಡಿಟಿಪ್ಪಣಿಗಳನ್ನು ನೋಡಿದವರಿಗೆ ಇದು ಏನೇನೂ ಉತ್ಪ್ರೇಕ್ಷೆಯಲ್ಲವೆಂದು ಗೊತ್ತಾಗುತ್ತದೆ.

ಈ ಪುಸ್ತಕವು ಅಚ್ಚಾಗಿ ಹೊರಬರುವ ಮುನ್ನವೇ ಹಲವರು ಹಿರಿಯರೂ ಮಿತ್ರರೂ ವಿದ್ಯಾರ್ಥಿಗಳೂ ಇದನ್ನು ಹಸ್ತಪ್ರತಿಯಲ್ಲಿ ಓದಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಹಿರಿಯರೂ ವಿದ್ವಾಂಸರೂ ಆದ ಕೆಲವು ಮಹನೀಯರು ಈ ಗ್ರಂಥದ ವಿಷಯದಲ್ಲಿ ತಮ್ಮ ಮೆಚ್ಚುಗೆಯ ನುಡಿಗಳನ್ನು ಕೊಟ್ಟಿದ್ದಾರೆ. ಅವುಗಳನ್ನು ಈ ಪುಸ್ತಕದ ರಕ್ಷಾಪುಟದಲ್ಲಿ ಅಚ್ಚುಮಾಡಿದೆ.

ಡಾ. ಪಿ. ಬಿ. ದೇಸಾಯಿಯವರು ಈ ಗ್ರಂಥದ ಪ್ರಕಟಣೆಯ ವಿಷಯದಲ್ಲಿ ಮೊದಲಿನಿಂದಲೂ ತೀವ್ರವಾದ ಆಸಕ್ತಿಯನ್ನು ತೋರಿದರು. ನನ್ನನ್ನು ಧಾರವಾಡಕ್ಕೆ ಬರಮಾಡಿಕೊಂಡು ಸನ್ಮೊಡನೆ ಕೆಲವು ಗಂಟೆಗಳ ಕಾಲ ಕುಳಿತು, ಹಲವು ಕೊರತೆಗಳನ್ನು ತಿಳಿಸಿ ಅವುಗಳನ್ನು ತಿದ್ದಿಕೊಳ್ಳುವಂತೆ ಸೂಚಿಸಿದರು. ಡಾ. ಎಸ್. ಸಿ. ನಂದೀಮಠ ಅವರೂ ಹಲವು ಸಲಹೆಗಳನ್ನು ಮಾಡಿದ್ದಾರೆ. ಇವುಗಳಿಂದ ನನ್ನ ನಿಬಂಧವು ಸಹಜವಾಗಿಯೇ ಉತ್ತಮಗೊಂಡಿದೆ.

ಇದರಲ್ಲಿ ಪ್ರಕಟವಾಗಿರುವ ಚಿತ್ರಗಳು ಈ ಪುಸ್ತಕಕ್ಕೆ ಒಂದು ಶೋಭೆಯನ್ನು ತಂದಿವೆ. ಮೈಸೂರು ಪುರಾತತ್ವ ಇಲಾಖೆಯ ಡೈರೆಕ್ಟರ್ ಡಾ. ಎಂ. ಶೇಷಾದ್ರಿಯವರು ಅನೇಕ ಬ್ಲಾಕುಗಳನ್ನಿತ್ತು ಉಪಕಾರ ಮಾಡಿದ್ದಾರೆ. ಅಲ್ಲಿಯ ಅಸಿಸ್ಟೆಂಟ್ ಡೈರೆಕ್ಟರ್ ಶ್ರೀ ಎಂ. ಹನುಮಂತರಾಯರೂ ಮತ್ತು ಅಲ್ಲಿಯ ಪುಸ್ತಕ ಭಂಡಾರದ ಮೇಲ್ವಿಚಾರಣೆ ನೋಡಿಕೊಳ್ಳುತ್ತಿರುವ ಶ್ರೀ ಎಸ್. ಶಾಮಣ್ಣನವರೂ ನನಗೆ ಹಲವು ವಿಧವಾಗಿ ಸಹಾಯ ಮಾಡಿದ್ದಾರೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಿಂದ ಡಾ. ಪಿ. ಬಿ. ದೇಸಾಯಿಯವರು ಹಲವು ಚಿತ್ರಗಳನ್ನು ಕಳುಹಿಸಿಕೊಟ್ಟರು. ಕಲ್ಕತ್ತಾದ ಡಾ. ಎ. ಗೋಸ್ವಾಮಿಯವರು ಲಕುಲೀಶನ ಚಿತ್ರವನ್ನು ಅವರ ಗ್ರಂಥದಿಂದ ತೆಗೆದುಕೊಂಡು ಉಪಯೋಗಿಸಿಕೊಳ್ಳಲು ಅನುಮತಿಯಿತ್ತಿದ್ದಾರೆ. ಮಿತ್ರರಾದ ಶ್ರೀ ಪಿ. ಗುರುರಾಜಭಟ್ಟರು ಕದರಿಬೆಟ್ಟದ ಮೇಲಿನ ಪ್ರಾಚೀನ ಸ್ಮಾರಕಗಳ ಹಲವು ಚಿತ್ರಗಳನ್ನು ಕೊಟ್ಟಿದ್ದಾರೆ. ಅವರು ನೀಡಿದ ಸೂಚನೆಗಳನ್ನನುಸರಿಸಿ ಆ ಚಿತ್ರಗಳಿಗೆ ಶೀರ್ಷಿಕೆಗಳನ್ನು ಕೊಟ್ಟಿದ್ದೇನೆ. ಶ್ರೀ "ಸಿಂಹನಾಥನ್" ಅವರು ಸುಂದರ ರಕ್ಷಾಕವಚವನ್ನು ಸಿದ್ಧಗೊಳಿಸಿ ಈ ಗ್ರಂಥದ ಚೆಲುವನ್ನು ಹೆಚ್ಚಿಸಿದ್ದಾರೆ.

ಹೀಗೆ ನನ್ನ ಋಣ ದೊಡ್ಡದು. ಅದನ್ನು ಹೇಗೆ ಸ್ಮರಿಸುವುದೋ ನನಗೆ ತಿಳಿಯದು. ಈ ಎಲ್ಲ ಸಂಸ್ಥೆಗಳಿಗೂ ಮಹನೀಯರಿಗೂ ನಾನು ಬಹುವಾಗಿ ಕೃತಜ್ಞನಾಗಿದ್ದೇನೆ ಎಂದು ಮಾತ್ರ ಹೇಳಿ ಸುಮ್ಮನಾಗುತ್ತೇನೆ.

ಈ ಪುಸ್ತಕವನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ. ಶಾಸನ ಪ್ರಪಂಚ ಬಹಳ ದೊಡ್ಡದು. ಆದರೂ ನನ್ನ ಅಧ್ಯಯನಕ್ಕೆ ಸಂಬಂಧಿಸಿದ, ಅಚ್ಚಾಗಿರುವ ಶಾಸನಗಳಲ್ಲಿ ಬಹುಪಾಲನ್ನು ನೋಡಿದ್ದೇನೆ ಎಂಬ ವಿಶ್ವಾಸ ನನಗಿದೆ. ಅಚ್ಚಾಗದಿರುವ ಶಾಸನಗಳನ್ನು ನೋಡಲು ನನಗೆ ಕಾಲಾವಕಾಶ ಒದಗಿ ಬರಲಿಲ್ಲ. ನನ್ನ ಪುಸ್ತಕ ಅಚ್ಚಿಗೆ ಹೋದಮೇಲೆ ಒಂದೆರಡು ಶಾಸನ ಸಂಪುಟಗಳು ಪ್ರಕಟವಾಗಿವೆ. ಅವುಗಳನ್ನು ತಿರುವಿಹಾಕಿದಾಗ ಅಲ್ಲಿಯ ಹಲವು ವಿವರಗಳು ನನ್ನ ನಿಬಂಧದಲ್ಲಿ ಸೇರ್ಪಡೆಯಾಗಬಹುದಿತ್ತು ಎಂದು ನನಗೆ ಅನ್ನಿಸಿತು. ಉದಾಹರಣೆಗೆ 'ಬೌದ್ಧವಾಡಿಗೆ' ಎಂಬ ಹೆಸರಿನ ಬಡಾವಣೆ ಏಳಾಪುರ ಎಂಬ ಅಗ್ರಹಾರದಲ್ಲಿದ್ದಿತು (SII. XV.151. 1191 A D) ಅಲ್ಲಿ ಬೌದ್ಧರು ವಾಸವಾಗಿದ್ದರೆಂದು ಕಾಣುತ್ತದೆ. ಇದು ಬ್ರಾಹ್ಮಣರು ವಾಸವಾಗಿರುತ್ತಿದ್ದ ಬ್ರಹ್ಮಪುರಿಗಳನ್ನು ಹೋಲುತ್ತದೆ. ಇಂತಹ ಸಂಗತಿಗಳು ನನ್ನ ವಿಷಯಪ್ರತಿಪಾದನೆಗೆ ಅನೇಕ ಕಡೆ ಪುಷ್ಟಿಕೊಡುತ್ತಿದ್ದುವು. ನನ್ನ ಹೇಳಿಕೆಗಳಲ್ಲಿ ಕೆಲವು ತಪ್ಪುಗಳು ಉಳಿದುಕೊಂಡು ಬಂದಿವೆ. ಉದಾಹರಣೆಗೆ, '–ನಾಥ' ಎಂದು ಕೊನೆಯಾಗುವ ಒಂದು ಗುರುಪರಂಪರೆಯನ್ನು ಕೊಡುವ ಶಾಸನವೊಂದನ್ನು ಉದ್ಧರಿಸಿ, ಕರ್ನಾಟಕದಲ್ಲಿ ನಾಥಪಂಥವಿದ್ದಿತೆಂಬುದಕ್ಕೆ ಇದು ಆಧಾರವಾಗಲಾರದೆಂದು ಬರೆದಿದ್ದೇನೆ. (ಪು. 154) ಆದರೆ ಇಲ್ಲಿ ನಾಥಪಂಥವಿದ್ದಿತೆಂಬುದಕ್ಕೆ ಇದು ಸ್ಪಷ್ಟಾಧಾರವಾಗಿದೆ. ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಬರೆದಿರುವವರಲ್ಲಿ ವಿನ್ಸೆಂಟ್ ಸ್ಮಿತ್ ಒಬ್ಬರು

ಎಂದು ಬರೆದಿದ್ದೇನೆ; ಹಾಗೆಯೇ ಅಚ್ಚಾಗಿದೆ (ಪು.2). ಆದರೆ ನನ್ನ ಮನಸ್ಸಿನಲ್ಲಿದ್ದ ವ್ಯಕ್ತಿ ಕರ್ನಲ್ ವಿಲ್ಕ್ಸ್. ನಮಗೆ ದೊರಕಿರುವ ತಾಮ್ರಪಟಗಳಲ್ಲೆಲ್ಲ ತಿರುವಾಲಂಗಾಡು ತಾಮ್ರಪಟವೇ ದೊಡ್ಡದು ಎಂದು ಬರೆದಿದ್ದೇನೆ. (ಪು. 42) ಆದರೆ ಈಚೆಗೆ ಸಿಕ್ಕಿರುವ ಕರಂದೈ ತಾಮ್ರಪಟವು ಅದಕ್ಕಿಂತ ದೊಡ್ಡದು ಎಂದು ಡಾ. ಜಿ. ಎಸ್. ಗಾಯಿ ಯವರು ತಿಳಿಸುತ್ತಾರೆ. 'ವಸಂತತಿಲಕ' ಎಂಬ ವೃತ್ತದ ಹೆಸರು ಆ ಪದ್ಯದ ಮೊದಲ ಪಾದದ ಭಾಗವೆಂಬಂತೆ ಅಚ್ಚಾಗಿದೆ. (ಪು.50.) ಆ ಹೆಸರಿನ ಮುಂದಿನ ಗೀಟು ಅಚ್ಚಿನಲ್ಲಿ ಬಿಟ್ಟುಹೋಗಿದೆ.

ಡಾ. ಸಿ. ಶಿವರಾಮಮೂರ್ತಿಯವರ Indian Epigraphy and South Indian Scripts ಎಂಬ ಗ್ರಂಥವು ನನಗೆ ಗ್ರಂಥರಚನೆಯ ಸಮಯದಲ್ಲಿ ದೊರಕಲಿಲ್ಲ; ಗ್ರಂಥ ಅಚ್ಚಾದ ಮೇಲೆ ಸಿಕ್ಕಿತು. ಹೀಗಾಗಿ ಅದರ ಉಪಯೋಗವನ್ನು ಪಡೆದುಕೊಳ್ಳಲು ನನ್ನಿಂದ ಸಾಧ್ಯವಾಗದಿದ್ದುದಕ್ಕಾಗಿ ವಿಷಾದಿಸುತ್ತೇನೆ.

ಹೀಗೆ ನನಗೆ ತಿಳಿದಂತೆಯೇ ಹಲವು ಕೊರತೆಗಳು ಉಳಿದಿವೆ; ಇನ್ನೂ ಹಲವು ಇರಬಹುದು, ಇವೆ. ಅವುಗಳನ್ನು ವಿದ್ವಾಂಸರು ಕೃಪೆಯಿಟ್ಟು ತೋರಿಸಿಕೊಟ್ಟರೆ ನಾನು ಕೃತಜ್ಞನಾಗಿರುತ್ತೇನೆ ಮತ್ತು ಸಂತೋಷದಿಂದ ತಿದ್ದಿಕೊಳ್ಳುತ್ತೇನೆ.

ನನ್ನ ಒಂದು ಆಸೆಯನ್ನು ಇಲ್ಲಿ ಹೇಳಿಕೊಂಡುಬಿಡುತ್ತೇನೆ. ಪ್ರಾಚೀನ ಕರ್ನಾಟಕದ ಸಂಸ್ಕೃತಿಯನ್ನು ತಿಳಿಯಬಯಸುವವರಿಗೆ ಈ ಗ್ರಂಥ ಸಹಾಯಮಾಡುತ್ತದೆ. ಹಾಗೆಯೇ, ಪ್ರಾಚೀನ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ವಸ್ತುಗಳನ್ನು ಆರಿಸಿಕೊಂಡು ಐತಿಹಾಸಿಕ ಕಾದಂಬರಿಗಳನ್ನು ಬರೆಯುವ ಲೇಖಕರಿಗೂ ಇದು ಸಾಮಾಜಿಕ ಹಿನ್ನೆಲೆಯನ್ನು ಚಿತ್ರಿಸಲು ಸಾಮಗ್ರಿಯನ್ನು ಒದಗಿಸುತ್ತದೆ. ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೂ ಈ ಗ್ರಂಥದಿಂದ ಉಪಕಾರವಾದೀತು ಎಂದು ಅಂದುಕೊಂಡಿದ್ದೇನೆ. ಇವುಗಳಲ್ಲಿ ಎಲ್ಲವಲ್ಲದಿದ್ದರೂ ಕೆಲವಾದರೂ ಈಡೇರಿದರೆ ನನ್ನ ಶ್ರಮವು ಸಾರ್ಥಕವಾಯಿತು ಎಂದು ಭಾವಿಸುತ್ತೇನೆ.

ಮೈಸೂರು
15-9-1966

ಎಂ. ಚಿದಾನಂದಮೂರ್ತಿ

## ಎರಡನೆಯ ಮುದ್ರಣಕ್ಕೆ

ಹನ್ನೆರಡು ವರ್ಷಗಳ ಬಳಿಕ ಈ ಗ್ರಂಥ ಪುನರ್ಮುದ್ರಣವನ್ನು ಕಂಡಿರುವುದು ಒಂದು ಸಂತೋಷದ ಸಂಗತಿ. ನನ್ನ ಈ ಗ್ರಂಥವನ್ನು ಬಹಳ ಜನ ಓದಿ ಮೆಚ್ಚಿಕೊಂಡಿದ್ದಾರೆ. ತಾವು ಉಪಯೋಗವನ್ನು ಪಡೆದುಕೊಂಡುದಾಗಿ ಹೇಳಿಕೊಂಡಿದ್ದಾರೆ. ಇದು ನನಗೆ ನಿಜವಾದ ತೃಪ್ತಿಯನ್ನು ತಂದಿದೆ. ಆದರೆ, ಗ್ರಂಥ ನನಗೆ ತೃಪ್ತಿ ತಂದಿದೆ ಎಂದು ಹೇಳಲಾರೆ. ಗ್ರಂಥ ಅಚ್ಚಾದ ಹೊಸದರಲ್ಲೇ ಅದರ ಕೊರತೆಗಳ ಅರಿವು ನನಗಿತ್ತು. ಮುಂದೆ, ವಿಮರ್ಶಕರು ಅದರ ಕೆಲವು ದೋಷಗಳನ್ನು ತೋರಿಸಿ ಕೊಟ್ಟರು. ಅವುಗಳಲ್ಲಿ ಮುಖ್ಯವಾಗಿ ಡಾ. ಶ್ರೀನಿವಾಸ ರಿತ್ತಿಯವರ ವಿಮರ್ಶೆ (Journal of the Karnatak University, xi, 1967) ಉಲ್ಲೇಖನೀಯವಾದುದು. ಅವರು ಸೂಚಿಸಿದ ಕೆಲವು ಮಾರ್ಪಾಟುಗಳನ್ನು ಅಂಗೀಕರಿಸಿದ್ದೇನೆ. ಮಂಗಳೂರಿನ ಶ್ರೀ ಎಂ. ಮುಕುಂದಪ್ರಭು ಎಂಬುವರು ತಮ್ಮ ಪತ್ರಗಳಲ್ಲಿ ಸೂಚಿಸಿರುವ ಕೆಲವು ಅಂಶಗಳು ಇದನ್ನು ತಿದ್ದುವುದರಲ್ಲಿ ಸಹಾಯಕವಾಗಿವೆ. ಈ ಎರಡನೆಯ ಮುದ್ರಣವನ್ನು ಸಾಧ್ಯವಾದಷ್ಟು ಪರಿಷ್ಕರಿಸಿದ್ದೇನೆ; ಅನೇಕ ಹೊಸ ಸಂಗತಿಗಳನ್ನು ಸೇರಿಸಿದ್ದೇನೆ. ಆದರೂ, ತಿದ್ದಬೇಕಾದ, ಸೇರಿಸಬೇಕಾದ ಅನೇಕ ಭಾಗಗಳು ಉಂಟು. ಇನ್ನೊಂದು ಮುದ್ರಣದ ಯೋಗ ಬಂದಾಗ ಆ ಕೆಲಸವನ್ನು ಮಾಡುತ್ತೇನೆ.

ಡಾ|| ಪ್ರಭುಶಂಕರ ಅವರಿಗೆ, ಶ್ರೀ ಆರ್. ಎಲ್. ಅನಂತರಾಮಯ್ಯನವರಿಗೆ ಕೃತಜ್ಞತೆಗಳನ್ನು ಹೇಳುವುದು ಸಂತೋಷದ ಸಂಗತಿ–ಅವರು ಮನಸ್ಸು ಮಾಡದಿದ್ದರೆ ಇಷ್ಟು ಬೇಗ ಪುಸ್ತಕ ಹೊರ ಬರುತ್ತಿತ್ತೆಂದು ಹೇಳಲಾರೆ. ಅದೇ ಪ್ರಸಾರಾಂಗದ ಶ್ರೀ ಡಿ. ಕೆ. ಈರೇಗೌಡರ ಸಹಕಾರವನ್ನು ಸಂತೋಷದಿಂದ ಸ್ಮರಿಸುತ್ತೇನೆ. ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯದ ಅಧಿಕಾರಿವರ್ಗದವರಿಗೂ ನಾನು ಕೃತಜ್ಞ. ಈ ಗ್ರಂಥದಲ್ಲಿ ಮೊದಲ ಆವೃತ್ತಿಗಿಂತ ಹೆಚ್ಚಿನ ಚಿತ್ರಗಳನ್ನು ಸೇರಿಸಲಾಗಿದೆ. ಅವುಗಳಲ್ಲಿ ಕೆಲವನ್ನು ಶ್ರೀ ಆರ್. ಶೇಷಶಾಸ್ತ್ರಿಯವರು ಕೊಟ್ಟಿದ್ದಾರೆ. ಕರ್ನಾಟಕ ಪುರಾತತ್ವ ಇಲಾಖೆಯ ಈಗಿನ ನಿರ್ದೇಶಕರಾದ ಡಾ. ಎಂ. ಎಸ್. ನಾಗರಾಜರಾಯರು ಮತ್ತು ಬೆಂಗಳೂರಿನ ಐ.ಬಿ.ಎಚ್. ಪ್ರಕಾಶನ ಸಂಸ್ಥೆಯವರು ಅನೇಕ ಬ್ಲಾಕುಗಳನ್ನು ಕೊಟ್ಟು ತಮ್ಮ ಸಜ್ಜನಿಕೆಯನ್ನು ತೋರಿದ್ದಾರೆ. ಹಾಗೆಯೇ, ದಿವಂಗತ ಡಾ. ಪಿ. ಗುರುರಾಜಭಟ್ಟರೂ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ನಿರ್ದೇಶಕ ಡಾ. ಬಿ. ಎಸ್. ಕುಲಕರ್ಣಿಯವರೂ, ಅದೇ ವಿಶ್ವ ವಿದ್ಯಾಲಯದ ಡಾ. ಎಂ. ಎಂ. ಕಲಬುರ್ಗಿಯವರೂ ಅನೇಕ ಚಿತ್ರಗಳನ್ನು ಕೊಟ್ಟಿದ್ದಾರೆ. ಈ ಪುಸ್ತಕದ ಕರಡನ್ನು ತಿದ್ದುವಲ್ಲಿ ಮತ್ತು ಇನ್ನೂ ಬೇರೆ ಬಗೆಗಳಲ್ಲಿ ಶ್ರೀ ಎಸ್.ಶಿವಣ್ಣ, ಬಸವರಾಜ ಕಲ್ಗುಡಿ, ಆರ್. ಶೇಷಶಾಸ್ತ್ರಿ ಅವರ ಸಹಕಾರ ದೊರಕಿದೆ. ಈ ಎಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

ಪುಸ್ತಕದ ಕೊನೆಯಲ್ಲಿ ಶೀರ್ಷಿಕೆಯ ಜಾಗದಲ್ಲಿ ಬಂದಿರುವ 'ಶಬ್ಧಸೂಚಿ' ಎಂಬುದನ್ನು 'ಶಬ್ದಸೂಚಿ' ಎಂದು ತಿದ್ದಿಕೊಳ್ಳಬೇಕಾಗಿ ವಿನಂತಿ.

ಬೆಂಗಳೂರು
1–10–1979

ಎಂ. ಚಿದಾನಂದಮೂರ್ತಿ

# KEY TO ABBREVIATIONS

*Journals and Books*

BKI — Bombay Karnatak Inscriptions
EC — Epigraphia Carnatica
EI — Epigraphia Indica
KI — Karnatak Inscriptions
IA — Indian Antiquary
JBBRAS — Journal of the Bombay Branch of the Royal Asiatic Society
JISI — Jainism in South India and some Jaina Epigraphs
JRAS — Journal of the Royal Asiatic Society
MAR — Mysore Archaeological Report
QJMS — Quarterly Journal of the Mythic Society
SII — South Indian Inscriptions
YAIC — Yaśastilaka and Indian Culture
ಕಸಾಪಪ — ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ

*Names of Taluks*

Ag — Arakalgud
Ak — Arsikere
An — Anekal
Bg — Bagepalli
Bl — Belur
Bn — Bangalore
Bp — Bowringpet
CB — Chikkaballapur
Cd — Chitradurga
Cg — Coorg
Ch — Chamarajanagar
Ci — Channagiri
Ck — Chikkanaykanahalli
Cl — Challakere
Cm — Chikkamagalur
Cn — Channarayapattana
Cp — Channapatna
Ct — Chintamani
DB — Doddaballapur
Dg — Davangere
Dv — Devanahalli
Gb — Gubbi
Gd — Goribidnur
Gu — Gundlupet
Hg — Heggadadevanakote
Hk — Holalkere
Hl — Honnali
HN — Holenarasipur
Hn — Hassan
Hr — Hiriyur
Hs — Hunsur
Ht — Hoskote
Jl — Jagalur
Kd — Kadur
Kg — Kunigal
Kl — Kolar
Kn — Kankanhalli (Kanakapura)
Kp — Koppa
Kr — Krishnarajapet
Ma — Magadi
Mb — Mulbagal
Md — Mandya

Mg—Mudgere
Mi—Maddagiri
Mj—Manjarabad
Mk—Molakalmur
Ml—Malavalli
Mr—Malur
My—Mysore
Ng—Nagamangala
Nj—Nanjangud
Nl—Nelamangala
Nr—Nagar
Pg—Pavagada
Sa—Sagar
Sb—Sorab
SB—Sravanabelgola
Sd—Sidlaghatta
Sg—Sringeri
Sh—Shimoga
Si—Sira
Sk—Shikaripur
Sp—Srinivaspur
Sr—Srirangapatna
Tk—Tarikere
Tl—Tirthahalli
Tm—Tumkur
Tn—T. Narasipur
Tp—Tiptur
Yd—Yedatore
Yl—Yelandur

# ವಿಷಯಾನುಕ್ರಮಣಿಕೆ

# ಚಿತ್ರಗಳು

—oo✣oo—



1. ತಾಮ್ರ ಪಟದ ಮುದ್ರೆ ("ಶ್ರೀ ಗಂಗಕನ್ದರ್ಪ")



ಕವಿ ರನ್ನನ ಒಪ್ಪ, ಶ್ರವಣಬೆಳಗೊಳ (ಪುಟ 65)



3. 'ಘನಧೀರನ್' ದೊರೆಯ ರಾಜಮುದ್ರೆ



4. ರಾಜಮುದ್ರೆ : ಶಾಸನ ಮತ್ತು ರಾಜ ಚಿಹ್ನೆಗಳು ("ಘನಧೀರನ್" ಶಾಸನ ಗಮನಿಸಿ)



5. ಶಾಸನ, ಮಾವಳಿ (ರೇಖಾಚಿತ್ರ)



6. ವೀರಗಲ್ಲು, ಮಾವಳಿ (ರೇಖಾಚಿತ್ರ)



೪. ಶಿಲಾಶಾಸನ, ಹೆಬ್ಬಗುಪ್ಪೆ



11. ಜೈನಶಾಸನ, ಕಾಯ್ಕಿಣಿ



12. ಕಲ್ಲಹಳ್ಳಿಯ ಶಾಸನ



14. ಕನ್ನಡ ಭಾಷೆಯ ಸುಪ್ರಾಚೀನ ತಾಮ್ರಪಟಗಳು (ಅಳುವರಸನ 8 ನೇ ಶ.ದ ಫಲಕಗಳು)



18. ಮಯೂರ ಶರ್ಮನ ತಾಳಗುಂದಶಾಸನ



19. ನೇಮಿನಾಥ ತೀರ್ಥಂಕರ, ಕಂಬದಹಳ್ಳಿ



20. ಪಾರ್ಶ್ವನಾಥ ತೀರ್ಥಂಕರ



21. ಯಕ್ಷ, ಬಂದಣಿಕೆ



22. ಮಾನಸ್ತಂಭ, ಮೇಳಿಗೆ



2೩. ಗೊಮ್ಮಟ ವಿಗ್ರಹದ ಒಂದು ಸಮೀಪದೃಶ್ಯ



24. ಗೋಳಾಕಾರದ ಸಮಾಧಿಗಳು, ಕದರಿಬೆಟ್ಟ



25. ನಾಥಪಂಥದ ಗೋಳಾಕಾರದ ದೇವಾಲಯ, ಕದರಿಬೆಟ್ಟ



26. ಭಗವತಿ ತಾರಾ, ಕೋಳಿವಾಡ (ಪುಟ 120)



27. ತಾರಾ, ಬಳ್ಳಿಗಾವೆ



28. ಬುದ್ಧ, ಅಜಂತ



29, ಬುದ್ಧನ ಚಿತ್ರವಿರುವ ಸ್ತಂಭ, ಕದರಿಬೆಟ್ಟ (ಪುಟ 120)



32. ತಾಂತ್ರಿಕ ದೇವತೆ, ಕೋಲಾರಮ್ಮ ದೇವಾಲಯ, ಕೋಲಾರ



33. ಲಜ್ಜಾಗೌರಿ, ಬಾದಾಮಿ



34. ದುರ್ಗಾದೇವಾಲಯ, ಐಹೊಳೆ



35. ದುರ್ಗಾದೇವಾಲಯದ ಇನ್ನೊಂದು ದೃಶ್ಯ, ಐಹೊಳೆ



36. ಪಾಪನಾಥದೇವಾಲಯ, ಪಟ್ಟದಕಲ್ಲು



37 ವಿರೂಪಾಕ್ಷ ದೇವಾಲಯ, ಪಟ್ಟದಕಲ್ಲು



38. ಶಿವ-ಪಾರ್ವತಿ : ವಿರೂಪಾಕ್ಷ ದೇವಾಲಯ, ಪಟ್ಟದಕಲ್ಲು



39. ಕಪಾಲಭೈರವ, ಕೋಲಾರಮ್ಮ ದೇವಾಲಯ, ಕೋಲಾರ



40. ವರಾಹ: ದುರ್ಗಾದೇವಾಲಯ, ಐಹೊಳೆ



41. ವಿಷ್ಣು : ಬಾದಾಮಿಯ ಮೂರನೆಯ ಗುಹೆ

42. ವೀರಗಲ್ಲು, ನೇರ್ಲಿಗೆ (ಆನೆಕಾಳಗ. ಪುಟ 264)



43. ವೀರಗಲ್ಲು, ಶ್ರವಣಗುಡಿ (ಪುಟ 291)



46. ಜೈನವೀರಗಲ್ಲು, ಕಾಯ್ಕಿಣಿ



47. ಕೋಟೆಗಾಳಿಗದ ವೀರಗಲ್ಲು, ಲಕ್ಷ್ಮೇಶ್ವರ (ಪುಟ 268)



48. ವೀರಗಲ್ಲುಗಳು, ಹೂಲಿ



49. ವೀರಗಲ್ಲು, ಕೋಲಾರ



50. ವೀರಗಲ್ಲು, ಬೇಗೂರು, (ಪುಟ 279)



51. ವೀರಗಲ್ಲು, ದೊಡ್ಡಹುಲ್ಲೂರು



52. ವೀರಗಲ್ಲುಗಳು, ಹಿರೇಗುಂಡಲು (ಪುಟ 291)



53. ತುರುಗೋಳ್ ವೀರಗಲ್ಲು, ಬನವಾಸಿ (ವೀರನ ಹೆಣತುಳಿದು ದನಗಳು ನಗ್ಗು ವುದು. ಪುಟ 283)



54. ಹುಲಿಕೊಂದ ವೀರನ ಸ್ಮಾರಕ, ಶ್ರವಣಗುಡಿ



55. ತುರುಗೋಳ್, ಬಳ್ಳಿಗಾವೆ


56. ಬಾಚೆಯನಾಯಕನ ವೀರಗಲ್ಲು, ಬಳ್ಳಿಗಾವೆ (ಪುಟ 145)


57. ವೀರಗಲ್ಲು, ಹೂಲಿ



58. ತುರುಗೋಳ್ ವೀರಗಲ್ಲುಗಳು, ತಾವರೆಕೆರೆ (ಪುಟ 281)



59. ವೀರಗಲ್ಲುಗಳು, ತಾವರೆಕೆರೆ



60. ವೀರಗಲ್ಲು



61. ವೀರಗಲ್ಲು, ಅಡಗನಹಳ್ಳಿ (ಮಂಡ್ಯ)



62. ವೀರಗಾರರಗುಡಿ, ಹಾಲ್ಲೂರು, (ತುಮಕೂರು. ಪುಟ 251)



63. ಆತಕೂರು ಶಾಸನ (ಪುಟ 251)



64. ನಾಯಿ—ಹಂದಿ ಹೋರಾಟದ ವೀರಗಲ್ಲು, ಯೆಲಹಂಕ (ಪುಟ 251)



65. ವಿಕ್ರಮಾದಿತ್ಯ ಬಹುಗುಣತೇಜಸ್ ಎಂಬ ಶಿಲ್ಪಿ ಕೊರೆದ ವೀರಗಲ್ಲು, ತಾವರೆಕೆರೆ (ಕೋಲಾರ)



66 ಶ್ರವಣಗುಡಿಯ ಸುಡುಗಾಡು ಬೈಲಿನಲ್ಲಿರುವ ವೀರಗಲ್ಲು, ಕುದುರೆಗಾಳಗ (ಪುಟ 266)



67. ಗಂಡಭೇರುಂಡ, ಬಳ್ಳಿಗಾವೆ



69 ಜಡೆ ಬಿಡಿಸಿರುವ ಮಾಸ್ತಿ ಮುಂಭಾಗ, ಬೊಮ್ಮೇನಹಳ್ಳಿ



70. ಜಡೆ ಬಿಡಿಸಿರುವ ಮಾಸ್ತಿ ಹಿಂಭಾಗ, ಬೊಮ್ಮೇನಹಳ್ಳಿ



71 ಮಾಸ್ತಿ, ಬೊಮ್ಮೇನಹಳ್ಳಿ



72. ಮಾಸ್ತಿಕಲ್ಲು, ಶಿರಾಳಕೊಪ್ಪ



73. ಮಾಸ್ತಿಕಲ್ಲು, ಕಾಮಲಾಪುರ



74. ಒಂಟಿ ಕೈ ಮಾಸ್ತಿಕಲ್ಲು, ಶಿವಪುರ (ಪುಟ 318)



75. ಮಾಸ್ತಿ, ಮತ್ತಿ (ಶಿವಮೊಗ್ಗ)



76. ಇಕ್ಕೈ ಮಾಸ್ತಿಕಲ್ಲು (ಪುಟ 318)



77. ಇಕ್ಕೈ ಮಾಸ್ತಿಕಲ್ಲು, ಬಂದಳಿಕೆ



78. ವೀರಗಲ್ಲು, ಬಳ್ಳಿಗಾವೆ ಗುರಾಣಿಗಳಮೇಲೆ ವಿನ್ಯಾಸ ಗಮನಿಸಿ ಸಹಗಮನದ ವಾಸ್ತವಚಿತ್ರಣವನ್ನೂ ಗಮನಿಸಿ



80. ಅಮೋಘವರ್ಷ Iನ ಮೋವುಂಡಿ ಶಾಸನ (ಪುಟ 305)



86. ವೇಳೆವಾಳಿ—ಗರುಡರು, ಅಗ್ರಹಾರ ಬಾಚಹಳ್ಳಿ (ಪುಟ 309)



87. ಯೂಪಸ್ತಂಭದಮೇಲಿನ ಶಾಸನ, ಹಿರೇಮಗಳೂರು (ಪುಟ 432)



89. ಹಳೇಬೀಡು ದೇವಾಲಯ



90. ನಟರಾಜ, ಅರಳಗುಪ್ಪೆ



91. ನಟರಾಜ, ಕಲ್ಲೇಶ್ವರ ದೇವಾಲಯದ ಭುವನೇಶ್ವರಿ, ಅರಳಗುಪ್ಪೆ



93. ದಂಪತಿಗಳು, ಐಹೊಳೆ



94. ದಂಪತಿ ವಿಗ್ರಹ, ಐಹೊಳೆ


95. ದಂಪತಿಗಳು : ಬಾದಾಮಿಯ ಮೂರನೆಯ ಗುಹ


96. ದಂಪತಿಗಳು : ಪಾಪನಾಥದೇವಾಲಯ, ಪಟ್ಟದಕಲ್ಲು



97. ವಿಕ್ರಮಾಂಕ ಬಹುಗುಣತೇಜನ್ ಎಂಬ ಶಿಲ್ಪಿ ಮಾಡಿದ ವೀರಗಲ್ಲು, ಎಲ್ದೂರು (ಕೋಲಾರ)



98. ಶಿಲಾಬಾಲಿಕೆ, ಬೇಲೂರು


99. ಶಿಲಾಬಾಲಿಕೆ : ಬೇಲೂರು


100. ಶಿಲಾಬಾಲಿಕೆ : ಬೇಲೂರು



102. ಮೋಹಿನಿ ಸ್ತಂಭ, ಬೇಲೂರು ದೇವಾಲಯ

# I

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ನಾಡಿನ ಇತಿಹಾಸವೆಂದರೆ ಆ ನಾಡನ್ನು ಕಾಲದಿಂದ ಕಾಲಕ್ಕೆ ಆಳಿದ ರಾಜರ ಇತಿಹಾಸವೆಂಬ ಭಾವನೆ ಬಹು ಪ್ರಚಲಿತವಾಗಿದೆ. ಇತಿಹಾಸವನ್ನು ಚಿತ್ರಿಸುವ ಗ್ರಂಥಗಳಲ್ಲಿ ಈ ರಾಜಕೀಯ ಇತಿಹಾಸವೇ ಪ್ರಧಾನವಾಗಿದ್ದು ಗ್ರಂಥದ ಕೊನೆಯಲ್ಲಿ ಆ ನಾಡಿನ ಕಲೆ, ಧರ್ಮ ಇತ್ಯಾದಿಗಳನ್ನು ಕುರಿತ ವಿಷಯಗಳು ಒಂದು ಅನುಬಂಧದ ರೂಪದಲ್ಲಿರುವುದುಂಟು, ಅಥವಾ ಅವುಗಳನ್ನು ನಿರೂಪಿಸುವ ಕೆಲವು ಅಧ್ಯಾಯಗಳು ಬಂದಿರುವುದುಂಟು. ಒಂದು ನಾಡು ಎಂದರೆ ಅದನ್ನು ಆಳಿದ ರಾಜರು ಅಲ್ಲ, ಅಲ್ಲಿ ಬದುಕಿದ ಜನ. ಹೀಗೆ ಬದುಕಿದ ಜನದ ಒಂದು ಗಣನೀಯವಾದ ಭಾಗ ಆ ನಾಡನ್ನಾಳಿದ ರಾಜಸಮೂಹ. ಒಂದು ದೇಶದ ನಿಜವಾದ ಇತಿಹಾಸವೆಂದರೆ ಆ ಜನತೆಯ ಇತಿಹಾಸ. ಜನತೆ ಬದುಕಿದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅದರ ಜೀವನ ಸಮಸ್ಯೆಗಳು, ಅದರ ಜೀವನ ಮೌಲ್ಯಗಳು—ಇತ್ಯಾದಿಗಳ ವಿವರಣೆಯೇ ಆ ದೇಶದ ಇತಿಹಾಸ.[1] ಜನತೆಯ ಜೀವನವನ್ನು ಕುರಿತಾದ ಇಂತಹ ಅಧ್ಯಯನವನ್ನು 'ಸಾಮಾಜಿಕ ಅಧ್ಯಯನ'ವೆಂದೋ ಸಾಂಸ್ಕೃತಿಕ ಅಧ್ಯಯನವೆಂದೋ ಕರೆಯಬಹುದು.[2] 'ಸಾಂಸ್ಕೃತಿಕ ಅಧ್ಯಯನ' ಎನ್ನುವ ಉಕ್ತಿಯೇ ಹೆಚ್ಚು ಉಚಿತವಾದುದು.

ಇಂತಹ ಅಧ್ಯಯನವು 'ರಾಜಕೀಯ ಅಧ್ಯಯನ'ಕ್ಕಿಂತ ಶ್ರೇಷ್ಠವೆನ್ನುವ ಭಾವನೆ ನಮಗಿಲ್ಲ. ನಿಜವಾದ ವಿದ್ಯಾರ್ಥಿಗೆ ಯಾವ ಅಧ್ಯಯನವೂ ಇನ್ನೊಂದಕ್ಕಿಂತ ಹೆಚ್ಚಲ್ಲ, ಕಡಮೆ ಅಲ್ಲ. ಪ್ರಾಚೀನ ಭಾರತದಲ್ಲಿ, ಅದರಲ್ಲೂ ಕ್ರಿಸ್ತಶಕದ ಈಚಿನ ಶತಮಾನಗಳಲ್ಲಿ ರಾಜರಿಗಿದ್ದ ಸ್ಥಾನವನ್ನು ನೋಡಿದರೆ ರಾಜಾಧಿರಾಜರುಗಳ ಇತಿಹಾಸ ಒಂದು ರೀತಿಯಲ್ಲಿ ನಮ್ಮ ನಾಡಿನ ಇತಿಹಾಸವೂ ಆಗಬಹುದೋ ಏನೋ! ಅಲ್ಲದೆ, ಎಲ್ಲಾ ದೇಶಗಳಂತೆ ನಮ್ಮಲ್ಲಿಯೂ ನಾಡಿನ ಇತಿಹಾಸವನ್ನು ಅನುಕೂಲಕರವಾದ ಘಟ್ಟಗಳಾಗಿ ವಿಭಜಿಸಲು ರಾಜರುಗಳೂ, ರಾಜವಂಶಗಳೂ ನಮಗೆ ತುಂಬಾ ಸಹಾಯಕವಾಗುತ್ತವೆ. ಉದಾಹರಣೆಗೆ ಕನ್ನಡನಾಡಿನ ಇತಿಹಾಸದಲ್ಲಿ ಕದಂಬವಂಶ, ಗಂಗವಂಶ, ಚಾಳುಕ್ಯವಂಶ, ರಾಷ್ಟ್ರಕೂಟವಂಶ, ಹೊಯ್ಸಳವಂಶ—ಇತ್ಯಾದಿ ಪ್ರಮುಖ ಘಟ್ಟಗಳನ್ನು ಗುರುತಿಸಬಹುದು. ಈ ಕುಲಗಳ ಇತಿಹಾಸವೇನಿದ್ದರೂ ನಾಡಿನ ಇತಿಹಾಸದ ರಚನೆಗೆ ಅಸ್ಥಿಪಂಜರವನ್ನು ಒದಗಿಸಬಹುದು. ಈ ಅಸ್ಥಿಪಂಜರಕ್ಕೆ ರಕ್ತಮಾಂಸಗಳನ್ನು ತುಂಬುತ್ತದೆ, ಆ ನಾಡಿನ ಜನತೆಯನ್ನು ಕುರಿತು ಹೊರಟ ಸಾಂಸ್ಕೃತಿಕ ಅಧ್ಯಯನ. ಹೀಗೆ ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಗಳೆರಡೂ ಪರಸ್ಪರ ಪೂರಕ ಮತ್ತು ಪೋಷಕ.

---

[1] "The proper study of mankind is man" ಎಂಬ ಪೋಪ್ ಕವಿಯ ಉಕ್ತಿ ಇಲ್ಲಿ ಉಲ್ಲೇಖನೀಯವಾದುದು. ತಾನು ರಾಜಾಧಿರಾಜರುಗಳ, ಅವರ ಯುದ್ಧಗಳ ವಿಷಯದಲ್ಲಿ ಅನಾಸಕ್ತನೆಂದೂ, ಜನತೆ ಬದುಕಿ ಬಾಳಿದ ರೀತಿಯೇ ತನಗೆ ಪ್ರಧಾನವೆಂದೂ ವಾಲ್ಟೈರ್ ಹೇಳಿಕೊಂಡಿದ್ದಾನೆ—"I wish to write a history not of wars, but of society ; and to ascertain how men lived in the interior of their families, and what were the acts which they commonly cultivated····My object is the history of human mind, and not a mere detail of petty facts ; nor am I concerned with the history of great Lords....: but I want to know what were the steps by which men passed from barbarism to Civilization."
—Voltaire.

(Quoted by Whitney in his "Elements of Research," P. 195)

[2] ಹಾಗೆ ನೋಡಿದರೆ ಸಾಮಾಜಿಕ ಅಧ್ಯಯನವು ಸಾಂಸ್ಕೃತಿಕ ಅಧ್ಯಯನದ ಒಂದು ಭಾಗ ಮಾತ್ರ.

ಕನ್ನಡನಾಡಿನ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಹಲವು ಗ್ರಂಥಗಳಾಗಲೇ ಹೊರಬಿದ್ದಿವೆ. ಭಾರತದ ಇತಿಹಾಸವನ್ನು ಕುರಿತ ಗ್ರಂಥಗಳಲ್ಲಿ ಕನ್ನಡನಾಡಿನ ಕೆಲವು ಪ್ರಮುಖ ರಾಜಕುಲಗಳ ಪ್ರಸ್ತಾಪವು ಸಂಕ್ಷಿಪ್ತವಾಗಿ ಬಂದಿರುತ್ತದೆ. ದಕ್ಷಿಣ ಭಾರತದ ಇತಿಹಾಸವನ್ನು ಕುರಿತ ಗ್ರಂಥಗಳಲ್ಲಿ ಕನ್ನಡನಾಡಿನ ಇತಿಹಾಸವು ಇನ್ನೂ ಸ್ವಲ್ಪ ವಿಸ್ತಾರವಾಗಿ ದೊರೆಯುತ್ತದೆ. ಕರ್ನಾಟಕದ, ಅದರಲ್ಲಿಯೂ ಉತ್ತರ ಕರ್ನಾಟಕದ ರಾಜಮನೆತನಗಳ ಇತಿಹಾಸವನ್ನು ಕುರಿತು ಡಾ|| ಫ್ಲೀಟ್ ಅವರು ಗ್ರಂಥವೊಂದನ್ನು ಬರೆದಿದ್ದಾರೆ.[3] ಆ ವಿಷಯವನ್ನು ಕುರಿತಾದ ಬರಹಗಳಲ್ಲಿ ಇದು ಇಂದಿಗೂ ಪ್ರಮಾಣಭೂತ ಕೃತಿಯಾಗಿದೆ. ರೈಸ್, ಮೊರೇಸ್, ಡೆರೆಟ್, ಅಲ್ಟೇಕರ್, ಸಾಲೆತ್ತೂರ್, ಎಂ. ವಿ. ಕೃಷ್ಣರಾವ್, ಕರ್ನಲ್ ವಿಲ್ಕ್ಸ್, ಹಯವದನರಾವ್, ಎಂ. ವಿ. ನರಸಿಂಹಮೂರ್ತಿ ಮುಂತಾದವರು ಬೇರೆ ಬೇರೆ ರಾಜಕುಲಗಳನ್ನು ಕುರಿತು ಚರಿತ್ರೆಗಳನ್ನು ಬರೆದಿದ್ದಾರೆ. ಇವರ ಗ್ರಂಥಗಳು ಮುಖ್ಯವಾಗಿ ರಾಜಕೀಯ ಇತಿಹಾಸವನ್ನು ಕುರಿತವಾದರೂ ಆ ಕಾಲದ ಸಾಮಾಜಿಕ ಜೀವನವನ್ನು ಚಿತ್ರಿಸಲು ಸಾಕಷ್ಟು ಪುಟಗಳನ್ನು ಮೀಸಲಿರಿಸಿರುವುದೂ ಉಂಟು. ಕನ್ನಡದಲ್ಲಿ ಡಾ|| ಸಾಲೆತ್ತೂರರ ಗ್ರಂಥ (ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆ) ; ಶ್ರೀಯುತರಾದ ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿಯವರ "ಕರ್ಣಾಟಕದ ಅರಸುಮನೆತನಗಳು"—ಈಚೆಗೆ ಬಂದ "Karnataka through the Ages" ("ಕರ್ನಾಟಕ ಪರಂಪರೆ" I ಮತ್ತು II) ಇವುಗಳನ್ನು ಹೆಸರಿಸಬಹುದು. ಎರಡನೆಯ ಗ್ರಂಥವು ಬಹುಮಟ್ಟಿಗೆ ಶಾಸನಾಧಾರಗಳ ಮೇಲೆ ರಚಿತವಾಗಿರುವ ಪ್ರಮಾಣಭೂತ ಗ್ರಂಥವಾಗಿದೆ. ಆಲೂರ ವೆಂಕಟರಾಯರ "ಕರ್ನಾಟಕ ಗತವೈಭವ"ವು ಕನ್ನಡಿಗರಲ್ಲಿ ದೇಶಭಕ್ತಿಯನ್ನುಕ್ಕಿಸಲು ಉಜ್ವಲವಾದ ಭಾಷೆಯಲ್ಲಿ ಕನ್ನಡನಾಡಿನ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಚಿತ್ರಿಸಲು ಪ್ರಯತ್ನಿಸಿರುವ ಜನಪ್ರಿಯವಾದ ಗ್ರಂಥ. ಡಾ|| ಎಸ್. ಶ್ರೀಕಂಠಶಾಸ್ತ್ರಿಯವರ "Sources of Karnatak History I" ಎಂಬುದು ಕನ್ನಡನಾಡಿನ ಇತಿಹಾಸವನ್ನು ಕಟ್ಟಲು ಉಪಯೋಗಿಸಿಕೊಳ್ಳಬಹುದಾದ ಬೇರೆ ಬೇರೆ ಆಕರಗಳನ್ನು ನಿರ್ದೇಶಿಸಿ ಅಲ್ಲಿಂದ ಆಯಾ ಭಾಗಗಳನ್ನು ಎತ್ತಿಕೊಟ್ಟಿರುವ ಬಹು ಉಪಯುಕ್ತ ಗ್ರಂಥ. ಈ ಗ್ರಂಥದ ಆರಂಭದಲ್ಲಿ ಕನ್ನಡನಾಡಿನ ಇತಿಹಾಸವನ್ನು ಅತ್ಯಂತ ಸಂಕ್ಷಿಪ್ತವಾಗಿ ಕೊಡಲಾಗಿದೆ.

ಇವೆಲ್ಲ ಮುಖ್ಯವಾಗಿ ಶಾಸನಗಳನ್ನೇ ಆಧಾರವಾಗಿಟ್ಟುಕೊಂಡು ರಚಿತವಾದ ಗ್ರಂಥಗಳು. ಇವುಗಳ ಪ್ರಧಾನ ಉದ್ದೇಶ ಕರ್ನಾಟಕದ ರಾಜಕೀಯ ಇತಿಹಾಸವನ್ನು ಚಿತ್ರಿಸುವುದು ; ಪ್ರಾಸಂಗಿಕವಾಗಿ ಆ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ನಿರೂಪಿಸುವುದು. ಕನ್ನಡನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಮುಖ್ಯವಾಗಿ ಗಮನದಲ್ಲಿಟ್ಟುಕೊಂಡು ಹುಟ್ಟಿರುವ ಗ್ರಂಥಗಳು ಕೆಲವಿವೆ. ಡಾ|| ಕರ್ಮರ್ಕರ್ ಅವರ "Cultural History of Karnatak" ; ಡಾ|| ರಂ. ಶ್ರೀ. ಮುಗಳಿಯವರ "The Heritage of Karnatak" ; ಡಾ|| ಪಿ. ಬಿ. ದೇಸಾಯಿ ಅವರ ಕರ್ನಾಟಕದ ಸಾಮಾಜಿಕ ಚರಿತ್ರೆಯನ್ನು ಕುರಿತ ಬರಹ (ಕನ್ನಡನಾಡಿನ ಚರಿತ್ರೆ, I, ಪರಿಷತ್ ಪ್ರಕಟಣೆ)—ಇವು ಉಲ್ಲೇಖನೀಯವಾಗಿವೆ. ಇವು ಸ್ತುತ್ಯ ಪ್ರಯತ್ನಗಳೆಂಬುದರಲ್ಲಿ ಸಂದೇಹವಿಲ್ಲ. ಆದರೂ ಈಗ ಅಚ್ಚಾಗಿರುವ ಕರ್ನಾಟಕದ ಎಲ್ಲಾ ಶಾಸನಗಳನ್ನೂ ಅಭ್ಯಸಿಸಿ ಆ ಶಾಸನಗಳ ಆಧಾರದಿಂದ ಕನ್ನಡನಾಡಿನ ಸಾಂಸ್ಕೃತಿಕ ಇತಿಹಾಸವನ್ನು ಚಿತ್ರಿಸುವ ಪ್ರಯತ್ನ ಇನ್ನೂ ಸಮರ್ಪಕವಾಗಿ ನಡೆದಿಲ್ಲವೆಂದೇ ಹೇಳಬಹುದು.

ಇಂತಹ ಒಂದು ಪ್ರಯತ್ನವನ್ನು ಕೈಗೊಳ್ಳಲು ಪ್ರಬಲವಾದ ಪ್ರೇರಣೆ ಬಂದದ್ದು ಡಾ|| ವಿ. ಎಸ್. ಅಗರವಾಲ

---

[3] 'The Dynasties of the Kanarese Districts" (Bombay Gazetteer, Vol. I, Pt. ii, pp. 277-588).

ಅವರ "India as Known to Pāṇini"[4] ಎಂಬ ಉದ್ಗ್ರಂಥದಿಂದ. ಪಾಣಿನಿಯ 'ಅಷ್ಟಾಧ್ಯಾಯಿ'ಯಲ್ಲಿ ಬರುವ ಸಾಂಸ್ಕೃತಿಕ ಅಂಶಗಳನ್ನು ಆಧರಿಸಿ ಆತನು ಕಂಡ ಭರತಖಂಡದ ಸಾಮಾಜಿಕ-ಸಾಂಸ್ಕೃತಿಕ ಚಿತ್ರವನ್ನು ಅಗರವಾಲಾ ಅವರು ಕಟ್ಟಿಕೊಟ್ಟಿದ್ದಾರೆ. ಆ ಗ್ರಂಥದಲ್ಲಿ ವಿಷಯಗಳ ಆಯ್ಕೆ, ಜೋಡಣೆ, ವಿವರಣೆ ಮತ್ತು ವ್ಯಾಖ್ಯಾನಗಳು ಆಶ್ಚರ್ಯವನ್ನು ಹುಟ್ಟಿಸುವಂತಿವೆ. ಅವರು ತಮ್ಮ ಗ್ರಂಥರಚನೆಯ ಉದ್ದೇಶವನ್ನು ಮುನ್ನುಡಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ-"ಮೊದಲನೆಯದಾಗಿ ಪಾಣಿನಿಯ ಸೂತ್ರಗಳಲ್ಲಿ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಂಶಗಳು ಹೇರಳವಾಗಿವೆ. ಅವುಗಳನ್ನು ಆರಿಸಿ ಜೋಡಿಸುವುದು ; ಬಳಿಕ, ಪಾಣಿನಿಯ ಸೂತ್ರಗಳ ಮೇಲಿನ ವ್ಯಾಖ್ಯಾನಗಳೂ ಪ್ರಾಚೀನ ವೈದಿಕ ಮತ್ತು ಲೌಕಿಕ ಸಾಹಿತ್ಯಗಳೂ ಬೀರುವ ಬೆಳಕಿನಲ್ಲಿ ಅವುಗಳನ್ನು ವ್ಯಾಖ್ಯಾನಿಸುವುದು—ಇದು ನನ್ನ ಉದ್ದೇಶ."[5]

ಮೇಲಿನದಕ್ಕಿಂತ ಕಡಮೆ ವ್ಯಾಪ್ತಿಯುಳ್ಳುದಾದರೂ ವಿದ್ವತ್ಪೂರ್ಣವಾಗಿರುವ ಇನ್ನೊಂದು ಗ್ರಂಥವೆಂದರೆ ಪ್ರೊ|| ಕೆ. ಕೆ. ಹಂದಿಕಿಯವರ "Yaśastilaka and Indian Culture". ವಿದ್ವಾಂಸರೊಬ್ಬರು ಹೇಳಿರುವಂತೆ ಹಂದಿಕಿಯವರದು 'ಬಹುಮುಖ ಪ್ರತಿಭೆ'. ಯಶಸ್ತಿಲಕಚಂಪುವಿನ ಕರ್ತೃ ಹತ್ತನೇ ಶತಮಾನದಲ್ಲಿ ಆಳುತ್ತಿದ್ದ ರಾಷ್ಟ್ರಕೂಟರ ಆಶ್ರಯದಲ್ಲಿ ಗ್ರಂಥರಚನೆ ಮಾಡಿದ ಸೋಮದೇವ. ಅವನು ಕನ್ನಡನಾಡಿನವನೆಂಬುದು ಗಮನಾರ್ಹ. ಅವನ ಗ್ರಂಥವು "ಸಂಸ್ಕೃತ ಗದ್ಯ ಪದ್ಯಗಳಲ್ಲಿ ರಚಿತವಾದ ಜೈನ ಧಾರ್ಮಿಕ ಕಥನ ಕಾವ್ಯ ; ಅದಕ್ಕಿಂತ ಹೆಚ್ಚಾಗಿ, ಭಾರತದ, ಅದರಲ್ಲೂ ರಾಷ್ಟ್ರಕೂಟರ ಆಳಿಕೆಯಲ್ಲಿದ್ದ ದಕ್ಷಿಣಭಾರತದ ಸಾಹಿತ್ಯ, ಸಾಮಾಜಿಕ-ರಾಜಕೀಯ, ಧರ್ಮ ಮತ್ತು ತತ್ವಶಾಸ್ತ್ರಗಳ ಬೃಹತ್ಕೋಶ."[6] ವಿಷಯನಿರೂಪಣೆಯ ಮಾದರಿಗೆ ಡಾ|| ಅಗರವಾಲಾರ ಕೃತಿಯಂತೆಯೇ ಇದೂ ಮಾದರಿಯಾಗಿದೆ. ಯಶಸ್ತಿಲಕವು ಕನ್ನಡ ನಾಡಿನಲ್ಲಿ ರಚಿತವಾದ ಗ್ರಂಥವಾಗಿರುವುದರಿಂದಲೂ, ಇದರ ರಚನೆಯ ಕಾಲವು ನಮ್ಮ ಅಧ್ಯಯನದ ಅವಧಿಯಲ್ಲಿಯೇ (ಕ್ರಿ. ಶ. 450-1150) ಬರುವುದರಿಂದಲೂ ನಮ್ಮ ಈ ನಿಬಂಧದಲ್ಲಿ ಪ್ರೊ|| ಹಂದಿಕಿಯವರ ಗ್ರಂಥದ ಉಪಯೋಗವನ್ನು ಸಾಕಷ್ಟು ಮಾಡಿಕೊಂಡಿದ್ದೇವೆ.

ಮೇಲಿನ ಪ್ರಯತ್ನಗಳಂತಹ ಇನ್ನೂ ಕೆಲವು ಪ್ರಯತ್ನಗಳನ್ನು ಇಲ್ಲಿ ಹೆಸರಿಸಬಹುದು. ಬಿ. ಎನ್. ಪುರಿ ಅವರ "India in the time of Patañjali" ; ಬಿ. ಎಸ್. ಉಪಾಧ್ಯಾಯ ಅವರ "India in Kālidāsa" ; ಡಿ. ಆರ್. ಪಾಟೀಲ್ ಅವರ "Cultural History from the Vāyupurāṇa"—ಇವೆಲ್ಲ ಒಂದೇ ರೀತಿಯ ಉದ್ದೇಶವುಳ್ಳುವು. ಇವುಗಳಿಂದಲೂ ಸಾಕಷ್ಟು ಪ್ರಯೋಜನವನ್ನು ಪಡೆದಿದ್ದೇವೆ. ಡಾ|| ಅಗರವಾಲಾರ "ಹರ್ಷಚರಿತ್-ಏಕ್ ಸಾಂಸ್ಕೃತಿಕ್ ಅಧ್ಯಯನ್" ಎಂಬ ಗ್ರಂಥವು ಹಿಂದಿಯಲ್ಲಿದೆ. ಅದು ಅವರ "India as known to Pāṇini" ಯ ಸಮಕ್ಕೆ ಬರಲಾರದೆಂದು ಕೆಲವರ ಅಭಿಮತ.

ಮೇಲೆ ಕಾಣಿಸಿರುವ ಗ್ರಂಥಗಳಿಗೂ, ಈ ನಮ್ಮ ಅಧ್ಯಯನಕ್ಕೂ ಒಂದು ಮೂಲಭೂತವಲ್ಲದಿದ್ದರೂ ಪ್ರಧಾನವಾದ ವ್ಯತ್ಯಾಸವಿದೆ. ಆ ಲೇಖಕರು ತಮ್ಮ ಸಾಂಸ್ಕೃತಿಕ ಅಧ್ಯಯನಕ್ಕೆ ಆರಿಸಿಕೊಂಡಿರುವ ಗ್ರಂಥಗಳೆಲ್ಲವೂ ಒಬ್ಬ ಕೃತಿಕಾರನಿಂದ ರಚಿತವಾದುವು. ಆ ಕೃತಿಗಳಿಂದ ಆಯಾ ಕೃತಿಕಾರನು ಕಂಡ ಒಂದು ನಿರ್ದಿಷ್ಟ ಕಾಲದ ಒಂದು ನಾಡನ್ನೂ, ಜನತೆಯನ್ನೂ ಅವರು ಚಿತ್ರಿಸಿದ್ದಾರೆ. ನಮ್ಮ ಅಧ್ಯಯನಕ್ಕೆ ಆರಿಸಿಕೊಂಡಿರುವ

---

[4] ನಮ್ಮ ನಿಬಂಧದ (Thesis) ರಚನೆಯಲ್ಲಿ ಈ ಗ್ರಂಥವು ಉದ್ದಕ್ಕೂ ಮಾದರಿಯಾಗಿ ನಿಂತಿದೆ. ಸಾಂಸ್ಕೃತಿಕ ಅಧ್ಯಯನಗಳ ರೂಪುರೇಷೆಗಳನ್ನು ನಿರ್ಮಿಸಿಕೊಳ್ಳಲು ಬಹು ಸಹಾಯಕವಾಗುವ ಗ್ರಂಥವೊಂದಿದೆ. "Outline of Cultural Materials" (Pub. Human Relations Area Files, INC, 333, Cedar Street, New Haven)-ಇದು ಮುಖ್ಯವಾಗಿ ಈಗ ಇರುವ ಸಮಾಜಗಳ ಸಾಮಾಜಿಕ ಅಧ್ಯಯನವನ್ನು ಯಾರಾದರೂ ಕೈಗೊಂಡರೆ ಯಾವ ಯಾವ ಶೀರ್ಷಿಕೆಗಳ ಅಡಿಯಲ್ಲಿ ವಿಷಯವನ್ನು (Data) ಸಂಗ್ರಹಿಸಬಹುದೆಂಬುದರ ಮಾರ್ಗದರ್ಶನವನ್ನು ನೀಡುತ್ತದೆ. ಇದರ ಉಪಯೋಗವನ್ನು ತಕ್ಕಮಟ್ಟಿಗೆ ನಾವು ಮಾಡಿಕೊಂಡಿದ್ದೇವೆ.

[5] India as known to Pāṇini, Preface, p. ix.

[6] Yaśastilaka and Indian Culture, Preface, p. vii.

ಆಕರಗಳೋ ಸಾವಿರಾರು ಶಾಸನಗಳು. ಬೇರೆ ಬೇರೆ ಶತಮಾನಗಳಿಗೆ ಸೇರಿದ ಶಾಸನ ಕರ್ತೃಗಳು ಉದ್ದೇಶಪೂರ್ವಕವಾಗಿಯೋ ಅಥವಾ ಪ್ರಾಸಂಗಿಕವಾಗಿಯೋ ಹೇಳಿದ ವಿಷಯಗಳನ್ನು ಆಧಾರವಾಗಿಟ್ಟುಕೊಂಡು ಕರ್ನಾಟಕದ ಸುಮಾರು ಏಳು ಶತಮಾನಗಳ ಜನಜೀವನವನ್ನು ಚಿತ್ರಿಸುವುದು ನಮ್ಮ ಉದ್ದೇಶ. ಇಂತಹ ಅಧ್ಯಯನದಲ್ಲಿ ಸೌಕರ್ಯಗಳೂ ಉಂಟು, ತೊಂದರೆಗಳೂ ಉಂಟು. ಆದರೆ ಮೇಲಿನ ಮತ್ತು ನಮ್ಮ ಅಧ್ಯಯನಗಳ ಮೂಲಭೂತ ಉದ್ದೇಶವು ಒಂದೇ ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ ಸಾಕು.

ಈ ನಿಬಂಧದ ಶೀರ್ಷಿಕೆಯಲ್ಲಿ ಬಂದಿರುವ 'ಸಾಂಸ್ಕೃತಿಕ' ಎಂಬ ವಿಶೇಷಣಕ್ಕೆ ಸ್ವಲ್ಪ ವಿವರಣೆ ಅತ್ಯಗತ್ಯ. 'ಸಂಸ್ಕೃತಿ' ಎಂಬ ಮಾತು ಬಹು ಇತ್ತೀಚಿನದು. ಬಹುಶಃ ಇಂಗ್ಲಿಷಿನ 'Culture' ಎಂಬ ಪದಕ್ಕೆ ಸಮಾನಾರ್ಥಕವಾಗಿ ಹುಟ್ಟಿಕೊಂಡಿದೆ. 'ಸಂಸ್ಕೃತಿ' ಎಂಬುದು 'Culture' ಎಂಬ ಅರ್ಥದಲ್ಲಿ "ಹೆಚ್ಚಾಗಿ ಪ್ರಯೋಗವಾಗುತ್ತಿರುವುದು ಸುಮಾರು ನೂರು ವರ್ಷದಿಂದೀಚೆಗೆ".[7] 'Culture' ಎಂಬ ಪದವು ಇಂಗ್ಲಿಷಿನಲ್ಲಿ ಎಷ್ಟರಮಟ್ಟಿನ ಬಳಕೆಯನ್ನು ಪಡೆದಿದೆಯೆಂದರೆ ಅದನ್ನು ತಪ್ಪುತಪ್ಪಾಗಿ ಭಿನ್ನಾರ್ಥಗಳಲ್ಲಿ ಬಳಸಲಾಗುತ್ತಿದೆ.[8] ಕನ್ನಡದಲ್ಲೂ ಅಷ್ಟೇ. ಭಾಷಣಗಳಲ್ಲೂ ಗ್ರಂಥಗಳಲ್ಲೂ ಈ ಪದವನ್ನು ಅದರ ಅರ್ಥವ್ಯಾಪ್ತಿಯ ಅರಿವಿಲ್ಲದೆ ಬಳಸಲಾಗುತ್ತಿದೆ. ಸಂಸ್ಕೃತಿಯೆಂದರೆ ಏನು ಎಂಬುದನ್ನು ಕುರಿತು ವಿದ್ವಾಂಸರ ಕೆಲವು ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿ, ಆ ಪದವನ್ನು ನಾವು ಯಾವ ಅರ್ಥದಲ್ಲಿ ಬಳಸಿಕೊಂಡಿದ್ದೇವೆ ಈ ನಿಬಂಧದಲ್ಲಿ ಎಂಬುದನ್ನು ಕೊನೆಗೆ ಸೂಚಿಸುತ್ತೇವೆ.

ಮನುಷ್ಯನು ಪ್ರಾಣಿಗಳಲ್ಲಿ ಒಬ್ಬನಾದರೂ, ತಾನು ಪ್ರಾಣಿಗಳಿಗಿಂತ ಭಿನ್ನ ಎಂದು ಹೇಳಿಕೊಳ್ಳುತ್ತಾನೆ. ಹಾಗಾದರೆ ಅವನು ಪ್ರಾಣಿಗಳಿಗಿಂತ ಬೇರೆ ಎಂದು ತೋರಿಸುವ ಅಂಶ ಯಾವುದು ? ಪ್ರಾಣಿಗಳಿಗೆ ಬುದ್ಧಿಯಿಲ್ಲ. ಅವುಗಳಲ್ಲಿ ಸಾಮಾಜಿಕ ಒಕ್ಕೂಟವಿಲ್ಲ, ವಾಕ್‌ಶಕ್ತಿಯಿಲ್ಲ, ಇಷ್ಟೂ ಮನುಷ್ಯನಿಗೆ ಇದೆ ಎಂದು ಹೇಳಬಹುದಾದರೂ ಮನುಷ್ಯನನ್ನು ಪ್ರಾಣಿಗಳಿಂದ ಬೇರ್ಪಡಿಸಬಲ್ಲ ಅಂಶವನ್ನು ಒಂದು ಮಾತಿನಲ್ಲಿ ಹೇಳಬಹುದು—ಅದೇ 'ಸಂಸ್ಕೃತಿ'. ಮನುಷ್ಯನಿಗೆ ಸಂಸ್ಕೃತಿಯುಂಟು, ಪ್ರಾಣಿಗಳಿಗೆ ಸಂಸ್ಕೃತಿಯಿಲ್ಲ.[9]

ಈ ಪದವನ್ನು ದಿನನಿತ್ಯದ ಸಂಭಾಷಣೆಯಲ್ಲಿ (ಉದಾಹರಣೆಗೆ : 'ಅವನಿಗೆ ಸಂಸ್ಕೃತಿಯಿಲ್ಲ') ಒಂದು ಅರ್ಥದಲ್ಲಿಯೂ ಶಾಸ್ತ್ರೀಯವಾದ ಬರವಣಿಗೆಗಳಲ್ಲಿ (ಉದಾಹರಣೆಗೆ : 'ಗ್ರೀಕ್ ಸಂಸ್ಕೃತಿ') ಇನ್ನೊಂದು ಅರ್ಥದಲ್ಲಿಯೂ ಬಳಸಲಾಗುತ್ತಿದೆ. ಮ್ಯಾಥ್ಯೂ ಆರ್ನಾಲ್ಡನ ವಿವರಣೆಯು ಮೊದಲನೆಯ ಅರ್ಥವನ್ನು ಎತ್ತಿಹಿಡಿಯುತ್ತದೆ. ಅವನ ಪ್ರಕಾರ ಪೂರ್ಣತೆಯ ಸಿದ್ಧಿಗಾಗಿ ಮನುಷ್ಯನು ಮಾಡುತ್ತಿರುವ ಪ್ರಯತ್ನವೇ ಸಂಸ್ಕೃತಿ. ಸಂಸ್ಕೃತಿ ಎಂಬುದು ಪ್ರಧಾನವಾಗಿ ಆಂತರಂಗಿಕವಾದ ವಿಕಾಸಕ್ಕೆ ಸಂಬಂಧಿಸಿದುದು. ಮನುಷ್ಯನಲ್ಲಿನ ಮೃಗತ್ವವನ್ನು ಹೋಗಿಸಿ ಅಲ್ಲಿ ನಿಜವಾದ ಮಾನವೀಯತೆಯನ್ನು ಸ್ಥಾಪಿಸುವುದೇ ಸಂಸ್ಕೃತಿ.

ಅತ್ಯುತ್ತಮ ಆಲೋಚನೆಗಳನ್ನೂ ಉಕ್ತಿಗಳನ್ನೂ ತಿಳಿಯುವುದು ಸಂಸ್ಕೃತಿಯೇ. ಆದರೆ ಅಷ್ಟು ಸಾಲದು. ನಾವು ಎಷ್ಟೋ ಸಾರಿ ಯಾಂತ್ರಿಕವಾಗಿ ಕೆಲವು ಭಾವನೆಗಳನ್ನೂ, ಪದ್ಧತಿಗಳನ್ನೂ ಅನುಸರಿಸುತ್ತಿರುತ್ತೇವೆ. ನಾವು ಅರಿತ ಆಲೋಚನೆಗಳೂ ಉಕ್ತಿಗಳೂ ನಮ್ಮ ಭಾವನೆ ಮತ್ತು ಪದ್ಧತಿಗಳ ಮೇಲೆ ಬೆಳಕು ಬೀರಬೇಕು. ನಮ್ಮನ್ನು ನಾವು ತಿದ್ದಿಕೊಳ್ಳಲು ಸಹಾಯಮಾಡಬೇಕು. ಹೀಗೆ ನಮ್ಮನ್ನು ನಾವು ಉತ್ತಮಗೊಳಿಸಿಕೊಳ್ಳಲು ಮಾಡುವ ಪ್ರಯತ್ನವೇ ಸಂಸ್ಕೃತಿ.[10] ಅದು ಹೆಚ್ಚು ಆನಂದ, ಹೆಚ್ಚು ಬೆಳಕು, ಹೆಚ್ಚು ಬಾಳು, ಹೆಚ್ಚು ಅನುಕಂಪೆ—ಇವು

---

[7] ಡಿ. ವಿ. ಗುಂಡಪ್ಪ : ಸಂಸ್ಕೃತಿ, ಪು. 5.

[8] T. S. Eliot : Notes towards the Definition of Culture, p. 13.

[9] Kingsley Davis : Human Society (1959), p. 3.—"If there is any single factor explaining man's uniqueness, it is this : He, and he alone, has culture."

[10] Mathew Arnold : Culture and Anarchy, pp. viii, 4–32.

ಗಳನ್ನೇ ಪ್ರಧಾನ ಲಕ್ಷಣವಾಗಿ ಉಳ್ಳ ಆಂತರಂಗಿಕವಾದ, ಆತ್ಮಸಂಬಂಧಿಯಾದ ಕ್ರಿಯೆ. ಅದನ್ನು ಹೃದಯದ ಒಲವು, ಬುದ್ಧಿಯ ಬೆಳಕು (sweetness and light) ಎಂಬ ಎರಡು ಮಾತುಗಳಿಂದ ನಿರ್ದೇಶಿಸಬಹುದು.

ಆರ್ನಾಲ್ಡನ 'ಸಂಸ್ಕೃತಿ'ಯು ಬಹುಮಟ್ಟಿಗೆ ವ್ಯಕ್ತಿಗತವಾಗಿದೆ, ವ್ಯಕ್ತಿಯ ವಿಕಾಸಕ್ಕೆ ಸಂಬಂಧಿಸಿದೆ. ಎಮರ್ಸನ್ನನ ಅಭಿಪ್ರಾಯಗಳು ಬಹುಮಟ್ಟಿಗೆ ಇವನ ಅಭಿಪ್ರಾಯಗಳನ್ನೇ ಹೋಲುತ್ತವೆ. ಎಮರ್ಸನ್ನನು ತನ್ನ 'Culture' ಎಂಬ ಪ್ರಬಂಧದಲ್ಲಿ ವ್ಯಕ್ತಿಯು ಸುಸಂಸ್ಕೃತನಾಗಬೇಕಾದರೆ ಅವನು ಯಾವ ಮಾರ್ಗಗಳನ್ನು ಅನುಸರಿಸಬೇಕು, ಸುಸಂಸ್ಕೃತನ ಲಕ್ಷಣಗಳೇನು ಎಂಬ ವಿಷಯಗಳನ್ನೇ ಉದ್ದಕ್ಕೂ ಪ್ರತಿಪಾದಿಸಿಕೊಂಡು ಹೋಗಿದ್ದಾನೆ.[11] ಸುಸಂಸ್ಕೃತನನ್ನು ಕುರಿತ ಇವನ ವಿವರಣೆಯು ನ್ಯೂಮನ್ನನ 'Gentleman' ನ ವಿವರಣೆಯನ್ನು ಬಹುವಾಗಿ ಹೋಲುತ್ತದೆ. ರವೀಂದ್ರನಾಥ ಠಾಕೂರರ ಅಭಿಪ್ರಾಯಗಳೂ ಬಹುಮಟ್ಟಿಗೆ ಈ ಗುಂಪಿಗೆ ಸೇರುತ್ತವೆ. ಅವರು 'Civilization' ಎಂಬ ಪದವನ್ನು ಸಂಸ್ಕೃತಿ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಸಂಸ್ಕೃತಿ ಎಂಬುದು ಒಂದು ಆಕಾರವನ್ನು ತಳೆದು ನಿಂತ ಆಕಸ್ಮಿಕ ಘಟನೆಗಳ ಮೊತ್ತವಲ್ಲ. ನಮ್ಮ ಪೂರ್ಣತೆಗಾಗಿ ರೂಪಿಸಿಕೊಂಡ ಯಾವುದೊ ದಿವ್ಯಾದರ್ಶದ ಅಭಿವ್ಯಕ್ತಿ. ಇದಕ್ಕೆ ಸಮಾನವಾದ ಭಾರತೀಯ ಪದ 'ಧರ್ಮ'. ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ. ಮನುಷ್ಯನ ಸಾಂಘಿಕ ಜೀವನದಲ್ಲಿ ಅಭಿವ್ಯಕ್ತಗೊಂಡ ಧರ್ಮವೇ ಸಂಸ್ಕೃತಿ. ಜೀವನಾದರ್ಶಗಳನ್ನೂ ಮೌಲ್ಯಗಳನ್ನೂ ನಮ್ಮ ಮುಂದಿಡುವುದು ಸಂಸ್ಕೃತಿಯ ಘನೋದ್ದೇಶಗಳಲ್ಲೊಂದು. ಎಲ್ಲಿ ಸರಳವಾದ ರೂಪದಲ್ಲಿ ಅಧ್ಯಾತ್ಮವು ಅಭಿವ್ಯಕ್ತವಾಗುವುದೋ ಅಲ್ಲಿ ಸಂಸ್ಕೃತಿಯು ಅತ್ಯುತ್ತಮ ರೂಪದಲ್ಲಿ ಸೃಷ್ಟಿಯಾಯಿತೆಂದು ಭಾವಿಸಬೇಕು.[12] ಠಾಕೂರರೇ ಇನ್ನೊಂದೆಡೆ[13] ಸಂಸ್ಕೃತಿಯನ್ನು 'ಮನೋಮಯ ಜೀವನ' ('The life of mind') ಎಂದು ಕರೆದಿದ್ದಾರೆ.

ಟಿ. ಎಸ್. ಎಲಿಯಟ್ಟನ ವಾದವು ಸ್ವಲ್ಪ ಭಿನ್ನವಾದುದು. ಅವನ ಪ್ರಕಾರ ಸಂಸ್ಕೃತಿ ಎಂಬುದು ಒಬ್ಬ ವ್ಯಕ್ತಿಯಲ್ಲಿ ಕಂಡುಬರುವುದಕ್ಕಿಂತ ಹೆಚ್ಚಾಗಿ ಒಂದು ಸಮಾಜದ ಅಥವಾ ಗುಂಪಿನ 'ಜೀವನ ವಿಧಾನ'ದಲ್ಲಿ ಕಂಡುಬರುತ್ತದೆ. ಸಂಸ್ಕೃತಿ ಎಂಬುದು ಒಂದು ಜನಾಂಗದ ಸಮಸ್ತ ಕ್ರಿಯೆಗಳನ್ನೂ ಅಭಿರುಚಿಗಳನ್ನೂ ಒಳಗೊಳ್ಳುತ್ತದೆ. ವ್ಯಕ್ತಿಗಳು ಏನಿದ್ದರೂ ಈ ಸಂಸ್ಕೃತಿಯನ್ನು ಮುಂದಿನ ಜನಾಂಗಕ್ಕೆ ಹರಿಯಿಸುತ್ತಾರೆ. ಉತ್ತಮರಾದವರು ತಮ್ಮ ಚಟುವಟಿಕೆಗಳಿಂದ ಆ ಸಂಸ್ಕೃತಿಯ ಪ್ರಗತಿಗೆ ಕಾರಣರಾಗುತ್ತಾರೆ. ಅವನ ವಾಕ್ಯಗಳು ಇವು: "ಮೊದಲನೆಯದಾಗಿ, ಮಾನವಶಾಸ್ತ್ರಜ್ಞರನ್ನು ಅನುಸರಿಸಿ ಹೀಗೆ ಹೇಳಬಹುದು—ಒಂದು ಪ್ರದೇಶದಲ್ಲಿ ವಾಸಿಸುತ್ತಿರುವ ಒಂದು ಜನಾಂಗದ ಜೀವನವಿಧಾನವೇ ಸಂಸ್ಕೃತಿ. ಈ ಸಂಸ್ಕೃತಿಯು ಅವರ ಕಲೆಗಳಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ, ಅವರ ಆಚಾರ ವ್ಯವಹಾರಗಳಲ್ಲಿ, ಧರ್ಮದಲ್ಲಿ ವ್ಯಕ್ತವಾಗುತ್ತದೆ. ಆದರೆ ಇವೆಲ್ಲವನ್ನು ಒಟ್ಟಿಗೆ ಸೇರಿಸಿದರೂ ಅದು ಸಂಸ್ಕೃತಿ ಆಗಲಾರದು. ಮನುಷ್ಯನ ದೇಹವನ್ನು ಹೇಗೋ ಹಾಗೆ ಸಂಸ್ಕೃತಿಯನ್ನೂ ಈ ವಿಭಾಗಗಳಾಗಿ ವಿಭಜಿಸಬಹುದು. ದೇಹದ ಅಂಗಗಳ ಮೊತ್ತವೇ ಹೇಗೆ ಮನುಷ್ಯ ಅಲ್ಲವೋ ಹಾಗೆ ಆ ಜನಾಂಗದ ಕಲೆಗಳ, ಸಂಪ್ರದಾಯಗಳ, ಧಾರ್ಮಿಕ ಶ್ರದ್ಧೆಗಳ ಮೊತ್ತವೇ ಸಂಸ್ಕೃತಿ ಆಗಲಾರದು. ಇವು ಒಂದರಮೇಲೊಂದು ಪ್ರಭಾವವನ್ನು ಬೀರುತ್ತವೆ. ಒಂದನ್ನು ಅರಿಯಲು ಎಲ್ಲವನ್ನೂ ಅರಿಯಬೇಕು. ಶ್ರೇಷ್ಠ ಸಂಸ್ಕೃತಿಗಳಿರುವಂತೆ ಶ್ರೇಷ್ಠವಲ್ಲದ ಸಂಸ್ಕೃತಿಗಳೂ ಉಂಟು: ಒಂದು ಸಮಾಜದಲ್ಲಿಯೇ ಶ್ರೇಷ್ಠ ಸಂಸ್ಕೃತಿಗೆ ಮತ್ತು ಶ್ರೇಷ್ಠವಲ್ಲದ ಸಂಸ್ಕೃತಿಗೆ ಸೇರಿದ ವರ್ಗಗಳನ್ನು ಗುರುತಿಸಬಹುದು. ಹಾಗೆಯೇ ಅತ್ಯಂತ ಸುಸಂಸ್ಕೃತರಾದ ವ್ಯಕ್ತಿಗಳಿರುವರೆಂದೂ ಹೇಳಬಹುದು. ಒಬ್ಬ ಕಲಾವಿದನ

---

[11] Emerson: 'Culture' (Complete works, pp. 517–31).

[12] Rabindranath Tagore: 'Civilization and Progress' (Lectures and Addresses, pp. 42–58).

[13] Rabindranath Tagore: The Centre of Indian Culture (1921), p. 31.

ಅಥವಾ ತತ್ವಜ್ಞನ ಸಂಸ್ಕೃತಿಯು ಒಬ್ಬ ಗಣಿಕೆಲಸದವನ ಅಥವಾ ರೈತನ ಸಂಸ್ಕೃತಿಯಿಂದ ಸ್ವಲ್ಪ ಭಿನ್ನ : ಆದರೆ ಒಂದು ಆರೋಗ್ಯಕರವಾದ ಸಮಾಜದಲ್ಲಿ ಇವೆಲ್ಲವೂ ಒಂದೇ ಸಂಸ್ಕೃತಿಯ ಅಂಗಗಳು. ಕಲಾವಿದ, ಕವಿ, ತತ್ವಜ್ಞಾನಿ, ರಾಜಕಾರಣಿ, ಶ್ರಮಜೀವಿ—ಇವರೆಲ್ಲರಿಗೆ ಒಂದು ಸಮಾನವಾದ ಸಂಸ್ಕೃತಿ ಇರುತ್ತದೆ. ಬೇರೆ ದೇಶಗಳಲ್ಲಿ ಅದೇ ವೃತ್ತಿಗಳನ್ನು ಕೈಗೊಂಡಿರುವ ಜನರ ಸಂಸ್ಕೃತಿಯೂ ಈ ಸಂಸ್ಕೃತಿಯೂ ಒಂದೇ ಆಗಿರುವುದಿಲ್ಲ."[14]

ಟಿ. ಎಸ್. ಎಲಿಯಟ್ಟನ ವಿವರಣೆಯು ಅವನೇ ಹೇಳಿಕೊಂಡಿರುವಂತೆ ಬಹುಮಟ್ಟಿಗೆ ಮಾನವ ಶಾಸ್ತ್ರಜ್ಞರನ್ನೂ ಸಮಾಜ ಶಾಸ್ತ್ರಜ್ಞರನ್ನೂ ಅನುಸರಿಸಿದೆ. ಮನುಷ್ಯನು ವಂಶಾನುಗತವಾದ ಕೆಲವು ಲಕ್ಷಣಗಳೊಡನೆ ಶಕ್ತಿಗಳೊಡನೆ ಹುಟ್ಟುತ್ತಾನೆ. ಇವುಗಳನ್ನು ಯಾರೂ ಅವನಿಗೆ ಕಲಿಸಿಕೊಡಬೇಕಾಗಿಲ್ಲ. ಆದರೆ ಇನ್ನು ಕೆಲವನ್ನು ಅವನಿಗೆ ಕಲಿಸಿಕೊಡಬೇಕಾಗುತ್ತದೆ ಅಥವಾ ತನ್ನ ಪರಿಸರಣದಿಂದ ಅವನೇ ಕಲಿತುಕೊಳ್ಳುತ್ತಾನೆ. ಉದಾಹರಣೆಗೆ —ಭಾಷೆ, ಮನೆ ಕಟ್ಟುವುದು, ವಸ್ತ್ರಗಳ ಉಪಯೋಗ, ವ್ಯವಸಾಯ, ಸಂಪ್ರದಾಯಗಳು—ಇತ್ಯಾದಿಗಳು. ಇವು ಹುಟ್ಟಿನೊಡನೆ ವ್ಯಕ್ತಿಯಿಂದ ವ್ಯಕ್ತಿಗೆ ಹರಿಯುವುದಿಲ್ಲ. ಮನೆ ಕಟ್ಟುವುದನ್ನೇ ತೆಗೆದುಕೊಂಡರೆ, ಪಕ್ಷಿಗಳಿಗೆ ಅದು ಹುಟ್ಟಿನೊಡನೆ ಸ್ವಭಾವಸಿದ್ಧವಾಗಿ ಬರುತ್ತದೆ. ಒಂದು ಸಾವಿರ ವರ್ಷಗಳ ಹಿಂದೆ ಪಕ್ಷಿಗಳು ಹೇಗೆ ಗೂಡು ಕಟ್ಟುತ್ತಿದ್ದುವೋ ಹಾಗೆ ಈಗಲೂ ಗೂಡು ಕಟ್ಟುತ್ತವೆ. ಮನುಷ್ಯನಲ್ಲಾದರೋ, ಅವನು ತನ್ನ ಪರಿಸರಣದಿಂದ ಅದನ್ನು ಕಲಿತುಕೊಳ್ಳುತ್ತಾನೆ, ಉತ್ತಮಗೊಳಿಸುತ್ತಾ ಹೋಗುತ್ತಾನೆ. ಹೀಗೆ ಹುಟ್ಟಿನಿಂದ ಬಾರದೆ, ಮನುಷ್ಯ ತನ್ನ ಪರಿಸರಣದಿಂದ ಕಲಿತುಕೊಳ್ಳುವ ಭಾಷೆ, ಉಪಕರಣಗಳ ತಯಾರಿಕೆ, ಕೈಗಾರಿಕೆ, ಕಲೆ, ವಿಜ್ಞಾನ, ಕಾನೂನು, ಆಡಳಿತ, ನೀತಿ ಮತ್ತು ಧರ್ಮ—ಇತ್ಯಾದಿಗಳೆಲ್ಲವನ್ನೂ ಒಳಗೊಳ್ಳುತ್ತದೆ 'ಸಂಸ್ಕೃತಿ'.[15] ಆದ್ದರಿಂದ ಸಂಸ್ಕೃತಿ ಎಂದರೆ ಒಂದು ಸಮಾಜದ ಜೀವನ ವಿಧಾನ, ಅದರ ಆಚಾರ ವ್ಯವಹಾರಗಳು, ಅದರ ಸಂಸ್ಥೆಗಳು, ಆಲೋಚನಾ ವಿಧಾನಗಳು. ಪ್ರತಿಯೊಬ್ಬ ವ್ಯಕ್ತಿಯೂ ಪ್ರಪಂಚವನ್ನು ಸ್ವತಂತ್ರವಾಗಿ ನೋಡಲಾರ. ಅವನ ಸಮಾಜದ ಆಲೋಚನಾ ವಿಧಾನಗಳೂ, ಆಚಾರ ವ್ಯವಹಾರಗಳೂ, ಸಂಪ್ರದಾಯಗಳೂ ಅವನ ದೃಷ್ಟಿಯನ್ನು ನಿಯಂತ್ರಿಸುತ್ತವೆ, ಮಾರ್ಪಡಿಸುತ್ತವೆ.[16] ಹೀಗೆ ಮನುಷ್ಯ ಬಹುಮಟ್ಟಿಗೆ ತಾನು ಹುಟ್ಟಿ ಬೆಳೆದ ಸಂಸ್ಕೃತಿಯ ಶಿಶುವೆಂದು ಹೇಳಬಹುದು.

---

[14]T. S. Eliot : Notes towards the Definition of Culture, p. 120.

[15] "Culture—A collective name for all behavior patterns socially acquired and socially transmitted by means of symbols ; hence a name for all the distinctive achievements of human groups, including not only such items as language, tool-making, industry, art, science, law, government, morals and religion, but also the material instruments or articrafts in which cultural achievements are embodied and by which intellectual cultural features are given practical effect, such as buildings, tools, machines, communication devices, art objects, etc. ........It includes all that is learned through intercommunication........"—Henry pratt Fairchild : Dictionary of Sociology, p. 80.

[16] "No man ever looks at the world with pristine eyes. He sees it edited by a definite set of customs and institutions and ways of thinking....The life history of the individual is first and foremost an accomodation to the patterns of standards traditionally handed down in his community–"

—Ruth Benedict : Patterns of Culture (1952), p. 2.

ಮೇಲಿನ ಎರಡು ವಿವರಣೆಗಳಲ್ಲಿ ಎರಡನೆಯ ವಿವರಣೆಯನ್ನು ನಾವು ಅಂಗೀಕರಿಸಿದ್ದೇವೆ. ಪ್ರಾಚೀನ ಕನ್ನಡಿಗರು ಬದುಕಿದ ರೀತಿ, ಅವರ ಧರ್ಮಗಳು, ಆರ್ಥಿಕವ್ಯವಸ್ಥೆ, ಜಾತಿನೀತಿಗಳು, ಅವರ ಬಾಳನ್ನು ಹಿಡಿದು ನಡೆಯಿಸಿದ ಮೌಲ್ಯಗಳು, ಒಟ್ಟಿನಲ್ಲಿ ಅವರ ಜೀವನವಿಧಾನ—ಇವುಗಳನ್ನು ನಿರೂಪಿಸುವುದೇ ನಮ್ಮ ಗುರಿ. ಇವೇ ಪ್ರಾಚೀನ ಕನ್ನಡಿಗರ 'ಸಂಸ್ಕೃತಿ'ಯನ್ನು ಎತ್ತಿ ತೋರಿಸತಕ್ಕುವು.

ನಾವು ಆರಿಸಿಕೊಂಡಿರುವ ಅವಧಿ ಕ್ರಿ. ಶ. 450–ಕ್ರಿ ಶ. 1150. ನಮ್ಮ ಈ ಆಯ್ಕೆಯಲ್ಲಿ ಒಂದು ಸ್ಪಷ್ಟವಾದ ಉದ್ದೇಶವೂ ಕಾರಣವೂ ಇದೆ. ಸು. 450ರ ಹಲ್ಮಿಡಿ ಶಾಸನವೇ ನಮಗೆ ದೊರಕಿರುವ ಅತ್ಯಂತ ಪ್ರಾಚೀನವಾದ ಕನ್ನಡ ಶಾಸನ.[17] ಅದಕ್ಕಿಂತ ಹಿಂದೆ ಕರ್ನಾಟಕದಲ್ಲಿ ಕೆಲವು ಪ್ರಾಕೃತ ಶಾಸನಗಳು ದೊರಕುತ್ತವೆ. ಅವುಗಳನ್ನು ನಮ್ಮ ಈ ಅಧ್ಯಯನದಲ್ಲಿ ಬಳಸಿಕೊಂಡಿದ್ದರೂ ನಮ್ಮ ನಿಜವಾದ ಅಧ್ಯಯನವು ಕ್ರಿ. ಶ. 450ರಿಂದ ಆರಂಭವಾಗಿದೆಯೆಂದೇ ಹೇಳಬೇಕು. ಕನ್ನಡ ಶಾಸನಗಳನ್ನಲ್ಲದೆ, ಅವುಗಳಿಗೆ ಪೂರಕವಾಗಿ ಬಹುಮಟ್ಟಿಗೆ ಸಂಸ್ಕೃತದಲ್ಲಿರುವ ತಾಮ್ರಪಟಗಳನ್ನೂ, ಕನ್ನಡ ಕಾವ್ಯಗಳನ್ನೂ ಯಥೇಷ್ಟವಾಗಿ ಬಳಸಿಕೊಳ್ಳಲಾಗಿದೆ. ಕ್ರಿ ಶ. 1150ನ್ನು ಈಚಿನ ಮಿತಿಯನ್ನಾಗಿ ಮಾಡಿಕೊಳ್ಳಲು ಕೆಲವು ಕಾರಣಗಳಿವೆ. ಅನೇಕ ದೃಷ್ಟಿಗಳಿಂದ ಹನ್ನೆರಡನೆಯ ಶತಮಾನದ ಮಧ್ಯಭಾಗವನ್ನು ಒಂದು ಪರ್ವಕಾಲವೆಂದು ಕರೆಯಬಹುದು. ಹೊಯ್ಸಳರ ಸಾಮ್ರಾಜ್ಯವು ತನ್ನ ವೈಭವದ ತುತ್ತತುದಿಯನ್ನು ಮುಟ್ಟಿದ ಕಾಲವದು. ಕನ್ನಡ ಭಾಷೆ, ಸಾಹಿತ್ಯ, ಛಂದಸ್ಸುಗಳು ಹೊಸದೊಂದು ಯುಗವನ್ನು ಪ್ರವೇಶಿಸಿದ್ದು ಆ ಕಾಲದಲ್ಲಿಯೇ. ಭಾಷೆಯ ದೃಷ್ಟಿಯಿಂದ ನೋಡಿದರೆ ಹಳಗನ್ನಡವು ನಡುಗನ್ನಡವಾಗಿ ಸಂಕ್ರಮಣವಾಗುತ್ತಿದ್ದುದು ಆ ಕಾಲದಲ್ಲಿಯೇ. ಭಾಷೆಯು ಎಂದೋ ಒಂದು ದಿನ ಇದ್ದಕ್ಕಿದ್ದಂತೆ ಮಾರ್ಪಡುವುದಿಲ್ಲವೆಂದೂ, ಅದರಲ್ಲಿ ನಡೆಯುವ ವ್ಯತ್ಯಾಸಗಳು ನಿಧಾನವಾಗಿ ಕಾಣಿಸಿಕೊಳ್ಳುತ್ತವೆಯೆಂದೂ ಎಲ್ಲರೂ ಬಲ್ಲರು. ಹಳಗನ್ನಡವು ನಡುಗನ್ನಡವಾಗಿ ತಿರುಗುವ ಕಾರ್ಯವು ಹನ್ನೊಂದನೆಯ ಶತಮಾನದಲ್ಲಿಯೇ, ಇನ್ನೂ ಮುಂಚೆಯೇ ಆರಂಭವಾಗಿದ್ದರೂ, ವ್ಯತ್ಯಾಸಗಳು ನಡೆದು ಒಂದು ಘಟ್ಟವನ್ನು ಮುಟ್ಟಿದ್ದು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ.[18] ಛಂದಸ್ಸಿನ ದೃಷ್ಟಿಯಿಂದ ಹೇಳುವುದಾದರೆ ಹನ್ನೆರಡನೆಯ ಶತಮಾನದ ಮಧ್ಯಭಾಗದಿಂದ ಈಚೆಗೆ ವೃತ್ತ ಕಂದಗಳ ಪ್ರಾಬಲ್ಯವು ತಪ್ಪಿ ಕನ್ನಡ ವೃತ್ತಗಳಾದ ತ್ರಿಪದಿ, ಷಟ್ಪದಿಗಳೂ, ಪ್ರಾಕೃತದಿಂದ ಬಂದ ರಗಳೆಯೂ ಹೆಚ್ಚು ಪ್ರಾಚುರ್ಯವನ್ನು ಪಡೆದವು. ಹೆಚ್ಚು ಪ್ರೌಢವಾದ ಮಾರ್ಗೀಶೈಲಿಯು ಹೆಚ್ಚು ಸರಳವಾದ ದೇಶೀಶೈಲಿಗೆ ಸಂಕ್ರಮಣವಾದದ್ದು ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ.

ಸಾಹಿತ್ಯದ ದೃಷ್ಟಿಯಿಂದಲೂ ಹನ್ನೆರಡನೆಯ ಶತಮಾನದ ಮಧ್ಯಭಾಗವು ಒಂದು ಸಂಧಿಯ ಕಾಲವೆಂದು ಹೇಳಬಹುದು.[19] ಚಂಪೂ ಕಾವ್ಯಗಳೇ ಪ್ರಧಾನವಾಗಿ ಕಾಣಿಸಿಕೊಳ್ಳುತ್ತಿದ್ದ ಕನ್ನಡದಲ್ಲಿ ವಚನಸಾಹಿತ್ಯವು ಹೆಚ್ಚು ಹೆಚ್ಚಾಗಿ ಗೋಚರವಾಗಿ ಕನ್ನಡ ಸಾಹಿತ್ಯವನ್ನು ಪುಷ್ಟಿಗೊಳಿಸಿದ್ದು ಈ ಕಾಲದಲ್ಲಿಯೇ. ಕರ್ನಾಟಕದ

---

17 ಶ್ರೀ ಎಂ. ಎಚ್. ಕೃಷ್ಣ ಅವರ ಈ ಅಭಿಪ್ರಾಯವನ್ನು ಶ್ರೀ ಎನ್. ಲಕ್ಷ್ಮೀನಾರಾಯಣರಾಯರು ಒಪ್ಪಿಕೊಂಡಿಲ್ಲ. ಅವರ ಪ್ರಕಾರ ಕ್ರಿ. ಶ. 578ರ ಮಂಗಲೇಶನ ಬಾದಾಮಿ ಗುಹೆಯ ಕನ್ನಡ ಶಾಸನವೇ ಅತ್ಯಂತ ಪ್ರಾಚೀನವಾದುದು.—N. Lakshminarayana Rao : 'The Chalukyas' (Karnataka Darshana, pp. 40–1).

18 T. N. Sreekantaiya : 'The Kannada Language through the Ages' (Karnataka Darshana, P. 179).

19 D. L. Narasimhachar : 'Old Kannada Literature–A Brief Survey' (Karnataka Darshana, P. 106). ಆದಿಕಾಲದಿಂದ ಹನ್ನೆರಡನೇ ಶತಮಾನದ ಮಧ್ಯದವರೆಗಿನ ಕನ್ನಡ ಸಾಹಿತ್ಯವನ್ನು 'ಪಂಪಯುಗ'ವೆಂದೂ, ಅಲ್ಲಿಂದ ಹದಿನೈದನೆಯ ಶತಮಾನದವರೆಗಿನ ಸಾಹಿತ್ಯವನ್ನು 'ಬಸವಯುಗ'ವೆಂದೂ ಡಾ|| ರಂ. ಶ್ರೀ. ಮುಗಳಿಯವರು ಕರೆದಿದ್ದಾರೆ. ಅವುಗಳ ವೈಶಿಷ್ಟ್ಯ ಇತ್ಯಾದಿಗಳಿಗೆ ನೋಡಿ, ಕನ್ನಡ ಸಾಹಿತ್ಯ ಚರಿತ್ರೆ (1953), ಪು. 84–6; 147–9.

ಧಾರ್ಮಿಕ ಇತಿಹಾಸದಲ್ಲಿಯೂ ಹನ್ನೆರಡನೆಯ ಶತಮಾನವು ಮುಖ್ಯವಾದ ಕಾಲ. ಆ ಶತಮಾನದಲ್ಲಿ ಎರಡು ಹೊಸ ಧರ್ಮಗಳು ಕರ್ನಾಟಕದಲ್ಲಿ ಕಾಣಿಸಿಕೊಳ್ಳುತ್ತವೆ. ಪೂರ್ವಾರ್ಧದಲ್ಲಿ ಶ್ರೀ ರಾಮಾನುಜರಿಂದ ಶ್ರೀ ವೈಷ್ಣವ ಧರ್ಮವೂ, ಮಧ್ಯ ಮತ್ತು ಉತ್ತರಾರ್ಧಗಳಲ್ಲಿ ಬಸವ, ಅಲ್ಲಮ ಮುಂತಾದವರಿಂದ ವೀರಶೈವ ಧರ್ಮವೂ ಪ್ರಸಾರ ಗೊಂಡವು. ವೀರಶೈವವು ಕೇವಲ ಧರ್ಮವಾಗಿ ಮಾತ್ರವಲ್ಲದೆ, ಸಮಾಜದರ್ಶನವೂ (social philosophy) ಆಗಿ ಸಾಮಾಜಿಕ ಜೀವನದಲ್ಲಿ ಒಂದು ಹೊಸ ಶಕೆಯನ್ನೇ ಆರಂಭಿಸಿತು. ಸಮಾಜ ತನ್ನ ಹಳೆಯ ನಿಲುವಿನಿಂದ ಹೊಸ ದಿಗಂತಗಳಿಗೆ ಜಿಗಿಯಿತು. ಹೀಗೆ ಭಾಷೆ, ಛಂದಸ್ಸು, ಸಾಹಿತ್ಯ ಮತ್ತು ಧರ್ಮ, ಸಾಮಾಜಿಕ ಪರಿವರ್ತನೆ ಗಳ ದೃಷ್ಟಿಯಿಂದ ಕ್ರಿ. ಶ. 1150ನ್ನು ಸ್ಥೂಲವಾಗಿ ಒಂದು ಗಡಿಯೆಂದು ಭಾವಿಸಬಹುದು. ಕರ್ನಾಟಕದ ಜನ ಜೀವನವು ಸರಿ ಸುಮಾರು ಆ ಕಾಲದಲ್ಲಿ ಒಂದು ಘಟ್ಟವನ್ನು ಮುಟ್ಟಿ ಇನ್ನೊಂದು ಹೊಸ ಬಾಳನ್ನು ಪ್ರವೇಶಿಸಿತೆಂದು ಹೇಳಬಹುದು. ಕ್ರಿ. ಶ. 450ರಿಂದ ಕ್ರಿ. ಶ. 1150ರ ವರೆಗಿನ ಅವಧಿಯಲ್ಲಿ ಕನ್ನಡಿಗರು ಹೇಗೆ ಬಾಳಿದರು, ಅವರ ಸಂಸ್ಕೃತಿಯ ವೈಶಿಷ್ಟ್ಯವೇನು ಎಂಬುದೇ ನಮ್ಮ ಅಧ್ಯಯನದ ಮುಖ್ಯ ಉದ್ದೇಶ.

ಶಾಸನಗಳನ್ನು ಅಧ್ಯಯನಮಾಡುವಾಗ ಒಂದು ನಿಯಮವನ್ನು ಉದ್ದಕ್ಕೂ ಅನುಸರಿಸಿದೆ. ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳನ್ನು ಬಿಟ್ಟು ಉಳಿದ ಸಾಂಸ್ಕೃತಿಕ ಮತ್ತು ಸಾಮಾಜಿಕ ಅಂಶಗಳನ್ನು ಶಾಸನ ಗಳಿಂದ ಇಲ್ಲಿ ಸಂಗ್ರಹಿಸಲಾಗಿದೆ. ಉದಾಹರಣೆಗೆ ರಾಜರು, ಅವರ ಪತ್ನಿಯರು, ಅವರ ಮಕ್ಕಳು, ದಿಗ್ವಿಜಯಗಳು, ಯುದ್ಧಗಳು—ಇವುಗಳ ಪ್ರಸ್ತಾಪ ಇಲ್ಲಿ ಬಂದಿದ್ದರೂ ಅವು ಆ ಕಾಲದ ಸಾಮಾಜಿಕ ಚಟುವಟಿಕೆಗಳ ಅಂಗವಾಗಿ ಮಾತ್ರ ಬಂದಿವೆ. ರಾಜ್ಯದ ಆಡಳಿತ ವಿಧಾನವನ್ನು ಕುರಿತ ಅಧ್ಯಾಯದಲ್ಲೂ ಅಷ್ಟೇ, ಅದನ್ನು ಜನಜೀವನದ ಒಂದು ಅಂಗವೆಂಬಂತೆ ಭಾವಿಸಿದೆ. ರಾಜಕೀಯ ಎನ್ನುವುದೂ ಕೂಡ ಸಂಸ್ಕೃತಿಯ ಸೃಷ್ಟಿಯೇ ತಾನೇ!

ಕನ್ನಡ ನಾಡಿನ ಜೀವನವು ಎಲ್ಲಿಯೂ, ಯಾವ ಕೃತಿಯಲ್ಲಿಯೂ ಮಡುಗಟ್ಟಿ ನಿಂತಿಲ್ಲ. ಅದು ಕೆಲವು ಕಾವ್ಯಗಳಲ್ಲಿ ಅಲ್ಲಲ್ಲಿ ಗೋಪಾದ ಜಲದಂತೆ ಕಂಡುಬಂದರೂ ಹೆಚ್ಚು ಪ್ರಮಾಣದಲ್ಲಿ, ಹೆಚ್ಚು ವಿಸ್ತಾರ ವಾಗಿ, ಹೆಚ್ಚು ಶುದ್ಧರೂಪದಲ್ಲಿ ಕಾಣಿಸಿಕೊಳ್ಳುವುದು ಶಾಸನಗಳಲ್ಲಿ. ಪಾಶ್ಚಾತ್ಯರ ಐತಿಹಾಸಿಕ ಪ್ರಜ್ಞೆ ಭಾರತೀಯರಿಗೆ ಇಲ್ಲ ಎನ್ನುವುದು ಎಲ್ಲರಿಗೂ ತಿಳಿದ ವಿಷಯವೇ.[20] ಗ್ರೀಕರು, ಚೀನೀಯರು, ಅರಬ್ಬರು ಬೇರೆ ಬೇರೆ ನಾಡುಗಳಿಗೆ ಹೋಗಿ ಅಲ್ಲಿನ ಜೀವನವನ್ನು ಅಭ್ಯಸಿಸಿ ತಮ್ಮ ಅನುಭವಗಳನ್ನು ಬರೆದಿಟ್ಟರು. ನಮ್ಮವರು ಬೇರೆ ದೇಶಗಳಿಗೆ ಹೋಗಿ ಅಲ್ಲಿನ ಜೀವನವನ್ನು ಬರೆದಿಡುವುದಿರಲಿ,[21] ನಮ್ಮ ದೇಶದ ನಿಜವಾದ ಚಿತ್ರವನ್ನೇ ಎಲ್ಲಿಯೂ ಬರೆದಿಟ್ಟಿಲ್ಲ. ಹನ್ನೊಂದನೆಯ ಶತಮಾನದ ಪ್ರವಾಸಿ ಅಲ್ಬೆರೂನಿ ಎಂಬ ಅರಬ್ಬೀ ವರ್ತಕ ಹೇಳುವಂತೆ—"ಸಂಗತಿಗಳ ಐತಿಹಾಸಿಕ ಅನುಕ್ರಮಣಿಕೆಯ ವಿಷಯದಲ್ಲಿ ಭಾರತೀಯರಿಗೆ ಆಸಕ್ತಿಯೇ ಇಲ್ಲ. ....ರಾಜಾವಳಿಗಳ ನಿರೂಪಣೆಯಲ್ಲಿಯೂ ಅಷ್ಟೇ. ಸತ್ಯಸಂಗತಿಗಳನ್ನು ಹೇಳಲು ಬಲವಂತ ಪಡಿಸಿದರೆ ಕಟ್ಟುಕಥೆಗಳನ್ನೇ ಸೃಷ್ಟಿಸುತ್ತಾರೆ."[22] ನಮ್ಮ ಕಾವ್ಯಗಳು ಸಾಮಾನ್ಯವಾಗಿ ಪೌರಾಣಿಕ ವಿಷಯ ಗಳನ್ನು ಆರಿಸಿಕೊಂಡು ರಚಿತವಾದ ರಮ್ಯಾದ್ಭುತ ಕಥೆಗಳು. ಅವು ಐತಿಹಾಸಿಕ ವ್ಯಕ್ತಿಗಳನ್ನು ಆರಿಸಿ

---

[20] "It is indeed questionable whether the ancient Hindus ever possessed the true historical sense, in the shape of the faculty of putting together genuine history on broad and critical lines."—Fleet : 'Epigraphy' (Imperial Gazetteer of India, II, p. 5).

[21] ತಮ್ಮ ದೇಶದಿಂದ ಹೊರಹೋಗಿ ಹೊರಗಿನ ಜನರನ್ನೂ ಅವರ ಜೀವನವಿಧಾನವನ್ನೂ ತಿಳಿಯಲು ಪ್ರಯತ್ನಿಸ-ದಿರುವುದರಿಂದ ಭಾರತೀಯರ ದೃಷ್ಟಿಯು ಸಂಕುಚಿತವಾಗಿದೆ ಎಂದು ಅಲ್ಬೆರೂನಿ ಕೊರಗಿದ್ದಾನೆ (Sachau : Alberuni's India, I, p. 23).

[22] Quoted by Fleet : Imperial Gazetteer of India, II, p. 6.

ಕೊಂಡರೂ, ಅವರ ಸುತ್ತ ಅದ್ಭುತ ಸಂಗತಿಗಳ ಜಾಲವನ್ನೇ ಹೆಣೆದುಬಿಡುತ್ತವೆ.[23] ಅತ್ತಿಮಬ್ಬೆ, ಬಸವಣ್ಣ, ಏಕಾಂತದ ರಾಮಯ್ಯ ಮುಂತಾದವರ ಕಾಲದಲ್ಲಿಯೇ, ಅಥವಾ ಅವರಿಂದ ಈಚೆಗೆ ನಲವತ್ತು ಐವತ್ತು ವರ್ಷಗಳ ಅವಧಿಯಲ್ಲಿಯೇ ಅವರ ವಿಷಯವಾಗಿ ಅನೇಕ ಪವಾಡದ ಕಥೆಗಳು ಹುಟ್ಟಿಕೊಂಡಿರುವುದನ್ನು ಇಲ್ಲಿ ನೆನೆಯಬಹುದು (ಈ ಪವಾಡಗಳೆಲ್ಲವೂ ಸುಳ್ಳು ಎಂದು ಧೈರ್ಯವಾಗಿ ಹೇಳಲು ಬರುವಂತಿಲ್ಲ ಎಂಬುದೂ ನಿಜವೇ !).

ಭಾರತದಲ್ಲಿ ಐತಿಹಾಸಿಕ ಕಾವ್ಯಗಳು ಕೆಲವು ಹುಟ್ಟಿವೆ. ಬಾಣನ ಹರ್ಷಚರಿತ, ಬಿಲ್ಹಣನ ವಿಕ್ರಮಾಂಕದೇವಚರಿತ ಇವು ಈ ಜಾತಿಯವು. ತಮಿಳಿನ ಕಳವೞಿ, ಕಲಿಂಗತ್ತುಪ್ಪರಣಿ, ವಿಕ್ರಮ ಚೋೞನ್ ಉಲಾ—ಇವೂ ಅಷ್ಟೆ. ಆ ಕಾಲದ ರಾಜಕೀಯ ಸಾಮಾಜಿಕ ಜೀವನಗಳ ಮೇಲೆ ಇವು ಅಮೂಲ್ಯವಾದ ಬೆಳಕನ್ನು ಬೀರಿದರೂ ಅವು ಕಾವ್ಯಗಳೂ ಹೌದು ಎಂಬುದನ್ನು ಮರೆಯಬಾರದು.[24] ಆದರೆ ಇವುಗಳಿಗೆಲ್ಲ ಬಹುಶಃ ಒಂದೇ ಒಂದು ಅಪವಾದವೆಂದರೆ ಕಾಶ್ಮೀರದ ಕಲ್ಹಣನ 'ರಾಜತರಂಗಿಣಿ.' ಇವನ ಕಾಲ ಹನ್ನೆರಡನೆಯ ಶತಮಾನ. ತನಗಿಂತ ಹಿಂದಿನ ಅನೇಕ ಕೃತಿಕಾರರನ್ನು ಹೆಸರಿಸಿ ಅವರ ಕೃತಿಗಳಲ್ಲಿದ್ದ ಅನೇಕ ಐತಿಹಾಸಿಕ ದೋಷಗಳನ್ನು ತಾನು ಪ್ರಾಚೀನ ರಾಜರ ಶಾಸನಗಳ ಮತ್ತು ತಾಮ್ರಪಟಗಳ ಸಹಾಯದಿಂದ ತಿದ್ದಿರುವುದಾಗಿಯೂ,[25] ಕ್ರಿ. ಪೂ. 1184 ರಿಂದ ಈಚೆಗೆ ಆಳಿದ ಕಾಶ್ಮೀರದ ದೊರೆಗಳ ಇತಿಹಾಸವನ್ನು ಚಿತ್ರಿಸಿರುವುದಾಗಿಯೂ ಹೇಳಿಕೊಂಡಿದ್ದಾನೆ. ಕಲ್ಹಣನು ಐತಿಹಾಸಿಕ ದೃಷ್ಟಿಯಿಂದ ಶಾಸನಗಳನ್ನು ಸಂಶೋಧಿಸಿದ ಪ್ರಥಮ ಭಾರತೀಯ ಶಾಸನ ಶಾಸ್ತ್ರಜ್ಞ (Epigraphist). ಹತ್ತೊಂಬತ್ತನೆ ಶತಮಾನದಲ್ಲಿ ರಾಜತರಂಗಿಣಿಯನ್ನು ಉದ್ದೇಶದಲ್ಲಿ ಮಾತ್ರ ಹೋಲುವ ಒಂದು ಕೃತಿಯು ಕನ್ನಡದಲ್ಲಿ ರಚಿತ

---

[23] ಕಾವ್ಯಗಳೆಲ್ಲ ಬರಿಯ ಕಟ್ಟುಕಥೆಗಳೆಂದು ಅವುಗಳನ್ನು ಐತಿಹಾಸಿಕ ಅಧ್ಯಯನದಲ್ಲಿ ತಿರಸ್ಕರಿಸುವುದೂ, ಶಾಸನಗಳಲ್ಲಿ ತಾಮ್ರಪಟಗಳಲ್ಲಿ ಬರುವುದೆಲ್ಲವೂ ಅಕ್ಷರಶಃ ನಿಜವೆಂದು ಕಣ್ಣುಮುಚ್ಚಿ ನಂಬಿಬಿಡುವುದೂ—ಎರಡೂ ದಡ್ಡತನಗಳೇ ಎಂದು ಡಾ॥ ಕೆ ಎ. ನೀಲಕಂಠಶಾಸ್ತ್ರಿಗಳವರು ಒಂದೆಡೆ ಎಚ್ಚರಿಸಿದ್ದಾರೆ (Studies in Cōḷa History and Administration, p. 5).

[24] "It is but natural that in the society less politically conscious the writers were inclined to make their narration more attractive than exact. Since the authors were generally highly learned men they gave it the appearance more of a literary piece than of a historical document."

—D. B. Diskalkar : 'Indian Epigraphical literature' (Journal of Indian History, xxxvii, 1959, p. 323).

[25] "ದೃಷ್ಟೈಶ್ಚ ಪೂರ್ವ ಭೂಭರ್ತೃಪ್ರತಿಷ್ಠಾವಸ್ತು ಶಾಸನೈಃ । ಪ್ರಶಸ್ತಿ ಪಟ್ಟೈಃ ಶಾಸ್ತ್ರೈಶ್ಚ ಶಾಂತೋಽಶೇಷಭ್ರಮಕ್ಲಮಃ" (ರಾಜತರಂಗಿಣಿ, 1.15). ಜವಾಹರಲಾಲ್ ನೆಹ್ರೂ ಅವರು ಹೇಳುವಂತೆ ಪ್ರಾಚೀನ ಕೃತಿಗಳಲ್ಲೆಲ್ಲಾ ಇತಿಹಾಸವೆಂದು ಕರೆಯಿಸಿಕೊಳ್ಳಲರ್ಹವಾದ ಕೃತಿಯೆಂದರೆ ಕಲ್ಹಣನ ರಾಜತರಂಗಿಣಿಯೊಂದೇ (The Discovery of India, Pub. Meridian Books Ltd., p. 91). ಫ್ಲೀಟ್ ಅವರು ಈ ಕೃತಿಯಲ್ಲಿಯೂ ಇತಿಹಾಸಕ್ಕೆ ಸಂಬಂಧಿಸಿದ ಹಲವಾರು ದೋಷಗಳಿವೆ ಎನ್ನುತ್ತಾರೆ.

ಈಲಿಯಡ್ ಗ್ರಂಥವನ್ನು ಕಾವ್ಯವೆಂದು ಓದುವವರಿಗೆ ಅದರಲ್ಲಿ ಇತಿಹಾಸವೂ, ಇತಿಹಾಸವೆಂದು ಓದುವವರಿಗೆ ಕಾವ್ಯವೂ ಗೋಚರವಾಗುತ್ತದೆಯೆಂಬ ಪ್ರಸಿದ್ಧ ಹೇಳಿಕೆಯಿದೆ [Toynbee : A Study of History (abridgement), p. 44]. ಬಹುಶಃ ಈ ಮಾತು ಹರ್ಷಚರಿತ, ವಿಕ್ರಮಾಂಕದೇವಚರಿತಗಳಿಗೂ ಅನ್ವಯವಾಗಬಹುದು.

ನಾಯಿತು.[26] ಅದೇ ದೇವಚಂದ್ರನ ರಾಜಾವಳೀ ಕಥೆ (ಕ್ರಿ. ಶ. 1838). ಕನ್ನಡ ನಾಡಿನ ಪ್ರಚಲಿತ ಐತಿಹ್ಯಗಳನ್ನು ಸಂಗ್ರಹಿಸುತ್ತಿದ್ದ ಮೆಕೆಂಜಿ ಸ್ಸಾಹೇಬನ ಕಣ್ಣಿಗೆ ಬಿದ್ದ ದೇವಚಂದ್ರನು ಆತನ ಸೂಚನೆಯಂತೆ ಮೇಲೆ ಹೇಳಿದ ಗ್ರಂಥವನ್ನು ರಚಿಸಿದನು. ರಾಜಾವಳೀ ಕಥೆಯಲ್ಲಿ ಅನೇಕ ರಾಜರ ಇತಿಹಾಸವೂ, ಜೈನ ಧರ್ಮದ ಹುಟ್ಟು ಬೆಳೆವಣಿಗೆಗಳಿಗೆ ಸಂಬಂಧಿಸಿದ ವಿಷಯಗಳೂ ಇವೆಯಾದರೂ ಇವುಗಳಲ್ಲಿ ಬಹುಪಾಲು ಜನಜನಿತವಾದ ಐತಿಹ್ಯಗಳ ಆಧಾರದ ಮೇಲೆ ನಿಂತಿವೆ. ಹೀಗಾಗಿ ರಾಜಾವಳೀ ಕಥೆಯಲ್ಲಿ ಬಂದಿರುವ ವಿಷಯಗಳನ್ನು ಬಹು ಎಚ್ಚರಿಕೆಯಿಂದ ಸ್ವೀಕರಿಸಬೇಕಾಗುತ್ತದೆ. ಹಾಗೆಯೇ ತಮಿಳಿನ 'ಕೊಂಗುದೇಶ ರಾಜಾಕ್ಕಳ್' ಎಂಬ ಗ್ರಂಥವು ಕ್ರಿ. ಶ. ಒಂದನೇ ಶತಮಾನದಿಂದ ಪ್ರಾರಂಭಿಸಿ ಮೈಸೂರು ದೇಶದ ದೊರೆಗಳ ಇತಿಹಾಸವನ್ನು ಹೇಳಲು ಹೊರಟಿದೆ. ಇದೂ ವಿಪರೀತ ಕಲ್ಪನೆಗಳಿಂದ ತುಂಬಿರುವ ಗ್ರಂಥವೇ.[27]

ರಾಜರ ಇತಿಹಾಸವನ್ನು ಕುರಿತ ಗ್ರಂಥಗಳ ಪಾಡೇ ಹೀಗಾದಮೇಲೆ ಸಾಮಾಜಿಕ ಜೀವನವನ್ನು ಕುರಿತು ರಚಿತವಾದ ಗ್ರಂಥಗಳ ವಿಷಯವನ್ನು ಹೇಳಲೇಬೇಕಾಗಿಲ್ಲ. ಅಂತಹ ಗ್ರಂಥಗಳೂ ಇಲ್ಲವೇ ಇಲ್ಲವೆನ್ನಬಹುದು. ಕನ್ನಡದಲ್ಲಿ ಇದಕ್ಕೆ ಒಂದೇ ಒಂದು ಅಪವಾದವೆಂದರೆ ಬ್ರಹ್ಮಶಿವನ ಸಮಯಪರೀಕ್ಷೆ. ಇವನ ಕಾಲ ಸದ್ಯಕ್ಕೆ ಹನ್ನೆರಡನೆಯ ಶತಮಾನದ ಉತ್ತರಾರ್ಧವೆಂದಿಟ್ಟುಕೊಳ್ಳಬಹುದು.[28] ಇದು ಪದ್ಯರೂಪವಾಗಿರುವುದರಿಂದ ಮಾತ್ರ ಇದನ್ನು 'ಕಾವ್ಯ'ವೆಂದು ಕರೆಯಬಹುದು ; ಮಹಾಕಾವ್ಯವಂತೂ ಅಲ್ಲವೇ ಅಲ್ಲ.[29] ಇದೊಂದು ಸಾಮಾಜಿಕ ವಿಡಂಬನೆಯ ಕೃತಿ. ಇದರಲ್ಲಿ ಕಾಲ್ಪನಿಕವಾದ ಅಥವಾ ಐತಿಹಾಸಿಕವಾದ ಕಥೆ ಎಂಬುದಿಲ್ಲ. ತನ್ನ ಸಮಕಾಲೀನ ಜನರನ್ನೂ, ಧರ್ಮಗಳನ್ನೂ, ಯತಿಗಳನ್ನೂ, ಸಂಪ್ರದಾಯಗಳನ್ನೂ, ಮೂಢನಂಬಿಕೆಗಳನ್ನೂ ನೇರವಾಗಿ ಎತ್ತಿ ಆಡಿ ಖಂಡಿಸುವುದು, ಜೈನಧರ್ಮದ ಶ್ರೇಷ್ಠತೆಯನ್ನು ಎತ್ತಿ ಹಿಡಿಯುವುದು ಇದರ ಉದ್ದೇಶ. ಈ ದೃಷ್ಟಿಯಿಂದ ಇದು ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟ ಕೃತಿ. ಬ್ರಹ್ಮಶಿವನ ಕಾಲದ ಕರ್ನಾಟಕವು ಅನೇಕ ರೀತಿಯ ಆಲೋಚನಾ ಪ್ರವಾಹಗಳಿಗೆ, ಕ್ರಾಂತಿಗಳಿಗೆ ಒಳಗಾಗಿದ್ದಿತು. ಜೈನಧರ್ಮದ ಅವನತಿಯು ಆರಂಭವಾಗಿ ಶೈವಧರ್ಮವು ಮೇಲೇರುತ್ತಿದ್ದಿತು. ತಾನು ಒಮ್ಮೆ ಶೈವನಾಗಿದ್ದು, ಅದರಲ್ಲಿ ಸುಖವನ್ನು ಕಾಣದೆ ಮತ್ತೆ ಜೈನಧರ್ಮವನ್ನು ಸೇರಿದಂತೆ ಅವನು ಹೇಳಿಕೊಂಡಿದ್ದಾನೆ.[30] ಅನೇಕ ಧರ್ಮಗಳ ಸಾಕ್ಷಾತ್ ಪರಿಚಯವಿದ್ದ ಇವನು ಅವುಗಳ ಒಳಗು ಹೊರಗುಗಳನ್ನು

---

[26] ಕನ್ನಡದಲ್ಲಿ ಐತಿಹಾಸಿಕ ಎನ್ನಿಸಿಕೊಳ್ಳುವ 'ಕಾವ್ಯ'ಗಳು ಹಲವಿವೆ. ಉದಾಹರಣೆಗೆ ನಂಜುಂಡಕವಿಯ ಕುಮಾರರಾಮನ ಸಾಂಗತ್ಯ, ತಿರುಮಲಾರ್ಯನ ಚಿಕ್ಕದೇವರಾಯ ವಿಜಯ ಮತ್ತು ಚಿಕ್ಕದೇವರಾಯ ವಂಶಾವಳಿ, ಲಿಂಗಣ್ಣ ಕವಿಯ ಕೆಳದಿನೃಪವಿಜಯ ಇತ್ಯಾದಿ. ಇವುಗಳಲ್ಲೆಲ್ಲಾ ಬಹು ಪ್ರಸಿದ್ಧವಾದುದು ಮತ್ತು ಸುಂದರವಾದುದು ನಂಜುಂಡನ ಕುಮಾರರಾಮನ ಸಾಂಗತ್ಯ.

[27] Fleet: Imperial Gazetteer of India, II, p. 6.

[28] ಎಚ್. ದೇವೀರಪ್ಪ : ಬ್ರಹ್ಮಶಿವನ ಕಾಲವಿಚಾರ (ಪ್ರಬುದ್ಧಕರ್ಣಾಟಕ, 24.4, ಪು. 17-31).

[29] ಸಮಯ ಪರೀಕ್ಷೆ (ಸಂ. ಬಿ. ಎಸ್. ಕುಲಕರ್ಣಿ), ಮುನ್ನುಡಿ, ಪು. xii.

[30] ಪಿರಿದರ್ತ್ಥಿ ಮುನ್ನ ಮಾಹೇ | ಶ್ವರದೊಳ್ತನಗದಜಿೂಳೊಳ್ಪುಗಾಣದೆ ನೆಗಳ್ದೀ |
ಪರಮಜಿನಧರ್ಮದೊಳಪೊ | ಕ್ಕು ರಾಗಿಪಂ ಸುಕವಿ ಪಂಪರಾಜನ ಮೊಮ್ಮಂ ‖ (1.59).

ತಾನು ಸೌರ, ಕಾಳೋತ್ತರ (ನ್ಯಾಯವಾಗಿ ಇದು 'ಕಾಳೋತ್ತರ'ವಿರಬೇಕು) ಎಂಬ ಆರಾಧನೆಗಳಲ್ಲೂ, ಅಖಿಳ ವೇದ, ಸ್ಮೃತಿ, ಪುರಾಣಾದಿಗಳಲ್ಲಿಯೂ ಪರಿಣತನೆಂದು ಹೇಳಿಕೊಂಡಿದ್ದಾನೆ (1.58). ಹೀಗೆ ಬ್ರಹ್ಮಶಿವನಿಗೆ ಆಳವಾದ ಜ್ಞಾನವಿದ್ದುದು ಮಾತ್ರವಲ್ಲದೆ ಸಮಕಾಲೀನ ವಿಷಯದಲ್ಲಿಯೂ ಧರ್ಮಗಳ ವಿಷಯದಲ್ಲಿಯೂ ನಿಕಟ ಪರಿಚಯವಿದ್ದಿತು.

ಇವನು 'ಸುಕವಿ ಪಂಪರಾಜನ ಮೊಮ್ಮಂ'. ಇಲ್ಲಿ ಪಂಪರಾಜ ಎಂದರೆ ನಾಗಚಂದ್ರ ಅಥವಾ ಅಭಿನವ ಪಂಪ (ಡಿ. ಎಲ್. ನರಸಿಂಹಾಚಾರ್ : ಪಂಪರಾಮಾಯಣ ಸಂಗ್ರಹ, ಮುನ್ನುಡಿ, ಪು. xvii). ನಾಗಚಂದ್ರ ಜೈನನಾದುದರಿಂದ, ಅವನ ಮೊಮ್ಮಗ ಬ್ರಹ್ಮಶಿವನೂ ಆರಂಭದಲ್ಲಿ ಜೈನನಾಗಿದ್ದು, ಮಧ್ಯೆ ಶೈವನಾಗಿ, ಮತ್ತೆ ಜೈನನಾದಂತೆ ಊಹಿಸಬಹುದು. ಇಲ್ಲಿ ಹದಿನಾರನೇ ಶತಮಾನದ ರತ್ನಾಕರನ ನೆನಪು ಬರುತ್ತದೆ.

ಬಲ್ಲವನಾಗಿದ್ದು, ಅವುಗಳ ಹೆಸರಿನಲ್ಲಿ ಅವುಗಳ ಅನುಯಾಯಿಗಳು ಎಸಗುತ್ತಿದ್ದ ಹೊಲಸು ಆಚರಣೆಗಳನ್ನೂ, ಕಪಟ ಕೃತ್ಯಗಳನ್ನೂ ಕಟುವಾಗಿ ಖಂಡಿಸಿದ್ದಾನೆ. ಕೆಲವೆಡೆ ಸಹಜವಾಗಿಯೇ ಉತ್ಪ್ರೇಕ್ಷೆಯಿದ್ದಿರಬಹುದಾದರೂ, ಒಟ್ಟಿನಲ್ಲಿ ಸಮಯಪರೀಕ್ಷೆಯು ಹನ್ನೆರಡನೆಯ ಶತಮಾನದ ಧಾರ್ಮಿಕ–ಸಾಮಾಜಿಕ ಅಧ್ಯಯನಕ್ಕೆ ಅಮೂಲ್ಯ ಸಾಮಗ್ರಿಯನ್ನು ಒದಗಿಸಿಕೊಡುವ ಗ್ರಂಥವಾಗಿದೆ.

ಕನ್ನಡದಲ್ಲಿ ಬ್ರಹ್ಮಶಿವನ ಸಮಯ ಪರೀಕ್ಷೆಯಂತೆಯೇ ಉಪಯುಕ್ತವಾದ ಇನ್ನೂ ಹಲವು ಕಥನ ಕಾವ್ಯಗಳಿವೆ. ಉದಾಹರಣೆಗೆ ಪಂಪನ ಪಂಪಭಾರತ, ನಯಸೇನನ ಧರ್ಮಾಮೃತಗಳನ್ನು ಇಲ್ಲಿ ಹೆಸರಿಸಬಹುದು. ಈ ಎರಡು ಕಾವ್ಯಗಳಲ್ಲಿ ಧರ್ಮಾಮೃತವಂತೂ ಸಾಮಾಜಿಕ ಅಧ್ಯಯನವನ್ನು ಕೈಗೊಳ್ಳುವವರಿಗೆ ಒಂದು ನಿಧಿಯೆನ್ನುವುದರಲ್ಲಿ ಸಂದೇಹವಿಲ್ಲ. ಯುದ್ಧಕಲೆಯ ಒಂದು ನಿಜವಾದ ಚಿತ್ರವನ್ನು ಪಡೆಯುವವರು ಪಂಪ-ಭಾರತಕ್ಕೇ ಹೋಗಬೇಕು. ಹೀಗೆ ನಮ್ಮ ಈ ಅಧ್ಯಯನದಲ್ಲಿ ಶಾಸನಗಳಿಗೆ ಪೂರಕವಾಗಿ ಮತ್ತು ಪೋಷಕವಾಗಿ ಮೇಲೆ ಕಾಣಿಸಿದಂತಹ ಇನ್ನೂ ಹಲವಾರು ಕಾವ್ಯಗಳನ್ನು ಬಳಸಿಕೊಳ್ಳಲಾಗಿದೆ.

ನಮ್ಮ ನಾಡಿನ ಜನಜೀವನವನ್ನರಿಯಬೇಕಾದರೆ ಶಾಸನಗಳಿಗಿಂತ ಉತ್ತಮವಾದ ಸಾಧನವಿಲ್ಲ. ಸಾಮಾಜಿಕ ಅಧ್ಯಯನದಲ್ಲಿ ಶಾಸನಗಳಿಂದ ಒದಗುವ ಸಹಾಯ, ಶಾಸನಗಳಲ್ಲಿನ ವಿಷಯದ ವಿಪುಲತೆ, ವೈವಿಧ್ಯ ಇತ್ಯಾದಿಗಳ ಸಮೀಕ್ಷೆ ಮುಂದಿನ ಅಧ್ಯಾಯಗಳಲ್ಲಿ ಬಂದಿದೆ. ನಮ್ಮ ಈ ಅಧ್ಯಯನವು ಕ್ರಿ. ಶ. 1150ಕ್ಕೆ ನಿಲ್ಲುತ್ತದೆ. ಕ್ರಿ. ಶ. 1150ರಿಂದ ವಿಜಯನಗರದ ಆರಂಭದ ಕಾಲದವರೆಗಿನ, ಹಾಗೆಯೇ ಅಲ್ಲಿಂದ ಈಚಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಕೈಗೊಂಡವರಿಗೆ ಅಪಾರವಾದ ಸಾಮಗ್ರಿಯು ದೊರೆಯುತ್ತದೆ. ಏಕೆಂದರೆ ಅವರು ಶಾಸನಗಳಿಗೆ ಪೂರಕವಾಗಿ ಬಹು ದೊಡ್ಡ ಪ್ರಮಾಣದಲ್ಲಿ ದೊರಕುವ ವಚನ ಸಾಹಿತ್ಯವನ್ನೂ ಹರಿಹರನ ನೂರಾರು ರಗಳೆಗಳನ್ನೂ ಬಳಸಿಕೊಳ್ಳಬಹುದು. ಕುಮಾರರಾಮನ ಸಾಂಗತ್ಯ, ಕೆಳದಿನೃಪ ವಿಜಯಗಳಂತಹ ಐತಿಹಾಸಿಕ ಕಾವ್ಯಗಳೂ ವಿದೇಶೀ ಪ್ರವಾಸಿಗರ ಅನೇಕ ಬರಹಗಳೂ ಸಾಂಸ್ಕೃತಿಕ ಅಧ್ಯಯನಕ್ಕೆ ಸಹಾಯಮಾಡುತ್ತವೆ. ಹೀಗೆ ಕ್ರಿಸ್ತಶಕ ಐದನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗಿನ ಶಾಸನಗಳನ್ನು ಸಂಸ್ಕೃತಿಯ ದೃಷ್ಟಿಯಿಂದ ಅಧ್ಯಯನಮಾಡಿದರೆ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ಒಂದು ಸಮಗ್ರ ಚಿತ್ರವನ್ನು ರೂಪಿಸುವುದು ಸಾಧ್ಯವಾಗುತ್ತದೆ. ಅಂತಹ ಅಧ್ಯಯನದ ಅಗತ್ಯವೂ ಬಹುವಾಗಿದೆ.

# II

# ಶಾಸನಗಳು ಮತ್ತು ಅವುಗಳ ಅಧ್ಯಯನ

## ಶಾಸನಗಳೆಂದರೆ ಏನು ?

ಶಾಸನಗಳೆಂದರೆ ಏನು ? ಉಳಿದ ಬರಹಗಳಿಗೂ ಅವುಗಳಿಗೂ ಇರುವ ವ್ಯತ್ಯಾಸವೇನು ?—ಇದನ್ನು ಮೊದಲು ಪರಿಶೀಲಿಸೋಣ. ಬ್ರಿಟಾನಿಕಾ ವಿಶ್ವಕೋಶದಲ್ಲಿ ಶಾಸನಗಳನ್ನು (Inscriptions) ಹೀಗೆ ವಿವರಿಸಿದೆ— "Documents incised on some hard or permanent material in the form of letters or other conventional signs, for the purpose of conveying some information or preserving a record. They are, therefore, to be distinguished on the one hand from manuscripts or documents written on papyrus, parchment, paper or other more or less smooth surfaces by means of a brush, reed or pen and some coloured fluid".[1] ಎಂದರೆ, ತಾಳೆಗರಿ ಭೂರ್ಜಪತ್ರ ಕಾಗದ ಮುಂತಾದುವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಬರೆದಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು. 'ಶಾಸನ' ಶಬ್ದದ ಮೂಲಾರ್ಥ 'ಆಜ್ಞೆ' ಎಂದು. ಕೌಟಿಲ್ಯ ಹೀಗೆ ಒಂದು ಕಡೆ ಹೇಳುತ್ತಾನೆ—"(ಪ್ರಾಚೀನರು) ಹೇಳುತ್ತಾರೆ—ಶಾಸನ (ಎಂಬ ಪದ) ರಾಜರ ಆಜ್ಞೆಗಳನ್ನು ತಿಳಿಸುವ ಬರಹವನ್ನು ಹೇಳುತ್ತದೆ."[2] ಶುಕ್ರಾಚಾರ್ಯರ ಶುಕ್ರನೀತಿಸಾರದಲ್ಲಿ[3] ರಾಜಶಾಸನ ಪ್ರಭೇದಗಳ ಒಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದೆ. ಅದರ ಪ್ರಕಾರ "ಶಾಸನಪತ್ರದಲ್ಲಿ ರಾಜನ ಸ್ವಂತ ರುಜುವೂ, ಆ ಆಜ್ಞೆ ಹೊರಟ ದಿನಾಂಕವೂ ಇರಬೇಕು. ಮತ್ತು ಹೀಗೆ ಆರಂಭವಾಗಬೇಕು—'ನೀವೆಲ್ಲ ಕೇಳಿರಿ. ನೀವೆಲ್ಲ ಹೀಗೆ ಹೀಗೆ ಮಾಡಬೇಕು ಮತ್ತು ಈ ಆಜ್ಞೆಯಂತೆ ನಡೆದುಕೊಳ್ಳಬೇಕು' ಇತ್ಯಾದಿ." ಶುಕ್ರಾಚಾರ್ಯರ ಪ್ರಕಾರ ಇನ್ನೊಂದು ರೀತಿಯ ಶಾಸನಗಳುಂಟು. ಅವುಗಳನ್ನು ಆಜ್ಞಾಪತ್ರಗಳೆಂದು ಕರೆಯುತ್ತಾರೆ—"ಇವು ಸಾಮಂತರಿಗೆ, ಮಾಂಡಲಿಕರಿಗೆ ಮತ್ತು ಇತರ ಅಧಿಕಾರಿಗಳಿಗೆ ಒಪ್ಪಿಸಿದ ಕರ್ತವ್ಯಗಳ ನಿರೂಪಣೆಗಳು." ಕಾಳಿದಾಸ ಈ ಎರಡೂ ರೀತಿಯ ಶಾಸನಗಳನ್ನು ಹೇಳಿದ್ದಾನೆ.[4] ಶುಕ್ರನೀತಿಯಲ್ಲಿ ಇನ್ನೂ ಕೆಲವು ಮಾತುಗಳಿವೆ—"ಲೇಖನವಿಲ್ಲದೆ ಆಜ್ಞೆ ಮಾಡುವ ರಾಜ, ಇಂತಹ ಆಜ್ಞಾಪತ್ರಗಳಿಲ್ಲದೆ ಅಧಿಕಾರವನ್ನು ಪ್ರಯೋಗಿಸುವ ಅಧಿಕಾರಿಗಳಿಬ್ಬರೂ ಚೋರರು" ; "ರಾಜಮುದ್ರಾಸಹಿತವಾದ ಶಾಸನವೇ ನಿಜವಾದ ರಾಜ. ಬರಿಯ ರಾಜ ರಾಜನೇ ಅಲ್ಲ."[5] ಶಾಸನಗಳಿಗೆ ಎಂದರೆ ಆಜ್ಞೆಗಳಿಗೆ ಶುಕ್ರಾಚಾರ್ಯರು ಕೊಟ್ಟಿದ್ದ ಮಹತ್ವ ಇದರಿಂದ ವಿದಿತವಾಗುತ್ತದೆ.

ಮೇಲೆ ಉದ್ಧರಿಸಿರುವ ಕೌಟಿಲ್ಯನ ವಾಕ್ಯವನ್ನು ವ್ಯಾಖ್ಯಾನಕಾರರು ಈ ರೀತಿ ವಿವರಿಸುತ್ತಾರೆ— "ದೂತರ ಮೂಲಕ ರಾಜರು ತಮ್ಮ ಆಜ್ಞೆಗಳನ್ನು ಹೇಳಿಕಳುಹಿಸಬಹುದು. ದೂತರು ಅವಜ್ಞತೆಯಿಂದಲೋ,

---

[1] Encyclopaedia Britannica, XII, P. 393.

[2] Arthaśāstra, II, 10.

[3] ಶುಕ್ರನೀತಿಸಾರವು ಬಹು ಈಚಿನ ಕೃತಿಯೆಂದು ಹಲವು ವಿದ್ವಾಂಸರ ಅಭಿಪ್ರಾಯ.

[4] Upadhyaya : India in Kālidāsa, PP.109–110.

[5] ಅದೇ.

ಅಜ್ಞಾನದಿಂದಲೋ, ದಡ್ಡತನದಿಂದಲೋ ಆ ಆಜ್ಞೆಯನ್ನು ಸರಿಯಾಗಿ ಮುಟ್ಟಿಸದೆ ಇರಬಹುದು. ಆದ್ದರಿಂದ ತಾಳಪತ್ರದ ಮೇಲೆ ಲಿಖಿತವಾದ ರಾಜಾಜ್ಞೆಯೇ ಗೌರವಾರ್ಹವಾದುದು."[6] ರಾಜರ ಆಜ್ಞೆಯೇನೋ ತಾಳ ಪತ್ರಗಳ ಮೇಲೆ ಇದ್ದಿರಬಹುದು. ಆದರೆ ಅವು ಇಲ್ಲಿಯವರೆಗೆ ಉಳಿದುಬಂದಿಲ್ಲ. ಅವರು ಕೊಟ್ಟ ದತ್ತಿಗಳ ವಿಷಯ ಮೂಲತಃ ತಾಳಪತ್ರಗಳ ಮೇಲೆ ಇದ್ದಿತಾದರೂ ಆ ವಿಷಯವು ಬಹುಕಾಲ ಉಳಿಯಲೆಂಬ ಉದ್ದೇಶದಿಂದ ತಾಮ್ರಪಟಗಳ ಮೇಲೂ, ಶಿಲೆಗಳ ಮೇಲೂ ಕೊರೆದರು. ಇವುಗಳೂ ರಾಜಾಜ್ಞೆಗಳಾದ್ದರಿಂದ 'ಶಾಸನ'ಗಳೆಂಬುದು ಇವುಗಳಿಗೆ ಅನ್ವರ್ಥನಾಮವಾಯಿತು. ಆದರೆ ಮುಂದೆ ರಾಜರಲ್ಲದೆ ಉಳಿದವರೂ ದತ್ತಿಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಹೇಳುವ ಬರಹಗಳಿಗೂ, ಅಥವಾ ಯಾವ ದತ್ತಿಯ ವಿಷಯವನ್ನೂ ಹೇಳದೆ, ಸಲ್ಲೇಖನಾದಿ ವಿಷಯಗಳನ್ನು ನಿರೂಪಿಸುವ ಬರಹಗಳಿಗೂ ಶಾಸನಗಳೆಂಬ ಹೆಸರು ರೂಢಿಗೆ ಬಂದಂತೆ ಊಹಿಸಬಹುದು.

ಯಾಜ್ಞವಲ್ಕ್ಯ ಸಂಹಿತೆಯಲ್ಲಿ ರಾಜನ ಕರ್ತವ್ಯಗಳನ್ನು ಹೇಳುವಾಗ ಈ ಮಾತುಗಳು ಬರುತ್ತವೆ— "ಭೂಮಿಯನ್ನು ದಾನಮಾಡುವಾಗಲೋ ಅಥವಾ ಯಾವುದಾದರೂ ಶಾಶ್ವತವಾದ ಏರ್ಪಾಟನ್ನು ಮಾಡುವಾಗಲೋ ಅದರ ನಿಯಮಗಳನ್ನು ಮುಂದಿನ ರಾಜರ ತಿಳುವಳಿಕೆಗಾಗಿ ವಸ್ತ್ರಪಟದ ಮೇಲಾಗಲಿ, ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ಅದರಲ್ಲಿ ತನಗಿಂತ ಹಿಂದಿನ (ಮೂರು) ತಲೆಮಾರುಗಳ ವಿಷಯ, ತನ್ನ ವಿಷಯ, ದಾನವನ್ನು ಸ್ವೀಕರಿಸುವವನ ವಿಷಯ, ದಾನದ ಪ್ರಮಾಣ, ಭೂಮಿಯ ಮೇರೆಗಳು, ದಿನಾಂಕ—ಇವುಗಳನ್ನು ನಿರೂಪಿಸಿ, ತನ್ನ ಮುದ್ರೆ ಮತ್ತು ಸಹಿಗಳನ್ನು ಹಾಕಬೇಕು. ಹೀಗೆ ದಾನವು ಶಾಶ್ವತವಾಗಿ ನಡೆಯುವಂತೆ ಮಾಡಬೇಕು."[7] ನಮ್ಮ ದಾನ ಶಾಸನಗಳೆಲ್ಲ ಬಹುಮಟ್ಟಿಗೆ ಈ ಮಾದರಿಯನ್ನು ಅನುಸರಿಸಿ ರಚಿತವಾಗಿವೆ. ಬೃಹಸ್ಪತಿಯ ಅಭಿಪ್ರಾಯಗಳೂ ಯಾಜ್ಞವಲ್ಕ್ಯನ ಅಭಿಪ್ರಾಯಗಳನ್ನೇ ಬಹುಮಟ್ಟಿಗೆ ಹೋಲುತ್ತವೆ.[8] ರಾಜಶಾಸನಗಳನ್ನು, ಎಂದರೆ ರಾಜಾಜ್ಞೆಗಳನ್ನು—ಪ್ರಜೆಗಳಿಗೆ ಡಂಗುರ ಹೊಯಿಸಿ ತಿಳಿಸಬೇಕೆಂದೂ, ಅವುಗಳನ್ನು ಪ್ರಜೆಗಳ ಗಮನಕ್ಕೆ ತರಲು ಅವುಗಳನ್ನು ನಾಲ್ಕು ದಾರಿಗಳು ಕೂಡುವ ಸ್ಥಳಗಳಲ್ಲಿ ಬರೆಯಿಸಿ ಪ್ರಕಟಿಸಬೇಕೆಂದೂ, ಅವುಗಳನ್ನು ಮೀರಿದವರಿಗೆ ಶಿಕ್ಷೆಯನ್ನು ವಿಧಿಸಲಾಗುವುದೆಂದು ತಿಳಿಸಬೇಕೆಂದೂ ಶುಕ್ರನೀತಿಯು ತಿಳಿಸುತ್ತದೆ.[9] ಜನರು ಪರಸ್ಪರ ದೂಷಿಸಕೂಡದು, ಹೊಡೆದಾಡಕೂಡದು, ರಾಜಕಾರ್ಯಗಳನ್ನು ಮಾಡುವವರು ಲಂಚವನ್ನು ಸ್ವೀಕರಿಸಕೂಡದು, ಯಾರೂ ಅವರಿಗೆ ಲಂಚವನ್ನು ಕೊಡಕೂಡದು ಇತ್ಯಾದಿ. ಅಶೋಕನ ಶಾಸನಗಳು ಬಹುಮಟ್ಟಿಗೆ ಈ ಮಾದರಿಯವು.

---

[6] Arthaśāstra (Tr. Shamasastry), P. 71 (Footnotes)

[7] "ದತ್ವಾ ಭೂಮಿಂ ನಿಬಂಧಂ ವಾ ಕೃತ್ವಾ ಲೇಖ್ಯಂ ತು ಕಾರಯೇತ್ । ಆಗಾಮಿಭದ್ರನೃಪತಿಪರಿಜ್ಞಾನಾಯ ಪಾರ್ಥಿವಃ ॥ ಪಟೇ ವಾ ತಾಮ್ರಪಟ್ಟೇ ವಾ ಸ್ವಮುದ್ರೋಪರಿ ಚಿಹ್ನಿತಂ । ಅಭಿಲೇಖ್ಯಾತ್ಮನೋ ವಂಶ್ಯಾನಾತ್ಮಾನಂ ಚ ಮಹೀಪತಿಃ ॥ ಪ್ರತಿಗ್ರಹ ಪರೀಮಾಣಂ ದಾನಚ್ಛೇದೋಪವರ್ಣನಂ । ಸ್ವಹಸ್ತಕಾಲಸಂಪನ್ನಂ ಶಾಸನಂ ಕಾರಯೇತ್ ಸ್ಥಿರಂ ॥"

(ಯಾಜ್ಞವಲ್ಕ್ಯಸಂಹಿತೆ—1. 318-20)

[8] History of Dharmaśāstra, II. ii. P. 861.

[9] "ಇತಿ ಮಚ್ಛಾಸನಂ ಶ್ರುತ್ವಾ ಯೋಽನ್ಯಥಾ ವರ್ತಯನ್ತಿ ತಾನ್
ವಿನಿಶಿಷ್ಯಾಮಿ ದಂಡೇನ ಮಹತಾ ಪಾಪಕಾರಕಾನ್
ಇತಿ ಪ್ರಬೋಧಯೇನ್ನಿತ್ಯಂ ಪ್ರಜಾಶ್ಶಾಸನಡಿಂಡಿಮೈಃ
ಲಿಖಿತ್ವಾ ಶಾಸನಂ ರಾಜಾ ಧಾರಯೇತ ಚತುಷ್ಪಥೇ ॥

—ಶುಕ್ರನೀತಿಸಾರ (ಸಂ. ಗುಸ್ತವ್ ಒಪ್ಪೆರ್ಟ್), 1. 312-3

ಇದರಿಂದ ನಾವು ಒಂದು ನಿರ್ಣಯಕ್ಕೆ ಬರಬಹುದು. ಶಾಸನಗಳು ಮೊದಲು ರಾಜಾಜ್ಞೆಗಳಾಗಿದ್ದುವು. ('ಶಾಸ್' ಎಂಬ ಧಾತುವಿಗೆ ಆಜ್ಞೆಮಾಡು, ಶಿಕ್ಷಿಸು, ನಿಯಂತ್ರಿಸು ಮುಂತಾದ ಅರ್ಥಗಳಿವೆ). ಕಾನೂನುಗಳನ್ನು ಜನರಿಗೆ ಪ್ರಕಟಪಡಿಸುವ ಬರಹಗಳೇ ಶಾಸನಗಳು. ರಾಜನೇ ಆಗಲಿ ಅಥವಾ ಬೇರೆಯವರು ಯಾರೇ ಆಗಲಿ— ಅವರು ದಾನವನ್ನು ಕೊಟ್ಟಾಗ, ಆ ದಾನದ ವಿಷಯದಲ್ಲಿ ಕೆಲವು ನಿಯಮಗಳನ್ನು ಹಾಕಿ, ಆ ನಿಯಮಗಳನ್ನು ಯಾರೂ ಉಲ್ಲಂಘಿಸಕೂಡದೆಂದೂ, ಎಲ್ಲರೂ ಆ ದಾನವನ್ನು ಕಾಪಾಡಿಕೊಂಡು ಬರಬೇಕೆಂದೂ ಕೇಳಿಕೊಳ್ಳುತ್ತಿದ್ದರು (ಅಥವಾ ಆಜ್ಞೆಮಾಡುತ್ತಿದ್ದರು). ಅಲ್ಲದೆ ದಾನವಾಗಿ ಕೊಟ್ಟ ಭೂಮಿಗೆ ತೆರಿಗೆಗಳನ್ನು ತೆಗೆದುಹಾಕಿದ ಆಜ್ಞೆಯನ್ನು ರಾಜನೋ ಅವನ ಅಧಿಕಾರಿಗಳೋ ಹೊರಡಿಸುತ್ತಿದ್ದರು. ಹೀಗೆ ಪರ್ಯಾಯವಾಗಿ ಇಂತಹ ಇತರ ಬರಹಗಳಿಗೂ ಶಾಸನಗಳೆಂಬ ಹೆಸರು ರೂಢಿಗೆ ಬಂದಿತು. ಈ ಅರ್ಥವು ಇನ್ನೂ ವಿಸ್ತಾರವಾಗಿ ರಾಜರ ಪ್ರಶಸ್ತಿಯನ್ನು ಹೇಳುವ, ವೀರರ ಸಾವನ್ನು, ಸನ್ಯಾಸಿಗಳ ಮರಣವನ್ನು, ಕೊನೆಗೆ ಶಿಲ್ಪದ ಅಥವಾ ಶಿಲ್ಪಿಯ ಹೆಸರನ್ನು ಹೇಳುವ ಬರಹಗಳಿಗೂ 'ಶಾಸನ' ಎಂಬ ಹೆಸರು ಅನ್ವಯವಾಯಿತು. ಉದಾಹರಣೆಗೆ, ದಾನಶಾಸನವಿರುವ ಕಲ್ಲನ್ನು "ಶಾಸನದ ಸಿಲಾಸ್ತಂಭ"ವೆಂದು ಕರೆದಿರುವುದನ್ನು ಇಲ್ಲಿ ನೆನೆಯಬಹುದು.[10] ಹಾಗೆಯೇ ಕ್ರಿ. ಶ. 1113ರ ಶಾಸನದ ಕೊನೆಯ ವಾಕ್ಯವನ್ನೂ ನೋಡಬಹುದು.[11(a)]

ಶಾಸನಗಳನ್ನು ಸಾಮಾನ್ಯವಾಗಿ ಕಲ್ಲಿನಮೇಲೆ ಅಥವಾ ಲೋಹದಮೇಲೆ ಬರೆಯುವ ರೂಢಿ ಇದ್ದರೂ ಈಜಿಪ್ಟಿನಲ್ಲಿ ಮರದ ಮೇಲೆ ಬರೆದಿರುವ ಶಾಸನಗಳೂ ಚೀನದಲ್ಲಿ ಮೂಳೆಗಳ ಮೇಲೆ ಬರೆದಿರುವ ಶಾಸನಗಳೂ ಸಿಕ್ಕಿವೆ. ಸುಟ್ಟ ಇಟ್ಟಿಗೆಗಳ ಮೇಲೂ ಶಾಸನಗಳಿವೆ. ಮೆಸೋಪೊಟೇಮಿಯ ಮತ್ತು ಕ್ರೀಟಿಗಳಲ್ಲಿ ಮಣ್ಣು ಹಸಿಯಿರುವಾಗ ಅದರ ಮೇಲೆ ಮುದ್ರೆಗಳಿಂದ ಒತ್ತಿ ಬಳಿಕ ಸುಡುತ್ತಿದ್ದರು. ಹರಪ್ಪ ಮತ್ತು ಮೊಹೆಂಜೊದಾರೋಗಳಲ್ಲಿ ಇಂತಹ ಹಲವಾರು ಮುದ್ರೆಗಳು ಸಿಕ್ಕಿವೆ.[11(b)] ಈ ಮುದ್ರೆಗಳ ಮೇಲಿನ ಲಿಪಿಯನ್ನು ಓದಲು ಬೇಕಾದಷ್ಟು ಪ್ರಯತ್ನಗಳು ನಡೆದಿವೆ. ಅವುಗಳನ್ನು ಇನ್ನೂ ಓದಲು ಸಾಧ್ಯವಾಗಿಲ್ಲ. ಭಾರತದಲ್ಲಿ ಸುಟ್ಟ ಮಡಕೆ, ಇಟ್ಟಿಗೆ, ಶಂಖ, ದಂತ, ಮರಗಳ ಮೇಲೂ ಶಾಸನಗಳು ದೊರಕಿವೆ. ವಿಶೇಷವಾಗಿ ಕರ್ನಾಟಕದಲ್ಲಿ ಕಲ್ಲಿನ ಮೇಲೆ, ಸ್ತಂಭಗಳ ಮೇಲೆ, ದೇವಸ್ಥಾನದ ಗೋಡೆಗಳ ಮೇಲೆ, ವಿಗ್ರಹಗಳ ಪೀಠಗಳ ಮೇಲೆ, ತಾಮ್ರ ಪಟಗಳ ಮೇಲೆ, ಪಾತ್ರೆಗಳ ಮೇಲೆ—ಶಾಸನಗಳು ದೊರೆತಿವೆ. ಈಚೆಗೆ ಕೋಲಾರ ಜಿಲ್ಲೆಯ ಸಂತೇಕಲ್ಲಹಳ್ಳಿಯಲ್ಲಿ ಮಡಕೆಯ ಮೇಲೆ ಎಂಟನೆಯ ಶತಮಾನದ ಶಾಸನ ದೊರೆಕಿದೆ.

## ಬ್ರಾಹ್ಮೀ ಲಿಪಿ ಮತ್ತು ಕನ್ನಡ ಲಿಪಿ

ಕ್ರಿಸ್ತಪೂರ್ವ ಮೂರನೆಯ ಶತಮಾನದ ಅಶೋಕನ ಶಾಸನಗಳೇ ಭರತಖಂಡದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ಶಾಸನಗಳು.[12] ಈಜಿಪ್ಟ್ ಮುಂತಾದ ದೇಶಗಳಲ್ಲಿ ಕ್ರಿಸ್ತಪೂರ್ವ 2000ಕ್ಕಿಂತ ಹಿಂದಿನ ಶಾಸನಗಳು

---

[10] BKI. I. i. 14, 872 A.D.

[11(a)] "ಶಾಸನಮಿದಾವುದೆಲ್ಲಿಯು ಶಾಸನಮಾರಿತ್ತರೇಕೆ ಸಲಿಸುವೆ ನಾಸೀ ಶಾಸನಮುನೆಂಬ ಪಾತಕನಾ ಸಕಳಂ ರೌರವಕ್ಕೆ ಗಳಗಳನಿಳಿಗುಂ".

(Ec. VII. Sh. 97).

[11(b)] ಪ್ರಾಚೀನ ಭಾರತದಲ್ಲಿ ಬರೆಯಲು ಬಳಸುತ್ತಿದ್ದ ಸಾಧನಸಾಮಗ್ರಿಗಳ ವಿವರಣೆಗಳಿಗೆ, ನೋಡಿ—

D.C. Sircar: Indian Epigraphy, Pp. 61–82.

[12] ಫ್ಲೀಟ್ ಅವರ ಪ್ರಕಾರ ಪಿಪ್ರಹ್ವ ಎಂಬಲ್ಲಿ ದೊರೆತ ಬಳಪದಕಲ್ಲಿನ ಪಾತ್ರೆಯ ಮೇಲಿನ ಬರಹವೇ ಅತ್ಯಂತ ಪ್ರಾಚೀನ ಶಾಸನ. ಬುದ್ಧನು ನಿರ್ವಾಣಹೊಂದಿದ ನೂರು ವರ್ಷಗಳಲ್ಲೇ ಅದು ರಚಿತವಾಗಿದ್ದಿರಬೇಕು ಎಂದು ಅಭಿಪ್ರಾಯಪಡುತ್ತಾರೆ.

(Imperial Gazetteer of India, II, p. 43)

ಸಿಕ್ಕಿವೆ. ಈ ಚಿತ್ರಲಿಪಿಯ ಶಾಸನಗಳನ್ನು ಓದಿದ್ದೇ ಆಧುನಿಕ ಐತಿಹಾಸಿಕ ಸಂಶೋಧನೆಯ ಸಾಹಸಗಳಲ್ಲೊಂದು. ಈಗ ಮಧ್ಯಪ್ರಾಚ್ಯ ಎಂದು ಕರೆಯಿಸಿಕೊಳ್ಳುತ್ತಿರುವ ಪ್ರದೇಶವೇ ಬಹುಶಃ ಮನುಷ್ಯನ ಅಮೂಲ್ಯ ಆಸ್ತಿಗಳಲ್ಲೊಂದಾದ ಲಿಪಿಯ ತಾಯ್ಮನೆ.

ಪ್ರಾಚೀನ ಭರತಖಂಡದಲ್ಲಿ ಎರಡು ಲಿಪಿಗಳಿದ್ದುವು. ವಾಯುವ್ಯದಲ್ಲಿ ಬಲಗಡೆಯಿಂದ ಎಡಗಡೆಗೆ ಬರೆಯುವ ಖರೋಷ್ಠೀ ಲಿಪಿಯೂ, ಉಳಿದ ಕಡೆಗಳಲ್ಲಿ ಎಡಗಡೆಯಿಂದ ಬಲಗಡೆಗೆ ಬರೆಯುವ ಬ್ರಾಹ್ಮೀ ಲಿಪಿಯೂ ಇದ್ದುವು. ಈ ಎರಡು ಲಿಪಿಗಳಲ್ಲಿಯೂ ಅಶೋಕನ ಶಾಸನಗಳು ಸಿಕ್ಕಿವೆ. ಖರೋಷ್ಠೀ ಲಿಪಿಯೇನೋ ಅರಮೇಯಿಕ್ ಲಿಪಿಯಿಂದ ಹುಟ್ಟಿದೆಯೆಂದು ಬಹುಜನ ವಿದ್ವಾಂಸರ ಅಭಿಪ್ರಾಯ. ಬ್ರಾಹ್ಮೀ ಲಿಪಿಯ ಹುಟ್ಟಿನ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ.[13] ಅದು ಸೆಮೆಟಿಕ್ ಲಿಪಿಯಿಂದ ಬಂದಿತೆಂದು ಕೆಲವರೂ, ಹರಪ್ಪ—ಮೊಹೆಂಜೊದಾರೋ ಲಿಪಿಯಿಂದ ಬಂದಿತೆಂದು ಕೆಲವರೂ, ತಾಂತ್ರಿಕ ಬೀಜಾಕ್ಷರಗಳಿಂದ ಬಂದಿತೆಂದು ಕೆಲವರೂ ಅಭಿಪ್ರಾಯಪಟ್ಟಿರುತ್ತಾರೆ. ಈ ಲಿಪಿಗಳು ಅನೇಕ ಕಾಲದವರೆಗೆ ಅಜ್ಞಾತವಾಗಿಯೇ ಉಳಿದಿದ್ದುವು. ಖರೋಷ್ಠೀ ಲಿಪಿಯನ್ನು ಓದಲು ಗ್ರೀಕರ ನಾಣ್ಯಗಳು ಸಹಾಯಮಾಡಿದುವು. ಆ ನಾಣ್ಯಗಳ ಮೇಲೆ ರಾಜರ ಹೆಸರುಗಳು ಗ್ರೀಕ್ ಮತ್ತು ಖರೋಷ್ಠೀ ಲಿಪಿಗಳಲ್ಲಿದ್ದುದರಿಂದ ಓದಲು ಸಾಧ್ಯವಾಯಿತು. ಬ್ರಾಹ್ಮೀ ಲಿಪಿಯ ಕಥೆಯೂ ಅದೇ. ಭಾರತದಲ್ಲಿ ಆಳಿದ ಗ್ರೀಕ್ ದೊರೆ ಅಗಥೋಕ್ಲಿಸ್ ಎಂಬುವನ ನಾಣ್ಯಗಳ ಮೇಲಿದ್ದ ಗ್ರೀಕ್ ಮತ್ತು ಬ್ರಾಹ್ಮೀ ಬರಹಗಳ ಸಹಾಯದಿಂದ ಬ್ರಾಹ್ಮೀ ಲಿಪಿಯನ್ನು ಕ್ರಿ. ಶ. 1836ರಲ್ಲಿ ಲ್ಯಾಸೆನ್ ಎಂಬ ವಿದ್ವಾಂಸ ಮೊದಲು ಓದಿದನು. ಕ್ರಿ. ಶ. 1837–8ರಲ್ಲಿ ಪ್ರಿನ್ಸೆಪ್ ಎಂಬಾತನು ಬ್ರಾಹ್ಮೀ ಲಿಪಿಯನ್ನು ಸಮರ್ಪಕವಾಗಿ ಪೂರ್ತಿ ಓದಿದನು. ಈ ಬ್ರಾಹ್ಮೀ ಲಿಪಿಯಲ್ಲಿ ಅನೇಕ ಪ್ರಾಂತಭೇದಗಳಿದ್ದುವು. ಅವುಗಳಿಂದ ಭಾರತದ ಅನೇಕ ಲಿಪಿಗಳು ಉದ್ಭವವಾದುವು.[14] ಈ ಎರಡು ಸಾವಿರ ವರ್ಷಗಳಲ್ಲಿ ಎಷ್ಟೊಂದು ಪರಿವರ್ತನೆ ನಡೆದಿದೆಯೆಂದರೆ ಕನ್ನಡ, ತಮಿಳು, ಬಂಗಾಳಿ ಮುಂತಾದ ಲಿಪಿಗಳು ಒಂದೇ ಮೂಲದಿಂದ ಬಂದಿದ್ದರೂ ಒಂದಕ್ಕೊಂದಕ್ಕೆ ಪರಸ್ಪರ ಸಂಬಂಧವೇ ಇಲ್ಲವೇನೋ ಎಂದು ಅನ್ನಿಸುವಷ್ಟು ಬೇರೆಯಾಗಿವೆ.

## ಕನ್ನಡ ಶಾಸನಗಳ ಅಧ್ಯಯನದ ಇತಿಹಾಸ

ಕ್ರಿ. ಶ. 1791 ರಷ್ಟು ಹಿಂದೆಯೇ ಕಲ್ಕತ್ತದ "Asiatick Researches"[15] ಎಂಬ ಇಂಗ್ಲಿಷ್ ಪತ್ರಿಕೆಯಲ್ಲಿ "A Royal Grant of Land in Carnata" ಎಂಬ ಲೇಖನವು ಅಚ್ಚಾಗಿದೆ. ಕಂಚಿಯಲ್ಲಿದ್ದ

---

[13] ಜೈನ ಸಂಪ್ರದಾಯದ ಪ್ರಕಾರ ಬ್ರಾಹ್ಮೀ ಲಿಪಿಯ ಸೃಷ್ಟಿಕರ್ತ ಪ್ರಥಮ ತೀರ್ಥಂಕರನಾದ ಆದಿವೃಷಭ ತೀರ್ಥಂಕರ. ಆದಿವೃಷಭನು ತನ್ನ ಮಗಳಾದ ಬ್ರಾಹ್ಮಿಗೆ ಬಲಗೈಯಲ್ಲಿ ಲಿಪಿಗಳನ್ನೂ, ಇನ್ನೊಬ್ಬ ಮಗಳಾದ ಸೌಂದರಿಗೆ ಎಡಗೈಯಲ್ಲಿ ಗಣಿತವನ್ನೂ ಬೋಧಿಸುತ್ತಾನೆ. (ಪಂಪನ ಆದಿಪುರಾಣ, 8,59; ಬ್ರಹ್ಮಶಿವನ ಸಮಯಪರೀಕ್ಷೆ, 2.13-15). ಪ್ರಾಚೀನ ಈಜಿಪ್ಷಿಯನ್ನರು ಬರಹವನ್ನು ಥೋಥ್ (Thoth) ಎಂಬ ದೇವತೆಯೋ, ಐಸಿಸ್ (Isis) ಎಂಬ ದೇವತೆಯೋ ಕೊಟ್ಟದ್ದೆಂದು ನಂಬಿದ್ದರು. ಬ್ಯಾಬಿಲೋನಿಯದ ನೆಬೊ ಎಂಬ ಲಿಪಿದೇವತೆ ಮನುಷ್ಯನ ಅದೃಷ್ಟವನ್ನು ನಿರ್ಣಯಿಸುವ ದೇವತೆಯೂ ಹೌದು (ಬಹಳ ಧ್ವನಿಪೂರ್ಣವಾದ ಕಲ್ಪನೆಯಿದು). ಯೆಹೂದಿಗಳ ಪ್ರಕಾರ ಮೋಸಸ್ ಲಿಪಿಯ ಸೃಷ್ಟಿಕರ್ತ. ಗ್ರೀಕರು ಹರ್ಮೀಸ್ ಎಂಬ ದೇವತೆಯೇ ಬರಹವನ್ನು ಕೊಟ್ಟವನು ಎಂದು ನಂಬಿದ್ದರು. ಹೀಗೆ ಭಗವಂತನೇ ಲಿಪಿಯನ್ನು ಸೃಷ್ಟಿಸಿದವನು ಎಂಬ ಕಲ್ಪನೆ ಬೇರೆ ದೇಶಗಳಲ್ಲಿಯೂ ಕಂಡುಬರುತ್ತದೆ. ನಾರದಸ್ಮೃತಿಯ ಪ್ರಕಾರ ಬ್ರಹ್ಮನೇ ಲಿಪಿಯ ಸೃಷ್ಟಿಕರ್ತ. 6ನೆಯ ಶತಮಾನದ ಬಾದಾಮಿ ಶಿಲ್ಪದ ಬ್ರಹ್ಮನ ವಿಗ್ರಹದ ಕೈಯಲ್ಲಿ ಓಲೆಗಳಿವೆ.

[14] A. L. Basham : The Wonder that was India, pp. 394-9. ವಿವರಗಳಿಗೆ Bühler ಅವರ "Indian palaeography" ಎಂಬ ಗ್ರಂಥವನ್ನು ನೋಡಿ.

[15] ಈ ಪತ್ರಿಕೆಯ ಪೂರ್ಣ ಹೆಸರು— "Asiatick Researches or Transactions of the society instituted in Bengal, for inquiring into the History and Antiquities, The Arts, Sciences and Literature of Asia."

ಈ ತಾಮ್ರಪಟವನ್ನು ಅಲೆಕ್ಸಾಂಡರ್ ಮ್ಯಾಕ್ಲಿಯೋಡ್ (Alexander Macleod) ಎಂಬ ಆಂಗ್ಲ ಅಧಿಕಾರಿಯು ಏಷಿಯಾಟಿಕ್ ಸೊಸೈಟಿಯ ಅಧ್ಯಕ್ಷರಿಗೆ ಕ್ರಿ.ಶ. 1791ರಲ್ಲಿ ಕಳುಹಿಸಿಕೊಟ್ಟು ಅದರ ಜೊತೆಯಲ್ಲಿ ಹೀಗೆ ಕಾಗದ ಬರೆದನು—"ಕಂಚಿಯ ದೇವಸ್ಥಾನದಲ್ಲಿದ್ದ ತಾಮ್ರಪಟಗಳ ಪ್ರತಿಯನ್ನು ಇದರ ಜೊತೆಯಲ್ಲಿ ಕಳುಹಿಸಿಕೊಡಲು ನನಗೆ ಸಂತೋಷವಾಗುತ್ತಿದೆ. ಈ ಪ್ರತಿಯಲ್ಲಿ ಕಂಠದಿಂದ ಬರೆದ ಐದು ತಾಳೆಗರಿಗಳಿವೆ ; ಭಾಷೆಯು ದೇವವಾಣೀ ; ಲಿಪಿ ದೇವನಾಗರೀ. ಇಲ್ಲಿಯ ಇಬ್ಬರು ಮಾತ್ರ ಅವುಗಳನ್ನು ಓದಿ ಅರ್ಥವನ್ನು ವಿವರಿಸಬಲ್ಲರು."[16] ತಾನು ಏನಿದ್ದರೂ ಭೂಮಿಯಿಂದ ವಜ್ರದ ಕಲ್ಲನ್ನು ಅಗೆಯುವ ಕೆಲಸಗಾರನೆಂದೂ, ಅದನ್ನು ಕತ್ತರಿಸಿ ಅದರಿಂದ ಹೊಳಪನ್ನು ಚಿಮ್ಮಿಸುವ ಶಕ್ತಿ ನಿಮಗಿದೆಯೆಂದೂ ವಿನಯದಿಂದ ಅಧ್ಯಕ್ಷರಿಗೆ ಬರೆದಿದ್ದಾನೆ. ಸಂಘದ ಅಧ್ಯಕ್ಷರಾಗಿದ್ದ ಸರ್ ವಿಲಿಯಂ ಜೋನ್ಸ್[17] ಅವರು ಆ ತಾಮ್ರಪಟವನ್ನು ಅನೇಕ ಟಿಪ್ಪಣಿಗಳೊಡನೆ ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಕರ್ನಾಟಕದಲ್ಲಿನ ತಾಮ್ರಪಟ ಎಂದು ಅದನ್ನು ಕರೆಯಲು ಬಹುಶಃ ಅದು ಕನ್ನಡ ದೊರೆಗಳಾದ ವಿಜಯನಗರದ ರಾಜರು ಕೊಟ್ಟ ದತ್ತಿಯಾಗಿರುವುದೇ ಕಾರಣವೆಂದು ತೋರುತ್ತದೆ. ಇತ್ತೀಚಿನ ತಾಮ್ರಪಟಗಳನ್ನು ನಮ್ಮ ದೇಶೀಯ ವಿದ್ವಾಂಸರು ಓದಬಲ್ಲವರಾಗಿದ್ದರೆಂಬ ಅಂಶವು ಮೇಲಿನ ಕಾಗದದಿಂದ ಸ್ಪಷ್ಟವಾಗುತ್ತದೆ.[18]

ಕನ್ನಡ ಶಾಸನಗಳ ಒಂದು ಸುವ್ಯವಸ್ಥಿತವಾದ ಅಧ್ಯಯನವು ಆರಂಭವಾದದ್ದು ವಾಲ್ಟರ್ ಇಲಿಯಟ್ ಎಂಬಾತನಿಂದ. ಕ್ರಿ. ಶ. 1837ರಲ್ಲಿ ಪ್ರಕಟವಾದ ಅವನ "Hindu Inscriptions" ಎಂಬ ಲೇಖನದಿಂದ[19] ಕರ್ನಾಟಕದ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸಗಳ ಅಧ್ಯಯನದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಗುತ್ತದೆ. ಶಾಸನಗಳನ್ನು ಕುತೂಹಲದಿಂದ ಈಕ್ಷಿಸಿ ದೇಶದ ಇತಿಹಾಸವನ್ನು ಬರೆಯುವುದರಲ್ಲಿ, ಅವುಗಳಿಗಿರುವ ಮಹತ್ವದ ಸ್ಥಾನವನ್ನು ಗುರುತಿಸಿದವರಲ್ಲಿ ಕರ್ನಲ್ ಮೆಕೆಂಜಿ (Colonel Colin

---

[16] Asiatick Researches, III (1791), p. 39.

[17] ಭಾರತೀಯ ವಿದ್ವತ್ತು ಬೆಳೆಯಲು ಬಹುಮಟ್ಟಿಗೆ ಮೂಲಕರ್ತರು, ಆಧುನಿಕ ಭಾಷಾವಿಜ್ಞಾನಕ್ಕೆ ಪಿತಾಮಹರು. "ಕ್ರಿ.ಶ. 1783ರಲ್ಲಿ ಹದಿನೆಂಟನೆಯ ಶತಮಾನದ ಮಹಾಮೇಧಾವಿಗಳಲ್ಲೊಬ್ಬರಾದ ಸರ್ ವಿಲಿಯಂ ಜೋನ್ಸರು (1746–94) ಕಲ್ಕತ್ತಕ್ಕೆ ಶ್ರೇಷ್ಠ ನ್ಯಾಯಾಲಯದ ಅಧಿಪತಿಗಳಾಗಿ ಬಂದರು............ವಿಲ್ಕಿನ್ಸ್ ಮತ್ತು ಅನೇಕ ಸ್ನೇಹಪರರಾದ ವಂಗಪಂಡಿತರ ಸಹಾಯದಿಂದ ಸಂಸ್ಕೃತವನ್ನು ಕಲಿಯಲಾರಂಭಿಸಿದರು. ಕ್ರಿ.ಶ. 1784ರ ಮೊದಲ ದಿನ ವಿಲಿಯಂ ಜೋನ್ಸರ ನೇತೃತ್ವದಲ್ಲಿ ಮತ್ತು ಅಧ್ಯಕ್ಷತೆಯಲ್ಲಿ 'Asiatic Society of Bengal' ಎಂಬ ಸಂಸ್ಥೆಯು ಆರಂಭವಾಯಿತು. ಈ ಸಂಸ್ಥೆಯ ಆಶ್ರಯದಲ್ಲಿ ಹೊರಟ "Asiatick Researches" ಎಂಬ ಪತ್ರಿಕೆಯಲ್ಲಿ ಭಾರತದ ಇತಿಹಾಸವನ್ನು ಎತ್ತಿತೋರಿಸುವ ಮೊತ್ತಮೊದಲ ನಿಜವಾದ ಪ್ರಯತ್ನ ನಡೆಯಿತು................ಜೋನ್ಸ್ ಮತ್ತು ವಿಲ್ಕಿನ್ಸ್ ಅವರು ಭಾರತೀಯ ಶಾಸ್ತ್ರದ (Indology) ನಿಜವಾದ ಪಿತಾಮಹರು." [The Wonder that was India, p. 5]

[18] Asiatick Researches (Vol. V) ಪತ್ರಿಕೆಯಲ್ಲಿ 1797ರಲ್ಲಿ ಲೆ. ವಿಲ್‌ಫೋರ್ಡ್ ಎಂಬುವರು ಬರೆಯುತ್ತಾ ಎಲ್ಲೋರದ ಶಾಸನಗಳನ್ನು ತಾನಾಗಲಿ ಇತರ ದೇಶೀಯ ವಿದ್ವಾಂಸರೇ ಆಗಲಿ ಓದಲು ಅಸಮರ್ಥರಾಗಿದ್ದುದಾಗಿಯೂ, ಪುಣ್ಯವಶಾತ್ ತಾನೊಬ್ಬ ವೃದ್ಧ ಸನ್ಯಾಸಿಯನ್ನು ದರ್ಶಿಸಿದಾಗ ಅವನು ತನಗೆ ಸಂಸ್ಕೃತ ಭಾಷೆಯ ಹಸ್ತಪ್ರತಿಯನ್ನು ಕೊಟ್ಟನೆಂದೂ, ಅದರಲ್ಲಿ ಭಾರತದ ನಾನಾ ಕಡೆಗಳಲ್ಲಿ ಹಿಂದೆ ಪ್ರಚಲಿತವಾಗಿದ್ದ ಮತ್ತು ಈಗ ಇರುವ ಅನೇಕ ಲಿಪಿಗಳಿದ್ದುವೆಂದೂ, ಅವುಗಳ ಸಹಾಯದಿಂದ ಎಲ್ಲೋರದ ಶಾಸನಗಳನ್ನು ಓದಿದುದಾಗಿಯೂ ಹೇಳಿಕೊಂಡಿದ್ದಾರೆ. (ಪು. 135.). ಇದು ಸೋಜಿಗದ ಸಂಗತಿ. ಇದು ನಿಜವಾಗಿದ್ದರೆ ನಮ್ಮ ನಾಡಿನ ಪ್ರಾಚೀನ ಲಿಪಿಗಳನ್ನು ಓದುವ ಪ್ರಯತ್ನವು ನಮ್ಮಲ್ಲಿ ನಡೆದಿತ್ತೆಂಬುದೂ, ಅವುಗಳನ್ನು ಓದಬಲ್ಲ ಹಲವರಾದರೂ ನಮ್ಮಲ್ಲಿ ಇದ್ದರೆಂಬುದೂ ಸ್ಪಷ್ಟವಾಗುತ್ತದೆ. ಎಲ್ಲೋರದ ಶಾಸನಗಳು 7 ಅಥವಾ 8 ನೆಯ ಶತಮಾನಕ್ಕೆ ಸೇರುತ್ತವೆ.

[19] JRAS. IV. (1837).

Mackenzie) ಮೊದಲಿಗನೆಂದು ಕಾಣುತ್ತದೆ. ಕ್ರಿ.ಶ. 1817ರಲ್ಲಿ ಸರ್. ಅಲೆಕ್ಸಾಂಡರ್ ಜಾನ್‌ಸ್ಟನ್ ಅವರಿಗೆ ಬರೆದ ಕಾಗದದಲ್ಲಿ ದಕ್ಷಿಣ ಭಾರತದಲ್ಲಿ ತಾನು ನಡೆಸಿದ ಸಂಶೋಧನೆಗಳ ಸಂಕ್ಷಿಪ್ತ ವಿವರಗಳನ್ನು ಕೊಟ್ಟಿದ್ದಾನೆ.[20] ಅವನಿಗೆ "ಸಂಶೋಧನೆಯ ಹುಚ್ಚು ಮತ್ತು ಜ್ಞಾನತೃಷೆಗಳು ರಕ್ತಗತವಾಗಿದ್ದುವು." ಅವನು ಮೈಸೂರಿನ ಆಂಗ್ಲ ಸೈನ್ಯದಲ್ಲಿ ಒಬ್ಬ ಅಧಿಕಾರಿಯಾಗಿದ್ದನು. "ಕ್ರಿ. ಶ. 1799ರ ಸರಿಸುಮಾರಿನಲ್ಲಿ ನಮ್ಮಲ್ಲಿ ಒಬ್ಬರಿಗೂ ಕನ್ನಡ ಬರುತ್ತಿರಲಿಲ್ಲ. ಈಗಲಾದರೋ (1817) ಈಗಿನ ಬರಹಗಳ ಅನುವಾದಗಳು ಮಾತ್ರವೇ ಅಲ್ಲ, ಪ್ರಾಚೀನ ಕನ್ನಡ ಮತ್ತು ತಮಿಳು ಶಾಸನಗಳ ("Sassanams") ಅನುವಾದಗಳೂ ದೊರಕುತ್ತವೆ"—ಎಂದು ತನ್ನ ಕಾಗದದಲ್ಲಿ ಹೇಳಿಕೊಂಡಿದ್ದಾನೆ. ಅವನು 1799–1809ರಲ್ಲಿ ಮೈಸೂರು ದೇಶದ ಪರಿವೀಕ್ಷಣಾ ಕಾರ್ಯವನ್ನು (Survey) ಇತರ ನಾಲ್ವರ ಸಹಾಯದಿಂದ ಕೈಗೊಂಡು ಮುಗಿಸಿದನು. ಅದು ಮುಖ್ಯವಾಗಿ ಭೌಗೋಳಿಕವಾದ ಪರಿವೀಕ್ಷಣೆಯೆಂದು ಉನ್ನತ ಅಧಿಕಾರಿಗಳಿಂದ ನಿಯೋಜಿತವಾಗಿದ್ದರೂ, ಕ. ಮೆಕೆಂಜಿಯಿಂದ ಅದು ಸಾಂಸ್ಕೃತಿಕ ಪರಿವೀಕ್ಷಣೆಯೂ ಆಗಿ ಪರಿವರ್ತಿತವಾಯಿತು. ತನ್ನ ಸಂಶೋಧನೆಗಳಲ್ಲಿ ಕೆಲವನ್ನು ಮೇಲೆ ಹೇಳಿದ ಕಾಗದದಲ್ಲಿ ಹೇಳಿಕೊಂಡಿದ್ದಾನೆ–"ಜೈನಧರ್ಮ ಮತ್ತು ತತ್ವಗಳು ಬೌದ್ಧ ಧರ್ಮ ಮತ್ತು ತತ್ತ್ವಗಳಿಂದ ಬೇರೆ ; ಪ್ರಾಚೀನ ಮತಗಳು, ಅವುಗಳ ಪ್ರಭೇದಗಳು–ಲಿಂಗವಂತ, ಶೈವಂ ಮತ್ತು ಪಂದರಂ (?)[21] ಇತ್ಯಾದಿ ಇತ್ಯಾದಿ ; ಹಿಂದೂಗಳ ಭೂವ್ಯವಸ್ಥೆಯ ಮೇಲೆ ಬೆಳಕು ಬೀರುವ ಶಾಸನಗಳ ಮತ್ತು ತಾಮ್ರಪಟಗಳ ಸ್ವರೂಪ ಮತ್ತು ಉಪಯೋಗ–3000ಕ್ಕಿಂತ ಹೆಚ್ಚಿನ ಇಂತಹ ಬರಹಗಳನ್ನು ಕ್ರಿ.ಶ. 1800ರಿಂದ ಈಚೆಗೆ ಸಂಗ್ರಹಿಸಿದೆನು–ಇಲ್ಲಿಯವರೆಗೂ ಇವುಗಳ ವಿಷಯದಲ್ಲಿ ಗಮನವನ್ನು ಕೊಟ್ಟಿದ್ದಿಲ್ಲ. ಪ್ರಾಚೀನ ವಸ್ತುಗಳು–ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು–ಇವುಗಳ ಪ್ರಾಮುಖ್ಯ, ಈ ನಾಡಿನಲ್ಲಿ ಬದುಕಿದ ಪ್ರಾಚೀನ ಜನರ ರೀತಿನೀತಿಗಳನ್ನು ಇವು ಮುಖ್ಯವಾಗಿ ತೋರಿಸುತ್ತವೆ" ಇತ್ಯಾದಿ. ಕ್ರಿ.ಶ. 1800ರ ವರೆಗೆ ಶಾಸನಗಳು ಜನರ ಅಥವಾ ದೇಶೀಯ ವಿದ್ವಾಂಸರ ಗಮನವನ್ನು ಸೆಳೆದಿದ್ದಿಲ್ಲ ಎನ್ನುವುದು ಮೆಕೆಂಜಿಯ ಮಾತಿನಿಂದಲೇ ಗೊತ್ತಾಗುತ್ತದೆ. ಈ ಶಾಸನಗಳನ್ನು ಇವನ ನಿರ್ದೇಶನದಲ್ಲಿ ಶಿಕ್ಷಣ ಹೊಂದಿದ 'ಜಾಣರಾದ ದೇಶೀಯರು' ಸಂಗ್ರಹಿಸಿದರು. "ಈಗ ಲುಪ್ತವಾಗಿರುವ ಪ್ರಾಚೀನ ಲಿಪಿಯ ಈ ಶಾಸನಗಳಲ್ಲಿ ಅತ್ಯಂತ ಪ್ರಾಚೀನ ಶಾಸನಗಳನ್ನು ಈಗ ಕಷ್ಟದಿಂದ ಓದಬಹುದು, ಕೆಲವನ್ನಂತೂ ಓದಲು ಸಾಧ್ಯವೇ ಇಲ್ಲ ; ಇವುಗಳ ನಕಲುಗಳನ್ನು (estampages) ರಕ್ಷಿಸಬೇಕು. ಈ ಕುತೂಹಲಜನಕವಾದ ಶಾಸನಗಳ ಅನುವಾದವನ್ನು ಮಾಡಿಸಲಾಗಿದೆ" ಎಂದೂ ಹೇಳಿಕೊಂಡಿದ್ದಾನೆ. "ಈ ಶಾಸನಗಳ ಹೊರಪದರದಿಂದ ಆಳಕ್ಕೆ ಇಳಿಯಬೇಕು" ಎನ್ನುವುದು ಅವನ ಆಶಯಗಳಲ್ಲೊಂದಾಗಿತ್ತು. ಇವನ ಈ ಸಂಗ್ರಹ ಕಾರ್ಯವನ್ನು ಬ್ರಿಟಿಷ್ ಸರಕಾರವು ಬಹುವಾಗಿ ಮೆಚ್ಚಿ ಪ್ರಶಂಸಿಸಿತು. [21 (a)]

ಕನ್ನಡ ನಾಡಿನ ಶಾಸನಗಳ ಪ್ರಕಟಣೆ ಆರಂಭವಾದದ್ದು ಕ್ರಿ. ಶ. 1807ರಲ್ಲಿ. ಮೆಕೆಂಜಿ ತಾನು ಸಂಗ್ರಹಿಸಿದ ಅನೇಕ ತಾಮ್ರಪಟಗಳನ್ನೂ ಶಾಸನಗಳನ್ನೂ ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿಕೊಟ್ಟಿದ್ದನು. 'ಏಷಿಯಾಟಿಕ್ ರಿಸರ್ಚಸ್' (Asiatick Researches) ಪತ್ರಿಕೆಯ 9ನೆಯ ಸಂಪುಟದಲ್ಲಿ (1807) ಮೆಕೆಂಜಿ ತಾನು ಕಂಡ ಕೆಲವು ಶಿಲ್ಪಗಳನ್ನೂ ಶಾಸನಗಳನ್ನೂ ಹೆಸರಿಸಿದ್ದಾನೆ. 278ನೆಯ ಪುಟದಲ್ಲಿ ಕ್ರಿ. ಶ. 1801ರಲ್ಲಿ ಮೆಕೆಂಜಿ ಸಂಗ್ರಹಿಸಿದ ಶಾಸನದ ಚಿತ್ರವಿದೆ. ಆ ಚಿತ್ರದ ಕೆಳಗೆ ಈ ರೀತಿ ಅಚ್ಚಾಗಿದೆ–"Ancient

---

[20] JRAS. I. (1834), pp. 333–60.

[21] ಪ್ರಶ್ನಾರ್ಥಕ ಚಿಹ್ನೆ ಲೇಖಕನದು.

[21] (a) ಇನ್ನೂ ಹೆಚ್ಚಿನ ವಿವರಗಳಿಗೆ, ನೋಡಿ–Krishnamurthi, V. G : Mackenzie and his collections (Śrikaṇṭhikā, pp. 178–186)

sculpture and inscription at Śravanagoody near Madagasee (characters unknown)." ಬಹು ಪ್ರಾಚೀನವಾದ ಶಾಸನಗಳನ್ನು ಓದಲು ಯಾರಿಗೂ ಆಗಿರಲಿಲ್ಲ (ಅದೇ ಪತ್ರಿಕೆಯ 274ನೆಯ ಪುಟದ ಅಡಿಟಿಪ್ಪಣಿಯಲ್ಲಿ ವಿಲಿಯಮ್ ಬ್ರೌನ್ಸ್ ಎಂಬಾತ ಕೆಲವು ಶಾಸನಗಳನ್ನು ಸಂಗ್ರಹಿಸಿದ ವಿಷಯ ಗೊತ್ತಾಗುತ್ತದೆ). ಈ ಸಂಪುಟದಲ್ಲಿಯೇ ಮೆಕೆಂಜಿಯು ಜೈನರನ್ನು ಕುರಿತು ಸುದೀರ್ಘ ಲೇಖನವನ್ನು ಬರೆದಿರುವುದು. ಬಹುಶಃ ಈ ಲೇಖನದ ಕರ್ತೃ ಕವೆಲ್ಲಿ ಬೋರೈಯ ಬ್ರಾಹ್ಮೆನ್[22] (Cavelly Boria, Brahmen) ಎಂಬಾತ ಎನ್ನುವುದು "Information collected from a Swamy at Mudgere and translated for Mackenzie by Cavelly Boria, Brahmen" ಎಂಬ ವಾಕ್ಯದಿಂದ ಸ್ಪಷ್ಟವಾಗುತ್ತದೆ. ಅದೇ ಬೋರೈಯ ಅವರು ಇದೇ ಸಂಪುಟದಲ್ಲಿ 'Belligola' (=ಶ್ರವಣಬೆಳಗೊಳ)ದ ಗೊಮ್ಮಟ ವಿಗ್ರಹದ ಮುಂದಿರುವ, ಜೈನರ ಮತ್ತು ವೈಷ್ಣವರ ವಿವಾದವನ್ನು ಬುಕ್ಕರಾಜ ಬಗೆಹರಿಸಿದ ವಿಷಯವನ್ನು ಹೇಳುವ ಶಾಸನವನ್ನು ಅನುವಾದಿಸಿದ್ದಾರೆ.[23]

ಇದೇ ಸಂಪುಟದಲ್ಲಿ ಕೋಲ್‌ಬ್ರೂಕ್ ಅವರು–"In the scarcity of authentic history of the Hindu race, importance is justly attached to all genuine monuments, and especially inscriptions on stone and metal, which are occasionally discovered through various accidents" ಎಂದು ಶಾಸನಾಭ್ಯಾಸದ ಮಹತ್ವವನ್ನು ಒತ್ತಿಹೇಳಿ, ಮೆಕೆಂಜಿಯವರು ಸೊಸೈಟಿಗೆ ಕೊಟ್ಟ ವಿಜಯನಗರದ ತಾಮ್ರಪಟಗಳು ಎರಡು (ಪು. 412 ಮತ್ತು ಪು. 421), (ಹಿಂದಿನ) ಆದವಾನಿ ಜಿಲ್ಲಾ ಕುರುಗೋಡಿನ ಶಿಲಾ ಶಾಸನವೊಂದು (ಪು. 422)–ಇಷ್ಟರ ಅನುವಾದವನ್ನು ಮಾಡಿಕೊಟ್ಟಿದ್ದಾರೆ. ಈ ಹನ್ನೆರಡನೆಯ ಶತಮಾನದ ಕನ್ನಡ ಶಿಲಾಶಾಸನವನ್ನು 1801ರಲ್ಲಿ ಆ ಸ್ಥಳದ ನಿವಾಸಿಗಳ ಅಪ್ಪಣೆ ಪಡೆದು ಮೆಕೆಂಜಿಯವರು–ಹಿಂದೂಗಳ ಸಾಹಿತ್ಯದಲ್ಲಿ ಆಸಕ್ತರಾಗಿರುವ ವ್ಯಕ್ತಿಗಳು ಅದನ್ನು ಅಮೂಲ್ಯ ಆಸ್ತಿಯೆಂದು ಭಾವಿಸುತ್ತಾರೆ ಎಂಬ ನಂಬಿಕೆಯಿಂದ–ಕಲ್ಕತ್ತಾದ ಸೊಸೈಟಿಗೆ ಕಳುಹಿಸಿಕೊಟ್ಟರಂತೆ. ಈ ಶಾಸನದ ಲಿಪಿಯನ್ನು ಕುರಿತು ಮೆಕೆಂಜಿಯವರು ಹೀಗೆ ಬರೆದಿದ್ದಾರೆ– "Besides the common character and language, another appears to have been used, denominated at present the Halla or ancient Canara, in which this inscription is written; it has gone so much into disuse, that it was with some difficulty I could get people to read it........"

ಕ್ರಿ. ಶ. 1821ರಲ್ಲಿ ಸರ್ ಜಾನ್ ಮಾಲ್ಕಮ್ (Sir John Malcolm) ಎಂಬಾತನು ಬೊಂಬಾಯಿಗೆ ಬಂದಾಗ ಅವನಿಗೆ ಭಾರತದ ಪ್ರಾಚೀನ ಶಾಸನಗಳ ವಿಷಯದಲ್ಲಿ ಆಸಕ್ತಿ ಹುಟ್ಟಿ ಅವುಗಳ ವಿಷಯವನ್ನು ಮೌಂಟ್ ಸ್ಟುಯರ್ಟ್ ಎಲ್ಫಿನ್‌ಸ್ಟನ್ (Hon. Mount Stuart Elphinstone) ಎಂಬುವನ ಗಮನಕ್ಕೆ ತಂದಾಗ ಅವನು ಬೇರೆ ಬೇರೆ ಜಿಲ್ಲೆಗಳ ಅಧಿಕಾರಿಗಳಿಗೆ ಈ ವಿಷಯವಾಗಿ ಕಾಗದ ಬರೆಯುತ್ತಾನೆ. ಬೆಯ್ಲಿ (Bailie) ಎಂಬಾತ ಥಾಣದಿಂದ ಕೆಲವು ತಾಮ್ರಪಟಗಳನ್ನು ಕಳುಹಿಸುತ್ತಾನೆ; ಕರ್ನಾಟಕದಿಂದಲೂ ಹದಿನಾಲ್ಕು ಶಾಸನಗಳ ನಕಲುಗಳು ಬಂದುವು. ಎಲ್ಫಿನ್‌ಸ್ಟನ್ನನು ಅವುಗಳನ್ನು ಅನುವಾದಿಸಿ ಪ್ರಕಟಿಸಲೆಂದು ಬೊಂಬಾಯಿ ಸರಕಾರದ ಕಾರ್ಯದರ್ಶಿಯಾಗಿದ್ದ ವಿಲಿಯಂ ಹೆನ್ರಿ ವಥೆನ್ (William Henry Wathen) ಎಂಬಾತನಿಗೆ ಕಳುಹಿಸಲು, ಆತ ಅವುಗಳಲ್ಲಿ ಹನ್ನೆರಡನ್ನು ಓದಿ ಅವುಗಳ ಸಾರಾಂಶವನ್ನು 1835ರಲ್ಲಿ ಪ್ರಕಟಿಸಿದನು.[24] ಉಳಿದ ಎರಡನ್ನು ಓದಲಾಗಲಿಲ್ಲ

---

[22] ಈತನ ಹೆಸರಿನ ನಿಜವಾದ ರೂಪವೇನಿತ್ತೋ ತಿಳಿಯದು. 'Boria' ಎಂಬುದನ್ನು ಬೋರಯ್ಯ ಎಂದೋ, ಬೋರೈಯ ಎಂದೋ ಮಾಡಿಕೊಂಡರೂ, ಬ್ರಾಹ್ಮಣರಲ್ಲಿ ಈ ಹೆಸರನ್ನಿಟ್ಟುಕೊಳ್ಳುವುದು ಇಲ್ಲವೇ ಇಲ್ಲ ಎಂದು ಹೇಳಬಹುದು.

[23] Asiatick Researches, IX (1807), p. 270.

[24] JRAS. II. (1835), p. 378.

ವೆಂದು ಹೇಳಿಕೊಂಡಿದ್ದಾನೆ. ಹಳಗನ್ನಡ[25] ("Halla-Kanara") ದಲ್ಲಿರುವ ಕ್ರಿ.ಶ. 1206ರ ಶಾಸನವೊಂದರ ವಿಷಯವಾಗಿ ಹೀಗೆ ಹೇಳುತ್ತಾನೆ. "ಅದನ್ನು ಹಳಗನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆಯಲಾಗಿದೆ. ಈಗಿನ ಪಂಡಿತರು ಅದನ್ನು ಓದಲು ಕಷ್ಟಪಡುತ್ತಿದ್ದಾರೆ." ಇವನು ಈ ಶಾಸನವನ್ನು ಓದಿ ಇದರ ಸಾರಾಂಶವನ್ನು ಕೊಟ್ಟಿದ್ದಾನೆ. ಈ ಶಾಸನಗಳ ಅನುವಾದದ ವಿಷಯದಲ್ಲಿ ಪ್ರೊ. ವಿಲ್ಸನ್ ಅವರು ಮೆಚ್ಚುಗೆ ವ್ಯಕ್ತಪಡಿಸಿ, ಇನ್ನೂ ಸಮರ್ಪಕವಾದ ಅನುವಾದಕಾರ್ಯ ನಡೆಯಬೇಕಾಗಿದೆ ಎಂದಿದ್ದಾರೆ (ಪು. 393 ಮತ್ತು 399).

ಈ ರಂಗದಲ್ಲಿ ಮುಂದಿನ ಸ್ತುತ್ಯಪ್ರಯತ್ನ ವಾಲ್ಟರ್ ಇಲಿಯಟ್ಟನದು. ಕರ್ನಾಟಕದ ಪ್ರಾಚೀನ ಶಾಸನಗಳನ್ನು ಬಹಳ ಕಷ್ಟಪಟ್ಟು ಶ್ರಮವಹಿಸಿ ಓದಿ, ತನ್ನ ಅಧ್ಯಯನದ ಫಲವನ್ನು "Hindu Inscriptions" ಎಂಬ ಲೇಖನದಲ್ಲಿ ಕೊಟ್ಟಿದ್ದಾನೆ.[26] ಪ್ರಾಚೀನ ಶಾಸನಗಳಲ್ಲಿರುವ ಮತ್ತು ಈಗ ಲುಪ್ತವಾಗಿರುವ ಕೆಲವು ಅಕ್ಷರಗಳನ್ನು ಓದುವುದು ಪ್ರಯಾಸಕರವಾಯಿತೆಂದು ಹೇಳಿಕೊಂಡಿದ್ದಾನೆ.[27] ಈ ಶಾಸನಗಳ ಸಹಾಯದಿಂದ ಕದಂಬರು, ಚಾಳುಕ್ಯರು ಮುಂತಾದ ರಾಜಕುಲಗಳ ಇತಿಹಾಸವನ್ನು ಚಿತ್ರಿಸಲು ಯತ್ನಿಸಿದ್ದಾನೆ. ಮೇಲೆ ಹೇಳಿದ ಲೇಖನವು ಕೆಲವು ತಿದ್ದುಪಡಿಗಳೊಂದಿಗೆ Madras Journal of Literature and Science (Vol. vii) ಎಂಬ ಪತ್ರಿಕೆಯಲ್ಲಿ ಮತ್ತೆ ಅಚ್ಚಾಯಿತು.

ಕ್ರಿ. ಶ. 1837ರ Journal of the Asiatic Society of Bengal (Vol. VI) ಎಂಬ ಪತ್ರಿಕೆಯಲ್ಲಿ ಹತ್ತನೇ ಶತಮಾನದ ಕರ್ನಾಟಕ ಶಾಸನವೊಂದರ ನಕಲು ಮತ್ತು ಅದರ ಸಾರಾಂಶಗಳು ಅಚ್ಚಾಗಿವೆ. ಇದನ್ನು ಮೆಕೆಂಜಿಯ ದೇಶೀಯ ಸಹಾಯಕರಲ್ಲೊಬ್ಬರಾದ ಕವೆಲ್ಲಿ ವೆಂಕಟ ಬೋರೈಯ (Cavelly Venkata Boria)[28] ಎಂಬುವನು ಮೇಲ್ಕಂಡ ಸೊಸೈಟಿಗೆ ಕೊಟ್ಟಿದ್ದಾನೆ. ಈ ಶಿಲಾಶಾಸನ ಆ ಸೊಸೈಟಿಯ ಪ್ರದರ್ಶನಾಲಯದಲ್ಲಿದೆ. ಜೇಮ್ಸ್ ಪ್ರಿನ್ಸೆಪ್ ಎಂಬಾತ ಪ್ರಾಚೀನ ಭಾರತೀಯ ಲಿಪಿಗಳು ಮತ್ತು ಹೊಸಗನ್ನಡ

---

[25] ಈ ಮಾತನ್ನು ಮೆಕೆಂಜಿಯಿಂದ ತೆಗೆದುಕೊಂಡಂತೆ ಕಾಣುತ್ತದೆ. ಕನ್ನಡ ಶಾಸನಗಳನ್ನು ಮೆಕೆಂಜಿ ಹೀಗೆ ವಿಭಾಗಿಸಿದ್ದಾನೆ-(1) ಪ್ರಾಚೀನ 'ಕೆನರ' (2) ಪೂರ್ವದ್-ಹಲ್ಲ-ಕೆನರ, (3) ಹಲ್ಲ ಅಥವಾ ಪ್ರಾಚೀನ ಕೆನರ, (4) ಆಧುನಿಕ ಕೆನರ (JRAS. I. p. 350).

[26] JRAS. IV (1837), pp. 1-41.

[27] ಈ ಪಾಶ್ಚಾತ್ಯ ಪಂಡಿತರು ದೇಶೀಯ ಭಾಷೆಗಳನ್ನು ಕಲಿಯಲು ತುಂಬ ಶ್ರಮಪಟ್ಟ ವಿಷಯವು ಸರ್ವವಿದಿತವಾಗಿದೆ. ದೇಶೀಯ ವಿದ್ವಾಂಸರಿಂದ ಕನ್ನಡ ಭಾಷೆಯ ವ್ಯಾಕರಣಗಳನ್ನೂ ಅನುವಾದಗಳನ್ನೂ ಬರೆಯಿಸಿ ಅವುಗಳ ಉಪಯೋಗ ಮಾಡಿಕೊಂಡರು. ಅಂತಹ ಕೃತಿಗಳಲ್ಲಿ ಒಂದು ಅಡಕಿ ಸುಬ್ಬರಾಯರ "A Selection of Stories and Revenue papers in the Karnataca Language, with translations and Grammatical analysis ; to which is added Dialogues in Kannada and English" ಎಂಬ ಪುಸ್ತಕ. ಇದನ್ನು ವಾಲ್ಟರ್ ಇಲಿಯಟ್ಟನು ತಿದ್ದಿಕೊಟ್ಟಿದ್ದಾನೆ. ಇದು ಕ್ರಿ. ಶ. 1846ರಲ್ಲಿ ಮದರಾಸಿನಲ್ಲಿ ಅಚ್ಚಾಗಿದೆ.

[28] ಮೆಕೆಂಜಿ ಈತನನ್ನು ತುಂಬಾ ಹೊಗಳಿದ್ದಾನೆ. ಮೈಸೂರಿನ ಈ ಪ್ರತಿಭಾಶಾಲಿ ವೈದಿಕ ವಿದ್ವಾಂಸನು ಪ್ರಾಚೀನ ವಸ್ತುಗಳ ವಿಷಯದಲ್ಲಿ ತನಗೆ ಆಸಕ್ತಿ ಹುಟ್ಟಲು ಬಹುಮಟ್ಟಿಗೆ ಕಾರಣನೆಂದೂ, ಪರಿವೀಕ್ಷಣಾ ಕಾರ್ಯದಲ್ಲಿ ಈತನಿಂದ ತನಗೆ ಅಮೂಲ್ಯ ಸಹಾಯ ದೊರೆಯಿತೆಂದೂ ಸ್ಮರಿಸಿದ್ದಾನೆ.

ಕ್ರಿ. ಶ. 1807ರ Asiatick Researches (Vol. IX) ಪತ್ರಿಕೆಯಲ್ಲಿ ಬಂಗಾಳದ ಏಷಿಯಾಟಿಕ್ ಸೊಸೈಟಿಗೆ ಕೊಟ್ಟ ಕನ್ನಡ ಶಾಸನವೊಂದರ ಸಾರಾಂಶ ಅಚ್ಚಾಗಿದೆ. ಕವೆಲ್ಲಿ ವೆಂಕಟ ಬೋರೈಯ ಅವರ ಉತ್ಸಾಹ, ನಿಷ್ಠೆ, ಉಳಿದ ದೇಶೀಯರಲ್ಲಿ ಕಾಣಬಾರದ ಪ್ರತಿಭೆಗಳಿಗೆ ಅಲ್ಪಕಾಣಿಕೆಯ ರೂಪವಾಗಿ ಅವರ ಹೆಸರನ್ನು ಶಿಲಾಶಾಸನದ ಅಂಚಿನಲ್ಲಿ ಕೊರೆಯಿಸಿದ್ದೇನೆ ಎಂದು ಮೆಕೆಂಜಿ ಹೇಳಿ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾನೆ. (ಪು. 424)

ಕವೆಲ್ಲಿ ಬೋರೈಯ, ಕವೆಲ್ಲಿ ವೆಂಕಟ ಬೋರೈಯ-ಎರಡೂ ಒಂದೇ. Boria ಎಂಬುದರ ನಿಜವಾದ ರೂಪ ಗೊತ್ತಿಲ್ಲ.

ಲಿಪಿಯ ಸಹಾಯದಿಂದ ಓದಿ ಅದರ ಸಾರಾಂಶವನ್ನು ಕೊಟ್ಟಿದ್ದಾನೆ.[29] ಶಾಸನವನ್ನು ಅಷ್ಟೊಂದು ಸಮರ್ಪಕವಾಗಿ ಓದಿರುವಂತೆ ಕಾಣಿಸುವುದಿಲ್ಲ.

ಕ್ರಿ. ಶ. 1839ರಲ್ಲಿ ಮೇಲೆ ಹೇಳಿದ ವಥೆನ್ ಎಂಬುವನು ಬೆಳಗಾವಿಯ 'ಹಲ್ಲಕೆನರ' (=ಹಳಗನ್ನಡ) ದಲ್ಲಿರುವ ಜೈನ ಶಾಸನವನ್ನೂ ಪೂರ್ವದ ಹಳಗನ್ನಡ ಲಿಪಿಯಲ್ಲಿರುವ ಕೆಲವು ಸಂಸ್ಕೃತ ತಾಮ್ರಪಟಗಳನ್ನೂ ಅನುವಾದಿಸಿ, ತಾಮ್ರಪಟದಲ್ಲಿರುವ ಕನ್ನಡ ಲಿಪಿಗೆ ಸಮಾನವಾದ ದೇವನಾಗರಿ ಲಿಪಿಯನ್ನು ಕೊಟ್ಟಿದ್ದಾನೆ.[30]

ಕರ್ನಾಟಕದ ಶಾಸನಗಳ ಅಧ್ಯಯನದ ವಿಷಯದಲ್ಲಿ ಮೊತ್ತಮೊದಲು ಆಸಕ್ತಿವಹಿಸಿದ ಭಾರತೀಯ ವಿದ್ವಾಂಸರೆಂದರೆ ಬಾಲಗಂಗಾಧರ ಶಾಸ್ತ್ರಿಯವರು.[31] ಕೊಲ್ಲಾಪುರದ ಸುತ್ತಮುತ್ತ ದೊರಕಿದ 'ದೇವನಾಗರಿ' ಮತ್ತು 'ಹಳಗನ್ನಡ' ಲಿಪಿಗಳಲ್ಲಿರುವ ಏಳು ಪ್ರಾಚೀನ ಶಾಸನಗಳನ್ನು ಓದಿ ಅವುಗಳ ಸಾರಾಂಶವನ್ನು 1845ರಲ್ಲಿ ಪ್ರಕಟಿಸಿದರು.[32] ಇವುಗಳಲ್ಲಿ ನಾಲ್ಕು ನಾಗರಿ ಲಿಪಿಯಲ್ಲಿವೆ. ಮೂರು ಕನ್ನಡ ಲಿಪಿಯಲ್ಲಿವೆ. "ಪ್ರಾಚೀನ ಕನ್ನಡ ಭಾಷೆಯನ್ನು ಚೆನ್ನಾಗಿ ತಿಳಿದಿದ್ದ ವ್ಯಕ್ತಿಗಳೊಬ್ಬರು ನನಗಾಗಿ ಪ್ರತಿಮಾಡಿಕೊಟ್ಟರು"— ಎಂದು ಹೇಳಿಕೊಂಡಿದ್ದಾರೆ. ಬಹುಶಃ ಶ್ರೀ ಶಾಸ್ತ್ರಿಯವರು ಕನ್ನಡ ಶಾಸನಗಳನ್ನು ಓದಿರಬೇಕು, ಅವುಗಳ ಅರ್ಥವನ್ನು ಕನ್ನಡ ಭಾಷೆಯನ್ನು ಬಲ್ಲ ಯಾರೋ ವಿವರಿಸಿರಬೇಕು.

ಕ್ರಿ. ಶ. 1865 ಮತ್ತು 1866ರಲ್ಲಿ ಮೈಸೂರು ಮತ್ತು ಉತ್ತರ ಕರ್ನಾಟಕಗಳಲ್ಲಿ ಶಾಸನಗಳ ಭಾವಚಿತ್ರಗಳನ್ನು ತೆಗೆದು ಸಂಗ್ರಹಿಸುವ ಕಾರ್ಯವು ನಡೆಯಿತು. ಕ್ರಿ.ಶ. 1807ರಲ್ಲಿ ಡಾ|| ಭಾವುದಾಜಿ (Dr. Bhau Daji) ಎಂಬುವರು ಮೈಸೂರು ಮತ್ತು ಉತ್ತರ ಕರ್ನಾಟಕಗಳಲ್ಲಿ ಸಂಗ್ರಹಿಸಿದ ಶಾಸನಗಳ ಭಾವಚಿತ್ರಗಳ ಸಂಗ್ರಹವನ್ನು ಕುರಿತು ವಿವೇಚನೆಮಾಡಿದ್ದಾರೆ.[33] ಈ ಶಾಸನಗಳಲ್ಲಿ ಹಲವಾರು ಹಳಗನ್ನಡ ದಲ್ಲಿರುವುದರಿಂದ ಅವುಗಳನ್ನು ಓದುವುದೇ ಕಷ್ಟವೆಂದೂ, ಹಳಗನ್ನಡವನ್ನು ತಿಳಿದ ವಿದ್ವಾಂಸರಿಂದ ಸ್ವಲ್ಪ ಸಹಾಯ ಒದಗಿದರೂ, ಎಲ್ಲವನ್ನೂ ಸಮರ್ಪಕವಾಗಿ ಓದಬಲ್ಲ ವ್ಯಕ್ತಿ ತಮಗಿನ್ನೂ ದೊರಕಿಲ್ಲವೆಂದೂ ಹೇಳಿಕೊಂಡಿದ್ದಾರೆ.[34]

ಅದೇ ಸಂಪುಟದಲ್ಲಿ (JBBRAS. IX, 1867-70) ಜೆ. ಎಫ್. ಫ್ಲೀಟ್ ಸಂಪಾದಿಸಿ ಪ್ರಕಟಿಸಿರುವ ಕದಂಬರ ಸಂಸ್ಕೃತ ಮತ್ತು ಕನ್ನಡ ಶಾಸನಗಳಿವೆ. ಅವರು ಅವುಗಳನ್ನು ಬಹಳ ಸಮರ್ಪಕವಾಗಿ ಓದಿರುವ ಭಾವನೆ ಬರುತ್ತದೆ. ಅದೇ ಪತ್ರಿಕೆಯ ಪು. 229ರಲ್ಲಿರುವ "On some Sanskrit Copper-plates found in the Belgaum Collectorate" ಎಂಬ ಲೇಖನದಿಂದ ಇವರ ಕರ್ನಾಟಕ ಶಾಸನಗಳ ಅಧ್ಯಯನವು ಆರಂಭ ವಾದಂತೆ ಕಾಣಿಸುತ್ತದೆ. ಶಾಸನಗಳನ್ನು ಓದುವುದರಲ್ಲಿ ಅವರಿಗೆ ಯಾವ ಕಷ್ಟವೂ ಇದ್ದಂತೆ ತೋರುವುದಿಲ್ಲ. ಅದೇ ಪತ್ರಿಕೆಯ ಹತ್ತನೆಯ ಸಂಪುಟದಲ್ಲಿ ಸೌಂದತ್ತಿ ಮತ್ತು ಬೆಳಗಾವಿಯ ರಟ್ಟರ ಎಂಟು ಸಂಸ್ಕೃತ ಮತ್ತು

---

29 Journal of the Asiatic Society of Bengal, VI (1837), p. 673.

30 JRAS. V (1839), pp. 174, 343, 349.

31 ನ್ಯಾಯವಾಗಿ ಈ ಗೌರವ ಕವೆಲ್ಲಿ ಬೋರೈಯ ಅವರಿಗೆ ಸಲ್ಲಬೇಕು. ಸು. 1800ರ ಹೊತ್ತಿಗೇ ಅವರು ಶಾಸನ ಸಂಗ್ರಹಣದಲ್ಲಿ ಮೆಕೆಂಜಿಯವರಿಗೆ ಸಹಾಯಮಾಡಿದ್ದಲ್ಲದೆ ಇತ್ತೀಚಿನ ಕೆಲವು ಶಾಸನಗಳನ್ನು ಓದಿ ಅನುವಾದಮಾಡಿದ್ದಾರೆ. ಈ ವಿಷಯ ಹಿಂದೆಯೇ ಬಂದಿದೆ. ಅವರು ಮೆಕೆಂಜಿಗೆ ಸಹಾಯಕರಾಗಿದ್ದುದರಿಂದ ಅವರ ಹೆಸರು ಪತ್ರಿಕೆಗಳಲ್ಲಿ ಸ್ವತಂತ್ರವಾಗಿ ಕಾಣಿಸಿಕೊಳ್ಳುವುದಿಲ್ಲ.

32 JBBRAS. II (1845), pp. 263-72.

33 JBBRAS. IX (1867-70), p. 314.

34 ಅದೇ.

ಕನ್ನಡ ಶಾಸನಗಳನ್ನು ಪ್ರಕಟಿಸಿದ್ದಾರೆ. ಶಾಸನಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಬೊಂಬಾಯಿ ವಿದ್ಯಾಭ್ಯಾಸದ ಇಲಾಖೆಯಲ್ಲಿದ್ದ ವೆಂಕಟರಂಗೋ ಕಟ್ಟಿ ಮತ್ತು ಗಂಗಾಧರಯ್ಯ ಮಡಿವಾಳೇಶ್ವರ ತುರಮರಿ ಇವರ ಸಹಾಯವನ್ನು ನೆನೆದಿದ್ದಾರೆ. ಶಾಸನಗಳನ್ನು ಓದುವುದರಲ್ಲಿ ಫ್ಲೀಟರಿಗೆ ಇತರರ ಸಹಾಯದ ಆಗತ್ಯ ವಿದ್ದಂತೆ ಕಾಣಿಸುವುದಿಲ್ಲ. ಅವರು ಸಂಪಾದಿಸಿರುವ ಶಾಸನಗಳೆಲ್ಲ ಅವರೇ ಸ್ವತಃ ಕೈಯಿಂದ ಪ್ರತಿಮಾಡಿ ಕೊಂಡಂಥವು. ಕನ್ನಡ ಶಾಸನಗಳ ಲಿಪಿಯನ್ನು ಓದುವ ತಂತ್ರ ಈ ವೇಳೆಗಾಗಲೇ ವಿದ್ವಾಂಸರಿಗೆ ತಕ್ಕಮಟ್ಟಿಗೆ ಚೆನ್ನಾಗಿಯೇ ಕರಗತವಾಗಿದ್ದಿತು. ತಮಗಿಂತ ಹಿಂದೆ ಈ ದೆಶೆಯಲ್ಲಿ ಕೆಲಸಮಾಡಿದವರ ಅನುಭವದ ಬೆಂಬಲ ಅವರಿಗಿತ್ತು. ಅಷ್ಟುಹೊತ್ತಿಗಾಗಲೇ ಗುಹಾಲಿಪಿಯನ್ನು ಸಮರ್ಪಕವಾಗಿ ಓದಿಯಾಗಿತ್ತು. ಕನ್ನಡಲಿಪಿಗೂ, ಗುಹಾಲಿಪಿಗೂ ಸಂಬಂಧವುಂಟೆಂದು ಈ ಮುಂಚೆ ನೋಡಿದ್ದೇವೆ. ಕನ್ನಡ ಶಾಸನವೊಂದರ ಲಿಪಿಯನ್ನು ಕುರಿತು ಫ್ಲೀಟ್ ಅವರು ಆಡುವ ಮಾತುಗಳಿವು—

"The inscription is engraved in old Canarese letters of an old type, i.e., of a type not very far removed from that of the Cave-alphabets, the form of 'Ś', for instance, is identical with that of the 'Ś' of the Cave-alphabets, and the method of expressing the vowels 'ê' and 'u' is very similar ; and which is a remarkable and antique peculiarity, the form of 'l' when subjoined to another 'l' is identical with the usual form of 'l' of the Cave-alphabets, though the 'l' to which it is subjoined is in each instance the usual old Canarese 'l', obtained by rounding off the angular points of the 'l' of the Cave-alphabets."[35]

1876ರಲ್ಲಿ ಡಾ॥ ಬರ್ಗೆಸ್ ಎನ್ನುವ ವಿದ್ವಾಂಸರು "Indian Antiquary" ಎಂಬ ಪತ್ರಿಕೆಯನ್ನು ಆರಂಭಿಸಿದುದು ಭಾರತೀಯ ವಿದ್ವತ್ತಿಗೆ, ಅದರಲ್ಲೂ ಕರ್ನಾಟಕದ ಶಾಸನಗಳ ಅಧ್ಯಯನಕ್ಕೆ ದೊಡ್ಡ ಉತ್ತೇಜನವನ್ನು ತಂದುಕೊಟ್ಟಿತು. ಆ ಕಾಲದಲ್ಲಿ ಭಾರತದಲ್ಲಿ ಯಾವ ಕೆಲಸವನ್ನು ಕೈಗೊಂಡರೂ ಅದು ಸರಕಾರದ ಮೂಲಕವೇ ಆಗಬೇಕಾಗಿದ್ದ ಒಂದು ವಿಚಿತ್ರ ಪರಿಸ್ಥಿತಿಯಿದ್ದಿತು. ಪ್ರಾಚೀನ ವಸ್ತುಗಳ ಅಧ್ಯಯನದ ಮಹತ್ವದ ಕಡೆ ಸರಕಾರದ ಗಮನವನ್ನು ಹರಿಸಲು ಈ ಪತ್ರಿಕೆ ಬಹುಮಟ್ಟಿಗೆ ಕಾರಣವಾಯಿತು. ಈ ಪತ್ರಿಕೆಯ ಪ್ರಥಮ ಸಂಪುಟದಲ್ಲಿ ಫ್ಲೀಟ್ ಅವರು ಕನ್ನಡ ಶಾಸನವೊಂದರ ಅನುವಾದವನ್ನು ಕೊಟ್ಟಿದ್ದಾರೆ. ಅದೇ ಸಂಪುಟದಲ್ಲಿ ರೈಸ್ ಅವರು ಮಡಕೇರಿ ತಾಮ್ರಪಟಗಳನ್ನು ಸರಿಯಾಗಿಯೇ ಓದಿ ಅಚ್ಚುಮಾಡಿಸಿದ್ದಾರೆ. ಅವರಿಗೆ ಶಿಲಾ ಶಾಸನಗಳನ್ನು ಓದುವ ತಂತ್ರ ಆಗಲೆ ತಕ್ಕಮಟ್ಟಿಗೆ ಕರಗತವಾಗಿದ್ದಿತೆಂದು ಕಾಣುತ್ತದೆ. ಅದೇ ಪತ್ರಿಕೆಯ ಎರಡನೇ ಸಂಪುಟದಲ್ಲಿ ರೈಸ್ ಅವರು ಕನ್ನಡ ಶಾಸನಗಳನ್ನು ಓದಲು ತಾವು ಅನುಭವಿಸಿದ ಕಷ್ಟಗಳನ್ನು ಹೀಗೆ ಹೇಳಿಕೊಂಡಿದ್ದಾರೆ–"(ಶ್ರವಣಬೆಳಗೊಳದ) ಶಾಸನಗಳು ಬಹುಪಾಲು ಮೂರು ಅಥವಾ ನಾಲ್ಕು ಸಾಲಿನ ಬರಹಗಳಾಗಿದ್ದು, ಎಲ್ಲಿ ಬೇಕೆಂದರಲ್ಲಿ ಅವುಗಳನ್ನು ಕೊರೆಯಲಾಗಿದೆ. ಅಲ್ಲಿಯ ಮಠದ ವಿದ್ವಾಂಸರು ಶಾಸನಗಳ ಲಿಪಿಯನ್ನು ಓದಲಾರರು, ಅವುಗಳಲ್ಲಿ ಏನಿದೆಯೆಂಬುದನ್ನು ಹೇಳಲಾರರು. ಅನೇಕ ಪ್ರಯತ್ನಗಳ ಬಳಿಕ ಅಕ್ಷರಗಳನ್ನು ಓದುವ ವಿಧಾನವೊಂದು ಹೊಳೆಯಿತು. ಕೆಲವು ಅಕ್ಷರಗಳು ಈಗಿನ ಕನ್ನಡ ಅಕ್ಷರಗಳನ್ನು ಹೋಲುತ್ತವೆ. ಹೀಗೆ ದೊರೆತ ತಂತ್ರವನ್ನನುಸರಿಸಿ ಓದಿದಾಗ ಶಾಸನಗಳು ಪ್ರಾಚೀನ ಕನ್ನಡ ಭಾಷೆಯಲ್ಲಿ ರಚಿತವಾಗಿರುವುದು ಕಂಡುಬಂದಿತು. ಈ ಶಾಸನಗಳ ಪೈಕಿ ಒಂದರ ಪಡಿಯಚ್ಚನ್ನು ಕೊಟ್ಟು ಅದನ್ನು ಈಗಿನ ಲಿಪಿಯಲ್ಲಿ ಕೊಡಲಾಗಿದೆ. ಇದು ಜೈನ ಸನ್ಯಾಸಿಯೊಬ್ಬನ ಸ್ಮಾರಕವಾಗಿ

[35] JBBRAS. X (1871–4), p. 168.

ರಚಿತವಾಗಿರುವ ಶಾಸನ.''[36] ಈ ಮಾತುಗಳನ್ನು ಓದಿದಾಗ ಸ್ವಲ್ಪ ಆಶ್ಚರ್ಯವಾದರೂ, ಇವರು ತಮ್ಮ ಹಿಂದಿನವರ ಅನುಭವವನ್ನು ಹೆಚ್ಚಾಗಿ ಬಳಸಿಕೊಳ್ಳಲಿಲ್ಲವೆಂದೂ, ಶಾಸನಗಳನ್ನು ಓದಲು ತಾವೇ ಸ್ವತಂತ್ರವಾಗಿ ಪ್ರಯತ್ನಪಟ್ಟಂತೆಯೂ ಭಾವಿಸಬಹುದು. ಸು. 1870-73 ಕ್ಕೆ ಹಿಂದೆಯೇ ರೈಸ್ ಅವರು ತಮ್ಮ ಶಾಸನಾಧ್ಯಯನದ ಕಾರ್ಯವನ್ನಾರಂಭಿಸಿದಂತೆ ಕಾಣುತ್ತದೆ. ಕ್ರಿ.ಶ. 1876 ರಲ್ಲಿ ಶ್ರೀ ಕಾಶೀನಾಥ್ ತ್ರಿಂಬಕ್ ತೆಲಂಗ್ ಅವರು ಕೆಲವು ಕದಂಬ ತಾಮ್ರಪಟಗಳನ್ನು ಸಂಪಾದಿಸಿದ್ದಾರೆ.[37] ಕ್ರಿ. ಶ. 1878 ರಲ್ಲಿ ಫ್ಲೀಟ್ ಅವರ "Pāli, Sanskrit and old Canarese inscriptions from the Bombay Presidency and Parts of the Madras presidency and Mysore" ಎಂಬ ಸಂಕಲನವೊಂದು ಪ್ರಕಟವಾಯಿತು. 1879ರಲ್ಲಿ ರೈಸ್ ಅವರ "Mysore Inscriptions"ಪ್ರಕಟವಾಯಿತು. ಫ್ಲೀಟ್ ಅವರು ಸಂಪಾದಿಸಿದ ಶಾಸನಗಳು ಮುಖ್ಯವಾಗಿ ಪತ್ರಿಕೆಗಳಲ್ಲಿ ಪ್ರಕಟವಾದುವು. ರೈಸ್ ಅವರು ಸಂಪಾದಿಸಿದ ಶಾಸನಗಳು ಬೇರೆ ಬೇರೆ ಸಂಪುಟಗಳಾಗಿ ಪ್ರಕಟವಾದುವು.[38]

ಇವರಿಬ್ಬರೂ-ಫ್ಲೀಟ್ ಮತ್ತು ರೈಸ್-ಕರ್ನಾಟಕದ ಶಾಸನಾಧ್ಯಯನದ ರಂಗದಲ್ಲಿ ಅಗ್ರಗಣ್ಯರು. ರೈಸ್ ಅವರು ಶಾಸನಗಳನ್ನು ಅವುಗಳ ಅನುವಾದದೊಡನೆ ಪ್ರಕಟಿಸಿದ್ದಾರೆ. ಒಂದೊಂದು ಶಾಸನಗಳ ಸಂಪುಟಕ್ಕೂ ಮುನ್ನುಡಿ ಇರುತ್ತದೆ. ಫ್ಲೀಟ್ ಅವರು ಒಂದೊಂದು ಶಾಸನವನ್ನೂ ಟೀಕೆ, ಟಿಪ್ಪಣಿ, ವಿವರಣೆ, ಅನುವಾದ, ಐತಿಹಾಸಿಕ ಮಹತ್ವಗಳೊಂದಿಗೆ ಪ್ರಕಟಿಸಿದ್ದಾರೆ. ಪ್ರಕಟಿಸಿರುವ ಶಾಸನಗಳ ಸಂಖ್ಯೆಯ ದೃಷ್ಟಿಯಿಂದ ರೈಸ್ ಅವರಿಗೆ ಪ್ರಥಮ ಸ್ಥಾನ ಸಲ್ಲಬೇಕು. ಆದರೆ ಫ್ಲೀಟ್ ಅವರ ಕಾರ್ಯಕ್ಷೇತ್ರ ಕರ್ನಾಟಕಕ್ಕಿಂತ ಹೆಚ್ಚು ವಿಶಾಲವಾಗಿದ್ದುದು ಮಾತ್ರವೇ ಅಲ್ಲ, ಅವರ ಅಧ್ಯಯನದ ವ್ಯಾಪ್ತಿಯೂ ವಿಶಾಲವಾಗಿದ್ದಿತು. ಅವರು ನೂರಾರು ಸಂಸ್ಕೃತ ಶಾಸನಗಳನ್ನು ಸಂಪಾದಿಸಿದ್ದಾರೆ. ಗುಪ್ತರ ಶಾಸನಗಳ ಸಂಪುಟ ಇವರ ಶ್ರಮಸಾಧ್ಯವಾದ ಸಂಶೋಧನೆ ಮತ್ತು ಪಾಂಡಿತ್ಯಗಳ ಪ್ರತೀಕ. ಫ್ಲೀಟ್ ಅವರದು ರೈಸ್ ಅವರ ಬುದ್ಧಿಗಿಂತ ಹೆಚ್ಚು ಹರಿತವಾದುದು. ಅವರದು ತೀಕ್ಷ್ಣವಾದ ವಿಮರ್ಶಕ ಮತಿ.[39] ಒಂದೊಂದು ಶಾಸನವನ್ನೂ ವಿಸ್ತಾರವಾದ

---

[36] IA. II (1873), p. 266. " ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಜಿವೋಲ್......" ಎಂದು ಆರಂಭವಾಗುವ ಶಾಸನ (ನೋಡಿ : E.C. II, No. 88) ಇಲ್ಲಿ ಅಚ್ಚಾಗಿದೆ. ರೈಸ್ ಅವರು ಹೆಚ್ಚುಕಡಿಮೆ ಸರಿಯಾಗಿಯೇ ಓದಿದ್ದಾರೆ.

[37] JBBRAS. XII (1876), p. 300.

[38] 1886ರಲ್ಲಿ ರೈಸ್ ಅವರು ಪ್ರಕಟಿಸಿದ "Coorg Inscriptions"ಎಂಬ ಸಂಪುಟದ ಪೀಠಿಕೆಯಲ್ಲಿ 1873ರ ಹೊತ್ತಿಗೇ ಸರ್ಕಾರವು ಭಾಷಾಂತರಿಸಿ ಪ್ರಕಟಿಸಲಿಕ್ಕಾಗಿ ಶಾಸನಗಳ ಪಟ್ಟಿಗಳನ್ನು ಒದಗಿಸಿತೆಂದು ಹೇಳಿಕೊಂಡಿದ್ದಾರೆ. "Epigraphia Carnatica" ದ ಪ್ರಥಮ ಸಂಪುಟವಾಗಿ "Coorg Inscriptions" (Revised edition) ಎಂಬ ಸಂಪುಟವು ಪ್ರಕಟವಾದದ್ದು 1914 ರಲ್ಲಿ.

[39] ಫ್ಲೀಟ್ ಅವರು 1917ರ ಫೆಬ್ರವರಿ ತಿಂಗಳಲ್ಲಿ ತೀರಿಕೊಂಡರು. ಅವರನ್ನು ಕುರಿತ ಲೇಖನವೊಂದರಲ್ಲಿ ಎಲ್. ಡಿ. ಬಾರ್ನೆಟ್ ಅವರು ಬರೆಯುತ್ತಾ-"ತಮ್ಮ ಕೊನೆಯ ವರ್ಷಗಳಲ್ಲಿ ಫ್ಲೀಟ್ ಅವರು ತಾವು ಕರ್ನಾಟಕದ ಜಿಲ್ಲೆಗಳಲ್ಲಿ ರೈತರೊಂದಿಗೆ ಸಂಜೆಯ ಹೊತ್ತು ಕುಳಿತು ಅವರಿಂದ ಕಥೆಗಳನ್ನೂ ಲಾವಣಿಗಳನ್ನೂ ಕೇಳಿ ಸಂತೋಷಿಸುತ್ತಿದ್ದ ಕಾಲವನ್ನು ಆರ್ದ್ರ ಹೃದಯದಿಂದ ನೆನಪಿಗೆ ತಂದುಕೊಳ್ಳುತ್ತಿದ್ದರು... ಫ್ಲೀಟ್ ಅವರ ಬುದ್ಧಿ ಹರಿತವಾದದ್ದು, ನಿಷ್ಪೃಷ್ಟವಾದದ್ದು, ನಿರ್ದುಷ್ಟವಾದದ್ದು. ಅವರ ತೀರ್ಪುಗಳು ಸಂಯಮಪೂರ್ಣವೂ ನ್ಯಾಯಪೂರ್ಣವೂ ಆಗಿರುತ್ತಿದ್ದವು. ಅವರಿಗೆ ಸಂಸ್ಕೃತ ಮತ್ತು ಕನ್ನಡ ಭಾಷೆ ಮತ್ತು ಸಾಹಿತ್ಯಗಳು, ಖಗೋಳ ವಿಜ್ಞಾನ ಮತ್ತು ಶಾಸನ ಸಾಹಿತ್ಯಗಳಲ್ಲಿ ಆಳವಾದ ಪರಿಶ್ರಮವಿದ್ದಿತು........ ಈಗ ಭಾರತೀಯ ಕಾಲಾನುಕ್ರಮಣಿಕೆ (Indian Chronology) ಮತ್ತು ಶಾಸನ ಶಾಸ್ತ್ರ (Epigraphy) ಗಳು ವೈಜ್ಞಾನಿಕ ತಳಹದಿಯ ಮೇಲೆ ನಿಂತಿದ್ದರೆ ಅದಕ್ಕೆ ಬಹುಮಟ್ಟಿಗೆ ಅವರೇ ಕಾರಣ. ಅವರ ಬಾಳಿನ ಕೆಲಸಕ್ಕೆ ಅದೊಂದು ದಿವ್ಯ ಸ್ಮಾರಕ" ಎಂದು ಹೇಳಿದ್ದಾರೆ. (IA. XXXXVI. [1917], p. 128).

ಟೀಕೆಯ ಸಮೇತವಾಗಿ ಪ್ರಕಟಿಸಿದ್ದಾರೆ. ಶಾಸನ ದೊರೆತ ಸ್ಥಳ, ಶಾಸನದ ಗಾತ್ರ, ಅದು ಈಗ ಇರುವ ಸ್ಥಿತಿ, ಅದರ ಲಿಪಿ, ಆ ಲಿಪಿಯ ವೈಶಿಷ್ಟ್ಯ, ಆ ಲಿಪಿಯಲ್ಲಿನ ದೋಷಗಳು, ಆ ಶಾಸನದ ಭಾಷೆ, ಅಲ್ಲಿ ಕಂಡುಬರುವ ಅಪೂರ್ವ ಪದಗಳು, ಆ ಶಾಸನದಲ್ಲಿ ಕಂಡುಬರುವ ರಾಜರ ವಿಷಯ, ಅಲ್ಲೇ ಸಾಧ್ಯವಿದ್ದರೆ ಆ ಕುಲದ ಇತಿಹಾಸ, ಆ ಶಾಸನದಲ್ಲಿ ಕಂಡುಬರುವ ಅಪೂರ್ವ ಸಾಂಸ್ಕೃತಿಕ ಅಂಶಗಳು —ಇವುಗಳನ್ನೆಲ್ಲಾ ಚರ್ಚಿಸುತ್ತಾರೆ. ಶಾಸನವು ನಾಲ್ಕು ಸಾಲಿನ ಬರಹವಾಗಿರಬಹುದು, ಆದರೆ ಅದಕ್ಕೆ ನಾಲ್ಕಾರು ಪುಟಗಳ ಮುನ್ನುಡಿಯಿರುತ್ತದೆ. ಆ ಮುನ್ನುಡಿಗಳನ್ನು ಓದುವುದೇ ಒಂದು ಸೊಗಸು. ಅದ್ಭುತ ಜ್ಞಾಪಕಶಕ್ತಿಯ, ಬಹು ಚಟುವಟಿಕೆಯ ಮತ್ತು ಎಚ್ಚರಿಕೆಯ, ಸರ್ವವನ್ನೂ ಗ್ರಹಿಸಬೇಕು ಎಂಬ ಜ್ಞಾನತೃಷೆಯ, ತಾನು ಹೇಳಿದುದೇ ಸತ್ಯವೆಂಬ ಹಟವಿರದಿದ್ದರೂ ಹೇಳಿದ್ದು ಸತ್ಯವಾಗಬೇಕು ಎಂಬ ಹಿರಿಯ ಆಸೆಯ, ಒಂದು ಹಿರಿಯ ಮನಸ್ಸಿನ ಸಂಪರ್ಕವನ್ನು ಅಲ್ಲಿ ಪಡೆಯುತ್ತೇವೆ.[40]

ರೈಸ್ ಇಷ್ಟರಮಟ್ಟಿಗೆ ಒಂದೊಂದು ಶಾಸನಕ್ಕೂ ಕೆಲಸಮಾಡಲಿಲ್ಲ. ಅಥವಾ ಕೆಲಸಮಾಡಲು ಸಾಧ್ಯವಿರಲಿಲ್ಲ. ಅವರ ಪ್ರಧಾನ ಉದ್ದೇಶ, ತಮಗೆ ದೊರಕುವ ಶಾಸನಗಳೆಲ್ಲವನ್ನೂ ಸಂಗ್ರಹಿಸಿ ಪ್ರಕಟಿಸುವುದು. ಅವರು ಸಂಗ್ರಹಿಸಿದ ಶಾಸನಗಳು 'Epigraphia Carnatica' ಎಂಬ ಹೆಸರಿನ ಅನೇಕ ಸಂಪುಟಗಳಲ್ಲಿ ಪ್ರಕಟವಾಗಿವೆ. ಹಾಗೆ ಪ್ರಕಟಿಸಿದ ಶಾಸನಗಳಲ್ಲಿ ಒಂದೊಂದಕ್ಕೂ ಟಿಪ್ಪಣಿ ಬರೆಯುವ ಮಾತಿರಲಿ, ಅವುಗಳ ಶುದ್ಧ ಪಾಠದ ಕಡೆಗಾಗಲಿ, ಸಮರ್ಪಕವಾದ ಅನುವಾದದ ಕಡೆಗಾಗಲಿ ಪೂರ್ಣ ಗಮನ ಕೊಡುವುದೂ ಸಾಧ್ಯವಿಲ್ಲ. ಆದರೂ ಅವರ ವಿಷಯ–ಪರಿಜ್ಞಾನ, ಐತಿಹಾಸಿಕ ವಿವೇಚನೆ ಇತ್ಯಾದಿಗಳು ಶಾಸನಾಧಾರದಿಂದ ಬರೆದಿರುವ "Mysore and Coorg from Inscriptions" ಎಂಬ ಗ್ರಂಥದಲ್ಲಿ ಮೂರ್ತಗೊಂಡಿರುವುದನ್ನು ಕಾಣಬಹುದು.

ಬಾರ್ನೆಟ್ ಮುಂತಾದ ಹಲವು ಪಾಶ್ಚಾತ್ಯ ವಿದ್ವಾಂಸರು ಶಾಸನಗಳನ್ನು ಫ್ಲೀಟ್ ಅವರ ಮಾದರಿಯಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಭಾರತೀಯರಾದ ಶ್ರೀಗಳಾದ ಕೆ. ಬಿ. ಪಾಠಕ್, ಆರ್. ನರಸಿಂಹಾಚಾರ್, ಆರ್. ರಾಮರಾವ್, ಎಂ. ಎಚ್. ಕೃಷ್ಣ, ಆರ್. ಶಾಮಾಶಾಸ್ತ್ರಿ, ಎಚ್. ಕೃಷ್ಣಶಾಸ್ತ್ರಿ, ಆರ್. ಎಸ್. ಪಂಚಮುಖಿ, ಎನ್. ಲಕ್ಷ್ಮೀನಾರಾಯಣರಾವ್, ಪಾಂಡುರಂಗರಾವ್ ದೇಸಾಯಿ, ಕೆ. ಜಿ. ಕುಂದಣಗಾರ, ಎಸ್. ಸಿ. ನಂದೀಮಠ, ಎ. ಎಂ. ಅಣ್ಣೀಗೇರಿ, ಮೇವುಂಡಿ ಮಲ್ಲಾರಿ, ಜಿ. ಎಸ್. ಗಾಯಿ ಈಚಿನ ತಲೆಮಾರಿನ ಕೆ. ವಿ. ರಮೇಶ್, ಬಿ.ಆರ್. ಗೋಪಾಲ್, ಶ್ರೀನಿವಾಸ ರಿತ್ತಿ, ಎಸ್. ಶೆಟ್ಟರ್, ಮಾಧವ ಎನ್. ಕಟ್ಟಿ–ಮುಂತಾದವರು ಅನೇಕ ಶಾಸನಗಳನ್ನೂ ತಾಮ್ರಪಟಗಳನ್ನೂ ಸಂಗ್ರಹಿಸಿ ಬೆಲೆಯುಳ್ಳ ಲೇಖನಗಳನ್ನು ಬರೆದಿದ್ದಾರೆ. ಆರ್. ನರಸಿಂಹಾಚಾರ್ಯರ "ಶ್ರವಣಬೆಳಗೊಳದ ಶಾಸನಗಳು" (ರೈಸ್ ಅವರ ಸಂಗ್ರಹದ ಪರಿಷ್ಕರಣ), ಆರ್. ಎಸ್. ಪಂಚಮುಖಿ ಮತ್ತು ಎನ್. ಲಕ್ಷ್ಮೀನಾರಾಯಣರಾಯರು ಸಂಪಾದಿಸಿದ "ಬೊಂಬಾಯಿ ಕರ್ನಾಟಕದ ಶಾಸನಗಳು" (ಎರಡು ಸಂಪುಟಗಳು. ಎರಡನೆಯ ಸಂಪುಟವನ್ನು ಎನ್. ಲಕ್ಷ್ಮೀನಾರಾಯಣರಾಯರೊಬ್ಬರೇ ಸಂಪಾದಿಸಿರುವುದು), ಪಂಚಮುಖಿಯವರ ಕರ್ನಾಟಕದ ಶಾಸನಗಳ ಸಂಪುಟಗಳು, ಆರ್. ಶಾಮಾಶಾಸ್ತ್ರಿ ಮತ್ತು ಎನ್. ಲಕ್ಷ್ಮೀನಾರಾಯಣರಾಯರು ಸಂಪಾದಿಸಿದ "ದಕ್ಷಿಣಭಾರತದ ಶಾಸನಗಳು" (IX. i) ....ಉಲ್ಲೇಖನಾರ್ಹವಾದುವು. ಈಚೆಗೆ ಉದಕಮಂಡಲದಲ್ಲಿರುವ (ಈಗ ಮೈಸೂರಿನ) ಕೇಂದ್ರ ಶಾಸನ ಇಲಾಖೆಯು ಹೈದರಾಬಾದ್ ಕರ್ನಾಟಕದ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುವ ಸಿದ್ಧತೆಯಲ್ಲಿದೆ.

ಶಾಸನಗಳ ಅಧ್ಯಯನದ ಇತಿಹಾಸವನ್ನು ಹೀಗೆ ಸಂಗ್ರಹಿಸಬಹುದು. 18ನೆಯ ಶತಮಾನದ

---

[40] ಕರ್ನಾಟಕದ ಶಾಸನಗಳ ಅಧ್ಯಯನದ ಒಂದು ಸಂಕ್ಷಿಪ್ತ ಚಿತ್ರವು ಫ್ಲೀಟ್ ಅವರ "Dynasties of the Kanarese Districts" (Bombay Gazetteer, I. ii.) ಎಂಬ ಗ್ರಂಥದ ಮುನ್ನುಡಿಯಲ್ಲಿ ದೊರೆಯುತ್ತದೆ. ಅದರಿಂದ ಒಂದೆರಡು ವಿಷಯಗಳನ್ನು ತೆಗೆದುಕೊಂಡಿದ್ದೇವೆ.

ತನಕ ಇವುಗಳ ಅಧ್ಯಯನವು ಆರಂಭವಾಗುವುದಿರಲಿ, ಇವುಗಳ ಮಹತ್ವವನ್ನು ಯಾರೂ ಗುರಿತಿಸಿದ್ದಿಲ್ಲ. ಈ ಶತಮಾನದ ಅಂತ್ಯದಲ್ಲಿ ಶ್ರೀರಂಗಪಟ್ಟಣದ ಪತನವಾಗಿ ಆಂಗ್ಲರ ಪ್ರಭುತ್ವವು ಆರಂಭವಾದ ಬಳಿಕ, ಎಂದರೆ ಸು. 1799–1800ರಲ್ಲಿ ಆಂಗ್ಲ ಅಧಿಕಾರಿ ಮೆಕೆಂಜಿಯು ಮೊದಲು ಅವುಗಳ ಬೆಲೆಯನ್ನರಿತು, ಅವುಗಳಲ್ಲಿ ಆಸಕ್ತಿಯನ್ನು ತಾಳಿ ಸಂಗ್ರಹಿಸಿದನು. ಕವೆಲ್ಲಿ ವೆಂಕಟಬೋರೈಯ ಎಂಬ ದೇಶೀಯನು ಶಾಸನಗಳನ್ನು ಓದುವ ಪ್ರಯತ್ನವನ್ನು ಮಾಡಿದನು. ತಕ್ಕಮಟ್ಟಿಗೆ ಓದಿದನು. 1836–38ರಲ್ಲಿ ಲಾಸೆನ್ ಮತ್ತು ಪ್ರಿನ್ಸೆಪ್ ಎನ್ನುನವರು ಬ್ರಾಹ್ಮೀ ಲಿಪಿಯನ್ನು ಓದಿದರು. ಅಷ್ಟು ಹೊತ್ತಿಗಾಗಲೇ ವಥೆನ್ ಮುಂತಾದವರು ಕರ್ನಾಟಕದ ಶಾಸನಗಳನ್ನು ಓದಲು ಪ್ರಯತ್ನಿಸಿದ್ದರು. ಬ್ರಾಹ್ಮೀ ಲಿಪಿಯನ್ನು ಸರಿಯಾಗಿ ಓದಿದುದು ಕರ್ನಾಟಕದ ಶಾಸನಗಳನ್ನು ಓದುವ ಕಾರ್ಯವನ್ನು ತ್ವರಿತಗೊಳಿಸಿತು. ಇದರಲ್ಲಿ ಪ್ರಾರಂಭದ ಅತ್ಯಂತ ಪ್ರಮುಖ ಹೆಜ್ಜೆ ವಾಲ್ಟರ್ ಇಲಿಯಟ್ಟನದು. ಶಾಸನಗಳನ್ನು ಓದುವ ಕಾರ್‍ಯವು ಪರಿಪೂರ್ಣತೆಯನ್ನು ಮುಟ್ಟಿದುದು ಫ್ಲೀಟ್ ಮತ್ತು ರೈಸ್ ಅವರಲ್ಲಿ. ಸು. 1868–70ರ ಹೊತ್ತಿಗೆ ಶಾಸನಾಧ್ಯಯನವು ಒಂದು ನಿರ್ದಿಷ್ಟತೆಯನ್ನು ಪಡೆಯಿತು. ಕರ್ನಾಟಕದ ದೇಶೀಯ ವಿದ್ವಾಂಸರ ಸಹಾಯ ಏನಿದ್ದರೂ ಭಾಷೆಯ ವಿಷಯದಲ್ಲಿ; ಲಿಪಿಯನ್ನು ಓದುವುದರಲ್ಲಿ ಪಾಶ್ಚಾತ್ಯ ವಿದ್ವಾಂಸರ ಪ್ರಯತ್ನವೇ ಮುಖ್ಯವಾದುದು.

## ಶಾಸನಗಳ ಪ್ರಾಮುಖ್ಯ

ಭರತಖಂಡದಲ್ಲಿ ಅಸಂಖ್ಯಾತವಾದ ಶಾಸನಗಳು ದೊರಕುತ್ತವೆ. ಅದರಲ್ಲೂ ಕರ್ನಾಟಕದಲ್ಲಿ ಸಿಗುವಷ್ಟು ಶಾಸನಗಳು ಭಾರತದ ಬೇರಾವ ಪ್ರಾಂತದಲ್ಲೂ ಸಿಗುವುದಿಲ್ಲವೆಂದು ವಿದ್ವಾಂಸರ ಮತ[41]. ಇಲ್ಲಿ ಶಾಸನಗಳಿರದ ಹಳ್ಳಿಗಳಿಲ್ಲ. ಅವುಗಳನ್ನು ಅನಾದರಿಸದ ಹಳ್ಳಿಗಳಿಲ್ಲ[42]. ಕಾಲ ಕಳೆದಂತೆ, ಲಿಪಿ ಮತ್ತು ಭಾಷೆಗಳು ಬೇರೆಯಾದಂತೆ, ಕಾಲದ ಕಿಮುಟ (crust) ಅವುಗಳಿಗೆ ಹಿಡಿದು, ಅವುಗಳಿಗೆ ಪ್ರಾಚೀನತೆಯ ವಿಚಿತ್ರವೇಷ ಬಂದಂತೆ ಅವುಗಳ ಸುತ್ತ ಜನರ ಮನಸ್ಸು ಮೂಢನಂಬಿಕೆಗಳ ಕಥೆಯನ್ನೇ ಕಟ್ಟಿತು. ತಮಗೂ ಅವುಗಳಿಗೂ ಸಂಬಂಧವಿಲ್ಲವೆಂದು ಕೆಲವು ಕಡೆ ಜನರು ಅವುಗಳನ್ನು ಅನಾದರಿಸಿದರು. ಕೆಲವೆಡೆ ಅವು ಮನೆಗಳ ಮೆಟ್ಟುಗಲ್ಲುಗಳಾದುವು. ಕೆಲವೆಡೆ ಅವು ಭೂತ ಪಿಶಾಚಿಗಳಿಗೆ ಸಂಬಂಧಿಸಿರಬೇಕೆಂದು ಜನರು ಅವುಗಳನ್ನು ಪೂಜಿಸಿದುದರ ಫಲವಾಗಿ ಕುಂಕುಮ ಎಣ್ಣೆಗಳಿಂದ ಅವುಗಳ ಮೇಲ್ಭಾಗ ಮುಚ್ಚಿಹೋಯಿತು. ಅವುಗಳನ್ನು ಓದಿದವರಿಗೆ ಗುಪ್ತಧನ ಸಿಗುವುದೆಂಬ ನಂಬಿಕೆ ಕೆಲವು ಜನರಲ್ಲಿ ರೂಢಮೂಲವಾಯಿತು. ಶಾಸನಗಳ ಸಂಗ್ರಹಕ್ಕೆಂದು ಹಳ್ಳಿಯಿಂದ ಹಳ್ಳಿಗೆ ಸಂಚರಿಸಿದ ಶ್ರೀ ಪಿ. ಬಿ. ದೇಸಾಯಿಯವರ ಮಾತುಗಳು ಈ ದೃಷ್ಟಿಯಿಂದ ಕೆಲಸಮಾಡಿದ ಎಲ್ಲರ ಅನುಭವಗಳನ್ನು ಪಡಿನುಡಿಯುತ್ತವೆ—

---

[41] Cousens: The Chalukyan Architecture, p. 140. ಫ್ಲೀಟ್ ಕೂಡ ಇದೇ ರೀತಿ ಅಭಿಪ್ರಾಯ ಪಡುತ್ತಾರೆ—"The Canarese Country, however, the richest of all in inscriptions...." (IA. IV. p. 176).

ಈಗ ಪ್ರಕಟವಾಗಿರುವ ಶಾಸನಗಳ ಸಂಖ್ಯೆ ಇನ್ನೂ ನಿರ್ದಿಷ್ಟವಾಗಿಲ್ಲ. ಶ್ರೀ ಕೆ. ನಾಗರಾಜ ಎಂಬುವರು ಸು. 26,000 ಎಂದು ಲೆಕ್ಕ ಹಾಕಿದ್ದಾರೆ (ಹೊಸಬೆಳಕು, ಪು. 28). ಶ್ರೀ ದೇಸಾಯಿ ಪಾಂಡುರಂಗರಾಯರು ಅಚ್ಚಾಗಿರುವ ಮತ್ತು ಅಚ್ಚಾಗದಿರುವ ಶಾಸನಗಳ ಸಂಖ್ಯೆ ಸುಮಾರು 21,000 ಎಂದು ಅಂದಾಜು ಮಾಡಿದ್ದಾರೆ. (ಪ್ರಬುದ್ಧಕರ್ಣಾಟಕ, 26.4, ಪುಟ 95-6). ಅವರು ನಿರ್ದೇಶಿಸದಿರುವ ಅಥವಾ ಅವರ ಕಣ್ಣಿಗೆ ಬೀಳದ ಆಕರಗಳಲ್ಲಿ ಸುಮಾರು 500 ಶಾಸನಗಳಿವೆಯೆಂದು ಇಟ್ಟುಕೊಂಡರೆ ಕರ್ನಾಟಕದ ಶಾಸನಗಳ ಸಂಖ್ಯೆ ಸುಮಾರ 21,500 ಎಂದು ಭಾವಿಸಬಹುದು. ಇನ್ನೂ ಸಂಗ್ರಹಿಸದಿರುವ, ಸಂಗ್ರಹಿಸಿದ್ದರೂ ಅಚ್ಚಾಗದಿರುವ ಸಾವಿರಾರು ಸಂಖ್ಯೆಯ ಶಾಸನಗಳಿವೆಯೆಂದು ಧಾರವಾಡ, ಮೈಸೂರುಗಳಲ್ಲಿರುವ ಶಾಸನ ಇಲಾಖೆಗಳ ವರದಿಗಳಿಂದ ತಿಳಿದುಬರುತ್ತದೆ. ಕ್ರಿ. ಶ. 450ರಿಂದ ಕ್ರಿ. ಶ. 1150ರ ವರೆಗಿನ ಸುಮಾರು 3,000 ಶಾಸನಗಳನ್ನು ನಮ್ಮ ಈ ನಿಬಂಧದಲ್ಲಿ ಬಳಸಿಕೊಳ್ಳಲಾಗಿದೆ.

[42] Cousens: The Chalukyan Architecture, p. 140.

"ನನ್ನ ಈ ತಿರುಗಾಟದ ಸಮಯದಲ್ಲಿ ಅನೇಕ ಜನರ ಮತ್ತು ಅವರ ಬದುಕಿನ ಪರಿಚಯವಾಯಿತು. ರಾಜಕೀಯ ವಾಗಿ ಮಾತ್ರವಲ್ಲ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾದ ಎಲ್ಲಾ ಜೀವನಕ್ಷೇತ್ರಗಳಲ್ಲೂ ಜನರು ಅಧೋಗತಿಗಿಳಿದಿದ್ದುದು ಕಂಡುಬಂದಿತು....ಪ್ರಾಚೀನ ಕಲಾಕೃತಿಗಳನ್ನು ಮೆಚ್ಚುವ ಮಾತು ಹಾಗಿರಲಿ, ಅವುಗಳ ವಿಷಯದಲ್ಲಿ ಔದಾಸೀನ್ಯ ಮತ್ತು ತಿರಸ್ಕಾರಗಳು ಅವರಲ್ಲಿ ಬೆಳೆದಿದ್ದುವು....ಅವರ ಮನೆಗಳ, ಹೊಲಗಳ ಮತ್ತು ದೇವಸ್ಥಾನಗಳ ಹತ್ತಿರವೇ ಇದ್ದ ಶಾಸನಗಳ ಗತಿ ಏನು? ಪ್ರಾಚೀನರು ಯಾವುದೋ ಗುರುತರವಾದ ಉದ್ದೇಶ ದಿಂದ ಅವುಗಳನ್ನು ಅಲ್ಲಿ ಸ್ಥಾಪಿಸಿದರು. ಈಗಿನ ಸ್ಥಿತಿಯಲ್ಲಿ ಅವುಗಳಲ್ಲಿ ಏನಿದೆ ಎಂಬುದನ್ನು ನಮ್ಮ ಜನ ತಿಳಿದಿರ ಬೇಕಿದ್ದಿತು ಎಂಬುದನ್ನು ನಿರೀಕ್ಷಿಸುವುದು ಸರಿಯಲ್ಲ. ಕೊನೆಯ ಪಕ್ಷ, ನಮ್ಮ ಜನ ಅವುಗಳ ಉದ್ದೇಶ ಮತ್ತು ಮಹತ್ವಗಳನ್ನಾದರೂ ಅರಿತು ಅವುಗಳನ್ನು ರಕ್ಷಿಸಬಹುದಾಗಿತ್ತು. ಆದರೆ ದುರದೃಷ್ಟವಶಾತ್ ಅವುಗಳ ವಿಷಯದಲ್ಲಿ ಅವರಿಗೆ ಬಹುವಾದ ಅಜ್ಞಾನವಿದ್ದಿತು. ಆ ಶಿಲಾಶಾಸನಗಳನ್ನು ಅವರು ನಾಶಪಡಿಸಿ ಬಾರದ ಕೆಲಸಕ್ಕೆಲ್ಲಾ ಬಳಸು ತ್ತಿದ್ದರು. ಅನೇಕ ಕಡೆ ಅವುಗಳ ವಿಷಯದಲ್ಲಿ ಮೂಢನಂಬಿಕೆ ಬೆಳೆದು, ಅವುಗಳಲ್ಲಿ ಗುಪ್ತಧನ ಸಂಗ್ರಹದ ವಿಧಾನವನ್ನು ಹೇಳಿದೆಯೆಂದು ನಂಬಿದ್ದರು. ಇದೆಲ್ಲವೂ ಸಮಾಜದ ಹೀನಸ್ಥಿತಿ ಮತ್ತು ಸಂಸ್ಕೃತಿಯ ಅವನತಿಗಳಿಗೆ ಸೂಚನೆಯಲ್ಲದೆ ಮತ್ತೇನು!".[43] ಇದೇ ಲೇಖಕರು ಪ್ರಾಚೀನ ಅವಶೇಷಗಳು ಕಾಲಕ್ರಮದಲ್ಲಿ ಜನರ ಮೂಢ ನಂಬಿಕೆಗಳಿಗೆ ಹೇಗೆ ಪಾತ್ರವಾಗುವುವೆಂಬುದಕ್ಕೆ ಕೆಲವು ನಿದರ್ಶನಗಳನ್ನು ಕೊಟ್ಟಿದ್ದಾರೆ. ಒಮ್ಮೆ ಪ್ರಸಿದ್ಧ ಜೈನ ಕೇಂದ್ರವಾಗಿದ್ದ ಗುಲ್ಬರ್ಗ ಜಿಲ್ಲೆಯ ಬಂಕೂರಿನ ವರ್ಧಮಾನ ತೀರ್ಥಂಕರನ ವಿಗ್ರಹವು ಈಗ "ಬತ್ತಲೆ ಗೌರಮ್ಮ" ಆಗಿದೆ. ಮಕ್ಕಳಾಗದ ಹೆಂಗಸರು ಅದನ್ನು ಪೂಜಿಸುತ್ತಾರೆ. ಹಿಂದೆ ಮಹಾವೀರ ತೀರ್ಥಂಕರನ ಪೀಠ ಹೊತ್ತಿದ್ದ ಸಿಂಹಗಳ ಶಿಲ್ಪವಿರುವ ಪೀಠವು ಈಗ "ಅಣಕಿಸುವ ಕಲ್ಲು" ಆಗಿದೆ. ಬಾಯಿ ಹುಣ್ಣಾಗಿರುವ ಹುಡುಗರು ಹೋಗಿ ಅದರ ಮುಂದೆ ನಿಂತು ಅಣಕಿಸಿದರೆ ಹುಣ್ಣು ವಾಸಿಯಾಗುತ್ತದೆ! ಮತ್ತೊಂದು ಜೈನ ವಿಗ್ರಹಗಳಿರುವ ಕಲ್ಲಿದೆ. ನರ ಉಳುಕಿದ್ದರೆ ಹೋಗಿ ಅದಕ್ಕೆ ತಿಕ್ಕಿದರೆ ಸಾಕು, ಉಳುಕು ವಾಸಿಯಾಗುತ್ತದೆ ಇತ್ಯಾದಿ. ಪ್ರಕೃತ ಲೇಖಕನ ಒಂದು ಅನುಭವ ಸ್ವಾರಸ್ಯವಾಗಿದೆ. ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ತಾಲ್ಲೂಕಿನಲ್ಲಿ ಒಂದು ಕತೆ ಪ್ರಚಾರದಲ್ಲಿದೆ. ಹಿಂದೆ ಯಾವನೋ ಒಬ್ಬ ತನ್ನ ಸೋದರಿಯನ್ನು ಕಾಲಲ್ಲಿ ಒದ್ದನೆಂದೂ, ಅದರ ಪರಿಣಾಮವಾಗಿ ಅವನ ಕಾಲಲ್ಲಿ ಗಾಯವಾಗಿ ಹುಳುಗಳಾದುವೆಂದೂ, ಆಗ ಸೋದರಿಯೇ ಕರುಣೆಯಿಂದ ಹುಳುಗಳನ್ನು ಇಕ್ಕುಳದಿಂದ ಕಿತ್ತಳೆಂದೂ ಕತೆಯನ್ನು ಹೇಳಿ, ಅದನ್ನು ಸೂಳೆಕೆರೆಯ (ಈಗ ಶಾಂತಿಸಾಗರ) ಹತ್ತಿರದ ಶಿಲ್ಪವೊಂದರಲ್ಲಿ ಬಿಡಿಸಿ ತೋರಿಸ್ಸಾ ರೆಂದೂ ಹೇಳುತ್ತಾರೆ. ಅಣ್ಣ ತನ್ನ ತಂಗಿಗೋ, ಅಕ್ಕನಿಗೋ ತೊಂದರೆ ಕೊಟ್ಟಾಗ ಚಿಕ್ಕಹುಡುಗರು ಕೋಪದಿಂದ ಹೆಣ್ಣು ಮಕ್ಕಳನ್ನು ಕಾಲಲ್ಲಿ ಹೊಡೆದರೆ ಮೇಲಿನ ಕತೆಯನ್ನು ಹೇಳಿ ಹಿರಿಯರು ಬೆದರಿಸುತ್ತಾರೆ. ಒಮ್ಮೆ ಈ ವಿಷಯದಲ್ಲಿ ಕುತೂಹಲ ಹುಟ್ಟಿ ಹೋಗಿ ಶಿಲ್ಪವನ್ನು ನೋಡಿದಾಗ ಕಂಡದ್ದು ರೋಗಿಷ್ಠನಾದ ಅಣ್ಣನನ್ನಲ್ಲ, ಶೇಷಶಾಯಿಯಾದ ಲಕ್ಷ್ಮೀನಾರಾಯಣನನ್ನು. ಲಕ್ಷ್ಮಿಯು ಕಾಲಬಳಿ ಕುಳಿತು ವಿಷ್ಣುವಿನ ಪಾದವನ್ನು ಒತ್ತುತ್ತಿ ದ್ದಾಳೆ. ಹರಿಹರದ ಬಳಿಯ ಭಾನುವಳ್ಳಿಯಲ್ಲಿ ಒಂದು ಸೊಗಸಾದ ದೊಡ್ಡ ಶಾಸನವಿದೆ. ಅದನ್ನು ಓದಿದವರಿಗೆ ಕೊಪ್ಪರಿಗೆ ಹಣ ಸಿಗುವುದೆಂದು ಜನ ಈಗಲೂ ನಂಬಿದ್ದಾರೆ. ಅನೇಕ ಹಳ್ಳಿಗಳಲ್ಲಿ ಹೆಚ್ಚು ಕಡಮೆ ಎಲ್ಲಾ ಶಾಸನಗಳನ್ನೂ ಹೀಗೆಯೇ ಭಾವಿಸುತ್ತಾರೆ. ಈಗ ಶಾಸನಗಳನ್ನು ಓದಿದ್ದಾರೆ, ಆದರೆ ಕೊಪ್ಪರಿಗೆ ಹಣಕ್ಕಿಂತ ಅಮೂಲ್ಯವಾದ ನಮ್ಮ ಸಂಸ್ಕೃತಿ ನಮಗೆ ದೊರಕಿದೆಯೆಂಬುದು ಅವರಿಗೆ ಗೊತ್ತಿಲ್ಲ.

ಶಾಸನಗಳಲ್ಲಿ ಇಲ್ಲದೆ ಇರುವ ವಿಷಯವಿಲ್ಲ. ಆ ಕಾಲದ ಭಾಷಾಸ್ವರೂಪವನ್ನು ತಿಳಿಯಲು ಶಾಸನ ಗಳಿಗಿಂತ ಉತ್ತಮ ಸಾಧನವಿಲ್ಲ. ಕವಿಗಳು ಯಾವ ಕಾಲದವರೇ ಆಗಿರಲಿ ತಮ್ಮ ಕಾವ್ಯಭಾಷೆಯು ಪ್ರೌಢವಾಗಿರಬೇಕೆಂಬ ಬಯಕೆಯಿಂದ ತಮಗಿಂತ ಹಿಂದಿನ ಭಾಷೆಯನ್ನು ಬಳಸಬಹುದು. ಹಳಗನ್ನಡದ

[43] Jainism in South India and some Jaina Epigraphs, pp. 176–7.

ಗದ್ಯಗ್ರಂಥ 'ವಡ್ಡಾರಾಧನೆ' ಯ ಭಾಷೆಯು ಎಷ್ಟು ಪ್ರಾಚೀನ ಎಂಬ ಭಾವನೆ ಬರುತ್ತದೆಯೋ ಅಷ್ಟು ಪ್ರಾಚೀನವಲ್ಲ ಆ ಗ್ರಂಥ. ನಡುಗನ್ನಡದ ಕಾಲದಲ್ಲಿ, ಅಷ್ಟೇಕೆ ಆಧುನಿಕ ಕಾಲದಲ್ಲಿಯೂ ಎಷ್ಟೋ ಕವಿಗಳು ಕಾವ್ಯಗಳನ್ನು ಹಳಗನ್ನಡದಲ್ಲಿಯೇ ರಚಿಸಿದ್ದಾರೆ. ಶಾಸನಗಳಲ್ಲಿ ಹೀಗಾಗಿರುವುದು ಕಡಮೆ. ಇಲ್ಲಿಯೂ ಪ್ರೌಢರಾದ ಕವಿಗಳು ತಮಗುಚಿತ ಪ್ರಾಚೀನವಾದ ಭಾಷೆಯನ್ನು ಬಳಸಿರುವುದುಂಟು. ಆದರೂ ಸ್ವಲ್ಪ ಎಚ್ಚರಿಕೆ ವಹಿಸಿ ಶಾಸನಾಭ್ಯಾಸವನ್ನು ಮಾಡಿದರೆ, ಆ ಕಾಲದ ಭಾಷಾ ಸ್ವರೂಪವನ್ನು ಹೆಚ್ಚು ಖಚಿತವಾಗಿ ತಿಳಿಯಬಹುದು.[44] ಎಷ್ಟೋ ಶಾಸನಗಳು ಜನರ ಆಡುಮಾತಿಗೆ ಬಹಳ ಹತ್ತಿರವಾಗಿರುತ್ತವೆ.

ಭರತಖಂಡದ ಇತಿಹಾಸವನ್ನು ರೂಪಿಸುವುದರಲ್ಲಂತೂ ಶಾಸನಗಳೇ ಪ್ರಮುಖ ಆಧಾರ. ವಿದ್ವಾಂಸರೊಬ್ಬರು ಹೇಳಿರುವಂತೆ ಶಾಸನಗಳು "ಪ್ರಾಚೀನ ಭಾರತದ ಕಾಲಾನುಕ್ರಮಣಿಕೆಯ (Chronology) ಏಕೈಕ ಬಿಣ್ಣುಗಂಡು (Sheet anchor)."[45] ಮನುಷ್ಯನ ಇತಿಹಾಸದ ವಿಷಯದಲ್ಲಿ ನಮಗಿರುವ ಜ್ಞಾನವೆಲ್ಲ, ಜ್ಞಾತದಿಂದ ಅಜ್ಞಾತಕ್ಕೆ ಹೋಗಿ ಸಂಪಾದಿಸಿದುದು. ಈ 'ಜ್ಞಾತ'ವಾದುದೆಲ್ಲವೂ ಬಹುಮಟ್ಟಿಗೆ ಎಲ್ಲಾ ದೇಶಗಳಲ್ಲಿಯೂ ಶಾಸನಗಳಿಂದ ತಿಳಿದುಬರುತ್ತದೆ. ದಿಸ್ಕಲ್ಕರ್ ಎಂಬ ವಿದ್ವಾಂಸರ ಮಾತುಗಳು ಇಲ್ಲಿ ಉಲ್ಲೇಖಾರ್ಹವಾಗಿವೆ.— "ಭಾರತೀಯ ಸಂಸ್ಕೃತಿಯನ್ನು ಅಧ್ಯಯನಮಾಡುವವರಿಗೆ ಸಂಸ್ಕೃತ ಸಾಹಿತ್ಯದಂತೆಯೇ ಶಾಸನ ಸಾಹಿತ್ಯವೂ ವಿಷಯದ ಗಣಿಯಾಗಿದೆ. ಭಾರತೀಯರ ಜೀವನ ಮತ್ತು ಆಲೋಚನೆಗಳ ಬೇರೆ ಬೇರೆ ಕೋನಗಳ ಮೇಲೆ ಅವು ಸಾಕಷ್ಟು ಬೆಳಕನ್ನು ಬೀರುತ್ತವೆ. ಭಾರತೀಯ ಸಂಸ್ಕೃತಿಯ ಐಕ್ಯತೆಯನ್ನು ಕಾಪಾಡುವುದರಲ್ಲಿ ಇವು ಪ್ರಧಾನ ಪಾತ್ರವನ್ನು ವಹಿಸಿವೆ. ಪ್ರಾಚೀನ ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸದ ಅಭ್ಯಾಸಗಳು ತಮ್ಮ ಜ್ಞಾನದ ಕೊರತೆಯನ್ನು ಶಾಸನಗಳ ಅಭ್ಯಾಸದಿಂದ ಹೋಗಲಾಡಿಸಿಕೊಳ್ಳಬಹುದು."[46]

ನಮ್ಮ ನಾಡಿನ ಜನಜೀವನವು ಶಾಸನಗಳಲ್ಲಿ ಅಭಿವ್ಯಕ್ತಗೊಂಡಿರುವಂತೆ ಪ್ರಾಯಶಃ ಇನ್ನೆಲ್ಲೂ ವ್ಯಕ್ತವಾಗಿಲ್ಲ. ಶಾಸನಗಳಿಂದ ರಾಜರ ಇತಿಹಾಸವನ್ನು, ಅವರು ಪರಸ್ಪರ ನಡೆಯಿಸಿದ ಘೋರಯುದ್ಧಗಳನ್ನು, ಅವರ ಕಾಲ್ಪನಿಕ ಪ್ರಶಂಸೆಗಳನ್ನು ಮಾತ್ರ ಅರಿಯಬಹುದೇ ಹೊರತು, ಆ ಕಾಲದ ಒಳ ಆಡಳಿತ, ವ್ಯಾಪಾರ, ಸಾಮಾಜಿಕ ವ್ಯವಸ್ಥೆಗಳು, ಧಾರ್ಮಿಕ ಪರಿವರ್ತನೆಗಳು ಮತ್ತು ತಿಕ್ಕಾಟಗಳು—ಈ ವಿಷಯಗಳಲ್ಲಿ ಶಾಸನಗಳಿಂದ ನಮಗೆ ಯಾವ ಉಪಯೋಗವೂ ಇಲ್ಲವೆಂಬ ಭಾವನೆ ಒಬ್ಬಿಬ್ಬರು ವಿದ್ವಾಂಸರಲ್ಲಿ ಇದ್ದಿತು.[47] ಆದರೆ ಈ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯಗಳೂ ಒಂದೆರಡು ಕಡೆ ಕಾಣಿಸಿಕೊಂಡಿದ್ದುವು. ಶಾಸನಗಳೇನಿದ್ದರೂ ಜನರ ನೀತಿ, ನಡವಳಿಕೆಗಳು, ಮತತತ್ವಗಳು, ಅವರ ಕಲೆಗಳು—ಈ ವಿಷಯಗಳನ್ನು ತಿಳಿಸಬಹುದೇ ಹೊರತು "ಇಲ್ಲಿ ಆಳಿದ ರಾಜರು, ಅವರಿಗೆ ಸಂಬಂಧಿಸಿದ ಯುದ್ಧಸಂಗತಿಗಳು, ಬೇರೆ ಬೇರೆ ರಾಜನೀತಿಗಳ ಪರಿಣಾಮಗಳು—ಈ ವಿಷಯಗಳನ್ನು ಶಾಸನಾಧ್ಯಯನದಿಂದ ಪಡೆಯಬಹುದೆಂಬ ಅಪೇಕ್ಷೆಯು

---

44 ಶಾಸನಗಳ ಆಧಾರದ ಮೇಲೆ ಹಳಗನ್ನಡ ಭಾಷೆಯ ವಿವರಣಾತ್ಮಕ ವ್ಯಾಕರಣಗಳನ್ನು ಡಾ|| ಎ. ಎನ್. ನರಸಿಂಹಯ್ಯ ನವರು ಮತ್ತು ಡಾ|| ಜಿ. ಎಸ್. ಗಾಯಿ ಅವರು ಬರೆದಿದ್ದಾರೆ.

45 Dixit : An Introduction to Archaeology, P. 36. ಫ್ಲೀಟ್ ಅವರು ಹಿಂದೆಯೇ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು—"Not only is India particularly rich in inscriptions, but also those remains are the only sure grounds of historical results in every line of research connected with its ancient past." (The Imperial Gazetteer of India, II, P. I)

46 Journal of Indian History, XXXVII (1959), pp. 319-20.

47 Henry Cousens : The Chalukyan Architecture, p. 2.

ನಿರೀಕ್ಷೆಗೆ ಮೀರಿದ್ದು.''[48] ಶಾಸನಗಳು ಆಗತಾನೇ ಪ್ರಕಟವಾಗಲಾರಂಭವಾಗಿದ್ದ ಕಾಲದಲ್ಲಿ ಈ ಅಭಿಪ್ರಾಯ ಗಳು ಹೊರಬಂದಿವೆ ಎಂಬುದನ್ನು ನಾವು ಮರೆಯಬಾರದು. ಹೆಚ್ಚು ಹೆಚ್ಚಾಗಿ ಶಾಸನಗಳು ಪ್ರಕಟವಾಗಿ ಅವುಗಳನ್ನು ಆಳವಾಗಿ ಅಧ್ಯಯನಮಾಡಿದ್ದಿದ್ದರೆ ಇಂತಹ ಅಭಿಪ್ರಾಯಗಳು ಹೊರಬರುತ್ತಿರಲಿಲ್ಲವೆಂಬುದನ್ನು ನಾವು ನೆನಪಿಡಬೇಕು. ಶಾಸನಗಳು ಯಾವ ವಿಷಯಗಳನ್ನು ಪ್ರಧಾನವಾಗಿ ನಿರೂಪಿಸಲು ಹೊರಟಿರು ತ್ತವೆಯೋ ಅವುಗಳಿಗಿಂತ, ಅನುದ್ದೇಶಪೂರ್ವಕವಾಗಿಯೋ, ಪ್ರಾಸಂಗಿಕವಾಗಿಯೋ ಅವು ಕೊಡುವ ವಿವರಗಳು ನಮಗೆ ಬಹು ಅಮೂಲ್ಯವಾಗಿರುತ್ತವೆ. ಉದಾಹರಣೆಗೆ ಯಾವುದೋ ದಾನದ ವಿಷಯವನ್ನು ಹೇಳಲು ಹೊರಟ ಶಾಸನವು ಆ ಕಾಲದ ಬೇರೆ ಬೇರೆ ತೆರಿಗೆಗಳು, ಅವುಗಳನ್ನು ಸಂಗ್ರಹಿಸುತ್ತಿದ್ದ ಅಧಿಕಾರಿಗಳು, ವ್ಯಾಪಾರ, ಊರು ಮತ್ತು ಅಗ್ರಹಾರಗಳ ಆಡಳಿತ, ಆ ಕಾಲದ ಧಾರ್ಮಿಕ ಮನೋಭಾವ—ಇತ್ಯಾದಿ ವಿಷಯ ಗಳನ್ನು ತಿಳಿಸಬಹುದು. ಶಾಸನಗಳನ್ನು ರಾಜಕೀಯ ಇತಿಹಾಸದ ದೃಷ್ಟಿಯಿಂದ ತಕ್ಕಮಟ್ಟಿಗೆ ಅಧ್ಯಯನ ಮಾಡಿದ್ದಾರೆ. ಆದರೆ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಅವುಗಳ ಅಭ್ಯಾಸ ಇನ್ನೂ ಸಮರ್ಪಕವಾಗಿ ನಡೆಯಬೇಕಾಗಿದೆ.[49]

ಎಲ್ಲವನ್ನೂ ಆಲಂಕಾರಿಕವಾಗಿ, ಛಂದೋಬದ್ಧವಾಗಿ ಹೇಳಬೇಕೆಂಬ ಪ್ರವೃತ್ತಿ ಪ್ರಾಚೀನ ಭಾರತೀಯ ರಲ್ಲಿ ರಕ್ತಗತವಾಗಿದ್ದಿತು. (ಆದ್ದರಿಂದಲೇ ನಮ್ಮಲ್ಲಿ ಐತಿಹಾಸಿಕ ಗ್ರಂಥಗಳ ಕೊರತೆ ಕಂಡುಬರುವುದು.) ಕಾವ್ಯಗ್ರಂಥಗಳಂತೂ ಸರಿಯೇ.[50] ಧಾರ್ಮಿಕ ಗ್ರಂಥಗಳೂ, ಶಾಸ್ತ್ರಗ್ರಂಥಗಳೂ, ಕೊನೆಗೆ ಕೇವಲ ವಿಷಯ ಪ್ರಧಾನವಾದ ವ್ಯಾಕರಣ ಗ್ರಂಥಗಳೂ ಛಂದೋಬದ್ಧವಾಗಿರುತ್ತವೆ. ಹೇಳುವುದನ್ನು ಸೊಗಸಾಗಿ ಹೇಳಬೇಕೆಂಬ ದೃಷ್ಟಿ ಮೆಚ್ಚಬೇಕಾದುದೇ. ಆದರೆ ಇದನ್ನು ಒಂದು ಅತಿರೇಕಕ್ಕೆ ತೆಗೆದುಕೊಂಡುಹೋದದ್ದು ಭಾರತೀಯರ ದೌರ್ಬಲ್ಯವೆಂದೇ ಹೇಳಬೇಕಾಗುತ್ತದೆ. ಈ ಅತಿರೇಕವು ನಮ್ಮ ಶಾಸನಗಳಲ್ಲಿಯೂ ಒಮ್ಮೊಮ್ಮೆ ತಲೆಹಾಕಿರು ವುದುಂಟು. ನಮ್ಮಲ್ಲಿ ಶುದ್ಧ ಐತಿಹಾಸಿಕ ಶಾಸನಗಳ ಸಂಖ್ಯೆ ಕಡಮೆ. ಅಲಹಾಬಾದಿನಲ್ಲಿರುವ ಹರಿಷೇಣ ಕೃತವಾದ ಸಮುದ್ರಗುಪ್ತನ ಸ್ತಂಭಶಾಸನ, ವಾಸುಲಕೃತವಾದ ಯಶೋಧರ್ಮನ ಮಂದಸೋರ್ ಸ್ತಂಭ ಶಾಸನಗಳು ಕೇವಲ ಪ್ರಶಸ್ತಿಗಳಾದರೂ ಇವೂ ಕೂಡ ಯಾವುದೋ ಧಾರ್ಮಿಕ ಸನ್ನಿವೇಶದಲ್ಲಿ ರಚಿತವಾಗಿದ್ದರೆ ಆಶ್ಚರ್ಯವಿಲ್ಲ. ಕರ್ನಾಟಕದಲ್ಲಿಯಂತೂ ಇಂತಹ ಶಾಸನಗಳ ಸಂಖ್ಯೆ ಬಹಳ ಕಡಮೆಯೆಂದೇ ಹೇಳಬಹುದು. ಐಹೊಳೆಯ ಪುಲಿಕೇಶಿಯ ಶಾಸನದ ಬಹುಭಾಗವು ಅವನ ದಿಗ್ವಿಜಯವನ್ನು ಕುರಿತದ್ದಾದರೂ ಅದರ ಮುಖ್ಯ

---

48 H.T. Colebrooke : [Asiatick Researches, IX (1807), p. 398].

49 "........ --There is still a wide scope for the study of those records in regard to the religious, social and educational activities that were current in the early period and it is hoped that the scholarly public will derive benefit by a careful and detailed study of these epigraphs."

[Bombay Karnataka Inscriptions, I. i. P. X.]

50 ಬಾಣಭಟ್ಟನಂತಹ ಕವಿಯ ಗದ್ಯವೂ ಎಷ್ಟೋಸಾರಿ ಲಯಬದ್ಧವಾಗಿರುವುದುಂಟು. ಬಾಣಭಟ್ಟನ ಗದ್ಯದಲ್ಲಿ ಛಂದೋಲಯವನ್ನು ಕಂಡುಕೊಂಡು ಆ ಗದ್ಯದ ಸಾಲುಗಳನ್ನು ಹಾಗೆಯೇ ತೆಗೆದುಕೊಂಡು ತನ್ನ ವೃತ್ತಗಳಲ್ಲಿ ಪಂಪಕವಿ ಸೇರಿಸಿಕೊಂಡಿದ್ದಾನೆ ಎಂದು ಪ್ರೊ॥ ಡಿ. ಎಲ್. ನರಸಿಂಹಾಚಾರ್ಯರು ಹೇಳುತ್ತಾರೆ. ಉದಾಹರಣೆಗೆ ಆದಿಪುರಾಣದ "ಭಟಖಡ್ಗಮಂಡಲೋತ್ಪಲವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ" ಎಂಬ ಪದಪುಂಜವನ್ನು ನೋಡ ಬಹುದು (ಜ್ಞಾನೋಪಾಸಕ, ಪು. 88). ಇದಕ್ಕೆ ಮೂಲ "ಖಡ್ಗಮಂಡಲೋತ್ಪಲವನ ವಿಭ್ರಮ ಭ್ರಮರೀ ಲಕ್ಷ್ಮೀಃ" ಎಂಬ ಬಾಣನ ವಾಕ್ಯ. ಈ ವಾಕ್ಯಕ್ಕೆ "ಸುಭಟ ಖಡ್ಗಮಂಡಲೋತ್ಪಲವನ ವಿಭ್ರಮ ಭ್ರಮರೀ ಲಕ್ಷ್ಮೀಃ" ಎಂಬ ಪಾಠಾಂತರವಿದೆ (ನೋಡಿ–ಕಾದಂಬರೀ, ನಿರ್ಣಯಸಾಗರ ಮುದ್ರಣ, 1948, ಪು. 225). ಈ ಎರಡನೆಯ ಪಾಠವನ್ನೇ ಪಂಪ ಅನುಸರಿಸಿರುವುದು, ಮತ್ತು ಈ ಪಾಠವೇ ಸೊಗಸಾದುದು.

ಉದ್ದೇಶ, ಆ ಶಾಸನದ ಕರ್ತೃವಾದ ರವಿಕೀರ್ತಿಯು ಐಹೊಳೆಯಲ್ಲಿ ಜಿನಾಲಯವನ್ನು ಕಟ್ಟಿಸಿದ ವಿಷಯವನ್ನು ನಿರೂಪಿಸುವುದೇ ಆಗಿದೆ. ಕನ್ನಡ ಶಾಸನವೊಂದರಲ್ಲಿ ಯಾವ ಬೇರೆಯ ವಿಷಯವನ್ನೂ ಹೇಳದೆ, ಕೇವಲ ಜೈನ ಗುರುಪರಂಪರೆಯನ್ನು ಮಾತ್ರ ಕೊಟ್ಟು ಕೊನೆಯಲ್ಲಿ ನೇಮಿಚಂದ್ರ ಪಂಡಿತದೇವ ಎಂಬುವನನ್ನು ಬಹುವಾಗಿ ಪ್ರಶಂಸೆಮಾಡಲಾಗಿದೆ.[51] ಇದನ್ನು 'ಪ್ರಶಸ್ತಿಶಾಸನ'ವೆಂದು ಕರೆಯಬಹುದಾದರೆ ಅನೇಕ ನಿಸಿದಿ ಕಲ್ಲುಗಳನ್ನೂ, ವೀರಗಲ್ಲು ಮಾಸ್ತಿಗಲ್ಲುಗಳನ್ನೂ ಅದೇ ಹೆಸರಿನಿಂದ ಕರೆಯಬೇಕಾಗುತ್ತದೆ. ಮಂಗಳೇಶನ ಸಂಸ್ಕೃತ ಭಾಷೆಯ ಮಹಾಕೂಟ ಸ್ತಂಭಶಾಸನದಲ್ಲಿ[52] ಅವನ ದಿಗ್ವಿಜಯದ ವರ್ಣನೆ ಇದ್ದರೂ ಮಕುಟೇಶ್ವರನಾಥ ದೇವರಿಗೆ[53] ಹತ್ತು ಹಟ್ಟಿಗಳನ್ನು ದತ್ತಿಯಾಗಿ ಕೊಡಲು ತನ್ನ ಮಲತಾಯಿ ದುರ್ಲಭದೇವಿಗೆ ಅಧಿಕಾರವನ್ನು ಬಿಟ್ಟುಕೊಟ್ಟ ವಿಷಯವೇ ಮುಖ್ಯವಾದುದು. ಕೇವಲ ಪ್ರಶಸ್ತಿಗಳನ್ನೇ ಹೇಳುವ ತಾಮ್ರಪಟಗಳು ಇದ್ದುವು ಎನ್ನುವುದಕ್ಕೆ ನಮಗೆ ಕೆಲವು ನಿದರ್ಶನಗಳು ಸಿಕ್ಕುತ್ತವೆ. ಚಾಳುಕ್ಯರ ದೀರ್ಘ ಶಾಸನವೊಂದರ ಆರಂಭದಲ್ಲಿ ಆ ರಾಜರ ಇತಿಹಾಸವನ್ನು ಸಂಸ್ಕೃತದಲ್ಲಿ ಹೇಳಿ "ಇದು ತಾಂಬ್ರ ಶಾಸನದೊಳ್ ಇಟ್ಟ ಚಾಳುಕ್ಯ ಚಕ್ರವರ್ತಿಗಳ ವಂಶದ ರಾಜ್ಯಂಗೆಯ್ದರಸುಗಳ ರಾಜಾವಳಿ ಮಂಗಳ" ಎಂದಿದೆ.[54] ಇದರ ಜೊತೆಯಲ್ಲಿ EI. xii. p. 150ರಲ್ಲಿ ಪ್ರಕಟವಾಗಿರುವ ಕ್ರಿ.ಶ. 1087ರ ತಾಮ್ರಪಟವನ್ನು ಹೋಲಿಸಬಹುದು. ಆರಂಭದ ರಾಜಾವಳಿಯ ಭಾಗವು ಎರಡರಲ್ಲಿಯೂ ಒಂದೇ. ಎಂದರೆ ಶಾಸನಗಳಲ್ಲಿ ಮತ್ತು ತಾಮ್ರಪಟಗಳಲ್ಲಿ ರಾಜರ ಇತಿಹಾಸವನ್ನು ವರ್ಣಿಸುವಾಗ ಅನ್ಯರಿಂದ ರಚಿತವಾದ 'ರಾಜಾವಳಿ'ಯನ್ನಿಟ್ಟುಕೊಂಡು ಪ್ರತಿಮಾಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಇಂತಹ 'ರಾಜಾವಳಿ'ಗಳು ನಮಗೆ ಈಗ ದುರ್ಲಭವಾಗಿವೆ.

ಹಾಗೆಯೇ ಬರಿಯ ಕಾವ್ಯಗಳಾಗಿರುವ ಶಾಸನಗಳ ಸಂಖ್ಯೆಯೂ ಕಡಮೆ. ಎಂಟನೆಯ ಶತಮಾನದ ಉದಯಮಾನನ ದೂಧ್‌ಪಾನಿ ಪ್ರಸ್ತರ ಶಾಸನವು (Rock-edict) ತುಂಬಾ ಕಾವ್ಯಮಯವಾಗಿದ್ದು ಅನೇಕ ಪೌರಾಣಿಕವಾದ ವಿಷಯವನ್ನೊಳಗೊಂಡಿದೆ.[55] ಈ ಪ್ರಸ್ತರ ಶಾಸನವು ಸಂಸ್ಕೃತ ಭಾಷೆಯಲ್ಲಿದೆ. ಕೊನೆಯ ಚೋಳರಾಜನಾದ ಮೂರನೇ ಕುಲೋತ್ತುಂಗನ ತ್ರಿಭುವನಂ ಸಂಸ್ಕೃತ ಶಾಸನವು ಬರಿಯ ಕಾವ್ಯ. ಅದರಲ್ಲಿ ಐತಿಹಾಸಿಕಾಂಶವೇನೂ ಇಲ್ಲ.

ಕರ್ನಾಟಕದ ಎಷ್ಟೋ ಶಾಸನಗಳು ಪದ್ಯಮಯವಾಗಿವೆ. ಎಷ್ಟೋ ಕವಿಗಳ ಪ್ರತಿಭೆಯ ಪ್ರಕಾಶನಕ್ಕೆ ನೆರವಾಗಿವೆ. ಅನೇಕ 'ಸಹಜಕವಿ'ಗಳೂ 'ವಿಬುಧಕವಿ'ಗಳೂ ಪದ್ಯಗಳನ್ನು ಬರೆದು, ಇಷ್ಟವಿರಲಿ, ಇಲ್ಲದಿರಲಿ ಅನೇಕ ವ್ಯಕ್ತಿಗಳನ್ನು ಹೊಗಳಿದ್ದಾರೆ. ಕರ್ನಾಟಕದ ರವಿಕೀರ್ತಿಯಂತಹ ಪ್ರಸಿದ್ಧ ಸಂಸ್ಕೃತ ಕವಿಯ ಕಾವ್ಯ ಈಗ ಬರಿಯ ಶಾಸನದಲ್ಲಿ[56] ಮಾತ್ರ ಉಳಿದುಕೊಂಡಿದೆ. ಇವನು ತನ್ನನ್ನು 'ಮತಿಮಾನ್' ಎಂದು ಕರೆದುಕೊಂಡಿದ್ದಾನೆ. ತಾನು ಕಾವ್ಯರಚನೆಯಲ್ಲಿ ಕಾಳಿದಾಸ, ಭಾರವಿಗಳಿಗೆ ಸಮಾನನೆಂದು ಹೇಳಿಕೊಂಡಿದ್ದಾನೆ. ("ರವಿಕೀರ್ತಿಃ ಕವಿತಾಶ್ರಿತ ಕಾಳಿದಾಸ ಭಾರವಿ ಕೀರ್ತಿಃ"). ಇವನ ಸಂಸ್ಕೃತ ಪ್ರೌಢಶೈಲಿಯನ್ನು ಅನೇಕರು ಮೆಚ್ಚಿದ್ದಾರೆ. ಆದರೂ ಇವನು ಕಾಳಿದಾಸ ಭಾರವಿಗಳಿಗೆ ಸಮಾನನೆಂಬುದು ಸಂದೇಹಾಸ್ಪದವೇ. ಇವನ ಶಾಸನದ ಕಾಲ ಕ್ರಿ. ಶ. 634 (ಕಾಳಿದಾಸನ ಕಾಲದ ಚರ್ಚೆಯಲ್ಲಿ ಇದನ್ನು ಇತ್ತೀಚಿನ ನಿರ್ದಿಷ್ಟಮಿತಿಯೆಂದು ಭಾವಿಸುತ್ತಾರೆ.)

---

[51] JISI. No. 6, 1138 A.D.

[52] IA. XIX. p. 7, 602 A.D.

[53] ಬಾದಾಮಿಯ ಬಳಿ ಇರುವ ಈಗಿನ ಮಹಾಕೂಟೇಶ್ವರನ ನಿಜವಾದ ಹೆಸರು 'ಮಕುಟೇಶ್ವರ' ಎಂಬುದು.

[54] EI. XII. p. 274, 1077 A.D.

[55] EI. II. p. 343.

[56] IA. VIII. p. 241.

ಐಹೊಳೆಗೆ ಸಮೀಪದಲ್ಲಿರುವ ಮಹಾಕೂಟದಲ್ಲಿ ಮಂಗಲೇಶನ ಸ್ತಂಭ ಶಾಸನವೊಂದಿದೆ.[57] ಇದರ ಕಾಲ ಕ್ರಿ.ಶ. 602 ಎಂದು ಫ್ಲೀಟರು ನಿರ್ಧರಿಸಿದ್ದಾರೆ.[58] ಮಂಗಲೇಶ ಪುಲಿಕೇಶಿಯ ಚಿಕ್ಕಪ್ಪ. ಆ ಶಾಸನದಲ್ಲಿ ಮಂಗಲೇಶ ನನ್ನು ಬಹುವಾಗಿ ಪ್ರಶಂಸಿಸಿ, ಕಾಳಿದಾಸನ ರಘುವಂಶದ ಶ್ಲೋಕವೊಂದರ ಭಾಗಗಳನ್ನು ಯಥಾವತ್ತಾಗಿ ಉದ್ಧರಿಸ ಲಾಗಿದೆ.[59] ಈ ಸ್ತಂಭಶಾಸನದ ಕರ್ತೃ ಯಾರೋ ತಿಳಿಯದು. ಈ ಸ್ತಂಭಶಾಸನವು ಸಂಸ್ಕೃತದಲ್ಲಿದ್ದು ಪ್ರೌಢ ಶೈಲಿಯಲ್ಲಿದೆ. ರವಿಕೀರ್ತಿಯು ತನ್ನ ಶಾಸನವನ್ನು ರಚಿಸುವ ಹೊತ್ತಿಗೆ (ಕ್ರಿ. ಶ. 634) ಪುಲಿಕೇಶಿಯು ತನಗೆ ತನ್ನ ಚಿಕ್ಕಪ್ಪನು ರಾಜ್ಯವನ್ನು ಒಪ್ಪಿಸದಿದ್ದುದರಿಂದ ಅವನನ್ನು ಸೋಲಿಸಿ ಪಟ್ಟಕ್ಕೆ ಬಂದಿದ್ದನು. (ಯುದ್ಧದಲ್ಲಿ ಮಂಗಲೇಶನು ಮಡಿದನು ಎಂದು ಶಾಸನವು ತಿಳಿಸುತ್ತದೆ). ಇಲ್ಲಿ ಒಂದು ಸಣ್ಣ ಊಹೆಯನ್ನು ಮಾಡಬಹುದು. ಬಿಜಾಪುರ ಜಿಲ್ಲೆಯಲ್ಲಿರುವ ಐಹೊಳೆ ಮತ್ತು ಮಹಾಕೂಟಗಳೆರಡೂ ಸುಮಾರು ಏಳು ಮೈಲಿಗಳ ಅಂತರದಲ್ಲಿವೆ. ಎರಡು ಶಾಸನಗಳೂ ಸಂಸ್ಕೃತ ಪ್ರೌಢ ಕಾವ್ಯಗಳಂತಿವೆ. ಕ್ರಿ. ಶ. 602ರ ಹೊತ್ತಿನಲ್ಲಿ ರವಿಕೀರ್ತಿಯು ಮಂಗ ಲೇಶನ ಆಶ್ರಯದಲ್ಲಿ ತರುಣ ಕವಿಯಾಗಿದ್ದು ಅವನೇ ಮಹಾಕೂಟಶಾಸನವನ್ನು ರಚಿಸಿದ್ದರೂ ರಚಿಸಿರಬಹುದು. ತರುಣಕವಿಗಳಿಗೆ ಸಹಜವಾದ ರೀತಿಯಲ್ಲಿ ಅವನು ಕಾಳಿದಾಸಾದಿ ಮಹಾಕವಿಗಳನ್ನು ಅನುಕರಣೆ ಮಾಡುತ್ತಿದ್ದಿರ ಬಹುದು, ಅವರ ಉಕ್ತಿಗಳನ್ನು ತನ್ನ ರಚನೆಗಳಲ್ಲಿ ಉದ್ಧರಿಸುತ್ತಿದ್ದಿರಬಹುದು. ಮುಂದೆ ಪುಲಿಕೇಶಿಯ ಆಶ್ರಯದಲ್ಲಿ ನಿಂತು ಕ್ರಿ. ಶ. 634ರ ಹೊತ್ತಿಗೆ ಪ್ರೌಢ ಕವಿಯಾಗಿ ವಿಕಾಸಹೊಂದಿ ಕಾವ್ಯಸೃಷ್ಟಿಯ ವಿಚಾರದಲ್ಲಿ ಆತ್ಮವಿಶ್ವಾಸವು ಬಲಿದು ತಾನು ಕಾಳಿದಾಸಾದಿಗಳಿಗೆ ಸಮನೆಂಬ ಕೆಚ್ಚು ಮೂಡಿರಬಹುದು. ಈ ಕವಿಯ ಯಾವ ಕಾವ್ಯಗಳೂ ಇಲ್ಲಿಯವರೆಗೆ ಉಳಿಯದಿರುವುದು ಶೋಚನೀಯ.

ಕೆಲವು ಶಾಸನಗಳಲ್ಲಿ ಶುದ್ಧ ಕಾವ್ಯಗಳನ್ನೇ ಕೆತ್ತಿರುವುದುಂಟು. ನರ್ಮದೆಯ ದಡದ ಮೇಲಿರುವ ಮಾಂಧಾತಾ ಎಂಬಲ್ಲಿನ ಅಮರೇಶ್ವರ ದೇವಸ್ಥಾನದ ಮುಂದಿರುವ ಕಲ್ಲುಗಳ ಮೇಲೆ ಹಲಾಯುಧನ ಮಹಿಮ್ನ ಸ್ತೋತ್ರವನ್ನು ಕೆತ್ತಲಾಗಿದೆ. ಇದರ ಪಾಠವೇ ಹಸ್ತಪ್ರತಿಗಳ ಪಾಠಕ್ಕಿಂತ ಹೆಚ್ಚು ವಿಶ್ವಸನೀಯವಾದುದು. ಧಾರ್, ಮಾಂಡು ಮತ್ತು ಅಜ್ಮೀರ್ ಶಾಸನಗಳಲ್ಲಿ ಪಾರಿಜಾತಮಂಜರಿ, ಹರಕೇಲಿ ನಾಟಕ, ಲಲಿತ ವಿಗ್ರಹರಾಜ ನಾಟಕ ಮುಂತಾದ ನಾಟಕಗಳೂ ; ಕೂರ್ಮಾಷ್ಟಕ, ಕೋದಂಡ ಕಾವ್ಯ ಮುಂತಾದ ಕಾವ್ಯಗಳೂ ಇವೆ. ಇವುಗಳಿಗೆ ಬೇರೆ ಹಸ್ತಪ್ರತಿಗಳೇ ಇಲ್ಲ.[60] ಕಂಚಿಯ ಸೂರ್ಯದೇವಾಲಯದ ಕಂಬಗಳ ಮೇಲೆ ಮಯೂರನ ಸೂರ್ಯ ಶತಕವನ್ನು ಕೆತ್ತಲಾಗಿದ್ದು, ಆ ಕಂಬಗಳಲ್ಲಿ ಒಂದು ಮಾತ್ರ ಉಳಿದಿದೆ. (ಸೂರ್ಯ ಶತಕವು ದಕ್ಷಿಣ ಭಾರತದಲ್ಲಿ ಜನಪ್ರಿಯವಾಗಿದ್ದ ಕೃತಿ). ಮೇಲಿನ ಧಾರ್ ಎಂಬ ಸ್ಥಳದಲ್ಲಿ ವ್ಯಾಕರಣ ಶಾಲೆಯ ಒಂದು ಭಾಗದಲ್ಲಿ ಸಂಸ್ಕೃತ ವರ್ಣಮಾಲೆಯನ್ನೂ, ಕಾತಂತ್ರದಲ್ಲಿರುವ ಆಖ್ಯಾತ ಪ್ರತ್ಯಯಗಳ ಪಟ್ಟಿಯನ್ನೂ ಕೆತ್ತ ಲಾಗಿದೆ. ಚಿತ್ತೂರಿನ ಜಯಸ್ತೂಪದ ಮೇಲೆ ವಾಸ್ತುಶಿಲ್ಪಶಾಸ್ತ್ರದ ಗ್ರಂಥವೊಂದರ ಭಾಗವನ್ನು ಕೆತ್ತಲಾಗಿದೆ. ದೇವಗಡದ ಒಂದು ಶಿಲಾಫಲಕದ ಮೇಲೆ ಹದಿನೆಂಟು ಭಾಷೆಗಳನ್ನೂ ಅವುಗಳ ಲಿಪಿಗಳ ಮಾದರಿಗಳನ್ನೂ

---

[57] IA. XIX, p. 16.

[58] ಅದೇ, ಪು. 10.

[59] ಶಾಸನದ ಸಾಲುಗಳು ಇವು : "ಮಾನವ್ಯಸಗೋತ್ರಾಣಾಂ ಹಾರಿತೀ ಪುತ್ರಾಣಾಂ.... ಯಥಾವಿಧಿ ಹುತಾಗ್ನೀನಾಂ ಯಥಾಕಾಮಾರ್ಚಿತಾರ್ಥಿನಾಂ ಅನೇಕ ಧರ್ಮ ಕರ್ಮ ಪುಣ್ಯಪ್ರಸವಾನಾಂ ಚಲಿಕ್ಯಾನಾಂ ಅನ್ವಯೇ........". ಇಲ್ಲಿಯ "ಯಥಾವಿಧಿ ಹುತಾಗ್ನೀನಾಂ ಯಥಾಕಾಮಾರ್ಚಿತಾರ್ಥಿನಾಂ" ಎಂಬ ಮಾತುಗಳು ರಘುವಂಶದ 1.6ನೇ ಶ್ಲೋಕದಲ್ಲಿ ಅದೇ ಕ್ರಮದಲ್ಲಿ ಬರುತ್ತವೆ.

ಕಾಳಿದಾಸನ ಕಾಲದ ಚರ್ಚೆಯಲ್ಲಿ ಸುಮಾರು ಕ್ರಿ. ಶ. 600ನ್ನು ಇತ್ತೀಚಿನ ಮಿತಿಯಾಗಿ ಇಟ್ಟುಕೊಳ್ಳಬಹುದು.

[60] Journal of Indian History, XXXVII (1959), pp. 330-6.

ಕೆತ್ತಲಾಗಿದೆ.[61] ವಿದ್ಯಾ ಕೇಂದ್ರಗಳಲ್ಲಿ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಸಂಗತಿಗಳನ್ನು ಹೀಗೆ ಕಲ್ಲಿನ ಮೇಲೆ ಕೆತ್ತಿ, ಗೋಡೆಗಳಿಗೆ ಸೇರಿಸುತ್ತಿದ್ದರು. ಇನ್ನೊಂದು ಬಹಳ ಕುತೂಹಲ ಜನಕವಾದ ಶಾಸನವೆಂದರೆ ಕುಡಿಮಿಯಾಮಲೆಯ ಶಾಸನ. ಮದರಾಸಿನ ಪುದುಕೋಟೆಗೆ ಸಮೀಪದಲ್ಲಿರುವ ಕುಡಿಮಿಯಾಮಲೈ ಎಂಬ ಬೆಟ್ಟದ ಮೇಲಿನ ಈ ಬಂಡೆಯ ಶಾಸನವು "ಪ್ರಪಂಚದಲ್ಲಿ ಸ್ವರ ಪ್ರಸ್ತಾರವಿರುವ ಸಂಗೀತದ ಏಕೈಕ ಪ್ರಸ್ತರಶಾಸನ." ಪಲ್ಲವ ಗ್ರಂಥ ಲಿಪಿಯಲ್ಲಿರುವ ಇದರ ಭಾಷೆ ಸಂಸ್ಕೃತವಾದರೂ, ಕೊನೆಯಲ್ಲಿ ಒಂದೇ ಒಂದು ಸಾಲು ತಮಿಳಲ್ಲಿದೆ. 7ನೆಯ ಶತಮಾನದ ಸಂಗೀತ ಪದ್ಧತಿಯ ಮೇಲೆ ಇದು ತುಂಬಾ ಬೆಳಕನ್ನು ಚೆಲ್ಲಿದೆ.[62] ಕನ್ನಡ ಶಾಸನಗಳಲ್ಲಿ ಸ್ವತಂತ್ರ ಕೃತಿಗಳನ್ನು ಕೆತ್ತಿರುವುದಕ್ಕೆ ಉದಾಹರಣೆಗಳು ಬಹಳ ಕಡಮೆ. ಪ್ರಾಯಶಃ ಇದಕ್ಕೆ ಒಂದೇ ಒಂದು ಅಪವಾದವೆಂದರೆ ಬೊಪ್ಪಣಪಂಡಿತನ 'ಗೊಮ್ಮಟಸ್ತುತಿ.' ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲಿನ ಗೊಮ್ಮಟೇಶ್ವರ ಸ್ವಾಮಿಯ ದ್ವಾರಪಾಲಕರ ಬಾಗಿಲ ಎಡಗಡೆ ನಿಲ್ಲಿಸಿರುವ ಕಲ್ಲಿನ ಮೇಲೆ ಈ ಶಾಸನವನ್ನು ಕೊರೆಯಲಾಗಿದೆ.[63] "ಶ್ರೀ ಗೊಮ್ಮಟ ಜಿನನಂ ನರನಾಗಾಮರದಿತಿಜ ಖಚರಪತಿ ಪೂಜಿತನಂ। ಯೋಗಾಗ್ನಿ ಹತಸ್ಮರನಂ ಯೋಗಿಧ್ಯೇಯನನಮೇಯನಂ ಸ್ತುತಿಯಿಸುವೆಂ"—ಎಂದು ಆರಂಭವಾಗಿದೆ. ಬಾಹುಬಲಿಯ ತ್ಯಾಗವನ್ನೂ, ಅವನ ತಪಸ್ಸನ್ನೂ, ಗೊಮ್ಮಟ ವಿಗ್ರಹದ ಸೌಂದರ್ಯವನ್ನೂ ಕವಿ ಕೊಂಡಾಡಿದ್ದಾನೆ. ಈ ಕೃತಿಯನ್ನು ರಚಿಸುವಾಗ ಬೊಪ್ಪಣ ಭಾವಾವಿಷ್ಟನಾಗಿದ್ದನೆಂಬುದರಲ್ಲಿ ಸಂದೇಹವಿಲ್ಲ. ತಾನು ಬಾಳಚಂದ್ರ ಮುನೀಂದ್ರನ ಅಪ್ಪಣೆಯ ಪ್ರಕಾರ ರಚಿಸಿದಂತೆ ಹೇಳಿಕೊಂಡಿದ್ದಾನೆ. "ಪೊಡವಿಗೆ ಸಂದ ಗೊಮ್ಮಟ ಜಿನೇಂದ್ರ ಗುಣಸ್ತವಶಾಸನಕ್ಕೆ ಕನ್ನಡಗವಿ ಒಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇಟ್ದಿವಂ ಕಡೆಯಿಸಿದಂ ಬಲಂ ಕವಡಮಯ್ಯನ ದೇವನಟ್ಟಿಯಿಂದೆ ಬಾಗಡೆಗೆಯ ರುದ್ರನಾದರದೆ ಮಾಡಿಸಿದಂ ವಿಳಸತ್ ಪ್ರತಿಷ್ಠೆಯಂ" ಎಂದು ಈ ಶಾಸನವು ಕೊನೆಯಾಗಿದೆ. ಈ ಶಾಸನದಲ್ಲಿ 'ಗುಣಸ್ತವ'ವೊಂದನ್ನು ಬಿಟ್ಟರೆ ದಾನದ ಅಥವಾ ಅಂತಹ ಇನ್ನಾವುದೇ ವಿಷಯದ ಪ್ರಸ್ತಾಪವಿಲ್ಲ (ಉಳಿದ ಶಾಸನಗಳಲ್ಲಿ ದಾನದ ವಿಷಯವನ್ನು ಹೇಳುವಾಗ ಅಥವಾ ವ್ಯಕ್ತಿಗಳ ವಿಷಯ ಹೇಳುವಾಗ ಇಂತಹ 'ಸ್ತವ'ಗಳು ಬರಬಹುದು). ಆದ್ದರಿಂದ ಗೊಮ್ಮಟಸ್ತುತಿ'ಯನ್ನು ಕಲ್ಲಿನಲ್ಲಿ ಕೆತ್ತಿರುವ ಕಾವ್ಯವೆಂದು ಭಾವಿಸುವುದರಲ್ಲಿ ತಪ್ಪೇನೂ ಇಲ್ಲ.

ಶಾಸನಗಳು ಕನ್ನಡ ಸಾಹಿತ್ಯದ ತಲಕಾವೇರಿ. ಕನ್ನಡ ಕಾವ್ಯದ ಜಿನುಗು ಮೊತ್ತಮೊದಲು ಕಂಡು ಬರುವುದು ಶಾಸನಗಳಲ್ಲಿ. ಪಂಪನ ಕಾವ್ಯಗಳಿಗಿಂತ ಹಿಂದಿನ ಕಾವ್ಯವಾಗಲಿ, ನೃಪತುಂಗನ ಕವಿರಾಜಮಾರ್ಗಕ್ಕಿಂತ ಹಿಂದಿನ ಗ್ರಂಥವಾಗಲಿ ಇನ್ನೂ ನಮಗೆ ದೊರೆತಿಲ್ಲ (ಪಂಪನಿಗಿಂತ ಹಿಂದಿದ್ದ ಗುಣವರ್ಮ Iನ ಕಾವ್ಯಗಳ ಕೆಲವು ಪದ್ಯಗಳು ದೊರಕುತ್ತವೆ.). ನೃಪತುಂಗನೇನೋ ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮುಂತಾದ ಗದ್ಯ ಕವಿಗಳನ್ನೂ, ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ ಮುಂತಾದ ಪದ್ಯ ಕವಿಗಳನ್ನೂ ಹೆಸರಿಸಿದ್ದಾನೆ. ಇವರ ಗ್ರಂಥಗಳು ಯಾವುವೂ ದೊರೆತಿಲ್ಲ. ಆದರೆ ಇವರು ಏಳು ಅಥವಾ ಎಂಟನೆಯ ಶತಮಾನಕ್ಕಿಂತ ಹಿಂದೆ ಪ್ರಾಯಶಃ ಹೋಗಲಾರರೆಂದು ಕಾಣಿಸುತ್ತದೆ. ಮೊದ ಮೊದಲು

---

61 Smith : The Early History of India (4th Edition), pp. 16–17.

62 ಈ ಶಾಸನವನ್ನು ಮೈಸೂರು ಸೋದರರಲ್ಲೊಬ್ಬರಾದ ಆರ್. ಸತ್ಯನಾರಾಯಣ ಅವರು "The Kuḍimiyāmalai Inscription on Music" ಎಂಬ ಗ್ರಂಥದಲ್ಲಿ ಪ್ರಕಟಿಸಿ ಅದರ ಅಭ್ಯಾಸಕ್ಕೆ ಉಪಯುಕ್ತವಾದ ಅನೇಕ ಸಾಮಗ್ರಿಗಳನ್ನು ಒದಗಿಸಿದ್ದಾರೆ. ಈ ಶಾಸನಕ್ಕೆ ಸಂಬಂಧಿಸಿದಂತೆ ಇನ್ನೂ ಎರಡು ಸಂಪುಟಗಳು ಹೊರಬರಬೇಕಾಗಿದೆ.

ಶಾಸನದ ಅಂತ್ಯದಲ್ಲಿ "ರುದ್ರಾಚಾರ್ಯ ಶಿಷ್ಯನೂ, ಪರಮಮಾಹೇಶ್ವರನೂ ಆದ ರಾಜನಿಂದ ಶಿಷ್ಯರ ಹಿತಾರ್ಥವಾಗಿ ಸ್ವರಾಗಮಗಳು ಮಾಡಲ್ಪಟ್ಟವೆ" ಎಂದಿದೆ. ("ರುದ್ರಾಚಾರ್ಯಶಿಷ್ಯೇಣ ಪರಮಮಾಹೇಶ್ವರೇಣ ರಾ (ಜ್ಞಾ) ಶಿಷ್ಯ ಹಿತಾರ್ಥ (ಂ) ಕೃತಾಃ ಸ್ವರಾಗಮಾಃ")

63 EC. II. No. 234.

ಸಂಸ್ಕೃತವನ್ನು ಚೆನ್ನಾಗಿ ಬಲ್ಲ ವಿದ್ವಾಂಸರು ಸಂಸ್ಕೃತದಲ್ಲಿಯೇ ಕೃತಿಗಳನ್ನು ಬರೆದರು, ಪ್ರಶಸ್ತಿಗಳನ್ನು ರಚಿಸಿದರು. ಅಷ್ಟೊಂದು ಪಂಡಿತರಲ್ಲದವರೂ, ಸಾಮಾನ್ಯ ವಿದ್ಯಾವಂತರೂ ಕನ್ನಡದಲ್ಲಿ ಶಾಸನಗಳನ್ನು ಬರೆದರು. ಪಂಪನಿಗಿಂತ ಹಿಂದೆ ಕನ್ನಡದಲ್ಲಿ–ಕಳಸ[64]ದ ಶಾಸನದಂತಹ ಕೆಲವನ್ನು ಬಿಟ್ಟರೆ–ಪ್ರೌಢ ಶಾಸನಗಳು ಸಿಗುವುದು ಅಪೂರ್ವ. ಆದರೆ ಹಲವಾರು ತಾಮ್ರಪಟಗಳು ಸಿಗುತ್ತವೆ. ಇವುಗಳ ಭಾಷೆ ಬಹುಪಾಲು ಸಂಸ್ಕೃತ. ಎಲ್ಲೋ ಕೊನೆಯಲ್ಲಿ ಹೊಲದ ಅಥವಾ ಊರಿನ ಮೇರೆಗಳನ್ನು ಹೇಳುವಾಗ 'ಪ್ರಾಕೃತ' ಭಾಷೆ, ಎಂದರೆ ಕನ್ನಡ ಭಾಷೆ ಅವರ ನೆನಪಿಗೆ ಬರಬಹುದು ; ಅಥವಾ, ಊರುಗಳ ಅಥವಾ ವ್ಯಕ್ತಿಗಳ ಅಚ್ಚಗನ್ನಡ ಹೆಸರುಗಳಿಗೆ ಸಂಸ್ಕೃತದ ಪ್ರತ್ಯಯಗಳನ್ನು ಹತ್ತಿಸಿ, ಸಂಸ್ಕೃತದಲ್ಲಿಯೇ ಇಡೀ ಶಾಸನವನ್ನು ಸಾಧಿಸುವುದೂ ಉಂಟು. ಭಾಷೆಯ ದೃಷ್ಟಿಯಿಂದ ಕರ್ನಾಟಕದ ಶಾಸನಗಳನ್ನು ನಾಲ್ಕು ಅವಧಿಗಳಿಗೆ ಹಂಚಬಹುದು. ಆದಿಕಾಲದಲ್ಲಿ ನಮಗೆ ದೊರಕುವ ಶಾಸನಗಳೆಲ್ಲ ಪ್ರಾಕೃತದಲ್ಲಿವೆ. ಅಶೋಕನ ಶಾಸನಗಳು, ಸನ್ನತಿಯ ಬೌದ್ಧ ಶಾಸನಗಳು, ಮಳವಳ್ಳಿ ಬನವಾಸಿಯ ಶಾಸನಗಳೆಲ್ಲ ಪ್ರಾಕೃತದಲ್ಲಿವೆ. ಸು. ಕ್ರಿ. ಶ. 350ರ ಕದಂಬರ ಮಯೂರ ಶರ್ಮನ ಚಂದ್ರವಳ್ಳಿ ಶಾಸನವೂ ಪ್ರಾಕೃತದಲ್ಲಿದೆ. ಇದು ಮೊದಲ ಘಟ್ಟ. ಸು. 450 ರಿಂದ ಕನ್ನಡ ಶಾಸನಗಳು ಆರಂಭವಾಗುತ್ತವೆ. ಸಂಸ್ಕೃತ ಶಾಸನಗಳು ಆಗಲೇ ಕಾಣಿಸಿಕೊಳ್ಳಲಾರಂಭವಾಗುತ್ತವೆ. ಒಂಬತ್ತನೇ ಶತಮಾನದವರೆಗೆ ದೊರಕುವ ಶಾಸನಗಳಲ್ಲಿ ಸಂಸ್ಕೃತದವೇ ಹೆಚ್ಚು. ಇದು ಎರಡನೆಯ ಘಟ್ಟ. ಅಲ್ಲಿಂದ ಹನ್ನೊಂದನೆಯ ಶತಮಾನದವರೆಗೆ ಕನ್ನಡ, ಸಂಸ್ಕೃತಗಳು ಸಮಸಮನಾಗಿಯೇ ದೊರಕುತ್ತವೆ–ಕನ್ನಡದ ಶಾಸನಗಳ ಪ್ರಾಬಲ್ಯ ಸ್ವಲ್ಪ ಹೆಚ್ಚು. ಇದು ಮೂರನೆಯ ಘಟ್ಟ. ಇಲ್ಲಿಂದ ಮುಂದೆ ಕನ್ನಡ ಶಾಸನಗಳೇ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಮೊದಲ ಕಾಲದಲ್ಲಿ ಶಾಸನಗಳ ಸಂಖ್ಯೆ ಕಡಮೆ ; ಎರಡನೇ ಮೂರನೇ ನಾಲ್ಕನೇ ಕಾಲಗಳಲ್ಲಿ ಶಾಸನಗಳ ಸಂಖ್ಯೆ ಹೆಚ್ಚು. ಎಂದರೆ ಪಂಪನಿಗಿಂತ ಮುನ್ನ, ಸಂಸ್ಕೃತದ ಪ್ರಾಬಲ್ಯದ ಕಾಲದಲ್ಲಿ, ಕನ್ನಡದ ಒಂದು ಪರಂಪರೆಯನ್ನು ಉಳಿಸಿ ಕೊಟ್ಟ ಕೀರ್ತಿ ಸಾಮಾನ್ಯ ವಿದ್ಯಾವಂತರದು, ಶಿಲಾಶಾಸನಗಳದು (ಶ್ರವಣಬೆಳಗೊಳದಲ್ಲಿ ಪಂಪನಿಗಿಂತ ಹಿಂದಿನ ಕಾಲದಲ್ಲಿ ರಚಿತವಾದ ಕೆಲವು ಪ್ರೌಢವೃತ್ತಗಳು ಸಿಕ್ಕುತ್ತವೆಯಾದರೂ ಇವುಗಳ ಸಂಖ್ಯೆ ಕಡಮೆ). ತನ್ನ ನಾಡನ್ನು, ನಾಡಿನ ಜನಪದವನ್ನು ಹೆಮ್ಮೆಯಿಂದ ಕೊಂಡಾಡಿ ತನ್ನ ದೇಶದ ಒಳಿತಿಗಾಗಿ ತನ್ನ ಬೆರಳುಗಳನ್ನೇ ಬಲಿಯಾಗಿ ಕೊಟ್ಟ ಮಾನವಪ್ರೇಮಿ ನೃಪತುಂಗನ (ಅಥವಾ ಅವನ ಆಸ್ಥಾನದ ಶ್ರೀವಿಜಯನ) ಕವಿರಾಜ ಮಾರ್ಗವು ಅಲ್ಲಿಯವರೆಗೆ (ಸು. 850) ಕನ್ನಡದಲ್ಲಿ ರಚನೆಮಾಡಿದ್ದ ಕೆಲವೇ ಕೆಲವು ಗದ್ಯ ಪದ್ಯ ಕೃತಿಗಳ ಆಧಾರದ ಮೇಲೆ (ಎಷ್ಟರಮಟ್ಟಿಗೆ ಅವುಗಳನ್ನು 'ಕವಿರಾಜಮಾರ್ಗ'ವು ಆಧರಿಸಿದೆ ಎಂಬುದನ್ನು ಖಚಿತವಾಗಿ ನಿರ್ಧರಿಸಲು ಸದ್ಯದಲ್ಲಿ ಸಾಧ್ಯವಿಲ್ಲ) ಕನ್ನಡದ ಅಲಂಕಾರಗ್ರಂಥವಾಗಿ ಹೊರಬಂದ ಬಳಿಕ, ಅದಕ್ಕಿಂತಲೂ ಹೆಚ್ಚಾಗಿ ಪಂಪನ ಕಾವ್ಯಗಳು ಹೊರಬಂದು ಪ್ರಚಾರವಾದಮೇಲೆ ಶಾಸನಗಳು ಹೆಚ್ಚು ಹೆಚ್ಚು ಪ್ರೌಢವಾಗತೊಡಗಿದುವು. ಮುಂದೆ ರನ್ನ, (ಲಕ್ಕುಂಡಿಯ ಅತ್ತಿಮಬ್ಬೆಯ ಶಾಸನವನ್ನು ಇವನೇ ಬರೆದಿರಬಹುದೆಂದು ವಿದ್ವಾಂಸರು ಊಹಿಸಿದ್ದಾರೆ[65]) ಶಾಂತಿನಾಥ, ಜನ್ನ ಮುಂತಾದ ಪ್ರಸಿದ್ಧ ಕನ್ನಡ ಕವಿಗಳು ಶಾಸನಗಳನ್ನು ಬರೆದರು. ಶಾಸನಗಳಲ್ಲಿ ಮಾತ್ರ ಉಳಿದುಕೊಂಡಿರುವ ಅನೇಕ ಪ್ರೌಢಕವಿಗಳೂ ಉಂಟು.[66]

ಶಾಸನಗಳ ಸೊಗಸನ್ನೂ, ಕಾವ್ಯಸೌಂದರ್ಯವನ್ನೂ ಕಂಡುಕೊಂಡು, ಆ ದೃಷ್ಟಿಯಿಂದ ಅವುಗಳ ಸಂಗ್ರಹವೊಂದನ್ನು ಕ್ರಿ.ಶ. 1923ರಲ್ಲಿ ರಾ॥ ಬ॥ ಆರ್. ನರಸಿಂಹಾಚಾರ್ಯರು " ಶಾಸನಪದ್ಯಮಂಜರಿ "

---

64 EI. XIII. pp. 329–30, 930 A.D.

65 ತೀ. ನಂ. ಶ್ರೀಕಂಠಯ್ಯ : 'ದಾನಚಿಂತಾಮಣಿ ಅತ್ತಿಮಬ್ಬೆ' ("ಸಮಾಲೋಕನ" ಗ್ರಂಥದಲ್ಲಿ.)

66 ಪಂಪನಿಗಿಂತ ಹಿಂದಿನ ಕೆಲವೇ ಪ್ರೌಢಶಾಸನಗಳಲ್ಲಿ ಒಂದು ಕ್ರಿ.ಶ. 930ರ ಕಳಸದ ಶಾಸನ. ಇದರ ಕರ್ತೃ ಕವಿರಾಜರಾಜ. "ಕವಿರಾಜರಾಜವಿಬುಧಪ್ರವರಂ ಶ್ರೀ ಕಾಡಿಯೂರನಲ್ಲಿಯ ಕಮಳೋದ್ಭವವಂಶವಿಪ್ರೋತ್ತಮರಂ ನವೀನ ವರ್ಣನೆಯಿಂನೆಸೆಯಲ್ ಅಭಿವರ್ಣಿಸಿದಂ." ಈ ಕವಿಯ ಯಾವ ಕಾವ್ಯಗಳೂ ದೊರಕಿಲ್ಲ.

ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಅದರ ಅವತರಣಿಕೆಯಲ್ಲಿ ಹೇಳಿರುವ ಮಾತುಗಳಿಂದ ಈ ಅಧ್ಯಾಯವನ್ನು ಮುಕ್ತಾಯಮಾಡಬಹುದು — "ಈ ಕವಿತೆಯ (=ಶಾಸನ ಸಾಹಿತ್ಯದ) ಶೈಲಿಯ ಮತ್ತು ಸೊಬಗಿನ ರಸವನ್ನು ಸ್ವಲ್ಪಮಟ್ಟಿಗಾದರೂ ಆಸ್ವಾದನಮಾಡಲು ಅವಕಾಶವುಂಟುಮಾಡಬೇಕೆಂಬ ಉದ್ದೇಶದಿಂದ ಕೆಲವು ಶಾಸನಗಳನ್ನು ಆರಿಸಿ, ಅವುಗಳಿಂದ ಯೋಗ್ಯವಾದ ಭಾಗಗಳನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇನೆ..........ಈ ಶಾಸನಗಳಿಗೆ ಕವಿತಾಶೈಲಿಯೊಂದರಿಂದಲೇ ಮಹತ್ವವುಂಟಾಗಿದೆ ಎಂದು ತಿಳಿಯಬಾರದು. ಇವು ಆ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತಿಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ."[67]

[67] ಆರ್. ನರಸಿಂಹಾಚಾರ್ : ಶಾಸನಪದ್ಯಮಂಜರಿ (ಅವತರಣಿಕೆ)

# III

## ಶಾಸನಗಳಲ್ಲಿ ವಿಷಯಾನುಪೂರ್ವಿ

ಹನ್ನೆರಡನೆಯ ಶತಮಾನದ ಶಾಸನವೊಂದರಲ್ಲಿ ಈ ಪದ್ಯ ಬರುತ್ತದೆ—

> ಸಾಸನಮಾಗಿರೊಳ್ಪೆಸೆವ ಕಲ್ಲಿನ ಸಾಸನಮೊಂದಿದಲ್ತು ಕೇಳ್
> ಸಾಸದ ಸಾಸನಂ ಜಯದ ಸಾಸನಮಾರ್ಪಿನ ಸಾಸನಂ ಗುಣೋ
> ದ್ಭಾಸನ ಸಾಸನಂ ಸಿರಿಯ ಸಾಸನಮೊಳ್ಪಿನ ಸಾಸನಾಳಿಯಿಂ
> ಲೇಸೆನೆ ನಾಕಿರಾಜ ವಿಭು ಸಾಸನಕೋಟಿಯನೆಯ್ದೆ ತಾಳ್ದಿದಂ ‖[1]

ನಾಕಿರಾಜ ಎಂಬುವನ ಅನೇಕ ಸದ್ಗುಣಗಳನ್ನು ಹೇಳುವ ಈ ಪದ್ಯದಲ್ಲಿ ಶಾಸನಗಳ ಕೆಲವು ಪ್ರಭೇದಗಳನ್ನು ಸೂಚಿಸಿದೆ. ವ್ಯಕ್ತಿಯ ಅಥವಾ ವ್ಯಕ್ತಿಗಳ ಸಾಹಸವನ್ನು, ಜಯವನ್ನು, ಶೌರ್ಯವನ್ನು, ಗುಣವನ್ನು, ಐಶ್ವರ್ಯವನ್ನು, ದಾನಗುಣವನ್ನು ('ಒಳ್ಪು'=ಒಳ್ಳೆಯತನ) —ಹೇಳುವ ಶಾಸನಗಳು ಎಂಬ ಪ್ರಭೇದಗಳನ್ನು ನಾವು ಗುರುತಿಸಬಹುದು. ಇಷ್ಟು ಶಾಸನ ಪ್ರಭೇದಗಳನ್ನು ಮತ್ತೆ ಎರಡು ಭಾಗಗಳಾಗಿ ಸ್ಥೂಲವಾಗಿ ವಿಂಗಡಿಸಬಹುದು —ವೀರಶಾಸನಗಳು ಮತ್ತು ದಾನಶಾಸನಗಳು. (ತಾಮ್ರಪಟಗಳು ಬಹುಮಟ್ಟಿಗೆ ದಾನ ಶಾಸನಗಳು. ಈ ಎರಡು ಜಾತಿಗಳಿಗೂ ಸೇರದ ನೂರಾರು ಶಾಸನಗಳಿವೆ. ಉದಾಹರಣೆಗೆ ಜೈನಸನ್ಯಾಸಿಗಳ ಸನ್ಯಸನ ಮರಣವನ್ನು ಹೇಳುವ ಶಾಸನಗಳು, ಕೇವಲ ಪ್ರಶಸ್ತಿರೂಪವಾದ ಶಾಸನಗಳು[2], ವಿಗ್ರಹಗಳ ಮೇಲಿನ ಬರಹಗಳು-- ಇವುಗಳನ್ನು ಮೇಲಿನ ಎರಡು ಗುಂಪುಗಳಲ್ಲಿ ಯಾವುದಕ್ಕೂ ಸೇರಿಸಲಾಗುವುದಿಲ್ಲ.) ಪ್ರಾಚೀನ ಕರ್ನಾಟಕದಲ್ಲಿ ಜನಜೀವನದ ಆದರ್ಶಗಳಾಗಿದ್ದು ಅವರ ಬಾಳನ್ನು ಹಿಡಿದು ನಡೆಯಿಸಿದ ಮೌಲ್ಯಗಳೆಂದರೆ ಬೀರ (=ವೀರ), ಮತ್ತು ಚಾಗ (=ತ್ಯಾಗ). ತಮ್ಮ ಪೋಷಕರ ಪರವಾಗಿ ಯುದ್ಧದಲ್ಲಿ ಮಡಿದವರ, ಕಳ್ಳರು ಬಂದು ತುರುಗಳನ್ನು ಅಪಹರಿಸಿದಾಗ ಹೋರಾಡಿ ಪ್ರಾಣಬಿಟ್ಟವರ ಅಥವಾ ಗೆದ್ದು ಹಿಂದಕ್ಕೆ ಬಂದವರ ಪ್ರಶಸ್ತಿ ರೂಪವಾದ ಶಾಸನಗಳೇ ವೀರಶಾಸನಗಳು. ಇವುಗಳನ್ನು 'ವೀರಗಲ್ಲು'ಗಳೆಂದೂ ಕರೆಯುತ್ತಾರೆ. ('ಯೀರಗಲು' ಎಂಬ ರೂಪವು ಒಂದು ಶಾಸನದಲ್ಲಿದೆ.)[3] ಮುಖ್ಯವಾಗಿ ದೇವಸ್ಥಾನಗಳಿಗೆ, ಮಠಗಳಿಗೆ, ವಿದ್ವಾಂಸರಿಗೆ, ಗುರುಗಳಿಗೆ ಸಾರೋದ್ಧಾರವಾಗಿ ನಡೆಯಲೆಂದು ಹೊಲವನ್ನೋ ಹಣವನ್ನೋ ಮನೆಯನ್ನೋ ಆದಾಯದ ಒಂದು ಭಾಗವನ್ನೋ ಬಿಟ್ಟುಕೊಟ್ಟ ವಿಷಯವನ್ನು ಹೇಳುವ ಶಾಸನಗಳು ದಾನಶಾಸನಗಳು. ಸಂಖ್ಯೆಯಲ್ಲಿ ವೀರಶಾಸನಗಳಿಗಿಂತ ದಾನಶಾಸನಗಳೇ ಹೆಚ್ಚು. 'ಶಾಸನ' ಎಂಬ ಮಾತನ್ನು ದಾನ ಎಂಬರ್ಥದಲ್ಲಿಯೇ ಕೆಲವೆಡೆ ಬಳಸಲಾಗಿದೆ. ಉದಾಹರಣೆಗೆ— "ಜನ್ನಯ್ಯ........ನರಸಿಂಗಯ್ಯಂಗೆ ಕೊಟ್ಟ ಸಾಶನ"[4] ಅಲ್ಲದೆ ವೀರನೊಬ್ಬನ ಸಾವನ್ನು ವರ್ಣಿಸಿ ಅವನ ಕುಟುಂಬದವರಿಗಾಗಿ ರಾಜನೋ, ಊರಿನವರೋ ಕೊಟ್ಟ

---

[1] BKI. I. ii. 177, 1125 A.D.

[2] Jainism in South India, No. 6, 1138 A.D. ಈ ಶಾಸನದಲ್ಲಿ ಜೈನ ಗುರುಪರಂಪರೆಯನ್ನು ಕೊಟ್ಟು ನೇಮಿಚಂದ್ರ ಪಂಡಿತದೇವ ಎಂಬ ಮುನಿಯನ್ನು ಹೊಗಳಲಾಗಿದೆ. ಇನ್ನು ಬೇರೆ ಯಾವ ವಿಷಯದ ಪ್ರಸ್ತಾಪವೂ ಇದರಲ್ಲಿಲ್ಲ.

[3] EC. IV. Hg. 81, C. 1087 A.D.

[4] EC. IV. Gu. 57, C. 900 A.D.

ದತ್ತಿಯನ್ನು ನಿರೂಪಿಸುವ ಶಾಸನವು ವೀರಶಾಸನವೂ ಹೌದು, ದಾನಶಾಸನವೂ ಹೌದು. ಶಾಸನವನ್ನು ಹಾಕಿಸು ಎಂಬರ್ಥದಲ್ಲಿ ಶಾಸನವನ್ನು ಹೂಳಿಸು ("ಕಲ್ಲಂ ಪುಳಯಿಸಿದ")[5], ಶಾಸನವನ್ನು ಕಡೆಯಿಸು, ಶಾಸನವನ್ನು ಹುಯ್ಯಿಸು (". . . ಯೀರಗಲು ಸೋರಬೋಯಿ ಹುಯಿಸಿದನು")[6], ಶಾಸನವನ್ನು ನಿಜಿಸು—ಇತ್ಯಾದಿ ಉಕ್ತಿಗಳು ಬರುತ್ತವೆ. ಶಿಲಾಶಾಸನವು ಬರೆಯಿಸತಕ್ಕದ್ದೂ ಹೌದು, ನಿಲ್ಲಿಸತಕ್ಕದ್ದೂ ಹೌದು. ತಾಮ್ರ ಪಟಗಳಾದರೆ ಕೇವಲ ಬರೆಯಿಸತಕ್ಕವು. ಇದರಿಂದ ಅವುಗಳಲ್ಲಿ ಸಾಮಾನ್ಯವಾಗಿ "ಲಿಖಿತಾ ಇಯಂ ತಾಮ್ರಪಟ್ಟಿಕಾ" ಎಂಬ ಮಾತು ಬರುತ್ತದೆ.

ಶಾಸನಗಳನ್ನು ಹಾಕಿಸಲು ಅನೇಕ ಉದ್ದೇಶಗಳು, ಕಾರಣಗಳು ಇದ್ದಂತೆ ಕಂಡುಬರುತ್ತದೆ. ಮೊದಲನೆಯದು ದಾನವನ್ನು ಕೊಡುವ ವ್ಯಕ್ತಿಯ ಉದಾರದೃಷ್ಟಿ. ತಾನು ಕೊಟ್ಟಿರುವ ದಾನವು ಇಷ್ಟಕ್ಕೇ ನಿಲ್ಲಬಾರದು, ದಾನವನ್ನು ಸ್ವೀಕರಿಸಿರುವವನ ಮಕ್ಕಳು ಮೊಮ್ಮಕ್ಕಳು ಅನೂಚಾನವಾಗಿ ಅನುಭವಿಸಿಕೊಂಡು ಬರಬೇಕು ಎಂಬುದೇ ಶಾಸನವನ್ನು ಹಾಕಿಸುವುದರ ಪ್ರಧಾನ ಉದ್ದೇಶ.[7] ದಾನದ ವಿಷಯವನ್ನು ಮುಖ್ಯವಾಗಿ ನಿರೂಪಿಸುವ ತಾಮ್ರ ಪಟಗಳಲ್ಲಿ ಕೆಲವು ಕೂಟಶಾಸನಗಳೂ (Forgeries) ಆಗಿರುವುದುಂಟು. ಯಾರೂ ತಮಗೆ ದತ್ತಿಗಳನ್ನು ಬಿಟ್ಟು ಕೊಟ್ಟರದಿದ್ದರೂ ತಮ್ಮ ಹಿರಿಯರಿಗೆ ಯಾವುದೋ ಕಾಲದಲ್ಲಿ ಇಂತಹ ಭೂಮಿಯನ್ನು ಆ ಕಾಲದ ರಾಜನು ಬಿಟ್ಟು ಕೊಟ್ಟಿದ್ದಾನೆ ಎಂದು ತಾವೇ ಸೃಷ್ಟಿಸಿ, ರಹಸ್ಯವಾಗಿ ತಾಮ್ರಪಟವನ್ನು ಬರೆಯಿಸಿ ಮೋಸದಿಂದ ಭೂಮಿಯನ್ನು ಪಡೆಯುತ್ತಿದ್ದರೆಂದು ಕಾಣಿಸುತ್ತದೆ.* ಗಂಗರ ಕಾಲದ ಅನೇಕ ತಾಮ್ರಪಟಗಳು ಇಂಥವು.[8] ಶಿಲಾಶಾಸನಗಳಲ್ಲಿ ಕೃತಕಶಾಸನಗಳು ಬಹು ಕಡಮೆ. ತಾಮ್ರಪಟಗಳನ್ನಾದರೆ ಒಬ್ಬ ಅಕ್ಕಸಾಲಿಗನನ್ನು ಆಶ್ರಯಿಸಿ ಅವನಿಂದ

---

[5] EC. V. Mj· 44, C. 1027 A.D.

[6] EC. IV Hg. 81, C. 1087 A.D.

[7] BKI. I· i. 92, 1054 A.D. "ಪುರುಷನಿಧಿ ದಾಸಿ ಮಾಡಿದ ಪರಧರ್ಮಂ ಚಂದ್ರಸೂರ್ಯರುಳ್ಳನ್ನೆವರಂ ಪರಿವರ್ತಿಸುವಂತಾಗೆ ಬರೆದಂ ಚಾಮುಂಡರಾಯನೀ ಶಾಸನಮಂ".

* 'ಅನ್ಯಾಯದಿಂದಲಾದರೂ ಸರಿ, ಲಾಭ ಪಡೆಯಬೇಕು ಎಂಬ ದುರುದ್ದೇಶದಿಂದ' ಕೃತಕ ಶಾಸನಗಳು ಹುಟ್ಟುತ್ತವೆಂಬುದಕ್ಕೆ ಡಾ|| ಕೆ. ವಿ. ರಮೇಶ್ ಒಂದು ಒಳ್ಳೆಯ ಶಾಸನವನ್ನು ಉದಾಹರಿಸುತ್ತಾರೆ. ಬಿಹಾರದ ಜಿಲ್ಲೆಯ ಹನ್ನೆರಡನೆಯ ಶತಮಾನದ ಅರಸನೊಬ್ಬ ಬ್ರಾಹ್ಮಣರಿಗೆ ಎರಡು ಗ್ರಾಮಗಳನ್ನು 'ಅಕರ'ವಾಗಿ ದಾನಮಾಡಿದ ವಿಷಯ ಕ್ರಿ.ಶ. 1166ರ ಶಾಸನದಲ್ಲಿದೆ. ಕ್ರಿ.ಶ. 1169ರ ಇನ್ನೊಂದು ಶಾಸನದಲ್ಲಿ ಆ ಬ್ರಾಹ್ಮಣರು ರಾಜನ ಸೇವಕನೊಬ್ಬನಿಗೆ ಲಂಚ ('ಉತ್ಕೋಚಂ') ಕೊಟ್ಟು 'ಕುತಾಮ್ರ'ವನ್ನು (=ಕೃತಕತಾಮ್ರಪಟ) ಪಡೆದರೆಂದೂ, ಆ ಬ್ರಾಹ್ಮಣರು ದುರಾಸೆಯುವರೆಂದೂ ("ಸರ್ವಥಾ ಲಂಪಟಾ ಅಮೀ ಬ್ರಾಹ್ಮಣಾಃ"), ಅವರು ಭೂಮಿಗೆ ಒಡೆಯರಲ್ಲವೆಂದೂ ಹೇಳಿದೆ. [ಕರ್ಣಾಟಕ ಶಾಸನ ಸಮೀಕ್ಷೆ, ಪು. 16-7]

[8] ಕೃತಕಶಾಸನಗಳನ್ನು ಕಂಡುಕೊಳ್ಳುವ ವಿಧಾನಕ್ಕೆ ಮತ್ತು ಗಂಗರ ಕೃತಕಶಾಸನಗಳಿಗೆ, ನೋಡಿ—"ಕರ್ಣಾಟಕದ ಅರಸುಮನೆತನಗಳು", ಪು. 112–5.

ಶ್ರೀ ಪಂಚಮುಖಿಯವರ "ಕರ್ಣಾಟಕದ ಶಿಲಾಶಾಸನಗಳು" ಎಂಬ ಗ್ರಂಥದಲ್ಲಿಯೂ (ಪು.17) ಈ ವಿಷಯವಾಗಿ ಸ್ವಲ್ಪ ವಿವರಣೆ ಸಿಕ್ಕುತ್ತದೆ.

ಗಂಗರ ತಾಮ್ರಪಟಗಳ ಸತ್ಯತೆಯ ವಿಷಯದಲ್ಲಿ ರೈಸರಿಗೂ ಫ್ಲೀಟರಿಗೂ ಭಾರಿ ಚರ್ಚೆಯೇ ನಡೆಯಿತು. ಗಂಗರ ಶಿಲಾಶಾಸನಗಳ ಸತ್ಯತೆಯ ವಿಷಯದಲ್ಲಿ ಸಂದೇಹವೇ ಇಲ್ಲವೆಂದೂ, ಆದರೆ ಅವರ ತಾಮ್ರಪಟಗಳೆಲ್ಲವೂ ಕೃತಕವೆಂದೂ ಫ್ಲೀಟರು ವಾದಿಸಿದರು. [ನೋಡಿ—"The Dynasties of the Kanarese Districts"– Bombay Gazetteer, I, ii, pp. 300–2 ; EI. III. pp. 159–76]. ಗಂಗಮಾಧವನ ಪೆನುಗೊಂಡೆಯ ತಾಮ್ರಪಟವು ನೈಜವಾದುದೆಂದು ಕಂಡುಕೊಂಡ ಬಳಿಕ ಗಂಗರ ತಾಮ್ರಪಟಗಳಲ್ಲಿ ಒಂದೆರಡನ್ನು ನಂಬಬಹುದೆಂದು ಅವರೇ ಒಪ್ಪಿಕೊಂಡರು. ರೈಸರ ಪ್ರಕಾರ ಗಂಗರ ತಾಮ್ರಪಟಗಳೆಲ್ಲವೂ ಸತ್ಯವಾದವು. ಈ ಇಬ್ಬರ ವಾದಗಳನ್ನು ಪರಿಶೀಲಿಸಿ, ಗಂಗರ ತಾಮ್ರಪಟಗಳಲ್ಲಿ ಕೆಲವು ಕೃತಕವೆಂದೂ, ಕೆಲವು ಸತ್ಯವೆಂದೂ ಶ್ರೀ ಎನ್. ಲಕ್ಷ್ಮೀನಾರಾಯಣರಾಯರೂ, ಶ್ರೀ ಆರ್. ಎಸ್. ಪಂಚಮುಖಿಯವರೂ ನಿರ್ಧರಿಸಿದ್ದಾರೆ. [ಕರ್ಣಾಟಕದ ಅರಸುಮನೆತನಗಳು, ಪು. 112–8].

ಹಳೆಯ ಲೋಹದ ಮೇಲೆ ಹಳೆಯಕಾಲದ ಅಕ್ಷರಗಳಲ್ಲಿ ದತ್ತಿಯ ವಿಷಯವನ್ನು ಬರೆಯಿಸಿ ಒಂದುದಿನ ಇದ್ದಕ್ಕಿದ್ದಂತೆ ಅದನ್ನು ಬಹಿರಂಗಪಡಿಸಬಹುದು. ಆದರೆ ಶಿಲಾಶಾಸನವನ್ನು ಎಲ್ಲರ ಮುಂದೆಯೂ ಹಾಕಿಸಬೇಕು. ಇದ್ದಕ್ಕಿದ್ದಂತೆ ಒಂದುದಿನ ಕೃತಕ ಶಾಸನವನ್ನು ನಡಿಸಿ ಈ ಶಾಸನದ ಪ್ರಕಾರ ನಮಗೆ ಇಂತಹ ಭೂಮಿ ಸೇರಬೇಕು ಎಂದು ಸಾರಿ ಎಲ್ಲರನ್ನೂ ಮೋಸಪಡಿಸುವುದು ಸಾಧ್ಯವಿಲ್ಲ. ಮೈಸೂರು ಜಿಲ್ಲೆಯ ಶಾಸನವೊಂದು[9] ತನ್ನ ಕಾಲವು ಕ್ರಿ.ಶ. 189 ಎಂದು ಹೇಳಿಕೊಂಡರೂ ಸಂಪಾದಕರು ಅದರ ಕಾಲ ಕ್ರಿ.ಶ. 789 ಎಂದು ಊಹಿಸಿದ್ದಾರೆ. ಅದರಲ್ಲಿ '' ಸ್ವಸ್ತಿಶ್ರೀ ಸಕವರಿಷ ನೂಱಪಸ್ನೊಂದನೆಯ ೧೧೧ ಆಂಗ್ಗಿರಸ ಸಂವತ್ಸರದ" ಎಂದಿದೆ. ಇದನ್ನು ನಿಲ್ಲಿಸಿದವರು ಹಳ್ಳಿಗರೂ, ಸಾಮಾನ್ಯ ವಿದ್ಯಾವಂತರೂ ಆಗಿರುವುದರಿಂದ, "ಏಳನೂಱಪಸ್ನೊಂದನೆಯ ೭೧೧ '' ಎಂದು ಓದಿಕೊಳ್ಳಬೇಕಾಗುತ್ತದೆ ಎಂದು ಸಂಪಾದಕರು ಊಹಿಸಿದ್ದಾರೆ. ಈ ಊಹೆ ನಿಜವಾದರೆ ಇದು ಕೂಟಶಾಸನವಲ್ಲವೆಂದು ಹೇಳಬೇಕಾಗುತ್ತದೆ. ಕೂಟ ಶಾಸನವೆಂದು ಖಚಿತವಾಗಿ ಹೇಳಬಹುದಾದ ಶಿಲಾಶಾಸನವೊಂದಿದೆ.[10] ಇದರ ಲಿಪಿ ಹತ್ತನೆಯ ಶತಮಾನಕ್ಕೆ ಸೇರಿದುದು. ಶಾಸನದಲ್ಲಿ ಉಕ್ತವಾಗಿರುವ ಕಾಲ ಕ್ರಿ. ಶ. 600. ಕಾಲವೊಂದನ್ನು ಬಿಟ್ಟರೆ ಇದರಲ್ಲಿ ಹೇಳಿರುವ ಸಾಮಾಜಿಕ ವಿಷಯವು ಅಸಹಜವೇನೂ ಅಲ್ಲವಾದುದರಿಂದ ಇದರಲ್ಲಿರುವ ವಿಷಯವು ನಿಜವೆಂದೇ ಒಪ್ಪಿಕೊಳ್ಳಬಹುದು. ಆದರೆ ಹಿಂದಿನ ಕಾಲವನ್ನು ಹೇಳಿರಲು ಕಾರಣವೇನು ? ಭೂತಬಲಿ ನಡೆಯಕೂಡದೆಂಬ ರಾಜಾಜ್ಞೆ ಬಹುದಿನಗಳಿಂದ ಇದ್ದಿತೆಂದೂ, ಅಲ್ಲಗುಂದ ಎಂಬಾತ ರಾಜನ ಆನೆ ಕುದುರೆಗಳಿಗೆ ಹುಲ್ಲು ಕೊಯ್ದು ಅರಸನನ್ನು ಮೆಚ್ಚಿಸಿ ಆ ನಿರ್ಬಂಧವನ್ನು ತೆಗೆಯಿಸಿಹಾಕಿದನೆಂದೂ ಅಲ್ಲಿ ಹೇಳಿದೆ. ಹೀಗೆ ಬಹಳ ಹಿಂದೆಯೇ ತೆಗೆಸಿ ಹಾಕಿಸಲಾಯಿತೆಂಬುದು ಶಾಸನೋಕ್ತವಾಗಿದ್ದರೆ ರಾಜಾಜ್ಞೆಯನ್ನು ಉಲ್ಲಂಘಿಸಿ ಭೂತಬಲಿ ಕೊಟ್ಟವರಿಗೆ ಒದಗಬಹುದಾದ ಶಿಕ್ಷೆಯನ್ನು ತಪ್ಪಿಸಿದಂತಾಗುತ್ತದೆ. ಈ ಕಾರಣದಿಂದ ಹಿಂದಿನ ತಾರೀಕನ್ನು ಶಾಸನಕ್ಕೆ ಕೊಡಲಾಗಿದೆ ಎಂದು ಫ್ಲೀಟ್ ಊಹಿಸಿದ್ದಾರೆ. ಹಾಗೆಯೇ, ಲಕ್ಷ್ಮೇಶ್ವರದ ಶಂಖಬಸ್ತಿಯ ಶಾಸನ : ಇದರ ಲಿಪಿ ಹತ್ತನೆಯ ಶತಮಾನದ್ದು, ಆದರೆ ಅದರ ಮೇಲೆ 7–8ನೇ ಶತಮಾನದ ಶಾಸನಗಳಿವೆ. ಇದನ್ನು ಕೃತಕವೆಂದು ಭಾವಿಸಲು ಯಾವ ಸಾಕ್ಷ್ಯಾಧಾರವೂ ಇಲ್ಲವಾದಕಾರಣ, ಹಾಳಾಗಿಹೋಗುತ್ತಿದ್ದ ಹಿಂದಿನ ಶಾಸನಗಳನ್ನು ಹತ್ತನೇ ಶತಮಾನದಲ್ಲಿ ಪ್ರತಿಮಾಡಿಸಿರಬಹುದೆಂದು ಫ್ಲೀಟ್ ಊಹಿಸುತ್ತಾರೆ. ಆಗ ಲಕ್ಷ್ಮೇಶ್ವರದ್ದು ಕೃತಕ ಶಾಸನವೆನ್ನಿಸಿಕೊಳ್ಳುವುದಿಲ್ಲ.

ಶಾಸನಗಳನ್ನು ಹಾಕಿಸುವುದಕ್ಕೆ ಎರಡನೆಯ ಪ್ರಬಲವಾದ ಪ್ರಚೋದನೆಯೆಂದರೆ ತನ್ನ ಹೆಸರು ಶಾಶ್ವತವಾಗಿನಿಲ್ಲಬೇಕೆಂಬ ಮಾನವ ಸಹಜವಾದ ಪ್ರವೃತ್ತಿ.[11] ರನ್ನನ ಗದಾಯುದ್ಧದಲ್ಲಿ ಭೀಮನು ತನ್ನ ''ಪೂಣ್ದ ಪೂಣ್ಕೆ ಶಿಲಾತಳಾಕ್ಷರಂ'' ಎನ್ನುತ್ತಾನೆ. ಶಿಲೆಯ ಮೇಲಿನ ಅಕ್ಷರಗಳು ಅಳಿಸುವುದಿಲ್ಲ, ಪಂಪನ ಭರತ ಹೇಳುವಂತೆ ''ನಿಲ್ವಿನೆಗಂ ನೆಲಂ'' ಇರುತ್ತವೆ ಎಂಬ ಭಾವನೆ ಆ ಜನಕ್ಕೆ ಇದ್ದಿತು (ಆದರೂ ಮಳೆ ಗಾಳಿಗಳಿಗೆ ಸಿಕ್ಕಿ ಕೆಲವು, ಜನಗಳ ಔದಾಸೀನ್ಯಕ್ಕೆ ಸಿಕ್ಕಿ ಕೆಲವು, ಕಾಲಕಳೆದಂತೆ ಇನ್ನು ಕೆಲವು ಶಾಸನಗಳು

---

[9] EC. III. Nj. 199.

[10] EI. XI. p. 6, C. 958 A. D.

[11] ಶಾಸನಗಳನ್ನು ಹಾಕಿಸುವ ಹಂಬಲ ರಾಜರಲ್ಲಿ ವಿಶೇಷವಾಗಿದ್ದಿತು. ನೋಡಿ—" ಚಾಗದ ಕಂಬಮಂ ನಿಜಿಸಿ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸ| ಕ್ಕಾಗರಮಾದ ಬದ್ದೆಗನಿನಾ ನರಸಿಂಗನಿನತ್ತ ನಾಲ್ವೆರಲ್ | ಮೇಗು ಪೊದಳ್ದ ಚಾಗವೊಳವೊಂದಿದ ಬೀರವೊಳಂ ಗುಣಾರ್ಣವಂ" (ಪಂಪಭಾರತ, 1.49). ವೀರಶಾಸನ ಹಾಕಿಸುವುದು ರಾಜರಿಗೆ ಹೆಮ್ಮೆಯ ವಿಷಯವಾಗಿದ್ದಿತು. ಆದರೂ ರಾಜರ ಶೌರ್ಯವನ್ನು ಹೊಗಳಬೇಕಾದರೆ ಓಲೆ ಮತ್ತು ಕಂಠಗಳೇ ಬೇಕು (ಏಕೆಂದರೆ, ಶಿಲಾಫಲಕದ ಗಾತ್ರ ಎಷ್ಟೇ ಆಗಲಿ ಸೀಮಿತವಾದುದು) ಎಂದು ಒಬ್ಬ ಶಾಸನಕವಿ ಕೊರಗಿದ್ದಾನೆ. [EC. XII. Ck. 29, 1149 A. D.]

ಸ್ವಲ್ಪ ಅಳಿಸಿವೆ ಅಥವಾ ಪೂರ್ತಿ ಅಳಿಸಿ ಹಾಳಾಗಿ ಹೋಗಿವೆ). ಶಾಸನದಿಂದ ತನ್ನ ಹೆಸರು ಶಾಶ್ವತವಾಗುತ್ತದೆ ಎಂಬ ಭಾವನೆಯಿಂದ ಅನೇಕರು ದಾನ ಧರ್ಮಾದಿಗಳನ್ನು ಮಾಡಿದರೋ ಏನೋ! ಈ ದೌರ್ಬಲ್ಯವನ್ನು ಒಂದು ಶಾಸನವು ಎತ್ತಿ ಆಡಿ ವಿಡಂಬನೆಗೈದಿದೆ—''ಇಲ್ಲದ ಸಲ್ಲದ ಭಾಷೆಗೆ ಕಲ್ಲಂ ನಿಱಿಸುವರನುಜದೆ ನಗುವವೊಲಿರ್ಕುಂ ಪಲ್ಲವಿಸಿ ಕುವರ ಲಕ್ಷ್ಮನ ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್''[12]. ಲಿಖಿತವಾದ ಶಿಲಾಸ್ತಂಭವೊಂದನ್ನು ''ಪೊಟಿಶ್ಶೋರನ ಧರ್ಮೋದ್ಯೋಗ ಕೀರ್ತಿಯಶಸ್ತಂಭ'' ವೆಂದು ಒಂದು ಕಡೆ ಕರೆದಿದೆ.[13] ಆದ್ದರಿಂದ ಶಾಸನವನ್ನು ನಿಲ್ಲಿಸಲು ಯಶಃಕಾಮನೆಯೂ ಒಂದು ಕಾರಣವೆಂದು ಹೇಳಬಹುದು. ಆದರೆ ಕೆಲವು ಶಾಸನಗಳು ನಡೆದ ಯಾವುದೋ ಘಟನೆಯನ್ನು ನಿರೂಪಿಸಿ ಅಷ್ಟಕ್ಕೇ ನಿಲ್ಲಿಸಿಬಿಡುತ್ತವೆ. ಉದಾಹರಣೆಗೆ ಕೋಲಾರ ಜಿಲ್ಲೆಯ ಕೋಳಟ್ಟಿ ಗ್ರಾಮದ ಕೆರೆಯ ಬಳಿ ಯಾವುದೋ ದೊಡ್ಡ ಸೈನ್ಯವೊಂದು ಬೀಡುಬಿಟ್ಟಿತ್ತೆಂದು ಕಾಣುತ್ತದೆ. ಆ ಶಾಸನವು ಹೇಳುವುದು ಅಷ್ಟನ್ನು ಮಾತ್ರ.[14]

ಶಾಸನಗಳು ರಾಜಾಜ್ಞೆಗಳನ್ನು ದೇಶದಲ್ಲಿ ಪ್ರಸಾರಮಾಡಲು ಸಾಧಕಗಳಾಗಿದ್ದುವು. ಶುಕ್ರನೀತಿಸಾರವು ಇಂತಹ ಶಾಸನಗಳಿಗೆ ಕೊಟ್ಟಿರುವ ಮಹತ್ವದ ಸ್ಥಾನವನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಚಕ್ರವರ್ತಿಯು ತನ್ನ ಆಜ್ಞೆಯನ್ನು ಬೇರೆಬೇರೆ ಕಡೆ ಶಾಸನರೂಪವಾಗಿ ಬರೆಯಿಸುತ್ತಿದ್ದನು. ತ್ರಿಭುವನ—ಮಲ್ಲದೇವರ ಆಳಿಕೆಯಲ್ಲಿ ಬೊಪ್ಪಯನೆಂಬ ಮನ್ನೆಯನು ಗಂಡರಾದಿತ್ಯಪೊಟಿಲ್ ಎಂಬ ಊರನ್ನು ಇರಿದು ಸೂರೆಮಾಡಿ ಅಲ್ಲಿಯ ಕೆಲವು ಬ್ರಾಹ್ಮಣರನ್ನು ಕೊಂದಾಗ, ಆ ಊರಿನವರೆಲ್ಲರೂ ಬಂದು ಚಕ್ರವರ್ತಿಗೆ ದೂರು ಕೊಡುತ್ತಾರೆ. ಆಗ ಚಕ್ರವರ್ತಿಯು ಆ ದುಷ್ಟನ ಮಾನ್ಯವನ್ನು ಬಿಡಿಸಿ ಅವನನ್ನು ದಂಡಿಸಿ, ಈ ವಿಷಯವು ಎಲ್ಲರಿಗೂ ಗೊತ್ತಾಗಲೆಂದು ಆ ಮಾನ್ಯದ ಎಲ್ಲ ಹಳ್ಳಿಗಳಲ್ಲೂ ಶಾಸನಗಳನ್ನು ಹಾಕಿಸುತ್ತಾನೆ.[15] ಮತ್ತೊಂದು ಶಾಸನದಲ್ಲಿ ಗಂಗವಂಶದ ಮಾರಸಿಂಹನೆಂಬ ದೊರೆ ತಾನು ಗೆದ್ದ ನಾಡುಗಳಲ್ಲಿ ''ಅಕ್ಕರಂ ಬರೆದು ಕಲು ನಿಱಿಸು''ತ್ತಿದ್ದನೆಂದು ಹೇಳಿದೆ. ರಾಜನ ಅಭ್ಯುದಯವನ್ನೋ, ಸಾವನ್ನೋ ದೇಶದಲ್ಲಿ ಪ್ರಚಾರಮಾಡಬೇಕಾದಾಗ ಬೇರೆಬೇರೆ ಭಾಗಗಳಲ್ಲಿ ಆ ವಿಷಯವನ್ನು ಬರೆಯಿಸಿ ಶಾಸನಗಳನ್ನು ಹಾಕಿಸುತ್ತಿದ್ದರು.[16] ಇವೂ ಒಂದು ರೀತಿಯಲ್ಲಿ 'ರಾಜಾಜ್ಞೆ'ಗಳೇ. ಶ್ರವಣಬೆಳಗೊಳದ ಗಂಧವಾರಣ ಬಸ್ತಿಯ ಇದಿರು ಕಂಬದಲ್ಲಿ ರಾಷ್ಟ್ರಕೂಟರಾಜರ ಪ್ರಶಂಸೆ, ಬಳಿಕ ಇಂದ್ರರಾಜನ ಪ್ರಶಂಸೆಯ ವಿಷಯದ ಜೊತೆಗೆ ಅವನ ಕಂದುಕ ವಿದ್ಯಾಕೌಶಲವನ್ನು ವಿಸ್ತಾರವಾಗಿ ನಿರೂಪಿಸಿ ಬಳಿಕ ಅವನು ಸನ್ಯಸನವಿಧಿಯಿಂದ ಪ್ರಾಣತ್ಯಾಗಮಾಡಿದ ವಿಷಯವನ್ನು ಹೇಳುವ ಶಾಸನವಿದೆ.[17] ಶಿರಾ ತಾಲ್ಲೂಕಿನ ಶಾಸನವೊಂದರಲ್ಲಿ ಇಂದ್ರರಾಜನ ಕಂದುಕ ವಿದ್ಯಾಕೌಶಲವನ್ನೂ, ಅವನ ಸನ್ಯಸನಮರಣವನ್ನೂ ಹೇಳಿದೆ.[18] ಎರಡೂ ಒಂದೇ ಬರಹದ ಎರಡು

---

[12] EC. V. Bl. 112, C. 1220 A. D.

[13] SII. IX. i. 30, 965 A. D.

[14] EC. X. Mr. 63, C. 950 A. D.

[15] SII. IX. i. 169, 1104 A. D.

[16] SII. IX. i. No. 80 and 81—ಇವೆರಡೂ "ಚಾಳುಕ್ಯ ಚಕ್ರೇಶ್ವರದತ್ತಿ"ಯ ಶಾಸನದ ಎರಡು ಪ್ರತಿಗಳು. No. 81ರ ಆರಂಭದಲ್ಲಿ ತ್ರಿಮೂರ್ತಿಗಳ ಪ್ರಾರ್ಥನಾ ಪದ್ಯವಿದೆ. No. 80ರಲ್ಲಿಲ್ಲ. "ಪರಮೇಶ್ವರದತ್ತಿ" ಎಂಬ ಹೆಸರು ನೂರಾರು ಶಾಸನಗಳಲ್ಲಿವೆ. (SII. ix. i., p. 76, p 107; Kannada Inscriptions of Andhra Pradesh, P. 5., p. 7, p. 103, 106; BKI I. ii, p. 197) ಇತ್ಯಾದಿ. ಇವೆಲ್ಲವೂ ಬಹುತೇಕ ಚಾಲುಕ್ಯರ ದತ್ತಿಗಳು. ಪರಮೇಶ್ವರ ಎಂಬುದು ಚಾಲುಕ್ಯರ ಬಿರುದುಗಳಲ್ಲೊಂದಾದ್ದರಿಂದ, ಅವರು ಕೊಟ್ಟ ದತ್ತಿಗಳು ಆ ಹೆಸರನ್ನು ಪಡೆದುವೆಂದು ಕಾಣುತ್ತದೆ. ಮೇಲಿನ ಎರಡು ಹೆಸರಿನ ದತ್ತಿಗಳೂ ಸಮಾನಾರ್ಥಕಗಳೆಂದು ಕಾಣುತ್ತದೆ.

[17] EC. II. No. 133.

[18] EC. XII. Si, 27.

ಪ್ರತಿಗಳಾಗಿರುವುದರಿಂದ ಬಹುಶಃ ಇಂದ್ರರಾಜನ ಸಾವಿನ ವಿಷಯವನ್ನು ನಿರೂಪಿಸಲು ಶಾಸನಗಳನ್ನು ಬೇರೆ ಬೇರೆ ಹಾಕಿಸಿದರೆಂದು ಊಹಿಸಬೇಕಾಗುತ್ತದೆ. ದೇವಸ್ಥಾನ ಅಥವಾ ಮಠಗಳಿಗೆ ಸಂಬಂಧಿಸಿದ ನಿಯಮಾವಳಿಯನ್ನೂ ಶಾಸನಗಳಲ್ಲಿ ಬರೆದಿಡುತ್ತಿದ್ದರು. ಉದಾಹರಣೆಗೆ ಸೂಂಡಿಯಲ್ಲಿ ನಾಗದೇವನು ನಾಗೇಶ್ವರ ದೇವಸ್ಥಾನವನ್ನು ಕಟ್ಟಿಸಿ, ಅದಕ್ಕೆ ಬೇಕಾದಷ್ಟು ದತ್ತಿಗಳನ್ನು ಬಿಟ್ಟು ಆ ದೇವಸ್ಥಾನಕ್ಕೆ ಸಂಬಂಧಿಸಿದ ನಿಯಮಾವಳಿಯನ್ನು ಬರೆಯಿಸುತ್ತಾನೆ. ಇಲ್ಲಿಯ ಕಾಳಾಮುಖ ಗೊರವರು ನೈಷ್ಠಿಕರಾಗಿರದಿದ್ದರೆ, ಭೋಗಾಸಕ್ತರಾಗಿದ್ದರೆ, ವಿದ್ಯಾರ್ಥಿಗಳು ಯಾವಾಗಲೂ ವ್ಯಾಸಂಗದಲ್ಲಿ ನಿರತರಾಗಿರದಿದ್ದರೆ ಅವರನ್ನು ಇಲ್ಲಿ ಇರಿಸಕೂಡದು—ಇತ್ಯಾದಿ ನಿಯಮಗಳು ಅಲ್ಲಿ ಉಕ್ತವಾಗಿವೆ.[19]

ಒಬ್ಬ ರಾಜ ಹೋಗಿ ಮತ್ತೊಬ್ಬರಾಜ ಬಂದರೆ, ಒಂದು ರಾಜಕುಲ ಅಳಿದು ಮತ್ತೊಂದು ಪಟ್ಟವನ್ನೇರಿದರೆ, ಹಿಂದಿನ ರಾಜರು ಕೊಟ್ಟ ದತ್ತಿಗಳನ್ನು ಮಾನ್ಯಮಾಡುವುದು ಹೊಸ ರಾಜರ ಕರ್ತವ್ಯಗಳಲ್ಲೊಂದಾಗಿದ್ದಿತು. ಉದಾಹರಣೆಗೆ ವಿಷ್ಣುವರ್ಧನನು ತನ್ನ ಆಳಿಕೆಯ ಕಾಲದಲ್ಲಿ ಹಲುಗೂರು ವೈದ್ಯನಾಥ ದೇವರ ನೈವೇದ್ಯ ನಂದಾದೀವಿಗೆ ಇತ್ಯಾದಿಗಳಿಗೆ ಹಿಂದೆ ಗಂಗರ ದೊರೆ ಶಿವಮಾರಸಿಂಹನು ಕೊಟ್ಟಿದ್ದ "ಹಲುಗೂರ ಪೂರ್ವ ಮರ್ಯಾದೆಯ ತಾಂಬ್ರಶಾಸನಮಂ ನೋಡಿಸಿ ಕೇಟ್ಟು" ಬಳಿಕ ದಾನಮಾಡುತ್ತಾನೆ.[20] ಇದರ ಅರ್ಥ, ಹೊಯ್ಸಳರು ಗಂಗರ ದತ್ತಿಗಳನ್ನು ಗೌರವಿಸಿ ಕಾಪಾಡಿಕೊಂಡು ಬಂದರು. ತಾಮ್ರಪಟವೊಂದರ ಕೊನೆಯಲ್ಲಿ, ತಾಮ್ರಪಟಗಳಲ್ಲಿ ಉಕ್ತವಾಗಿರುವ ಪೂರ್ವನೃಪರ ದಾನವನ್ನು ಧರ್ಮಬುದ್ಧಿಯಿಂದ ರಾಜನು ರಕ್ಷಿಸಬೇಕು, ಇಲ್ಲವಾದರೆ ''ಸಂಸಾರದೋಷ'' ಅವನಿಗೆ ಒದಗೀತು ಎಂದು ಎಚ್ಚರಿಸಿದೆ—[21] ''ಸ್ಥಿತ್ಯಾನಯಾ ಪೂರ್ವನೃಪಾನುಜುಷ್ಟಯಾ ಯತ್ತಾಮ್ರಪತ್ರೇಷು ನಿಬದ್ಧಮಾದೌ ಧರ್ಮಾಪ್ರಮತ್ತೇನ ನೃಪೇಣ ರಕ್ಷ್ಯಂ ಸಂಸಾರದೋಷಂ ಪ್ರವಿಚಾರ್ಯ ಬುದ್ಧ್ಯಾ''. ಹಾಗೆಯೇ, ಧಾರಾಪೂರ್ವಕವಾಗಿ ಕೊಡಲ್ಪಟ್ಟು, ಮೂವರಿಂದ ಅನುಭವಿಸಲ್ಪಟ್ಟ, ಸದ್ವ್ಯಕ್ತಿಗಳಿಂದ ಪಾಲಿತವಾಗಿರುವ ದಾನಗಳನ್ನು ಕಿತ್ತುಕೊಳ್ಳಕೂಡದು ಎಂದು ತಾಮ್ರಪಟವೊಂದರಲ್ಲಿ ಹೇಳಿದೆ. ''ಅದ್ಭಿರ್ದತ್ತಂ ತ್ರಿಭಿರ್ಭುಕ್ತಂ[22] ಸದ್ಭಿಶ್ಚ ಪರಿಪಾಲಿತಂ ಏತಾನಿ ನ ನಿವರ್ತಂತೇ ಪೂರ್ವರಾಜಕೃತಾನಿಚ''. 13ನೆಯ ಶತಮಾನದ ಶಾಸನವೊಂದರಲ್ಲಿ ಹೊಯ್ಸಳ ದೊರೆ ಶ್ರೀ ವೀರನಾರಸಿಂಹದೇವರು ''ಬಸದಿಯ ಮುಂದಣ ಶಾಸನಮಂ ಕಂಡು ತಂಮನ್ವಯ ರಾಜಾವಳಿಯನೋದಿಸಿ", ಅದರಲ್ಲಿ

---

19 EI. XV. p. 87, 1058 A. D.

20 Ec. III. Md. 29, 1131 A. D.

21 IA. VI. p. 25, C. 480 A.D.

22 'ತ್ರಿಭೋಗಾಭ್ಯಂತರ ಸಿದ್ಧಿ' ಎಂಬ ಮಾತು ಅನೇಕ ದಾನಶಾಸನಗಳಲ್ಲಿ ಬರುತ್ತದೆ. ರಾಜ, ದೇವತೆ ಮತ್ತು ಬ್ರಾಹ್ಮಣರು—ಈ ಮೂವರು ಅನುಭವಿಸುವ ದಾನವೇ 'ತ್ರಿಭೋಗ' ದಾನ ; 'ತ್ರಿಭಿರ್ಭುಕ್ತಂ' ಎಂದರೂ ಇದೇ ಅರ್ಥ ಎಂದು ಫ್ಲೀಟ್ ಊಹಿಸಿದ್ದಾರೆ (IA. IV.p.277, Footnotes). ಅವರೇ ಅಲ್ಲಿಯೇ, 'ತ್ರಿಪೀಡಿದಾನ' ಎಂಬ ಮರಾಠಿ ಪದವನ್ನು ಕೊಟ್ಟು ' a grant to be enjoyed by three generations" ಎಂಬ ಸರಿಯಾದ ಅರ್ಥವನ್ನು ಹೇಳಿ, ಬಳಿಕ ಶಾಸನವೊಂದರ ಆಧಾರದ ಮೇಲೆ ಮೇಲಿನ ತೀರ್ಮಾನಕ್ಕೆ ಬಂದಿದ್ದಾರೆ. ವಾಸ್ತವವಾಗಿ 'ಮೂರು ತಲೆ ಮಾರುಗಳು ಅನುಭವಿಸುವ ದಾನ' ಎಂಬ ಅರ್ಥವೇ ಸರಿಯಾದುದು. ದಾನವನ್ನು ರಾಜ, ದೇವತೆ, ಬ್ರಾಹ್ಮಣರು ಅನುಭವಿಸುವುದೆಂದರೆ ಅರ್ಥವೇನು ? 'ತ್ರಿಭೋಗ' ಎಂಬುದು ಧರ್ಮಶಾಸ್ತ್ರಗಳಲ್ಲಿ ಬರುವ ಪಾರಿಭಾಷಿಕ ಪದ. 'ಮೂರು ತಲೆಮಾರುಗಳು ಅನುಭವಿಸಿದ್ದು' ಎಂದು ಅದಕ್ಕೆ ಅರ್ಥ. 'ತ್ರಿಪುರುಷ ಭೋಗ' ಎಂದರೂ ಇದೇ ಅರ್ಥ. ನೋಡಿ—''ತ್ರಿಭಿರೇವ ತು ಯಾ ಭುಕ್ತಾ ಪುರುಷೈರ್ಭೂರ್ಯಥಾವಿಧಿ । ಲೇಖ್ಯಾಭಾವೇಽಪಿ ತಾಂ ತತ್ರ ಚತುರ್ಥಃ ಸಮವಾಪ್ನುಯಾತ್ ॥ "

[History of Dharmaśāstra, III. p. 321].

ಉಕ್ತವಾಗಿದ್ದ ದತ್ತಿಯನ್ನು ಹೊಸದುಮಾಡಿಕೊಟ್ಟಂತೆ ಒಂದು ಶಾಸನದಲ್ಲಿದೆ.[23] ಆದ್ದರಿಂದ ದಾನದ ವಿಷಯವನ್ನು ಮುಂದೆ ಬರುವ ರಾಜರ ಅವಗಾಹನೆಗೆ ತರುವುದು ಶಾಸನಗಳನ್ನು ಹಾಕಿಸುವ ಉದ್ದೇಶಗಳಲ್ಲೊಂದು ("ಆಗಾಮಿ ಭದ್ರ ನೃಪತಿ ಪರಿಜ್ಞಾನಾಯ").[24] ಇವೆಲ್ಲದಕ್ಕೆ ಅತ್ಯುತ್ತಮ ನಿದರ್ಶನಗಳೆಂದರೆ ಮಳವಳ್ಳಿಯ ಪ್ರಾಕೃತ ಶಾಸನಗಳು. ಸು. ಕ್ರಿ. ಶ. 150ರ ಶಾಸನದಲ್ಲಿ ಶಾತವಾಹನರ ದತ್ತಿಯನ್ನು ನಿರೂಪಿಸಿದೆ.[25] ಕ್ರಮೇಣ ಈ ದತ್ತಿ ಬಿದ್ದುಹೋಗಲು ಸು. ಕ್ರಿ. ಶ. 250ರಲ್ಲಿ ಕದಂಬರು ಶಾತವಾಹನರ ದತ್ತಿಯನ್ನು ಸ್ವೀಕರಿಸಿದ್ದ ಬ್ರಾಹ್ಮಣನ ವಂಶಸ್ಥರಿಗೆ ಮತ್ತೆ ಅದೇ ದತ್ತಿಯನ್ನು ಹೊಸದುಮಾಡಿಕೊಡುತ್ತಾರೆ.[26] ಎರಡು ಶಾಸನಗಳ ಆರಂಭದಲ್ಲೂ "ಸಿದ್ಧಂ ಜಯತಿ ಭಗವಾನ್ ಮಟ್ಟಪಟ್ಟಿ ದೇವಃ" ಎಂದಿದೆ. ಎರಡೂ ಆಯಾ ವಂಶದ ರಾಜರ ಆಣತಿಯಂತೆ ಬಿಟ್ಟ ದತ್ತಿಗಳು. ಜಮೀನಿನ ಬಗ್ಗೆ ವಿವಾದ ಬಂದಾಗ, ಶಾಸನ ಅಥವಾ ತಾಮ್ರಪಟಗಳನ್ನು ಓದಿಸಿ ಅದನ್ನು ಪರಿಹರಿಸಿದ ಸಂಗತಿ ಹದಿನೈದನೇ ಶತಮಾನದ ಶಾಸನವೊಂದರಲ್ಲಿದೆ (SII XX. No. 232.)

ಒಂದೇ ಶಾಸನದಲ್ಲಿ ಬೇರೆಬೇರೆ ಕಾಲಗಳಲ್ಲಿ ನಡೆದ ಘಟನೆಗಳನ್ನು ನಿರೂಪಿಸಿರಬಹುದು. ಅಂತಹ ಕಡೆ ಸಾಮಾನ್ಯವಾಗಿ ಆ ಬೇರೆ ಬೇರೆ ಕಾಲಗಳನ್ನು ಸ್ಪಷ್ಟವಾಗಿ ನಿರೂಪಿಸಿರುವುದುಂಟು. ಉದಾಹರಣೆಗೆ ಒಂದೇ ಶಾಸನದಲ್ಲಿ ಕ್ರಿ. ಶ. 1057ರಲ್ಲಿ ದೇಮರಸನು ಮಾಡಿಸಿದ ದೇವೇಶ್ವರ ದೇವಸ್ಥಾನಕ್ಕೆ ಮಾಡಿದ ದಾನದ ವಿಷಯಗಳೂ, ಕ್ರಿ. ಶ. 1107ರಲ್ಲಿ ಅದೇ ದೇವಸ್ಥಾನಕ್ಕೆ ಮಾಡಿಸಿದ ಕಳಶಾರೋಪಣೆ ಇತ್ಯಾದಿ ವಿಷಯಗಳೂ ಬಂದಿವೆ.[27] ಪ್ರಾಚೀನ ಶಾಸನಗಳು ಒಡೆದುಹೋದರೆ ಅವುಗಳನ್ನು ಹೊಸದಾಗಿ ಪ್ರತಿಮಾಡಿಸಿ ಇಡುತ್ತಿದ್ದರು. ಕ್ರಿ.ಶ. 1005ರಲ್ಲಿ ಮಹಾಸಾಮಂತ ಶೋಭನರಸರು ಸಿರಿಪುರದ ಗಾವುಂಡರ ಅರುವತ್ತೊಕ್ಕಲಿನ ಕೇಳಿಕೆಯಂತೆ ಮೂಲಸ್ಥಾನ ದೇವಾಲಯದ ರೇವಬ್ಬೆಗೊರವಿಗೆ ಆರು ಮತ್ತರು ಭೂಮಿಯನ್ನು ಕೊಡುತ್ತಾರೆ. ಇದು ಕಾಲಕ್ರಮೇಣ ಒಡೆದುಹೋದದ್ದರಿಂದ ಭೂಲೋಕಮಲ್ಲನ ಕಾಲದಲ್ಲಿ ಕ್ರಿ.ಶ. 1138ರಲ್ಲಿ ಇದಕ್ಕೆ ಪ್ರತಿಶಾಸನವನ್ನು ಅದೇ ಮೂಲಸ್ಥಾನದ ಅಮೃತರಾಶಿ ಪಂಡಿತರಿಗೆ ಕೊಡುತ್ತಾರೆ.[28] ಒಡೆದುಹೋದ ಶಾಸನಗಳನ್ನು ಪ್ರತಿಮಾಡಿಸುತ್ತಿದ್ದುದಕ್ಕೆ ಬಹುಶಃ ಅತ್ಯುತ್ತಮ ಉದಾಹರಣೆಯೆಂದರೆ ಅತ್ತಿಮಬ್ಬೆಯ ಲಕ್ಕುಂಡಿ ಶಾಸನ.[29] No. 53 ಮೂಲಶಾಸನ, ಅತ್ತಿಮಬ್ಬೆಯು ಕೊಟ್ಟ ಶಾಸನ. ಈ ಶಾಸನ ಬಹಳ ತ್ರುಟಿತವಾಗಿದೆ. ಅದರ ಸಂಪಾದಕರು ಹೇಳಿರುವಂತೆ "ಬಸದಿಯ ಅಂಗಳದಲ್ಲಿ ಬಿದ್ದಿದ್ದ ಶಿಲಾಫಲಕದ ನಾಲ್ಕು ತುಂಡುಗಳ ಮೇಲೆ" ಈ ಶಾಸನವಿದೆ.[30] No. 52 ಈ ಶಾಸನದ ಪ್ರತಿ. ಬಹುಶಃ 53ನೆಯ ಶಾಸನವು

23 EC. V. Bl. 125, 1254 A.D.

24 ಯಾಜ್ಞವಲ್ಕ್ಯ ಸ್ಮೃತಿ, ರಾಜಧರ್ಮ ಪ್ರಕರಣಂ, ಶ್ಲೋಕ 318

25 EC. VII. Sk. 263, C. 150 A.D.

26 EC. VII. Sk. 264, C. 250 A.D. (ಕದಂಬರ ಈ ಶಾಸನದ ಕಾಲವನ್ನು ಇನ್ನೂ ಈಚೆಗೆ ಹಾಕಬೇಕಾಗುತ್ತದೆ.)

27 SII. IX.i. 118, 1057 A.D. and 1107 A.D.

28 BKI. I. i. 50, 1005 A.D. & 1138 A.D.

29 BKI. I. i. 53, 1007 A.D.—52ನೆಯ ಸಂಖ್ಯೆಯ ಶಾಸನ 53ನೆಯ ಸಂಖ್ಯೆಯ ಶಾಸನದ ನಕಲು.

30 ಈ ಮೂಲಶಾಸನವನ್ನು ಕಣ್ಣಾರೆ ನೋಡಲು ಹೋದ ಪ್ರೊ|| ತೀ. ನಂ. ಶ್ರೀಕಂಠಯ್ಯನವರು ನಿರಾಶರಾಗಿ ಬರಬೇಕಾಯಿತಂತೆ. ಮೂಲಶಾಸನದ ಕಲ್ಲಿನ ತುಂಡುಗಳು ಮಾಯವಾಗಿವೆ. ಈ ಎರಡು ಶಾಸನಗಳನ್ನೂ ರನ್ನನ ಅಜಿತ ಪುರಾಣವನ್ನೂ ಆಧಾರವಾಗಿ ಇಟ್ಟುಕೊಂಡು ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ಚಿತ್ರಿಸಿರುವ 'ದಾನಚಿಂತಾಮಣಿ ಅತ್ತಿಮಬ್ಬೆ' ಎಂಬ ಅವರ ಲೇಖನವು ('ಸಮಾಲೋಕನ' ಗ್ರಂಥದಲ್ಲಿ ಪ್ರಕಟವಾಗಿದೆ) ಬಹು ಉಪಯುಕ್ತವಾದುದು.

ಒಡೆದುಹೋದದ್ದರಿಂದ ಅದರ ಪ್ರತಿಯನ್ನು ಮಾಡಿಸಿದರೆಂದು ಕಾಣುತ್ತದೆ. 53ರಲ್ಲಿರುವುದೆಲ್ಲ 52 ರಲ್ಲಿದ್ದರೂ ಎರಡಕ್ಕೂ ಕೆಲವು ವ್ಯತ್ಯಾಸಗಳಿವೆ. 53ರ ಹದಿಮೂರು ಮತ್ತು ಹದಿನಾಲ್ಕನೆಯ ಸಾಲುಗಳಲ್ಲಿರುವ "ಕ್ಷಮೆಯುಂ ಮುಳಿಸುಂ ಮಿತ್ರರೊಳ್ ಸ...........ಣ್ಡ ಮಹಾರ್ಣವಮೆನಿಸಿ ನಾಗದೇವಂ ನೆಗಲ್ದಂ" ಎಂಬ ಮಾತುಗಳು ಪ್ರತಿಮಾಡುವಾಗ 52ರಲ್ಲಿ ಬಿಟ್ಟುಹೋಗಿವೆ. ಹಾಗೆಯೇ 52ರಲ್ಲಿ "ಬ್ರಹ್ಮನೆ ದಲ್ ನಮಗಾದೀ" ಎಂದು ಆರಂಭವಾಗುವ ಅರವತ್ತೆರಡನೆಯ ಸಾಲಿನಿಂದ ಮುಂದಿರುವ ಇಪ್ಪತ್ತೆರಡು ಸಾಲುಗಳು ಹೊಸದಾಗಿ ಸೇರಿವೆ. 52ರಲ್ಲಿರುವ ಅತ್ತಿಮಬ್ಬೆಯ ಪವಾಡಗಳ ನಿರೂಪಣೆಯಿದ್ದ ಭಾಗ 53ರಲ್ಲಿ ಸಂಪೂರ್ಣವಾಗಿ ಹಾಳಾಗಿದೆ. 53ರಲ್ಲಿ ಅತ್ತಿಮಬ್ಬೆಯ ಕೆಲವು ಪವಾಡಗಳಾದರೂ ಇದ್ದುವೆಂದು ಕಾಣಿಸುತ್ತದೆ. ಅತ್ತಿಮಬ್ಬೆಯ "ಪ್ರಭಾವ ಮೇದೋರೆ [ಂ]ತೆನೆ" ಎಂಬ ಸಾಲಿನಿಂದ ಮುಂದೆ ಅನೇಕ ಸಾಲುಗಳು ಅಳಿಸಿಹೋಗಿವೆ. 52ರಲ್ಲಿ ಪವಾಡಗಳ ವಿಷಯವಿರುವುದು ಈ ಭಾಗದಲ್ಲಿಯೇ. 53ರ ಕೊನೆಯಲ್ಲಿ "ಸ್ವದತ್ತಂ ವಾ ಪರದತ್ತಂ ವಾ" ಎಂಬ ಶ್ಲೋಕವೂ, ಮತ್ತೊಂದು ಶ್ಲೋಕವೂ ಬಂದಿವೆ. 52ರಲ್ಲಿ ಈ ಶ್ಲೋಕಗಳನ್ನು ಕೊಟ್ಟು ಬಳಿಕ ಹಳೆಯ ಶಾಸನದ ಪ್ರತಿಯನ್ನು ಏಕೆ ಮಾಡಿಸಬೇಕಾಯಿತು ಎಂಬುದಕ್ಕೆ ಕಾರಣವನ್ನು ಕೊಟ್ಟಿದೆ. ಅತ್ತಿಮಬ್ಬೆ ಕಟ್ಟಿಸಿದ್ದ ಜೈನ ಗೃಹವು ಭೂಗತವಾಗಲು ನಾಕಿ ಮತ್ತು ಸಿರಿಪಾಳ ಎಂಬಿಬ್ಬರು ಸೇರಿ ಅದನ್ನು ಮತ್ತೆ ಸುಂದರವಾಗಿ ಕಟ್ಟಿಸುತ್ತಾರೆ. ಈ ಸಮಯದಲ್ಲಿಯೇ ಬಸದಿಯ ಜೊತೆಯಲ್ಲಿ ಬಿದ್ದು ಒಡೆದುಹೋಗಿದ್ದ ಶಾಸನದ ಪ್ರತಿಯನ್ನು ಸಿರಿಪಾಳನ ಮಗ ಬಾಹುಬಲಿಯು 'ಸವಿಸ್ತರದಿಂದ' ಬರೆಯುತ್ತಾನೆ. ಹೀಗೆ ಶಾಸನದ ಪ್ರತಿಮಾಡುವಾಗ ಕೆಲವು ವಿಷಯಗಳು ಬಿಟ್ಟುಹೋಗಿವೆ, ಕೆಲವು ಹೊಸದಾಗಿ ಸೇರಿವೆ, ಕೆಲವು ಸ್ಥಾನಪಲ್ಲಟ ವಾಗಿವೆ. ಮತ್ತೊಂದು ಶಾಸನದಲ್ಲಿ[31] ಉಕ್ತವಾಗಿರುವ ವಿಷಯವು ಆ ಶಾಸನದ ಕಾಲಕ್ಕಿಂತ ಎರಡು ಶತಕಗಳಷ್ಟು ಪ್ರಾಚೀನವಾದುದು. "ಇದು ಪ್ರಾಚೀನ ಶಾಸನದ ಇತೀಚಿನ ಪ್ರತಿಯಾಗಿರಬಹುದು" ಎಂದು ಸಂಪಾದಕರು ಊಹಿಸಿದ್ದಾರೆ.

ಹಿಂದಿನ ಶಾಸನಗಳನ್ನು ಅಳಿಸಿ ಮುಂದಿನವರು ಹೊಸ ಶಾಸನಗಳನ್ನು ಬರೆಯಿಸಿರುವುದುಂಟು.[32] ಒಂದು ಶಾಸನದಲ್ಲಿ ಹೇಳಿರುವ ದತ್ತಿಯು ನಿಂತುಹೋಗಿ ಅದು ವ್ಯರ್ಥವಾದಾಗ, ಅಥವಾ ಪ್ರಾಬಲ್ಯಕ್ಕೆ ಬಂದ ಒಂದು ಧರ್ಮದವರು ಇನ್ನೊಂದು ಧರ್ಮದ ಶಾಸನಗಳನ್ನು ಹಾಳುಮಾಡಬೇಕೆಂದು ಪ್ರಯತ್ನಪಟ್ಟಾಗ ಈ ಅಳಿಸುವ ಕಾರ್ಯಗಳು ನಡೆದಿರಬಹುದು.[33] ತಾಮ್ರಪಟಗಳ ಮೇಲಿನ ಬರಹಗಳನ್ನು ಅಳಿಸಿ ಬೇರೆ ದಾನಗಳನ್ನು ಬರೆಯಿಸುತ್ತಿದ್ದುದೂ ಉಂಟು. ಕೀಲ್‌ಹಾರ್ನ್ ಅವರು ಇಂತಹ ಒಂದು ನಿದರ್ಶನವನ್ನು ಕೊಟ್ಟಿದ್ದಾರೆ.[34]

---

[31] BKI. I. i. 30, (12th Century).

[32] EC. II. 281, C. 983 A.D. ಈ ಸ್ತಂಭಶಾಸನದ ಸಂಪಾದಕರು "282ನೆಯ ಶಾಸನವನ್ನು ಬರೆಯಲಿಕ್ಕಾಗಿ ಈ ಬೆಲೆಯುಳ್ಳ ಶಾಸನದ ಮೂರು ಮುಖಗಳನ್ನು ಅಳಿಸಿಹಾಕಲಾಗಿದೆ" ಎಂದು ಹೇಳುತ್ತಾರೆ. ಶ್ರವಣಬೆಳಗೊಳದ ದೊಡ್ಡಬೆಟ್ಟದ ಮೇಲಿರುವ ತ್ಯಾಗದ ಬ್ರಹ್ಮದೇವರ ಕಂಬದ ಮೇಲಿರುವ ಈ ಸ್ತಂಭ ಶಾಸನವು ಚಾವುಂಡರಾಯನದು, ಆದ್ದರಿಂದಲೇ ಬೆಲೆಯುಳ್ಳುದು. ಅಳಿಸಿ ಹಾಕಲಾಗಿರುವ ಸ್ತಂಭದ ಮೂರು ಮುಖಗಳಲ್ಲಿ ಎಷ್ಟು ಅಮೂಲ್ಯ ವಿಷಯಗಳಿದ್ದುವೋ! ಅಳಿಸಿಹಾಕಲು ಕಾರಣ—ಹೆಗ್ಗಡೆ ಕಣ್ಣ ಎನ್ನುವವನು ಚಾಗದ ಕಂಬಕ್ಕೆ ಯಕ್ಷನನ್ನು ಮಾಡಿಸಿದ ಮೂರುಸಾಲಿನ ಬಹು ಸಾಮಾನ್ಯ ವಿಷಯವನ್ನು ಬರೆಯಿಸುವುದಕ್ಕಾಗಿ. ಶಾಸನಾಭ್ಯಾಸಿಗೆ ಇದು ಬಹು ದೊಡ್ಡ ಅನ್ಯಾಯ ಎಂದು ಅನ್ನಿಸುತ್ತದೆ. ಪ್ರಾಚೀನ ಶಾಸನವನ್ನು ಅಳಿಸಿ ಹೊಸದನ್ನು ಬರೆಯಿಸಿದ್ದಕ್ಕೆ (MAR. 1927, p. 121) ಈ ಶಾಸನವನ್ನೂ ನೋಡಬಹುದು.

[33] ಐಹೊಳೆಯ ಮೇಗೂಟ ದೇವಸ್ಥಾನವು ಒಮ್ಮೆ ಬಸದಿಯಾಗಿದ್ದು ಮುಂದೆ ಅದನ್ನು ಶೈವದೇವಾಲಯವಾಗಿ ಪರಿವರ್ತಿಸುವ ಪ್ರಯತ್ನ ನಡೆಯಿತು. ಅಲ್ಲಿನ ಒಂದು ಸಿಡಿದಿಗಲ್ಲಿನ ಮೇಲೆ ತೀರ್ಥಂಕರನ ವಿಗ್ರಹವಿದೆ. ಜೈನ ಸನ್ಯಾಸಿಯೊಬ್ಬನ ಸಲ್ಲೇಖನವನ್ನು ನಿರೂಪಿಸುವ ಶಾಸನ ಅದು. ಅದರ ಕೆಳಭಾಗದಲ್ಲಿ ಈಚೆಗೆ ಯಾರೋ ಶಿವಲಿಂಗವನ್ನು ಕೊರೆದಿದ್ದಾರೆ.

[IA. II. p. 322].

[34] EI. VI. p. 12.

ಇವುಗಳಿಗಿಂತ ಪ್ರಸಿದ್ಧವಾದ ನಿದರ್ಶನವೆಂದರೆ 'ಆಜೀವಿಕ'ರ ಹೆಸರುಗಳು ಬಂದಿರುವ ಶಿಲಾ ಶಾಸನಗಳು. ಮಹಾವೀರ ಮತ್ತು ಬುದ್ಧರ ಸಮಕಾಲೀನನಾದ ಗೋಶಾಲಮಂಖಲೀಪುತ್ತ ಎಂಬಾತ ಮಹಾವೀರನ ಬಳಿ ಸ್ವಲ್ಪಕಾಲ ಇದ್ದು ಬಳಿಕ ಬೇರೆಯಾಗಿ ತನ್ನದೇ ಆದ ಪಂಥವನ್ನು ಸ್ಥಾಪಿಸಿದನು. ಅವನ ಅನುಯಾಯಿಗಳೇ ಆಜೀವಿಕರು. ಜೈನರೂ ಬೌದ್ಧರೂ ಮುಂದೆ ಇವರನ್ನು ಖಂಡಿಸಿದರು. ಅಶೋಕನು ಬೌದ್ಧ ಭಿಕ್ಷುಗಳಿಗೆ ಗುಹೆಗಳನ್ನು ಮಾಡಿಸಿಕೊಟ್ಟಂತೆ ಆಜೀವಿಕ ಸಾಧುಗಳಿಗೂ ಮಾಡಿಸಿಕೊಟ್ಟ ಸಂಗತಿ ಬರಾಬರ್ ಮತ್ತು ನಾಗಾರ್ಜುನಿ ಬೆಟ್ಟಗಳ ಮೇಲಿನ ಅವನ ಶಾಸನಗಳಿಂದ ತಿಳಿದುಬರುತ್ತದೆ. ಇವುಗಳಲ್ಲಿ ಐದು ಕಡೆ ಬರುವ ಆಜೀವಿಕರ ಹೆಸರುಗಳಲ್ಲಿ ಮೂರು ಕಡೆ ಬೇಕೆಂದೇ ಅಳಿಸಿಹಾಕಲಾಗಿದೆ. ಅಶೋಕನ ನಂತರ ಬಂದ ಜೈನ ದೊರೆ ಖಾರವೇಲನು ಹೀಗೆ ಅಳಿಸಿಹಾಕಲು ಪ್ರಯತ್ನಿಸಿರಬಹುದು.[35]

ಇಲ್ಲಿಯೇ ತಾಮ್ರಪಟಗಳ ವಿಷಯವಾಗಿ ಒಂದೆರಡು ಅಂಶಗಳನ್ನು ಪರಿಶೀಲಿಸಿ ಬಳಿಕ ಶಾಸನಗಳಲ್ಲಿ ಬರುವ ವಿಷಯಗಳು ಮತ್ತು ಅವುಗಳ ಅನುಕ್ರಮಣಿಕೆಗಳತ್ತ ಹೊರಳಬಹುದು. ತಾಮ್ರಶಾಸನಗಳೆಲ್ಲ ಸಾಮಾನ್ಯವಾಗಿ ದಾನಶಾಸನಗಳು. ಕನ್ನಡ ಶಾಸನಗಳು ಅತಿವಿರಳವಾಗಿ ದೊರಕುವ ಕ್ರಿಸ್ತಶಕದ ಐದು ಆರನೆಯ ಶತಕಗಳಲ್ಲಿ ಮತ್ತು ಈಚಿನ ಶತಕಗಳಲ್ಲಿ ಕದಂಬರ ಮತ್ತು ಗಂಗರ ತಾಮ್ರಪಟಗಳು ದೊರಕುತ್ತವೆ. ಒಂದೆರಡು ತಾಮ್ರಪಟಗಳನ್ನು ಬಿಟ್ಟರೆ[36] ಸಾಮಾನ್ಯವಾಗಿ ಇವುಗಳ ಭಾಷೆ ಸಂಸ್ಕೃತ. ತಾಮ್ರದ ಫಲಕಗಳ ಮೇಲೆ ದಾನದ ವಿಷಯವನ್ನು ಕೊರೆದು, ಎಲ್ಲ ಫಲಕಗಳನ್ನು ಒಂದು ಉಂಗುರದಲ್ಲಿ ಪೋಣಿಸಿ, ಆ ಉಂಗುರದ ಮೇಲೆ ರಾಜಮುದ್ರೆಯನ್ನು ಹಾಕಿ[37], ಒಂದನ್ನು ಬಹುಶಃ ರಾಜಕಾರ್ಯಾಲಯದಲ್ಲಿಟ್ಟು, ಅದರ ಪ್ರತಿಯನ್ನು ದಾನವನ್ನು ಸ್ವೀಕರಿಸಿದವನಿಗೆ ಕೊಡುತ್ತಿದ್ದರು. ಬೇರೆ ಬೇರೆ ಹಳ್ಳಿಗಳನ್ನು ದಾನವಾಗಿ ಕೊಟ್ಟಿರುವ ವಿಷಯವನ್ನು ಹೇಳುವಲ್ಲಿ ಮಾತ್ರ ಭಿನ್ನವಾಗಿದ್ದು ಉಳಿದ ವಿಷಯಗಳಲ್ಲಿ ಒಂದೇ ತಾಮ್ರಪಟದ ಮೂರು ಪ್ರತಿಗಳಾಗಿದ್ದರೆ ಅದನ್ನು "ತ್ರಿಫಲೀ ತಾಮ್ರ ಶಾಸನ" ವೆಂದು ಕರೆಯುತ್ತಾರೆ.[38] ತಾಮ್ರಪಟಗಳಲ್ಲಿ ಒಂದು ಫಲಕದಿಂದ ಮೂವತ್ತೊಂದು ಫಲಕಗಳವರೆಗೆ ಇರಬಹುದು. ಚೋಳರಾಜರಾಜೇಂದ್ರ Iನ ತಿರುವಾಲಂಗಾಡು ತಾಮ್ರ ಶಾಸನದಲ್ಲಿ (11ನೇ ಶತಕ) ಮೂವತ್ತೊಂದು ತಾಮ್ರಫಲಕಗಳಿದ್ದು, ಭಾರಿ ಮುದ್ರೆಸಮೇತ ಒಟ್ಟು ಸುಮಾರು ಇನ್ನೂರು ಪೌಂಡ್ ತೂಗುತ್ತದೆ.[39] ಶಾಸನ ಪ್ರಪಂಚದಲ್ಲಿ ಇದೊಂದು ಅದ್ಭುತವೆಂದು ಭಾವಿಸಲಾಗಿತ್ತು. ಇದಕ್ಕಿಂತ ದೊಡ್ಡದು ಐವತ್ತೈದು ಫಲಕಗಳಿರುವ ಅದೇ ರಾಜೇಂದ್ರ ಚೋಳನ ಕರಂದೈ ತಾಮ್ರಪಟ. ಮುದ್ರೆ ಬಿಟ್ಟು ಇದರ ತೂಕ ಇನ್ನೂರ ಹದಿನಾರು ಪೌಂಡು.[39(a)] ತಾಮ್ರಪಟಗಳು ಶಿಲಾ

---

[35] Jainism in North India, p. 66.

[36] MAR (1934). p. 142,c. 1050 A.D.— ಈ ತಾಮ್ರಪಟದ ಭಾಷೆ ಕನ್ನಡ. EC. IV. Hg. 4, c. 750 A.D.— ಈ ತಾಮ್ರಪಟದ ಭಾಷೆ ಪ್ರಮುಖವಾಗಿ ಕನ್ನಡ, ಸ್ವಲ್ಪಮಟ್ಟಿಗೆ ಸಂಸ್ಕೃತ. ಕನ್ನಡ ಪದಗಳ ಮಧ್ಯೆ ಸಂಸ್ಕೃತ ಸರ್ವನಾಮಗಳು ಬಂದಿರುವುದುಂಟು—"ವರ್ಷಕ್ಕೆ ಪತ್ತು ಗದ್ಯಾಣಂ ತೆಱೆ ತಸ್ಯ ಸೀಮೆ ಮೂಡಾಯ್ಪೆರ್ವಳ್ಳಮ್"-- ಇತ್ಯಾದಿ.

[37] ಹೀಗೆ ಮುದ್ರೆಯನ್ನು ಹಾಕುವುದು ನಿಯತವೇನೂ ಅಲ್ಲ. ಕದಂಬರ ತಾಮ್ರಪಟಗಳ ಮುದ್ರೆ 'ಸಿಂಹ'ವಾದರೂ, ಕೆಲವು ಪ್ರಾಚೀನ ತಾಮ್ರಪಟಗಳ ಮೇಲೆ ಮುದ್ರೆಯ ಬದಲು ರಾಜರ ಹೆಸರಿರುವುದುಂಟು. ಮೃಗೇಶವರ್ಮನ ತಾಮ್ರಪಟಗಳ ಮೇಲೆ ಅವನ ವಿಗ್ರಹವೇ ಇದೆ ('ಮೃಗೇಶ' ಎಂದರೆ ಸಿಂಹ ಎಂದರ್ಥ). ಈಚಿನ ತಾಮ್ರಪಟಗಳ ಮೇಲೆಲ್ಲಾ ಸಿಂಹಮುದ್ರೆ ನಿಯತಃ ಆಗಿರುತ್ತದೆ. [Moraes : The Kadamba Kula, p. 378].

[38] Imperial Gazetteer of India, II. p. 28.

[39] SII. III. iii. p. 383.

[39(a)] Sircar : Indian Epigraphy, p. 124.

ಶಾಸನಗಳಂತಲ್ಲದೆ ದಾನ ಸ್ವೀಕರಿಸಿದವನ ಸ್ವಂತ ಆಸ್ತಿಯಾದ್ದರಿಂದ ತಮಗೆ ಏನಾದರೂ ಹಾನಿ ಒದಗಿದಾಗ ಹಣವನ್ನು ಹೂತಿಡುತ್ತಿದ್ದಂತೆ ಅವುಗಳನ್ನು ಹೂತಿಡುತ್ತಿದ್ದರು. ಅನೇಕ ತಾಮ್ರಪಟಗಳು ಭೂಮಿಯನ್ನು ಅಗೆಯುವಾಗ ಸಿಕ್ಕಿವೆ. ಉದಾಹರಣೆಗೆ, ಹಿಂದೆ ಪಲಾಶಿಕಾ ಎಂಬ ಪ್ರಸಿದ್ಧ ಜೈನಕೇಂದ್ರವಾಗಿದ್ದ ಹಲ್ಸಿಯಲ್ಲಿ ಸುಮಾರು ನೂರು ವರ್ಷಗಳ ಹಿಂದೆ ಚಕ್ರತೀರ್ಥ ಎಂಬ ಬಾವಿಯ ಹತ್ತಿರದ ಮಣ್ಣುಗುಡ್ಡೆಯಲ್ಲಿ ಕೆಲವು ಜೈನ ತಾಮ್ರಪಟಗಳು ದೊರೆತುವು. ಜೈನಧರ್ಮವು ಅಲ್ಲಿಂದ ಹಿಮ್ಮೆಟ್ಟಿದಾಗ ಅವುಗಳಿಂದ ಉಪಯೋಗವಿಲ್ಲೆಂದು ಅವುಗಳ ಮಾಲೀಕರು ಹೂಳಿರಬೇಕು. ಅಥವಾ, ಅವುಗಳ ಮಾಲೀಕರಿಗೆ ಯಾವುದೋ ದುರ್ಗತಿ ಒದಗಿದಾಗ, ತಮ್ಮ ತಾಮ್ರಪಟಗಳು ಸುರಕ್ಷಿತವಾಗಿರಲಿ ಎಂದು ಹೂತಿರಬಹುದು. ಕೆಲವೊಮ್ಮೆ ತಾಮ್ರಪಟಗಳು ಬಹುದೂರ ಪ್ರಯಾಣ ಮಾಡಿರುವುದುಂಟು. ಕ್ರಿ.ಶ. 757ರಲ್ಲಿ ಚಾಳುಕ್ಯರಾಜ ಎರಡನೆಯ ಕೀರ್ತಿವರ್ಮನು ಭಾಗೀರಥೀ ನದಿಯ ಭಂಡಾರಗವಿಟ್ಟಗೆ (ಫ್ಲೀಟ್ ಪ್ರಕಾರ ಸೊಲ್ಲಾಪುರ ಜಿಲ್ಲೆಯ ಭಂಡಾರ್‌ಕವ್ತೆ) ಯಲ್ಲಿ ಕೊಟ್ಟ ತಾಮ್ರಪಟವು ಕೋಲಾರ ಜಿಲ್ಲೆಯ ವಕ್ಕಲೇರಿಯಲ್ಲಿ ಸಿಕ್ಕಿದೆ.[40] ಬಹುಶಃ ಅಲ್ಲಿಂದ ವಲಸೆ ಬಂದವರು ತಮ್ಮ ಜೊತೆಯಲ್ಲಿ ಇದನ್ನೂ ತಂದಿರಬಹುದು.

ಶಿಲಾಶಾಸನ ಮತ್ತು ತಾಮ್ರಪಟಗಳನ್ನು ನೋಡಿಕೊಳ್ಳುವುದಕ್ಕೇ ಪ್ರತ್ಯೇಕವಾದ ಒಂದು ಇಲಾಖೆಯಿದ್ದಿತು (ಮುಂದೆ ಇದರ ವಿವರಗಳು ಬರುತ್ತವೆ). ''ಮಹಾರಾಜ ಮುಖಾಜ್ಞಪ್ತ್ಯಾ ಮಾರಿಪೇಣ ತ್ವಟ್ಟ ಕಾರೇಣ ಲಿಖಿತೇಯನ್ತಾಮ್ರಪಟ್ಟಿಕಾ''[41]—ಮಹಾರಾಜನ ಮುಖದಿಂದ ಹೊರಟ ಆಜ್ಞೆಯ ಪ್ರಕಾರ ತಾನು ಬರೆದಿರುವುದಾಗಿ ಶಿಲ್ಪಿ ಹೇಳಿಕೊಂಡಿದ್ದಾನೆ. ಕೆಲವುವೇಳೆ ರಾಜನಿಂದ ಹೊರಟ ತಾಮ್ರಪಟದ ವಿಷಯಗಳನ್ನು ಜನಕ್ಕೆ ಪ್ರಕಟಪಡಿಸುವುದಕ್ಕಾಗಿ ಮತ್ತು ಮುಂದಿನ ಪೀಳಿಗೆಯವರ ಅವಗಾಹನೆಗಾಗಿ ಶಿಲಾಶಾಸನಗಳನ್ನು ನಡಿಸುತ್ತಿದ್ದರು. ಉದಾಹರಣೆಗೆ ಬೇಲೂರಿನ 71ನೆಯ ಸಂಖ್ಯೆಯ ತಾಮ್ರಪಟ[42] ಮತ್ತು 58ನೆಯ ಸಂಖ್ಯೆಯ ಶಿಲಾಶಾಸನ[43]—ಈ ಎರಡರಲ್ಲೂ ಇರುವ ವಿಷಯ ಹೆಚ್ಚುಕಡಮೆ ಒಂದೇ. ತಾಮ್ರಪಟದಲ್ಲಿ ಮಾತ್ರ ಒಂದೆರಡು ವಿಷಯಗಳು ಹೆಚ್ಚಾಗಿವೆ. 11ನೆಯ ಶತಮಾನದ ಏವೂರಿನ ಶಿಲಾಶಾಸನ, ಮಿರಜ್ ತಾಮ್ರಶಾಸನ - ಎರಡೂ ಒಂದೇ ವಿಷಯವನ್ನು ಹೇಳುತ್ತವೆ.[44] ಇವುಗಳ ಬಹುಭಾಗ ಒಂದೇ ರೀತಿಯಲ್ಲಿ ರಚಿತವಾಗಿದೆ. ಶಿಲಾಶಾಸನದಲ್ಲಿ—''ಇದು ತಾಮ್ರಶಾಸನದೊಳ್ ಇರ್ದ ಚಾಳುಕ್ಯ ಚಕ್ರವರ್ತಿಗಳ ವಂಶದ ರಾಜ್ಯಂಗೆಯ್ದರಸುಗಳ ರಾಜಾವಳಿ'' ಎಂದು ಹೇಳಿದೆ. ಏವೂರಿನ ಶಾಸನವು ತನಗೆ ಮೂಲವಾಗಿರುವ ತಾಮ್ರಶಾಸನವನ್ನು ನಿರ್ದೇಶಿಸುವಂತೆ ಗದಗ್ ತಾಲ್ಲೂಕಿನ ಆಲೂರಿನ ಶಿಲಾಶಾಸನವು ನಿರ್ದೇಶಿಸಿಲ್ಲ. ಆದರೆ ಈ ಎರಡು ಶಾಸನಗಳೂ ತಮ್ಮ ಮುಂದೆ ಮಿರಜ್ ತಾಮ್ರಪಟಗಳ ಪಾಠವನ್ನು ಇಟ್ಟುಕೊಂಡಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಕೇಶಿಮಯ್ಯ ಎಂಬ ದಂಡನಾಯಕನು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯಕ್ಕೆ ಕೆಲವು ಹಟ್ಟಿಗಳನ್ನು ದಾನಮಾಡುವಾಗ ''ಶ್ರೀಮದ್ರಾಯಮುರಾರಿ ಸೋವಿದೇವಗೆ ಬಿನ್ನಹಂಗೆಯ್ದು ತಾಂಬ್ರಶಾಸನಮಂ ಪಡದು'' ಬಳಿಕ ಧಾರಾಪೂರ್ವಕವಾಗಿ ದಾನಮಾಡುತ್ತಾನೆ.[45] ಇದೂ ಕೂಡ ಕೆಲವುವೇಳೆ ರಾಜನ ಆಜ್ಞೆಯು ಮೊದಲು ತಾಮ್ರಪಟದ ರೂಪವಾಗಿರುತ್ತಿತ್ತೆಂಬ, ಬಳಿಕ ಅದರ ಪಾಠವನ್ನು ಬಳಸಿಕೊಂಡು ಶಿಲಾಶಾಸನವನ್ನು ನಿಲ್ಲಿಸುತ್ತಿದ್ದರೆಂಬ ನಮ್ಮ ಊಹೆಯನ್ನು ಪುಷ್ಟೀಕರಿಸುತ್ತದೆ.

---

[40] EC. X. Kl. 63, 797 A.D.
[41] EC. X. Mr. 72, C. 425 A.D.
[42] EC. V. Bl. 71, 1117 A.D.
[43] EC. V. Bl. 58, 1117 A.D.
[44] IA. VIII. p. 10.
[45] EC. VII. Sk. 92, 1068 A.D.

ತಾಮ್ರಪಟಗಳಲ್ಲಿದ್ದ ರಾಜಾವಳಿಗಳನ್ನು ಶಿಲಾಶಾಸನಗಳು ಹಾಗೆ ಹಾಗೆಯೇ ಪುನರುದ್ಧರಿಸುತ್ತಿದ್ದುವು. ಶಾಸನವೊಂದರ ಆರಂಭದ ನಲವತ್ತೊಂದು ಸಾಲುಗಳಲ್ಲಿ ಚಾಳುಕ್ಯರ ವಂಶಾವಳಿಯನ್ನು ಸಂಸ್ಕೃತದಲ್ಲಿ ನಿರೂಪಿಸಿ "ರಾಜ(ಜಾ)ವಳಿಸ್ಸಮಾಪ್ತಃ" ಎಂದು ಹೇಳಿ, ನಂತರ ನಾಳದಾಲೂರ್ ಎಂಬ ಊರಲ್ಲಿ ನಡೆದ ದಾನದ ವಿಷಯ ವನ್ನು ಕನ್ನಡದಲ್ಲಿ ಹೇಳಿದೆ.[46] ಈ ರಾಜಾವಳಿಯನ್ನು ತಾಮ್ರಪಟದಿಂದ ತೆಗೆದುಕೊಂಡಿದೆ ಎಂಬ ವಿಷಯ ಮತ್ತೊಂದು ಶಾಸನದಿಂದ[47] ಸ್ಪಷ್ಟವಾಗುತ್ತದೆ. ಚಾಳುಕ್ಯರ ಈ ದೀರ್ಘ ಶಾಸನದಲ್ಲಿ ಆ ರಾಜರ ಇತಿಹಾಸವನ್ನು ಸಂಸ್ಕೃತದಲ್ಲಿ ಹೇಳಿ, ನಂತರ "ಇದು ತಾಂಬ್ರಶಾಸನದೊಳ್ ಇಟ್ಟ ಚಾಳುಕ್ಯ ಚಕ್ರವರ್ತಿಗಳ ವಂಶದ ರಾಜ್ಯಂ ಗೆಯ್ದರಸುಗಳ ರಾಜಾವಳಿ ಮಂಗಳ" ಎಂದಿದೆ. ಮುಂದೆ ಬೇರೆ ವಿಷಯ ಬರುತ್ತದೆ. ಇದನ್ನು ಇನ್ನೊಂದು ತಾಮ್ರ ಪಟದೊಡನೆ ಹೋಲಿಸಿ ನೋಡಿದರೆ[48] ವಂಶದ ವಿಷಯ ಹೇಳುವ ಭಾಗ ಒಂದೇ ಎಂಬುದು ಗೊತ್ತಾಗುತ್ತದೆ. ರಾಜಾವಳಿಯು ಸಾಮಾನ್ಯವಾಗಿ ಅಧಿಕಾರಯುತವಾಗಿ ನಿರೂಪಿಸಬಲ್ಲ ಕವಿಯೊಬ್ಬನಿಂದ ರಚಿತವಾಗಿ, ಸರಕಾರದ ಒಪ್ಪಿಗೆಯನ್ನು ಪಡೆದಿರುತ್ತಿತ್ತು. ತಾಮ್ರಪಟಗಳಲ್ಲಿದ್ದ ಈ ರಾಜಾವಳಿಯನ್ನು ಮುಂದಿನ ಶಿಲಾಶಾಸನ ಕರ್ತೃಗಳೂ, ತಾಮ್ರಪಟ ಕರ್ತೃಗಳೂ ಉಪಯೋಗಿಸಿಕೊಳ್ಳುತ್ತಿದ್ದರು.

ಈಗ ಶಾಸನಗಳಲ್ಲಿ ಯಾವ ವಿಷಯಗಳು ಯಾವ ಕ್ರಮದಲ್ಲಿ ಬಂದಿವೆ ಎಂಬುದರ ಕಡೆ ನಮ್ಮ ಗಮನ ವನ್ನು ತಿರುಗಿಸಬಹುದು.

ಭಾರತೀಯರ ಸಾಮಾಜಿಕ ಹಾಗೂ ಧಾರ್ಮಿಕ ಜೀವನವನ್ನು ರೂಪಿಸುವುದರಲ್ಲಿ ಧರ್ಮಶಾಸ್ತ್ರಗಳು ಗಮನೀಯವಾದ ಪಾತ್ರವನ್ನು ವಹಿಸಿವೆ ಎಂಬುದು ಸರ್ವವಿದಿತವಾದ ವಿಷಯವೇ. ಈ ನಿಬಂಧದ ಉದ್ದಕ್ಕೂ ಬರುವ ಹಲವಾರು ವಿಷಯಗಳು ಮೇಲಿನ ಅಂಶವನ್ನು ಪೋಷಿಸುತ್ತವೆ. ಶಾಸನಗಳಲ್ಲಿ ಕಂಡುಬರುವ ವಿಷಯಾನು ಕ್ರಮಣಿಕೆಯು ಬಹುಮಟ್ಟಿಗೆ ಧರ್ಮಶಾಸ್ತ್ರ ಅಥವಾ ಸ್ಮೃತಿಗಳಲ್ಲಿ ಉಕ್ತವಾಗಿರುವ ನಿಯಮಗಳನ್ನೇ ಅನುಸರಿಸಿದೆ. (ಸ್ಮೃತಿಗಳು ತಮ್ಮ ಸಮಕಾಲೀನವಾದ ಪದ್ಧತಿಯನ್ನೇ ತೆಗೆದುಕೊಂಡು ಒಂದು ನಿಯಮವೆಂಬಂತೆ ನಿರೂಪಿಸಿದುವು ಎಂದು ಹೇಳಲೂ ಅವಕಾಶವಿದೆ.)

ಸ್ಮೃತಿಗ್ರಂಥಗಳಲ್ಲಿ ಮತ್ತು ಅರ್ಥಶಾಸ್ತ್ರದ ಗ್ರಂಥಗಳಲ್ಲಿ ರಾಜಶಾಸನಗಳ ವಿಷಯ, ಅವುಗಳನ್ನು ಬರೆಯಿಸಬೇಕಾದ ರೀತಿ—ಇವುಗಳ ವಿಷಯ ಸಂಕ್ಷಿಪ್ತವಾಗಿ ಬಂದಿದೆ. "ಶಾಸನ" ಎಂಬ ಮಾತು ಮೊದಲು ರಾಜಾಜ್ಞೆಯನ್ನು ಸೂಚಿಸುತ್ತಿದ್ದು ಕ್ರಮೇಣ ಆದು ಇತರ ಬರಹಗಳಿಗೂ ಅನ್ವಯವಾಯಿತು ಎಂಬ ಅಂಶವನ್ನು ಹಿಂದಿನ ಅಧ್ಯಾಯದಲ್ಲಿ ನೋಡಿದ್ದೇವೆ. ಶುಕ್ರನೀತಿಸಾರದಲ್ಲಿ[49] ಅದು "ರಾಜಾಜ್ಞೆ" ಎಂಬ ಅರ್ಥದಲ್ಲಿಯೇ ಬಂದಿದೆ. ಈ ರಾಜಾಜ್ಞೆಗಳನ್ನು ಪ್ರಜೆಗಳಿಗೆ ಡಂಗುರಗಳ ಮೂಲಕ ಪ್ರಕಟಿಸಬೇಕೆಂದೂ, ಚೌಕಗಳಲ್ಲಿ ಅವುಗಳನ್ನು ಸ್ಥಾಪಿಸಬೇಕೆಂದೂ, ಅವುಗಳನ್ನು ಮೀರುವವರಿಗೆ ಶಿಕ್ಷೆಯನ್ನು ವಿಧಿಸಬೇಕೆಂದೂ ಆ ಗ್ರಂಥ ಹೇಳುತ್ತದೆ. ಲೇಖನದ ಮೂಲಕ ಆಜ್ಞೆ ಮಾಡದ ರಾಜ, ರಾಜನ ಆಜ್ಞಾಪತ್ರವಿಲ್ಲದೆ ಅಧಿಕಾರ ನಡೆಯಿಸುವ ಅಧಿಕಾರಿ— ಇಬ್ಬರೂ ಚೋರರು ; ರಾಜಮುದ್ರಾಸಹಿತವಾದ ಲೇಖನವೇ ನಿಜವಾದ ರಾಜ, ಬರಿಯ ರಾಜ ರಾಜನೇ ಅಲ್ಲ ಎನ್ನುತ್ತದೆ :

---

[46] BKI. I. ii. 136, 1091 A.D.

[47] EI. XII. p. 274, 1077 A.D.

[48] EI. XII. p. 150, 1087 A.D. ಇವೆರಡೂ ಮೂಲತಃ ಯಾವುದೋ ತಾಮ್ರಪಟದಿಂದ ವಂಶನಿರೂಪಣೆಯ ಭಾಗವನ್ನು ಎತ್ತಿಕೊಂಡಿರಬಹುದು.

[49] ಶುಕ್ರನೀತಿಸಾರವು ಈಚಿನ ಗ್ರಂಥವೆಂದು ಬಹುಜನ ವಿದ್ವಾಂಸರ ಅಭಿಪ್ರಾಯ.

ನ ಕಾರ್ಯಂ ಭೃತಕಃ ಕುರ್ಯಾನ್ನೃಪಲೇಖಾದ್ವಿನಾ ಕ್ವಚಿತ್
ನಾಜ್ಞಾಪಯೇಲ್ಲೇಖನೇನ ವಿನಾಲ್ಪಂ ವಾ ಮಹನ್ನೃಪಃ॥
ಭ್ರಾಂತೇಃ ಪುರುಷಧರ್ಮತ್ವಾಲ್ಲೇಖ್ಯಂ ನಿರ್ಣಾಯಕಂ ಪರಂ
ಅಲೇಖ್ಯಮಾಜ್ಞಾಪಯತಿ ಹ್ಯಲೇಖ್ಯಂ ಯತ್ಕರೋತಿ ಯಃ ॥
ರಾಜಕೃತ್ಯಮುಭೌ ಚೋರೌ ತೌ ಭೃತ್ಯ ನೃಪತೀ ಸದಾ
ನೃಪಸಂಚಿಹ್ನಿತಂ ಲೇಖ್ಯಂ ನೃಪಃ ತನ್ನನೃಪೋ ನೃಪಃ ॥[50]

"ನೃಪಸಂಚಿಹ್ನಿತಂ ಲೇಖ್ಯಂ ನೃಪಃ ತನ್ನ ನೃಪೋ ನೃಪಃ"—ಈ ಮಾತು ಎಷ್ಟು ಸತ್ಯ ! ಎಷ್ಟೋ ಅಧಿಕಾರಿಗಳು ಬಾಯಲ್ಲಿ ಆಡಿದ್ದನ್ನು ಬರಹದಲ್ಲಿ ಮೂಡಿಸಲು ಹೆದರುವುದು ಅಕಾರಣವಾಗಿಯೇನೂ ಅಲ್ಲ !

ಕೌಟಿಲ್ಯನ ಅರ್ಥಶಾಸ್ತ್ರದ ಎರಡನೆಯ ಅಧಿಕರಣದಲ್ಲಿ "ಶಾಸನಾಧಿಕಾರಃ" ಎಂಬ ಒಂದು ಇಡೀ ಅಧ್ಯಾಯವಿದೆ. ಇದರ ಆರಂಭದ ವಾಕ್ಯವಿದು—"ಶಾಸನೇ ಶಾಸನಮಿತ್ಯಾಚಕ್ಷತೇ। ಶಾಸನ ಪ್ರಧಾನಾ ಹಿ ರಾಜಾನಃ ತನ್ಮೂಲತ್ವಾತ್ ಸಂಧಿವಿಗ್ರಹಯೋಃ"[51]. ಶಾಸನ ಎಂಬ ಮಾತು ರಾಜಾಜ್ಞೆಗಳಿಗೆ ಅನ್ವಯವಾಗುತ್ತದೆ. ಈ ಶಾಸನಗಳು ಬಹುಮುಖ್ಯ, ಏಕೆಂದರೆ ಇವುಗಳ ಮೇಲೆಯೇ ರಾಜ್ಯದ ಶಾಂತಿ ಮತ್ತು ಯುದ್ಧಗಳು ನಿಂತಿರುವುದು—ಹೀಗೆ ಹೇಳಿ ಮುಂದೆ ಅರ್ಥಶಾಸ್ತ್ರವು ಶಾಸನಲೇಖಕನ ಗುಣಗಳನ್ನು ಹೇಳಿದೆ. ಅವನು ಸರ್ವಸಮಯವಿದನೂ, ಆಶುಗ್ರಂಥನೂ, ಚಾರ್ವಕ್ಷರನೂ, ಲೇಖನ ವಾಚನ ಸಮರ್ಥನೂ ಆಗಿರಬೇಕು. ಅವನ ಬರವಣಿಗೆಯಲ್ಲಿ ಅರ್ಥಕ್ರಮ, ಸಂಬಂಧ, ಪರಿಪೂರ್ಣತೆ, ಮಾಧುರ್ಯ, ಔದಾರ್ಯ ಮತ್ತು ಸ್ಪಷ್ಟತೆಗಳಿರಬೇಕು. ನಿಂದಾ, ಪ್ರಶಂಸಾ, ಪೃಚ್ಛಾ, ಆಖ್ಯಾನ, ಅರ್ಥನಾ (=ಬೇಡಿಕೆ), ಪ್ರತ್ಯಾಖ್ಯಾನ (=ನಿರಾಕರಣೆ), ಉಪಾಲಂಭ (=ನಿನಗಿದು ಯೋಗ್ಯವಲ್ಲ ಎಂದು ಹೇಳುವುದು), ಪ್ರತಿಷೇಧ, ಚೋದನಾ (=ಆಜ್ಞೆ), ಸಾಂತ್ವ (=ಸಮಾಧಾನ), ಅಭ್ಯವಪತ್ತಿ (=ಸಹಾಯದ ಭರವಸೆ), ಭರ್ತ್ಸನೆ (=ಭಯಪಡಿಸುವುದು), ಅನುನಯ—ಈ ಹದಿಮೂರು ಕಾರಣಗಳಿಗಾಗಿ ರಾಜರು ಶಾಸನಗಳನ್ನು ಬರೆಯಿಸುತ್ತಾರೆ. ಪ್ರಜ್ಞಾಪನಾ, ಆಜ್ಞಾ, ಪರಿದಾನಲೇಖಗಳು ; ಪರೀಹಾರ ಲೇಖಗಳು (Writs of license), ಪ್ರಾವೃತ್ತಿಕ ಲೇಖಗಳು (Writs of guidance), ಪ್ರತಿಲೇಖ ಲೇಖಗಳು (Writs of reply), ಸರ್ವತ್ರಗ ಲೇಖಗಳು (Writs of general proclamation)—ಇವು ಇನ್ನೂ ಕೆಲವು ಶಾಸನ ಪ್ರಭೇದಗಳಾಗಿವೆ. ಶಿಕ್ಷಿಸಲೋ, ಗೌರವಿಸಲೋ ರಾಜ್ಯದ ಅಧಿಕಾರಿಗಳಿಗೆ ರಾಜನು ಕಳುಹಿಸಿದ ಶಾಸನಗಳಿಗೆ "ಆಜ್ಞಾಪತ್ರ"ಗಳೆಂದು ಹೆಸರು. ಅಕಾಂತಿ, ವ್ಯಾಘಾತ (=ಅರ್ಥವಿರೋಧ), ಪುನರುಕ್ತ, ಅಪಶಬ್ದ, ಸಂಪ್ಲವ (=ಕೆಟ್ಟ ಜೋಡಣೆ) — ಇವು ಲೇಖ್ಯದೋಷಗಳು.

ಈ ವಿಷಯಗಳನ್ನು ನೋಡಿದರೆ ಕೌಟಿಲ್ಯನ ದೃಷ್ಟಿಯಲ್ಲಿ 'ಶಾಸನ'ವೆಂದರೆ ರಾಜಾಜ್ಞೆಯೆಂದೇ ಅರ್ಥ. ಅಲ್ಲದೆ ಅವನ ದೃಷ್ಟಿಯಲ್ಲಿ ತಾಳಪತ್ರಾದಿಗಳ ಮೇಲೆ ಬರೆದ ಬರಹಗಳೇ ಶಾಸನಗಳು. ತಾಮ್ರಪಟ, ಶಿಲೆ ಇತ್ಯಾದಿಗಳ ಮೇಲೆ ಬರೆದ ಬರಹಗಳ ವಿಷಯ ಅವನಲ್ಲಿ ಬಂದಂತಿಲ್ಲ.

ಬೃಹಸ್ಪತಿ ಸ್ಮೃತಿಯಲ್ಲಿ ರಾಜನು ದಾನಶಾಸನವನ್ನು ಕೊಡುವ ವಿಧಾನವನ್ನು ಕುರಿತು ಈ ರೀತಿಯಲ್ಲಿ ಹೇಳಲಾಗಿದೆ—"ಭೂದಾನ ಮುಂತಾದುವನ್ನು ಕೊಡುವ ರಾಜನು ಶಾಸನವನ್ನು ಬಟ್ಟೆಯ ಮೇಲಾಗಲಿ, ತಾಮ್ರಪಟದ ಮೇಲಾಗಲಿ ಬರೆಯಿಸಬೇಕು. ದಾನವನ್ನು ಸ್ವೀಕರಿಸಿದವನ ಹೆಸರು, ಸ್ಥಳದ ಹೆಸರು, ರಾಜನ ವಂಶದ ಹಿರಿಯರ ಹೆಸರುಗಳು ಅಲ್ಲಿ ಉಕ್ತವಾಗಿರಬೇಕು. ಈ ದಾನವು ಕೊನೆಯವರೆಗೂ ನಿಲ್ಲಬೇಕು, ಈ ದಾನವನ್ನು

---

[50] ಶುಕ್ರನೀತಿಸಾರ, 2. 291-3.

[51] ಅರ್ಥಶಾಸ್ತ್ರ (ಸಂ. ಡಿ. ಗಣಪತಿಶಾಸ್ತ್ರೀ), ಪು. 172.

ಯಾರೂ ಅಪಹರಿಸಕೂಡದು, ಈ ಭೂಮಿಗೆ ಕಂದಾಯವಿಲ್ಲ, ದಾನವನ್ನು ಕಾಪಾಡುವವನು ಸ್ವರ್ಗಕ್ಕೂ, ಹಾಳು ಮಾಡುವವನು ನರಕಕ್ಕೂ ಹೋಗುತ್ತಾನೆ—ಮುಂತಾದ ಹೇಳಿಕೆಗಳಿರಬೇಕು. ರಾಜನ ಮುದ್ರೆ, ದಾನದ ವರ್ಷ, ಅಧಿಕಾರಿಗಳ ಸಹಿ—ಇಷ್ಟನ್ನೂ ರಾಜಶಾಸನವು ಒಳಗೊಂಡಿರಬೇಕು."[52]

ಯಾಜ್ಞವಲ್ಕ್ಯ ಸ್ಮೃತಿಯಲ್ಲಿಯೂ ಹೀಗೆಯೇ ದಾನಶಾಸನವನ್ನು ವಿವರಿಸಿದೆ. ಈ ಸ್ಮೃತಿ ಒಂದು ರೀತಿಯಲ್ಲಿ ಬಹು ಮುಖ್ಯವಾದುದು. ಏಕೆಂದರೆ ಇದಕ್ಕೆ ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ (ಕ್ರಿ. ಶ. 1075–1127) ಆಸ್ಥಾನದಲ್ಲಿದ್ದ ವಿಜ್ಞಾನೇಶ್ವರನು "ಮಿತಾಕ್ಷರಾ" ಎಂಬ ವ್ಯಾಖ್ಯಾನವನ್ನು ಬರೆದಿದ್ದಾನೆ (ಈ ಮಿತಾಕ್ಷರವು ಆಧುನಿಕ ಭಾರತದ ನ್ಯಾಯಾಂಗದ ರಚನೆಯಲ್ಲಿ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಿದೆ). ಯಾಜ್ಞವಲ್ಕ್ಯ ಸ್ಮೃತಿಯ ಶ್ಲೋಕಗಳು ಇವು—

ದತ್ವಾ ಭೂಮಿಂ ನಿಬಂಧಂ[53] ವಾ ಕೃತ್ವಾಲೇಖ್ಯಂ ತು ಕಾರಯೇತ್
ಆಗಾಮಿ ಭದ್ರ ನೃಪತಿ ಪರಿಜ್ಞಾನಾಯ ಪಾರ್ಥಿವಃ ||
ಪಟೇ ವಾ ತಾಮ್ರಪಟ್ಟೇ ವಾ ಸ್ವಮುದ್ರೋಪರಿಚಿಹ್ನಿತಂ
ಅಭಿಲೇಖ್ಯಾತ್ಮನೋ ವಂಶ್ಯಾನಾತ್ಮಾನಂ ಚ ಮಹೀಪತಿಃ ||
ಪ್ರತಿಗ್ರಹ ಪರೀಮಾಣಂ ದಾನಚ್ಛೇದೋಪವರ್ಣನಂ
ಸ್ವಹಸ್ತಕಾಲಸಂಪನ್ನಂ ಶಾಸನಂ ಕಾರಯೇತ್ ಸ್ಥಿರಂ ||[54]
(ರಾಜಧರ್ಮಪ್ರಕರಣಂ, 318–20)

---

[52] ದತ್ವಾ ಭೂಮ್ಯಾದಿಕಂ ರಾಜಾ ತಾಮ್ರಪತ್ರೇ ಪಟೇऽಥವಾ
ಶಾಸನಂ ಕಾರಯೇದ್ಧರ್ಮ್ಯಂ ಸ್ಥಾನ ವಂಶಾದಿ ಸಂಯುತಂ ||
ಮಾತಾಪಿತ್ರೋರಾತ್ಮನಶ್ಚ ಪುಣ್ಯಾಯಾಮುಕಸೂನವೇ
ದತ್ತಂ ಮಯಾऽಮುಕಾಯಾದ್ಯ ದಾನಂ ಸಬ್ರಹ್ಮಚಾರಿಣೇ ||
ಅನಾಚ್ಛೇದ್ಯಮನಾಹಾರ್ಯಂ ಸರ್ವಂ ಭಾವ್ಯವಿವರ್ಜಿತಂ
ಚಂದ್ರಾರ್ಕ ಸಮಕಾಲೀನಂ ಪುತ್ರ ಪೌತ್ರಾನ್ವಯಾನುಗಂ ||
ದಾತುಃ ಪಾಲಯಿತುಃ ಸ್ವರ್ಗಂ ಹರ್ತುರ್ನರಕಮೇವ ಚ
ಷಷ್ಟಿರ್ವರ್ಷ ಸಹಸ್ರಾಣಿ ದಾನಚ್ಛೇದ ಫಲಂ ಲಿಖೇತ್ ||
ಸಮುದ್ರಾವರ್ಷಮಾಸಾದಿ ಧನಾಧ್ಯಕ್ಷಾಕ್ಷರಾನ್ವಿತಂ
ಜ್ಞಾತಂ ಮಯೇತಿ ಲಿಖಿತಂ ಸಂಧಿ ವಿಗ್ರಹ ಲೇಖಕೈಃ ||
ಏವಂ ವಿಧಂ ರಾಜಕೃತಂ ಶಾಸನಂ ತದುದಾಹೃತಂ ||
—ಬೃಹಸ್ಪತಿ ಸ್ಮೃತಿ [ಸಂ : ಕೆ.ವಿ. ರಂಗಸ್ವಾಮಿ ಐಯ್ಯಂಗಾರ್], ಪು. 62–3.

[53] ದೇವಸ್ಥಾನಗಳಿಗೋ ವ್ಯಕ್ತಿಗಳಿಗೋ ತಿಂಗಳಿಗೆ ಅಥವಾ ವರ್ಷಕ್ಕೆ ಧನರೂಪವಾಗಿ ಅಥವಾ ವಸ್ತುರೂಪವಾಗಿ ಇಷ್ಟನ್ನು ಕೊಡಬೇಕೆಂದು ಮಾಡಿರುವ ನಿಯಮವೇ 'ನಿಬಂಧ'. ಉದಾಹರಣೆಗೆ ಕನ್ನಡ ಶಾಸನಗಳಲ್ಲಿ ಯಾವುದೋ ದೇವಸ್ಥಾನಕ್ಕೆ ತಂಬುಲಿಗರೂ ತೈಲಿಗರೂ ವರ್ಷಕ್ಕೆ ಇಷ್ಟು ಎಲೆ, ಇಷ್ಟು ಎಣ್ಣೆಗಳನ್ನು ಕೊಡುವುದಾಗಿ ಒಪ್ಪಿಕೊಳ್ಳುತ್ತಾರೆ. ಇದನ್ನೇ 'ನಿಬಂಧ'ವೆಂದು ಕರೆಯುವುದು. [ನೋಡಿ—History of Dharmaśāstra, II. ii, p. 360, footnotes]. ಮಿತಾಕ್ಷರಾ ವ್ಯಾಖ್ಯಾನದಲ್ಲಿಯೂ 'ನಿಬಂಧ' ಎನ್ನುವುದಕ್ಕೆ ಇದೇ ರೀತಿಯ ವ್ಯಾಖ್ಯಾನವಿದೆ.

[54] ಯಾಜ್ಞವಲ್ಕ್ಯ ಸ್ಮೃತಿ (ಸಂ. ಜೆ. ಆರ್. ಘರ್ಪುರೆ, ಮಿತಾಕ್ಷರಾ ಟೀಕಾಸಮೇತ), ಪು. 92.

ಭಾರತೀಯ ಶಾಸನಗಳು ಇಂತಹ ಸ್ಮೃತಿಗಳಲ್ಲಿ ಹೇಳಿರುವ ನಿಯಮಗಳಿಗನುಸಾರವಾಗಿ ರಚಿತವಾಗಿರುವ ಅಂಶವನ್ನು ಕ್ರಿ.ಶ. 1791ರಷ್ಟು ಹಿಂದೆಯೇ ಸರ್ ವಿಲಿಯಂ ಜೋನ್ಸ್ ಅವರು ಗಮನಿಸಿದ್ದಾರೆ. ಕಂಚಿಯಲ್ಲಿ ದೊರೆತ ತಾಮ್ರಪಟವೊಂದನ್ನು ಇಂಗ್ಲೀಷಿಗೆ ಅನುವಾದಿಸಿ ಬಳಿಕ ಹೀಗೆ ಹೇಳುತ್ತಾರೆ—"It may be remembered that this whole grant is confirmable to the rules of YĀGNYAWALCYA in whose work we find the following verse—ದತ್ವಾ ಭೂಮಿಂ..." [Asiatick Researches, III, p. 50].

ಶಾಸನಗಳನ್ನು ಬರೆಯುವುದು ಮುಂದೆ ಬರುವ ರಾಜರ ಅವಗಾಹನೆಗಾಗಿ (ದಾನವನ್ನು ನಡೆಯಿಸಿಕೊಡ ಬೇಕಾದವರು ಮುಂದೆ ಬರುವ ರಾಜರು ತಾನೆ!). ಶಾಸನದಲ್ಲಿ ರಾಜನ ಚಿಹ್ನೆ ಇರಬೇಕು, ರಾಜನ ವಂಶಸ್ಥರ ವಿಷಯವಿರಬೇಕು, ದಾನದ ಪ್ರಮಾಣವಿರಬೇಕು, 'ದಾನಚ್ಛೇದೋಪವರ್ಣನ'ವಿರಬೇಕು, ರಾಜನ ಸಹಿ, ದಾನದ ಕಾಲ—ಇತ್ಯಾದಿಗಳೂ ಇರಬೇಕು.

'ದಾನಚ್ಛೇದೋಪವರ್ಣನ' ಎಂಬ ಮಾತಿಗೆ ಎರಡು ರೀತಿಗಳಲ್ಲಿ ಅರ್ಥವನ್ನು ಮಾಡಲಾಗಿದೆ. ಡಾ|| ಪಿ. ವಿ. ಕಾಣೆಯವರು, ಬಹುಶಃ ಯಾಜ್ಞವಲ್ಕ್ಯ ಸ್ಮೃತಿಯ ಅತ್ಯಂತ ಪ್ರಾಚೀನ ವ್ಯಾಖ್ಯಾನಕಾರನಾದ ವಿಶ್ವರೂಪನ ವ್ಯಾಖ್ಯಾನವನ್ನನುಸರಿಸಿ "ದಾನಾಪಹಾರವನ್ನು ವಿರೋಧಿಸುವ ಸ್ಮೃತಿವಾಕ್ಯಗಳನ್ನು ಶಾಸನದಲ್ಲಿ ಉದ್ಧರಿಸಬೇಕು" ಎಂದು ಅರ್ಥಮಾಡಿದ್ದಾರೆ. ಮಿತಾಕ್ಷರಾ ವ್ಯಾಖ್ಯಾನದ ಪ್ರಕಾರ ದಾನಮಾಡಿರುವ ಭೂಮಿಯನ್ನು ಉಳಿದ ಭಾಗಗಳಿಂದ ಛೇದಿಸುವ (ಎಂದರೆ ಪ್ರತ್ಯೇಕಿಸುವ) ವಿಷಯದ ವರ್ಣನೆ ಶಾಸನದಲ್ಲಿ ಇರಬೇಕು.[55] ಎಂದರೆ ದಾನವಾಗಿ ಕೊಟ್ಟಿರುವ ಭೂಮಿಯ ಮೇರೆಗಳ ವರ್ಣನೆ ಅಥವಾ ಚಕ್ಕುಬಂದಿಯ ನಿರೂಪಣೆಯು ಶಾಸನದಲ್ಲಿರಬೇಕು. ಇದು ಆವಶ್ಯಕ. ಏಕೆಂದರೆ "ಅವಾಟಸ್ಯ ನದೀ ನಗರ ವರ್ತ್ಮಾದೇಃ ಸಂಚಾರಿತ್ವೇನ ಭೂಮೇರ್ನ್ಯೂನಾಧಿಕಭಾವಸಂಭವಾತ್ತನ್ನಿವೃತ್ತ್ಯರ್ಥಂ"—ನದಿ, ನಗರ ಮತ್ತು ಮಾರ್ಗಗಳಿಂದ ಭೂಮಿಗೆ ನ್ಯೂನ ಅಥವಾ ಅಧಿಕ ಭಾವಗಳು ಸಂಭವಿಸುವುದುಂಟು, ಅದರ ನಿವಾರಣೆಗೋಸ್ಕರ. ದಾನಕ್ಕಿಂತ ಅದರ ಪಾಲನೆ ಶ್ರೇಯಸ್ಕರವಾದುದು ("ದಾನಾತ್ ಶ್ರೇಯೋನುಪಾಲನಂ") ಎಂದೂ ಬರೆಯಿಸಬೇಕು. ಶಾಸನ ಹಾಕಿಸಬೇಕಾದವನು ಮಹೀಪತಿಯೇ[56] ಹೊರತು, ಎಂದರೆ ದಾನಿಯೇ ಹೊರತು ದಾನವನ್ನು ಸ್ವೀಕರಿಸುವವನಲ್ಲ. ("ಮಹೀಪತಿರ್ನಭೋಗಪತಿಃ"). ದಾನಮಾತ್ರದಿಂದ ದಾನದ ಫಲವು ಸಿದ್ಧಿಸುವುದರಿಂದ ಶಾಸನದ ಆವಶ್ಯಕತೆ ಎಲ್ಲಿ ಎಂಬ ಪ್ರಶ್ನೆ ಏಳಬಹುದು. ದಾನವು ಅಭಿವೃದ್ಧಿ ಹೊಂದಬೇಕಾದರೆ, ಇನ್ನೂ ಅತಿಶಯವಾದ ಫಲವನ್ನು ಪಡೆಯಬೇಕಾದರೆ ಶಾಸನವನ್ನು ಹಾಕಿಸಲೇಬೇಕು. ("ದಾನಮಾತ್ರೇಣೈವ ದಾನಫಲೇ ಸಿದ್ಧೇ ಶಾಸನ ಕಾರಣಂ ಭೋಗಾಭಿವೃದ್ಧ್ಯಾಶಿ ಫಲಾತಿಶಯಾರ್ಥಂ")–ಇತ್ಯಾದಿ ಯಾಜ್ಞವಲ್ಕ್ಯನ ಶ್ಲೋಕಗಳಲ್ಲಿಲ್ಲದ ಹಲವು ವಿಷಯಗಳನ್ನು, ವಿವರಗಳನ್ನು ವಿಜ್ಞಾನೇಶ್ವರನು ಕೊಡುತ್ತಾನೆ. ಇಂತಹ ಕಡೆ ವಿಜ್ಞಾನೇಶ್ವರನು ತನ್ನ ಸಮಕಾಲೀನ ಶಾಸನಗಳ ರಚನೆಯನ್ನು ಗಮನದಲ್ಲಿಟ್ಟುಕೊಂಡಿದ್ದಾನೆ ಎಂಬುದರಲ್ಲಿ ಸಂದೇಹವಿಲ್ಲ. ಇಲ್ಲೆಲ್ಲಾ ತಾಮ್ರಪಟಗಳನ್ನೇ ಗಮನದಲ್ಲಿ ಇಟ್ಟು

---

[55] "ದೀಯತೇ ಇತಿ ದಾನಂ ಕ್ಷೇತ್ರಾದಿ ತಸ್ಯ ಛೇದಃ ಛಿದ್ಯತೇ ಅನೇನೇತಿ ಛೇದಃ ನದ್ಯಾವಾಟೌ ನಿವರ್ತನಂ ತತ್ಪರಿಮಾಣಂ ಚ ತಸ್ಯೋಪವರ್ಣನಂ ಅಮುಕ ನದ್ಯಾ ದಕ್ಷಿಣತೋಽಯಂ ಗ್ರಾಮಃ ಕ್ಷೇತ್ರಂ ವಾ, ಪೂರ್ವತೋಽಮುಕಗ್ರಾಮಸ್ಯೈತಾವಾನ್ನಿವರ್ತನ ಪರಿಮಾಣಂ ಚ ಲೇಖ್ಯಮೇವಂ ಅವಾಟಸ್ಯ ನದೀನಗರವರ್ತ್ಮಾದೇಃ ಸಂಚಾರಿತ್ವೇನ ಭೂಮೇರ್ನ್ಯೂನಾಧಿಕ ಭಾವಸಂಭವಾತ್ತನ್ನಿವೃತ್ತ್ಯರ್ಥಂ".

[56] ಬ್ರಹ್ಮಶಿವನಲ್ಲಿ ಒಂದು ವಿಲಕ್ಷಣವಾದ ಹೇಳಿಕೆಯಿದೆ. ಅವನ ಪ್ರಕಾರ ಕ್ಷತ್ರಿಯನೇ ಭೂಮಿಗೆ ಒಡೆಯನಾದ್ದರಿಂದ, ಕ್ಷತ್ರಿಯನೇ ತೀರ್ಥಂಕರನಾಗಿರುವುದರಿಂದ (ತೀರ್ಥಂಕರರೆಲ್ಲರೂ ಕ್ಷತ್ರಿಯರು) ಕ್ಷತ್ರಿಯನೇ ಎಲ್ಲರಿಗಿಂತ ಶ್ರೇಷ್ಠ. ವರ್ತಕರೂ, ದ್ವಿಜರೂ, ಶೂದ್ರರೂ ಭೂಮಿಗೆ ಒಡೆಯರಲ್ಲದ್ದರಿಂದ ಅವರು ಕೊಟ್ಟದ್ದು ಸಲ್ಲುವುದಿಲ್ಲ. ಆದರೆ ರಾಜರು ಕೊಟ್ಟ ದಾನವು ಮಾತ್ರ ಸಲ್ಲುತ್ತದೆ.

ಪರದರುಮಾದ್ವಿಜರುಂ ಶೂ।
ದ್ರರುಮುರ್ವಿಗೆ ನಾಥರಲ್ಲರದಱಿಂದಾ ಮೂ॥
ವರುವಿತ್ತುದು ಸಲ್ಲದು ಭೂ।
ಪರಾಟಮುಮಿತ್ತ ವೃತ್ತಿಯುಂ ನೆಱೆ ಸಲ್ಗುಂ॥

ಆದಿಬ್ರಹ್ಮಸುತನೂ, ಮನುಕುಳತಿಳಕನೂ, ಮೇದಿನೀಪತಿಯೂ ಆದ "ಭರತೇಶ್ವರನಾದೊರೆಯಂ ಮಾಡಿದನುವೆ ಶಾಸನಮುಲ್ತೇ" (ಸಮಯಪರೀಕ್ಷೆ, 2. 23–5).

ರಾಜರು ದತ್ತಿಗಳನ್ನು ಕೊಡುವ ಸಂಪ್ರದಾಯ ಭರತನಿಂದ ಆರಂಭವಾಯಿತೆಂದು ಬ್ರಹ್ಮಶಿವನ ಅಭಿಪ್ರಾಯವಿರುವಂತೆ ಕಾಣುತ್ತದೆ.

ಕೊಂಡಿದ್ದರೂ ಈ ಮಾತುಗಳು ಶಿಲಾಶಾಸನಗಳಿಗೂ ಅನ್ವಯವಾಗುತ್ತವೆ. ಒಟ್ಟಿನಲ್ಲಿ ನಮ್ಮ ತಾಮ್ರಪಟಗಳೂ ಶಿಲಾಶಾಸನಗಳೂ, ಸ್ಮೃತಿಗಳಲ್ಲಿ ಉಕ್ತವಾಗಿರುವ ಮಾದರಿಯಲ್ಲಿ ರಚಿತವಾಗಿವೆ ಎಂದು ಹೇಳಬಹುದು.

ಭಾರತೀಯರ ಪ್ರಕಾರ ಯಾವ ಕೃತಿಯೇ ಆಗಲಿ ಮಂಗಳಶ್ಲೋಕದಿಂದ ಅಥವಾ ಮಂಗಳವಾಚಕದಿಂದ ಆರಂಭವಾಗಬೇಕು. ಕನ್ನಡದ ಅತ್ಯಂತ ಪ್ರಾಚೀನ ಶಿಲಾಶಾಸನವಾದ ಹಲ್ಮಿಡಿಶಾಸನವು ದಾನವರಿಗೆ ಯುಗಾಂ-ತಾಗ್ನಿಯೂ, ಶಿಷ್ಟರಿಗೆ ಸುದರ್ಶನನೂ ಆಗಿರುವ ಹರಿಯ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.[57] ಮಳವಳ್ಳಿಯ ಶಾತವಾಹನ ಮತ್ತು ಕದಂಬ ಪ್ರಾಕೃತ ಶಾಸನಗಳೆರಡೂ "ಸಿದ್ಧಂ, ಜಯತಿ ಭಗವಾನ್ ಮಟ್ಟಪಟ್ಟಿ ದೇವಃ" ಎಂದು ಆರಂಭವಾಗುತ್ತವೆ.[58] ಕದಂಬರ ಕೆಲವು ಪ್ರಾಚೀನ ತಾಮ್ರಪಟಗಳು ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತವೆ.[59] ಗಂಗರ ತಾಮ್ರಪಟಗಳು ಸಾಮಾನ್ಯವಾಗಿ "ಜಿತಂ ಭಗವತಾ ಗತಘನ ಗಗನಾಭೇನ ಪದ್ಮನಾಭೇನ" ಎಂದು ಆರಂಭವಾಗುತ್ತವೆ. ಹಲ್ಮಿಡಿ ಶಾಸನವನ್ನು ಬಿಟ್ಟರೆ ಬಹುಮಟ್ಟಿಗೆ ಕನ್ನಡದ ಪ್ರಾಚೀನ ಶಿಲಾಶಾಸನಗಳ ಆರಂಭದಲ್ಲಿ ಪ್ರಾರ್ಥನಾ ಶ್ಲೋಕವಿರುವುದಿಲ್ಲ. ಆರಂಭದಲ್ಲಿ ಸ್ವಸ್ತಿ, ಸ್ವಸ್ತಿಶ್ರೀ, ಶ್ರೀ, ಸಿದ್ಧಂ— ಇತ್ಯಾದಿ ಮಂಗಳವಾಚಕಗಳು ಮಾತ್ರ ಇರುವುದುಂಟು, ಇಲ್ಲದೆ ಇರುವುದೂ ಉಂಟು. ಸುಮಾರು 8 ಅಥವಾ 9 ನೆಯ ಶತಮಾನದ ಶಿಲಾಶಾಸನಗಳ ಆರಂಭದಲ್ಲಿ ಸಂಸ್ಕೃತ ಪ್ರಾರ್ಥನಾ ಶ್ಲೋಕಗಳು ಹೆಚ್ಚು ಕಾಣಿಸಿಕೊಳ್ಳಲಾರಂಭವಾಗಿ ಕ್ರಮೇಣ ಅವುಗಳ ಸಂಖ್ಯೆ, ವೈವಿಧ್ಯ ಹೆಚ್ಚುತ್ತಾ ಹೋಗಿದೆ. ಕ್ರಿಸ್ತಶಕ 866ರ ಶಾಸನದಲ್ಲಿ ಈ ಮಂಗಳಶ್ಲೋಕಗಳಿವೆ :

ಜಯತಿ ಭುವನ ಕಾರಣಂ ಸ್ವಯಂಭೂರ್ಜಯತಿ ಪುರಂದರನಂದನೋ ಮುರಾರಿಃ ।
ಜಯತಿ ಗಿರಿಸುತಾನಿರುದ್ಧದೇಹೋ ದುರಿತಭಯಾಪಹಾರೋ ಹರಿಶ್ಚ ದೇವಃ ॥
ಸ ವೋವ್ಯಾದ್ ವೇಧಸಾ ಧಾಮ ಯನ್ನಾಭಿಕಮಲಂ ಕೃತಂ ।
ಹರಶ್ಚ ಯಸ್ಯ ಕಾಂತೇಂದುಕಲಯಾ ಕಮಲಂಕೃತಂ ॥[60]

ಇದೇ ಆದಿಪದ್ಯಗಳು ಕ್ರಿ.ಶ. 876ರ ಮತ್ತೊಂದು ಶಾಸನದಲ್ಲಿಯೂ ಬಂದಿವೆ.[61]

ಶಾಸನಗಳು ಶೈವ ಶಾಸನವಾಗಿದ್ದರೆ ಶಿವಸ್ತೋತ್ರದಿಂದಲೂ, ವೈಷ್ಣವ ಶಾಸನವಾಗಿದ್ದರೆ ವಿಷ್ಣುಸ್ತುತಿಯಿಂದಲೂ ಆರಂಭವಾಗುತ್ತವೆ. ಸಾಮಾನ್ಯವಾಗಿ ಶಾಸನಾರಂಭದಲ್ಲಿ ಬರುವ ವಿಷ್ಣುಸ್ತುತಿ ಇದು :

ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ
ದಕ್ಷಿಣೋನ್ನತ ದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥[62]

---

[57] ಜಯತಿ ಶ್ರೀ ಪರಿಷ್ವಂಗ ಶಾರ್ಙ್ಗ [ವ್ಯಾನತಿ]ರಚ್ಯುತಃ
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾಂತು] ಸುದರ್ಶನಃ ॥
—ಪ್ರಬುದ್ಧ ಕರ್ಣಾಟಕ, XX. iii. ಪು. 38
—MAR (1936), p. 73.

[58] EC. VII. Sk. 263, c. 150 A.D; 264, c. 250 A.D.

[59] EI. VI. p. 16 (6th Century).

[60] EI. VI. p. 102, 866 A.D.

[61] BKI. I. i. 24, 897 A.D.

[62] ರಸಾತಳಕ್ಕೆ ಇಳಿದಿದ್ದ ಭೂದೇವಿಯನ್ನು ವಿಷ್ಣುವು ವರಾಹರೂಪಿಯಾಗಿ ಮೇಲೆತ್ತಿದ ಕಥೆ ಪುರಾಣ ಪ್ರಸಿದ್ಧವಾದುದು. ಈ ಶ್ಲೋಕದ ಕಲ್ಪನೆಯು ಕ್ರಿ.ಶ. 6ನೆಯ ಶತಮಾನದ ಬಾದಾಮಿ ಗುಹಾಶಿಲ್ಪದಲ್ಲಿ ದೊರೆಯುತ್ತದೆ. ವರಾಹರೂಪಿಯಾದ ವಿಷ್ಣು ಪಾತಾಳದಿಂದ ಭೂದೇವಿಯನ್ನು ಎಡಗೈಯಿಂದ ಎತ್ತಿ ಹಿಡಿದಿದ್ದಾನೆ. ಅವನ ಕೋರೆಹಲ್ಲಿನ ಮೇಲೆ ಭೂದೇವಿಯ ದೇಹವು

ಬಹು ಪ್ರಸಿದ್ಧವಾದ ಈ ಶ್ಲೋಕವು ಕ್ರಿ. ಶ. 708ರ ರಾಯಗಡ ತಾಮ್ರಪಟಗಳಲ್ಲಿ ದೊರಕುತ್ತದೆ.[63] ಕನ್ನಡ ಶಾಸನದಲ್ಲಿ ಕ್ರಿ. ಶ. 930ರ ಕಳಸ ಶಾಸನದಲ್ಲಿ ಗೋಚರವಾಗುತ್ತದೆ.[64] ಮುಂದೆ ನಾವು ನೋಡುವಂತೆ ಶಾಸನಗಳ ಆರಂಭದಲ್ಲಿ ಬರುವ ಹಲವು ಶ್ಲೋಕಗಳು ಪ್ರಸಿದ್ಧಗ್ರಂಥಗಳ ಆದಿ ಶ್ಲೋಕಗಳಾಗಿರುವಂತೆ ಇದೂ ಯಾವುದೋ ಗ್ರಂಥದ ಆದಿ ಶ್ಲೋಕವಾಗಿದ್ದಿರಬಹುದೆ ?

ಇದೇ ವರಾಹಾವತಾರವನ್ನು ಪ್ರಾರ್ಥಿಸಿರುವ, ಆದರೆ ಮೇಲಿನ ಶ್ಲೋಕದಷ್ಟು ಪ್ರಸಿದ್ಧವಾಗಿರದಿದ್ದರೂ ಆಗಾಗ್ಗೆ ಕಾಣಿಸಿಕೊಳ್ಳುವ ಮತ್ತೊಂದು ಶ್ಲೋಕವಿದೆ :

ನಮಸ್ತಸ್ಮೈ ವರಾಹಾಯ ಲೀಲಯಾ ಚರತೇ ಮಹೀಂ
ಖುರಾಂತರಗತೋ ಯಸ್ಯ ಮೇರುಃ ಕಣಕಣಾಯತೇ ॥[65]

ವಿಷ್ಣುವಿನ ವರಾಹಾವತಾರವು ಕನ್ನಡಿಗರ ಮನಸ್ಸನ್ನು ಬಹುವಾಗಿ ಆಕರ್ಷಿಸಿದೆ.

ಶೈವ ಶಾಸನಗಳ ಆರಂಭದಲ್ಲಿ ಬಹುವಾಗಿ ಕಾಣಿಸಿಕೊಳ್ಳುವ ಮಂಗಳ ಶ್ಲೋಕವಿದು :

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ॥

ಏಳನೆಯ ಶತಮಾನದ ಸುಪ್ರಸಿದ್ಧ ಸಂಸ್ಕೃತ ಕವಿ ಬಾಣಭಟ್ಟನ ಹರ್ಷಚರಿತದ ಮಂಗಳಶ್ಲೋಕವಿದು. ಈ ಶ್ಲೋಕ ನಮ್ಮ ಶಾಸನ ಕವಿಗಳ ಮನಸ್ಸನ್ನು ಬಹುವಾಗಿ ಆಕರ್ಷಿಸಿದೆ.[66] (ಇದೇ ಕವಿಯ ಕಾದಂಬರಿಯ ಪ್ರಾರ್ಥನಾ ಶ್ಲೋಕಗಳಲ್ಲೊಂದಾದ "ಜಯಂತಿ ಬಾಣಾಸುರಮೌಲಿ ಲಾಲಿತಾಃ........"ಎಂಬ ಶ್ಲೋಕ ಉತ್ತರ ಭಾರತದ ಶಾಸನ ಗಳಲ್ಲಿ ಬಳಕೆಯಾಗಿದೆ). ಶಾಸನಗಳ ಮಂಗಳಶ್ಲೋಕವಾಗಿ ಈ ಪದ್ಯ ಬರುವಷ್ಟು ಪ್ರಾಯಶಃ ಇನ್ನಾವ ಶ್ಲೋಕವೂ ಬರುವುದಿಲ್ಲ. ಇದು ಬಹುಶಃ 9ನೆಯ ಶತಮಾನದ ಶಾಸನಗಳಲ್ಲಿ ಮೊದಲು ಕಾಣಿಸಿಕೊಳ್ಳುತ್ತದೆ.[67] ಇದನ್ನು ಅನುಕರಿಸಿ–

---

ವಿಶ್ರಾಂತವಾಗಿದೆ. [James Burgess : Archaeological Survey of Western India, Belgaum and Kaladgi Districts, Plate XXIII.]

ಎಂಟನೆಯ ಶತಮಾನದಲ್ಲಿ ರಚಿತವಾದ ಎಲ್ಲೋರದ ಕೈಲಾಸ ದೇವಾಲಯದಲ್ಲೂ ಇಂಥದೇ ವಿಗ್ರಹವಿದೆ. [A. Goswamy : The Art of the Rāṣṭrakūṭas, Plate XIX].

[63] EI X. p. 146, 708 A.D.

[64] EI. XIII. p. 329, 930 A.D.

[65] BKI. I. i. 47, 995 A.D.

[66] ಬಾದಾಮಿಯ ಬಳಿಯಿರುವ ಬನಶಂಕರಿಯ ಹತ್ತಿರದ ಕ್ರಿ.ಶ. 1501 ರ ಶಾಸನವೊಂದರ ಆರಂಭದಲ್ಲಿ "ನಮಸ್ತುಂಗ....." ಎಂಬ ಶ್ಲೋಕವೂ, ಅನಂತರ ಬಳಿಕ ಮೇಘದೂತದ ಟೀಕಾಕಾರ ಮಲ್ಲಿನಾಥನು ಮಾಡಿರುವ ಗಣಪತಿ ಸ್ತೋತ್ರವೂ ಬಂದಿದೆಯೆಂದು ಡಾ॥ ಭಾವುದಾಜಿಯವರು ಹೇಳುತ್ತಾರೆಂದು ಡಾ॥ ಜೆ. ಬರ್ಗೆಸ್ ಹೇಳಿದ್ದಾರೆ [Archæological Survey of Western India, Belgaum and Kaladgi Districts, p. 28]. ಈ ಶಾಸನವು ಎಲ್ಲಿ ಪ್ರಕಟವಾಗಿದೆಯೋ ತಿಳಿಯದು. ಮಲ್ಲಿನಾಥನ ಗಣಪತಿಸ್ತುತಿ ಹೀಗಿದೆ :

ಅಂತರಾಯ ತಿಮಿರೋಪಶಾಂತಯೇ ಶಾಂತಪಾವನಮಚಿಂತ್ಯ ವೈಭವಂ
ತಂ ನರಂ ವಪುಷಿ ಕುಂಜರಂ ಮುಖೇ ಮನ್ಮಹೇ ಕಿಮಪಿ ತುಂದಿಲಂ ಮಹಃ ॥

ಹೊಯ್ಸಳರ ಶಾಸನವೊಂದರಲ್ಲಿ "ನಮಸ್ತುಂಗ ಶಿರಶ್ಚುಂಬಿ" ಆದಮೇಲೆ "ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ। ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ॥" ಎಂಬ ಶ್ಲೋಕ ಬಂದಿದೆ [EC. V. BL. 116, 1117 A.D.] ಇದು ರಘುವಂಶದ ಮಂಗಳ ಶ್ಲೋಕವೆಂಬುದು ಸರ್ವರಿಗೂ ತಿಳಿದ ವಿಷಯವೇ.

[67] BKI. I. i. 22, 897 A.D.

4

ನಮಸ್ತುಂಗ ಜಟಾಚಂದ್ರಚಂದ್ರಿಕಾಭೋಗಭೂತಯೇ
ಭವಾನೀದೋರ್ಲತಾಗಾಢ ಪರೀರಂಭಾಯ ಶಂಭವೇ ॥[68]

ಮತ್ತು—
ನಮಸ್ತಾಂಬ್ರ ಜಟಾಜಾಳ ಬಾಳ ಪಲ್ಲವ ಶಾಳಿನೇ
ಬ್ರಹ್ಮಾಂಡ ಮಂಡಪಾರಂಭ ಪೂರ್ಣಕುಂಭಾಯ ಶಂಭವೇ ॥[69]

ಎಂಬ ಶಿವಸ್ತೋತ್ರಗಳು ಹುಟ್ಟಿರಬೇಕು. ಹಾಗೆಯೇ ಶಿವಸ್ತುತಿಪರವಾದ ಇನ್ನೂ ಅನೇಕ ಶ್ಲೋಕಗಳಿವೆ. ಉದಾಹರಣೆಗೆ:

ವಿಶುದ್ಧ ಜ್ಞಾನದೇಹಾಯ ತ್ರಿವೇದೀ ದಿವ್ಯಚಕ್ಷುಷೇ
ಶ್ರೇಯಃಪ್ರಾಪ್ತಿನಿಮಿತ್ತಾಯ ನಮಸ್ಸೋಮಾರ್ಧಧಾರಿಣೇ ॥[70]

ಇನ್ನೊಂದು ಶಾಸನದಲ್ಲಿ "ನಮಸ್ತುಂಗ........" ಆದಮೇಲೆ ಮುಂದಿನ ಶ್ಲೋಕ ಬಂದಿದೆ:

ಜಯತ್ಯಾನಂದ ಸಂದೋಹ ಜ್ಞಾನೈಶ್ವರ್ಯಮಯಸ್ಸದಾ
ಇಚ್ಛಾಮಾತ್ರ ಸಮುತ್ಪನ್ನ ಸಮಸ್ತ ಭುವನಶ್ಶಿವಃ ॥[71]

ಕೆಳಗಿನದು ಮತ್ತೊಂದು ಸುಂದರವಾದ ಶಿವಸ್ತೋತ್ರ:

ಪ್ರತ್ಯಕ್ಷವಸ್ತು ವಿಷಯಾಯ ಜಗದ್ಧಿತಾಯ
ವಿಶ್ವಸ್ಥಿತಿಪ್ರಳಯಸಂಭವಕಾರಣಾಯ
ಸರ್ವಾತ್ಮನೇ ವಿಜಿತಕೋಪಮನೋಭವಾಯ
ತುಭ್ಯಂ ನಮಃ ತ್ರಿಭುವನಪ್ರಭವೇ ಶಿವಾಯ ॥[72]

ಇದಕ್ಕಿಂತ ಸುಂದರವಾದ ಪ್ರಾರ್ಥನಾ ಪದ್ಯವೊಂದಿದೆ. ಶಿವನ ಅವತಾರಗಳಲ್ಲೊಂದಾದ ಲಕುಲೀಶನ ಪ್ರಾರ್ಥನೆಯೊಂದಿಗೆ ಆ ಶಾಸನವು ಆರಂಭವಾಗುತ್ತದೆ.[73] ಆದರ ಅನುವಾದ ಹೀಗಿದೆ: "ತನಗೆ ಇಷ್ಟವಾಗಿರುವವರಿಗೆ ದೃಷ್ಟಾದೃಷ್ಟ ಫಲದಾಯಕವಾದ ತ್ರಿಲೋಕವಂದಿತ ಲಕುಲೀಶನ ಶಾಸನವು ಜಯಿಸುತ್ತದೆ. ವೇದಗಳೆಂಬ ದಂಡವನ್ನು ಹಿಡಿದ ನಟನಾಗಿ, ಧರ್ಮಗಳೆಂಬ ನಟಿಯನ್ನು ಶಿಕ್ಷಿಸುತ್ತಿರುವ ಅವನ ತ್ರಿಲೋಕೀಮಂಗಳಪ್ರದವಾದ ಶಾಸನವು

---

[68] EC. VII. Sk. 185, 1158 A.D.
[69] BKI. I. ii. 204, 1125 A.D.
[70] EC. VII. Sk. 14, 1089 A.D.
[71] BKI. I. ii. 155, 1104–1105 A.D.
[72] EC. VII. Sk. 16, 1085 A.D.
[73] EC. VII. Sk. 99, 1113 A.D.

" ಶ್ರೀಮತ್ತ್ರೈಲೋಕ್ಯವಂದಸ್ಯ ಲಕುಳೀಶಸ್ಯ ಶಾಸನಂ
ಜಯತ್ಯನುಗತಾತ್ಮೇಷ್ಟ ದೃಷ್ಟಾದೃಷ್ಟ ಫಲಪ್ರದಂ
ಯೋ ಧರ್ಮಾಳಿನಟೀಂ ಶಾಸ್ತಿ ವೇದದಂಡಧರೋ ನಟಃ
ತಚ್ಛಾಸನಂ ಜಯತ್ಯೇತತ್ತ್ರಿಳೋಕೀ ಮಂಗಳಪ್ರದಂ ॥
॥ ವಸಂತತಿಳಕಂ ॥
ಯದ್ವಿಶ್ವನಾಥಪದವೀಸ್ತುತಿರೂಪವೇದ-
ಪ್ರಾತ್ಯೈಕಶಾಸನಶಿಳಾತಳವದ್ವಿಭಾತಿ
ಪಂಕೇಜ ಗರ್ಭಹೃದಯಂ ಸ ಜಯತ್ಯಚಿಂತ್ಯ-
ಸ್ತ್ರೈಳೋಕ್ಯ ಶಾಸನ ಪಟುಸ್ತ್ರರುಹೇಂದು ಮೌಳಿಃ ॥

ಜಯಿಸುತ್ತದೆ. ಬ್ರಹ್ಮನ ಹೃದಯವು ವಿಶ್ವನಾಥನ ಪದವೀಸ್ತುತಿರೂಪವಾದ ವೇದವ್ರಾತಗಳನ್ನು ಬರೆದಿರುವ ಶಾಸನಶಿಲಾತಲವಾಗಿದೆ. ಅಂತಹ ತ್ರೈಲೋಕ್ಯ ಶಾಸನಪಟುವಾದ ಬಾಲಚಂದ್ರಮೌಳಿಯು ಜಯಿಸಲಿ.''

ಬ್ರಹ್ಮನನ್ನು ಪ್ರತ್ಯೇಕವಾಗಿ ಸ್ತುತಿಸಿರುವ ಮಂಗಲಶ್ಲೋಕ ಬಹುಶಃ ಯಾವುದೂ ಇಲ್ಲ. ತ್ರಿಮೂರ್ತಿಗಳನ್ನು ಒಟ್ಟಿಗೆ ಸ್ತುತಿಸಿರುವ ಶ್ಲೋಕಗಳು ಹಲವಾರು ಉಂಟು. ಹೊಯ್ಸಳರ ಶಾಸನಗಳಲ್ಲಿ ಕೇಶವ ಮತ್ತು ಶಿವರನ್ನು ಅಭೇದವಾಗಿ ಕಲ್ಪಿಸಿ ಸ್ತುತಿಸಿರುವ ಶ್ಲೋಕಗಳು ಸಾಮಾನ್ಯವಾಗಿ ದೊರೆಯುತ್ತವೆ.

ಶ್ರೀಮತ್ತ್ರೈಲೋಕ್ಯ ಪೂಜ್ಯಾಯ ಸರ್ವಕರ್ಮಸುಸಾಕ್ಷಿಣೇ
ಫಲದಾಯ ನಮೋ ನಿತ್ಯಂ ಕೇಶವಾಯ ಶಿವಾಯ ಚ ॥[74]

ಇನ್ನೊಂದು ಶಾಸನದಲ್ಲಿಯೂ ಹೀಗೆಯೇ ಹರಿ ಮತ್ತು ಹರರ ಅಭೇದರೂಪಶ್ಲೋಕವನ್ನು ಕಾಣಬಹುದು.[75] ಹರಿ ಹರ ಬ್ರಹ್ಮರನ್ನು ಒಟ್ಟಾರೆ ಸ್ತುತಿಸಿರುವ ಒಂದು ಕನ್ನಡ ಪದ್ಯವಿದೆ. ಶಾಸನಾರಂಭದ ಪ್ರಾರ್ಥನಾ ಪದ್ಯಗಳು ಕನ್ನಡದಲ್ಲಿರುವುದು ಅತ್ಯಪೂರ್ವ.[76]

ಜೈನ ಶಾಸನಗಳು ಸಾಮಾನ್ಯವಾಗಿ ಜಿನ ಸ್ತುತಿಯಿಂದ ಆರಂಭವಾಗುತ್ತವೆ. ಸು. 600ರ ಸಂಸ್ಕೃತ ಜೈನ ಶಾಸನದ ಆರಂಭದಲ್ಲಿ ಈ ಪ್ರಾರ್ಥನಾ ಪದ್ಯವಿದೆ.[77]

ಸಿದ್ಧಸ್ವಸ್ತಿ ॥ ಜಿತಂ ಭಗವತಾ ಶ್ರೀಮದ್ಧರ್ಮ ತೀರ್ಥವಿಧಾಯಿನಾ
ವರ್ದ್ಧಮಾನೇನ ಸಂಪ್ರಾಪ್ತ ಸಿದ್ಧಿ ಸೌಖ್ಯಾಮೃತಾತ್ಮನಾ
ಲೋಕಾಲೋಕ ದ್ವಯಾಧಾರಂ ವಸ್ತುಸ್ಥಾಸ್ನು ಚರಿಷ್ಣು ವಾ
ಸಂವಿಧಾಲೋಕಶಕ್ತಿಃ ಸ್ವಾವ್ಯಶ್ನುತೇ ಯಸ್ಯ ಕೇವಲಾ ॥
ಜಗತ್ಯಚಿಂತ್ಯ ಮಾಹಾತ್ಮ್ಯ ಪೂಜಾತಿಶಯಮೀಯುಷಃ
ತೀರ್ಥಕೃನ್ನಾಮ ಪುಣ್ಯೌಘ ಮಹಾರ್ಹಂತ್ಯಮುಪೇಯುಷಃ
ತದನುಶ್ರೀ ವಿಶಾಲಯಂ ಜಯತ್ಯದ್ಯ ಜಗದ್ಧಿತಂ
ತಸ್ಯ ಶಾಸನಮವ್ಯಾಜಂ ಪ್ರವಾದಿಮತಶಾಸನಂ ॥

ಪ್ರಾಚೀನ ಜೈನಶಾಸನಗಳ ಆರಂಭದಲ್ಲಿ "ಭದ್ರಮಸ್ತು ಜಿನಶಾಸನಾಯ" ಎಂದಿಷ್ಟು ಮಾತ್ರ ಇರುವುದು ರೂಢಿ. 10 ಮತ್ತು 11ನೆಯ ಶತಮಾನದ ಜೈನ ಶಾಸನಗಳಲ್ಲಿ ಒಂದು ಶ್ಲೋಕ ಕಾಣಿಸಿಕೊಳ್ಳಲಾರಂಭವಾಗುತ್ತದೆ:

ಶ್ರೀಮತ್ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಮ್
ಜೀಯಾತ್ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥ [78]

---

74 EC. V. Hn. 65, 1145 A.D.

75 BKI. I. ii. 136, 1091 A.D.

76 "ಶ್ರೀ ವಾಣೀ ಗಿರಿಜಾಧಿಪರ್ ಗರುಡ ಹಂಸೋಕ್ಷಾಸನರ್ ವಾರ್ಧಿರಾ।
ಜೀವಾದ್ರೀಂದ್ರ ನಿವಾಸಿಗಳ್ ಮಧುಪ ರಕ್ತಾಂಭೋರುಹೇಂದು ಪ್ರ।
ಭಾವರ್ ಸತ್ವರಜಸ್ತಮೋಗುಣಯುತರ್ ದ್ವಿಶ್ವಸ್ಥ ತ್ರಿಹೇತ್ರೋತ್ಪಲರ್ ।
ಗೋವಿಂದಾಬ್ಜಜ ಶಂಕರ ತ್ರಿಪುರುಷರ್ ಪಾಳಿಕ್ಕೆ ನಮ್ಮಂ ಚಿರಂ ॥"
ಇದಾದ ನಂತರ "ನಮಸ್ತುಂಗ.........." ಇತ್ಯಾದಿ ಶ್ಲೋಕಗಳು ಬರುತ್ತವೆ.

77 EC. II. No. 1, C. 600 A.D.

78 BKI. I. i. 65, 1028-9 A.D.

ಈ ಶ್ಲೋಕಕ್ಕೆ "ಜಯತ್ಯಾವಿಷ್ಕೃತಂ........", "ನಮಸ್ತುಂಗ........" ಎಂಬ ಶ್ಲೋಕಗಳಿಗಿರುವ ಸ್ಥಾನವೇ ಜೈನರಲ್ಲಿದೆ. ಇದು ಯಾವುದೋ ಪ್ರಸಿದ್ಧ ಗ್ರಂಥದ ಪ್ರಾರ್ಥನಾ ಪದ್ಯವಿರಬಹುದೆ ಎಂಬ ಸಂದೇಹ ಅನೇಕ ಕಾಲ ಇದ್ದಿತು. ಕ್ರಿ.ಶ. 7ನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಅಕಳಂಕನ 'ಪ್ರಮಾಣ ಸಂಗ್ರಹ'ವು ಸುಮಾರು ಇಪ್ಪತ್ತು ವರ್ಷಗಳ ಹಿಂದೆ ದೊರೆತು ಪ್ರಕಟವಾದಾಗ ಈ ಶ್ಲೋಕವು ಆ ಗ್ರಂಥದ ಮಂಗಳಶ್ಲೋಕವೆಂಬುದು ವಿದಿತವಾಯಿತು.[79] ಸ್ಯಾದ್ವಾದದಲ್ಲಿ ಅಕಳಂಕನಿಗಿದ್ದ ಭಕ್ತಿ ಸರ್ವವಿದಿತ. ಅವನ ಕೃತಿಗೆ ಉಚಿತವಾದ ಮಂಗಳಶ್ಲೋಕವಿದು. ಜೈನಶಾಸ್ತ್ರಕಾರರಿಗೆ ಕವಿಗಳಿಗೆ ಅವನ ವಿಷಯದಲ್ಲಿ ಅಪೂರ್ವ ಭಕ್ತಿಯುಂಟು. ಆದ್ದರಿಂದ ಅವನ ಮಂಗಳ ಶ್ಲೋಕವು ಜನಪ್ರಿಯವಾದುದು ಸಹಜವೇ. ಅವನ ಮಂಗಳ ಪದ್ಯವು ದಕ್ಷಿಣಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿರುವುದರಿಂದ ಅವನು ದಕ್ಷಿಣದವನಿರಬಹುದೇ ಎಂಬ ಸಂದೇಹಕ್ಕೆ ಪುಷ್ಟಿಕೊಡುತ್ತದೆ.[80] ಹತ್ತನೇ ಶತಕಕ್ಕಿಂತ ಹಿಂದಿನ ಶಾಸನಗಳಲ್ಲಿ ಇದು ಪ್ರಾಯಶಃ ಕಂಡುಬರುವುದಿಲ್ಲ, ಜನಪ್ರಿಯವಂತೂ ಆಗಿಲ್ಲ. ಇದನ್ನು ಅನುಕರಿಸಿ ಅನೇಕ ಶ್ಲೋಕಗಳು ಹುಟ್ಟಿರುವುದು ಇದರ ಜನಪ್ರಿಯತೆಗೆ ಮತ್ತೊಂದು ನಿದರ್ಶನ.[81] ಈ ಶ್ಲೋಕವಲ್ಲದೆ ಇತರ ಮಂಗಳಶ್ಲೋಕಗಳು ಶಾಸನಾರಂಭದಲ್ಲಿ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ—

ಶುಭಂ ಭೂಯಾಜ್ಜಿನೇಂದ್ರಾಣಾಂ ಶಾಸನಾಯಾಘನಾಶಿನೇ
ಕುತೀರ್ಥಧ್ವಾಂತ ಸಂಘಾತ ಪ್ರಭಿನ್ನ ಘನ ಭಾನವೇ ॥ 82

ಕರ್ನಾಟಕದ ಅತ್ಯುನ್ನತವಾದ ಪರಧರ್ಮ ಸಹಿಷ್ಣುತೆಗೆ ಅತ್ಯುತ್ತಮವಾದ ಉದಾಹರಣೆ ಕೆಳಗಿನ ಪ್ರಾರ್ಥನಾ ಶ್ಲೋಕ :

ಜಯಂತಿ ಯಸ್ಯಾವದತೋಪಿ ಭಾರತೀ—
ವಿಭೂತಯಸ್ತೀರ್ಥ ಕೃತೋಪಿ ನೈಹ್ರಿತೇ (?)
ಶಿವಾಯ ಧಾತ್ರೇ ಸುಗತಾಯ ವಿಷ್ಣವೇ
ಜಿನಾಯ ತಸ್ಮೈ ಸಕಲಾತ್ಮನೇ ನಮಃ ॥ 83

ಈ ಪದ್ಯವು ಶಿವ, ಬ್ರಹ್ಮ, ಸುಗತ (ಬುದ್ಧ), ವಿಷ್ಣು, ಜಿನ—ಎಲ್ಲರೂ ಅಭಿನ್ನರು ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತದೆ. ಶಾಸನಗಳ ಆರಂಭದಲ್ಲಿ ಬರುವ ಪ್ರಾರ್ಥನಾಶ್ಲೋಕಗಳ ಅಧ್ಯಯನವೇ ನಾಡಿನ ಸಂಸ್ಕೃತಿಯನ್ನು ತಕ್ಕಮಟ್ಟಿಗೆ ಬಿಂಬಿಸಬಲ್ಲುದು.

ಪ್ರಾರ್ಥನಾಪದ್ಯ ಅಥವಾ ಪದ್ಯಗಳ ಬಳಿಕ ಆ ಕಾಲದ ರಾಜನ ವಂಶಾವಳಿಯನ್ನು ಕುರಿತ ಮಾತುಗಳು ಬರುತ್ತವೆ. ಕೆಲವು ಶಾಸನಗಳಂತೂ ಪೌರಾಣಿಕ ವ್ಯಕ್ತಿಯೊಬ್ಬನಿಂದ ಆ ರಾಜಕುಲವನ್ನು ಆರಂಭಿಸಿ ಅಲ್ಲಿಂದ ಈ ರಾಜನವರೆಗೆ ಅನೇಕರ ವಿಷಯಗಳನ್ನು ಹೇಳುವುವು. ಇಂತಹ ಕಡೆ ವಾಸ್ತವ ಸಂಗತಿಗಳ ಜೊತೆಯಲ್ಲಿ ಉತ್ಪ್ರೇಕ್ಷೆ, ಕಲ್ಪನೆಗಳು ಬೆರೆತಿರುವುದುಂಟು. ರಾಜರ ಬಿರುದುಗಳು, ಅವರ ಸಾಹಸಕೃತ್ಯಗಳು, ಅವರ ಗುಣಾವಳಿಗಳು—

---

79 ಈ ಅಂಶವನ್ನು ಮೊತ್ತಮೊದಲು ವಿದ್ವಾಂಸರ ಗಮನಕ್ಕೆ ತಂದವರು ಡಾ|| ಎ. ಎನ್. ಉಪಾಧ್ಯೆ ಅವರು. "On the authorship of a Mangala-verse in inscriptions". New Indian Antiquary, II, p. 111.

80 ಅದೇ.

81 ಅದೇ.

82 BKI. I. i. 52, 1007 A.D.

83 EC. XII. Tm. 9, 1151 A.D.

ಇತ್ಯಾದಿಗಳನ್ನು ಕಾವ್ಯಮಯವಾಗಿ ಬಣ್ಣಿಸುತ್ತವೆ. ಆದರೂ ಒಟ್ಟಿನಲ್ಲಿ ಒಂದು ದೇಶದ ರಾಜಕೀಯ ಇತಿಹಾಸ ವನ್ನು ರೂಪಿಸಲು ಸಾಮಗ್ರಿಯನ್ನು ಒದಗಿಸುವ ಭಾಗವೆಂದರೆ ಇದೇ.

ಈ ಪ್ರಶಸ್ತಿಯ ಭಾಗದ ಬಳಿಕ ದಾನವನ್ನು ಕೊಟ್ಟ ಕಾಲದ ವಿಷಯವನ್ನು ನಿರ್ದೇಶನಮಾಡಿರುತ್ತದೆ. ಮೇಲಿನ ಪ್ರಶಸ್ತಿಯ ಭಾಗದಂತೆಯೇ ಕಾಲವನ್ನು ನಿರೂಪಿಸುವ ಭಾಗವೂ ಇತಿಹಾಸಕ್ಕೆ ಅತ್ಯಂತ ಅವಶ್ಯಕ. ಕರ್ನಾಟಕದ ಶಾಸನಗಳಲ್ಲಿ ಸಾಮಾನ್ಯವಾಗಿ (ಶಾಲಿವಾಹನ) ಶಕ ವರ್ಷವನ್ನು ಕೊಟ್ಟಿರುತ್ತದೆ.[84] ಅಥವಾ ರಾಜನ ಆಳಿಕೆಯ ವರ್ಷಗಳನ್ನು ಕೊಟ್ಟಿರುವುದುಂಟು. ರಾಜನ ಆಳಿಕೆ ಎಂದು ಆರಂಭವಾಯಿತೆಂಬುದು ತಿಳಿದಿದ್ದರೆ ಶಾಸನ ಹುಟ್ಟಿದ ವರ್ಷವನ್ನು ಕಂಡುಕೊಳ್ಳಬಹುದು. ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನು ಕ್ರಿ.ಶ. 1076ರಲ್ಲಿ ಚಾಳುಕ್ಯ ವಿಕ್ರಮಶಕವನ್ನು ಆರಂಭಿಸಿದನು. ಮುಂದಿನ ಸುಮಾರು ಒಂದು ಶತಮಾನದ ಚಾಳುಕ್ಯರ, ಅವರ ಸಾಮಂತರ ಶಾಸನಗಳಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. (ಶಕ ವರ್ಷವನ್ನು, ತಮ್ಮ ಆಳಿಕೆಯ ವರ್ಷಗಳನ್ನು ರಾಜರು ಹೇಳಿಕೊಂಡಿರುವುದೂ ಉಂಟು.) ಎಷ್ಟೋ ಶಾಸನಗಳಲ್ಲಿ ಕಾಲವೇ ಉಕ್ತವಾಗಿರುವುದಿಲ್ಲ; ಉಕ್ತವಾಗಿದ್ದರೂ ತಪ್ಪಾಗಿರುವುದುಂಟು. ಆ ಶಾಸನದಲ್ಲಿ ಬರುವ ರಾಜನ ಹೆಸರನ್ನೋ, ಲಿಪಿಯನ್ನೋ, ಭಾಷೆಯನ್ನೋ ಅವಲಂಬಿಸಿ ಶಾಸನ ಹುಟ್ಟಿದ ಕಾಲವನ್ನು ಬಹು ಸ್ಥೂಲವಾಗಿ ನಿರ್ಧರಿಸಬೇಕಾಗುತ್ತದೆ. ಇದಾವುದಕ್ಕೂ ಸಿಗದೆ "ಕಾಲಾತೀತ" ವಾಗಿ ನಿಲ್ಲುವ ಶಾಸನಗಳ ಸಂಖ್ಯೆಯೇನೂ ಕಡಮೆ ಇಲ್ಲ.

ದತ್ತಿಯ ಕಾಲದ ಬಳಿಕ ದತ್ತಿಯ ವಿವರಗಳು ಬರುತ್ತವೆ. ದಾನವನ್ನು ಕೊಟ್ಟ ವ್ಯಕ್ತಿಯ ಮನೆತನ, ಅವನ ಸಂಸಾರ, ಗುಣಾವಳಿ ಇತ್ಯಾದಿಗಳೂ, ದಾನವನ್ನು ಸ್ವೀಕರಿಸಿದ ವ್ಯಕ್ತಿಯ ವಿದ್ಯೆ, ಶೌರ್ಯ, ಧರ್ಮ ಇತ್ಯಾದಿ ವಿಷಯಗಳೂ ಬರುತ್ತವೆ. ಭೂಮಿಯನ್ನು ದಾನವಾಗಿ ಕೊಟ್ಟಿದ್ದರೆ ಅದರ ಪ್ರಮಾಣ, ಗುಣ, ಅದರ ಮೇರೆಗಳು, ಆ ದಾನವನ್ನು ಕಾಪಾಡಿಕೊಂಡು ಬರಬೇಕಾದ ಸಾಕ್ಷಿಗಳು—ಈ ವಿವರಗಳೆಲ್ಲ ಬರುತ್ತವೆ. ದಾನದ ವಿಷಯವು ವ್ಯಾಪಾರದ ವಸ್ತುಗಳಿಗೆ ಸಂಬಂಧಿಸಿದ್ದರೆ ಆ ಕಾಲದ ಆರ್ಥಿಕ ಪರಿಸ್ಥಿತಿ, ವ್ಯಾಪಾರ, ವ್ಯಾಪಾರಿಗಳು, ಸುಂಕಗಳು, ಸುಂಕದ ಅಧಿಕಾರಿಗಳು—ಇತ್ಯಾದಿ ವಿವರಗಳು ಬರುತ್ತವೆ. ಪ್ರಾಚೀನ ಕರ್ನಾಟಕದ ಸಾಮಾಜಿಕ ಜೀವನವನ್ನೂ ಸಂಸ್ಕೃತಿಯನ್ನೂ ಅರಿಯಲು ವಿಶೇಷವಾಗಿ ಸಹಾಯಮಾಡುವ ಶಾಸನಗಳ ಭಾಗವೆಂದರೆ ಇದೇ. ಆ ಕಾಲದ ಹಳ್ಳಿ

---

[84] ಭರತಖಂಡದಲ್ಲಿ ಪ್ರಸಿದ್ಧವಾಗಿರುವ ಶಕಗಳು ಎರಡು—ಉತ್ತರ ಭಾರತದಲ್ಲಿ ವಿಕ್ರಮಶಕ, ದಕ್ಷಿಣ ಭಾರತ ದಲ್ಲಿ ಶಾಲಿವಾಹನಶಕ. ವಿಕ್ರಮ ವರ್ಷವು ಕ್ರಿ. ಪೂ. 58ರಲ್ಲಿಯೂ ಶಾಲಿವಾಹನ ಶಕವು ಕ್ರಿ. ಶ. 78ರಲ್ಲಿಯೂ ಆರಂಭ ವಾದುವು.

ವಿಕ್ರಮ ವರ್ಷಕ್ಕೆ ಮೂಲಪುರುಷ ವಿಕ್ರಮಾದಿತ್ಯನೆಂದೂ, ಉಜ್ಜಯಿನಿಯಿಂದ ಶಕರನ್ನು ಓಡಿಸಿದಂದಿನಿಂದ ತನ್ನ ಹೆಸರಿನ ಶಕವನ್ನು ಆರಂಭಿಸಿದನೆಂದೂ ಕಥೆಗಳಿವೆ. ಈ ಕಥೆಗಳನ್ನು ಆಧುನಿಕ ವಿದ್ವಾಂಸರು ನಂಬುವುದಿಲ್ಲ. ಅವರ ಪ್ರಕಾರ ಯಾವ "ವಿಕ್ರಮ" ಎಂಬ ವ್ಯಕ್ತಿಯಿಂದಲೂ ಈ ಶಕ ಆರಂಭವಾಗಿಲ್ಲ. ಉಜ್ಜಯಿನಿಯಿಂದ ಶಕರನ್ನು ಓಡಿಸಿ ವಿಕ್ರಮಾ ದಿತ್ಯ ಎಂಬ ಬಿರುದನ್ನು ಪಡೆದವನು ಎರಡನೆಯ ಚಂದ್ರಗುಪ್ತ, ವಿಕ್ರಮಸಂವತ್ಸರ ಆರಂಭವಾದ 400 ವರ್ಷಗಳ ಮೇಲೆ ಆಳಿದವನು.

ಶಾಲಿವಾಹನ ಶಕಕ್ಕೆ ಬರಿಯ 'ಶಕ' ಎಂದೂ ಹೆಸರಿದೆ. ವಿಕ್ರಮಸಂವತ್ಸರದ ಮೂಲಪುರುಷ ವಿಕ್ರಮಾದಿತ್ಯನನ್ನು ಶಾಲಿವಾಹನನು ಸೋಲಿಸಿದನೆಂದು ಕಥೆಗಳಿವೆ. ಶಕವರ್ಷಕ್ಕಿಂತ 135 ವರ್ಷಗಳಷ್ಟು ಹಿಂದೆಯೇ ವಿಕ್ರಮಶಕ ಆರಂಭ ವಾಗಿದ್ದಿತು. ಅಲ್ಲದೆ "ಶಾಲಿವಾಹನಶಕ" ಎಂಬ ಮಾತು ಕ್ರಿಸ್ತಶಕದ ಮೊದಲ ಸಾವಿರ ವರ್ಷಗಳಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ, ಬದಲು ಬರಿಯ 'ಶಕವರ್ಷ' ಎಂದು ಮಾತ್ರ ಸಿಗುತ್ತದೆ. ಹೀಗಾಗಿ ಶಕವರ್ಷಕ್ಕೆ ಶಾಲಿವಾಹನನು ಮೂಲ ಎಂಬುದೂ ಕಾಲ್ಪನಿಕವೇ ( S. K. Dixit : An Introduction to Archaeology, p. 40 ). ಇನ್ನೂ ಹಲವಾರು ಪ್ರಾದೇಶಿಕವಾದ ಸಂವತ್ಸರಗಳಿವೆ. ಅವುಗಳ ಪಟ್ಟಿಗೆ–ನೋಡಿ :

Report of the Calendar reform Committee, Govt. of India (1955), p. 258.

ಈ ಎಲ್ಲ ಶಕಗಳ ವಿಸ್ತೃತ ವಿವರಣೆಗೆ ನೋಡಿ, D. C. Sircar : Indian Epigraphy, pp. 219–32.

ಗಳು, ನಗರಗಳು, ಅಗ್ರಹಾರಗಳು, ಅವುಗಳ ಆಡಳಿತ ವಿಧಾನ; ಯುದ್ಧ, ವೀರಮನೋಭಾವ, ಆ ಕಾಲದ ಸಾಮಾಜಿಕ ವೈಶಿಷ್ಟ್ಯಗಳು—ಇತ್ಯಾದಿಗಳ ಪರಿಚಯವಾಗುವುದೂ ಇಲ್ಲಿಯೇ. ನಮ್ಮ ಈ ಅಧ್ಯಯನವು ಬಹು ಮಟ್ಟಿಗೆ ಅವಲಂಬಿಸಿರುವುದು ಈ ಭಾಗವನ್ನೇ.

ಇದಾದ ಬಳಿಕ ದಾನವನ್ನು ಕಾಪಾಡಿದವರಿಗೆ ದೊರಕುವ ಶ್ರೇಯಸ್ಸು, ದಾನವನ್ನು ಅಪಹರಿಸಿದವರಿಗೆ ಒದಗುವ ಪಾಪಗಳು—ಇವುಗಳನ್ನು ಹೇಳುವ ಅನೇಕ ಶ್ಲೋಕಗಳನ್ನು ಸ್ಮೃತಿ ಪುರಾಣಾದಿಗಳಿಂದ ಉದ್ಧರಿಸಿ ಕೊಟ್ಟಿರುತ್ತದೆ.[85] ಇಂತಹ ಶ್ಲೋಕಗಳು ಅತಿ ಪ್ರಾಚೀನ ಶಾಸನಗಳಲ್ಲಿ ಕಂಡುಬರುವುದಿಲ್ಲವೆಂದೂ ದಾನವಾಗಿ ಕೊಟ್ಟ ಭೂಮಿಯನ್ನು ರಾಜರು ಖಂಡಿತವಾಗಿ ರಕ್ಷಿಸುತ್ತಾರೆ ಎಂಬ ಜನರ ನಂಬಿಕೆಗೆ ಧಕ್ಕೆಯೊದಗುತ್ತ ಬಂದದ್ದರಿಂದ ಸಮಾಜದಲ್ಲಿ ಅದೃಢತೆ ಹೆಚ್ಚಿದಂತೆಲ್ಲ ಇಂತಹ ಶ್ಲೋಕಗಳನ್ನು ಶಾಸನಗಳಲ್ಲಿ ಉದ್ಧರಿಸುವ ಪದ್ಧತಿಯು ಕ್ರಿ.ಶ. 6ನೆಯ ಶತಮಾನದಿಂದ ಬೆಳೆಯಿತು ಎಂದೂ ಡಾ॥ ಎಸ್. ಕೆ. ದೀಕ್ಷಿತ್ ಅಭಿಪ್ರಾಯ ಪಡುತ್ತಾರೆ.[86] ಈ ಪದ್ಧತಿ ಇನ್ನೂ ಹಿಂದಿನಿಂದಲೇ ಆರಂಭವಾಯಿತೆಂದು ಹೇಳಲು ಆಧಾರಗಳಿವೆ (ಮುಂದೆ ನೋಡಿ). ಶಾಸನದ ಕೊನೆಯಲ್ಲಿ "ದಾನಚ್ಛೇದೋಪವರ್ಣನ"ವಿರಬೇಕು ಎಂಬ ಮಾತಿಗೆ ದಾನವನ್ನು ಕೆಡಿಸಿದರೆ ಒದಗುವ ಪಾಪಗಳ ವರ್ಣನೆಯಿರಬೇಕು ಎಂದು ಒಬ್ಬ ವ್ಯಾಖ್ಯಾನಕಾರನು ಅರ್ಥೈಸಿದ್ದಾನೆ—ಎಂಬುದನ್ನು ಹಿಂದೆಯೇ ನೋಡಿದ್ದೇವೆ. ತಾಮ್ರಪಟಗಳ ಕೊನೆಯಲ್ಲಿ "ಅಪಿ ಚಾತ್ರ ಮನುಗೀತಾಃ ಶ್ಲೋಕಾಃ", "ವ್ಯಾಸವಾಕ್ಯಂ" ಎಂದು ಹೇಳಿ ಅನೇಕ ಶ್ಲೋಕಗಳನ್ನು ಉದ್ಧರಿಸುತ್ತಾರೆ. ಪ್ರಾಚೀನ ಕನ್ನಡ ಶಾಸನಗಳಲ್ಲಿ ಈ ಶ್ಲೋಕಗಳನ್ನು ಉದ್ಧರಿಸಿಲ್ಲ. ಅತ್ಯಂತ ಪ್ರಾಚೀನವಾದ ಹಲ್ಮಿಡಿಶಾಸನದಲ್ಲಿ "ಕಳ್ದೋನ್ ಮಹಾಪಾತಕನ್" ಎಂದಿಷ್ಟು ಮಾತ್ರ ಇದೆ. ಮುಂದಿನ ಶಾಸನಗಳಲ್ಲಿ "ಅಟಿವೋನ್ ಪಂಚ ಮಹಾಪಾತಕನಕುಂ ಏಟನೆಯಾ ನರಕದಾ ಪುಟು ಅಕುಂ"[87]; "ಇದಾನ್ ಕೊಳೆ ಈರೆಲ್ಪತ್ತಉಳಂ ಒಕ್ಕಲ್ತನಂ ಕೆಯ್ವೋನಾ ವಿತ್ತಿದಲ್ಲಿ ವೆಳೆಯೂದೆ ಕೆಡುಗೆ ಇದಾನ್ ಕಾದು ಸಲ್ವೋನ್ ಪರಮ ಕಲ್ಯಾಣ ಭಾಗಿಗಳಾಪ್ಪೋರ್ ನೆಲನುಂ ವೆಳೆಗೆ ಆ ಪಾರ್ವರುಂ ಪ್ರಜೆಯುಂ ತಣಿಗೆ"[88]; "ಇದಾನ್ ಆಟಿದೋರ್ ಪೂತಿ ಎನ್ಬ ನರಕಕ್ಕೆ ಸಲ್ವೋರ್"[89]—ಇಂತಹ ವಾಕ್ಯಗಳು ಮಾತ್ರ ಉಂಟು. ಧರ್ಮಶಾಸ್ತ್ರ, ಪುರಾಣಗಳಿಂದ ಶ್ಲೋಕಗಳನ್ನು ಉದಾಹರಿಸುವ ಪದ್ಧತಿಯು ಮೊದಲು ಕಂಡುಬರುವುದು ತಾಮ್ರಪಟಗಳಲ್ಲಿ. ಸು. 700ರಿಂದ ಈಚೆಗೆ ಶಿಲಾಶಾಸನಗಳು ತಾಮ್ರಪಟಗಳಿಂದ ಈ ಪದ್ಧತಿಯನ್ನು ಕಲಿತುಕೊಂಡಿರಬಹುದು.[90]

---

[85] ಇಂತಹ ಶ್ಲೋಕಗಳು ಸಾಮಾನ್ಯವಾಗಿ ಶಾಸನದ ಅಂತ್ಯದಲ್ಲಿ ಕಾಣಿಸಿಕೊಂಡರೂ ಒಮ್ಮೊಮ್ಮೆ ಶಾಸನದ ಆದಿಯಲ್ಲಿಯೇ (IA. XII. p. 270, 974–5 A.D.) ಅಥವಾ ಶಾಸನದ ಮಧ್ಯದಲ್ಲಿಯೇ (EC. VIII. Nr. 58, 1062 A.D.) ಬಂದಿರುವುದುಂಟು. ಆದರೆ ಇದು ಬಹಳ ವಿರಳ.

[86] An Introduction to Archaeology, p. 86.

[87] IA. X. p. 60, 578 A.D.

[88] IA. XIX. p. 143, C. 685 A.D.

[89] EC. VI. Kp. 39, 700 A.D.

[90] ಧರ್ಮಶಾಸ್ತ್ರಗಳಿಂದ ಶ್ಲೋಕಗಳನ್ನು ಉದಾಹರಿಸಿರುವ ಪ್ರಾಚೀನ ಕನ್ನಡ ಶಿಲಾ ಶಾಸನಗಳಲ್ಲಿ 8ನೆಯ ಶತಮಾನದ ಪಟ್ಟದಕಲ್ಲಿನ ಶಾಸನವೂ ಒಂದು. [IA. X. p. 165, C. 730 A.D.]

ಸು. 490ರ ತಾಮ್ರಪಟಗಳ[91] ಕೊನೆಯಲ್ಲಿ ಈ ಶ್ಲೋಕಗಳು ಬಂದಿವೆ—

"ಅತ್ರ ಮನುಗೀತಾ ಶ್ಲೋಕಾ ಭವಂತಿ—
ಬಹುಭಿರ್ವಸುಧಾ ಭುಕ್ತಾ ರಾಜಭಿಸ್ಸಗರಾದಿಭಿಃ
ಯಸ್ಯ ಯಸ್ಯ ಯದಾ ಭೂಮಿಸ್ತಸ್ಯ ತಸ್ಯ ತದಾ ಫಲಂ ॥—i.
ಸ್ವದಾತುಂ ಸುಮಹಚ್ಛಕ್ಯಂ ದುಃಖಮನ್ಯಸ್ಯ ಪಾಲನಂ
ದಾನಂ ವಾ ಪಾಲನಂ ವೇತಿ ದಾನಾತ್ ಶ್ರೇಯೋನುಪಾಲನಂ ॥—ii.
ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ ವಸುಂಧರಾಂ
ಷಷ್ಟಿರ್ವರ್ಷಸಹಸ್ರಾಣಿ ಘೋರೇ ತಮಸಿ ಪಚ್ಯತೇ ॥[92]—iii.
ಅದ್ಭಿರ್ದತ್ತಂ ತ್ರಿಭಿರ್ಭುಕ್ತಂ ಸದ್ಭಿಶ್ಚ ಪರಿಪಾಲಿತಂ
ಏತಾನಿ ನ ನಿವರ್ತಂತೇ ಪೂರ್ವರಾಜ ಕೃತಾನಿ ಚ ॥—iv.
ಯೋಽಸ್ಯ ಲೋಭಾತ್ ಮೋಹಾದ್ವಾಭಿಹರ್ತಾ ಸ ಪಂಚಮಹಾ-
ಪಾತಕ ಸಂಯುಕ್ತೋ ಭವತಿ ॥ ಸ್ವಸ್ತ್ಯಸ್ತು ಗೋಬ್ರಾಹ್ಮಣೇಭ್ಯಃ"

ಇವುಗಳಲ್ಲದೆ ತಾಮ್ರಪಟಗಳಲ್ಲಿಯೂ ಶಿಲಾಶಾಸನಗಳಲ್ಲಿಯೂ ಇಂತಹ ಇನ್ನೂ ಕೆಲವು ಶ್ಲೋಕಗಳು ಬರುತ್ತವೆ. ಅವುಗಳ ಪಾಠವನ್ನು ತಿದ್ದುವ ಗೋಜಿಗೆ ಹೋಗದೆ ಹಾಗೆಯೇ ಕೊಡುತ್ತೇವೆ :

ಭೂಮಿದಾನಾತ್ಪರಂ ದಾನಂ ನ ಭೂತರ್ನಭವಿಷ್ಯತಿ
ತಸ್ಯೈವ ಹರಣಾತ್ ಪಾಪಂ ನ ಭೂತ ನ ಭವಿಷ್ಯತಿ ॥ v

ಷಷ್ಟಿರ್ವರ್ಷ ಸಹಸ್ರಾಣಿ ಸ್ವರ್ಗೇ ಮೋದತಿ ಭೂಮಿದಃ
ಆಚ್ಛೇತ್ತಾ ಚಾನುಮಂತಾ ಚ ತಾನ್ಯೇವ ನರಕೇ ವಸೇತ್ ॥ vi

ದೇವಸ್ವಂ ವಿಷಮಿತ್ಯಾಹು ಬ್ರಹ್ಮಸ್ವ ವಿಷಮುಚ್ಯತೇ
ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಿಕಂ ॥ vii

ಬ್ರಹ್ಮಸ್ವಂ ಪ್ರಣಯಾದ್ ಭುಕ್ತ್ವಾ ದಹತ್ಯಾಸಪ್ತಮಂ ಕುಲಂ
ವಿಕ್ರಮೇಣ ಯೇ ಭೋಜ್ಯಂತೇ ದಶಪೂರ್ವನ್ ದಶಾವರಾನ್ ॥ viii

ಅನ್ಯಾಯೇನ ಹೃತೋ ಭೂಮಿಃ ಅನ್ಯಾಯೇನ ತು ಹಾರಿತೋ
ಹರತೋ ಹಾರಯತಶ್ಚ ಹನತ್ಯಾಸಪ್ತಮಂ ಕುಲಂ ॥ ix

ಹರ್ತಾ ಹಾರಯಿತಾ ಭೂಮಿರ್ಮಂದಬುದ್ಧಿಃ ತಮೋವೃತಃ
ಸಬದ್ಧೋ ವಾರುಣೈರ್ಪಾಶೈಃ ತಿರ್ಯಗ್ಯೋನಿಷು ಜಾಯತೇ ॥ x

---

[91] EI. VI. p. 18, C. 490 A.D. ಸು. 475ರ ಇಮ್ಮಡಿ ಮಾಧವನ ಪೆನುಗೊಂಡೆಯ ತಾಮ್ರಪಟಗಳಲ್ಲೂ ಇಂತಹ ಶ್ಲೋಕಗಳಿವೆ.

[92] ಇದರ ಎರಡನೆಯ ಪಾದ "ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ" ಎಂದೂ ಇರುವುದುಂಟು. 10ನೇ ಶ. ದ ದೊಡ್ಡ ಶಾಸನವೊಂದರ ಕೊನೆಯ ಭಾಗದಲ್ಲಿ ಇಷ್ಟು ಮಾತ್ರ ಉಳಿದಿದೆ—"ಸ್ವದತ್ತಂ ತನ್ನಿತ್ತುದಕ್ಕೆ ಪರದತ್ತಂ ವಾ ಪೆಱರಿತ್ತುದಕ್ಕೆ ಓ ಹರೇತು ಅಱಿವೋ ವಸುನ್ಧರಿ ಭೂಮಿ ಷಷ್ಟಿರ್ವರ್ಷಸಹಸ್ರಾಣಿ ಅರವತ್ತು ಸಾವಿರವರ್ಷ ವಿಷ್ಟಾಯಾಂ ಜಾಯತೇ ಕ್ರಿಮಿ ಪೇಲ ಪುೞುವಾಗಿ ಪುಟ್ಟುಗೆ" [MAR. (1945), p. 125, C. 950 A. D.] ಈ ಶ್ಲೋಕದ ಕನ್ನಡಾನುವಾದ ಕೊಟ್ಟಿರುವುದು ಅದರ ಜನಪ್ರಿಯತೆಗೆ ಸಾಕ್ಷಿ. ಆ ಕಾಲದಲ್ಲಿ ಸಂಸ್ಕೃತ ಶ್ಲೋಕಗಳನ್ನು ಕನ್ನಡದಲ್ಲಿ ಹೇಗೆ ಅರ್ಥೈಸುತ್ತಿದ್ದರೆಂಬುದೂ ಇದರಿಂದ ಗೊತ್ತಾಗುತ್ತದೆ.

ಭೂಮಿಂ ಯಃ ಪ್ರತಿಗೃಹ್ಣಾತಿ ಯಶ್ಚ ಭೂಮಿಂ ಪ್ರಯಚ್ಛತಿ
ಉಭೌ ತೌ ಪುಣ್ಯಕರ್ಮಾಣೌ ನಿಯತೌ ಸ್ವರ್ಗವಾಸಿನೌ ॥ xi

ಪಾಕಭೇದೀ ಕೃತಘ್ನಶ್ಚ ಭೂಮಿಹರ್ತಾ ಚ ತೇ ತ್ರಯಃ
ನರಕಾತ್ ನ ನಿವರ್ತಂತೇ ಯಾವಚ್ಚಂದ್ರದಿವಾಕರೌ ॥ xii

ಅನ್ಯಕ್ಷೇತ್ರೇ ಕೃತಂ ಪಾಪಂ ಪುಣ್ಯಕ್ಷೇತ್ರೇ ವಿನಶ್ಯತಿ
ಪುಣ್ಯಕ್ಷೇತ್ರೇ ಕೃತಂ ಪಾಪಂ ವಜ್ರಲೇಪೇನ ತಿಷ್ಠತಿ ॥ xiii

ಅಕರಾಕರಕಾರಸ್ತು ಗೋಸಹಸ್ರವಧಃ ಸ್ಮೃತಃ
ನಿವೃತ್ತಿಕರಕಾರಸ್ತು ಗೋಕೋಟಿಫಳಮಪ್ನುತೇ ॥ xiv

ಕಾಳಕ್ಷೇಪೋ ನ ಕರ್ತವ್ಯಂ ಆಯು ಕ್ಷೀಣೇ ದಿನೇದಿನೇ
ಯಮಸ್ಯ ಕರುಣಾ ನಾಸ್ತಿ ಧರ್ಮಸ್ಯ ತ್ವರಿತಾಗತಾ ॥ xv

ಸಾಮಾನ್ಯೋಽಯಂ ಧರ್ಮಸೇತುರ್ನೃಪಾಣಾಂ ।
ಕಾಲೇ ಕಾಲೇ ಪಾಳನೀಯೋ ಭವದ್ಭಿಃ ॥

ಸರ್ವಾನೇತಾನ್ ಭಾವಿನಃ ಪಾರ್ಥಿವೇಂದ್ರಾಂ ।
ಭೂಯೋ ಭೂಯೋ ಯಾಚತೇ ರಾಮಚಂದ್ರಃ ॥ xvi

ವಿಂಧ್ಯಾಟವೀಷ್ವತೋಯೇಷು ಶುಷ್ಕಕೋಟರ ವಾಸಿನಃ
ಕೃಷ್ಣಸರ್ಪಾ ಹಿ ಜಾಯಂತೇ ಯೇ ಹರನ್ತಿ ವಸುಂಧರಾಂ ॥ xvii

ಮದ್ವಂಶಜಾ ಪರಮಹೀಪತಿವಂಶಜಾ ।
ಪಾಪಾದಪೇತಮನಸೋ ಭುವಿ ಭಾವಿಭೂಪಾಃ ॥

ಏ ಪಾಲಯಂತಿ ಮಮಧರ್ಮಮಿಮಂ ಸಮಸ್ತಂ ।
ತೇಭ್ಯೋ ಮಯಾ ವಿರಚಿತೋಂಜಲಿರೇಷಮೂರ್ಧ್ನಿ ॥ xviii

ಈ ಶ್ಲೋಕಗಳನ್ನು ಉದ್ಧರಿಸುವ ಮುನ್ನ "ಅತ್ರ ಮನುಗೀತಾ ಶ್ಲೋಕಾ ಭವಂತಿ",[93] "ಉಕ್ತಂ ಚ ಧರ್ಮ ಶಾಸ್ತ್ರೇಷು"[94], "ಅಪಿ ಚಾತ್ರ ಮನುಪಠಿತೌ ಶ್ಲೋಕೌ"[95], "ಉಕ್ತಂ ಚ ಭಗವತಾ ವೇದವ್ಯಾಸೇನ ವ್ಯಾಸೇನ"[96], "ವ್ಯಾಸವಾಕ್ಯಂ"[97], "ಈಯರ್ಥದ ಸಾಕ್ಷಿತ್ವೇನ ಶ್ರುತಿ"[98]—ಎಂದು ಮುಂತಾಗಿ ಹೇಳಿ ಶ್ಲೋಕಗಳನ್ನು ಕೊಡುತ್ತಾರೆ. ಎಂದರೆ ಇವು ಮನು, ವ್ಯಾಸ ಮುಂತಾದವರಿಂದ ರಚಿತವಾದ್ದರಿಂದ ಅವುಗಳಲ್ಲಿ ಅವರು ಹಾಕಿಕೊಟ್ಟಿರುವ ನಿಯಮಗಳನ್ನು ಮೀರಬಾರದೆಂದು ಕೇಳಿಕೊಂಡಿರುವುದರ ಮೂಲಕ, ಋಷಿವಾಕ್ಯಗಳನ್ನು ಮೀರಿದರೆ ಪಾಪಕ್ಕೆ ಪಕ್ಕಾಗಬಹುದೆಂದು ಹೆದರಿಕೆಯನ್ನು ಹಾಕಿದ್ದಾರೆ.

---

93 EI. XI. p. 18, c. 480 A.D.
94 IA. XIX. p. 16, 602 A.D.
95 EC. VI. Mg. 36, 749 A.D.
96 IA. XIX. p. 149, 692 A.D.
97 EI. VI. p. 102, 866 A.D.
98 EC. VII. Sk. 92, 1068 A.D.

ಮೇಲಿನ ಶ್ಲೋಕಗಳಲ್ಲಿ ಕೆಲವನ್ನು ಎಫ್. ಇ. ಪರ್ಗಿಟರ್ (F. E. Pargiter)[99], ಪಿ.ವಿ. ಕಾಣೆ[100] ಮುಂತಾದ ವಿದ್ವಾಂಸರು ಗುರುತಿಸಿದ್ದಾರೆ.

| ಶ್ಲೋಕದ ಸಂಖ್ಯೆ | | ಆಕರ |
|---|---|---|
| i | .... | ಪದ್ಮಪುರಾಣ, ಭವಿಷ್ಯಪುರಾಣ |
| iii | .... | ಪದ್ಮಪುರಾಣ, ಭವಿಷ್ಯಪುರಾಣ, ಬ್ರಹ್ಮಪುರಾಣ |
| v | .... | ವಿಷ್ಣುಧರ್ಮೋತ್ತರ ಪುರಾಣ |
| vi | .... | ಪದ್ಮಪುರಾಣ, ವಿಷ್ಣುಧರ್ಮೋತ್ತರಪುರಾಣ |
| vii | .... | ವಸಿಷ್ಠಸ್ಮೃತಿ, ಬೃಹಸ್ಪತಿಸ್ಮೃತಿ, ಪದ್ಮಪುರಾಣ |
| ix | .... | ಬೃಹಸ್ಪತಿಸ್ಮೃತಿ, ಪದ್ಮಪುರಾಣ |
| xi | .... | ,, ,, |
| xvii | .... | ,, ಭವಿಷ್ಯ ಪುರಾಣ |

ಎಲ್ಲ ಸ್ಮೃತಿಪುರಾಣಗಳಲ್ಲಿ ಈ ಶ್ಲೋಕಗಳ ಪಾಠ ಒಂದೇ ಆಗಿರುವುದಿಲ್ಲ. ಶಾಸನಗಳು ಮನುವಿನಲ್ಲಿ ಮತ್ತು ವ್ಯಾಸನಲ್ಲಿ ದೊರಕುತ್ತವೆ ಎಂದು ಹೇಳಿ ಉದ್ಧರಿಸಿದ ಯಾವ ಶ್ಲೋಕವೂ ಅವರಲ್ಲಿ ದೊರಕದಿರುವುದು ಗಮನಾರ್ಹ.[101] ಬಹು ಪ್ರಸಿದ್ಧವಾಗಿದ್ದ ಈ ಶ್ಲೋಕಗಳನ್ನು ಅಷ್ಟೇ ಪ್ರಸಿದ್ಧ ಋಷಿಗಳೆಂದು ಗೌರವಿತರಾದ ವ್ಯಾಸ ಮತ್ತು ಮನುಗಳ ತಲೆಗೆ ಕಟ್ಟಿದರೆಂದು ಕಾಣುತ್ತದೆ. ಸ್ಮೃತಿಗಳಲ್ಲೆಲ್ಲಾ ಮನುಸ್ಮೃತಿಗೆ ಹೆಚ್ಚು ಗೌರವವಿದೆ. ಶಾಸನಗಳಲ್ಲಿ ವ್ಯಕ್ತಿಗಳನ್ನು ಹೊಗಳುವಾಗ 'ಮನುಮಾರ್ಗಚರಿತನ್' ಎಂಬ ವಿಶೇಷಣವನ್ನು ಬಳಸುತ್ತಾರೆ. ಮನುವು ಹಾಕಿಕೊಟ್ಟ ಮಾರ್ಗವೇ ನಡೆಯಲು ಅರ್ಹವಾದುದು ಎಂದು ಭಾವಿಸಿದ್ದರು. ಹಾಗೆಯೇ ವ್ಯಾಸರ ಮಹಾಭಾರತಕ್ಕೆ ಪಂಚಮವೇದದ ಸ್ಥಾನವಿದೆ. ಹೀಗಾಗಿ ಈ ಶ್ಲೋಕಗಳಲ್ಲಿ ಬಹುಪಾಲು ಅವರ ಹೆಸರಿನಲ್ಲಿ ಪ್ರಚಾರಕ್ಕೆ ಬಂದುವು.

ಮೇಲೆ ಉದ್ಧರಿಸಿದ ಸಂಸ್ಕೃತ ಶ್ಲೋಕಗಳಲ್ಲಿನ ಅಭಿಪ್ರಾಯಗಳನ್ನೇ ಕನ್ನಡದಲ್ಲಿ ಹೇಳಿರುವುದುಂಟು. "ಈ ಧರ್ಮಮಾನ್ನಿ ರಕ್ಷಿಚ್ಚಿದೋನ್ನಡಿ ಎನ್ತಲೆ ಮೇಲೋ ಈ ಧರ್ಮಮಾನ್ನಳಿವೊನ್ ಪಂಚಮಹಾಪಾತಕ ನಕ್ಕು"[102]; "ಈ ಧರ್ಮಕ್ಕೆ ತಪ್ಪಿದವರು ಯೇಳನೆಯ ನರಕಕೆ ಹೋಹರು ಹೋಹರು ಹೋಹರು"[103]; "ಆರಾನುಂ ಬಿಟ್ಟರ್ ಬಿಡತೀರದೆನಲ್ವೇಡ ನಡಸುವಾತನೆ ಬಿಟ್ಟಂ............ಬಳಂ ಕೈವಾರದಿಂ ರಕ್ಷಿಪುದು ಪಕ್ಷ ಪಾತದೊಳೆಲ್ಲಂ"[104]; "ಶಾಸನಮಿದಾವುದೆಲ್ಲಿಯ ಶಾಸನಮಾರಿತ್ತರೇಕೆ ಸಲಿಸುವೆ ನಾನೀ ಶಾಸನಮನೆಂಬ

---

99 "Verses relating to gifts of land cited in Indian land-grants" [Journal of the Royal Asiatic Society, 1912, pp. 248-54].

100 History of Dharmaśāstra, II. ii. pp. 1271-7.

101 ಮಹಾಭಾರತದ ಈಗ ಉಪಲಬ್ಧವಿಲ್ಲದಿರುವ ಯಾವುದೋ ಪಾಠದಲ್ಲಿ ವ್ಯಾಸರಚಿತವೆಂದು ಶಾಸನಗಳು ಹೇಳುವ ಶ್ಲೋಕಗಳು ಇದ್ದುವೋ ಏನೋ ಎಂದು ಡಿ. ಬಿ. ದಿಸ್ಕಲ್ಕರ್ ಅವರು ಅಭಿಪ್ರಾಯ ಪಡುತ್ತಾರೆ.
(Journal of Indian History, xxxviii, part iii, p. 552.)

102 EC. X. Kl. 6, 753 A.D.

103 EC. VII. Sh. 114, c. 950 A.D.

104 SII. IX. i. 125, 1061 A.D.

ಪಾತಕನಾ ಸಕಳಂ ರೌರವಕ್ಕೆ ಗಳಗಳನಿಳಿಗುಂ'' [105]; ''ಇದಾನ್ ಅಟಿ'ದೋನ್ ಪಂಚಮಹಾಪಾತಕನಕ್ಕುಂ'' [106]; ''ಈ ಧರ್ಮವ ಕಿಡಿಸಿದ ಲಿಂಗಭೇದಿ ಇಕ್ಕತ್ತಿಗೆಯ ಕವಿಲೆಯ ಕೊಂದ'' [107]. ಶಾಸನಗಳನ್ನು ಅಂತಹ ವಿದ್ಯಾವಂತರಲ್ಲದವರು ಬರೆದಿದ್ದರಂತೂ ಇಂತಹ ಕಡೆಗಳಲ್ಲಿ ಬಹು ಕಟುವಾದ ಅಶ್ಲೀಲವಾದ ಮಾತುಗಳು ಬಂದಿರುವುದುಂಟು (''ಈ ಯಾಣೆಯುಂ ವಿಾರಿದವನಂ ಕೆಡಹಿ ಕೊಲ್ವುದು ಆವಂ ಸತ್ತಡೆ ಹಂದಿ ಸತ್ತುದು ನಾಯಿ ಸತ್ತುದು.''[108]). ಆದರೆ ಈ ಕಟುವಾದ ಮಾತುಗಳ ಹಿಂದಿನ ಮನಸ್ಸು ಮಾತ್ರ ಉದಾರವಾದುದು.[108.1]

ಇಂತಹ ಮಾತುಗಳಿಂದ ಆ ಕಾಲದ ಕೆಲವು ಸಂಗತಿಗಳು ಧ್ವನಿತವಾಗುತ್ತವೆ. ದಾನವನ್ನು ಕೊಟ್ಟವನು, ತಾನು ಕೊಟ್ಟ ದಾನ ದೊಡ್ಡದು ಎಂದು ಅನ್ಯರು ಭಾವಿಸಲಿ ಎನ್ನುವುದಕ್ಕಿಂತ, ತಾನು ಕೊಟ್ಟದ್ದು ಉಳಿಯಬೇಕು, ಬೆಳೆಯಬೇಕು ಎಂಬ ವಿಷಯದಲ್ಲಿ ಹೆಚ್ಚು ಕಾತರನಾಗಿದ್ದಂತೆ ಊಹಿಸಬಹುದು. ಇದಕ್ಕಾಗಿ ಅವನು ದಾನವನ್ನು ಪಾಲಿಸಿದರೆ ಬರುವ ಫಲವನ್ನು, ನಾಶಪಡಿಸಿದರೆ ಬರುವ ಪಾಪಗಳನ್ನು ಹೇಳಿದ್ದಾನೆ; ಕಾಪಾಡುವಂತೆ ಕೈಮುಗಿದು ಬೇಡಿಕೊಂಡಿದ್ದಾನೆ, ಕೆಟ್ಟ ಕಟುಮಾತುಗಳನ್ನಾಡಿದ್ದಾನೆ. ಬಹಳ ಕಡೆ ಸಾಮಾನ್ಯವಾಗಿ ಇಂತಹ ದಾನಗಳು ಉಳಿದುಕೊಂಡು ಬಂದರೂ, ಕೆಲವು ಕಡೆಯಾದರೂ ಇಂತಹ ದಾನಗಳನ್ನು ಪರರು ಅಪಹರಿಸಿರಬೇಕು. ಪರರ ಮಾತಿರಲಿ, ಒಬ್ಬ ರಾಜ ಹೋಗಿ ಇನ್ನೊಬ್ಬ ರಾಜ ಬಂದಾಗ ನ್ಯಾಯವಾಗಿ ಹಿಂದಿನವರ ದಾನಗಳನ್ನು ಮನ್ನಿಸಬೇಕು; ಆದರೆ ಕೆಲವೆಡೆ ಮನ್ನಿಸದೆ ಇದ್ದುದೂ ಅಸಂಭವವಲ್ಲ. ''ತಲೆ ಹೋದರೂ, ನೆಲವನ್ನು ಆಳುವ ರಾಜ ಹೋದರೂ ಈ ಧರ್ಮದಲ್ಲಿ ಒಂದಡಕೆ, ಒಂದೆಲೆಯನ್ನಾದರೂ ಬೇಡಲಾಗದು'' ಎಂಬ ಅರ್ಥ ಬರುವ ಮಾತುಗಳಿವೆ ಒಂದು ಶಾಸನದಲ್ಲಿ.[109]

---

[105] EC. VII. Sh. 97, 1113 A.D.

[106] IA. X. p. 103, C. 700 A.D. ಪಾತಕಗಳ ಸಂಖ್ಯೆಯ ವಿಷಯದಲ್ಲಿ ಧರ್ಮಗ್ರಂಥಗಳಲ್ಲಿ ಒಮ್ಮತವಿಲ್ಲ. ಛಾಂದೋಗ್ಯ ಉಪನಿಷತ್ತಿನ ಕಾಲದಿಂದ 'ಪಂಚಮಹಾಪಾತಕ'ಗಳೆಂದು ಪ್ರಸಿದ್ಧವಾಗಿರುವುವು ಇವು—ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ (ಸಾಮಾನ್ಯವಾಗಿ ಬ್ರಾಹ್ಮಣರ ಆಸ್ತಿಯ ಕಳವು), ಗುರ್ವಂಗನಾಗಮನ, ಮಹಾಪಾತಕಿಸಂಸರ್ಗ. ಇವಲ್ಲದೆ ಉಪಪಾತಕಗಳೂ ಉಂಟು (History of Dharmaśāstra, IV. pp. 16-32). ಜೈನರ ಪ್ರಕಾರ ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆಗಳು 'ಪಂಚಮಹಾಪಾತಕ'ಗಳು. (ವಡ್ಡಾರಾಧನೆ, ಪು. 91).

[107] EC. V. Hn. 134, C. 1115 A.D. 'ಇಕ್ಕತ್ತಿಗೆಯ ಕವಿಲೆ' ಎಂದರೆ ಗರ್ಭವಿರುವ ಹಸು ಎಂದರ್ಥ. ಇದರ ಸಂಸ್ಕೃತರೂಪ 'ಉಭಯಮುಖಿ'. ದಾನವನ್ನು ಪಾಲಿಸಿದರೆ ಉಭಯಮುಖಿಯನ್ನು ಕೊಟ್ಟ ಪುಣ್ಯವು ಬರುತ್ತದೆಂದು ಕೆಲವು ಶಾಸನಗಳಲ್ಲಿ ಹೇಳಿದೆ. (BKI. I. i. 91). ಹಸುವಿನ ಗರ್ಭದಲ್ಲಿರುವ ಕರುವಿನ ಮುಖ ಸ್ವಲ್ಪ ಹೊರಗೆ ಬಂದಿರಬೇಕು, ಆ ಸಮಯದಲ್ಲಿ ಮಾಡಿದ ಗೋದಾನವು ಬಹು ಪ್ರಶಸ್ತವಾದುದೆಂದು ಯಾಜ್ಞವಲ್ಕ್ಯ ಸ್ಮೃತಿ ಮತ್ತು ವರಾಹ ಪುರಾಣಗಳು ಹೇಳುತ್ತವೆ. ಇದೇ 'ಉಭಯಮುಖಿ'ದಾನ (ವಿವರಗಳಿಗೆ— ನೋಡಿ: History of Dharmaśāstra, II. ii. p. 879).

[108] BKI. I. ii. 187, 1104 A.D.

[108.1] ಸು. ಕ್ರಿ. ಪೂ. 1500 ರಲ್ಲಿದ್ದ ಹಿಟ್ಟೈಟ್ ಭಾಷೆಯ 'ಕರಾರು' (treaty) ಶಾಸನಗಳಲ್ಲಿಯೂ ಕರಾರನ್ನು ಪಾಲಿಸಿದವರ ಬಗ್ಗೆ 'ಶಾಪ'ದ ಮಾತುಗಳು ಬರುತ್ತವೆ. ಗಡಿಕಲ್ಲುಗಳನ್ನು ಸಮಾಧಿಗಳನ್ನು ಹಾಳುಮಾಡುವವರ ಬಗ್ಗೆಯೂ ಅಂತಹ ಮಾತುಗಳು ಬರುತ್ತವೆ. ''...But you will sow, but not harvest....''; ''May the earth not receive your corpse; may your corpse be in the belly of dogs and pigs''. ಇಂಥವನ್ನು ನಮ್ಮ ಶಾಸನಗಳ ಶಾಪದ ಮಾತುಗಳ ಜೊತೆ ಹೋಲಿಸಬಹುದು. ಹಮ್ಮುರಬಿಯ 'Code' ಕೊನೆಯಲ್ಲಿ ಆಶೀರ್ವಚನ 16 ಸಾಲುಗಳಲ್ಲಿದ್ದರೆ, ಶಾಪ 282 ಸಾಲುಗಳಲ್ಲಿದೆ. (ವಿವರಗಳನ್ನು Stanley Gevirtz ಅವರ Curse motifs in the old Testament and in the Ancient near East ಎಂಬ ಗ್ರಂಥದಿಂದ, Delbert R. Hillers ಅವರ Treaty curses and the old Testament prophets ಗ್ರಂಥದಿಂದ ತೆಗೆದುಕೊಂಡಿದೆ. ದೇಶ ಯಾವುದಾದರೇನು, ಮನೋಭಾವ ಒಂದೇ ಎಂಬುದಕ್ಕೆ ಈ ಸಾಮ್ಯಗಳು ಒಳ್ಳೆಯ ಸಾಕ್ಷಿಯಾಗಿವೆ.

[109] EI.XV. p. 27, 1110 A.D.

ಆ ಕಾಲದಲ್ಲಿ ಜನಜೀವನವನ್ನು ಧರ್ಮಶಾಸ್ತ್ರಗಳು ನಿಯಂತ್ರಿಸುತ್ತಿದ್ದುದೂ ಇದರಿಂದ ಧ್ವನಿತವಾಗುತ್ತದೆ. ತಾವು ಸಾಧ್ಯವಾದಷ್ಟು ಧರ್ಮಶಾಸ್ತ್ರಗಳಿಗೆ ಸಮ್ಮತವಾದ ಮಾರ್ಗದಲ್ಲಿ ನಡೆಯಬೇಕು ಎಂಬ ಆದರ್ಶ ಜನತೆಯದು. ಇನ್ನೊಂದು ಗಮನೀಯವಾದ ಅಂಶವೆಂದರೆ ಈ ಶ್ಲೋಕಗಳು ಪ್ರಾರ್ಥನಾ ಪದ್ಯಗಳಂತಲ್ಲದೆ ಸಾರ್ವತ್ರಿಕವಾಗಿ ಎಲ್ಲ ಧರ್ಮಗಳ ಶಾಸನಗಳಲ್ಲಿಯೂ ಕಂಡುಬರುತ್ತವೆ.

ಶಾಸನಗಳ ತುತ್ತತುದಿಯಲ್ಲಿ ಶಾಸನವನ್ನು ಬರೆದ ಕೃತಿಕಾರನ ಮತ್ತು ಶಾಸನವನ್ನು ಕೆತ್ತಿದ ಶಿಲ್ಪಿಯ ಹೆಸರುಗಳು ಕಂಡುಬರುತ್ತವೆ. ಪ್ರಾಚೀನ ಕನ್ನಡ ಶಿಲಾಶಾಸನಗಳಲ್ಲಿ ಕೃತಿಕಾರ ಮತ್ತು ಶಿಲ್ಪಿಗಳ ಹೆಸರನ್ನು ಒಟ್ಟಿಗೆ ಹೇಳಿರುವುದು ಬಹಳ ಕಡಮೆ. ಹಾಗೆ ನೋಡಿದರೆ ಸಮರ್ಥ ಕವಿಗಳು ಯಾರೂ ಪ್ರಾಚೀನ ಕನ್ನಡ ಶಾಸನಗಳನ್ನು ಬರೆದಂತೆ ತೋರುವುದಿಲ್ಲ. ಕ್ರಿ. ಶ. 2 ಮತ್ತು 3ನೆಯ ಶತಮಾನಗಳ ಮಳವಳ್ಳಿಯ ಪ್ರಾಕೃತ ಶಾಸನಗಳಲ್ಲಿ ಶಾಸನದ ಕೃತಿಕಾರ ನಾಗದತ್ತ ಮತ್ತು ಶಿಲ್ಪಿ ವಿಶ್ವಕರ್ಮರ ಹೆಸರುಗಳು ಬಂದಿವೆ.[110] ಸು. 450ರ ಶಾಂತಿವರ್ಮನ ತಾಳಗುಂದದ ಸಂಸ್ಕೃತ ಶಿಲಾಲೇಖದಲ್ಲಿ ಅದರ ಕರ್ತೃವಾದ ಕವಿ ಕುಬ್ಜ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ.[111] ಹಲ್ಮಿಡಿ ಶಾಸನದ ಕೊನೆಯಲ್ಲಿ "ಬಟಾರಿಕುಲದೊನ್ ಅಳಕದಮ್ಬನ್" ಎಂದಿದೆ. ಇದು ಬಹುಶಃ ಶಾಸನದ ಕರ್ತೃವಿನ ಹೆಸರಿರಬೇಕು. ಸು. 8ನೆಯ ಶತಮಾನದ ತನಕ ಕೃತಿಕಾರ ಮತ್ತು ಶಿಲ್ಪಿಗಳ ಹೆಸರುಗಳು ಕನ್ನಡ ಶಿಲಾ ಶಾಸನಗಳಲ್ಲಿ ಪ್ರಾಯಶಃ ದೊರಕವು,[112] ದೊರಕಿದರೂ ಅತ್ಯಂತ ವಿರಳ. ಆದರೆ ತಾಮ್ರಪಟಗಳಲ್ಲಿ ಮಾತ್ರ ಕೃತಿಕಾರ ಮತ್ತು ಶಿಲ್ಪಿಗಳ ಹೆಸರುಗಳು ದೊರಕುತ್ತವೆ. 7, 8ನೆಯ ಶತಮಾನಗಳ ಬಳಿಕ ಕನ್ನಡ ಶಾಸನಗಳು ಈ ಪದ್ಧತಿಯನ್ನು ಅನುಸರಿಸಲು ಆರಂಭಿಸಿದಂತೆ ಕಾಣುತ್ತದೆ.

ತಾಮ್ರಪಟಗಳ ಮೇಲಾಗಲಿ, ಶಿಲೆಯ ಮೇಲಾಗಲಿ ವಿಷಯವನ್ನು ಕೊರೆಯುವ ಮುನ್ನ ಶಾಸನದ ವಿಷಯವನ್ನು ಓಲೆಯ ಮೇಲೆ ಬರೆಯುತ್ತಿದ್ದರು. ಈಗಿನ ಭಾಷೆಯಲ್ಲಿ ಹೇಳುವುದಾದರೆ ಇದು ಶಾಸನದ 'draft' ಇದ್ದಹಾಗೆ. ಈ ಪದ್ಧತಿ ಒಂದು ಶಾಸನದಲ್ಲಿ ಉಕ್ತವಾಗಿದೆ— "ಪೊಲದ ಸೀಮೆಯೆಲ್ಲಮಂ ಓ(ಓ)ಲೆಯೊಳ್ಬರೆಂದು. . . ನ್ದು ಕಲ್ಲುಶಾಸನಮಾಗೆ ಬರೆದುಕೊಂಡೆಮು."[113] ಓಲೆಯ ಮೇಲೆ ಬರೆಯಬೇಕಾದ ವಿಷಯವನ್ನು ಒಬ್ಬ ಸಿದ್ಧಪಡಿಸಿದರೆ—ಇವನೇ ಕೃತಿಕಾರ—, ಅದನ್ನು ಶಿಲೆಯ ಮೇಲೆ ಬಳಪದಲ್ಲಿ ಮತ್ತೊಬ್ಬ ಬರೆದುಕೊಡುತ್ತಿದ್ದನು, ಶಿಲ್ಪಿ ಅದನ್ನು ಕೊರೆಯುತ್ತಿದ್ದನು. ಹೀಗೆ ಶಾಸನವು ಸಿದ್ಧವಾಗಬೇಕಾದರೆ ಕೆಲವು ಸಾರಿ ಮೂವರ ಪ್ರಯತ್ನವು ನಡೆದಿರುವಂತೆ ಕಂಡುಬರುತ್ತದೆ. ಶಾಸನವೊಂದರಲ್ಲಿ ಚಾವರಾಜ ಬಳಹದಲ್ಲಿ ಬರೆದುಕೊಟ್ಟಂತೆಯೂ, ಗಂಗಾಚಾರಿಯು ಅದನ್ನು ಕಂಡರಿಸಿದಂತೆಯೂ ಹೇಳಿದೆ[114]. (ಶಾಸನವನ್ನು ಚಾವರಾಜನೇ ರಚಿಸಿದ್ದಿರಬಹುದು). ಮತ್ತೊಂದು ಶಿಲಾಶಾಸನದಲ್ಲಿ ಮಧುಸೂದನದೇವರು ಶಾಸನ ಕೃತಿಯನ್ನು ರಚಿಸಿದರೆಂದೂ, ಶಂಕದೇವನು ಶಾಸನವನ್ನು ಬರೆದನೆಂದೂ, ಸೋಮನು ಕೆತ್ತಿದನೆಂದೂ

---

110 EC. VII. SK. 263 and 264.

111 EC. VII. SK. 176, C. 450 A.D.—"ಕುಬ್ಜಸ್ಸ್ವಕಾವ್ಯಮಿದಮಶ್ಮತಲೇ ಲಿಲೇಖ."

112 EC. VIII. Sb. 411, C. 700 A.D. ಈ ಶಾಸನದ ಕೊನೆಯಲ್ಲಿ "ಶ್ರಿಪಾ....ವಹಾ....ಮಾಡಿದೊರ್" ಎಂದಿದೆ. ಬಹುಶಃ ಶಿಲ್ಪಿಯ ಹೆಸರು ಇಲ್ಲಿ ಬಿಟ್ಟುಹೋಗಿವೆ. ಸು. 760ರ ಶಾಸನದಲ್ಲಿ (EI. IX. p. 22) 'ರಣಾಧಿಕಾರಿ ಲಿಖಿತ'—ಎಂದಿದೆ.

113 EC. III. NJ. 139, C. 915 A.D. ರಾಜೇಂದ್ರ ಚೋಳನ ಆಜ್ಞೆ ಮೊದಲು ಓಲೆಯಲ್ಲಿದ್ದು ಬಳಿಕ ಶಿಲೆಗೆ ಸ್ಥಳಾಂತರಿತವಾಯಿತು ಎಂದು ಶಾಸನಗಳಲ್ಲಿರುವುದನ್ನು ಇಲ್ಲಿ ನೆನೆಯಬಹುದು (C. Sivaramamurthy : Indian Epigraphy and South Indian scripts, p. 20).

114 "ಮೃದು ರೇಖಾವಿಳಾಸಂ ಚಾವರಾಜ ಬಳಹದಲ್ಬರೆದುದ ಬಿರುದರುವಾರಿಮುಖತಿಳಕ ಗಂಗಾಚಾರಿ ಕಂಡರಿಸಿದ."
(EC. II. 127, 1115 A.D.)

ಹೇಳಿದೆ.[115] ತಾಮ್ರ ಪಟಗಳನ್ನು ಕೊರೆಯುವಾಗಲೂ ಅಷ್ಟೇ. ದಾನದ ವಿಷಯವನ್ನು ತಾಮ್ರಪಟದ ಮೇಲೆ ಮಸಿಯಲ್ಲಿ ಮೊದಲು ಬರೆಯುತ್ತಿದ್ದರು. ಐದನೇ ಶತಮಾನದ ಕಸಿಯ ತಾಮ್ರಪಟಗಳಲ್ಲಿ ಸ್ವಲ್ಪ ಭಾಗವನ್ನು ಮಾತ್ರ ಕೊರೆದಿದೆ. ಕೊರೆಯದೆ ಬಿಟ್ಟ ಭಾಗದಲ್ಲಿ ಮಸಿಯಲ್ಲಿ ಬರೆದ ಅಕ್ಷರಗಳಿವೆ.[116]

ಈ ಪದ್ಧತಿ ನಿಯತವಾದುದೇನೂ ಅಲ್ಲ. ಸಾಮಾನ್ಯ ಸಂಗತಿ ಏನೆಂದರೆ ಶಾಸನದ ಪಾಠವನ್ನು ಕೃತಿಕಾರ ರಚಿಸಿ, ಕೆಲವೊಮ್ಮೆ ತಾನೇ ಬರೆದುಕೊಡುತ್ತಿದ್ದನು, ಶಿಲ್ಪಿಯು ಕೊರೆಯುತ್ತಿದ್ದನು.[117] ಅಥವಾ ಶಿಲ್ಪಿ ವಿದ್ಯಾವಂತನಾಗಿದ್ದರೆ ತಾನೇ ಶಾಸನದ ಪಾಠವನ್ನು ಸಿದ್ಧಪಡಿಸಿ ತಾನೇ ಕೊರೆಯುತ್ತಿದ್ದುದೂ ಅಸಂಭವವಲ್ಲವಾದರೂ ಅತ್ಯಪೂರ್ವ, ಅಥವಾ ಇಲ್ಲವೇ ಇಲ್ಲವೆನ್ನಬಹುದು. ಕೆಲವು ಕಡೆ ಶಾಸನವನ್ನು 'ಬಳಹದಲ್ಲಿ' ಬರೆದುಕೊಟ್ಟವನ, ಕೆತ್ತಿದವನ ಹೆಸರುಗಳು ಮಾತ್ರ ಇವೆ.[118] ಅಂತಹ ಕಡೆ ಬರೆದುಕೊಟ್ಟವನೇ ಶಾಸನದ ಕರ್ತೃವೆಂದು ಭಾವಿಸಬೇಕಾಗುತ್ತದೆ.[119.1] ಕೆಲವು ಕಡೆ 'ಬರಹ' ಎಂಬ ಮಾತಿಗೆ ಕಂಡರಣೆ, ಕೊರೆಯುವಿಕೆ ಎಂದು ಅರ್ಥಮಾಡಬೇಕಾಗುತ್ತದೆ.[119.2]

ರಾಜನು ಹೊರಡಿಸುವ ಆಜ್ಞೆ (ಶಾಸನ)ಗಳನ್ನು ಬರೆಯಲು, ಅವುಗಳನ್ನು ಹಾಕಿಸಲು ಪ್ರತ್ಯೇಕವಾದ ಒಂದು ವ್ಯವಸ್ಥೆಯೇ ಇದ್ದಂತೆ ತೋರುತ್ತದೆ.[120] ಹಿಂದಿನ ಕಾಲದಲ್ಲಿ ಬಿಟ್ಟುಕೊಟ್ಟ ದತ್ತಿಯೊಂದರ ವಿಷಯದಲ್ಲಿ ಸಂದೇಹವು ಉದ್ಭವಿಸಿದಾಗ ಆ ಹಳೆಯ ಲಿಪಿಯಲ್ಲಿ ರಚಿತವಾಗಿರುವ ಶಾಸನವನ್ನು ಓದಬಲ್ಲ ಶಕ್ತಿಯನ್ನು ಬೆಳಸಿಕೊಂಡವರ ಅಗತ್ಯ ಇದ್ದಿರಬೇಕು. ಈ ಅಧಿಕಾರಿಗಳನ್ನೇ ಶಾಸನಗಳು 'ಶಾಸನವಾಚಕ ಚಕ್ರವರ್ತಿ'[121]ಗಳೆಂದು ಕರೆದಿರುವಂತೆ ತೋರುತ್ತದೆ. ಮಹಾಮಾತ್ರರಂತಹ ಅಧಿಕಾರಿಗಳ ಮಕ್ಕಳು ಈ ಅಧಿಕಾರದಲ್ಲಿರುವುದನ್ನು ಕಂಡರೆ [122]ಇದು ಬಹು ಹೊಣೆಗಾರಿಕೆಯ ಸ್ಥಾನವಾಗಿದ್ದಿರಬೇಕು.[123]

---

115 EC. XI. Dg. 41, 1148 A.D. ಮತ್ತೊಂದು ಶಾಸನದಲ್ಲಿ (BKI. I. ii. 127, 1082 A.D.) ನಾಗದೇವನು ಕಾವ್ಯವನ್ನು ರಚಿಸಿದನೆಂದೂ, ಕುಲಕರಣಿ ಮಾಚಲಾರ್ಯ ಬರೆದನೆಂದೂ ಅಯ್ಯಣ ಕೊರೆದನೆಂದೂ ಹೇಳಿದೆ. ಇದನ್ನೂ ನೋಡಿ–"ಚತುರ್ಮುಖ ರುದ್ರಭಟ್ಟರ ಕಾವ್ಯಂ ಪದ್ಮನಾಭನ ಬರೆಪಂ....ಕೇತೋಜನ ಕಂಡರಣೆ (KI. V. No. 10)

116 G.S. Gai : 'Karnatak Epigraphy', (Karnāṭaka Darśana, p. 60).

117 "ಸಂಧಿವಿಗ್ರಹಿ ಪಾಮರಾಜಂ ಸಾಸನಗಬ್ಬಮುಂ ಪೇಳ್ದು ಬರೆದಂ ಪೊಯ್ದಂ ಸಾಂತೋಜನುಂ ಪದ್ಮನುಂ" (EC. VII. Sh. 10, C. 1085 A.D.)

"ತ್ರಿವಿಕ್ರಮ ಪಂಡಿತರ ಪದ್ಯ ತಲ್ಲಿಖಿತ ಬೊಪ್ಪೋಜನ ಕಂಡರಣೆ" (EC. XV. AK. 205, 1185 A.D.)

118 "ಸುಜನಮಿತ್ರ ಗೋತ್ರಪವಿತ್ರ ರೇಚಣನ ಸೀಘ್ರಲಿಖಿತ ಮಸಣೋಜನ ಬೆಸ."

119.1 ಉದಾಹರಣೆಗೆ ಸು. ಕ್ರಿ.ಶ. 450ರ ತಾಳಗುಂದ ಶಾಸನವನ್ನು ಕುಬ್ಜ ಎಂಬ ಕವಿ ಬರೆದು ತಾನೇ ಶಿಲಾಫಲಕದ ಮೇಲೆ ಬರೆದುಕೊಟ್ಟ ; ಶಿಲ್ಪಿ ಆಮೇಲೆ ಅದನ್ನು ಕೆತ್ತಿದ (D. C. Sircar : Indian Epigraphy, p. 86).

119.2 EC. VIII. Sb. 327, 1112 A.D.

120 "ಶಾಸನಾಧಿಕಾರಿಕಾಕ್ಷಪಟಲಿಕ" ಎಂಬ ಮಾತು ತಾಮ್ರಪಟಗಳಲ್ಲಿ ಬರುತ್ತದೆ. ರಾಜಶಾಸನಗಳನ್ನು ನೋಡಿಕೊಳ್ಳುತ್ತಿದ್ದವನು ಇವನೇ. ಬಾಣನ ಕಾದಂಬರಿಯಲ್ಲಿ ಬರುವ 'ಗ್ರಾಮಾಕ್ಷ ಪಟಲಿಕ'ನು ಗ್ರಾಮಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಆಜ್ಞೆಗಳನ್ನು ನೋಡಿಕೊಳ್ಳುತ್ತಿದ್ದವನು.

121 MAR (1934), p. 83, C. 1140 A.D. ಈ ಶಾಸನವಲ್ಲದೆ ಚಾಮರಾಜನಗರ ತಾಲ್ಲೂಕಿನ ಶಾಸನದಲ್ಲಿಯೂ ಪುಣಿಸಚಮೂಪನನ್ನು 'ಸಕಲ ಶಾಸನವಾಚಕ ಚಕ್ರವರ್ತಿ' ಎಂದು ಕರೆದಿದೆ (EC. IV. ch. 83).

122 EC. IX. Nl. i, 1029 A.D.

123 "To transmit the royal decrees, a corps of secretaries and clerks was maintained and remarkable precautions were taken to prevent error. Under the Cōlas, for

ಶಾಸನಗಳನ್ನು ರಚಿಸಿರುವವರಲ್ಲಿ ಹಲವರು ದೊಡ್ಡ ವಿದ್ವಾಂಸರೂ, ಒಳ್ಳೆಯ ಕವಿಗಳೂ ಆಗಿದ್ದರು. ನಾಗದೇವ ಎಂಬ ವಿದ್ವಾಂಸನು ''ಬುಧತತಿ ಮಚ್ಚೆ ಕಾವ್ಯಮಂ ವಿರಚಿಸಿ''[124]ದುದಾಗಿ ಹೇಳಿಕೊಂಡಿದ್ದಾನೆ. ಬಸವಣಯ್ಯ ಎಂಬಾತನು "ಅನುಪಮತರಾಕ್ಷರಂ ಬುಧಜನಮುಂ ಜೀಯನಿಸೆ ಸಕಳ ವಿದ್ಯಾನಿಳಯ [ಂ] ಮನುಮುನಿಚಾರಿತ್ರನೀ ಸಾಸನಮುಂ ಬರೆದಂ''[125]; ಶ್ರೀಕಂಠ ಎನ್ನುವವನು ತನ್ನನ್ನು "ವಿದ್ಯಾವಧೂ ಶ್ರವಣಭಾಸುರ ಕರ್ಣಪೂರ''ನೆಂದು ಕರೆದುಕೊಂಡಿದ್ದಾನೆ[126]; ''ವಿನುತ ಮಧುರೋಕ್ತಿಯಿಂ ತಂನತಿಶಯ ವಚೋವಿಭೂತಿಗಿದುವೆ ಯಶಶ್ಶಾಸನಮಾದುದೆಂಬಿನಂ ಶಾಸನಮಿದಂ ಬರೆದನಾಶುಕವಿ ನಿಟಿಲಾಕ್ಷಂ''[127] — ಈ ಆಶುಕವಿಯ ಯಶಶ್ಶಾಸನವು ಈ ಶಾಸನದಲ್ಲಿ ಮಾತ್ರ ಉಳಿದುಕೊಂಡಿದೆ. ಅವನ ಆಶುಕವಿತೆ ಅದು ಸೃಷ್ಟಿಯಾದ ಕಾಲದೇಶಗಳಲ್ಲೇ ಕೇಳಿದವರ ಕಿವಿಯ ಮೇಲೆ ಬಿದ್ದು ಇಂಗಿಹೋಯಿತೆಂದು ಕಾಣಿಸುತ್ತದೆ. ಇನ್ನೊಬ್ಬ ಶಾಸನಕವಿ ಹೀಗೆ ಹೇಳಿಕೊಂಡಿದ್ದಾನೆ—"ವೇದವೇದಾಂಗಮನೋದದೆ ಸಾಸ್ತ್ರಮನಾದಿ ಮಧ್ಯಾಂತ—ಮಱಿಯದೆ ನಾರಣಂಗಾದುದು ಕವಿತೆ ಸಹಜಮೇ."[128] ಅನೇಕರು ಶಾಸನಗಳನ್ನು ಬರೆದು ತಮ್ಮ ಕಾವ್ಯ ಶಕ್ತಿಯನ್ನು ಪ್ರಕಟಿಸಿಕೊಂಡು ತೃಪ್ತಿಪಟ್ಟುಕೊಂಡಿರಬೇಕು. ಕವಿಗಳು ಶಾಸನಗಳನ್ನು ರಚಿಸಿಕೊಟ್ಟದ್ದರಿಂದ ಅವರಿಗೆ ದತ್ತಿಗಳನ್ನು ಬಿಟ್ಟುಕೊಟ್ಟದ್ದಾರೆ.

ಶಾಸನವನ್ನು ಕೊರೆಯುತ್ತಿದ್ದ ಶಿಲ್ಪಿಗಳು ಸಾಮಾನ್ಯವಾಗಿ ತಮ್ಮನ್ನು 'ರೂವಾರಿ' (<ರೂಪಾಕಾರಿ) ಗಳೆಂದೂ, ''ಸರಸ್ವತೀ ಗಣದಾಸಿ''[129]ಗಳೆಂದೂ ಕರೆದುಕೊಂಡಿದ್ದಾರೆ.

ಇವರು ತಮ್ಮನ್ನು "ಸರಸ್ವತೀಗಣದಾಸಿ" ಗಳೆಂದು ಕರೆದುಕೊಂಡಿರಲು ಕಾರಣವೇನೋ ತಿಳಿಯದು. ಸರಸ್ವತೀಗಣ ಎಂದರೆ ವಿದ್ಯಾವಂತರ, ದಾಸಿ ಎಂದರೆ ಅನುಯಾಯಿ ಎಂದು ಅರ್ಥಮಾಡಬಹುದೆಂದು ಕಾಣುತ್ತದೆ. ಓದುಬರಹದ ದೃಷ್ಟಿಯಿಂದ ಮಾತ್ರ ಅವಿದ್ಯಾವಂತರಾದರೂ ಶಿಲ್ಪಶಾಸ್ತ್ರದಲ್ಲಿ ಇವರು ಬಹು ಕುಶಲರಾಗಿದ್ದರು. ತಾವು 'ತ್ವಷ್ಟೃ'[130] ಕುಲದವರೆಂದೂ, 'ಅಕ್ಕಸಾಲೆ'[131] ಕುಲದವರೆಂದೂ, ತಾವು

---

instance, orders were first written by scribes at the king's dictation, and the accuracy of the drafts was attested by competent witnesses. Before being sent to their recipients they were carefully transcribed, and a number of witnesses, sometimes amounting to as many as 13, again attested them. In the case of grant of land and privileges, an important court official was generally deputed to ensure that the royal decrees were put into effect. Thus records were kept with great care, and nothing was left to chance. The royal scribes were often important personages."

[A. L. Basham : The Wonder that was India, p. 100]

[124] BKI. I. ii. 127, 1082 A.D.

[125] BKI. I. i. 97,1062 A.D.

[126] SII. IX. i. 165, 1099 A.D.

[127] EC. VII. SK. 98, 1103 A.D.

[128] BKI. I. i. 42, 971 A.D. ಇದಲ್ಲದೆ ಈ ಶಾಸನದಲ್ಲಿ ಇನ್ನೂ ಹಲವು ತ್ರಿಪದಿಗಳಿವೆ. ಶಾಸ್ತ್ರದ ಲವಲೇಶವೂ ತನಗೆ ಗೊತ್ತಿಲ್ಲವೆಂದು ಹೇಳಿಕೊಂಡಿದ್ದರೂ ಇವನು ತಕ್ಕಮಟ್ಟಿಗೆ ವಿದ್ಯಾವಂತನೇ. ಶಾಸನವನ್ನು ಬರೆಯುವ ಪದ್ಧತಿ ಇವನಿಗೆ ಗೊತ್ತಿದೆ. ಜಾನಪದ ಸಾಹಿತ್ಯದಲ್ಲಿ ಇವನಿಗೆ ಅಭಿರುಚಿಯೂ ಪ್ರವೇಶವೂ ಇದ್ದರೂ ಕಂದಪದ್ಯಗಳನ್ನೂ ಬರೆಯಬಲ್ಲ.

[129] BKI. I. i. 97, 1062 A.D.

[130] "ಮಹಾರಾಜ ಮುಖಾಜ್ಞಪ್ತ್ಯಾ ಮಾರಿಷೇಣ ತ್ವಟ್ಟಕಾರೇಣ (ತ್ವಟ್ಟ<ತ್ವಷ್ಟೃ) ಲಿಖಿತೇಯಂ ತಾಮ್ರಪಟ್ಟಿಕಾ" [EC. X. Mr. 72, c. 425 A.D.]

[131] EC. XII, Tp. 104, 1130 A.D.

'ಶಿಲ್ಪಿ'[132]ಗಳೆಂದೂ, 'ಕಮ್ಮರ'[133]ರೆಂದೂ ಹೇಳಿಕೊಂಡಿದ್ದಾರೆ. ಇವರ ಅಧಿದೈವ ವಿಶ್ವಕರ್ಮ. ಕರ್ನಾಟಕದಲ್ಲಿಯಂತೂ ಶಿಲ್ಪಿ ಮತ್ತು ಚಿತ್ರ ಎಂಬ ಕುಶಲಕಲೆಗಳ ಅಭಿವೃದ್ಧಿಗೆ ಇವರೇ ಕಾರಣರು.

ಇವರಲ್ಲಿ ಹಲವರು ತಮ್ಮ ಶಿಲ್ಪವಿದ್ಯೆಯನ್ನು ಹೆಮ್ಮೆಯಿಂದ ಹೇಳಿಕೊಂಡು, ತಮಗೆ ಶಿಲ್ಪವಿದ್ಯೆಯನ್ನು ಹೇಳಿಕೊಟ್ಟ ಗುರುಗಳನ್ನು ಭಕ್ತಿಯಿಂದ ಸ್ಮರಿಸಿದ್ದಾರೆ. "ಪುರಿಕರ ನಗರದ ಬಮ್ಮಂ ಸರಸ್ವತೀ ಗಣದ ದಾಸಿ ಕಂಠ ...ನಿರುತ ಯತಿಸಟಂ ಖಂಡರಿಸಿದಂ ನಾಗವರ್ಮನ ಚ್ಛಾತ್ರಂ"[134] ; "ಶಿಲ್ಪಕ ಲಲಾಟಪಟ್ಟಂ ಸರಸ್ವತೀಗಣ ಪಾದಪಂಕಜಭ್ರಮರಂ ಜಿನಪಾದಾರಾಧಕಂ ಪದ್ಮೋಜನ ಶಿಲ್ಪಿಕಾ ಕರ್ಮ"[135] ; "ಸರಸ್ವತಿ ಗಣದಾಸಿ ಬೆಂಗೋಜನ ಪುತ್ರಂ ಇಕ್ಕುಡಾಚಾರಿ ಎರಡು ದೇವಾಲಯಮಂ ಮಾಡಿ ಸಾಸನಮಂ ಬರೆದ."[136] ಇವರ ಹೆಸರುಗಳು ಸಾಮಾನ್ಯವಾಗಿ ಆಚಾರ್ಯ, ಉಪಾಧ್ಯಾಯ ಎಂಬ ಪದಗಳ ತದ್ಭವಗಳಾದ ಆಚಾರಿ, ಓಜ ಎಂಬ ಮಾತುಗಳಿಂದ ಕೊನೆಗೊಳ್ಳುತ್ತವೆ. ಇವರು ವಿಶ್ವಕರ್ಮನ ಭಕ್ತರಾದರೂ, ಶಿವ ವಿಷ್ಣು ಜಿನ ಮುಂತಾದ ಎಲ್ಲಾ ದೇವತೆಗಳಿಗೂ ಭಕ್ತರಾಗಿದ್ದ ವಿಷಯವನ್ನು ಹೇಳಿಕೊಂಡಿದ್ದಾರೆ. ಕಲಾರಾಧಕರಾದ ಇವರೂ ಜಾತಿಮತಗಳ ಕಟ್ಟುಪಾಡಿಗೆ ಸಿಕ್ಕರೆ ಕಲೆಯ ಗತಿಯೇನು ?.

ಇವರ ದೃಷ್ಟಿಯಲ್ಲಿ ಶಾಸನಗಳನ್ನು ಕೊರೆಯುವ ಕರ್ಮವು ಕಲಾಕರ್ಮವಾಗಿದ್ದಿತು. ಮೇಲೆ ಬಂದಿರುವ 'ಶಿಲ್ಪಿಕಾಕರ್ಮ' ಎಂಬ ಮಾತನ್ನು ನೋಡಬಹುದು. ಶಿಲೆಯನ್ನು ಆರಿಸಿ ತಂದು[137], ಅದನ್ನು ಸಂಸ್ಕರಿಸಿ, ಮೇಲಿನ ತುದಿಯಲ್ಲಿ ಅಂದವಾದ ಚಿತ್ರಗಳನ್ನು ಬಿಡಿಸಿ[138] ಕೆಳಗೆ ಅಕ್ಷರಗಳನ್ನು ಕೊರೆಯುತ್ತಿದ್ದರು. ಇವೆಲ್ಲವೂ 'ಶಾಸ್ತ್ರೋಕ್ತ' ವಾಗಿ ನಡೆಯುತ್ತಿದ್ದಿತು. ಶಿಲ್ಪಕಾರ್ಯಕ್ಕೆ ಯಾವ ಶಾಸ್ತ್ರ ಅಥವಾ ಪದ್ಧತಿಯನ್ನನುಸರಿಸುತ್ತಿದ್ದರೋ ಅದನ್ನೇ ಇಲ್ಲಿಯೂ ಅನುಸರಿಸುತ್ತಿದ್ದಿರಬಹುದು. ಆ ಪದ್ಧತಿ ಯಾವುದು ಎಂಬುದರ ಪರಿಚಯ ಶಾಸನಗಳಿಂದ ಆಗುವುದಿಲ್ಲ. "ಸಾಸ್ತ್ರಕರ್ಮಿ ಚಾವುಂಡೋಜಂ ಕಂಡರಿಸಿದಂ"[139] ;

---

132 EC. IV. Ch. 18, C. 1000 A.D. ಈ ಶಾಸನದಲ್ಲಿ 'ಬರೆದೋನ್' ಎಂಬ ಮಾತಿಗೆ 'ಕೆತ್ತಿದವನು' ಎಂದು ಅರ್ಥಮಾಡಬೇಕಾಗುತ್ತದೆ.

133 BKI. I. ii. 127, 1082 A.D.

134 BKI. I. i. 97, 1062 A.D.

135 EC. VII. Sk. 293, 1080 A.D.

136 EC. XI. Dg. 155, 1124 A.D.

137 ಶಿಲ್ಪಿ ಎಂತಹ ಶಿಲೆಯನ್ನು ಆರಿಸಿಕೊಳ್ಳಬೇಕು, ಶಿಲಾ ಪ್ರಭೇದಗಳು, ಅವುಗಳ ಗುಣದೋಷಗಳು—ಇವುಗಳ ವಿಸ್ತಾರವಾದ ನಿರೂಪಣೆ ವಿಷ್ಣು ಧರ್ಮೋತ್ತರ ಪುರಾಣದಲ್ಲಿ ದೊರಕುತ್ತದೆ.

138 ಶೈವ ಶಾಸನಗಳಾದರೆ ಶಿವಲಿಂಗವೋ ಹಾಲೂಡುತ್ತಿರುವ ನಂದಿಯೋ ಇರುತ್ತದೆ. ಜೈನ ಶಾಸನಗಳಲ್ಲಿ ಪಲ್ಯಂಕಾಸನದಲ್ಲಿರುವ ಅರ್ಹಂತನ ಚಿತ್ರವಿರುತ್ತದೆ. ವೈಷ್ಣವ ಶಾಸನವಾದರೆ ಶಂಖಚಕ್ರಾದಿ ಚಿಹ್ನೆಗಳಿರುತ್ತವೆ. ಶಾಸನಗಳ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಖಡ್ಗ, ನೇಗಿಲುಗಳನ್ನೂ ಕೆತ್ತುವುದುಂಟು. ಮಾಸ್ತಿಕಲ್ಲಿನ ಮೇಲೆ ಸ್ತ್ರೀಯ ಚಿತ್ರ ಅಥವಾ ಬಳೆಗಳಿಂದಲಂಕೃತವಾದ ಹಸ್ತವಿರುತ್ತದೆ. ವೀರಗಲ್ಲಿನ ಮೇಲೆ ಸಾಮಾನ್ಯವಾಗಿ ಮೂರು ಹಂತಗಳಿದ್ದು, ಕೆಳಗೆ ಅವನ ಹೋರಾಟವನ್ನೂ, ಮಧ್ಯೆ ಅವನನ್ನು ದೇವತೆಗಳು ಕೊಂಡೊಯ್ಯುವುದನ್ನೂ, ಮೇಲೆ ಭಗವತ್ಸಾನ್ನಿಧ್ಯದಲ್ಲಿ ಅವನು ಕುಳಿತಿರುವುದನ್ನೂ ಚಿತ್ರಿಸುತ್ತಾರೆ. ಈ ಅನೇಕ ಚಿತ್ರಗಳು ಆ ಕಾಲದ ವೇಷ ಭೂಷಣಗಳನ್ನು ತಿಳಿದುಕೊಳ್ಳಲು ಸಹಾಯ ಮಾಡುತ್ತವೆ.

ಹತ್ತನೇ ಶತಮಾನದ ಶಾಸನವೊಂದರ ಮೇಲೆ ಗಜಲಕ್ಷ್ಮಿಯ ಚಿತ್ರವಿದೆ. ವೈಷ್ಣವ ದೇವಾಲಯಗಳ ಬಾಗಿಲುವಾಡಗಳ ಮೇಲೆ ಕೆರೆಯ ತೂಬುಗಳ ಮೇಲೆ ಇದನ್ನು ಕೊರೆದಿರುವುದುಂಟು. ಗಜಲಕ್ಷ್ಮಿಯನ್ನು ಕೊರೆದರೆ ಆ ವಸ್ತುವು ಶಾಶ್ವತವಾಗಿರುವುದೆಂದೂ, ಮಾಡಿಸಿದವನಿಗೆ ಒಳ್ಳೆಯದಾಗುವುದೆಂದೂ ನಂಬಿಕೆಯಿದೆ (MAR. 1929, p. 150).

139 EC. VII. Sk. 169, 1067 A.D.

"ಗುಣಪಾ....ರ್ಯ ಪ್ರಣೀತ ಶಾಸ್ತ್ರೋಕ್ತಿಯಿಂದೆ ಕಲುವೆಸನಂ ಲಕ್ಷಣಯುಕ್ತಮಾಗಿರಲು ಧಾರಿಣಿಯೊಳು ಗುಲುಗೋಜನಜೀವನೆಂದೆಳೆ ಪೊಗಳ್ಗಂ ಬರೆ....ಸುರರಾಜ ತಿರೀಟಘಟಿತ ಪದಶಾಸನಮಂ ಸ್ಥಿರಮಾಗಿರೆ ಮುದದಿಂ ಕಂಡರಿಸಿದನಾಚಂದ್ರತಾರಕಂ ಕಾಳೋಜಂ"[140]. ಇಲ್ಲಿಯ ಸ್ವಾರಸ್ಯವೆಂದರೆ ಕಲ್ಲನ್ನು ತಂದು ಸಂಸ್ಕರಿಸಿದವನು ಗುಲುಗೋಜ. ಅದರ ಮೇಲೆ ಅಕ್ಷರಗಳನ್ನು ಕೊರೆದವನು ಕಾಳೋಜ. ಬಹುಶಃ ಕಾಳೋಜ ಇನ್ನೂ ಶಿಲ್ಪಕಲೆಯನ್ನು ಅಭ್ಯಸಿಸುತ್ತಿದ್ದವನೆಂದು ಕಾಣುತ್ತದೆ. ಮತ್ತೊಂದು ಶಾಸನದಲ್ಲಿಯೂ ಇಂತಹುದೇ ಉಕ್ತಿಯಿದೆ.[141]

ಇವರ ಹೆಸರುಗಳ ಹಿಂದೆ ಬರುವ 'ಬಿರುದ ರೂವಾರಿ' ಎಂಬುದು ಅವರ ಪ್ರಶಸ್ತಿಯಿದ್ದಂತೆ ಕಾಣುತ್ತದೆ. "ಬಿರುದ ರೂವಾರಿ ಮುಖತಿಳಕಂ ಗಂಗಾಚಾರಿ ಕಂಡರಿಸಿದಂ"[142]; "ನಾಗರಾದಿ ನಾಗರಿಕ ದ್ರಾವಿಳ ಸಮುದ್ಧರಣನಪ್ಪ ಮಾಣಿಮೋಜನ ಮಗಂ ಬಿರುದರೂವಾರಿ ವೇಶ್ಯಾಭುಜಂಗ ಬಲಕೋಜ ಕಂಡರಿಸಿದಂ"[143]. ಈ 'ಬಿರುದರೂವಾರಿ' ಎಂಬ ಪ್ರಶಸ್ತಿಯು ಅವರ ಶಿಲ್ಪವಿದ್ಯಾಕೌಶಲದಿಂದ ಅವರಿಗೆ ಸಮನಿಸಿರಬೇಕು.

ಇವರ ಶಿಲ್ಪಕಲಾಪ್ರತಿಭೆ ಬಹುಮುಖವಾದುದು. ಶಿಲಾವಿದ್ಯೆಯಲ್ಲಿ ಮಾತ್ರವಲ್ಲ, ಕಾಂಸ್ಯ ವಿದ್ಯೆಯಲ್ಲಿಯೂ ಇವರು ನಿಷ್ಣಾತರಾಗಿದ್ದರು.[144] ಇವರಲ್ಲಿ ಕೆಲವರು ತಾವು ಚಿತ್ರಕಲಾಭಿಜ್ಞರೆಂದೂ, ಮರದ, ಇಟ್ಟಿಗೆಯ, ದಂತದ ಕೆಲಸಗಳಲ್ಲಿ ಚತುರರೆಂದೂ ಹೇಳಿಕೊಂಡಿದ್ದಾರೆ.[145] ಇವರು ಅಕ್ಷರಗಳನ್ನು ಕೊರೆಯುವ ಕಾರ್ಯವನ್ನು ಶಿಲ್ಪದ ಮಟ್ಟಕ್ಕೆ ಏರಿಸಲು ಶ್ರಮಿಸಿದರು. ಅನೇಕರು ತಮ್ಮ ಅಕ್ಷರಗಳು ಮುತ್ತಿನ ಸರಿಗೆಯನ್ನು ಹೋಲುವುವೆಂದೂ,[146] ಹೊಕ್ಕುಳು ತಲೆಕಟ್ಟು ಮುಂತಾದ ಅಕ್ಷರಗಳ 'ಅವಯವ' ಗಳನ್ನರಿತು ಕೆತ್ತ ಬಲ್ಲೆವೆಂದೂ ಹೇಳಿಕೊಂಡಿದ್ದಾರೆ.[147] ಅಷ್ಟೇ ಅಲ್ಲ, ಕೆಲವರು ಅಕ್ಷರಗಳಿಗೆ ಹೊಂದಿಕೊಂಡಂತೆ ಆನೆ, ಸಿಂಹ, ಜಿಂಕೆಗಳನ್ನೂ ಬಿಡಿಸಿರುವುದುಂಟು. ಈ 'ಅಲಂಕಾರಲಿಪಿ' (Calligraphy) ಗೆ ಹನ್ನೊಂದನೇ ಶತಮಾನದ

---

140 SII. IX. i. 165, 1099 A.D. ಇಲ್ಲಿಯ 'ಗುಣಪಾ...ರ್ಯ'ನು ಗುಲುಗೋಜನ ಗುರುವೋ ಅಥವಾ ಯಾವುದೋ ಶಿಲ್ಪಶಾಸ್ತ್ರಗ್ರಂಥದ ಕರ್ತೃವೋ ತಿಳಿಯದು. ಶಿಲ್ಪಶಾಸ್ತ್ರಕ್ಕೆ ಸಾಮಾನ್ಯವಾಗಿ ಪ್ರಮಾಣಗ್ರಂಥ 'ಮಾನಸಾರ'. ಆದರೆ ಮಾನಸಾರದ ಉಲ್ಲೇಖ ನಮಗೆ ತಿಳಿದಮಟ್ಟಿಗೆ ಯಾವ ಶಾಸನದಲ್ಲಿಯೂ ಬಂದಿಲ್ಲ.

141 "ಕೆಸಱು ಕಲ್ಲಾದಿಯಾಗಿ ಕಲ್ಲೋೞ್ಗುರ ಕೆಲಸ ಭರತೋಜನ ಕಂಡರಣೆ".

(BKI.I.ii.177, 1125 A.D.)

142 EC. II. 67, 1129 A.D.

143 EC. VI. Mg. 22, 1129 A.D. ಇಲ್ಲಿ ನಾಗರ, ಆದಿನಾಗರಿಕ, ದ್ರಾವಿಳ ಎಂಬ ಶಿಲ್ಪಶೈಲಿಗಳನ್ನು ಸೂಚಿಸಿರುವಂತೆ ಕಾಣುತ್ತದೆ. ಭರತಖಂಡದ ವಾಸ್ತುಶಿಲ್ಪವು ನಾಗರ, ವೇಸರ, ದ್ರಾವಿಡ ಎಂದು ಮೂರು ಬಗೆಯಾದ್ದೆಂದು ಶಾಸ್ತ್ರಗಳಲ್ಲಿ ಹೇಳಿದೆ. (ಮೈಸೂರು ದೇಶದ ವಾಸ್ತುಶಿಲ್ಪ, ಪು. 26). ಶಾಸನದಲ್ಲಿ ಬರುವ 'ಆದಿನಾಗರಿಕ'ವು ವೇಸರಕ್ಕೆ ಇದ್ದ ಇನ್ನೊಂದು ಹೆಸರಿರಬಹುದೇ ?.

144 BKI. I. i. 48, 1002 A.D.

145 "ಸಕಲ ಕಲಾಂತಱ್ಪ್ರಾಪ್ತಿ ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯೇಣೇದಂ ಶಾಸನಂ ಲಿಖಿತಂ" [EC. VI. Mg. 36, 749 A.D.] ; "ಸರ್ವಕಲಾಧಾರಭೂತ ಚಿತ್ರಕಲಾಭಿಜ್ಞೇಯಃ ವಿಶ್ವಕರ್ಮಾಚಾರ್ಯೇಣೇದಂ ಶಾಸನಂ ಲಿಖಿತಂ" (EC. IX. Nl. 60, 797 A.D.). ಈ ಇಬ್ಬರು ವಿಶ್ವಕರ್ಮಾಚಾರ್ಯರು ಒಬ್ಬರೇ ಇರಬೇಕು. "ಅಯ್ಯಣಂ ಮರವೆ (ದೆ)ಸೆದೊಪ್ಪು ವಿಟ್ಟಿಗೆಯ ದಂತದ ಚಿತ್ರದ ಶಾಸ್ತ್ರಯುಕ್ತಮಾಗಿರೆ ಕೆಲಬರಿವ ಕಮ್ಮಱವಿನ್ನಣಮೋಜೆಗೆಲ್ಲಿಯುಂ ಪರಿಕಿಸೆ ವಿಶ್ವಕರ್ಮನಿನವಂ ಮಿಗಿಲೆಂಬುದಶೇಷ ಭೂತಳ" (BKI. I. ii. 127, 1087 A.D.).

146 BKI. I. i. 111, 1071 A.D.

147 EC. XI. Dg. 149, 1113 A.D.

ಶಾಸನವೊಂದನ್ನು ಹೆಸರಿಸಬಹುದು.[148] ಇನ್ನೊಬ್ಬ ಮಲ್ಲೋಜನೆಂಬ ಶಿಲ್ಪಿ ತಾನು ಒಂದು ಪುಟದಲ್ಲಿ 'ಗೋಗ್ರಹಣ' ವನ್ನು 'ಉತ್ಕಟ' ವಾಗಿ ಬರೆದು ಬಿರುದನ್ನು ಸಂಪಾದಿಸಿದವನೆಂದು ಹೊಗಳಿಕೊಂಡಿದ್ದಾನೆ (EC. V. Part. ii. No. 141, 1158 A.D.)–"ಪುಟದೊಳು ಗೋಗ್ರಹಣಮನುತ್ಕಟಮಾಗಿರೆ ಬರೆದು ಮೆಚ್ಚಿಪುದಱಿಂ ಕಾಪಿಂ ದಿಟದಿಂ ಮೂಱುಂ ರಾಯರ ಕಟಕದ ಬಿರುದಗ ಲೇಖಕೋಪಾಧ್ಯಾಯ ಇ ಶಾಸನಮಂ ಮಾಳೋಜನ ಮಗ ರೂವಾರಿ ಮಲ್ಲೋಜ ಖಂಡರಿಸಿದ" (ಇವನು ಒಂದೇ ಪುಟದಲ್ಲಿ ಬರೆದ 'ಗೋಗ್ರಹಣ' ಯಾವ ಭಾಷೆಯದು ಎಂಬುದು ಕುತೂಹಲದ ವಿಷಯವಾಗಿದೆ. ಅದು ಕನ್ನಡದಲ್ಲಿದ್ದರೆ, ಅದು ಇಲ್ಲಿಯವರೆಗೆ ದೊರಕಿರದ, ಕವಿ ಚರಿತೆಕಾರರು ಗಮನಿಸಿರದ ಒಂದು ಕೃತಿಯಾಗುತ್ತದೆ).

ಹೀಗೆ ಶಾಸನವನ್ನು ಬರೆದ ಕರ್ತೃ, ಕೆತ್ತಿದ ಶಿಲ್ಪಿ ಇವರಿಂದ ಶಾಸನವು ಸಿದ್ಧವಾದ ಮೇಲೆ ಅವರಿಬ್ಬರಿಗೂ ಯಥೇಷ್ಟವಾಗಿ ಸಂಭಾವನೆ ದೊರಕುತ್ತಿದ್ದಿತು. ಒಬ್ಬ ಶಿಲ್ಪಿಯು ತಾಮ್ರಪಟವೊಂದನ್ನು ಕೊರೆದದ್ದಕ್ಕೆ ನಾಲ್ಕು ಖಂಡುಗ ಬತ್ತದ ಭೂಮಿಯೂ, ಎರಡು ಹೊಲಗಳೂ ತನಗೆ ದೊರೆತುವು ಎಂದು ಹೇಳಿಕೊಂಡಿದ್ದಾನೆ.[149] ಮತ್ತೊಂದು ಶಾಸನದಲ್ಲಿ ಶಿಲ್ಪಿಗೆ ಹನ್ನೆರಡು ಮತ್ತರು ಭೂಮಿಯನ್ನೂ ಸ್ವಲ್ಪ ತೋಟವನ್ನೂ ಕೊಡಲಾಗಿದೆ. ಒಬ್ಬ ಶಿಲ್ಪಿಯಂತೂ ತನಗೆ ಬಂದಿರುವ ಭೂಮಿ ತೋಟಗಳು ದೇವಸ್ಥಾನಕ್ಕೆ ಬಿಟ್ಟಿರುವ ದತ್ತಿಗಳಂತೆಯೇ ("ದೇವಭೋಗ") ರಕ್ಷಣೀಯ ಎಂದು ಹೇಳಿಕೊಂಡಿದ್ದಾನೆ.[150]

ಶಾಸನಕರ್ತೃವೂ ಶಿಲ್ಪಿಯೂ ಎಷ್ಟೇ ಎಚ್ಚರಿಕೆ ವಹಿಸಿದ್ದರೂ ಶಾಸನದ ಪಾಠವನ್ನು ಕೊರೆಯುವುದರಲ್ಲಿ ಅನೇಕ ತಪ್ಪುಗಳು ಆಗಿಯೇ ಆಗುತ್ತಿದ್ದುವು. ಏನಾದರೂ ತಪ್ಪುಗಳಾದರೆ ಅಳಿಸಲು ಅದೇನೂ ಮಸಿಯಲ್ಲ ತಾನೇ ! ನಮ್ಮ ಶಾಸನಗಳ ಅಚ್ಚಾಗಿರುವ ಪಾಠವನ್ನು ನೋಡಿದರೆ ಅನರ್ಥಗಳೂ, ಅಪಾರ್ಥಗಳೂ, ದುಷ್ಟಾರ್ಥಗಳೂ ಅಸಂಖ್ಯಾತ ಪ್ರಮಾಣದಲ್ಲಿರುವುದು ಗೋಚರವಾಗುತ್ತದೆ. (ಈ ಎಲ್ಲ ತಪ್ಪುಗಳಿಗೂ ಶಾಸನಕರ್ತೃ ಮತ್ತು ಶಿಲ್ಪಿಗಳೇ ಹೊಣೆ ಎಂದು ಭಾವಿಸಬಾರದು.) ಆದ್ದರಿಂದ ಈ ವಿಷಯದಲ್ಲಿ ಮುಂಜಾಗರೂಕತೆ ವಹಿಸಿ ಕೆಲವು ಶಾಸನಗಳು ಏನೇ ತಪ್ಪುಗಳಾಗಿದ್ದರೂ ಸರ್ವವೂ ಪ್ರಮಾಣ ಎಂದು ಕೊನೆಯಲ್ಲಿ ಹೇಳಿಬಿಡುತ್ತವೆ.—"ವಾಕ್ಯಂ ನ್ಯೂನಾಕ್ಷರಮಧಿಕಾಕ್ಷರಂ ವಾ ತತ್ ಸರ್ಬ್ಬಂ ಪ್ರಮಾಣಮಿತಿ."[151] ಬಹುಶಃ ನ್ಯೂನಾಕ್ಷರ, ಅಧಿಕಾಕ್ಷರಗಳಿರುವ ಕಡೆ ಲೌಕಿಕಜ್ಞಾನದ (common sense) ಸಹಾಯದಿಂದ ಸರಿಯಾದ ಅರ್ಥವನ್ನು ಗ್ರಹಿಸಬೇಕೆಂಬುದು ಮೇಲಿನ ವಾಕ್ಯದ ಅಭಿಪ್ರಾಯವಿರಬಹುದು.

ಇನ್ನೊಂದು ವಿಷಯವನ್ನು ಪರಿಶೀಲಿಸಿ ಅಲ್ಲಿಗೆ ಈ ಅಧ್ಯಾಯವನ್ನು ಮುಗಿಸಬಹುದು. ಹಿಂದೆ ನಾವು ನೋಡಿದಂತೆ ರಾಜನು ಕೊಟ್ಟ ಶಾಸನದಲ್ಲಿ ಅವನ ಸ್ವಹಸ್ತದ ಅಂಕಿತವಿರಬೇಕು ಎಂಬ ನಿಯಮವನ್ನು ಹಾಕಿವೆ ಧರ್ಮಶಾಸ್ತ್ರಗಳು ("ಸ್ವಹಸ್ತ ಕಾಲ ಸಂಪನ್ನಂ"). ಕರ್ನಾಟಕದಲ್ಲಿ ಹತ್ತನೆಯ ಶತಮಾನದತನಕ ಯಾವ ತಾಮ್ರಪಟದಲ್ಲಾಗಲಿ ಶಿಲಾಶಾಸನದಲ್ಲಾಗಲಿ ರಾಜರ ಹಸ್ತಾಂಕಿತಗಳು ಕಂಡುಬರುವುದಿಲ್ಲ. ಉತ್ತರ ಭಾರತದಲ್ಲಾದರೋ ಏಳನೇ ಶತಮಾನದ ಹರ್ಷವರ್ಧನನ ಸ್ವಹಸ್ತಾಕ್ಷರಗಳು ನಮಗೆ ದೊರೆಯು

---

148 SII. IX.i. 132, 1068 A.D. —"ದಿ ...ಳ್ ಹಸ್ತಿಸಿಂಗಂ ಹರಿಣೆಯ ರೂಹಗೆಯಕ್ಕರಾವಳಿಯಿಂದಂ ಬರೆಯ....ದಡೆ ಪುರುದಿಸವೆಸೆಲೆವೊ ರೇವಣಾಯ್ಯನೊಳಿಂದುಂ ದೆಂಟಣಿ....ನೆಲೆ ...ತ್ಥಕ ನಿನ್ನಳವೊ ಚಿತ್ರದ ಕಸದೊಳ್ಪಂ ಕಂಟ್ಮದೊಳ್ ಬರೆವ ರೇವನ ಕಂಟ್ಮಕೆಳೆ.. ಣಿಸಿ ನೋರ್ಪೊಡೆಂದೇಕೈಕಂ॥ ನಾಕೋಜಂ ಸಿವಪಾದ ಶೇಖರಂ". ರೇವಣಾಯ್ಯರ್ ಎಂಬುವನು ಕಲಾವಿದ; ಅವನು ಕಲ್ಲಿನ ಮೇಲೆ ಚಿತ್ರಗಳನ್ನು ಬರೆದುಕೊಟ್ಟದ್ದನ್ನು ನಾಕೋಜ ಎಂಬ ಶಿಲ್ಪಿ ಕೆತ್ತಿದನೆಂದು ಈ ಶಾಸನದಿಂದ ತಿಳಿಯಬಹುದು.

149 EC. VI. Mg. 36, 749 A.D.

150 EC. IX. Nl. 60, 797 A.D.

151 EI. XV. p. 87, 1058 A.D.

ತ್ತುವೆ. ಹರ್ಷನು ದೊಡ್ಡ ಕವಿಯಲ್ಲದೆ ಉತ್ತಮ ಅಲಂಕಾರ ಲಿಪಿಕಾರ (Calligraphist)ನೂ ಆಗಿದ್ದನು.[152] ಮಳಖೇಡ ಅಥವಾ ಮಾಲ್‌ಖೇಡಿನ ರಾಷ್ಟ್ರಕೂಟರ ಶಾಖೆಯೊಂದು ಗುಜರಾತಿನಲ್ಲಿ ಒಂಬತ್ತನೆಯ ಶತಮಾನದಿಂದ ರಾಜ್ಯವಾಳಲಾರಂಭಿಸಿತು. ಕರ್ನಾಟಕದ ರಾಷ್ಟ್ರಕೂಟರಿಗೆ ಅಧೀನರಾಗಿದ್ದ ಅವರ ನಾಗರೀ ಲಿಪಿಯಲ್ಲಿರುವ ಹಲವು ತಾಮ್ರಪಟಗಳು ದೊರಕಿವೆ. ಇನ್ನು ಕೆಲವು ಆ ಕಾಲದಲ್ಲಿ ಗುಜರಾತಿನಲ್ಲಿ ಪ್ರಚಲಿತವಾಗಿದ್ದ ಬೇರೆ ಲಿಪಿಗಳಲ್ಲೂ ಇವೆ. ಭಾಷೆ ಮಾತ್ರ ಸಂಸ್ಕೃತ. ಆದರೂ ತಾಮ್ರಪಟಗಳನ್ನು ನೀಡಿದ ರಾಜರ ಸ್ವಹಸ್ತದ ಅಂಕಿತವು ಮಾತ್ರ ಕನ್ನಡಾಕ್ಷರಗಳಲ್ಲಿದೆ—"ಸ್ವಹಸ್ತೋಽಯಂ ಮಮ ಶ್ರೀಕರ್ಕರಾಜಸ್ಯ ಶ್ರೀ-ಮದಿಂದ್ರರಾಜಸುತಸ್ಯ"; "ಮತಂ ಮಮ ಶ್ರೀ ಧ್ರುವರಾಜ ದೇವಸ್ಯ"; "ಶ್ರೀ ಕರ್ಕರಾಜ ಸುತಸ್ಯ ಯದು-ಪರಿ ಲಿಖಿತಂ"—ಈ ರಾಷ್ಟ್ರಕೂಟ ದೊರೆಗಳ ಮನೆಯ ಮಾತು ಕನ್ನಡವಾದ್ದರಿಂದ ಅವರು ಗುಜರಾತಿನಲ್ಲಿದ್ದರೂ, ಕನ್ನಡಾಕ್ಷರಗಳಲ್ಲೇ ರುಜುಮಾಡುತ್ತಿದ್ದರು.[153] ಹೀಗೆ ಶಾಸನಗಳಲ್ಲಿ, ತಾಮ್ರಪಟಗಳಲ್ಲಿ ರಾಜರ ಸ್ವಹಸ್ತಾಂಕಿತವಿರುವ ಸಂಪ್ರದಾಯವು ಉತ್ತರ ಭಾರತದಲ್ಲಿದ್ದರೂ, ಕನ್ನಡ ರಾಜರೇ ಬೇರೆ ಪ್ರಾಂತಗಳಲ್ಲಿದ್ದು ತಮ್ಮ ಶಾಸನಗಳಿಗೆ ತಮ್ಮ ಸ್ವಹಸ್ತವನ್ನು ಹಾಕಿದ್ದರೂ, ಹನ್ನೊಂದನೇ ಶತಮಾನದ ವಿಜ್ಞಾನೇಶ್ವರನು ಯಾಜ್ಞವಲ್ಕ್ಯನ "ಸ್ವಹಸ್ತಕಾಲ ಸಂಪನ್ನಂ" ಎಂಬ ಮಾತಿಗೆ "ಸ್ವಹಸ್ತೇನ ಸ್ವಹಸ್ತ ಲಿಖಿತೇನ ಮತಂ ಮೇ ಅಮುಕನಾಮ್ನಃ ಅಮುಕ ಪುತ್ರಸ್ಯ ಯದತ್ರೋಪರಿ ಲೇಖಿತಮಿತ್ಯನೇನ ಸಂಪನ್ನಂ ಯುಕ್ತಂ" ಎಂದು ವ್ಯಾಖ್ಯಾನಿಸಿದ್ದರೂ ಕರ್ನಾಟಕದ ಯಾವ ಪ್ರಾಚೀನ ಶಿಲಾ ಶಾಸನದಲ್ಲೂ, ತಾಮ್ರಪಟದಲ್ಲೂ ರಾಜರ ಸ್ವಹಸ್ತಾಂಕಿತಗಳು ಸಿಕ್ಕಿಲ್ಲ. ಶ್ರವಣಬೆಳಗೊಳದಲ್ಲಿ ಸಿಕ್ಕಿರುವ "ಶ್ರೀಕವಿರತ್ನ" ಎಂಬ ರನ್ನನ ರುಜುಗಳೂ, ಬೇಲೂರಿನ ಕೇಶವದೇವಾಲಯದ ಮದನಿಕಾ ವಿಗ್ರಹಗಳ ಪೀಠಗಳ ಮೇಲೆ ಶಿಲ್ಪಿಗಳೇ ಕೊರೆದುಕೊಂಡಿರುವ ಅವರ ಹೆಸರುಗಳೂ ಸ್ವಹಸ್ತಾಂಕಿತಗಳೇ ಆದರೂ 'ಒಪ್ಪ' [154]ಗಳೆಂದು ಅವನ್ನು ಕರೆಯಲು ಸಾಧ್ಯವಿಲ್ಲ

ಕ್ರಿ.ಶ. 1083ರ ವೇಮುಲವಾಡದ ಕನ್ನಡ ಶಾಸನದ ಕೊನೆಯಲ್ಲಿ "ಶ್ರೀಮನ್ಮಹಾಮಂಡಳೇಶ್ವರಂ ರಾಜಾದಿತ್ಯರಸರ ಸ್ವಹಸ್ತಲಿಖಿತಂ" ಎಂದಿದೆ.[154.1] ಇನ್ನೂ ಹಿಂದಿನ ಶಾಸನಗಳಲ್ಲಿ ಇಂತಹ ಒಪ್ಪಗಳು ಸಿಗಬಹುದು. ಹನ್ನೆರಡನೇ ಶತಮಾನದ ಕೊನೆಯ ಹೊಯ್ಸಳರ ತಾಮ್ರಪಟವೊಂದರಲ್ಲಿ[155] "ಶ್ರೀಮಲಪರೊಳಗಂಡ" ಎಂಬ ರುಜು ಇದೆ. ಹದಿಮೂರನೇ ಶತಮಾನದಿಂದ ಮುಂದೆ ರುಜುಗಳನ್ನು ಹಾಕುವ ಸಂಪ್ರದಾಯವು ಬೆಳೆಯುತ್ತಾ ಹೋಗುತ್ತದೆ. ಸು. 1230ರ ತಾಮ್ರಪಟಗಳ ಕೊನೆಯಲ್ಲಿ "ಶ್ರೀ ವೀರನಾರಸಿಂಹ ದೇವಸ್ಯ"

---

152 Smith : The Early History of India, p. 356. ಈ ಪುಟದಲ್ಲಿ ಹರ್ಷನ ಸ್ವಹಸ್ತಾಕ್ಷರಗಳ ಚಿತ್ರವನ್ನು ಕೊಟ್ಟಿದೆ. ಅದರ ಪಾಠ ಹೀಗಿದೆ—"ಸ್ವಹಸ್ತೋ ಮಮ ಮಹಾರಾಜಾಧಿರಾಜ ಶ್ರೀಹರ್ಷಸ್ಯ". ಅಗರವಾಲಾ ಅವರ "ಹರ್ಷಚರಿತ್-ಏಕ್ ಸಾಂಸ್ಕೃತಿಕ್ ಅಧ್ಯಯನ್" ಎಂಬ ಗ್ರಂಥದ 4ನೆಯ ಫಲಕದಲ್ಲೂ ಅದರ ಚಿತ್ರವನ್ನು ಕಾಣಬಹುದು.

153 ಎನ್. ಲಕ್ಷ್ಮೀನಾರಾಯಣರಾವ್ : 'ಮಾಲ್‌ಖೇಡಿನ ರಾಷ್ಟ್ರಕೂಟರು ಎಲ್ಲಿಯವರು?' (ಪ್ರಬುದ್ಧ ಕರ್ಣಾಟಕ, 20.3, ಪು. 82–4).

154 ಕನ್ನಡ 'ಒಪ್ಪ' = ಸ್ವಹಸ್ತಾಂಕಿತ, ರುಜು. ಪತ್ರದಲ್ಲಿ ಉಕ್ತವಾಗಿರುವ ವಿಷಯಕ್ಕೆ ತನ್ನ ಒಪ್ಪಿಗೆಯಿದೆ ಎಂದು ಸೂಚಿಸಲು ಹಾಕಿರುವ ಸ್ವಹಸ್ತಾಂಕಿತವೇ 'ಒಪ್ಪು' ಅಥವಾ ಒಪ್ಪ. ತಮಿಳು : ಒಪ್ಪಂ, ಕೈಯೊಪ್ಪು; ಮಲೆಯಾಳ : ಒಪ್ಪು, ಕೈಯೊಪ್ಪು; ತೊದ : ಕೊಯುಪಮ್; ತುಳು : ಕಜ್ಯೊಪ್ಪಿಗೆ-- ಈ ಮಾತುಗಳಿಗೆ 'ರುಜು' ಎಂದೇ ಅರ್ಥ. 'ಒಪ್ಪು' ಎಂಬ ಧಾತುವಿಗೆ ಹೆಚ್ಚು ಕಡಮೆ ಎಲ್ಲ ದ್ರಾವಿಡ ಭಾಷೆಗಳಲ್ಲಿಯೂ ಸಮ್ಮತಿಸು ಎಂಬ ಅರ್ಥವಿದೆ. (A Dravidian Etymological Dictionary, p. 68).

154.1 Kannada Inscriptions of Andhra Pradesh, KN. 7

155 EC. V. Cn. 179, 1190 A.D.

ಎಂದಿದೆ.[156] ಕ್ರಿ.ಶ. 1254ರ ತಾಮ್ರಪಟದ ಕೊನೆಯಲ್ಲಿ "ಶ್ರೀ ಮಲಪರೊಳ್ಗಂಡ ಶ್ರೀ ವೀರಸೋಮೇಶ್ವರ ದೇವಸ್ಯ" ಎಂದಿದೆ. ಕ್ರಿ.ಶ. 1297ರ ಶಾಸನದ ಕೊನೆಯಲ್ಲಿ "ಯಿಂತಪ್ಪುದಕ್ಕೆ ಆ ಮಹಾಜನಂಗಳ ಸ್ವಹಸ್ತ ದೊಪ್ಪ"[157] ಎಂದಿದೆ. (ಇಂತಹ ಕಡೆಗಳಲ್ಲಿ ಒಪ್ಪವನ್ನು ಮಾತಿನಲ್ಲಿ ಮಾತ್ರ ಸೂಚಿಸಿರುತ್ತದೆ, ಒಪ್ಪಗಳನ್ನು ಕೊರೆದಿರುವುದಿಲ್ಲ). 14ನೆಯ ಶತಮಾನದ ಕೊನೆಯ ಶಾಸನವೊಂದರ ತುದಿಯಲ್ಲಿ "ಶ್ರೀ ಗುಂಡಮಂತ್ರಿವರ" ಎಂದಿದೆ.[158] ಇದು ಆ ಮಂತ್ರಿಯ ಒಪ್ಪ. ಕೆಳಗಿನ ಅಧಿಕಾರಿಗಳಿಗೆ ರಾಜನ ಸ್ವಹಸ್ತಾಂಕಿತವುಳ್ಳ ಆಜ್ಞಾಪತ್ರ ವೊಂದು ಬಂದು ಆ ಆಜ್ಞಾಪತ್ರವನ್ನು ಕಲ್ಲಿನ ಮೇಲೆ ಕೊರೆಯಿಸಿದಾಗ ರಾಜನ ಒಪ್ಪವನ್ನು ಕೊನೆಯಲ್ಲಿ ಸೂಚಿಸುತ್ತಿದ್ದರು. 15ನೆಯ ಶತಮಾನದ ಉಡಿಪಿ ತಾಲೂಕಿನ ಶಾಸನವೊಂದರಲ್ಲಿ ಬೇರೆ ಬೇರೆ ಪ್ರದೇಶಗಳನ್ನು ಆಳುತ್ತಿದ್ದ ಇಬ್ಬರು ಅಧಿಕಾರಿಗಳ ಮಧ್ಯೆ ಆದ ಒಪ್ಪಂದ ಈ ರೀತಿ ಇದೆ—"ನಂಮ ಇಬ್ಬರೊಳಗೆ ಮನಸ್ತಾಪ ಗಳು ಬಂದರೆ ಬುದ್ಧಿಯಿಂದಲೇ ಪರಿಹರಿಸಿಕೊಳ್ಳಬೇಕಲ್ಲದೆ ತುಡುಕಿ ಕಾದ ಸಲ್ಲದು.......ಯಿ ಕಟ್ಟಿಗೆ ಪಾಂಡ್ಯ ದೇವರಸರ ವೊಪ್ಪು."[159] ವಿಜಯನಗರದ ಅರಸರ ಶಾಸನಗಳ ಕೊನೆಯಲ್ಲಿಯೂ "ಶ್ರೀ ವಿರೂಪಾಕ್ಷ" ಎಂಬ ಅವರ ಒಪ್ಪಗಳನ್ನು ಕಾಣಬಹುದು.

ಹದಿಮೂರನೆಯ ಶತಮಾನದ ಆದಿಭಾಗದಲ್ಲಿದ್ದ ಹರಿಹರನ ನಂಬಿಯಣ್ಣನ ರಗಳೆಯಲ್ಲಿ 'ಒಪ್ಪ'ದ ಉಲ್ಲೇಖವಿದೆ. ವೃದ್ಧಮಾಹೇಶ್ವರನ ವೇಷವನ್ನು ಧರಿಸಿ ಶಿವನು ತನ್ನ ಭಕ್ತ ನಂಬಿಯಣ್ಣನ ವಿವಾಹವನ್ನು ತಪ್ಪಿಸುವುದಕ್ಕಾಗಿ ಕಪಟ ಪ್ರಮಾಣಪತ್ರವನ್ನು ಸೃಷ್ಟಿಸಿ ಅದರ ಪ್ರಕಾರ ನಂಬಿಯಣ್ಣ ತನಗೆ ತೊತ್ತಾಗ ಬೇಕೆಂದು ಹಠಹಿಡಿಯುತ್ತಾನೆ. ಆ ಪತ್ರದಲ್ಲಿ ವಿಷಯಾನುಕ್ರಮಣಿಕೆ ಹೀಗಿತ್ತೆಂದು ಕವಿ ಹೇಳುತ್ತಾನೆ— "ಮೊದಲ ಈಶ್ವರ ಸಂವತ್ಸರದ ಮಾಘ ಬಹುಳ ಚತುರ್ದಶಿಯ ಸೋಮವಾರದಂದು ಭಕ್ತಪುರದ ಶ್ಮಶಾನ ಶಯನ ಭಟ್ಟರಿಗೆ ಶಿವಬ್ರಾಹ್ಮಣರಪ್ಪ ಜಡೆಯನಾಯನಾರುಂ ಯಸ್ಯಜ್ಞಾನದೇವಿಯರುಂ ತಾವಿವರ್ಗೆ ವಂಶಾವಳಿಯಾಗಿ ಬಂದ ಬಳಿದೊತ್ತಿನ ಮಕ್ಕಳಾದ ಕಾರಣದಿಂ ತಮ್ಮ ಪುತ್ರ ನಂಬಿಯಂ ಬಳಿದೊತ್ತಾಗಿ ಕೊಟ್ಟರು ಇಂತಪ್ಪುದಕ್ಕೆ ಸಾಕ್ಷಿಗಳು ತಿರುವೆಣ್ಣೆನಲ್ಲೂರ ರುದ್ರಭಟ್ಟರು ಮಾಹೇಶ್ವರಭಟ್ಟರು ರುದ್ರಸಭಾಪತಿಗಳು ಈಶಾನಭಟ್ಟರು ಸಹಸ್ರವೇದಿಗಳು ಮೊದಲಾದ ಮಹಾ ಸಭ್ಯರ ಸಾಕ್ಷಿ ಆವೂರ ಗಣಕ ತಿರುಚಿಟ್ಟಂಬಲಮಳಘೆ ಯರ ಲಿಖಿತ"[160]—(ಈ ಪತ್ರದ ಬರಹದ ರೀತಿ 13ನೆಯ ಶತಮಾನದ ಅನೇಕ ದಾನ ಶಾಸನಗಳ ಬರಹದ ರೀತಿ ಯನ್ನು ಹೋಲುತ್ತದೆ). ನಂಬಿಯಣ್ಣನು ಈ ಪತ್ರದ ನಿಜಾಂಶವನ್ನು ಪರೀಕ್ಷಿಸಲು ತಿರುವೆಣ್ಣೆನಲ್ಲೂರ ಮಹಾ ಜನರ ಮುಂದೆ 'ಗಣಕ' [161] ನೊಬ್ಬನ ಕೈಲಿ ಓದಿಸುತ್ತಾನೆ. ಗಣಕ ಓದುತ್ತಾನೆ. ಆ ಪತ್ರದಲ್ಲಿ ಅಲ್ಲಿಯೇ ಬದುಕಿದ್ದ ಅನೇಕ ಮಹಾಜನರ ಹೆಸರುಗಳು, ಅವರ ಒಪ್ಪಗಳು[162] ಇದ್ದುವು. ಅದರಲ್ಲಿ ಅವರ 'ಒಪ್ಪ'ಗಳು

---

156 EC. V. Hn. 84, C. 1230 A.D.

157 EC. V. Ak. 120, 1297 A.D.

158 EC. V. Bl. 3, C. 1397 A.D.

159 SII. VII. 273, 1499 A.D.

160 ನಂಬಿಯಣ್ಣನ ರಗಳೆ (ಸಂ. ತೀ. ನಂ. ಶ್ರೀಕಂಠಯ್ಯ), ಸ್ಥಲ, 6.

161 ಈ ಗಣಕನೇ ಬಹುಶಃ ಶಾಸನಗಳಲ್ಲಿ ಬರುವ ಕುಲಕರಣಿ ಅಥವಾ ಸೇನಬೋವ. ಸೇನಬೋವನೇ ಈಗಿನ 'ಶಾನುಭೋಗ'

162 ಅಲ್ಲಿಯ ಮಹಾವೃದ್ಧರೆಲ್ಲರಂ ಪೆಸರ್ಗೊಂಡು ।
ಅಲ್ಲಿಯೆ ಬರ್ದುಂಕಿರ್ದ ಕೆಲರಂ ಪೆಸರ್ಗೊಂಡು ।
ಓದುತಿರೆ ತೋಱಿಂದು ಒಪ್ಪವಂ ನೋಡುತಿರೆ ।
ಓದಲಾರದೆ ತಮ್ಮ ಪಿರಿಯರಂ ನೆನೆವುತಿರೆ ॥

(ಸ್ಥಲ—7).

ಇವೆ, ಆದ್ದರಿಂದ ಅದು ನಿಜವಾದ ಪ್ರಮಾಣಪತ್ರ ; ಆದರೆ ವಾಸ್ತವವಾಗಿ ಆ ಮಹಾಜನರಲ್ಲಿ ಯಾರೂ ಒಪ್ಪವನ್ನು ಹಾಕಿಲ್ಲ. ಈ ಸಂದಿಗ್ಧಸ್ಥಿತಿಯಲ್ಲಿ ಸಿಕ್ಕಿಕೊಂಡು ಆ ಮಹಾಜನರು ಅಳುತ್ತಾರೆ ; ವೇಷಧಾರಿ ಭಗವಂತ ಇದೆಲ್ಲವನ್ನೂ ನೋಡಿ ಮನಸ್ಸಿನೊಳಗೆ ಆನಂದಿಸುತ್ತಿರುತ್ತಾನೆ.

ಪತ್ರಗಳಲ್ಲಿ ಮತ್ತು ಶಾಸನಗಳಲ್ಲಿ 'ಒಪ್ಪ' ವನ್ನು ಹಾಕುವ ಈ ಸಂಪ್ರದಾಯವು ಬಹುಶಃ ಹತ್ತನೇ ಶತಮಾನದ ಅಂತ್ಯ ಅಥವಾ ಹನ್ನೊಂದನೇ ಶತಮಾನದ ಆದಿಯಲ್ಲಿ ಆರಂಭವಾಯಿತೆಂದು ಊಹಿಸಬಹುದು.

# IV

# ಜೈನಧರ್ಮ

"ದಕ್ಷಿಣ ಭಾರತದ ಜೈನಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ."[1] ಪ್ರಾಚೀನ ಕರ್ನಾಟಕದಲ್ಲಿ ಜೈನಧರ್ಮ ಒಂದು ಪ್ರಬಲವಾದ ಧರ್ಮವಾಗಿತ್ತು. ಆ ಧರ್ಮದ ತಿರುಳನ್ನು ಹೀಗೆ ಸಂಗ್ರಹಿಸಬಹುದು : "ಆತ್ಮವು ತನ್ನ ಸಹಜ ಶುದ್ಧತೆಯನ್ನು ಮರಳಿ ಪಡೆದುಕೊಂಡು ಕೇವಲಜ್ಞಾನವನ್ನು ಪಡೆಯುವುದೇ ಜೀವನದ ಗುರಿ. ಅದೊಂದು ಅಲೌಕಿಕ ಸ್ಥಿತಿ. ಆತ್ಮವು ಆಗ ಎಲ್ಲ ಪೂರ್ಣತೆಗಳನ್ನೂ ಹೊಂದಿರುತ್ತದೆ. ಅನಂತಜ್ಞಾನ ಮಾತ್ರವಲ್ಲ, ಅನಂತಶಾಂತಿ, ಅನಂತಶಕ್ತಿಗಳನ್ನೂ ಹೊಂದಿರುತ್ತದೆ. ಉಪನಿಷತ್ತಿನ ಬೋಧನೆಯ ಹಾಗೆಯೇ ಇಲ್ಲಿಯೂ ಮೋಕ್ಷವೆಂದರೆ ಪುಣ್ಯ ಪಾಪಗಳೆರಡನ್ನೂ ಮೀರಿ ನಿಲ್ಲುವುದು. ಈ ಸ್ಥಿತಿಯನ್ನು ಪಡೆಯಲು ತ್ರಿಮುಖವಾದ ಸಾಧನೆ ಆವಶ್ಯಕ. ಜೈನತತ್ವದಲ್ಲಿ ನಂಬಿಕೆ (ಸಮ್ಯಗ್‌ದರ್ಶನ)[2] ; ಇದಕ್ಕೆ ಸಮ್ಯಗ್‌ಜ್ಞಾನ[3], ಸಮ್ಯಗ್ ಚಾರಿತ್ರಗಳು[4] ಪೋಷಕಗಳಾಗಿ ಬಂದಾಗ ಮೋಕ್ಷ ಅಥವಾ ನಿರ್ವಾಣವು ಲಭಿಸುತ್ತದೆ. ಈ ಮೂರನ್ನು 'ತ್ರಿರತ್ನ'ಗಳೆಂದು ಕರೆಯುತ್ತಾರೆ. ಭರತಖಂಡದ ಇತರ ತತ್ವಗಳಲ್ಲಿರುವಂತೆಯೇ ಇಲ್ಲಿಯೂ 'ಯೋಗ'ಕ್ಕೆ ಪ್ರಮುಖಸ್ಥಾನವುಂಟು. ಈ ಸಾಧನೆಯಿಂದ ಮೋಕ್ಷವು ಹೇಗೆ ಲಭಿಸುತ್ತದೆ ಎಂಬುದನ್ನು ತಿಳಿಯಬೇಕಾದರೆ, ಜೀವ ಮತ್ತು ಅಜೀವಗಳಿಗೆ ಸಂಬಂಧ ಕಲ್ಪನೆ ಮಾಡುವುದೇ ಕರ್ಮ ಎಂಬುದನ್ನು ಜ್ಞಾಪಿಸಿಕೊಳ್ಳಬೇಕು. (ಕರ್ಮವು ಅತ್ಯಂತ ಸೂಕ್ಷ್ಮವಾದ ಜಡವಸ್ತು). ಆತ್ಮವು ತನ್ನ ಲೌಕಿಕ ಸ್ಥಿತಿಯಲ್ಲಿ ಇಂತಹ ಜಡವಸ್ತುವಿನಿಂದ ವ್ಯಾಪ್ತವಾಗಿರುತ್ತದೆ. ಅಜೀವದ ಪ್ರಭೇದವಾದ ಈ ಕರ್ಮದಿಂದ ಬಿಡುಗಡೆಯನ್ನು ಹೊಂದುವುದೇ ಅದರ ಪ್ರಧಾನ ಗುರಿ. ಕರ್ಮದ ಬಂಧ ಮತ್ತು ಅದರಿಂದ ಬಿಡುಗಡೆ—ಇವುಗಳನ್ನು ಹೀಗೆ ಚಿತ್ರಿಸಿದ್ದಾರೆ. ಮೊದಲನೆಯದಾಗಿ ಕರ್ಮವು ಒಳಕ್ಕೆ ಹರಿದು ಬರುತ್ತದೆ (ಆಸ್ರವ). ಇದರ ಪರಿಣಾಮವಾಗಿ ಬಂಧನ ಒದಗುತ್ತದೆ (ಬಂಧ). ಈ ಕರ್ಮದ ಪರಿಣಾಮಗಳಾದ ಸುಖ ದುಃಖಗಳ ಅನುಭವದಿಂದ ಕರ್ಮವೇನೋ ಸತತವಾಗಿ ಸವೆಯುತ್ತಾ ಹೋಗುತ್ತದೆ, ನಿಜ. ಆದರೆ ಸಾಮಾನ್ಯ ಮನುಷ್ಯರ ಮಟ್ಟಿಗೆ ಹೇಳುವುದಾದರೆ ಪುಣ್ಯ ಪಾಪ ರೂಪಗಳಾದ ಹೊಸ ಕರ್ಮವು ಆತ್ಮದೊಳಕ್ಕೆ ಅದರ ಇಚ್ಛಾಪೂರ್ಣ ಕ್ರಿಯೆಗಳ ಫಲವಾಗಿ ಹರಿದುಬರುತ್ತಲೇ ಇರುತ್ತದೆ; ಹೀಗಾಗಿ ಅದರಿಂದ ಬಿಡುಗಡೆಯೆಂಬುದೇ ಇಲ್ಲ. ಸಾವಿನ ನಂತರ ಈ ಕಾರ್ಮಣ ಶರೀರವು ಆತ್ಮವನ್ನು ಅದರ

---

[1] B.A. Saletore : Mediaeval Jainism, P.2. ಹದಿನೈದನೇ ಶತಮಾನದ ಒಂದು ಶಾಸನವು ಕರ್ನಾಟಕವನ್ನು ವರ್ಣಿಸುತ್ತ ಅದು ಜೈನಧರ್ಮದ ವಾಸದ ಮನೆಯಾಗಿತ್ತು ಎಂದು ವಿವರಿಸುತ್ತದೆ—"ಜಿನಧರ್ಮಾವಾಸಮಾದತ್ತಮಳ ವಿನಯದಾಗಾರಮಾದತ್ತು ಪದ್ಮಾ । ಸನನಿರ್ಪಾ ಸದ್ಮಮಾದತ್ತತಿ ವಿಶದ ಯಶೋಧಾಮಮಾದತ್ತು ವಿದ್ಯಾ । ಧನ ಜನ್ಮಸ್ಥಾನಮಾದತ್ತಸಮ ತರಳ ಗಂಭೀರ ಸದ್ಗೇಹಮಾದ । ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸೆಗುಂ ಚಾರು ಕರ್ಣಾಟದೇಶಂ ॥"

(ಶಾಸನಪದ್ಯಮಂಜರಿ, 250)

[2] "ತತ್ವಾರ್ಥ ಶ್ರದ್ಧಾನಂ ಸಮ್ಯಗ್‌ದರ್ಶನಂ"

(ಆದಿಪುರಾಣ, 10.63,ವ.)

[3] "ಸಂಶಯ ವಿಪರ್ಯಯ ಸಾವದ್ಯಾನವದ್ಯವಸಾಯ ಸ್ವಭಾವರಹಿತಮಾಗಿ ಜೀವಾದಿಪದಾರ್ಥ ಯಾಥಾತ್ಮ್ಯಾವಗಂ ಸಮ್ಯಗ್‌ಜ್ಞಾನಂ." (ಅದೇ)

[4] "ಸಂಸಾರ ಪರಿತ್ಯಾಗೋದ್ಯುಕ್ತ ಸಮ್ಯಗ್‌ಜ್ಞಾನೋಪೇತ ಭವ್ಯಜೀವನ ಬಾಹ್ಯಾಭ್ಯಂತರ ಕ್ರಿಯಾನಿವೃತ್ತಿ ಸಮ್ಯಗ್ ಚಾರಿತ್ರಂ." (ಅದೇ)

ಇನ್ನೊಂದು ಹುಟ್ಟಿನಲ್ಲಿಯೂ ಹಿಂಬಾಲಿಸುತ್ತದೆ. ಹೀಗೆಯೇ ಮೊದಲಿಲ್ಲದ, ಕೊನೆಯಿಲ್ಲದ ಜನ್ಮಾಂತರಗಳ ಚಕ್ರವು ಆರಂಭವಾಗುತ್ತದೆ. ಹೊಸದಾಗಿ ಹರಿದುಬರುವ ಕರ್ಮವನ್ನು ತಡೆಯಲು ಸಾಧ್ಯವೆಂಬುದೇ ಮನುಷ್ಯನಿಗಿರುವ ಏಕೈಕ ಆಶಾಕಿರಣ. ಇದನ್ನು ಸಾಧಿಸಲೋಸುಗವೇ ರತ್ನತ್ರಯಗಳ ಸಾಧನೆಯನ್ನು ವಿಧಿಸಿರುವುದು. ಬಂಧವು ರೂಪುಗೊಳ್ಳುವಾಗಿನಂತೆಯೇ, ಅದರಿಂದ ಬಿಡುಗಡೆ ಹೊಂದುವಾಗಲೂ ಎರಡು ಮೆಟ್ಟಿಲುಗಳುಂಟು. ಮೊದಲನೆಯದಾಗಿ, ಹೊಸದಾಗಿ ಕರ್ಮವು ಹರಿದು ಬರದಂತೆ ತಡೆಗಟ್ಟುವುದು (ಸಂವರ) ; ಮತ್ತೊಂದು ಹಿಂದೆ ಆಗಲೇ ಸಂಚಿತವಾಗಿರುವ ಕರ್ಮವನ್ನು ನಾಶಪಡಿಸುವುದು. ಇದನ್ನು ಕರ್ಮದ ಬಿದ್ದುಹೋಗುವಿಕೆ (ನಿರ್ಜರ) ಎಂದು ವರ್ಣಿಸಿದ್ದಾರೆ. ಹೀಗೆ ಬಂಧಿಸಿದ್ದ ಕರ್ಮವು ಸಂಪೂರ್ಣವಾಗಿ ನಾಶಹೊಂದಿದಾಗ ತನ್ನಷ್ಟಕ್ಕೆ ತಾನೇ ಮೋಕ್ಷಲಾಭವಾಗುತ್ತದೆ.[5]

"ಈ ಮೋಕ್ಷವೆಂಬುದು ಒಂದು ಪರಿಪೂರ್ಣಸ್ಥಿತಿ ಎಂದರೆ, ಜೈನಧರ್ಮವು ಒಬ್ಬ ಪರಮಾತ್ಮನ ಅಸ್ತಿತ್ವವನ್ನು ಒಪ್ಪದಿದ್ದರೂ, ಪರಿಪೂರ್ಣತೆಯ ರೂಪದಲ್ಲಿ ದಿವ್ಯತ್ವದ ಭಾವನೆಯನ್ನು ಉಳಿಸಿಕೊಂಡಿದೆ. ಈ ಐದು–ಕರ್ಮದ ಪ್ರವಾಹ (ಆಸ್ರವ), ಅದರಿಂದ ಬಂಧನ (ಬಂಧ), ಅದನ್ನು ತಡೆಯುವುದು (ಸಂವರ), ಅದು ಬಿದ್ದುಹೋಗುವುದು (ನಿರ್ಜರ) ಮತ್ತು ಬಿಡುಗಡೆ (ಮೋಕ್ಷ)—ಇವುಗಳ ಜೊತೆಯಲ್ಲಿ ಜೀವ ಮತ್ತು ಅಜೀವಗಳನ್ನು ಸೇರಿಸಿ ಸಪ್ತತತ್ವಗಳೆಂದು ಜೈನಧರ್ಮದಲ್ಲಿ ಕರೆಯಲಾಗಿದೆ."[6]

ಕರ್ಮವು ಸವೆಯುತ್ತ ಬಂದಹಾಗೆಲ್ಲಾ ಆತ್ಮವು ಮೋಕ್ಷವನ್ನು ಸಮೀಪಿಸುತ್ತದೆ ಎಂಬುದನ್ನು ಒಂದು ಸುಂದರ ಉಪಮೆಯ ಮೂಲಕ ಜೈನಧರ್ಮವು ವಿವರಿಸುತ್ತದೆ. ನೀರಮೇಲೆ ತೇಲುವ ವಸ್ತುವನ್ನು ಕೆಸರಿನಿಂದ ಲೇಪಿಸಿದರೆ ಅದು ನೀರಿನಲ್ಲಿ ಮುಳುಗಿ ಹೋಗುತ್ತದೆ. ಕೆಸರಿನ ಲೇಪನವು ಕರಗಿದಂತೆ ವಸ್ತುವು ಮೇಲೆ ಮೇಲೆ ಬಂದು, ಪೂರ್ತಿ ಕರಗಿದ ಮೇಲೆ ಅದು ತೇಲಲಾರಂಭವಾಗುತ್ತದೆ.[7] ಮೋಕ್ಷವನ್ನು ಅಜರ, ಅಮರ, ಅಕ್ಷಯ, ಅನುಪಮಸೌಖ್ಯ, ಶಿವ, ಅಚಲ, ಅನಂತ, ಅವ್ಯಾಬಾಧ, ಅಪುನರಾವರ್ತಿಕ ಎಂದೂ ವರ್ಣಿಸಲಾಗಿದೆ.[8] ಈ ಮೋಕ್ಷವನ್ನು ಪಡೆಯುವುದಕ್ಕಾಗಿಯೇ, 'ಅಂತಗಡದಸಾಒ' ಎಂಬ ಗ್ರಂಥವು ಹೇಳುವಂತೆ-"ವಸ್ತ್ರವನ್ನು ತ್ಯಾಗ ಮಾಡುವುದು, ದೇಹವನ್ನು ದಂಡಿಸುವುದು, ಬ್ರಹ್ಮಚಾರಿಯಾಗಿರುವುದು ; ಇದಕ್ಕಾಗಿಯೇ ಸ್ನಾನಮಾಡದಿರುವುದು, ಕೊಡೆ ಪಾದರಕ್ಷೆಗಳನ್ನು ವಿಸರ್ಜಿಸಿರುವುದು ; ನೆಲದ ಮೇಲೆ ಅಥವಾ ಹಲಗೆಯ ಮೇಲೆ ಮಲಗುವುದು ; ಹೊಗಳಿಕೆ ತೆಗಳಿಕೆಗಳನ್ನು, ನಿಂದೆಯನ್ನು, ಹೊಡೆತಗಳನ್ನು, ಇಪ್ಪತ್ತೆರಡು ಪರೀಷಹಗಳನ್ನು ಲೆಕ್ಕಿಸದೆ ಮನೆಮನೆಗೆ ಹೋಗಿ ಭಿಕ್ಷೆ ಬೇಡುವುದು."[9]

ಜೈನಧರ್ಮವು ಬೌದ್ಧಧರ್ಮದ ಒಂದು ಪ್ರಭೇದವೆಂದೂ, ಅದಕ್ಕೆ ಸ್ವತಂತ್ರ ಅಭ್ಯಾಸದ ಅಗತ್ಯವಿಲ್ಲವೆಂದೂ ಹೋದ ಶತಮಾನದ ಆರಂಭದಲ್ಲಿ ಕೆಲವರು ಭಾವಿಸಿದ್ದರು.[10] ಅನಂತರ ನಡೆದ ಸಂಶೋಧನೆಗಳಿಂದ ಅದೇ

---

[5] ಉಮಾಸ್ವಾಮಿಯ ತತ್ವಾರ್ಥಸೂತ್ರದಲ್ಲಿ "ಬಂಧ ಹೇತ್ವಭಾವ ನಿರ್ಜರಾಭ್ಯಾಂ ಕೃತ್ಸ್ನಕರ್ಮ ವಿಪ್ರಮೋಕ್ಷೋ ಮೋಕ್ಷಃ" ಎಂದಿದೆ. (10.2). ಇದಕ್ಕೆ ಬಾಲಚಂದ್ರದೇವನ ಕನ್ನಡ ವ್ಯಾಖ್ಯಾನ ಹೀಗಿದೆ—"ಬಂಧಹೇತ್ವಭಾವ ಮಿಥ್ಯಾತ್ವಾವಿರತ್ಯಾದಿ ಬಂಧಕಾರಣಂಗಳಿಲ್ಲಮೆಯಲು, ನಿರ್ಜರಾಭ್ಯಾಂ-ಸಕಲನಿರ್ಜರೆಯುಮೆಂಬೆರಡುಂ ಕಾರಣಮಾಗಿ, ಕೃತ್ಸ್ನಕರ್ಮ-ಮೂಲೋತ್ತರ ಪ್ರಕೃತಿ ಸ್ಥಿತ್ಯನುಭಾಗ ಪ್ರದೇಶ ಭೇದ ಭಿನ್ನ ಬಂಧೋದಯೋದೀರಣ ಸತ್ತ್ವಾಭಿಧಾನ ನಿಖಿಲ ಕರ್ಮಂಗಳ, ವಿಪ್ರಮೋಕ್ಷಃ—ನಿರವಶೇಷಮುಪ್ಪಗಲ್ಕೆ, ಮೋಕ್ಷಃ-ನಿಜಪರಮಾತ್ಮೋಪಲಕ್ಷಣ ಮೋಕ್ಷಮಕ್ಕುಂ"

[ತತ್ವರತ್ನಪ್ರದೀಪಿಕೆ, ಪು. 360.]

[6] M. Hiriyanna : Essentials of Indian philosophy, pp. 69–70.

[7] Deo : History of Jaina Monachism, p. 4.

[8] ಅದೇ

[9] ಅದೇ, ಪು. 5.

[10] Shah : Jainism in North India, Introduction, p. xx.

ಒಂದು ಪ್ರತ್ಯೇಕವಾದ ಧರ್ಮವೆಂದೂ, ಬೌದ್ಧ ಧರ್ಮಕ್ಕಿಂತ ಸ್ವಲ್ಪ ಪ್ರಾಚೀನವೆಂದೂ ಸ್ಥಿರಪಟ್ಟಿದೆ. ಜೈನರು ಹಿಂದೆ ಹೇಳಿದ ಮೋಕ್ಷವನ್ನು ಪಡೆದು ಸಿದ್ಧರಾದ ಇಪ್ಪತ್ತನಾಲ್ಕು ತೀರ್ಥಂಕರರನ್ನು ಪೂಜಿಸಿದರೂ, ಅವರೆಲ್ಲರೂ ಐತಿಹಾಸಿಕ ಪುರುಷರಲ್ಲವೆಂದು ವಿದ್ವಾಂಸರಲ್ಲಿ ಒಮ್ಮತವಿದೆ.[11] ಕೊನೆಯ ತೀರ್ಥಂಕರನಾದ ಮಹಾವೀರನು ಬುದ್ಧನ ಸಮಕಾಲೀನ. ಅವನಿಗಿಂತ ಹಿಂದೆ ಎಂದರೆ, ಕ್ರಿ. ಪೂ. ಎಂಟನೆ ಶತಮಾನದಲ್ಲಿ ಇಪ್ಪತ್ತಮೂರನೇ ತೀರ್ಥಂಕರನಾದ ಪಾರ್ಶ್ವನಾಥನು ಬಾಳಿ ಬದುಕಿದನು. ಜೈನಧರ್ಮದ ಇತಿಹಾಸದಲ್ಲಿ ಹೆಚ್ಚು ಎಂದರೆ ಪಾರ್ಶ್ವನಾಥನವರೆಗೆ ಹೋಗಬಹುದು, ಅವನಿಂದಾಚೆಗೆ ಪೌರಾಣಿಕ ಕಟ್ಟುಕಥೆಗಳ ಮಂಜು ಮುಸುಕಿದೆ ಎಂದು ಯಾಕೊಬಿಯವರು ಹೇಳುತ್ತಾರೆ.[12]

## ಶ್ವೇತಾಂಬರ ಮತ್ತು ದಿಗಂಬರ

ಪಾರ್ಶ್ವನಾಥ ಮಹಾವೀರರು ಪ್ರಚಾರಮಾಡಿದ ಜೈನಧರ್ಮವು ಅವಿಭಕ್ತವಾಗಿತ್ತು. ಅದು ಪಂಗಡಗಳಾಗಿ, ಅದರಲ್ಲೂ ಮುಖ್ಯವಾಗಿ ಶ್ವೇತಾಂಬರ ದಿಗಂಬರವೆಂದು ಎರಡು ಪಂಗಡಗಳಾಗಿ ಒಡೆದದ್ದು ಮಹಾವೀರನಿಂದ ಈಚೆಗೆ—ದಿಗಂಬರ ಸಂಪ್ರದಾಯದವರು ಹೇಳುವಂತೆ ಭದ್ರಬಾಹುವಿನ ಕಾಲದಲ್ಲಿ. ಈ ವಿಷಯದಲ್ಲಿ ವಿವರಗಳಿಗೆ ಹೋಗುವ ಮುನ್ನ ವಡ್ಡಾರಾಧನೆ (ಸು. 920) ಎಂಬ ಕನ್ನಡ ಗದ್ಯ ಗ್ರಂಥದಲ್ಲಿ ಬರುವ ಕಥೆಯನ್ನು ಹೀಗೆ ಸಂಗ್ರಹಿಸಬಹುದು—''ದ್ವಾದಶಾಂಗ ಚತುರ್ದಶ ಪೂರ್ವಧಾರಿಗಳಾದ ಭದ್ರಬಾಹುಭಟಾರರು ಋಷಿ ಸಮುದಾಯದೊಡನೆ ಉಜ್ಜಯಿನಿಗೆ ಬಂದು, ಅಲ್ಲಿ ಭಿಕ್ಷೆಗಾಗಿ ಒಂದು ಮನೆಯನ್ನು ಹೊಕ್ಕಾಗ ಅಲ್ಲಿ ತೊಟ್ಟಿಲಲ್ಲಿದ್ದ ಒಂದು ಕಿರುಗೂಸು 'ಬೋಳಹ ಬೋಳಹ ಭಟಾರಾ' ಎನ್ನುತ್ತದೆ. (ಬೋಳಹ=ಹೋಗು). ಅವಧಿಯನ್ನು ಕೇಳಿದಾಗ 'ಹನ್ನೆರಡು ವರ್ಷ' ಎಂದು ಹೇಳುತ್ತದೆ. ಆ ನಾಡಲ್ಲಿ ಇನ್ನು ಹನ್ನೆರಡು ವರ್ಷಗಳು ಅನಾವೃಷ್ಟಿಯಿಂದ ಕ್ಷಾಮ ಬರುತ್ತದೆ ಎಂದರಿತು ತಮ್ಮ ಜೊತೆಯ ಋಷಿಗಳಿಗೆ ದಕ್ಷಿಣಾಪಥಕ್ಕೆ ಹೋಗಬೇಕೆಂಬುದಾಗಿ ತಿಳಿಸುತ್ತಾರೆ. ಆ ನಾಡಿನ ರಾಜನಾದ ಸಂಪ್ರತಿ ಚಂದ್ರಗುಪ್ತನಿಗೂ ಹಿಂದಿನ ರಾತ್ರಿ ಉತ್ಪಾತ ಸೂಚಕಗಳಾದ ಹದಿನಾರು ಕೆಟ್ಟ

---

[11] ಮಜುಂದಾರರಂತಹ ಒಬ್ಬಿಬ್ಬರು ಅವರೆಲ್ಲರೂ ಐತಿಹಾಸಿಕ ವ್ಯಕ್ತಿಗಳೆಂದು ಭಾವಿಸಿ, ಆದಿವೃಷಭನು ಕ್ರಿ. ಪೂ. 29ನೇ ಶತಮಾನದಲ್ಲಿದ್ದಿರಬೇಕು ಎಂದು ಹೇಳಿದ್ದೂ ಉಂಟು.

(Shah : Jainism in North India, p. 12).

[12] Shah : Jainism in North India, p. 12.

ಯಾಕೊಬಿಯವರ ಈ ಮಾತುಗಳನ್ನೂ ನೋಡಬಹುದು : "We cannot, therefore, without doing violence to tradition, declare Mahāvīra to have been the founder of Jainism. But he is without doubt the last prophet of the Jainas, the last Tīrthakara. His predecessor, Pārśva, the last Tīrthakara but one, seems to have better claims to the title of founder of Jainism. His death is placed at the reasonable interval of 250 years before that of Mahāvīra, while Pārśva's predecessor Ariṣṭanēmi is stated to have died 84,000 years before Mahāvīra's nirvāṇa. Followers of Pārśva are mentioned in the canonical books ; and a legend in the Uttarādhyayana Sūtra xxiii, relates a meeting of a disciple of Pārśva and a disciple of Mahāvīra which brought about the union of the old branch of the Jaina Church and the new one. This seems to indicate that Pārśva was a historical person ; but in the absence of historical documents we cannot venture to go beyond a suggestion."

(Encyclopaedia of Religion and Ethics, VII, pp. 465-66.)

ಕನಸುಗಳು ಬಿದ್ದಿರುತ್ತವೆ. ಅವನು ಜಿನದೀಕ್ಷೆಯನ್ನು ಸ್ವೀಕರಿಸಿ ಭದ್ರಬಾಹುವಿನ ಜೊತೆಯಲ್ಲಿ ಹೊರಡುತ್ತಾನೆ. ಒಂದು ಋಷಿಸಮುದಾಯವು ಭದ್ರಬಾಹುವಿನ ಜೊತೆಯಲ್ಲಿ ದಕ್ಷಿಣಕ್ಕೂ, ಮತ್ತೊಂದು ರಾಮಿಲಾಚಾರ್ಯ, ಸ್ಥೂಲಾಚಾರ್ಯ ಮತ್ತು ಸ್ಥೂಲಭದ್ರಾಚಾರ್ಯರ ನೇತೃತ್ವದಲ್ಲಿ ಸಿಂಧುದೇಶಕ್ಕೂ ಹೊರಡುತ್ತದೆ. ದಕ್ಷಿಣಕ್ಕೆ ಬಂದ ಋಷಿಸಮುದಾಯವು ಕಟ್ಬಪ್ಪು ನಾಡನ್ನು[13] ಸಮೀಪಿಸಿದಾಗ ಭದ್ರಬಾಹುವಿಗೆ ತಮ್ಮ ಆಯುರವಸಾನ ತಿಳಿದು, ತಾವು ಮಾತ್ರ ಅಲ್ಲಿಯೇ ಉಳಿದು ಸನ್ಯಸನವನ್ನು ಸ್ವೀಕರಿಸಿ, ಉಳಿದವರನ್ನು ದ್ರಾವಿಡ ದೇಶಕ್ಕೆ ಕಳುಹಿಸಿಕೊಡುತ್ತಾರೆ. ಚಂದ್ರಗುಪ್ತನು ಮಾತ್ರ ಎಷ್ಟು ಹೇಳಿದರೂ ಕೇಳದೆ ಅಲ್ಲಿಯೇ ಉಳಿದು ಭದ್ರಬಾಹುವಿನ ಸೇವೆಯನ್ನು ಮಾಡಿಕೊಂಡಿರುತ್ತಾನೆ. ಚಂದ್ರಗುಪ್ತ ಮುನಿಯ ಸೇವೆಗೆ ಮೆಚ್ಚಿ ಅಲ್ಲಿಯ ವನದೇವತೆಗಳು ಭಿಕ್ಷೆಯನ್ನು ನೀಡುತ್ತಿರುತ್ತವೆ. ಭದ್ರಬಾಹು ಮುನಿಗಳು ಸಮಾಧಿಮರಣವನ್ನು ಹೊಂದಿದ ಮೇಲೆ ಚಂದ್ರಗುಪ್ತನು ಅವರ ನಿಸಿದಿಗೆಯನ್ನು ಪೂಜಿಸುತ್ತಿರಬೇಕಾದರೆ ದ್ರಾವಿಡ ದೇಶಕ್ಕೆ ಹೋಗಿದ್ದ ಋಷಿಸಮುದಾಯವು ಹಿಂದಕ್ಕೆ ಬಂದು, ಚಂದ್ರಗುಪ್ತನನ್ನು ಹೊಗಳಿ, ಅವನಿಗೆ ಸನ್ಯಸನವ್ರತವನ್ನು ಕೊಟ್ಟು ತಮ್ಮ ಮಧ್ಯದೇಶವನ್ನು ಸೇರುತ್ತದೆ.

''ಇತ್ತ ಸಿಂಧು ವಿಷಯದಲ್ಲಿ ಅತಿಕ್ಷಾಮದ ಪರಿಣಾಮವಾಗಿ ಹಗಲುಹೊತ್ತು ನರಭಕ್ಷಕರ ಹಿಂಸೆಯಿದ್ದದ್ದರಿಂದ ಜೈನಮುನಿಗಳು ರಾತ್ರಿ ಹೊತ್ತು ಭಿಕ್ಷೆಮಾಡಿ ಹಗಲು ಊಟಮಾಡುತ್ತಿದ್ದರು. ಒಮ್ಮೆ ರಾತ್ರಿ ಗರ್ಭಿಣಿಯೊಬ್ಬಳು ದಿಗಂಬರ ಸನ್ಯಾಸಿಯನ್ನು ಕಂಡು ಬೆದರಿದುದರಿಂದ ಅವಳಿಗೆ ಗರ್ಭಪಾತವಾಗುತ್ತದೆ. ತಮ್ಮ ದಿಗಂಬರತ್ವದಿಂದ ಜನರಿಗೆ ತೊಂದರೆಯಾದೀತೆಂದು ಅರ್ಧವಸ್ತ್ರವನ್ನುಟ್ಟು ಭಿಕ್ಷೆ ಬೇಡಲು ಆರಂಭಿಸುತ್ತಾರೆ. ಕ್ಷಾಮವು ಅಡಗಿ ಒಳ್ಳೆಯ ಕಾಲ ಬಂದಮೇಲೆ ತಮ್ಮ ಮಧ್ಯದೇಶಕ್ಕೆ ಹಿಂದಿರುಗಿದ ಕೆಲವರು ಅರ್ಧವಸ್ತ್ರವನ್ನು ಬಿಸುಟು ತಪ್ಪೊಪ್ಪಿಗೆಯ ವ್ರತಗಳನ್ನು ಆಚರಿಸಿ ಹಿಂದಿನಂತೆಯೇ ದಿಗಂಬರರಾದರು. ಮತ್ತೆ ಸ್ಥೂಲಭದ್ರಾಚಾರ್ಯ ಮುಂತಾದ ಕೆಲವರು ವಸ್ತ್ರಗಳನ್ನು ಕಳೆಯದೆ ಜಿನಕಲ್ಪ ಮತ್ತು ಸ್ಥವಿರಕಲ್ಪ[14] ಎಂಬ ಎರಡು ಭೇದಗಳಿಗೆ ಕಾರಣರಾದರು. ಮುಂದೆ ವಲಭಿ ಎಂಬ ಪಟ್ಟಣವಾಳುತ್ತಿದ್ದ ವಪ್ರಪಾಳ ಮತ್ತು ಮಹಾದೇವಿಯರ ಕಾಲದಲ್ಲಿ, ವಪ್ರಪಾಳನು ಈ ಅರ್ಧಗಪ್ಪಡದ ಸನ್ಯಾಸಿಗಳನ್ನು ಕುರಿತು 'ನೀವು ಇಲ್ಲವೇ ದಿಗಂಬರರಾಗಿ, ಇಲ್ಲವೇ ಸರಿಯಾಗಿ ಬಟ್ಟೆಯನ್ನು ಉಟ್ಟುಕೊಳ್ಳಿ' ಎಂದು ಹೇಳಿದಾಗ ಆ ಉತ್ತರದವರು ಅರ್ಧ ವಸ್ತ್ರವನ್ನು ಬಿಸುಟು ಕಚ್ಚೆ ಹಾಕದೆ ಸರಿಯಾಗಿ ಉಡಲು ಹೊದೆಯಲು ಆರಂಭಿಸಿದರು. ಇವರೇ ಶ್ವೇತಪಟದವರು ಅಥವಾ ಶ್ವೇತಾಂಬರರು. ದಕ್ಷಿಣಾಪಥದಲ್ಲಿ ಸಾಮಳಿಪುತ್ರ ಎಂಬ ರಾಜನ ಸಂತತಿಯ ಒಬ್ಬ ಶ್ವೇತಭಿಕ್ಷುವು ಜಾಪುಲಿ[15] ಸಂಘಕ್ಕೆ ಮೊದಲಿಗನಾದನು".[16]

ಇದು ದಿಗಂಬರರ ವಾದ. ಶ್ವೇತಾಂಬರರ ವಾದವೇ ಬೇರೆ. ಅವರ ಪ್ರಕಾರ ''ಶಿವಭೂತಿ ಎಂಬಾತ ತನ್ನ ಶೌರ್ಯಗಳಿಂದ ರಾಜನ ಮನ್ನಣೆಯನ್ನು ಪಡೆದು ಗರ್ವಿತನಾಗಿ, ರಾತ್ರಿ ಮನೆಗೆ ತಡವಾಗಿ ಹೋಗುತ್ತಿರಲು, ಸೊಸೆಯಿಂದ ವಿಷಯವನ್ನರಿತ ಅವನ ತಾಯಿ ರಾತ್ರಿ ಕದವನ್ನು ತೆಗೆಯುವುದಿಲ್ಲ. ಅದರಿಂದ ಅವನು ಕೋಪಗೊಂಡು

---

[13] ಈಗಿನ ಶ್ರವಣಬೆಳಗೊಳವಿರುವ ಪ್ರದೇಶ. ಶ್ರವಣಬೆಳಗೊಳದ ಚಿಕ್ಕ ಬೆಟ್ಟವನ್ನು 'ಕಟ್ವಪ್ಪು' ಎಂದು ಕನ್ನಡ ಶಾಸನಗಳಲ್ಲಿಯೂ, 'ಕಟವಪ್ರ' ಎಂದು ಸಂಸ್ಕೃತ ಶಾಸನಗಳಲ್ಲಿಯೂ ಕರೆದಿದೆ.

[14] ಪ್ರಾಕೃತದಲ್ಲಿ ಜಿಣಕಪ್ಪ, ಥೇರಕಪ್ಪ. ಕಠಿಣ ಸನ್ಯಾಸಜೀವನವೇ ಜಿಣಕಪ್ಪ; ಇಷ್ಟು ಕಠಿಣವಲ್ಲದ ಸನ್ಯಾಸಜೀವನ ಥೇರಕಪ್ಪ. ಜಿಣಕಪ್ಪಿಗಳು ಜಿನನ ಜೀವನದಂತಹ ಜೀವನವನ್ನು ಬಾಳುವವರು: ಥೇರಕಪ್ಪಿಯರು ಸಾಮೂಹಿಕ ಜೀವನವನ್ನು ಎಂದರೆ ಎಲ್ಲರಂತೆ ಬಾಳುವವರು. ಜಿಣಕಪ್ಪಿಗಳಲ್ಲಿ ಬಹುಜನ ದಿಗಂಬರರು. ಜಿಣಕಪ್ಪಿ ಥೇರಕಪ್ಪಿಯರು ಬಹುಶಃ ದಿಗಂಬರ ಮತ್ತು ಶ್ವೇತಾಂಬರರ ಪೂರ್ವಿಕರು.

[Stevenson : The Heart of Jainism, p. 79.]

[15] ಬಹುಶಃ ಯಾಪನೀಯ ಸಂಘ. ಇವರು ಕರ್ನಾಟಕದಲ್ಲಿ ಬಹಳ ಪ್ರಬಲರಾಗಿದ್ದರು. ಇದರ ವಿವರಗಳಿಗೆ ಮುಂದೆ ನೋಡಿ.

[16] ವಡ್ಡಾರಾಧನೆ (1949), ಪು. 80–88.

ಜೈನಮತವನ್ನು ಪ್ರವೇಶಿಸಿ ತನಗೆ ದೀಕ್ಷೆಕೊಡಲು ಕೇಳಿಕೊಂಡಾಗ ಅಲ್ಲಿಯ ಗುರುಗಳು ನಿರಾಕರಿಸುತ್ತಾರೆ. ಆಗ ಅವನು ತನ್ನ ಕೂದಲನ್ನು ತಾನೇ ಕಿತ್ತುಕೊಂಡು, ತಾನೇ ದೀಕ್ಷೆ ಕೊಟ್ಟುಕೊಂಡು ಎಲ್ಲೆಲ್ಲೋ ತಿರುಗಾಡಿ ಮತ್ತೆ ಹಿಂದಿನ ಅದೇ ಮಠಕ್ಕೆ ಬರುತ್ತಾನೆ. ರಾಜನಿಗೆ ಈ ವಿಷಯ ತಿಳಿದು ಬೆಲೆಬಾಳುವ ವಸ್ತ್ರವೊಂದನ್ನು ಅವನಿಗೆ ಕಳುಹಿಸಲು ಆ ಮಠದ ಅಧಿಪತಿಗಳು ಅದನ್ನು ಪ್ರತಿಭಟಿಸಿ ಆ ವಸ್ತ್ರವನ್ನು ಹರಿದುಹಾಕುತ್ತಾರೆ. ಶಿವಭೂತಿಯು ಕೋಪಾವಿಷ್ಟನಾಗಿ ತನ್ನ ವಸ್ತ್ರಗಳೆಲ್ಲವನ್ನೂ ತ್ಯಜಿಸಿ ದಿಗಂಬರನಾಗಿ ಸಂಚರಿಸಲಾರಂಭಿಸುತ್ತಾನೆ. ಅವನ ತಂಗಿ ಉತ್ತರಾ ಅವನಂತೆಯೇ ನಗ್ನಳಾಗಿ ಓಡಾಡಲು ಎಲ್ಲರೂ ಜುಗುಪ್ಸೆಯಿಂದ ಇವರಿಬ್ಬರನ್ನೂ ಬಹಿಷ್ಕರಿಸಿದರು. ಆಗ ಶಿವಭೂತಿಯು ಸ್ತ್ರೀಯರಿಗೆ ನಗ್ನತೆ ಕೂಡದೆಂದು ಆಜ್ಞಾಪಿಸಿ ತಾನು ದಿಗಂಬರ ಸಂಪ್ರದಾಯಕ್ಕೆ ಮೊದಲಿಗನಾಗುತ್ತಾನೆ."[17]

ಹೀಗೆ ಇವರಿಬ್ಬರೂ ತಮ್ಮ ಸಂಪ್ರದಾಯವೇ ಆದಿಯಲ್ಲಿದ್ದುದೆಂದೂ, ಉಳಿದ ಸಂಪ್ರದಾಯವು ಕ್ರಮೇಣ ಹುಟ್ಟಿಕೊಂಡಿದೆಯೆಂದೂ ವಾದಿಸುವರು. ಇವರ ವಾದಗಳಲ್ಲಿ ದಿಗಂಬರರ ಹೇಳಿಕೆಯೇ ಹೆಚ್ಚು ತರ್ಕಸಮ್ಮತವಾಗಿರುವಂತೆ ತೋರುತ್ತದೆ. ಹಾಗಾದರೆ ಭದ್ರಬಾಹು ಚಂದ್ರಗುಪ್ತರು ಯಾರು? ಅವರ ವಲಸೆ ನಡೆದುದು ನಿಜವೆ? ಯಾವಾಗ ನಡೆಯಿತು?—ಈ ವಿಷಯದಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ.

ಮೌರ್ಯವಂಶದ ಚಂದ್ರಗುಪ್ತನಿಗೆ (ಕ್ರಿ.ಪೂ. 323–298) ರಾಜ್ಯ ಕೊಡಿಸುವ ಪ್ರಯತ್ನದಲ್ಲಿ ಚಾಣಕ್ಯನು ಜೈನರನ್ನು ಸಹಾಯಕ್ಕೆ ತೆಗೆದುಕೊಂಡ ವಿಷಯ ಮುದ್ರಾರಾಕ್ಷಸ ನಾಟಕದಲ್ಲಿ (ಕ್ರಿ. ಶ. 400) ಬಂದಿದೆ. ಕೊನೆಯ ಶ್ರುತಕೇವಲಿಯಾದ ಭದ್ರಬಾಹುವಿಗೆ ಚಂದ್ರಗುಪ್ತನೆಂಬ ಶಿಷ್ಯನಿದ್ದನೆಂದು ಹರಿಷೇಣನ ಬೃಹತ್ಕಥೆಯು (ಕ್ರಿ. ಶ. 931) ಹೇಳುತ್ತದೆ. ಕ್ರಿ. ಶ. ಸು. 600ರ ಶ್ರವಣಬೆಳಗೊಳದ ಶಾಸನವು ಭದ್ರಬಾಹು ದಕ್ಷಿಣಕ್ಕೆ ಬಂದು ಶ್ರವಣಬೆಳಗೊಳದಲ್ಲಿ ನೆಲಸಿದ ವಿಷಯವನ್ನು ತಿಳಿಸುತ್ತದೆ.[18] ಇನ್ನೂ ಅನೇಕ ಶಾಸನಗಳು ಶ್ರವಣಬೆಳಗೊಳಕ್ಕೂ ಭದ್ರಬಾಹು ಚಂದ್ರಗುಪ್ತರಿಗೂ ಸಂಬಂಧ ಕಲ್ಪಿಸುತ್ತವೆ.[19] ಶ್ರವಣಬೆಳಗೊಳದ ಚಿಕ್ಕಬೆಟ್ಟಕ್ಕೆ ಇರುವ ಚಂದ್ರಗಿರಿ ಎಂಬ ಹೆಸರು ಚಂದ್ರಗುಪ್ತನಿಂದ ಬಂದಿತೆಂದು ನಂಬಿಕೆ ಇದೆ. ಅದೇ ಚಿಕ್ಕಬೆಟ್ಟದ ಮೇಲೆ ಚಂದ್ರಗುಪ್ತಬಸದಿ, ಭದ್ರಬಾಹುಗುಹೆ ಮತ್ತು ಭದ್ರಬಾಹುವಿನ ಪಾದಚಿಹ್ನೆಗಳು ಇವೆ. ಈ ಚಂದ್ರಗುಪ್ತನು ಮೌರ್ಯರ ದೊರೆಯೆಂದೂ, ಶಾಸನೋಕ್ತಗಳಾದ ಮತ್ತು ಪ್ರಾಚೀನ ಗ್ರಂಥೋಕ್ತಗಳಾದ ವಿಷಯಗಳೆಲ್ಲ ನಿಜವೆಂದೂ ರೈಸ್ ಅವರು ವಾದಿಸಿದ್ದಾರೆ.[20] ಫ್ಲೀಟ್ ಅವರು ಇದನ್ನು ವಿರೋಧಿಸಿ ಹೀಗೆ ವಾದಿಸಿದ್ದಾರೆ—"ಶ್ರವಣಬೆಳಗೊಳದ ಒಂದನೇ ಶಾಸನದಲ್ಲಿ ಇಬ್ಬರು ಭದ್ರಬಾಹುಗಳ ಹೆಸರು ಬರುತ್ತದೆ. ರೈಸ್ ಭಾವಿಸಿರುವಂತೆ ಇಬ್ಬರೂ ಒಂದೇ ಅಲ್ಲ. ಈ ಶಾಸನದ ಗುರಿ ಪ್ರಭಾಚಂದ್ರನೆಂಬ ಮುನಿಯು ಸನ್ಯಸನ ವಿಧಿಯಿಂದ ಪ್ರಾಣಬಿಟ್ಟ ವಿಷಯವನ್ನು ಹೇಳುವುದು. ಕ್ಷಾಮದ ವಿಷಯವನ್ನು ತಿಳಿಸಿದ ಭದ್ರಬಾಹುವು ಶ್ರುತಕೇವಲಿಯಾದ ಭದ್ರಬಾಹುವಿನಿಂದ ಈಚಿನವನು. ಸರಸ್ವತೀಗಚ್ಛದ ಎರಡನೇ ಭದ್ರಬಾಹುವಿಗೆ (ಇವನು ಕ್ರಿ. ಪೂ. 53ರಲ್ಲಿ ಸನ್ಯಾಸಿಯಾದನು) ಗುಪ್ತಿಗುಪ್ತ ಎಂಬ ಶಿಷ್ಯನಿದ್ದನು. ಇವನೇ ಶಾಸನಗಳಲ್ಲಿ ಕಥೆಗಳಲ್ಲಿ ಕಂಡುಬರುವ ಚಂದ್ರಗುಪ್ತ. ಉತ್ತರದಿಂದ ದಕ್ಷಿಣಕ್ಕೆ ಜೈನರು ವಲಸೆ ಹೊರಟಾಗ, ಅದರ ನಾಯಕ ಎರಡನೇ ಭದ್ರಬಾಹುವೆಂದಿಟ್ಟುಕೊಂಡರೆ ಆಗ ಪ್ರಭಾಚಂದ್ರ ಇದ್ದ ಎಂದು ಭಾವಿಸುವುದು ಕಷ್ಟ. ಪ್ರಭಾಚಂದ್ರನ ಕಾಲದಲ್ಲಿ ಈ ವಲಸೆ ನಡೆದಿದ್ದರೆ ಅದರಲ್ಲಿ ಭದ್ರಬಾಹುವಿದ್ದಿಲ್ಲ ಎನ್ನ

---

17 History of Jaina Monachism, pp. 80–81.

18 EC. II. No. 1, C. 600 A.D.

19 EC. II. 66, C. 1100 A.D. ; EC. III. Srirangapatna, 147 & 148, C. 900 A.D ; EC. II. 31, C. 650 A.D. ; 67, C. 1129 A.D. ; 40, 1163 A.D.

20 ರೈಸ್ ಅವರು ಸಂಪಾದಿಸಿದ Inscriptions at Śravaṇa Beḷgoḷa (1889)–ಮುನ್ನುಡಿ. 'ವಡ್ಡಾರಾಧನೆ'ಯಲ್ಲಿ "ಸಂಪ್ರತಿ ಚಂದ್ರಗುಪ್ತ" ಎಂದಿದೆ. ಇವನು ಅಶೋಕಚಕ್ರವರ್ತಿಯ ಮೊಮ್ಮಗ.

ಬೇಕಾಗುತ್ತದೆ.[21] ಶ್ರೀ ಆರ್. ನರಸಿಂಹಾಚಾರ್ಯರು ರೈಸ್ ಅವರ ವಾದವನ್ನೇ ಎತ್ತಿಹಿಡಿದಿದ್ದಾರೆ.[22] ಒಮ್ಮೆ ಈ ಭದ್ರಬಾಹು–ಚಂದ್ರಗುಪ್ತರ ಕಥೆಯನ್ನು ಸಂದೇಹದಿಂದ ನೋಡಿದ್ದ ವಿನ್ಸೆಂಟ್ ಸ್ಮಿತ್ ಅವರು ಕೊನೆಕೊನೆಗೆ ''ಈ ಕಥೆಯ ರೂಪರೇಷೆಗಳು ಸ್ಥೂಲವಾಗಿ ನಿಜವೆಂದು ಅನ್ನಿಸುತ್ತದೆ'' ಎಂದಿದ್ದಾರೆ.[23] ಶ್ರೀಮಾನ್ ಎಂ. ಗೋವಿಂದ ಪೈ ಅವರು ಕರ್ನಾಟಕಕ್ಕೆ ಜೈನಧರ್ಮದ ಆಗಮನವನ್ನು ಕುರಿತು ಪ್ರಸ್ತಾಪಿಸುತ್ತ ಭದ್ರಬಾಹುವಿನ ಜೊತೆಯಲ್ಲಿ ಬಂದ ಚಂದ್ರಗುಪ್ತನು ಮೌರ್ಯವಂಶಸ್ಥಾಪಕನಲ್ಲವೆಂದೂ, ಅವನು ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತನೆಂದೂ ಸಾಧಾರವಾಗಿ ಪ್ರತಿಪಾದಿಸಿದ್ದಾರೆ.[23.1] ಈ ತೀರ್ಮಾನವು ಅಂತಿಮವೆಂದು ಒಪ್ಪಿಕೊಳ್ಳಲಾಗದಿದ್ದರೂ ಇದನ್ನು ಪ್ರಬಲವಾಗಿ ವಿರೋಧಿಸುವ ಅಂಶಗಳು ಹೊರಬರುವ ತನಕ ನಿಜವೆಂದು ಭಾವಿಸಬಹುದು. ಸುಮಾರು ಕ್ರಿ. ಪೂ. 2–3ನೇ ಶತಮಾನಗಳಲ್ಲಿ ಶ್ವೇತಾಂಬರ ದಿಗಂಬರಗಳೆಂಬ ಭಿನ್ನ ಸಂಪ್ರದಾಯಗಳು ಹುಟ್ಟಿಕೊಂಡುವು.[24]

ಇವುಗಳು ಭಿನ್ನಸಂಪ್ರದಾಯಗಳೆಂದು ಕರೆದಿದೆ, ನಿಜ. ಹೆಸರುಗಳು ಸೂಚಿಸುವಂತೆ ಜೈನ ಮುನಿಗಳು ವಸ್ತ್ರ ಉಡಬೇಕೆ, ಉಡಬಾರದೆ—ಇದೇ ಇಲ್ಲಿನ ಪ್ರಮುಖ ಪ್ರಶ್ನೆ. ತಾತ್ವಿಕವಾಗಿ ಪ್ರಮುಖ ಎನ್ನಿಸಿಕೊಳ್ಳುವ ವ್ಯತ್ಯಾಸಗಳು ಈ ಎರಡು ಪಂಗಡಗಳ ಮಧ್ಯೆ ಇಲ್ಲ. ಇವು ಕೆಲವು ವ್ಯತ್ಯಾಸಗಳು—ದಿಗಂಬರರ ಪ್ರಕಾರ ಸ್ತ್ರೀಯರಿಗೆ ಮೋಕ್ಷವಿಲ್ಲ. ಸ್ತ್ರೀಯಾದವಳು ಮುಂದಿನ ಜನ್ಮದಲ್ಲಿ ಪುರುಷನಾಗಿ ಹುಟ್ಟಿಯೇ ಮೋಕ್ಷ ಗಳಿಸಬೇಕು. ಶ್ವೇತಾಂಬರರ ಪ್ರಕಾರ ಸ್ತ್ರೀಯರಿಗೆ ಈ ಜನ್ಮದಲ್ಲಿಯೇ ಮೋಕ್ಷ ಸಾಧ್ಯ.[25] ಜೈನರ ಪ್ರಾಚೀನ ಪ್ರಮಾಣ ಗ್ರಂಥಗಳೆಲ್ಲ ಹಾಳಾಗಿವೆಯೆಂಬ ದಿಗಂಬರರ ಹೇಳಿಕೆಯನ್ನು ಶ್ವೇತಾಂಬರರು ಒಪ್ಪರು. ದಿಗಂಬರರ ಪ್ರಕಾರ ತೀರ್ಥಂಕರರ ಪ್ರತಿಮೆಗಳೆಲ್ಲ ನಗ್ನವೂ ನಿರಲಂಕೃತವೂ ಆಗಿರಬೇಕು. ಶ್ವೇತಾಂಬರರ ಪ್ರಕಾರ ಅವು ಅಲಂಕೃತವಾಗಿರಲೂಬಹುದು. ಕೇವಲಜ್ಞಾನಿಗೆ ಆಹಾರ ಬೇಕಿಲ್ಲವೆಂದು ದಿಗಂಬರರು, ಬೇಕು ಎಂದು ಶ್ವೇತಾಂಬರರು. ಮಹಾವೀರನಿಗೆ ಮದುವೆಯಾಗಿರಲಿಲ್ಲವೆಂದು ದಿಗಂಬರರು ; ಯಶೋದೆಯನ್ನು ಅವನು ಮದುವೆಯಾಗಿದ್ದನು, ಅನೊಜ್ಜಾ ಎಂಬ ಮಗಳೂ ಇದ್ದಳು ಎಂದು ಶ್ವೇತಾಂಬರರು. ಹೀಗೆ ಇರುವ ಭಿನ್ನಾಭಿಪ್ರಾಯಗಳು ಧರ್ಮದ ತಿರುಳಿಗೆ ಸಂಬಂಧಪಟ್ಟುವಲ್ಲ.[26]

---

[21] IA. XXI. p. 156 ff.

[22] EC. II. Introduction, p. 36.

[23] V. Smith : The Early History of India (4th Edition), p. 15[illegible].

[23.1] 'ಕರ್ನಾಟಕಕ್ಕೆ ಜೈನಧರ್ಮದ ಆಗಮನ' (ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, XXVI. i. & ii.)

[24] ಭದ್ರಬಾಹುವು ದಕ್ಷಿಣಕ್ಕೆ ಬರುವ ಮುನ್ನವೇ ಇಲ್ಲಿ ಜೈನಧರ್ಮವಿದ್ದಿರಬೇಕೆಂದು ಡಾ॥ ಪಾಂಡುರಂಗ ದೇಸಾಯಿಯವರು ಅಭಿಪ್ರಾಯಪಡುತ್ತಾರೆ. ಅವರ ಪ್ರಕಾರ ಕ್ರಿ. ಪೂ. 4ನೇ ಶತಮಾನದಲ್ಲಿ ಸಿಲೋನಿನಲ್ಲಿ ಜೈನಧರ್ಮವಿದ್ದಿರಬೇಕಾದರೆ ದಕ್ಷಿಣದ ಮೂಲಕ ತಾನೆ ಅದು ಹಾದುಹೋಗಿರಬೇಕು ? ದಕ್ಷಿಣದಲ್ಲಿ ತನಗೆ ಸ್ವಾಗತ ಸಿಗುವ ಭರವಸೆಯಿರದಿದ್ದರೆ ಭದ್ರಬಾಹು ಏತಕ್ಕೆ ದಕ್ಷಿಣಕ್ಕೆ ಬರುತ್ತಿದ್ದ ?—ಇದು ಅವರ ವಾದ.

[Jainism in South India, pp. 1–2].

[25] ದಿಗಂಬರರ ಪ್ರಕಾರ ಇಪ್ಪತ್ತನಾಲ್ಕು ತೀರ್ಥಂಕರರೂ ಪುರುಷರು. ಶ್ವೇತಾಂಬರರ ಪ್ರಕಾರ ಮಲ್ಲಿ ಎಂಬುವಳು ತೀರ್ಥಂಕರರಲ್ಲಿ ಹತ್ತೊಂಬತ್ತನೆಯವಳು.

[26] ಈ ಭಿನ್ನಾಭಿಪ್ರಾಯಗಳನ್ನೇ ದೊಡ್ಡದು ಮಾಡಿಕೊಂಡು, ತೀರ್ಥಕ್ಷೇತ್ರಗಳಲ್ಲಿ ತಮ್ಮ ಹಕ್ಕು ಸ್ಥಾಪಿಸಲು ಕೋರ್ಟುಗಳಿಗೆ ಹೋಗಿ ಲಕ್ಷಾಂತರ ರೂಪಾಯಿ ಸುರಿದದ್ದೂ ಉಂಟು. ಬೀರಾರಿನ ಅಂತರಿಕ್ಷ ಪಾರ್ಶ್ವನಾಥ ಎಂಬಲ್ಲಿ ಶ್ವೇತಾಂಬರರು ಬೆಳಗ್ಗೆ 6ರಿಂದ 9ರ ವರೆಗೂ, ಮಧ್ಯಾಹ್ನ 12ರಿಂದ 3ರ ವರೆಗೂ, ದಿಗಂಬರರು ಬೆಳಗ್ಗೆ 9ರಿಂದ 12ರ ವರೆಗೂ, ಸಂಜೆ 3ರಿಂದ 6ರ ವರೆಗೂ ಪೂಜಿಸಬೇಕೆಂದು ಒಪ್ಪಂದಕ್ಕೆ ಬಂದಿದ್ದಾರೆ.

[Sangave : Jaina Community—A Social Survey, p. 273.]

## ಕರ್ನಾಟಕದಲ್ಲಿ ಶ್ವೇತಾಂಬರರು

ಈಗ ಶ್ವೇತಾಂಬರ ಸಂಪ್ರದಾಯವು ಉತ್ತರಭಾರತದಲ್ಲಿಯೂ, ದಿಗಂಬರ ಸಂಪ್ರದಾಯವು ದಕ್ಷಿಣ ಭಾರತದಲ್ಲಿಯೂ ಪ್ರಚಲಿತವಾಗಿದೆ. ಪ್ರಾಚೀನ ಕರ್ನಾಟಕದಲ್ಲಿಯೂ ದಿಗಂಬರ ಸಂಪ್ರದಾಯವೇ ಪ್ರಧಾನವಾಗಿತ್ತು. ಆದರೂ ಅಲ್ಲಿ ಇಲ್ಲಿ ಶ್ವೇತಾಂಬರರು ಇದ್ದರೆಂದು ಶಾಸನಗಳಿಂದ, ಗ್ರಂಥಗಳಿಂದ ತಿಳಿದುಬರುತ್ತದೆ. ಹರಿಭದ್ರನ ಹೇಳಿಕೆಯ ಪ್ರಕಾರ ಪಾದಲಿಪ್ತಾಚಾರ್ಯರೆಂಬ ಜೈನಗುರುಗಳು ಕ್ರಿ.ಶ. 1ನೆಯ ಶತಮಾನದಲ್ಲಿ ದಕ್ಷಿಣಕ್ಕೆ ಬಂದಾಗ ಮಾನ್ಯಖೇಟದ ಸುತ್ತಮುತ್ತ ಶ್ವೇತಾಂಬರರಿದ್ದರು.[27] ಐದನೆಯ ಶತಮಾನದ ಕದಂಬರ ತಾಮ್ರ ಪಟಗಳಲ್ಲಿ ಮೃಗೇಶವರ್ಮನು ಶ್ವೇತಪಟಮಹಾಶ್ರಮಣಸಂಘದ ಉಪಭೋಗ್ಯಕ್ಕೆ ಮತ್ತು ನಿರ್ಗ್ರಂಥಮಹಾಶ್ರಮಣಸಂಘದ ಉಪಭೋಗ್ಯಕ್ಕೆ ದತ್ತಿ ಬಿಟ್ಟಿದ್ದಾನೆ.[28] ಕರ್ನಾಟಕದಲ್ಲಿ ಶ್ವೇತಾಂಬರರ ಒಂದು ದೊಡ್ಡ ಶ್ರಮಣ ಸಂಘವೇ ಇದ್ದಂತೆ ಕಂಡುಬರುತ್ತದೆ. ಕ್ರಿಸ್ತಶಕದ ಆರಂಭದ ಶತಕಗಳಲ್ಲಿ ದಿಗಂಬರರಿಗೂ ಶ್ವೇತಾಂಬರರಿಗೂ ಅಂತಹ ವೈಮನಸ್ಯವಿದ್ದಿಲ್ಲವೋ ಏನೋ! ಜೈನರಿಂದ ಶ್ವೇತಾಂಬರರು ಸಿಡಿದುನಿಂತ ರೀತಿಯನ್ನು ವಿವರಿಸುವ ವಡ್ಡಾರಾಧನೆಯ[29] ಧ್ವನಿಯಲ್ಲಿ ಸ್ವಲ್ಪ ಅಸಮಾಧಾನ ಹೊಗೆಯಾಡುತ್ತಿರುವಂತಿದೆ. ನೃಪತುಂಗನ ಕೃತಿಯೆಂದು ಶ್ರೀ ಕೆ. ಬಿ. ಪಾಠಕ್ ಅಭಿಪ್ರಾಯಪಡುವ ಪ್ರಶ್ನೋತ್ತರ ರತ್ನಮಾಲಿಕಾ ಎಂಬ ಕೃತಿಯು ವಾಸ್ತವವಾಗಿ ವಿಮಲನೆಂಬ ಶ್ವೇತಾಂಬರ ಗುರುವಿನ ಕೃತಿ ಎಂದೂ, ಅವನು ಕನ್ನಡ ಕವಿಗಳಲ್ಲೊಬ್ಬನೆಂದೂ, ನೃಪತುಂಗ ಹೇಳುವ ವಿಮಲೋದಯನೇ ಇರಬೇಕು ಎಂದೂ ಶ್ರೀ ಗೋವಿಂದ ಪೈ ಅವರು ಅಭಿಪ್ರಾಯ ಪಡುತ್ತಾರೆ.[30] ತತ್ವಾರ್ಥಸೂತ್ರಗಳನ್ನು ರಚಿಸಿದ ಉಮಾಸ್ವಾಮಿಯವರು (ಕ್ರಿ.ಶ. 43) ತಮ್ಮ ತಮ್ಮ ಪಂಗಡಕ್ಕೆ ಸೇರಿದವರೆಂದು ಶ್ವೇತಾಂಬರ, ದಿಗಂಬರ ಪಂಗಡದವರು ವಾದಿಸುತ್ತಿದ್ದರೂ[31] ಅವರು ದಿಗಂಬರ ಸಂಪ್ರದಾಯಕ್ಕೆ ಸೇರಿದವರೆಂದು ವಿದ್ವಾಂಸರು ಒಪ್ಪಿಕೊಂಡಂತಿದೆ.[32] ಈ ಗ್ರಂಥಕ್ಕೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆದ ಬಾಲಚಂದ್ರದೇವನು (ಸು. 1150) ತನ್ನ ಗ್ರಂಥದ ಆರಂಭದಲ್ಲಿ–ದ್ವೈಪಾಯಕನೆಂಬ ಒಬ್ಬ ಬ್ರಾಹ್ಮಣನು ಶ್ವೇತಾಂಬರ ಭಕ್ತನಾಗಿ 'ಸಿತಪಟಮತಾನುಕೂಲ ಸಕಲಶಾಸ್ತ್ರ'ಗಳನ್ನರಿತು ಆಸನ್ನಭವ್ಯನಾಗಿದ್ದ ಎಂದು ವರ್ಣಿಸಿದ್ದಾನೆ. ಶ್ವೇತಾಂಬರ ಪಂಥದವನಾಗಿದ್ದರೂ ಅವನು 'ನಿರ್ಗ್ರಂಥಾಚಾರ್ಯ'ರಾದ ಉಮಾಸ್ವಾಮಿಗಳಿಂದ ಬೋಧನೆ ಪಡೆದನೆಂದೂ ಹೇಳಿದ್ದಾನೆ.[33] ಸುಮಾರು ಇದೇ ಕಾಲದವನಾದ ಬ್ರಹ್ಮಶಿವನು ತನ್ನ ಸಮಯಪರೀಕ್ಷೆಯಲ್ಲಿ ಉಳಿದ ಧರ್ಮಗಳ ಖಂಡನೆಯನ್ನು ಮಾಡಿದ್ದರೂ, ಆದರಲ್ಲಿ ಶ್ವೇತಾಂಬರ ಪಂಥವನ್ನು ಕುರಿತಾದ ಖಂಡನೆಯಾಗಲಿ ವಿಡಂಬನೆಯಾಗಲಿ ಬಂದಿಲ್ಲ. ಹದಿನಾಲ್ಕನೇ ಶತಮಾನದ ಶಾಸನವೊಂದು[34] ಶ್ವೇತಾಂಬರವನ್ನು 'ವಿಪರೀತರೂಪ'

---

[27] MAR (1923), pp. 10–11.

[28] IA. VII. p. 37. 'ಶ್ವೇತಪಟ' ಎಂದರೆ ಶ್ವೇತಾಂಬರ ಎಂದರ್ಥ. ನಿರ್ಗ್ರಂಥಮುನಿ ಎಂದರೆ ದಿಗಂಬರ ಸನ್ಯಾಸಿ ಎಂದರ್ಥ.

[29] ವಡ್ಡಾರಾಧನೆ (1949), ಪು. 87–88.

[30] ನೃಪತುಂಗನ ಮತವಿಚಾರ (ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, 12–4).

[31] ತತ್ವರತ್ನಪ್ರದೀಪಿಕೆ, ಮುನ್ನುಡಿ, ಪು. XXI.

[32] ಉದಾಹರಣೆಗೆ 'History of Jaina Monachism' ಕರ್ತೃ ದೇವ್ ಅವರು ಈ ಗ್ರಂಥದ ಹೆಸರನ್ನು ದಿಗಂಬರ ಗ್ರಂಥಗಳ ಪಟ್ಟಿಯಲ್ಲಿ ಸೇರಿಸಿದ್ದಾರೆ. ಯಾಕೊಬಿಯವರು ಈತ ಬಹುಶಃ ಶ್ವೇತಾಂಬರನಿರಬಹುದೆಂದು ಅಭಿಪ್ರಾಯ ಪಡುತ್ತಾರೆ.

[Encyclopaedia of Religion and Ethics, IV. p. 704]

[33] ತತ್ವರತ್ನಪ್ರದೀಪಿಕೆ, ಪು. 1–2.

[34] "ಸಿತಾಂಬರಾನ್ ವಿಪರೀತರೂಪೇಽಖಿಲೇ ವಿಸಂಘೇ ವಿತನೋತು ಬೋಧಂ
ತತ್ಸೇನ ನಂದಿ ತ್ರಿದಿವೇಶಸಿಂಹಸಂಘೇಷು ಯಸ್ತಂ ಮನುತೇ ಕುದೃಕ್ ಸಃ ॥"

[EC. II. 254, 1398 A.D.]

ವುಳ್ಳ 'ವಿಸಂಘ' ಎಂದು ಕರೆದು, ಸೇನ, ನಂದಿ ಮುಂತಾದ ಸಂಘಗಳನ್ನೂ ವಿಸಂಘಗಳೆಂದು ಭಾವಿಸುವವನನ್ನು 'ಕುದೃಕ್' (ಕೆಟ್ಟದೃಷ್ಟಿಯುಳ್ಳವನು) ಎಂದು ಕರೆಯಲಾಗುತ್ತದೆ ಎಂದು ಹೇಳುತ್ತದೆ. ಆಂಧ್ರದಲ್ಲಿಯೂ ಶ್ವೇತಾಂಬರರಿದ್ದರೆಂಬುದಕ್ಕೆ ಶಾಸನಗಳಲ್ಲಿ ಪ್ರಮಾಣ ದೊರಕುತ್ತದೆ.[35]

ಹೀಗೆ ಕರ್ನಾಟಕದಲ್ಲಿ ಶ್ವೇತಾಂಬರರು ಮೊದಲಿನಿಂದಲೂ ಇದ್ದರು. ಅಲ್ಪಸಂಖ್ಯಾತರಾಗಿದ್ದ ಅವರು ಕ್ರಮೇಣ ಮಾಯವಾದರೆಂದು ಕಾಣಿಸುತ್ತದೆ. ಅವರು ಕರ್ನಾಟಕದಲ್ಲಿದ್ದರೆಂಬುದಕ್ಕೆ ಕದಂಬರ ತಾಮ್ರಪಟಗಳು ಮಾತ್ರ ಸಾಕ್ಷಿ. ಉಳಿದ ಕಡೆ ಅವರ ಉಲ್ಲೇಖ ಬಂದಿರುವುದನ್ನು ನೋಡಿದರೆ, ಅವರು ಕರ್ನಾಟಕದಲ್ಲಿದ್ದರು ಎನ್ನುವುದನ್ನು ಸೂಚಿಸುವುದಕ್ಕಿಂತ, ಅವರ ಪಕ್ಷವನ್ನು ನಿಂದಿಸುವುದು ಅವುಗಳ ಗುರಿಯಾಗಿರುವಂತಿದೆ. ಕರ್ನಾಟಕದಲ್ಲಿ ಅದು ದಿಗಂಬರದಷ್ಟು ಪ್ರಧಾನ ಪಂಗಡವಾಗಿದ್ದಿದ್ದರೆ ಹತ್ತನೇ ಶತಮಾನದ ಸೋಮದೇವನು ತನ್ನ ಯಶಸ್ತಿಲಕ ಚಂಪುವಿನಲ್ಲಾಗಲಿ, 12ನೇ ಶತಮಾನದ ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆಯಲ್ಲಾಗಲಿ ಶ್ವೇತಾಂಬರದ ವಿಷಯವನ್ನು ಹೇಳದೆ ಬಿಡುತ್ತಿರಲಿಲ್ಲ.[36]

## ಯಾಪನೀಯ ಪಂಗಡ

ದಿಗಂಬರ ಸಂಪ್ರದಾಯದ ವಿಚಾರಕ್ಕೆ ಹೊರಡುವ ಮೊದಲು, ಅದರಷ್ಟು ಪ್ರಬಲವಲ್ಲದ, ಆದರೆ ಶ್ವೇತಾಂಬರ ಪಂಗಡಕ್ಕಿಂತ ಪ್ರಬಲವಾಗಿದ್ದ, ಒಂದು ರೀತಿಯಲ್ಲಿ ಅವೆರಡರ ಭಿನ್ನತೆಗಳನ್ನು ಸಮನ್ವಯಗೊಳಿಸಲು ಪ್ರಯತ್ನಿಸಿದ ಯಾಪನೀಯ ಸಂಘದ ಕಡೆ ಹೊರಳಬಹುದು. ಉತ್ತರ ಕರ್ನಾಟಕದಲ್ಲಿ ಈ ಸಂಘವು ಪ್ರಬಲವಾಗಿದ್ದಿತೆಂದು ಹೇಳಲು ಸಾಕಷ್ಟು ಆಧಾರಗಳಿವೆ. ಇದನ್ನು "ಜೈನಧರ್ಮದಲ್ಲಿ ಸುಧಾರಣೆಗಳನ್ನು ತರಲು ಪ್ರಯತ್ನಿಸಿದ ಸಂಘ" ವೆಂದು ವಿದ್ವಾಂಸರು ಕರೆದಿದ್ದಾರೆ.[37] ದಿಗಂಬರ ಸಂಪ್ರದಾಯದ ನಿಯಮಗಳು ಸಾಮಾನ್ಯ ಜನತೆಯ ದೃಷ್ಟಿಯಿಂದಂತೂ ಅತಿ ಕಠೋರ, ಅನುಷ್ಠಾನದ ದೃಷ್ಟಿಯಿಂದ ಅಸಾಧ್ಯ ಎನ್ನುವ ಭಾವನೆ ಕೆಲವರಿಗಾದರೂ ಬಂದಿರಬೇಕು. ಸ್ತ್ರೀಯರಿಗೆ ಮೋಕ್ಷವಿಲ್ಲವೆಂದು ಹೇಳಿದುದರಿಂದ ಮನುಷ್ಯ ಜಾತಿಯಲ್ಲಿ ಅರ್ಧಭಾಗಕ್ಕೆ ಮೋಕ್ಷಾಧಿಕಾರವಿಲ್ಲ ಎಂದು ಹೇಳಿದಂತಾಗಿತ್ತು. ಬಹುಶಃ ಇಂಥವನ್ನು ಸರಿಪಡಿಸುವ ಉದ್ದೇಶದಿಂದಲೇ ಯಾಪನೀಯ ಸಂಪ್ರದಾಯವು ಹುಟ್ಟಿಕೊಂಡಂತೆ ಕಾಣಿಸುತ್ತದೆ. ಅದರ ಪ್ರಧಾನ ತತ್ವಗಳು ಮೂರು—[38]

1. "ಪರಶಾಸನೇ ಮೋಕ್ಷಃ" (ಉಳಿದ ಪಥಗಳನ್ನು ಅನುಸರಿಸುವವರಿಗೂ ಮೋಕ್ಷವುಂಟು.)
2. "ಸಗ್ರಂಥಾನಾಂ ಮೋಕ್ಷಃ" (ಸಂಸಾರಿಗಳಿಗೂ ಮೋಕ್ಷವುಂಟು.)
3. "ಸ್ತ್ರೀಣಾಂ ತದ್ಭವೇ ಮೋಕ್ಷಃ" (ಸ್ತ್ರೀಯರಿಗೆ ಈ ಜನ್ಮದಲ್ಲೇ ಮೋಕ್ಷವು ಸಾಧ್ಯ.)

ಇವು ವಾಸ್ತವವಾಗಿ ಶ್ವೇತಾಂಬರ ಪಂಥದ ತತ್ವಗಳೂ ಹೌದು. ಆದರೆ ಯಾಪನೀಯ ಮುನಿಗಳು ದಿಗಂಬರ ಸಂಪ್ರದಾಯದಂತೆ ನಗ್ನರಾಗಿಯೇ ಉಳಿದಿದ್ದರು.[39]

---

[35] Jainism in South India, p. 23.

[36] ಬ್ರಹ್ಮಶಿವನಲ್ಲಿ ಒಂದೆರಡು ಕಡೆ 'ಸಿತಮತ' ಎಂಬ ಮಾತು ಬರುತ್ತದೆ. ಅದನ್ನು 'ಶ್ವೇತಾಂಬರಮತ' ಎಂದು ವ್ಯಾಖ್ಯಾನಿಸಲು ಅವಕಾಶವಿದೆಯೇ ? ಎಂಬುದು ವಿಚಾರಯೋಗ್ಯವಾದುದು.

[37] Jainism in South India, p. 167.

[38] ಅದೇ. ಪುಟ. 167–8.

[39] ಜೈನಧರ್ಮವು ದಿಗಂಬರ ಮತ್ತು ಶ್ವೇತಾಂಬರ ಎಂಬ ಪಂಗಡಗಳಾಗಿ ಒಡೆಯುವ ಮುನ್ನಿನ ಸ್ಥಿತಿಯನ್ನು ಯಾಪನೀಯವು ಸೂಚಿಸುತ್ತದೆ ಎಂದು ಡಾ॥ ದೇವ್ ಅಭಿಪ್ರಾಯಪಡುತ್ತಾರೆ. (History of Jaina Monachism, p. 96.) ಆದರೆ ಇದು ಸಮರ್ಥನೀಯವಾದುದಲ್ಲ. 'ಯಾಪನೀಯ'ದ ಪ್ರಾಕೃತಸಮಾನರೂಪ 'ಜವನಿಜ್ಜ'

ಈ ಸಂಪ್ರದಾಯವು ಉತ್ತರಭಾರತಕ್ಕಿಂತ ದಕ್ಷಿಣದಲ್ಲೇ ಹೆಚ್ಚು ಪ್ರಚಾರದಲ್ಲಿದ್ದಂತೆ ತೋರುತ್ತದೆ. ಕ್ರಿ.ಪೂ. 2ನೇ ಶತಮಾನದ ಖಾರವೇಲನ ಶಾಸನದಲ್ಲಿನ "ಕಾಯ ನಿಸೀದೀಯಾಯ ಯಾಪಞಾವಕೆಹಿ" ಎಂಬ ವಾಕ್ಯದಲ್ಲಿ ಜಯಸ್ವಾಲರು 'ಯಾಪ–ಞಾವಕ' ಎನ್ನುವುದನ್ನು ಸಂಸ್ಕೃತದ 'ಯಾಪ–ಜ್ಞಾಪಕ' ಎಂಬುದರ ಸಮಾನವಾಗಿ ಭಾವಿಸಿ, 'ಯಾಪ ಸಂಘದ ಗುರುಗಳು' ಎಂದರ್ಥ ಮಾಡಿದ್ದಾರೆ.[40] ಇದನ್ನು ಒಪ್ಪಿಕೊಂಡರೆ ಉತ್ತರಭಾರತದ ಒರಿಸ್ಸದಲ್ಲಿ ಯಾಪನೀಯರು ಇದ್ದರು ಎನ್ನಬೇಕಾಗುತ್ತದೆ. ಆದರೆ ಇದಕ್ಕೆ ಗ್ರಂಥಗಳ ಅಥವಾ ಶಾಸನಗಳ ಆಧಾರವಿಲ್ಲ.[41]

ದಕ್ಷಿಣದಲ್ಲಿ, ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಯಾಪನೀಯದ ಅನೇಕ ಕೇಂದ್ರಗಳು ಗುಲ್ಬರ್ಗ ಜಿಲ್ಲೆಯ ಆಡಕಿ, ಸೇಡಂ, ಬೆಳಗಾಂ ಜಿಲ್ಲೆಯ ಹಲ್ಸಿ, ಧಾರವಾಡ ಜಿಲ್ಲೆಯ ದೋಣಿ, ನವಲ್‌ಗುಂದ ಮುಂತಾದ ಕಡೆ ಇದ್ದುವು. ಈ ಸಂಘವನ್ನು ಶ್ರೀ ಕಲಶ ಆಚಾರ್ಯ ಎಂಬ ಶ್ವೇತಾಂಬರ ಸಾಧುವು ಗುಲ್ಬರ್ಗ ಜಿಲ್ಲೆಯ ಕಲ್ಯಾಣದಲ್ಲ ಕ್ರಿ.ಶ. 148ರಲ್ಲಿ ಸ್ಥಾಪಿಸಿದನೆಂದು ಹೇಳುತ್ತಾರೆ.[42] ಶ್ವೇತಾಂಬರರು ಉತ್ತರದಲ್ಲಿ ಜೈನ ಧರ್ಮದಿಂದ ಬೇರೆಯಾದ ವಿಷಯವನ್ನು ಹೇಳಿಯಾದಮೇಲೆ ವಡ್ಡಾರಾಧನೆಯು ಹೀಗೆ ಹೇಳುತ್ತದೆ— "ದಕ್ಷಿಣಾ ಪಥದೊಳ್ ಸಾಮಳಿಪುತ್ರನೆಂಬರಸನಪ್ಪನವರಯೆ ಸಂತತಿಯ ಶ್ವೇತಭಿಕ್ಷು ಜಾಪುಲಿಸಂಘಕ್ಕೆ ಮೊದಲಿಗನಾದಂ."[43] ಇಲ್ಲಿಯ 'ಜಾಪುಲಿ ಸಂಘ' ಎಂಬುದು 'ಯಾಪನೀಯ ಸಂಘ'ದ ತದ್ಭವವೆಂದು ಕಾಣಿಸುತ್ತದೆ. ಇನ್ನೊಂದು ಮೂಲದ ಪ್ರಕಾರ ಕರಹಾಟಕದ ರಾಣಿಯೊಬ್ಬಳು ರಾಜನನ್ನು ಮೆಚ್ಚಿಸಲು ಶ್ವೇತಾಂಬರ ಮುನಿಗಳನ್ನು ಕುರಿತು ನೀವು ವಸ್ತ್ರವನ್ನು ತ್ಯಜಿಸಿಬಿಡಿ ಎಂದು ಕೇಳಿಕೊಂಡಳು. ಅವರು ದಿಗಂಬರರಾದರು. ಅವರೇ ಯಾಪನೀಯರು.[44] ಈ ಮೂರು ಕಥೆಗಳಿಂದ ಒಂದು ಸಾಮಾನ್ಯವಾದ ಅಂಶವು ಹೊರಬರುತ್ತದೆ. ಯಾಪನೀಯ ಸಂಘಕ್ಕೆ ಕಾರಣ ಕರ್ತನಾದವನು ಉತ್ತರಭಾರತದ ಶ್ವೇತಾಂಬರ ಸಂಪ್ರದಾಯದ ವ್ಯಕ್ತಿ; ಅವನು ಸಂಘವನ್ನು ಸ್ಥಾಪಿಸಿದ್ದು ದಕ್ಷಿಣಭಾರತದಲ್ಲಿ, ಬಹುಶಃ ಕರ್ನಾಟಕದಲ್ಲಿ.

ಕರ್ನಾಟಕದಲ್ಲಿ ಕದಂಬರು ಯಾಪನೀಯ ಮುನಿಗಳಿಗೆ ದತ್ತಿಗಳನ್ನು ಬಿಟ್ಟುಕೊಟ್ಟು ಪ್ರೋತ್ಸಾಹಿಸಿದರು. ಕದಂಬ ಮೃಗೇಶವರ್ಮನು ಇತರ ರಾಜಕುಲಗಳನ್ನು ಗೆದ್ದಮೇಲೆ ವೈಜಯಂತೀಪುರದಲ್ಲಿದ್ದು (ಈಗಿನ ಬನವಾಸಿ) ತನ್ನ ತಂದೆಯ ಜ್ಞಾಪಕಾರ್ಥವಾಗಿ ಪಲಾಶಿಕಾನಗರದಲ್ಲಿ (ಈಗಿನ ಹಲಸಿ) ಜಿನಾಲಯವೊಂದನ್ನು ಕಟ್ಟಿಸಿ "ಯಾಪನೀಯ ನಿರ್ಗ್ರಂಥ ಕೂರ್ಚಕಾನಾಂ" ಎಂದರೆ ಯಾಪನೀಯ, ದಿಗಂಬರ, ಕೂರ್ಚಕ[45] ಮುನಿಗಳಿಗೆ ಮೂವತ್ತ

---

ಎಂದೂ, 'ಜವನಿಜ್ಜ' ಎಂಬುದರ ನಿಜವಾದ ಸಂಸ್ಕೃತಸಮಾನರೂಪ 'ಯಮುನೀಯ'ವಾದ್ದರಿಂದ, 'ಯಾಪನೀಯ'ವು ವಾಸ್ತವವಾಗಿ 'ಯಮುನೀಯ'ವಾಗಿರಬೇಕೆಂದೂ ಡಾ॥ ಎ. ಎನ್. ಉಪಾಧ್ಯೆ ಊಹಿಸುತ್ತಾರೆ. "The yāpanīyas were so called, because they observed *Yamas* or vows and led a life of *Samyama*" ('On the meaning of yāpanīya'. Śrīkaṇṭhikā, p. 198).

[40] EI. XX, p. 80.

[41] History of Jaina Monachism, p. 96.

[42] ಮಿರ್ಜಿ ಅಣ್ಣಾರಾಯ್: ಜೈನಧರ್ಮ, ಪು. 88.

[43] ವಡ್ಡಾರಾಧನೆ (1949), ಪು. 87–88 ಸ್ವಯಂಭೂ ಎಂಬ ಅಪಭ್ರಂಶ ಕವಿಯನ್ನು ಅವನ ವ್ಯಾಖ್ಯಾನಕಾರರು 'ಆಪುಲಿ ಸಂಘ'ಕ್ಕೆ ಸೇರಿದವನೆಂಬುದಾಗಿ ವರ್ಣಿಸುತ್ತಾರೆ. 'ಆಪುಲಿ' ಎಂದರೆ 'ಯಾಪನೀಯ' ಎಂದರ್ಥ. 'ಜಾಪುಲಿ' ಎಂಬುದು 'ಯಾಪನೀಯ'ದ ತದ್ಭವ ಎಂಬುದನ್ನು ಇದು ಪೋಷಿಸುತ್ತದೆ.

[44] History of Jaina Monachism, p. 448.

[45] ಕರ್ನಾಟಕದಲ್ಲಿ ಯಾಪನೀಯರಂತೆಯೇ ಕೂರ್ಚಕ ಎಂಬ ಹೆಸರಿನ ಜೈನಮುನಿಗಳು ಇದ್ದರೆಂಬುದಕ್ಕೆ ಅನೇಕ ಶಾಸನಾಧಾರಗಳಿವೆ. ಆದರೆ ಈ ಕೂರ್ಚಕರ ವಿಷಯದಲ್ಲಿ ಹೆಚ್ಚು ವಿವರಗಳು ಎಲ್ಲಿಯೂ ದೊರೆಯುವುದಿಲ್ಲ. ದಿಗಂಬರ ಮುನಿಗಳಿಗೂ ಕೂರ್ಚಕ ಮುನಿಗಳಿಗೂ ಯಾವ ಆಚಾರಭೇದಗಳಿದ್ದುವೆಂಬುದೂ ತಿಳಿಯುವುದಿಲ್ಲ. ಅವರ ಧರ್ಮ

ಮೂರು ನಿವರ್ತನದಷ್ಟು ಭೂಮಿಯನ್ನು ಕೊಡುತ್ತಾನೆ.[46] ಈ ಶಾಸನದಲ್ಲಿಯೇ ಯಾಪನೀಯ ಮುನಿಗಳಿಗೆ ಮಳೆಗಾಲದಲ್ಲಿ ಆಹಾರದಾನವನ್ನು ಮಾಡಬೇಕೆಂದು ಹೇಳಿದೆ. ದೇವಶರ್ಮನೆಂಬ ಕದಂಬ ಯುವರಾಜನು ಯಾಪನೀಯ ಸಂಘಕ್ಕೆ ದಾನವನ್ನು ಕೊಟ್ಟಂತೆ ಮತ್ತೊಂದು ತಾಮ್ರಪಟದಿಂದ ತಿಳಿದುಬರುತ್ತದೆ—"ಸ್ವಪುಣ್ಯಫಲಾಭಿಕಾಂಕ್ಷಯಾ ತ್ರಿಲೋಕಭೂತಹಿತದೇಶಿನಃ ಧರ್ಮಪ್ರವರ್ತನಸ್ಯ ಅರ್ಹತಃ ಭಗವತಃ ಚೈತ್ಯಾಲಯಸ್ಯ ಭಗ್ನ ಸಂಸ್ಕಾರಾರ್ಚನ ಮಹಿಮಾರ್ಥಂ ಯಾಪನೀಯ ಸಂಘೇಭ್ಯಃ ಸಿದ್ಧಕೇದಾರೇ ದ್ವಾದಶ ನಿವರ್ತನಾನಿ ಕ್ಷೇತ್ರಂ ದತ್ತವಾನ್."[47] ಈ ಯಾಪನೀಯ ಸಂಪ್ರದಾಯದಲ್ಲಿಯೂ ದಿಗಂಬರ ಸಂಪ್ರದಾಯದಲ್ಲಿದ್ದಂತೆಯೇ ಅನೇಕ ಸಂಘ, ಗಣ, ಗಚ್ಛಗಳು ಇದ್ದವು. ಗುಬ್ಬಿ ತಾಲೂಕಿನ ತಾಮ್ರಪಟವೊಂದರಲ್ಲಿ ಯಾಪನೀಯ ಶಾಖೆಯ ನಂದಿ ಸಂಘ, ಪುನ್ನಾಗವೃಕ್ಷ ಮೂಲಗಣ, ಕೀರ್ತ್ಯಾಚಾರ್ಯಾನ್ವಯಗಳನ್ನು ಹೇಳಿ ಆ ಶಾಖೆಯಲ್ಲಿ ಆಗಿಹೋದ ಗುರುಪರಂಪರೆಯನ್ನು ಕೊಟ್ಟಿದೆ. ವಿಜಯಕೀರ್ತಿ ಎಂಬ ಮುನಿವರನು ಅನೇಕ ಜನರ ಕಷ್ಟಗಳನ್ನು ಹೋಗಲಾಡಿಸುತ್ತಿದ್ದನೆಂದೂ ವಿದ್ವಜ್ಜನರಿಗೆ ಆಧಾರಭೂತನಾಗಿದ್ದನೆಂದೂ ಅಲ್ಲಿ ಹೇಳಿದೆ.[48] ಯಾಪನೀಯ ಸಂಘದ ಜಯಕೀರ್ತಿದೇವನನ್ನು "ರಾಜೇಂದ್ರ ಚೂಡಾಮಣಿ ಚುಂಬಿತಾಂಘ್ರಿಃ"[49] ಎಂದು ಒಂದು ಶಾಸನದಲ್ಲಿ ಕರೆದಿದೆ.

ಇಷ್ಟು ಪ್ರಬಲವಾಗಿ ರಾಜರಿಂದ, ಜನತೆಯಿಂದ ಮಾನ್ಯತೆಯನ್ನು ಪಡೆದು ಅನೇಕ ಕ್ರಾಂತಿಕಾರಕ ಸುಧಾರಣೆಗಳಿಂದೊಡಗೂಡಿದ್ದ ಈ ಶಾಖೆಯು 13–14ನೇ ಶತಮಾನಗಳಿಂದ ಈಚೆಗೆ ಕರ್ನಾಟಕದಿಂದ ಲುಪ್ತವಾಗಿ ಹೋಯಿತು. ಈ ಶಾಖೆಗೆ ಅನ್ಯಮತಗಳ ಮಾತಿರಲಿ, ದಿಗಂಬರ ಜೈನರೇ ಪ್ರೋತ್ಸಾಹವನ್ನು ಕೊಡಲಾರದೆ ಹೋದರು. ಆ ಶಾಖೆಯವರನ್ನು ತಿರಸ್ಕಾರದಿಂದ ನೋಡಿದ್ದು ಉಂಟು. ಅದನ್ನು ಶುದ್ಧ ಜೈನವೆಂದು ಒಪ್ಪದೆ, 'ಜೈನಾಭಾಸ'[50]ವೆಂದೂ, ಬಹುಶಃ ತಂತ್ರ ಮಂತ್ರಾದಿಗಳನ್ನು ಅಭ್ಯಸಿಸಿದುದರಿಂದ 'ಗೋಪ್ಯ'ವೆಂದೂ ನಿಂದಿಸಿದ್ದುಂಟು.[51] ಇದಕ್ಕೆ ಬಹುಮಟ್ಟಿಗೆ ಕಾರಣವೆಂದರೆ, ಯಾವುದನ್ನು ಜೈನರ " inflexible conseıvatism " ಎಂದು ಕರೆದಿದ್ದಾರೋ ಆ ಸಂಪ್ರದಾಯಾಭಿಮಾನ. ಯಾಪನೀಯರ ಧರ್ಮಗ್ರಂಥಗಳಾವುವೂ ಈಗ ದೊರೆಯುವುದಿಲ್ಲ. ವ್ಯಾಕರಣ ಗ್ರಂಥವೊಂದನ್ನೂ, ಸ್ತ್ರೀಮುಕ್ತಿ ಮತ್ತು ಕೇವಲಿಭುಕ್ತಿಪ್ರಕರಣಗಳ ಮೇಲೆ ಎರಡು ಗ್ರಂಥಗಳನ್ನೂ ಬರೆದಿರುವ ಶಾಕಟಾಯನ ಈ ಯಾಪನೀಯ ಸಂಪ್ರದಾಯಕ್ಕೆ ಸೇರಿದವನಿರಬಹುದೆಂದು ಊಹಿಸಿದ್ದಾರೆ. (ಅವನ ವ್ಯಾಕರಣವು ದಿಗಂಬರರಲ್ಲಿ ಬಳಕೆಯುಲ್ಲಿದ್ದರೂ, ಆವನ ಇತರ ಎರಡು ಸಣ್ಣ ಕೃತಿಗಳು ಶ್ವೇತಾಂಬರರ ಸಂಕಲನಗಳಲ್ಲಿ

---

ಗ್ರಂಥಗಳೂ ಇದುವರೆಗೆ ಉಳಿದುಕೊಂಡು ಬಂದಿಲ್ಲ. 'ಕೂರ್ಚ' (> ಕುಚ್ಚು)ಎಂದರೆ ಚಾಮರ ಎಂದರ್ಥ. ಶ್ವೇತಾಂಬರ ಮುನಿಗಳು ಉಣ್ಣೆನೂಲಿನ ಕುಚ್ಚನ್ನೂ, ದಿಗಂಬರರು ನವಿಲುಗರಿಯ ಕುಚ್ಚನ್ನೂ ಹಿಡಿದಿರುತ್ತಾರೆ. ಈ 'ಕೂರ್ಚಕ'ರು ಯಾವ ರೀತಿಯ ಕುಚ್ಚನ್ನು ಹಿಡಿದಿರುತ್ತಿದ್ದರೋ ತಿಳಿಯದು.

[46] IA. VI. p. 24, 538 A.D.

[47] IA. VII. p. 34.

[48] EC. XII. Gb. 61, 812 A.D.

[49] BKI. I. i. 65, 1025 A.D.

[50] ಇಂದ್ರನಂದಿಯು ತನ್ನ ನೀತಿಸಾರದಲ್ಲಿ ಐದು 'ಜೈನಾಭಾಸ'ಗಳನ್ನು ಕೊಟ್ಟಿದ್ದಾನೆ-

ಗೋಪುಚ್ಛಕಃ ಶ್ವೇತವಾಸಾ ದ್ರಾವಿಡೋ ಯಾಪನೀಯಕಃ
ನಿಃಪಿಚ್ಛಕಶ್ಚೇತಿ ಪಂಚೈತೇ ಜೈನಾಭಾಸಾಃ ಪ್ರಕೀರ್ತಿತಾಃ ॥

[Jainism and Karnāṭaka Culture, p. 155.]

ಆಕಳಬಾಲದ ಕೂದಲಿನ ಕೂರ್ಚವುಳ್ಳವರು ಗೋಪುಚ್ಛಕರು. ಇವರದು ಕಾಷ್ಠಾಸಂಘ. ಶ್ವೇತವಾಸ = ಶ್ವೇತಾಂಬರ; ದ್ರಾವಿಡ = ದ್ರಾವಿಡ ಸಂಘಕ್ಕೆ ಸೇರಿದವರು ; ನಿಃಪಿಚ್ಛಕರು= ಕೂರ್ಚವನ್ನೇ ಉಪಯೋಗಿಸದಿದ್ದವರು.

[51] Jainism in South India, p. 169.

ದೊರಕುತ್ತವೆ). ಐಹೊಳೆಯಲ್ಲಿ ಬಸದಿಯೊಂದನ್ನು ಕಟ್ಟಿಸಿ, ಪುಲಕೇಶಿಯ ಸಾಹಸಗಳನ್ನು ತನ್ನ ಶಾಸನಕಾವ್ಯದಲ್ಲಿ ಹೊಗಳಿರುವ ರವಿಕೀರ್ತಿಯು ಈ ಯಾಪನೀಯ ಶಾಖೆಗೆ ಸೇರಿದವನಿರಬಹುದೆಂದು ಡಾ|| ಉಪಾಧ್ಯೆಯವರು ಊಹಿಸಿದ್ದಾರೆ.[52]

## ದಿಗಂಬರರು

ಕರ್ನಾಟಕದಲ್ಲಿ ಜೈನಧರ್ಮವೆಂದರೆ ಮುಖ್ಯವಾಗಿ ದಿಗಂಬರ ಸಂಪ್ರದಾಯ ಜೈನಧರ್ಮವೆಂದೇ ಅರ್ಥ. ಶ್ವೇತಾಂಬರ, ಯಾಪನೀಯ ಮುಂತಾದ ಶಾಖೆಗಳಿಗಿಂತ ಅತ್ಯಂತ ಪ್ರಬಲವಾಗಿದ್ದ ಜೈನಶಾಖೆಯಿದು. ಕ್ರಿಸ್ತ ಪೂರ್ವದ ಶತಕಗಳಲ್ಲಿಯೇ ಇವರು ಕರ್ನಾಟಕಕ್ಕೆ ಬಂದರು–ಭದ್ರಬಾಹುವಿನ ನೇತೃತ್ವದಲ್ಲಿ. ಬೌದ್ಧರಂತೆ ಇವರೂ ಮೊದಲು ಮೊದಲು ಬೆಟ್ಟಗುಡ್ಡಗಳಲ್ಲಿ ತಮ್ಮ ಕೇಂದ್ರಗಳನ್ನು ಸ್ಥಾಪಿಸಿಕೊಂಡು ಅಲ್ಲಿಂದ ಧರ್ಮವನ್ನು ಪ್ರಚಾರ ಮಾಡಿದಂತೆ ತೋರುತ್ತದೆ.[53] ಅಲ್ಲಿಯ ಗುಹೆಗಳು ಅವರಿಗೆ ಆಶ್ರಯ ನೀಡಿದವು ; ಶಾಂತವಾದ ವಾತಾವರಣವು ತಪಸ್ಸಿಗೆ ಅನುಕೂಲಕರವಾಗಿರುತ್ತಿತ್ತು. ಹೀಗೆ ಕರ್ನಾಟಕದಲ್ಲಿ ಅವರು ಆರಂಭದಲ್ಲಿ ಆರಿಸಿಕೊಂಡ ಸ್ಥಳಗಳು ಎರಡು-ಉತ್ತರ ಕರ್ನಾಟಕದಲ್ಲಿ ಕೊಪ್ಪಳ, ದಕ್ಷಿಣ ಕರ್ನಾಟಕದಲ್ಲಿ ಶ್ರವಣಬೆಳಗೊಳ. ಈ ಸ್ಥಳಗಳಲ್ಲಿ ದೊರಕುವ ಅತ್ಯಂತ ಪ್ರಾಚೀನ ಶಾಸನಗಳು ಏಳನೇ ಶತಮಾನದವಾದರೂ[54] ಅದಕ್ಕಿಂತ ಬಹು ಹಿಂದೆಯೇ ಅವು ಜೈನ ಕೇಂದ್ರಗಳಾಗಿದ್ದಿರಬೇಕು. ಕುಪಣ, ಕೊಪಣ ಎಂಬ ರೂಪಗಳು ಶಾಸನಗಳಲ್ಲಿ ಕಂಡುಬರುತ್ತವೆ. ನೃಪತುಂಗನ ಕವಿರಾಜಮಾರ್ಗದಲ್ಲಿ ಕನ್ನಡದ ತಿರುಳ್ ಎನ್ನಿಸಿಕೊಂಡ ಪ್ರದೇಶದ ಗಡಿಗಳಲ್ಲೊಂದು ಕೊಪ್ಪಳ.[55] ಶ್ರವಣಬೆಳಗೊಳದ ಶಾಸನಗಳಲ್ಲಿ ಇದನ್ನು 'ಆದಿತೀರ್ಥ'ವೆಂದೂ 'ಮಹಾತೀರ್ಥ'ವೆಂದೂ ಕರೆದಿದೆ. ದಂಡನಾಯಕ ಗಂಗರಾಜನು ಅನೇಕ ಜಿನಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ, ಹೊಸದಾಗಿ ಅನೇಕವನ್ನು ಕಟ್ಟಿಸಿದ್ದರಿಂದ " ಗಂಗವಾಡಿತೊಂಬತ್ತಱು ಸಾಸಿರಂ ಕೊಪಣಮಾದುದು " ಎಂದಿದೆ ಶಾಸನವೊಂದರಲ್ಲಿ.[56] ಕೊಪಣದಲ್ಲಿ ಅಸಂಖ್ಯಾತ ಜೈನದೇವಸ್ಥಾನಗಳಿದ್ದ ವಿಷಯ ಇದರಿಂದ ವ್ಯಕ್ತವಾಗುತ್ತದೆ. ರನ್ನನು ಅತ್ತಿಮಬ್ಬೆಯ ಚರಿತವನ್ನು ವರ್ಣಿಸುವಾಗ, ಅದು "ನೆಗೞ್ದ ಕೊಪಣಾಚಲದಂತೆ"[57] ಮಹತ್ತರವೂ ರಮ್ಯವೂ ಪೂಜನೀಯವೂ ಆಗಿತ್ತೆಂದು ಹೇಳುತ್ತಾನೆ. ಶ್ರವಣಬೆಳಗೊಳದಲ್ಲಿನ ಅತ್ಯಂತ ಪ್ರಾಚೀನ ಶಾಸನವೆಂದರೆ ಸು. 600ರ ಶಾಸನ.[58] (ಇದರ ಕಾಲವನ್ನು ಇನ್ನೂ ಸ್ವಲ್ಪ ಮುಂದೆ ಹಾಕಬಹು

---

52 Journal of the Bombay University (1933 May), p. 230.

53 ತಮಿಳುನಾಡಿನಲ್ಲೂ ಅಷ್ಟೆ. ಪಂಚಪಾಂಡವಮಲೈ, ವಳ್ಳಿಮಲೈ, ಆನೈಮಲೈ, ಕಳುಗುಮಲೈಗಳನ್ನು ಹೆಸರಿಸಬಹುದು.

54 EC. II. 1, C. 600 A.D. ; JISI, p. 374.

55 ಕವಿರಾಜಮಾರ್ಗ, 1.37—ಅದಱೊಳಗಂ ಕಿಸುವೊೞಲಾ। ವಿದಿತ ಮಹಾಕೊಪಣ ನಗರದಾ ಪುಲಿಗೆಱೆಯಾ॥ ಸದಭಿಸ್ತುತಮಪ್ಪೊಂಕುಂ। ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

56 EC. II. 127, 1115 A.D.

57 ಅಜಿತಪುರಾಣ, 12.6. ; ಈ ತೀರ್ಥಕ್ಷೇತ್ರದ ವಿವರಗಳಿಗೆ ನಾ. ಭಾ. ಶಾಸ್ತ್ರಿ ಅವರ 'ಕೊಪಣ–ಕೊಪ್ಪಳ' ಎಂಬ ಲೇಖನ ನೋಡಿ. [ಕ.ಸಾ.ಪ.ಪ. 22.3]. ಕೊಪ್ಪಳದಲ್ಲಿ ಅಶೋಕನ ಶಾಸನವಿರುವ ಗವಿಮಠದ ಬಂಡೆಗುಡ್ಡದ ಮೇಲೆ ನಿಂತು, ಜೈನರ 'ಕೊಪಣಾಚಲ' ಯಾವುದು ಎಂದು ವಿಚಾರಿಸಿದಾಗ ನನಗೆ ಉತ್ತರ ಸಿಗಲಿಲ್ಲ. ಅದೇ ಗುಡ್ಡದ ಒಂದು ಬಂಡೆಯ ಮೇಲೆ ಈಗ ಸ್ತ್ರೀದೇವತೆಯೆಂದು (?) ಪೂಜೆಗೊಳ್ಳುತ್ತಿರುವ ಬಾಹುಬಲಿ ವಿಗ್ರಹವನ್ನು ನೋಡಿದಾಕ್ಷಣ ಅದೇ ಹಿಂದಿನ ಕೊಪಣಾಚಲ ವೆಂಬುದು ಹೊಳೆಯಿತು. ಆ ಮಠದಲ್ಲಿರುವ 24 ಗೂಡುಗಳು ಈಗ ಸುಣ್ಣದಿಂದ ತುಂಬಿವೆ ಆದರೆ ಆ ಸಂಖ್ಯೆ ಧ್ವನಿಪೂರ್ಣ ವಾಗಿದೆ. ಆ ಊರಿನ ಒಳಗೆ ಇರುವ ಏಕೈಕ ಬಸದಿಯ ಅರ್ಚಕರು ಕೂಡ ಈಗ ವೀರಶೈವರದಾಗಿರುವ ಗವಿಮಠ ಮೊದಲು ಜೈನರದಾಗಿತ್ತೆಂಬ ವದಂತಿಯನ್ನು ತಿಳಿಸಿದ್ದು ನನ್ನ ಊಹೆಯನ್ನು ದೃಢಪಡಿಸಿತು. ಗವಿಮಠದ ಬಂಡೆಗುಡ್ಡ ಶ್ರವಣಬೆಳಗೊಳದ ಚಿಕ್ಕಬೆಟ್ಟವನ್ನು ನೆನಪಿಗೆ ತರುತ್ತದೆ.

58 EC.II. 1, C. 600 A.D.

ದೆಂದು ಫ್ಲೀಟ್ ಸೂಚಿಸುತ್ತಾರೆ.) ಅದರಲ್ಲಿ ಶ್ರವಣಬೆಳಗೊಳದ ಚಿಕ್ಕ ಬೆಟ್ಟವನ್ನು 'ಕಟವಪ್ರ' ಎಂದು ಕರೆದಿದೆ. ಇದು ಬಹುಶಃ ಕನ್ನಡದ 'ಕಟ್ವಪ್ಪು' ಎಂಬ ಪದದ ಸಂಸ್ಕೃತೀಕರಣವಿರಬೇಕು. ಕನ್ನಡ ಶಾಸನಗಳಲ್ಲಿ ಚಿಕ್ಕಬೆಟ್ಟವನ್ನು ಕಟ್ವಪ್ಪು ಎಂದೂ, ದೊಡ್ಡ ಬೆಟ್ಟವನ್ನು 'ಪೆರ್ಗಟ್ವಪ್ಪು' ಎಂದೂ ಕರೆದಿದೆ.[59] ಏಳನೇ ಶತಮಾನದ ಶಾಸನದಲ್ಲಿ 'ವೆಳ್ಗೊಳ ಅದ್ರಿ'[60] ಎಂದು ಚಿಕ್ಕ ಬೆಟ್ಟವನ್ನು ಕರೆದಿದೆ. ಬಹುಶಃ ಶ್ರವಣಬೆಳಗೊಳದಲ್ಲಿ ಇದ್ದ-ಈಗಲೂ ಇರುವ ಸುಂದರ ಕೊಳದಿಂದ ಆ ಪ್ರದೇಶಕ್ಕೆ ಮೊದಲು 'ವೆಳ್ಗೊಳ' (ಇದನ್ನು ಧವಳತಟಾಕ, ಶ್ವೇತಸರೋವರ ಎಂದು ಸಂಸ್ಕೃತೀಕರಿಸಿದ್ದಾರೆ) ಎಂಬ ಹೆಸರಿದ್ದು ಅದೊಂದು ಜೈನ ಕೇಂದ್ರವಾಗಿ ಪ್ರಸಿದ್ಧವಾದ ಮೇಲೆ ಬಹು ಈಚೆಗೆ 'ಶ್ರವಣಬೆಳಗೊಳ' ಎಂಬ ಹೆಸರು ಬಂದಿರಬೇಕು. ಆ ಕಾಲದಲ್ಲಿ ಜೈನರ ವಿಹಾರಸ್ಥಾನವಾಗಿ ಪವಿತ್ರಪ್ರದೇಶವೆಂದು ಪರಿಗಣಿತವಾದದ್ದು ಚಿಕ್ಕಬೆಟ್ಟ, ಅಥವಾ 'ಕಟ್ವಪ್ಪು.'[61] ದೊಡ್ಡ ಬೆಟ್ಟಕ್ಕೆ ಪ್ರಾಶಸ್ತ್ಯ ಬಂದದ್ದು ಹತ್ತನೇ ಶತಮಾನದಿಂದೀಚೆಗೆ, ಗೊಮ್ಮಟನ ವಿಗ್ರಹವನ್ನು ಕೊರೆಯಿಸಿಯಾದ ಮೇಲೆ. ಜೈನರು ಮೊದಮೊದಲು ಪರ್ವತಗಳ ಮೇಲೆ ಕೇಂದ್ರಗಳನ್ನು ಸ್ಥಾಪಿಸಿಕೊಂಡರೆಂಬುದಕ್ಕೆ ಇನ್ನೊಂದು ನಿದರ್ಶನವೆಂದರೆ ನಂದಿಬೆಟ್ಟಕ್ಕೆ ಈಶಾನ್ಯದಲ್ಲಿರುವ ಗೋಪಿನಾಥಗುಡ್ಡ. ಅದು ಈಗ ಜೈನ ಕೇಂದ್ರವಲ್ಲದಿದ್ದರೂ, ಎಂಟನೇ ಶತಮಾನವೊಂದರ ಶಾಸನದಿಂದ ಅಲ್ಲಿಯ ಬಸದಿಯನ್ನು ಶ್ರೀರಾಮ ಕಟ್ಟಿಸಿದನೆಂದೂ, ಕುಂತಿಯು ಅದನ್ನು ಹೊಸದುಮಾಡಿಸಿದಳೆಂದೂ, ಆ ಬಸದಿಯಿಂದಾಗಿ ಅದು ಪರಮ ಪವಿತ್ರಸ್ಥಳವೆಂದೂ, ಜಿನಮುನಿಗಳ ತಪಸ್ಸಿಗೆ ಬೇಕಾದ ಗುಹೆಗಳಿವೆಯೆಂದೂ ಹೇಳಿದೆ.[62]

## ಧರ್ಮಕ್ಕೆ ಪ್ರೋತ್ಸಾಹ

ಜೈನಧರ್ಮವು ಕರ್ನಾಟಕಕ್ಕೆ ಬರುವ ಹೊತ್ತಿಗೆ ಸರಿಸುಮಾರಾಗಿ ಬೌದ್ಧಧರ್ಮವೂ ಕಾಲಿಟ್ಟಿತ್ತು. ಆರಂಭದಲ್ಲಿ ಇವೆರಡಕ್ಕೂ ಸ್ವಲ್ಪ ತಿಕ್ಕಾಟ ನಡೆಯಿತೆಂದು ಕಾಣಿಸುತ್ತದೆ. ಗಂಗರ ಮೂಲಪುರುಷ ಕೊಂಗುಣಿವರ್ಮನು ಜಿನಮುನಿಗಳಾದ ಸಿಂಹನಂದಿಗಳಿಂದ ದತ್ತವಾದ ಖಡ್ಗದಿಂದ ಶಿಲಾಸ್ತಂಭವೊಂದನ್ನು ಕತ್ತರಿಸಿದ ಕಥೆ, ಬೌದ್ಧರನ್ನು ಜೈನರು ರಾಜರ ಸಹಾಯದಿಂದ ನಿರ್ಮೂಲಮಾಡಿದ ವಿಷಯವನ್ನು ಸೂಚಿಸುತ್ತದೆ ಎನ್ನುತ್ತಾರೆ ಡಾ|| ಸಾಲೆತ್ತೂರ್[63] ಅವರು. ಕದಂಬರು, ಗಂಗರು, ರಾಷ್ಟ್ರಕೂಟರು, ಚಾಳುಕ್ಯರು, ಹೊಯ್ಸಳರು–ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೇ ಶತಮಾನದವರೆಗೆ ಬೆಳೆದು ಬೆಳಗಿತು. ಮೇಲೆ ನೋಡಿದಂತೆ ಗಂಗರಿಗೆ ರಾಜ್ಯ ಬಂದದ್ದೇ ಜೈನ ಗುರುಗಳೊಬ್ಬರಿಂದ.[64] ಗಂಗರ ರಾಷ್ಟ್ರೀಯ ಧರ್ಮವೇ ಜೈನಧರ್ಮವಾಗಿತ್ತೆಂದರೆ ತಪ್ಪಾಗಲಾರದು. ಕದಂಬರು ವೈದಿಕರಾಗಿದ್ದರೂ ಜೈನಧರ್ಮಕ್ಕೆ ಬೇಕಾದಷ್ಟು ಪ್ರೋತ್ಸಾಹ ಕೊಟ್ಟಿದ್ದರು.[65] ಆ ಕಾಲದ ತಾಮ್ರಪಟವೊಂದರ ಕೊನೆಯಲ್ಲಿ–''ಎಲ್ಲಿ ಜಿನೇಂದ್ರಪೂಜೆ ನಡೆಯು

---

59 EC. II. 35, 800 A.D.

60 EC. II. 31, C. 650 A.D.

61 ನಡ್ಡಾರಾಧನೆಯಲ್ಲಿ 'ಕಟ್ವಿಪ್ಪುನಾಡು' ಎಂದು ಶ್ರವಣಬೆಳಗೊಳದ ಸುತ್ತಮುತ್ತಣ ಪ್ರದೇಶವನ್ನು ಕರೆದಿದೆ. ಒಂಬತ್ತನೇ ಶತಮಾನದ ಶಾಸನವೊಂದರಲ್ಲಿ ''........ಬಾಹು ಚಂದ್ರಗುಪ್ತ ಮುನಿಪತಿ ಚರಣಮುದ್ರಾಂಕಿತ ವಿಶಾಳಶ....ಮಾನ ಜಗಲ್ಲಲಾಮಾಯಿತ ಶ್ರೀ ಕಟ್ವಪ್ಪುತೀರ್ಥ ಸನಾಥ ಬೆಳ್ಗೊಳನಿವಾಸಿ ..." ಎಂದಿದೆ. [EC. III. Sr. 147, C. 900 A.D.] ಎಂದರೆ, ತೀರ್ಥಸ್ಥಾನವೆಂದರೆ ಕಟ್ವಪ್ಪುಬೆಟ್ಟ; ಊರಿನ ಹೆಸರು 'ಬೆಳ್ಗೊಳ'. ಚಿಕ್ಕಬೆಟ್ಟಕ್ಕೆ ಹೀಗೆ ಪ್ರಾಶಸ್ತ್ಯ ದೊರೆತದ್ದೂ ಸಹಜವೇ. ಅದು ವಾಸಯೋಗ್ಯವಾಗಿರುವಂತೆ ದೊಡ್ಡ ಬೆಟ್ಟ ಅಲ್ಲ. ಚಿಕ್ಕಬೆಟ್ಟದ ಮೇಲಿರುವಂತೆ ಮರಗಳು, ಗುಹೆಗಳು, ಪುಟ್ಟ ಕೊಳಗಳು, ಸಮತಟ್ಟು ಪ್ರದೇಶವು ದೊಡ್ಡಬೆಟ್ಟದ ಮೇಲೆ ಅಷ್ಟಾಗಿ ಇಲ್ಲ.

62 EC. X. Cb. 29, C. 750 A D.

63 Mediaeval Jainism, p. 16.

64 EC. VII. Sh. 4, 1122 A.D.

65 IA. VI. p. 23, C. 450 A.D. ; ಅದೇ. ಪು. 24, 538 A.D.

ತ್ತದೆಯೋ ಆ ದೇಶವು ವೃದ್ಧಿಯಾಗುತ್ತದೆ, ನಗರಗಳು ನಿರ್ಭಯವಾಗಿರುತ್ತವೆ, ಆ ದೇಶದ ರಾಜನು ಊರ್ಜಿತನಾಗುತ್ತಾನೆ'' ಎಂದಿದೆ.[66] ರಾಷ್ಟ್ರಕೂಟರು ಶಿವಭಕ್ತರಾಗಿದ್ದರೂ ಜೈನಧರ್ಮದ ಕಡೆಗೆ ಅವರ ಒಲವು ವಿಶೇಷವಾಗಿದ್ದಿತು. ಕ್ರಿ. ಶ. 980ರ ಸೌಂದತ್ತಿಯ ಶಾಸನವೊಂದರಲ್ಲಿ ಬಸದಿಯೊಂದನ್ನು 'ರಟ್ಟರ ಪಟ್ಟ ಜಿನಾಲಯ'ವೆಂದು ಕರೆದು ರಾಷ್ಟ್ರಕೂಟರಿಂದ ಜಿನಧರ್ಮವು ಪಡೆದ ಪ್ರೋತ್ಸಾಹದ ವಿವರಗಳನ್ನು ಕೊಟ್ಟಿದೆ.[67] ಏಳನೇ ಶತಮಾನದ ಅನೇಕ ಬರಹಗಳಲ್ಲಿ ಅನೇಕ ತಮಿಳು ಸನ್ಯಾಸಿಗಳ ಹೆಸರುಗಳು ಕಂಡುಬರುತ್ತವೆ.[68] ಕರ್ನಾಟಕದಲ್ಲಿ ಜೈನಧರ್ಮದ ಏಳಿಗೆ ತನ್ನ ಔನ್ನತ್ಯವನ್ನು ಮುಟ್ಟಿ ತಮಿಳುನಾಡಿನಿಂದ ಜೈನಸಾಧಕರನ್ನು ಆಕರ್ಷಿಸಿತು. ಆ ಕಾಲದ ಶಾಸನಗಳಲ್ಲಿಯೂ, ತಾಮ್ರಪಟಗಳಲ್ಲಿಯೂ ಜೈನಸನ್ಯಾಸಿಗಳನ್ನು ಪ್ರಶಂಸಿಸುವಾಗ 'ವಾದದಲ್ಲಿ ಗಟ್ಟಿಗರು' ಮುಂತಾದ ವಿಶೇಷಣಗಳು ಹೆಚ್ಚಾಗಿ ಬರುವುದಿಲ್ಲ. ಅದು ಜೈನಧರ್ಮದ ಸಂತೃಪ್ತಿಯ ಕಾಲ. ಹತ್ತನೇ ಶತಮಾನದಲ್ಲಿ ಗಂಗಚಮೂಪತಿ ಚಾವುಂಡರಾಯ,[69] ರಾಷ್ಟ್ರಕೂಟ ರಾಜ್ಯದ ಶಂಕರಗಂಡ,[70] ಚಾಳುಕ್ಯರಾಜ್ಯದಲ್ಲಿದ್ದ ಅತ್ತಿಮಬ್ಬೆ[71] ಮುಂತಾದವರ ತಪಸ್ಸಿಗೆ ಸಮನಾದ ಜೈನನಿಷ್ಠೆಯ ಸಾರವನ್ನು ಉಂಡು ಜೈನಧರ್ಮವು ಪುಷ್ಟವಾಯಿತು. ಜೈನಧರ್ಮವನ್ನು ಜನಪ್ರಿಯವಮಾಡಲು ಜೈನಕವಿಗಳು ಕನ್ನಡದಲ್ಲಿ ಕಾವ್ಯಗಳನ್ನು ಬರೆದರು, ಸಂಸ್ಕೃತ ಗ್ರಂಥಗಳಿಗೆ ಟೀಕೆಗಳನ್ನು ಬರೆದರು. ಜಡರು, ಬಾಲಕರು, ವಿದ್ವಾಂಸರು ತತ್ವಾರ್ಥವನ್ನು ಕಲಿತು ಪಾಪವನ್ನು ಕಳೆದುಕೊಂಡು ಸಮ್ಯಕ್ತ್ವವನ್ನು ಪಡೆಯಲೆಂದು ತತ್ವಾರ್ಥಸೂತ್ರಕ್ಕೆ ಕನ್ನಡದಲ್ಲಿ ದಿವಾಕರಣಂದಿ ಮುನಿಗಳು ವೃತ್ತಿಯನ್ನು ಬರೆದರೆಂದು ಶಾಸನವೊಂದರಲ್ಲಿ ಹೇಳಿದೆ.[72] ಗೋಪಣಂದಿ ಎಂಬ ಮುನಿಗಳನ್ನು ''ಜಿನಧರ್ಮಮಂ ಗಂಗನೃಪಾಳರಂದಿನ ವಿಭೂತಿಯ ರೂಢಿಯನೆಯ್ದೆ ಮಾಡಿದಂ''[73] ಎಂಬುವಲ್ಲಿ, ಕರ್ನಾಟಕದಲ್ಲಿ ಗಂಗರ ಪ್ರಾಬಲ್ಯದ ಕಾಲದಲ್ಲಿ ಜೈನಧರ್ಮವು ಬಹು ಪ್ರಬಲವಾಗಿದ್ದಿತು ಎಂಬುದು ಸೂಚಿತವಾಗುತ್ತದೆ. (ಮುಂದಿನ ಹನ್ನೆರಡನೇ ಶತಮಾನದ ಶಾಸನಗಳಲ್ಲಿ 'ಪಳಿಯ ನಾಳ್ಕೆವೊಲಾದುದು'[74] ಎಂದು ಗಂಗರ ಕಾಲದ ಜೈನಧರ್ಮದ ಪ್ರಾಬಲ್ಯವನ್ನು ಆಗಾಗ್ಗೆ ನೆನೆದಿರುವುದುಂಟು.) ಹನ್ನೆರಡನೇ ಶತಮಾನದಲ್ಲಿಯೂ ಶಾಂತಲೆ,[75] ಕನಕಿಯಬ್ಬರಸಿ[76] ಮುಂತಾದವರಿಂದ ಈ ಧರ್ಮಕ್ಕೆ ಪ್ರೋತ್ಸಾಹ ದೊರಕಿತು. ಆದರೂ ಜೈನಧರ್ಮದ ಇಳಿಮುಖದ ಚಿಹ್ನೆಗಳು ಹನ್ನೊಂದನೇ ಶತಮಾನದ ಮಧ್ಯದಲ್ಲಿ ಕಾಣಿಸಿಕೊಳ್ಳಲಾರಂಭವಾಗಿ ಹನ್ನೆರಡನೇ ಶತಮಾನದ ಕೊನೆಯ ಹೊತ್ತಿಗೆ ಅವು ಸ್ಪಷ್ಟವಾಗಿ ಕಣ್ಣಿಗೆ ಗೋಚರವಾಗುತ್ತವೆ.

---

66 IA. VI. p. 25, C. 480 A.D.
67 JBBRAS. X, p. 204.
68 EC. II. Nos. 5, 6, 7., C. 700 A.D.
69 EC. II. 281, C. 983 A.D.
70 JISI. No. 46, 964 A.D.
71 BKI. I. i. 53, 1007 A.D.
72 EC. VIII. Nr. 57, C. 1077 A.D. ವಿವರಗಳಿಗೆ ನೋಡಿ : ಕರ್ಣಾಟಕ ಕವಿಚರಿತೆ, I. ಪು. 79–80
73 EC. V. Cn. 148, 1094 A.D.
74 EC. II. 73, 1118 A.D.
75 EC. II. 132, 1123 A.D.
76 EC. VIII. Sb. 233, 1139 A.D.

## ಕಠೋರ ತಪಸ್ಸು

ಹನ್ನೆರಡನೇ ಶತಮಾನದ ಶಾಸನವೊಂದರಲ್ಲಿ ಶ್ರೀಪಾಲದೇವ ಎಂಬ ಮುನಿಪನ್ನು ಹೀಗೆ ಹೊಗಳಿದೆ—"ಜಗತ್ತಿನ ನೈರ್ಮಲ್ಯಕ್ಕಾಗಿ ಆವನು ಕೊಳಕ ; ತ್ರೈಳೋಕ್ಯ ರಾಜ್ಯಶ್ರೀಯ ಲಾಭಕ್ಕಾಗಿ ಅವನು ಬಡವ ; ಜಗತ್ತಿನ ತಾಪಹರಣಕ್ಕಾಗಿ ಬೆಂಕಿಯ ಮಧ್ಯೆ ತಪಸ್ವಿ."[77] ಪಂಪ ಹೇಳುವ 'ಅತೀಂದ್ರಿಯ ಸುಖ'ವನ್ನು ಪಡೆಯುವುದಕ್ಕಾಗಿ ಸಕಲವನ್ನೂ ತ್ಯಾಗಮಾಡುವ ದಿಗಂಬರ ಸನ್ಯಾಸಿಯು ಅತ್ಯಂತ ಸಂಯಮ ಪೂರ್ಣವಾದ ಜೀವನವನ್ನು ಬದುಕಬೇಕಾಗುತ್ತದೆ. ಅಹಿಂಸೆಯೇ ಪರಮಧರ್ಮವೆಂದು ಹೇಳುವ ಜೈನಧರ್ಮಾವಲಂಬಿಯಾದ ಮುನಿಯು ಪ್ರಾಣಿಗಳಿಗೆ ಹಿಂಸೆಯಾದೀತೆಂದು ಸ್ನಾನಮಾಡಕೂಡದು. ಮಲಧಾರಿದೇವ ಎಂಬುವರನ್ನು ಅನೇಕ ಶಾಸನಗಳಲ್ಲಿ ಹೊಗಳಿರುವುದು ಇದಕ್ಕಾಗಿಯೇ. ಸ್ನಾನ ಮಾಡದೆ ಇದ್ದದ್ದರಿಂದ ಅವನ ಮೈಮೇಲೆ ಕೊಳಕು ತುಂಬಿಕೊಂಡು ಅದು ಕವಚದಂತೆ ಇದ್ದಿತಂತೆ. ಅವನು ಮೈಯನ್ನು ಒಮ್ಮೆಯೂ ತುರಿಸುವುದಿಲ್ಲ, ನಿದ್ದೆ ಬಂದರೆ ಮಗ್ಗುಲಿಕ್ಕುವುದಿಲ್ಲ, ಬಾಗಿಲಿನಿಂದ ಈಚೆಗೆ ಬರುವುದಿಲ್ಲ, ಯಾವಾಗಲೂ ಅವನು ತಪೋಮಗ್ನ.[78] ಆತ ಕುಕ್ಕುಟಾಸನ[79]ವನ್ನು ಬಿಟ್ಟು ಕುಳಿತ ಭಂಗಿಯನ್ನು ಬದಲುಮಾಡುತ್ತಿರಲಿಲ್ಲ. ಆತ ಮರೆತಾದರೂ ಲೌಕಿಕದ ವಾರ್ತೆಯನ್ನಾಡುತ್ತಿರಲಿಲ್ಲ.[80] ಮಲಧಾರಿದೇವರ ನಿಷ್ಠಾಪೂರ್ಣವಾದ ಘೋರತಪಸ್ಸಿನ ವರ್ಣನೆ ಎಷ್ಟು ವಿಧವಾಗಿ ಎಷ್ಟು ಶಾಸನಗಳಲ್ಲಿ ಬಂದಿದೆಯೆಂದರೆ, ಅವರು ಅತ್ಯಂತ ಕಠೋರವಾದ ದಿಗಂಬರ ಸನ್ಯಾಸ ಜೀವನದ ಜೀವಂತ ಆದರ್ಶವಾಗಿ ಪರಿಣಮಿಸಿದ್ದರು. ದಿಗಂಬರ ಮುನಿಗಳು ಆಹಾರದ ವಿಷಯದಲ್ಲೂ ತುಂಬಾ ಎಚ್ಚರಿಕೆಯಿಂದಿರ ಬೇಕಾಗಿತ್ತು. ಜೈನಸನ್ಯಾಸಿಯೊಬ್ಬರು ಮೂರು ಮುಷ್ಟಿ ಆಹಾರದಿಂದ ತೃಪ್ತರಾಗುತ್ತಿದ್ದುದರಿಂದ ಅವರಿಗೆ ತ್ರಿಮುಷ್ಟಿ ಮುನೀಂದ್ರ ಎಂದು ಹೆಸರಿಟ್ಟಿದ್ದರು.[81] ಭಿಕ್ಷೆ ಎತ್ತಿ ಆಹಾರವನ್ನು ಸಂಪಾದಿಸಿ ಕೈಯಲ್ಲಿಯೇ ('ಪಾಣಿಪಾತ್ರ') ಭುಂಜಿಸುತ್ತಿದ್ದರು. ಭಿಕ್ಷೆ ಎತ್ತುವ ರೀತಿ, ಯಾವ ಮನೆಗಳಿಗೆ ಹೋಗಬೇಕು, ಹೋಗ ಬಾರದು, ಎಂತಹ ಆಹಾರವನ್ನು ವಿಸರ್ಜಿಸಬೇಕು ಅಥವಾ ಸ್ವೀಕರಿಸಬೇಕು—ಇವುಗಳ ವಿಷಯದಲ್ಲೆಲ್ಲ ಬಹು ಕಠಿಣವಾದ ನಿಯಮಗಳನ್ನು ಜೈನಗ್ರಂಥಗಳು ಹಾಕಿವೆ.[82] ಬೌದ್ಧಸನ್ಯಾಸಿಗಳು ಮಾಂಸವನ್ನು ತಿನ್ನಬಹುದೇ ಎಂಬ ಪ್ರಶ್ನೆ ಬಂದಾಗ, ಸನ್ಯಾಸಿಯ ಮುಂದೆ ಅಥವಾ ಸನ್ಯಾಸಿಗಾಗಿಯೇ ಕೊಂದ ಪ್ರಾಣಿಯ ಮಾಂಸವನ್ನು ಬಿಟ್ಟು ಬೇರೆ ಮಾಂಸವನ್ನು ತಿನ್ನಬಹುದು ಎಂದು ಬುದ್ಧನು ಹೇಳಿದಂತೆ ಗ್ರಂಥಗಳಲ್ಲಿದೆ.[83] ಜೈನಧರ್ಮವು ಸಂಪೂರ್ಣವಾಗಿ ಶಾಕಾಹಾರವನ್ನೇ ವಿಧಿಸಿದೆ. ಬ್ರಹ್ಮಚರ್ಯದ ವಿಷಯದಲ್ಲೂ ಅತಿ ಕಠೋರವಾದ ನಿಯಮಗಳಿದ್ದುವು. ಪರಸ್ತ್ರೀಯರ ಜೊತೆಯಲ್ಲಲ್ಲ, ಸಹಧರ್ಮಿಗಳಾದ ಕಂತಿಯರೊಡನೆಯೂ ಅವರು

---

[77] EC. IV. Ng. 100, 1145 A.D.

[78] EC. II. 351, 1119 A.D. ; 117, 1123 A.D.

[79] ಕುಕ್ಕುಟಾಸನ—ಇದೊಂದು ರೀತಿಯ ಧ್ಯಾನಭಂಗಿ. ಮಲಗುವಾಗಲೂ ಗುರುವಿನ ಅಪ್ಪಣೆಯನ್ನು ಪಡೆದು, ಎಡಪಾರ್ಶ್ವದ ಮೇಲೆ ಮಲಗಿ ತನ್ನ ಕಾಲುಗಳನ್ನು ಮೆತ್ತಗೆ ಕೋಳಿ ಚಾಚುವಂತೆ ಚಾಚಬೇಕಾಗಿತ್ತು ('ಕುಕ್ಕುಡಿಪಾಯ ಪಸಾರಣಂ'). "ತುಱಿಸರ್ ಮಲಮಂ ಧರಿಯಿಪರ್ ಒಱಗರ್ ಕುಕ್ಕುಟದ ತೆಱದೆ ಕುಳ್ಳಿಪ್ಪರ್ ತಾಂ ಒಱಗಿಪ್ಪರೊಂದೆ ಮಗ್ಗುಲೊಳುಱೆ ರಾತ್ರಿ ಪ್ರತಿಮೆ ನಿಲ್ವರ್ ಆರ್ಹತ ಮುನಿಗಳ್" (ಸಮಯ ಪರೀಕ್ಷೆ, 7. 9).

[80] EC. II. 117, 1123 A.D.

[81] EC. II. 69, C. 1100 A.D.

[82] ವಿವರಗಳಿಗೆ—History of Jaina Monachism, pp. 168—78.

[83] ಹನ್ನೆರಡನೇ ಶತಮಾನದಲ್ಲಿ ಬೌದ್ಧರು ತಂಗೂಳನ್ನು ಉಣ್ಣಬೇಕೆಂಬ ವಿಧಿಯನ್ನು ಕಲ್ಪಿಸಿಕೊಂಡು ಪಾಲಿಸು ತ್ತಿದ್ದುದನ್ನು ಬ್ರಹ್ಮಶಿವ ಖಂಡಿಸಿದ್ದಾನೆ (ಸಮಯ ಪರೀಕ್ಷೆ, 14.65).

ಮಾತನಾಡುವಂತಿಲ್ಲ. ಭೂಮಿಯ ಮೇಲಿನ ವಧುಗಳನ್ನು ತಂದೆಯ ವಧು ಎಂದು ಭಾವಿಸಿದ್ದ ವಿನಯನಂದಿದೇವರ ಚರಿತವು ನಾಡಿನಲ್ಲೆಲ್ಲ ಪ್ರಚುರವಾಗಿತ್ತೆಂದು ಒಂದು ಶಾಸನ ಹೇಳುತ್ತದೆ.[84] ಮುನಿಗಳು ನಿರಲಂಕೃತರಾಗಿದ್ದರು. ಅವರ ನುಡಿಗಳೇ ನಿಜವಾದ ಚಿನ್ನದ ಒಡವೆಗಳು, ಮನಸ್ಸೇ ಒಳ್ಳೆಯ ರತ್ನಗಳನ್ನಿಟ್ಟಿರುವ ಕರಂಡಕ.[85] ಇಷ್ಟು ಸಂಯಮಪೂರ್ಣವಾದ ಬಾಳನ್ನು ಕಂಡ ಆ ಕಾಲದ ಜನರಲ್ಲಿ ಕೆಲವರು ಆಶ್ಚರ್ಯಪಟ್ಟಿರಬೇಕು. ಅಷ್ಟೇ ಅಲ್ಲ, ಕೆಲವರು ಜುಗುಪ್ಸೆಪಟ್ಟು ನಗ್ನತೆಯನ್ನು ಪ್ರಶ್ನಿಸಿರಬೇಕು. ಇಂತಹ ಸಂದೇಹಗಳನ್ನು ಸೋಮದೇವ ಪರಿಹರಿಸಲು ಪ್ರಯತ್ನಿಸಿದ್ದಾನೆ. ಅವನ ಪ್ರಕಾರ ಮನುಷ್ಯನಿಗೆ ನಗ್ನತೆ ಎಂಬುದೇ ಸಹಜವಾದುದು, ವಸ್ತ್ರಗಳನ್ನು ಧರಿಸುವುದೇ ಕೃತಕವಾದುದು. ಜನನದ ಕಾಲದಲ್ಲಿಯೂ, ಭೋಗದ ಕಾಲದಲ್ಲಿಯೂ ಮನುಷ್ಯ ನಗ್ನನಾಗಿರುತ್ತಾನೆ. ನಗ್ನತೆ ದೂಷ್ಯವಾದರೆ ನಗ್ನನಾದ ಶಿವನನ್ನೂ ಗೋವನ್ನೂ ಏಕೆ ಪೂಜಿಸಬೇಕು ? ಸಮಸ್ತರಿಗೂ ಸನ್ಮಂಗಳವನ್ನೇ ಹಾರೈಸುತ್ತಿರುವ, ಜ್ಞಾನ ತಪಸ್ಸುಗಳಿಂದ ಪವಿತ್ರಾತ್ಮರಾಗಿರುವ ಋಷಿಗಳು ಅಪವಿತ್ರರಾದರೆ ಮತ್ತಾವುದು ಪವಿತ್ರ ?[86]—ಹೀಗೆ ಪ್ರಶ್ನಿಸಿದ್ದಾನೆ ಸೋಮದೇವ. ಪಂಪನ ಆದಿಪುರಾಣದಲ್ಲೂ ಇದೇ ಪ್ರಶ್ನೆ ಬಂದಿದೆ. ಕೂದಲನ್ನು ಕಿತ್ತುಕೊಂಡು, ಉಟ್ಟುದನ್ನು ಬಿಟ್ಟುಬಿಟ್ಟು, ಸುರಲೋಕಸುಖವನ್ನು ಉಣ್ಣುವೆವೆಂಬ ಬತ್ತಲೆಗರ ಮಾತು ಕೇಳಬಾರದು, ಇರುವವರೆಗೆ ಇಂದ್ರಿಯಗಳ ಇಷ್ಟವನ್ನು ಸಲಿಸಿ ವಸಂತದಲ್ಲಿ ಚಿಗುರನ್ನು ಕಚ್ಚಿದ ಕೋಗಿಲೆಯಂತೆ ಸುಖಿಸಬೇಕು ಎಂದು ಚಾರ್ವಾಕವಾದಿಯು ನುಡಿದಾಗ ಅದಕ್ಕೆ ಸ್ವಯಂಬುದ್ಧನೆಂಬುವನು ಸಮರ್ಪಕವಾದ ಉತ್ತರವನ್ನು ಕೊಟ್ಟು ರಾಜನಿಂದ ಜಯಪತ್ರವನ್ನು ಪಡೆದನು[87]—ಎಂದು ಪಂಪ ವರ್ಣಿಸಿದ್ದಾನೆ.

## ವಿದ್ವತ್ತು

ಆ ಮುನಿಗಳಲ್ಲಿ ಕೆಲವರ ವಿದ್ವತ್ತು ಅಪಾರವಾಗಿತ್ತು. ಅವರಲ್ಲಿ ಕೆಲವರಿಗೆ ಜೈನಗ್ರಂಥಗಳಲ್ಲಿ ಮಾತ್ರವಲ್ಲ, ಎಲ್ಲ ದರ್ಶನಗಳಲ್ಲೂ, ಎಲ್ಲ ಕಲೆಗಳಲ್ಲೂ, ಅನೇಕ ಭಾಷಾಸಾಹಿತ್ಯಗಳಲ್ಲೂ ಅದ್ಭುತವಾದ ಪರಿಶ್ರಮವಿತ್ತು. ಪ್ರಭಾಚಂದ್ರರೆಂಬ ಮುನಿಗಳು 'ಜಿನವಕ್ತ್ರ ನಿರ್ಗತ ಪಾತ್ರ[88]ಕಳಾಪ್ರಪೂರ್ಣ'ರಾಗಿದ್ದರು. ಅನಂತವೀರ್ಯರೆಂಬ ವಿದ್ವಾಂಸರು ವ್ಯಾಕರಣ, ನಿಘಂಟು, ಗಣಿತ, ವಾತ್ಸ್ಯಾಯನ, ಜ್ಯೋತಿಷ, ಶಕುನ,

---

[84] EC. IV. Ng. 19, C. 1118 A.D.

[85] EC. VII. Sh. 4, 1122 A.D.

[86] ಸುಖಾನುಭವನೇ ನಗ್ನೋ ನಗ್ನೋ ಜನ್ಮಸಮಾಗಮೇ ।
ಬಾಲ್ಯೇ ನಗ್ನಃ ಶಿವೋ ನಗ್ನೋ ನಗ್ನಶ್ಛಿನ್ನಶಿಖೋ ಯತಿಃ ॥
ನಗ್ನತ್ವಂ ಸಹಜಂ ಲೋಕೇ ವಿಕಾರೋ ವಸ್ತ್ರವೇಷ್ಟನಂ ।
ನಗ್ನಾ ಚೇಯಂ ಕಥಂ ವಂದ್ಯಾ ಸೌರಭೇಯೀ ದಿನೇ ದಿನೇ ॥
.... ಜ್ಞಾನಧ್ಯಾನ ತಪಃ ಪೂತಾಃ ಸರ್ವಸತ್ವಹಿತೇರತಾಃ ।
ಕಿಮನ್ಯನ್ಮಂಗಲಂ ಲೋಕೇ ಮುನಯೋ ಯದ್ಯಮಂಗಲಂ ॥
(ಯಶಸ್ತಿಲಕ ಚಂಪೂ, ಆಶ್ವಾಸ—5).
[Yaśastilaka and Indian Culture, p. 328.]

[87] ಆದಿಪುರಾಣ, 2. 7-23.

[88] ಆದಿವೃಷಭಜಿನನೇ ಲಿಪಿ, ಗಣಿತಶಾಸ್ತ್ರ, ನಿಘಂಟು, ಛಂದಸ್ಸು, ಅಲಂಕಾರ, 64 ಕಲೆಗಳು, ಅರ್ಥಶಾಸ್ತ್ರ, ಕಾಮಶಾಸ್ತ್ರ, ಸಾಮುದ್ರಿಕ, ಆಯುರ್ವೇದ, ಹಸ್ತಿಶಾಸ್ತ್ರ, ರತ್ನಪರೀಕ್ಷಾ ಶಾಸ್ತ್ರ–ಮುಂತಾದ ಶಾಸ್ತ್ರಗಳ ಪ್ರವರ್ತಕ ಎಂದು ಜೈನರು ನಂಬುತ್ತಾರೆ. [ಆದಿಪುರಾಣ, 8. 59-61]
ಅವರ ಪ್ರಕಾರ ಪರಮಜಿನೇಂದ್ರನ ವದನದಿಂದ ಹೊರಟ ವಾಣಿಯೇ ಸರಸ್ವತಿ, ಸರಸ್ವತಿಗೆ ಬೇರೆ ಸ್ತ್ರೀರೂಪವಿಲ್ಲ.

ಛಂದ, ಮನು, ಗಾಂಧರ್ವ, ಅಲಂಕಾರ, ಮಹಾಕಾವ್ಯ, ನಾಟಕ, ಅಧ್ಯಾತ್ಮ, ಅರ್ಥಶಾಸ್ತ್ರ, ಸಿದ್ಧಾಂತ, ಪ್ರಮಾಣಗಳಲ್ಲಿ ಸರ್ವಜ್ಞರಾಗಿದ್ದರು.[89] ಶಬ್ದಶಾಸ್ತ್ರದಲ್ಲಿ ಪೂಜ್ಯಪಾದರು, ತರ್ಕದಲ್ಲಿ ಅಕಳಂಕರು, ಕವಿತೆಯಲ್ಲಿ ಸಮಂತಭದ್ರರು ಸಮರ್ಥರಾಗಿದ್ದರೆ ರಾಮಸೇನ ಪಂಡಿತರಿಗೆ ಇವಿಷ್ಟರಲ್ಲೂ ಪರಿಶ್ರಮವಿತ್ತು.[90] ಶ್ರೀ ಪುಷ್ಪಸೇನ ಸಿದ್ಧಾಂತದೇವರ ವಕ್ತ್ರೇಂದುವಿನ ಸಂಗಮದಿಂದ ಜೈನೀಯಳಾದ ಸರಸ್ವತಿಯು 'ಸರ್ವಶುಕ್ಲಾ' ಆಗಿ ಶೋಭಿಸುತ್ತಿದ್ದಳು.[91] ಹನ್ನೆರಡನೇ ಶತಮಾನದ ಶಾಸನದಲ್ಲಿ 'ಚೂಳಾಮಣಿ' ಎಂಬ ಕಾವ್ಯದ ಕರ್ತೃವಾದ ಶ್ರೀ ವರ್ಧಮಾನ ಎಂಬ ವಿದ್ವಾಂಸನನ್ನು ದಂಡಿಯೇ ಬಹುವಾಗಿ ಹೊಗಳಿದನೆಂದು ಹೇಳಿದೆ.[92] ಭಟ್ಟಾಕಳಂಕ ತನ್ನ ಶಬ್ದಾನುಶಾಸನದಲ್ಲಿ ಹೇಳಿರುವ 96,000 ಗ್ರಂಥಪರಿಮಿತಿಯುಳ್ಳ 'ಚೂಡಾಮಣಿ' ಎಂಬ ಕನ್ನಡ ಕೃತಿ ಇದೇ ಇರಬೇಕೆಂದು ಒಮ್ಮೆ ನಂಬಲಾಗಿದ್ದಿತು. ಆದರೆ ಅದು ಶ್ರೀವರ್ಧದೇವರ್ ಎನ್ನುವವರು ತಮಿಳಿನಲ್ಲಿ ಬರೆದ ಚೂಳಾಮಣಿ ಎಂಬ ಕಾವ್ಯವನ್ನು ಸೂಚಿಸುತ್ತದೆ ಎಂದು ಶ್ರೀ ಆರ್. ನರಸಿಂಹಾಚಾರ್ಯರು ಹೇಳಿದ್ದಾರೆ.[93] ಜೈನರಲ್ಲಿ ಈ ಅಪಾರ ವಿದ್ವತ್ತು ಬೆಳೆಯಲು, ಪ್ರಚಾರವಾಗಲು ಕಾರಣ, ಅವರ 'ಶಾಸ್ತ್ರದಾನ'[94]ವೂ ಒಂದು. ಹರಿಯವ್ವೆ ಎಂಬಾಕೆಯನ್ನು ಹೊಗಳುತ್ತ, ಅವಳು 'ಓದಲು ಶಾಸ್ತ್ರಮನ್' ಕೊಡುತ್ತಿದ್ದಳೆಂದು ಒಂದು ಶಾಸನದಲ್ಲಿ[95] ಹೇಳಿದೆ. ಪೊನ್ನನ ಶಾಂತಿಪುರಾಣದ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ಶಾಸ್ತ್ರದಾನಕೊಡಿಸಿದ ಅತ್ತಿಮಬ್ಬೆಯ ಧರ್ಮಕಾರ್ಯ ಈಗಾಗಲೇ ಸರ್ವವಿದಿತವಾದ ಸಂಗತಿಯಾಗಿದೆ. ಈ ಸನ್ಯಾಸಿಗಳಲ್ಲಿ ಕೆಲವರು ಸರಸಕವಿಗಳೂ ಆಗಿದ್ದರು. ಇವರಲ್ಲಿ ಅನೇಕರು ರಾಜಪೂಜ್ಯರೂ, ಎಷ್ಟೋ ಸಾರಿ ರಾಜನ ಮೇಲೆ ಪ್ರಭಾವ ಬೀರಬಲ್ಲವರೂ ಆಗಿದ್ದರು. ಹೊಯ್ಸಳ ರಾಜ ವಿನಯಾದಿತ್ಯನು ಶಾಂತಸೇನ ಮುನಿಗಳನ್ನು ಅರ್ಚಿಸಿ ಬೇಕಾದಷ್ಟು ಐಶ್ವರ್ಯವನ್ನು ಪಡೆದಂತೆ ಒಂದು ಶಾಸನದಲ್ಲಿ ಹೇಳಿದೆ.[96]

## ಕಂತಿಯರು

ಪುರುಷ ಸನ್ಯಾಸಿಗಳನ್ನು ನಿರ್ಗ್ರಂಥರು, ಸವಣರು ಎಂದು ಕರೆದರೆ ಸನ್ಯಾಸಿನಿಯರನ್ನು ಕಂತಿಯರು, ಅಜ್ಜಿಯರು ಎಂದು ಕರೆಯುತ್ತಿದ್ದರು (ಸಂ. ಆರ್ಯಾ > ಪ್ರಾ. ಅಜ್ಜಾ > ಅಜ್ಜಿ). ಬುದ್ಧ ಮೊದಮೊದಲು ಸ್ತ್ರೀಯರಿಗೆ ಸನ್ಯಾಸವನ್ನು ಕೊಡಲು ಒಪ್ಪಲಿಲ್ಲವೆಂದು ತಿಳಿದುಬರುತ್ತದೆ. ಆದರೆ ಬುದ್ಧನಿಗಿಂತ ಹಿಂದೆಯೇ ಜೈನ

89 BKI. I. i. 61, 1024 A.D.

90 EC. VII. SK. 124, 1077 A.D.

91 ಶ್ರೀ ಪುಷ್ಪಸೇನ ಸಿದ್ಧಾಂತದೇವ ವಕ್ತ್ರೇಂದು ಸಂಗಮಾತ್
ಜಾತಾವಭಾತಿ ಜೈನೀಯಂ ಸರ್ವಶುಕ್ಲಾ ಸರಸ್ವತೀ ॥ [EC. VIII. Nr. 39, C. 1077]
ದಂಡಿಯ ಪ್ರಸಿದ್ಧವಾದ ಸರಸ್ವತೀ ಸ್ತೋತ್ರವನ್ನು ಇಲ್ಲಿ ನೆನೆಯಬಹುದು.

92 "ಯ ಏವಮುಪಶ್ಲೋಕಿತೋ ದಂಡಿನಾ ॥
ಜಹ್ನೋಃ ಕನ್ಯಾಂ ಜಟಾಗ್ರೇಣ ಬಭಾರ ಪರಮೇಶ್ವರಃ
ಶ್ರೀವರ್ಧದೇವ ಸಂಧತ್ಸೇ ಜಿಹ್ವಾಗ್ರೇಣ ಸರಸ್ವತೀಂ ॥"
"ಪರಮೇಶ್ವರನು ಗಂಗೆಯನ್ನು ಜಟೆಯ ತುದಿಯಲ್ಲಿ ಧರಿಸಿದರೆ, ಶ್ರೀವರ್ಧದೇವನು ಸರಸ್ವತಿಯನ್ನು ನಾಲಗೆಯ ತುದಿಯಲ್ಲಿ ಧರಿಸಿದ್ದಾನೆ ಎಂದು ದಂಡಿಯು ಶ್ಲೋಕಿಸಿದ್ದಾನೆ."
[EC. II. 67, 1129 A.D.]

93 R. Narasimhachar : History of Kannada Literature, p. 5.

94 ಜೈನರ ಪ್ರಕಾರ–"ಆಹಾರಾಭಯ ಭೈಷಜ್ಯ ಶಾಸ್ತ್ರದಾನ"—ಆಹಾರದಾನ, ಅಭಯದಾನ, ಭೈಷಜ್ಯ ಎಂದರೆ ಔಷಧಿಯ ದಾನ, ಶಾಸ್ತ್ರದಾನ ಎಂದು ದಾನಗಳು ನಾಲ್ಕು.

95 EC. VI. Mg. 22, 1129 A.D.

96 EC. II. 67, 1129 A.D.

ಧರ್ಮವು ಸ್ತ್ರೀಯರಿಗೆ ಸನ್ಯಾಸವನ್ನು ಕೊಡಲು ಒಪ್ಪಿತ್ತು. ಆದಿವೃಷಭನ ಹತ್ತಿರ ಬ್ರಾಹ್ಮೀ ಮತ್ತು ಸುಂದರಿಯರ ನೇತೃತ್ವದಲ್ಲಿ ಮೂರು ಲಕ್ಷ ಸನ್ಯಾಸಿನಿಯರಿದ್ದರೆಂದು ಹೇಳುತ್ತಾರೆ. ಇವರೂ 'ಲೋಯ' ಎಂದರೆ ಕೇಶವಿಚ್ಛೇದನ ವನ್ನು ಮಾಡಿಕೊಳ್ಳಬೇಕಿತ್ತು. ಆದರೆ ಇವರಿಗೆ ನಗ್ನತೆಯನ್ನು ವಿಧಿಸಿಲ್ಲ. ಬಿಳಿಯ ಬಟ್ಟೆಗಳನ್ನು ಹಾಕಿಕೊಳ್ಳ ಬೇಕು ; ಬಟ್ಟೆಗಳನ್ನು ಬಿಸಿಲಲ್ಲಿ ಒಣಗಿಸಬಹುದು, ಆದರೆ ನೀರಿನಲ್ಲಿ ಹಾಕಿ ಒಗೆಯಕೂಡದು ಎಂಬ ನಿಯಮಗಳಿ ದ್ದುವು. ಇವರು ಈ ಜನ್ಮದಲ್ಲಿ ತಪಸ್ಸಿನಿಂದ ಕರ್ಮಕ್ಷಯ ಮಾಡಿಕೊಂಡು ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಿ ಮೋಕ್ಷವನ್ನು ಸಂಪಾದಿಸಬಹುದು.

ಅಜ್ಜಿ ಅಥವಾ ಕಂತಿ[97]ಯರಿಗೆ ಅನೇಕ ಶಿಷ್ಯಶಿಷ್ಯೆಯರಿದ್ದರು. ಬಹುಶಃ ಇವರಿಗೇ ಪ್ರತ್ಯೇಕ ಮಠಗಳಿ ದ್ದುವು. ವಿಕ್ರಮಪುರದ ಜಿನಾಲಯದಲ್ಲಿ 'ಅಜ್ಜಿ'ಯರು ಇದ್ದಂತೆ ಶಾಸನಗಳಲ್ಲಿ ಉಕ್ತವಾಗಿದೆ.[98] ಸಿಸಾಮಿಯಬ್ಬೆ ಎಂಬಾಕೆ ತನ್ನ ಸಾವು ಸಮೀಪಿಸಿತೆಂದು ತಿಳಿದು, ತನ್ನ ತಲೆಯ ಕೂದಲನ್ನು ಕಿತ್ತುಕೊಂಡು ಪ್ರಭಾವತಿಕಂತಿಯ ರೆಂದು ಹೆಸರಿಟ್ಟುಕೊಂಡು ಸನ್ಯಸನ ವಿಧಿಯಿಂದ ಮಡಿಯುತ್ತಾಳೆ.[99] ಸನ್ಯಾಸವನ್ನು ಸ್ವೀಕರಿಸಿದ ಮೇಲೆ ಹಿಂದಿನ ಹೆಸರನ್ನು ಬದಲಾಯಿಸುವ ಸಂಪ್ರದಾಯ ಹಿಂದೂಗಳಲ್ಲಿರುವ ರೀತಿ ಜೈನರಲ್ಲಿದ್ದಂತೆ ಕಂಡುಬರುವುದಿಲ್ಲ. ಆದ್ದರಿಂದ ಮೇಲಿನ ನಿದರ್ಶನವನ್ನು ಒಂದು ಅಪವಾದವೆಂದು ಭಾವಿಸಬೇಕಾಗುತ್ತದೆ. ಸಮಗ್ರ ತಪೋನಿಧಿ, ದಾನಚಿಂತಾಮಣಿ, ದಯಾದಮಕ್ಷಮಾಶ್ರೀಮುಖಲಕ್ಷ್ಮಿ, ವಿನಯಾರ್ಣವ ಚಂದ್ರಿಕೆ–ಇತ್ಯಾದಿ ವಿಶೇಷಣಗಳಿಂದ ಪ್ರಕೀರ್ತಿತಳಾಗಿರುವ ಶ್ರೀಮತಿಗಂತಿಯು ಸಮಾಧಿಮರಣವನ್ನು ಹೊಂದಿದಾಗ ಅವಳ ಶಿಷ್ಯೆ ಮಾಂಕಬ್ಬೆಗಂತಿಯರು ತನ್ನ ಗುರುವಿಗೆ ನಿಸಿದಿಗೆಯನ್ನು ಮಾಡಿಸುತ್ತಾಳೆ.[100] ರಾತ್ರಿಮತಿಕಂತಿ ಎಂಬಾಕೆಗೆ ಬಮ್ಮಗಾವುಂಡನೆಂಬ ಶಿಷ್ಯನಿದ್ದನೆಂದು ಶಾಸನ ವೊಂದರಿಂದ ತಿಳಿದುಬರುತ್ತದೆ.[101] ತಮಿಳುನಾಡಿನಲ್ಲಿ ಕಂತಿಯರ ಸಂಘಗಳೇ ಇದ್ದು ಅನೇಕ ದೊಡ್ಡ ಮಠಗಳಿಗೆ ಪ್ರಧಾನಾಧಿಕಾರಿಗಳಾಗಿದ್ದರು.[102] ಕರ್ನಾಟಕದಲ್ಲಿ ಇಂತಹ ನಿದರ್ಶನಗಳು ಕಡಮೆ.

## ಚಾತುರ್ಮಾಸ್ಯ

ಜೈನ ಸನ್ಯಾಸಿಗಳು ಮಳೆಗಾಲವನ್ನು ಬಿಟ್ಟು ಉಳಿದ ಕಾಲಗಳಲ್ಲೆಲ್ಲಾ ಸಂಚರಿಸಬೇಕೆಂಬ ನಿಯಮವಿದೆ. ಅವರು ಯಾವ ಸ್ಥಳದ ವಿಷಯದಲ್ಲಿಯೂ ಅನುರಕ್ತತೆಯನ್ನು ಬೆಳಸಿಕೊಳ್ಳಕೂಡದೆಂಬುದೇ ಇದಕ್ಕೆ ಪ್ರಧಾನ ಕಾರಣ. 'ಏಕವಿಹಾರಿ'ಯಾಗಿ, ಎಂದರೆ ಏಕಾಂಗಿಯಾಗಿ ಅಥವಾ 'ಋಷಿ ಸಮುದಾಯಂಬೆರಸು' ಎಂದರೆ ಸಾಮೂಹಿಕವಾಗಿ "ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಂ ಎಂಬೀ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳ"ಲ್ಲಿ[103] ಸಂಚರಿಸುತ್ತ ತಪಸ್ಸನ್ನಾಚರಿಸುತ್ತಿದ್ದರು.

---

97 ಅಜ್ಜಿ ಅಥವಾ ಕಂತಿ ಒಂದೇ ಆದರೂ ಡಾ॥ ದೇಸಾಯಿಯವರು ಇವರಿಬ್ಬರಿಗೂ ಸ್ವಲ್ಪ ವ್ಯತ್ಯಾಸಮಾಡುತ್ತಾರೆ. ಜೈನವ್ರತವನ್ನು ಸ್ವೀಕರಿಸಿ ಸಂಸಾರತ್ಯಾಗಮಾಡಿದ ಸಾಮಾನ್ಯವರ್ಗದ ಸ್ತ್ರೀಯರು ಅಜ್ಜಿಯರು. ಕಠೋರ ತಪಸ್ಸನ್ನು ಕೈಕೊಂಡು ಸಾಧನೆಯಲ್ಲಿ ಮುಂದುವರಿದವರು ಕಂತಿಯರು (JISI. p.168). ಈ ವ್ಯತ್ಯಾಸಕ್ಕೆ ಶಾಸನಗಳಲ್ಲಿ ಆಧಾರ ವಿಲ್ಲವೆಂದು ಕಾಣಿಸುತ್ತದೆ. ತಮಿಳುನಾಡಿನಲ್ಲಿ ಇವರನ್ನು ಕುರತ್ತಿಯಾರ್, ಕುರತ್ತಿ ಅಡಿಗಳ್ (< ಸಂ. ಗುರು) ಎಂದು ಕರೆಯುತ್ತಾರೆ. ಈ ಕುರತ್ತಿಯಾರರ ವಿವರಗಳಿಗೆ ಡಾ॥ ಪಿ. ಬಿ. ದೇಸಾಯಿಯವರ "Kurattiyārs in Tamilnad" ಎಂಬ ಲೇಖನವನ್ನು ನೋಡಿ (Journal of Indian History, Vol. 36, p. 216).

98 BKI. I. ii. 179, 1085 A.D.

99 EC. VIII. Nr. 45, C. 950 A.D.

100 EC. II. 351, 1119 A.D.

101 JISI, p. 169.

102 JISI, p. 76

103 ವಡ್ಡಾರಾಧನೆ, ಪು. 144.

ಗ್ರಾಮದಲ್ಲಿ ಒಂದು ರಾತ್ರಿ, ನಗರದಲ್ಲಿ ಐದು ರಾತ್ರಿ, ಅಡವಿಯಲ್ಲಿ ಹತ್ತು ರಾತ್ರಿ ಅವರು ತಂಗಬಹುದಾಗಿದ್ದಿತು.[104] ಕುಮಾರಣಂದಿ ಭಟಾರರು "ಕಾಮ ಪುರ ಬಿದ ಕಂಡದ ಮಡಂಬ ಪಟ್ಟನನ್ತಾಭಿಮುಖಗಳಿಯರ್ ಕ್ರಮದಿಂದ" ವಿಹಾರಿಸುತ್ತಿದ್ದ ವಿಷಯ ಶಾಸನವೊಂದರಲ್ಲಿ ಬಂದಿದೆ.[105] ಏಕವಿಹಾರಿಯಾಗಿ ಸಂಚರಿಸುತ್ತಿದ್ದ ಗುಹೆಯಭಟ್ಟಾರಕರನ್ನು ಶಾಸನವೊಂದರಲ್ಲಿ ವಿಶೇಷವಾಗಿ ಸ್ತುತಿಸಿದೆ. ಹುಲಿಗಳ ಗರ್ಜನೆಗೆ ಹೆದರದೆ ಗುಹೆಯಲ್ಲೆ ಉಳಿದ, ಪಕ್ಷೋಪವಾಸಿಗಳೂ, ಪಾಪಹರರೂ ಆದ ಅವರು ತಮ್ಮ ತಪಸ್ಸಿನಿಂದ ಭೂಲೋಕವು ತಮ್ಮ ಅಡಿಗೆರಗುವಂತೆ ಮಾಡಿದ್ದರೆಂದು ಹೇಳುತ್ತದೆ.[106] 'ವಡ್ಡಾಚಾರ್ಯ'ರೆಂಬ ಋಷಿಗಳು "ಸಕಳ ರಿಷಿ ಸಮುದಾಯ"ದೊಡನೆ ಅರ್ಹಂತನ ಸಮವಸರಣವನ್ನು ಅನುಕರಿಸುವಂತೆ ವರ್ತಿಸುತ್ತಿದ್ದರೆಂದು ಒಂದು ಶಾಸನದಲ್ಲಿ ಹೇಳಿದೆ.[107] ತೀರ್ಥಂಕರನು ಕೇವಲಜ್ಞಾನವನ್ನು ಪಡೆದನಂತರ ದೇಶದ ನಾನಾ ಭಾಗಗಳಲ್ಲಿ ಸಂಚರಿಸುತ್ತ ಉಪದೇಶಮಾಡಲು ಆರಂಭಿಸಿದಾಗ ನೆರೆಯುತ್ತಿದ್ದ ಸಭೆಗೆ 'ಸಮವಸರಣ' ಎಂದು ಹೆಸರು.

ಮಳೆಗಾಲದಲ್ಲಿ ನಾಲ್ಕು ತಿಂಗಳು ಮಾತ್ರ ಒಂದು ಕಡೆ ಮುನಿಗಳು ವಾಸಿಸಬೇಕು. ಇದಕ್ಕೆ 'ಚಾತುರ್ಮಾಸ್ಯ'ವೆನ್ನುತ್ತಾರೆ (ಹಿಂದೂಗಳಲ್ಲೂ ಈ ಪದ್ಧತಿ ಇದೆ. ಬೌದ್ಧರು ಇದನ್ನು 'ವಸ್ಸ' ಎಂದು ಕರೆಯುತ್ತಾರೆ. ವಸ್ಸ<ಸಂ. ವಾಸ). ಮಹಾವೀರನೇ "ಮಳೆಗಾಲದ ಒಂದು ತಿಂಗಳು, ಇಪ್ಪತ್ತು ರಾತ್ರಿಗಳು" ಕಳೆದನಂತರ ಈ ಪದ್ಧತಿಯನ್ನು ಆರಂಭಿಸಿದನೆಂದು ಹೇಳುತ್ತಾರೆ. ಇದು ಮುಂದೆ ಜೈನಮುನಿಗಳಿಗೆ ಒಂದು ನಿಯಮವಾಗಿ ಪರಿಣಮಿಸಿತು. ಆಷಾಢದ ಹುಣ್ಣಿಮೆಯಿಂದ ಹಿಡಿದು ಮಾರ್ಗಶಿರದ ಹತ್ತನೆ ದಿನದ ತನಕ (ಜೂನ್ ಮಧ್ಯಭಾಗದಿಂದ ಅಕ್ಟೋಬರ್ ಮಧ್ಯದವರೆಗೆ) ಅವರು 'ವಸ್ಸಾವಾಸ' (=ವರ್ಷಾವಾಸ)ವನ್ನು ಪಾಲಿಸುತ್ತಿದ್ದರು.[108] ಆ ಸಮಯವನ್ನು ಅವರು ಅಭ್ಯಾಸ, ಧ್ಯಾನ, ಉಪವಾಸಾದಿಗಳಲ್ಲಿ[109] ಕಳೆಯಬೇಕಿದ್ದಿತು. ಈ ವರ್ಷಾವಾಸದ ವಿಷಯವು

---

104 ಈ ಸಂಪ್ರದಾಯಕ್ಕೆ ಮಹಾವೀರನೇ ಆದ್ಯಪ್ರವರ್ತಕನೆಂದು ಹೇಳುತ್ತಾರೆ.

105 EC. IX. Bn. 95, C. 950 A.D.

[ಸಂಚಾರದ ವಿಷಯವನ್ನು ಹೇಳುವ, ವಡ್ಡಾರಾಧನೆಯ ಸೂತ್ರಪ್ರಾಯವಾದ ಮೇಲಿನ ವಾಕ್ಯ ಈ ಶಾಸನದಲ್ಲಿಯೂ ಬಂದಿದೆ. ಕೊರೆಯುವುದರಲ್ಲೋ, ಓದುವುದರಲ್ಲೋ ಕೆಲವು ತಪ್ಪುಗಳಾಗಿವೆ. ಕಾಮ–ಗ್ರಾಮ. 'ನಗರ'ದ ಬದಲು 'ಪುರ'ವಿದೆ. ಬಿದ–ಖೇಡ. ಕಂಡದ–ಖರ್ವಡ. ನ್ತಾಭಿಮುಖ–ದ್ರೋಣಾಮುಖ.]

106 EC. IV. Ng. 67, C. 1060 A.D. (ಕೊಪ್ಪದ ಗ್ರಾಮಕ್ಕೆ ಪಶ್ಚಿಮದ ಬಂಡೆಯ ಮೇಲಿದೆ ಈ ಶಾಸನ). "ತಳಮಳಗನಾಗಿ ಪುಲಿಗಳ ಗಳಗರ್ಜನೆಗಾದಮಳ್ಕಿ ಗುಹೆಯಿಂದಮಣಂ। ತಳರದೆ ನೆಲೆಸಿಪ್ಪ ಮನೋಬಳಮುರ್ಬ್ಬಿಗಗುರ್ವು ಗೊಹೆಯ ಭಟ್ಟಾರಕರನ್ ॥ ಪಕ್ಷೋಪವಾಸಿಗಳ್ ಪಾಪಕ್ಷಯಕರ ಮೂರ್ತಿಗಳ್ ಗುಹಾವಾಸಿಗಳ। ತ್ಯಕ್ಷುಂಣ ಚಕಿತರಿವರೆನ್ದೀ ಕ್ಷಿತಿ ಪೊಗಟ್ದಿಪುದು ಗೊಹೆಯ ಭಟ್ಟಾರಕರನ್ ॥ ಪಡೆದುದು ನೊಟಿಂಬವಾಡಿಯುಮೊಡನೊಡನೀ ದಡಿಗವಾಡಿಯುಂ ಧರ್ಮಮನೋ। ಗಡಿಸದ ತಪದಿಂ ಭುವನಮನಡಿಗೆಱಗಿಸಿ ನೆಗಟ್ದಿ ಗೊಹೆಯ ಭಟ್ಟಾರಕರನ್ ॥"

ಸಂಚಾರದ ಕಾಲದಲ್ಲಿ ಉಳಿದಿದ್ದರೋ ಅಥವಾ ಮಳೆಗಾಲದಲ್ಲಿ ನಾಲ್ಕು ತಿಂಗಳು ಈ ಗುಹೆಯಲ್ಲಿ ಉಳಿದಿದ್ದರೋ ಶಾಸನದಿಂದ ಸ್ಪಷ್ಟವಾಗುವುದಿಲ್ಲ. ಮಳೆಗಾಲದ ವಾಸದಲ್ಲಿ (ಚಾತುರ್ಮಾಸ) ಸನ್ಯಾಸಿ ಏಕಾಂಗಿಯಾಗಿರಕೂಡದೆಂದು ಜೈನಧರ್ಮ ಗ್ರಂಥಗಳು ನಿಯಮಿಸಿರುವುದರಿಂದ ಬಹುಶಃ ಸಂಚಾರದ ಕಾಲದಲ್ಲಿ ಅವರು ಆ ಗುಹೆಯಲ್ಲುಳಿದಿದ್ದರೆಂದು ಭಾವಿಸಬೇಕು.

107 BKI. I. i. 78, 1045 A.D.

108 ವಡ್ಡಾರಾಧನೆಯ ಒಂದು ಕಥೆಯಲ್ಲಿ ಸುಕೌಶಲಸ್ವಾಮಿಯೂ ಅವನ ಗುರುಗಳೂ ಗ್ರಾಮ ನಗರ ಇತ್ಯಾದಿಗಳಲ್ಲಿ ವಿಹಾರಿಸುತ್ತಾ ಬಂದು ಮೊಗ್ಗಳಗಿರಿ ಎಂಬ ಪರ್ವತದಲ್ಲಿ ನಾಲ್ಕು ತಿಂಗಳು ಮಳೆಗಾಲವನ್ನು ಕಳೆದ ವಿಷಯ ಬಂದಿದೆ (ಪು. 43).

109 ವರ್ಷದ ಎಲ್ಲಾ ಕಾಲದಲ್ಲಿಯೂ ಜಪಾನುಷ್ಠಾನಗಳನ್ನು ಮಾಡಲಾಗದ ಜೈನ ಸಂಸಾರಿಗಳು ಈಗಲೂ 'ಚಾತುರ್ಮಾಸ'ದಲ್ಲಿ ಉಪವಾಸಾದಿ ವ್ರತಗಳನ್ನು ಕೈಗೊಳ್ಳುತ್ತಾರೆ.

[Jaina Community-A Social Survey, p. 360.]

ಐಹೊಳೆಯಲ್ಲಿನ ಶಾಸನವೊಂದರಲ್ಲಿ[110] ಬಂದಿದೆ. ಶ್ರೀ ಸೂರ್ಯಕರ್ತಭಟಾರರೂ ಬಾಳಕರ್ತರ ಭಟಾರರೂ "ಚಾತ್ರುರ್ಮಾಸಮಿಟ್ಟರ್'' (=ಚಾತುರ್ಮಾಸವಿದ್ದರು) ಎಂದು ಅಲ್ಲಿ ಹೇಳಿದೆ.

## ಚಾತುರ್ವರ್ಣ ಶ್ರವಣಸಂಘ

ಜೈನಮುನಿಗಳ ಸಾಮೂಹಿಕ ಜೀವನದಲ್ಲಿ ಸಂಘದ ನಿಯಮಗಳ ಪರಿಪಾಲನೆಗೆ ವಿಶೇಷವಾದ ಪ್ರಾಮುಖ್ಯತೆಯನ್ನು ಕೊಡಲಾಗಿತ್ತು. ಮುನಿಸಮುದಾಯದ ಮುಖ್ಯಸ್ಥನ ಮಾರ್ಗದರ್ಶನದಲ್ಲಿ ಉಳಿದ ಮುನಿಗಳು ಬದುಕಬೇಕಿತ್ತು. ಯಾರಾದರೂ ಸಮುದಾಯದ ನಿಯಮವನ್ನು ಮೀರಿ ನಡೆದರೆ ಅವರನ್ನು ಓಡಿಸಬೇಕು ಎಂದು ಹನಸೋಗೆಯ ಶಾಸನವೊಂದು ಹೇಳುತ್ತದೆ.[111] 'ಚಾತುರ್ವರ್ಣ ಶ್ರವಣಸಂಘ' ಎಂಬ ಮಾತು ಅನೇಕ ಶಾಸನಗಳಲ್ಲಿ ಬರುತ್ತದೆ. ಮುನಿಗಳಿಗೆ (ಅಥವಾ ಮಠಗಳಿಗೆ) ಮತ್ತು ಜೈನ ಸಮಾಜಕ್ಕೆ ಸಂಪರ್ಕವನ್ನು ಕಲ್ಪಿಸಲು ಮಾಡಿದ ಪ್ರಯತ್ನಗಳಲ್ಲೊಂದು ಇದು. ಜನಸಾಮಾನ್ಯರಲ್ಲಿ ಜೈನಧರ್ಮ ಪ್ರಸಾರಮಾಡಲು, ಅವರಲ್ಲಿ ಜೈನಧರ್ಮದ ಮೇಲಿನ ಶ್ರದ್ಧೆ ಕುಂದದಂತೆ ಮಾಡಲು ಅನುಸರಿಸಿದ ಮಾರ್ಗಗಳಲ್ಲೊಂದು ಇದು. ಸನ್ಯಾಸಿ, ಸನ್ಯಾಸಿನಿ, ಜೈನಗೃಹಸ್ಥ, ಜೈನಗೃಹಿಣಿ—ಇವರೇ ಆ ಸಂಘದ ಅಂಗಗಳು.[112] ಈ ವ್ಯವಸ್ಥೆ ಕ್ರಿಸ್ತಶಕದ ಆದಿಯಲ್ಲಿಯೇ ಕಂಡುಬರುತ್ತದೆ.[113] ಚಾಮಕಬ್ಬೆ ಎಂಬುವಳನ್ನು ''ಚಾತುರ್ವರ್ಣ ಶ್ರವಣಸಂಘಕಾಧಾರ''ವೆಂದು ಕರೆದಿದೆ.[114] ಶಿವಮೊಗ್ಗ ಜಿಲ್ಲೆಯ ಶಾಸನದಲ್ಲಿ ''ಕುಂತಳಾಪುರದೊಳು ಚೈತ್ಯಾಲಯಮಂ ಮಾಡಿ ದೇವರ ಪೂಜಾವಿಧಾನಕ್ಕಂ ಚಾತುರ್ವರ್ಣ ಸಂಘ ಸಮುದಾಯ ಚತುಸ್ಸಮಯದಾಹಾರ[115] ದಾನಕ್ಕಂ'' ದಾನಕೊಟ್ಟು ಆ ಬಸದಿಯನ್ನು ಸಮುದಾಯದ ಮುಖ್ಯಸ್ಥಾನವಾಗಿ ಮಾಡಲಾಗಿದೆ.[116] ನೇಮಿಚಂದ್ರ ಪಂಡಿತದೇವರನ್ನು "ಚಾತುರ್ವರ್ಣ ಶ್ರವಣಸಂಘಾಧಾರ''ರೆಂದು ಹೊಗಳಿದೆ. ಈ ಸಂಘದ ರಚನೆ, ಕಾರ್ಯಕಲಾಪಗಳು, ಸಮಾಜದಲ್ಲಿ ಅದಕ್ಕಿದ್ದ ಸ್ಥಾನ—ಈ ವಿಷಯದಲ್ಲಿ ವಿವರಗಳು ಈಗ ಸಿಗುವಂತಿಲ್ಲ.

## ಸಂಘ, ಗಣ, ಗಚ್ಛ, ಅನ್ವಯ

ಜೈನಮುನಿಗಳ ಹೆಸರನ್ನು ಹೇಳುವಾಗ ಅವರ ಸಂಘ, ಗಣ, ಗಚ್ಛ, ಅನ್ವಯ—ಇವುಗಳ ಜೊತೆಗೆ, ಒಂದೆರಡು ಕಡೆ 'ಬಳಿ'ಗಳನ್ನು ಹೇಳುವ ಸಂಪ್ರದಾಯವು ಬಹುಕಾಲದಿಂದಲೂ ಕಂಡುಬರುತ್ತದೆ (ತಮಿಳುನಾಡಿನಲ್ಲಿ ದ್ರಾವಿಡ ಸಂಘವೆಂಬ ಸಂಘವಿದ್ದರೂ ಈ ಸಂಪ್ರದಾಯ ಅಲ್ಲಿ ಕಂಡುಬರುವುದಿಲ್ಲ).[117] ಇವು ಹೇಗೆ ಹುಟ್ಟಿ

---

110 BKI. I. i. 18, C. 865 A.D.

111 EC. IV. Yd. 28, C. 1100 A.D.

112 ವಡ್ಡಾರಾಧನೆಯಲ್ಲಿ ಕಾರ್ತಿಕ ಋಷಿಗಳು "ಚಾತುರ್ವರ್ಣ್ಯದ ಮನೆ"ಗಳಲ್ಲಿ ಭಿಕ್ಷೆ ಎತ್ತುತ್ತಿದ್ದರೆಂದು ಹೇಳಿದೆ (ಪು. 112). ಇಲ್ಲಿ ಚಾತುರ್ವರ್ಣ ಎಂದರೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು. ಜೈನರಲ್ಲೂ ಈ ವರ್ಣಕಲ್ಪನೆಯಿದೆ. "ಮನುಷ್ಯಜಾತಿಯೊಂದೇ, ವೃತ್ತಿಭೇದದಿಂದ ನಾಲ್ಕು ಭೇದಗಳಾದವು" ಎನ್ನುತ್ತಾರೆ ಜಿನಸೇನಾಚಾರ್ಯರು (ಸಂಸ್ಕೃತ ಆದಿಪುರಾಣ, ಪರ್ವ 38, 45–46). "ಮನುಷ್ಯಜಾತಿ ತಾನೊಂದೆ ವಲಂ" ಎಂಬ ಪಂಪನ ಹೇಳಿಕೆಯನ್ನು ಇಲ್ಲಿ ಸ್ಮರಿಸಬಹುದು (ಆದಿಪುರಾಣ, 15.14).

113 Jainism in North India, p. 201.

114 EC. XV. Hn. 67, C. 950 A.D.

115 ಜೈನ, ಬೌದ್ಧ, ವೈಷ್ಣವ, ಶೈವ—ಇವೇ ನಾಲ್ಕು ಸಮಯ ಅಥವಾ ಧರ್ಮಗಳು.

116 EC. VII. Sh. 64, C. 1112 A.D.

117 JISI, p. 75.

ಕೊಂಡುವು ? ಒಂದಕ್ಕೂ ಇನ್ನೊಂದಕ್ಕೂ ವ್ಯತ್ಯಾಸವೇನು ?—ಈ ವಿಷಯವಾಗಿ ಅನೇಕ ಕಡೆ ಚರ್ಚೆಗಳಾಗಿದ್ದರೂ ಸಮರ್ಪಕವಾದ ನಿರ್ಣಯಕ್ಕೆ ಬರಲು ಸಾಧ್ಯವಾಗಿಲ್ಲ. ಶಾಸನಗಳಲ್ಲಿ ಕಂಡುಬಂದಿರುವ ಸಂಘ, ಗಣ, ಗಚ್ಛಾದಿಗಳ ಒಂದು ಪಟ್ಟಿಯನ್ನು ಕೆಳಗೆ ಕೊಡುತ್ತೇವೆ.

ಸಂಘಗಳು : ಮೂಲ, ನಂದಿ, ಯಾಪನೀಯ, ಯಾಪನೀಯನಂದಿ, ದ್ರಾವಿಡ, ಶ್ರೀಸಂಘ,[118] ಕಿತ್ತೂರು.

ಗಣಗಳು : ದೇವ, ಸೇನ, ಬಲಾತ್ಕಾರ, ಬಳಗಾಜಿ (ಇದು ಬಲಾತ್ಕಾರವಿರಬಹುದೆ?), ದೇಶೀಯ, ದ್ರಮಿಳ, ಪುನ್ನಾಗ ವೃಕ್ಷಮೂಲ (ಬರಿಯ ವೃಕ್ಷಮೂಲವೆಂದೂ ಕಾಣಿಸಿಕೊಳ್ಳುತ್ತದೆ), ನಂದಿ, ಗ(ಕ)ವಾಟ, ಸೂರಸ್ತ, ಕ್ರಾಣೂರ್ (ಅಥವಾ ಕಾಣೂರ್), ಕಾರೆಯ, ಆಜಿ.

ಗಚ್ಛಗಳು : ಪೊಗರಿ, ಪುಸ್ತಕ, ತಗರಿಗಲ್, ಸರಸ್ವತಿ, ಕೂಜೂರ್, ಚಿತ್ರಕೂಟ, ತಿಂತ್ರಿಣೀಕ, ಮೇಘ, ಪಾಷಾಣ.

ಅನ್ವಯಗಳು: ಪೊರಳ್, ಪಾಷಾಣ, ಕೊಂಡಕುಂದ, ಅರುಂಗಳ, ಕೀರ್ತಾಚಾರ್ಯ, ಹನಸೋಗೆ, ಮೈಲಾಪ.

ಬಳಿ : ಇಂಗುಳೇಶ್ವರ.

ಈ ಸಂಘ, ಗಣ, ಗಚ್ಛಗಳು ಬಂದದ್ದು ಬಹುಮಟ್ಟಿಗೆ ಕ್ರಿ. ಶ. 5ನೇ ಶತಮಾನದಿಂದ (ಈಗ ಇವು ಪ್ರಾಯಶಃ ಇಲ್ಲವಾದರೂ ಕೆಲವರು ಸಂಪ್ರದಾಯಸ್ಥರು ತಾವು ಸೇರಿರುವ ಸಂಘ, ಗಣ, ಗಚ್ಛಗಳನ್ನು ಹೇಳಿಕೊಳ್ಳುವುದುಂಟು).[119] ಇವುಗಳಲ್ಲಿ ಪ್ರಧಾನವಾದುದು ಸಂಘ, ಅದರ ಶಾಖೆಗಳು ಗಣಗಳು, ಗಣದ ಶಾಖೆಗಳು ಗಚ್ಛಗಳು, ಗಚ್ಛದ ಶಾಖೆಗಳು ಅನ್ವಯಗಳು.[120] ಸಂಘಗಳಲ್ಲಿ ಮೂಲಸಂಘವೊಂದೇ ನಿಜವಾದ ಸಂಘವೆಂದು ದಿಗಂಬರರು ಭಾವಿಸಿದ್ದರು. ಕರ್ನಾಟಕದಲ್ಲಿ ಅದೇ ಪ್ರಧಾನವಾದ ಸಂಘವಾಗಿತ್ತು. ಅರ್ಹದ್ಬಲಿ ಎಂಬ ಆಚಾರ್ಯರು ಆಗಾಗ್ಗೆ ಮುನಿಗಳನ್ನು ಒಟ್ಟಿಗೆ ಕಲೆಹಾಕುತ್ತಿದ್ದರು. ಒಮ್ಮೆ 'ಎಲ್ಲರೂ ಬಂದಿರಾ' ಎಂದು ಕೇಳಿ, 'ನೀವೆಲ್ಲ ನಿಮ್ಮ ನಿಮ್ಮ ಸಂಘಗಳೊಂದಿಗೆ ಬದುಕಿ' ಎಂದು ಹೇಳಿ, ಮುನಿಗಳನ್ನು ಬೇರೆ ಬೇರೆ ಸಂಘಗಳಾಗಿ ಮಾಡಿದರು ಎಂಬ ಕಥೆ ಶ್ರವಣಬೆಳಗೊಳದ ಶಾಸನದಲ್ಲಿ ಉಕ್ತವಾಗಿದೆ.[121] ಒಬ್ಬ ಆಚಾರ್ಯನ ('ಗಣಿನ್') ನೇತೃತ್ವದಲ್ಲಿದ್ದ ಮುನಿಸಮುದಾಯವೇ ಗಣ.[122] ಗಚ್ಛವೆಂಬುದು ಈಚಿನ ಕಲ್ಪನೆ. ಇದಕ್ಕೂ ಗಣಕ್ಕೂ ಎಷ್ಟೋ ಕಡೆ ಏನು ಸಂಬಂಧವೆಂಬುದೇ ಗೊತ್ತಾಗುವುದಿಲ್ಲ. ಇದನ್ನು 'ಏಕಾಚಾರ್ಯಪರಿವಾರಃ' ಎಂದು ವಿವರಿಸಿದ್ದಾರೆ. ಬಹುಶಃ ಗಣ, ಗಚ್ಛಗಳೆರಡೂ ರಚನೆಯಲ್ಲಿ ಒಂದೇ ಆಗಿದ್ದು, ಗಣವು ದೊಡ್ಡ ಗುಂಪನ್ನೂ, ಗಚ್ಛವು ಅದರಲ್ಲಿನ ಒಳಗುಂಪು

---

118 EC. II. 97, C. 700 A.D.

119 Jaina Community–A Social Survey, pp. 310–11.

120 ಜಿನಧರ್ಮಕ್ಕೆ ಮೂಲವಾದ ಮೂಲಸಂಘದಲ್ಲಿ ಪ್ರಸಿದ್ಧವಾದುದು ಸೇನಗಣ ; ಅದರಲ್ಲಿ ಪ್ರಸಿದ್ಧವಾದುದು ಪೊಗರಿಗಚ್ಛ. [IA. XIX. p. 272, 1054 A.D.]

"ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾನ್ವಯ ಇಂಗುಳೇಸ್ವರದ ಬಳಿ" [EC. I. No. 55, C. 1044 A.D.]

121 EC. II. 105.

ವಿವರಗಳಿಗೆ–ಜೈನಧರ್ಮ, ಪು. 68–74 ನೋಡಿ.

122 History of Jaina Monachism, p. 228.

ಗಳನ್ನೂ ಸೂಚಿಸುತ್ತದೆ.[123] ಅನ್ವಯ (ಅಥವಾ ಕುಲ)ಗಳ ಸಮುದಾಯವೇ ಗಣ.[124] ಇವುಗಳಲ್ಲಿ ಕೆಲವು ವ್ಯಕ್ತಿಗಳ ಹೆಸರುಗಳನ್ನೂ ಇನ್ನು ಕೆಲವು ಊರುಗಳ ಹೆಸರುಗಳನ್ನೂ ಇಟ್ಟುಕೊಂಡಿವೆ. ಯಾವುದೋ ಸಂಘದಿಂದ ಹೊರಟು ಬೇರೆ ಕಡೆ ಶಾಖೆಗಳನ್ನು ('ಗಣ') ಸ್ಥಾಪಿಸಿದವರು ಮೊದಲು ಹೆಸರು ಹೇಳಿಕೊಳ್ಳುವಾಗ ತಮ್ಮ ಸಂಘದ ಹೆಸರನ್ನು ಹೇಳಿಕೊಳ್ಳುತ್ತಿದ್ದರು. ಈ ಗಣಗಳಿಂದ ಹೊರಟು ಬೇರೆಕಡೆ ಹೋಗಿ ಬೇರೆ ಶಾಖೆ ('ಗಚ್ಛ')ಗಳನ್ನು ಸ್ಥಾಪಿಸಿದವರು ತಮ್ಮ ಹಿಂದಿನ ಸಂಘಗಳೆರಡನ್ನೂ ಹೇಳಿಕೊಂಡರು ; ಇವರು ಮತ್ತೆ ಬೇರೆ ಕಡೆ ಹೋಗಿ ಬೇರೆ ಶಾಖೆ ('ಅನ್ವಯ')ಗಳನ್ನು ಸ್ಥಾಪಿಸಿದಾಗ ಹಿಂದಿನ ಸಂಘ, ಗಣ, ಗಚ್ಛಗಳನ್ನು ಹೇಳಿಕೊಂಡಿರಬೇಕು. ಹೀಗೆ ಬೆಳೆದುಕೊಂಡು ಹೋಯಿತೋ ಏನೋ ! ಬೂಲರ್ ಹೇಳುವ ಹಾಗೆ ಇವು ಏನನ್ನು ಸೂಚಿಸುತ್ತವೆ ಎಂಬುದು ಸ್ಪಷ್ಟವಾಗುವುದಿಲ್ಲ.[125]

ಈ ಒಂದೊಂದು ಶಾಖೆಯವರಿಗೂ ಮೂಲತತ್ವಗಳಲ್ಲಿ ಭೇದವಿದ್ದಿಲ್ಲವಾದರೂ, ಅವರವರಿಗೇ ಪ್ರತ್ಯೇಕವಾದ ಬಸದಿಗಳಿದ್ದಂತೆ ಶಾಸನಗಳಲ್ಲಿ ಕಂಡುಬರುತ್ತದೆ. ಚಂಗಾಳ್ವದೇವರು "ಪುಸ್ತಕಗಚ್ಛದ ಬಸದಿ"ಯನ್ನು ಮಾಡಿಸಿದ ವಿಷಯ ಶಾಸನವೊಂದರಲ್ಲಿದೆ.[126] ಹಳೆಯಬೀಡಿನ ಹತ್ತಿರದ ಬಸ್ತಿಹಳ್ಳಿಯ ಬಸದಿಯು ಮೂಲಸಂಘ ದೇಶೀಯ ಗಣ ಪುಸ್ತಕಗಚ್ಛದ ಬಸದಿ.[127] ಕೊಪ್ಪಳದಲ್ಲಿ ಮೂಲಸಂಘದ ಬಳಾತ್ಕಾರಗಣದ ಬಸದಿಯೊಂದಿದ್ದಂತೆ ಶಾಸನದಲ್ಲಿ ಹೇಳಿದೆ.[128]

## ಬಸದಿ

ಜೈನ ಸಂನ್ಯಾಸಿಗಳು ಮಳೆಗಾಲದ ನಾಲ್ಕುತಿಂಗಳು ಹೊರತು ಉಳಿದ ಕಾಲದಲ್ಲೆಲ್ಲಾ ವಿಹರಿಸುತ್ತಿರ ಬೇಕೆಂಬ ನಿಯಮವಿದ್ದರೂ, ಕ್ರಮೇಣ ಈ ನಿಯಮ ಸಡಿಲಗೊಂಡು ಮುನಿಗಳು ಬಸದಿಗಳಲ್ಲಿ ವಾಸಿಸಲಾರಂಭಿಸಿದರು. ಜೈನ ದೇವಾಲಯಗಳನ್ನು ಬಸದಿ (<ಸಂ. ವಸತಿ)ಗಳೆಂದು ಕರೆಯುವುದಕ್ಕೆ ಕಾರಣ ಇದೇ ಇರಬಹುದು. ಈ ದೇವಸ್ಥಾನಗಳನ್ನು 'ಬಸದಿ'[129] ಎಂದು, 'ಕೊಯಿಲ್ ವಸದಿ'[130] ಎಂದು, 'ಚೈತ್ಯಾಲಯ'[131], 'ಚೇದಿಯ'[132] (<ಚೈತ್ಯ) ಎಂದು, 'ಜಿನಾಗಾರ' ಎಂದು ಮುಂತಾಗಿ ಶಾಸನಗಳಲ್ಲಿ ಕರೆಯಲಾಗಿದೆ. ಈ ಬಸದಿಗಳು ಜಿನಮುನಿಗಳ ವಾಸಗೃಹಗಳೂ ಆಗಿದ್ದುವು, ದೇವಗೃಹಗಳೂ ಆಗಿದ್ದುವು. ಇವುಗಳನ್ನು ಜಿನಭಕ್ತಿಯಿಂದ ಮಾಡಿಸುತ್ತಿದ್ದುದಲ್ಲದೆ, ಇವುಗಳ ನಿರ್ಮಾಣದಿಂದ ರಾಜನ, ರಾಷ್ಟ್ರದ (=ಪ್ರಜೆಗಳ) ಯಶಸ್ಸೂ, ಐಶ್ವರ್ಯವೂ ವೃದ್ಧಿಯಾಗುತ್ತವೆ ಎಂಬ ನಂಬಿಕೆಯಿತ್ತು.[133] ಕದಂಬರ ಮೃಗೇಶವರ್ಮನು ತನ್ನ ವಿಜಯಗಳ ನಂತರ, ತನ್ನ ತಂದೆಯ ಜ್ಞಾಪ

---

123 ಅದೇ, ಪು. 232.

124 ಅದೇ, ಪು. 230.

125 History of Jaina Monachism, p. 231.
ಸಂಘ, ಗಣ ಇತ್ಯಾದಿಗಳ ವಿವರಗಳಿಗೆ, ನೋಡಿ—JISI, pp. 221–4.

126 EC. IV. Yd. 22, C. 1060 A.D.

127 EC. XV. Bl. 332, 1142 A.D.

128 JISI. No. 25, C. 1100 A.D.

129 MAR (1932). p. 171, 1124 A.D.

130 MAR (1932). p. 240, C. 825 A.D.
'ಕೋಯಿಲ್' ಎಂದರೆ ತಮಿಳಿನಲ್ಲಿ 'ದೇವಸ್ಥಾನ' ಎಂದರ್ಥ. 'ಕೋ' ಎಂದರೆ ಭಗವಂತನ, 'ಇಲ್' ಎಂದರೆ ಮನೆ.

131 EC. II. 120, C. 1138 A.D.

132 IA. XI. p. 68, C. 560 A.D.

133 EC. IV. Ng. 76, 1145 A.D.

ಕಾರ್ಥವಾಗಿ ಪಲಾಶಿಕಾ ನಗರದಲ್ಲಿ ಜಿನಾಲಯವನ್ನು ಕಟ್ಟಿಸುತ್ತಾನೆ.[134] ಮಂತ್ರಿ ಚಾಮುಂಡರಾಯನ ಮಗ ಜಿನದೇವಣ್ಣನು ಜಿನಗೃಹವನ್ನು 'ಒಲವಿಂ' ಎಂದರೆ ಧರ್ಮ ಪ್ರೇಮದಿಂದ ಪ್ರೇರಿತನಾಗಿ ಮಾಡಿಸುತ್ತಾನೆ.[135] ಚಾಳುಕ್ಯರಾಜ ತ್ರಿಭುವನಮಲ್ಲದೇವನ ರಾಣಿ ಜಾಕಲದೇವಿಯು ತನ್ನ ಆಳಿಕೆಯ ಊರಾದ ಇಂಗುಣಿಗೆಯಲ್ಲಿ, ಜಿನಗೃಹಗಳನ್ನು ಮಾಡಿಸುವುದಾದರೆ ಹೀಗೆ ಮಾಡಿಸಬೇಕು ಎನ್ನುವಂತೆ 'ಪರಿಶೋಭೆಗೆ ತಾಯ್ಮನೆಯಾಗೆ ಭಕ್ತಿಯಿಂ' ಮಾಡಿಸುತ್ತಾಳೆ.[136] ಮತ್ತವುಗದಲ್ಲಿ ಬಸದಿಯು ಬೆಟ್ಟದ ಮೇಲಿದ್ದುದನ್ನು ಕಂಡು ಹೊಯ್ಸಳ ದೊರೆ ವಿನಯಾದಿತ್ಯ ದೇವನು 'ಅಲ್ಲಿದ್ದರೆ ಯಾರಾದರೂ ಕದಿಯುವುದಿಲ್ಲವೆ ?' ಎಂದು ಊರಿನವರನ್ನು ಪ್ರಶ್ನಿಸಿದಾಗ ಆ ಊರಿನ ಮಾಣಿಕಸೆಟ್ಟಿ ಎಲ್ಲರ ಪ್ರತಿನಿಧಿಯಾಗಿ ನಿಂತು—''ನೀವು ಈ ಊರಲ್ಲಿ ಬಸದಿ ಕಟ್ಟಿಸಿಕೊಡಿ ; ನಾವೋ ಬಡವರು, ಏನು ತಾನೆ ಕಟ್ಟಿಸಿಯೇವು ! ನಿಮ್ಮ ಐಶ್ವರ್ಯಕ್ಕೆ ಮಿತಿಯಿದೆಯೆ ? ಮಲೆಗಳ ರಾಜರುಗಳ ಹತ್ತಿರ ಭತ್ತ ಎಷ್ಟಿದೆಯೋ ಅಷ್ಟಿದೆ ನಿಮ್ಮ ಹತ್ತಿರ ಹಣ'' ಎಂದಾಗ ರಾಜನು ಆ ವಾಕ್ಚಾತುರ್ಯಕ್ಕೆ ಮೆಚ್ಚಿ ನಕ್ಕು, ಊರಲ್ಲಿ ಬಸದಿ ಕಟ್ಟಿಸಿ ಅದಕ್ಕೆ ಬೇಕಾದ ಭೂಮಿಗಳನ್ನೂ, ತೆರಿಗೆಗಳನ್ನೂ ಬಿಡುತ್ತಾನೆ.[137] ಅನೇಕ ಬಸದಿಗಳ ನಿರ್ಮಾಪಕನಾದ ಬೊಪ್ಪದೇವ (ಜಿನಭಕ್ತ ಗಂಗರಾಜನ ಮಗ) ತನ್ನ "ಕನ್ನೆವಸದಿ" (=ಮೊದಲ ಬಸದಿ ?)ಯನ್ನು ಮಾಡಿಸಿದ ವಿಷಯವು ಶಾಸನವೊಂದರಲ್ಲಿದೆ[138] (ಇದು ನಾಗಮಂಗಲ ತಾಲ್ಲೂಕು ಕಂಬದಹಳ್ಳಿ ಗ್ರಾಮದ ಶಾಂತೀಶ್ವರ ಬಸದಿಯ ಶಾಸನ).

ಈ ಬಸದಿಗಳಿಗೆ ತೀರ್ಥಂಕರರ ಹೆಸರುಗಳ ಜೊತೆಗೆ ಕಟ್ಟಿಸಿದವರ ಹೆಸರುಗಳನ್ನೂ ಇಡುತ್ತಿದ್ದರು (ಶೈವ ದೇವಸ್ಥಾನಗಳಲ್ಲಂತೂ ಇದು ಬಹು ಸಾಮಾನ್ಯ). ಶ್ರವಣಬೆಳಗೊಳದ ಬಸದಿಗೆ ಬೊಪ್ಪಣ ಚೈತ್ಯಾಲಯವೆಂಬ ಮತ್ತೊಂದು ಹೆಸರಿತ್ತು.[139] ವಿಷ್ಣುವರ್ಧನನ ರಾಣಿಯಾದ ಶಾಂತಲೆಯು 'ಶಾಂತಿ ಜಿನೇಂದ್ರಬಿಂಬ'[140]ವನ್ನು (ಶಾಂತಿನಾಥನು ತೀರ್ಥಂಕರರಲ್ಲಿ ಒಬ್ಬ) ಮಾಡಿಸಿದ್ದಾಳೆ. ನಿರವದ್ಯಯ್ಯ ಎಂಬಾತ ನಿರವದ್ಯ ಜಿನಾಲಯವನ್ನು ಮಾಡಿಸಿದ್ದಾನೆ.[141]

ಹಿಂದುಗಳ ದೇವಸ್ಥಾನಗಳಿಗೆ ಪ್ರಾಚೀನತೆಯನ್ನು ಕಲ್ಪಿಸಲು ಅವುಗಳ ಸುತ್ತ ಪೌರಾಣಿಕ ಕಥೆಗಳ ಮಾಲೆಯನ್ನೇ ನೆಯ್ಯುವಂತೆ, ಕೆಲವು ಜಿನಮಂದಿರಗಳಿಗೂ ಅಂತಹ ಕಥೆಗಳನ್ನು ಕಟ್ಟಿ, ಬಹುಶಃ ಜೈನೇತರರ ಒಲವನ್ನು ಸಂಪಾದಿಸುವುದಕ್ಕೋ ಏನೋ ರಾಮಾಯಣ ಮಹಾಭಾರತಗಳ ವ್ಯಕ್ತಿಗಳ ಸಂಪರ್ಕವನ್ನು ಕಲ್ಪಿಸುತ್ತಿದ್ದರು. 'ಲೋಕಸ್ಥಿತಿಕ್ರಮಾರ್ಥಂ ಕಾಂಕ್ಷಿತ ಮನುಷ್ಯಜನ್ಮ'ನೂ ಪುರುಷೋತ್ತಮನೂ ಆದ ರಾಮನಿಂದ ಪ್ರತಿಷ್ಠಾಪಿತವಾಗಿದೆ, ಪಾಂಡವ ಜನನಿ ಕುಂತಿಯಿಂದ ಪುನರ್ನವೀಕೃತವಾಗಿದೆ ಈ ಜಿನಾಲಯ

---

[134] IA. VI. p. 24, 538 A.D.

[135] EC. II. 121, C. 995 A.D.

[136] JISI. No. 1, 1094 A.D.

[137] MAR (1932). p. 171, 1124 A.D.

ಮಾಣಿಕಸೆಟ್ಟಿಯ ಮಾತು—"ನಿಮ್ಮ ಪಡದರ್ಥಕ್ಕೆ ಪ್ರಮಾಣಂಟೆ ದೇವರರ್ಥಮುಂ ಮಲೆಯರಸುಗಳ ಹಡೆದ ಭತ್ತಮುಂ ಸಮಾನಂ."

[138] MAR (1939). p. 193, C. 1130 A.D.

[139] EC. II. 120, C. 1138 A.D.

ಇದನ್ನು ಕಟ್ಟಿಸಿದವನು ಗಂಗರಾಜನ ಮಗ ಏಚಣ. ಕಟ್ಟಿಸಿದ್ದು ಬಹುಶಃ ತನ್ನ ಸೋದರನ ಹೆಸರಿನಲ್ಲಿ. ಗಂಗರಾಜ ಗೊಮ್ಮಟನ ಸುತ್ತ ಪೌಳಿಯನ್ನು ಮಾಡಿಸಿದವನು. (EC. II. 177, C. 1117 A.D.) ಈ ಇಡೀ ಒಂದು ಸಂಸಾರ ಜೈನಧರ್ಮದ ಏಳಿಗೆಗಾಗಿ ತನ್ನನ್ನು ತಾನು ಸಮರ್ಪಿಸಿಕೊಂಡದ್ದು ಕಂಡುಬರುತ್ತದೆ.

[140] EC. II. 131, 1123 A.D.

[141] EC. VI. Cm. 75, C. 1060 A.D.

ಎಂಬ ಹೇಳಿಕೆಗಳು ಶಾಸನಗಳಲ್ಲಿ ಒಂದೆರಡು ಕಡೆ ಸಿಕ್ಕುತ್ತವೆ.[142] ಇಂತಹ ಕಡೆ ಧರ್ಮದ ಶ್ರೇಷ್ಠತೆಯನ್ನು ಸ್ಥಾಪಿಸುವುದೂ ಅವರ ಆಶಯವಾಗಿದ್ದಿರಬಹುದು. ಶಿವಮೊಗ್ಗ ಜಿಲ್ಲೆಯ ಶಾಸನವೊಂದರಲ್ಲಿ ಗಂಗವಂಶದ ಆದ್ಯಪುರುಷರಾದ ದಡಿಗ ಮಾಧವರು ಕಟ್ಟಿಸಿದ ಬಸದಿಯನ್ನು ಮುಂದೆ 'ಮರವೆಸನಾಗಿ', ಎಂದರೆ ಮರದಲ್ಲಿ ಮಾಡಿಸಿ 'ಪಟ್ಟದ ಬಸದಿ' ಎಂದು ಹೆಸರಿಡಲಾಯಿತೆಂದೂ, ಇದಾದ ಬಳಿಕ ಅದನ್ನು 'ಕಲುವೆಸ', ಎಂದರೆ ಶಿಲೆಯಲ್ಲಿ ಕಟ್ಟಿಸಲಾಯಿತೆಂದೂ ಹೇಳಲಾಗಿದೆ.[143] ಜೈನಧರ್ಮದಲ್ಲಿ ವಿಶೇಷವಾಗಿ ಶ್ರದ್ಧೆಯಿದ್ದ ರಾಜರು ಹೀಗೆ 'ಪಟ್ಟದ ಬಸದಿ'ಗಳನ್ನು ಮಾಡಿಸುತ್ತಿದ್ದುದಕ್ಕೆ ನಿದರ್ಶನ ಸೌಂದತ್ತಿಯ 'ರಟ್ಟರ ಪಟ್ಟಜಿನಾಲಯ'. ಇದರ ವಿಷಯವನ್ನು ಹಿಂದೆಯೇ ನೋಡಿದ್ದೇವೆ. ಇದು ಈಗಿನ 'ಮನೆದೇವರು' ಅಥವಾ 'ಕುಲಸ್ವಾಮಿ' ಪದ್ಧತಿಯನ್ನು ನೆನಪಿಗೆ ತರುತ್ತದೆ.

ಬಸದಿಗಳನ್ನು ಕಟ್ಟಲಾರಂಭಿಸುವ ಮುನ್ನ, ಕಟ್ಟಿಸುವ ವ್ಯಕ್ತಿ ತನ್ನ ಗುರುಗಳ ಕೈಯಲ್ಲಿ ಅದಕ್ಕೆ ಅಸ್ತಿಭಾರಶಿಲೆಯನ್ನು ಹಾಕಿಸುತ್ತಿದ್ದ ಸಂಪ್ರದಾಯವೂ, ಅಸ್ತಿಭಾರಶಿಲೆಯನ್ನು ಹಾಕಲು ಒಪ್ಪಿಕೊಂಡ ವ್ಯಕ್ತಿ ತನ್ನ ಗುರುಗಳ ನಾಮೋಚ್ಚಾರಣೆಮಾಡಿ ಕೆಲಸ ಆರಂಭವಾಗುವಂತೆ ಅನುಮತಿ ಕೊಡುತ್ತಿದ್ದ ಒಂದು ಸಂಪ್ರದಾಯವೂ ಶಾಸನಗಳಲ್ಲಿ ಬಂದಿದೆ.[144] ಚಟ್ಟಲದೇವಿ ಪೊಂಬುಚ್ಚದಲ್ಲಿ (ಈಗಿನ ಹುಂಚ) ಪಂಚಕೂಟ ಬಸದಿಯನ್ನು ಮಾಡಿಸಲು ಆರಂಭಿಸಿದಾಗ ಶ್ರೇಯಾಂಸ ಪಂಡಿತರು ಶ್ರೀ ವಿಜಯದೇವರ ನಾಮೋಚ್ಚಾರಣೆಯನ್ನು ಮಾಡಿ "ಉರ್ವೀ ತಿಳಕಮೆನಿಸಿದ ಪಂಚವಸದಿಗೆ ಸುಭ ಮುಹೂರ್ತದೊಳಾಚಂದ್ರಾರ್ಕ್ಕ ಸ್ಥಾಯಿಯಪ್ಪಂತುನ್ನತಮಪ್ಪೆಡೆಯೊಳ್ ಕೆಸರ್ಕ್ಕಲಿಸಿಕ್ಕಿದರು"[145] ಎಂದು ಒಂದು ಶಾಸನದಲ್ಲಿದೆ. ತೇರದಾಳದಲ್ಲಿ ಗೊಂಕರಾಜನು ಜಿನಾಲಯವನ್ನು ಕಟ್ಟಿಸಿದಾಗ ಅದಕ್ಕೆ ದಾನ ಬಿಡುವ ಮೊದಲು ತನ್ನ ಪಟ್ಟಾಚಾರ್ಯರ ಹೆಸರನ್ನು ಹೇಳಿದನೆಂದು ಇನ್ನೊಂದು ಶಾಸನದಲ್ಲಿದೆ.[146]

ಈ ಬಸದಿಗಳಲ್ಲಿ ಕೆಲವಕ್ಕೆ ಪಂಚಕೂಟ[147]ಗಳೂ, ಕೆಲವಕ್ಕೆ ತ್ರಿಕೂಟ[148]ಗಳೂ ಇದ್ದುವು. ಇವುಗಳ ಒಳಭಾಗ ಸುಗಂಧಮಿಶ್ರಿತ ಕಾಳಾಗರು ಧೂಪಧೂಮದ ಸುವಾಸನೆಯಿಂದ ಕೂಡಿದ್ದಿತು; ಹೊರಭಾಗವು ಧ್ವಜಗಳಿಂದ, ಮಕರ ತೋರಣಗಳಿಂದ, ಮಾನಸ್ತಂಭದಿಂದ[149] ಅಲಂಕೃತವಾಗಿದ್ದಿತು. ತೀರ್ಥಂಕರರು ದಿವ್ಯತ್ವವನ್ನು ಪಡೆದ ಮಾನವರಾದರೂ, ಕ್ರಿ. ಶ.ದ ಆರಂಭದ ಹೊತ್ತಿಗೇ ಅವರನ್ನು ದೇವತಾಪುರುಷರೆಂದು ಭಾವಿಸಿ ಜೈನರು ಪೂಜಿಸಿದರು; ಇಂತಹ ಪೂಜೆಗಳಿಂದ ತಮ್ಮ ಕರ್ಮ ಕ್ಷಯಿಸುತ್ತದೆ, ಪುಣ್ಯ ವರ್ಧಿಸುತ್ತದೆ, ಲೌಕಿಕವಾದ ಆಯುರೈಶ್ವರ್ಯಗಳು ಹೆಚ್ಚುತ್ತವೆ ಎಂದು ನಂಬಿದ್ದರು. ಕೇವಲಜ್ಞಾನವನ್ನು ಪಡೆದ ತೀರ್ಥಂಕರನು ಸಿದ್ಧಶಿಲೆಯಲ್ಲಿ ವಿಹರಿಸುತ್ತ, ಉಳಿದ ಜಗತ್ತಿನ ವಿಷಯದಲ್ಲಿ ಅನಾಸಕ್ತನಾಗಿಬಿಡುವುದರಿಂದ,

---

142 EC. X. Cb 29, C. 750 A.D.

143 EC. VII. Sh 4, 1122 A.D.

144 ಯುದ್ಧದ ಆರಂಭದಲ್ಲಿ ಸೈನಿಕ ತನ್ನ ಆಯುಧವನ್ನು ಕೈಗೆತ್ತಿಕೊಳ್ಳುವ ಮುನ್ನ ತನ್ನ ಗುರುವಿನ ನಾಮಘೋಷಣೆಯನ್ನು ಮಾಡುತ್ತಿದ್ದ ಸಂಪ್ರದಾಯವನ್ನು ಇದು ಹೋಲುತ್ತದೆ (ಪಂಪಭಾರತ, 10.64 ವ).

145 EC. VIII. Nr. 36, 1077 A.D.

146 IA. XIV. p. 14, 1123–24 A.D.

147 EC. VIII. Nr. 35, 1077 A.D.

148 EC. IV. Ch. 83, 1117 A.D.

149 ಬಸದಿಯ ಮುಂದೆ, ಮೇಲೆ ಬಹು ಚಿಕ್ಕಮಂಟಪವಿರುವ ದೊಡ್ಡ ಕಂಬಕ್ಕೆ 'ಮಾನಸ್ತಂಭ'ವೆಂದು ಹೆಸರು. ಬೃಹತ್ ವಿಗ್ರಹಗಳ ಮುಂದಿನ ಸರಳ ಸ್ತಂಭಗಳಿಗೆ 'ಬ್ರಹ್ಮಸ್ತಂಭ'ಗಳೆಂದು ಹೆಸರು.

(P. K. Acharya: Mānasāra—An Encyclopaedia of Hindu Architecture, p. 540).

ಅರ್ಚನೆ ಸ್ತೋತ್ರಗಳು ಅವನನ್ನು ಮುಟ್ಟಲಾರವು. ಅವನಿಂದ ನೇರವಾಗಿ ವ್ಯಕ್ತಿಯ ಕರ್ಮನಾಶಕ್ಕೆ ಯಾವ ಸಹಾಯವೂ ಇಲ್ಲ. 'ಭಗವತ್ ಕೃಪೆ' ಅಥವಾ 'ಕರುಣೆ'ಗೆ (Divine Grace) ಜೈನಧರ್ಮದಲ್ಲಿ ಸ್ಥಾನವೇ ಇಲ್ಲ. (ಈ ದೃಷ್ಟಿಯಿಂದ ಜೈನಧರ್ಮವು ಪುರುಷಪ್ರಯತ್ನಕ್ಕೆ ಕೊಟ್ಟಿರುವ ಮಹತ್ತರವಾದ ಸ್ಥಾನವನ್ನು ಇನ್ನು ಯಾವ ಧರ್ಮವೂ ಕೊಟ್ಟಿಲ್ಲವೆಂದು ಹೇಳಬೇಕು. ವ್ಯಕ್ತಿ ತನ್ನ ಸ್ವಪ್ರಯತ್ನದಿಂದಲೇ ತನ್ನ ಕರ್ಮಕ್ಷಯವನ್ನು ಮಾಡಿಕೊಳ್ಳಬೇಕು.) ಅರ್ಚನೆ, ವಂದನೆಗಳೇನಿದ್ದರೂ ವ್ಯಕ್ತಿಯ ಮನಶ್ಶುದ್ಧಿಗಾಗಿ. ಲೌಕಿಕವಾದ ಸಹಾಯಕ್ಕಾಗಿ ತೀರ್ಥಂಕರರನ್ನು ಅರ್ಚಿಸುವುದು ಜೈನಧರ್ಮದ ಸತ್ವಕ್ಕೇ ವಿರೋಧವಾದುದು. ಆದರೂ ಜೈನರು ಬಹುಶಃ ಹಿಂದುಗಳ ಪ್ರಭಾವಕ್ಕೆ ಒಳಗಾಗಿ ಬಸದಿಗಳಲ್ಲಿ ಅಷ್ಟವಿಧಾರ್ಚನೆಗಳನ್ನು[150] ನಡಸುತ್ತಿದ್ದರು, ಹಿಂದುಗಳಂತೆಯೇ ಅಲ್ಲಿಯೂ ವಿಸ್ತಾರವಾದ ಪೂಜಾದಿಗಳು ಬೆಳೆದುವು.[151] ಬಸದಿಯಲ್ಲಿ ದೇವದಾಸಿಯರ ನೃತ್ಯಗಳನ್ನೂ ನಡೆಸುತ್ತಿದ್ದುದುಂಟು.[152] ವೈದಿಕಧರ್ಮದ ಪ್ರಭಾವದಿಂದ ಇರಬಹುದು, ಬಸದಿಗಳಲ್ಲಿ ಹೋಮಾದಿಗಳು ನಡೆಯುತ್ತಿದ್ದುವು (ಇದರಲ್ಲಿ ಪ್ರಾಣಿಬಲಿ ಇರುತ್ತಿರಲಿಲ್ಲವೆಂದು ಹೇಳಬೇಕಿಲ್ಲ). ಸೋಮದೇವ ತನ್ನ ಯಶಸ್ತಿಲಕದಲ್ಲಿ[153] ಜೈನಗೃಹಸ್ಥ ಬೇಕಾದರೆ ವೈದಿಕವಾದ ಪಂಚಯಜ್ಞಗಳನ್ನು ಮಾಡಬಹುದೆಂದು ಒಪ್ಪಿಗೆ ಸೂಚಿಸುತ್ತಾನೆ. ರಾಷ್ಟ್ರಕೂಟರ ಕೆಲವು ತಾಮ್ರಪಟಗಳಲ್ಲಿ ಬಲಿಚರುದಾನ, ವೈಶ್ವದೇವಾದಿಗಳು ಬಸದಿಗಳಲ್ಲಿ ನಡೆಯುವುದಕ್ಕಾಗಿ ದತ್ತಿ ಬಿಡಲಾಗಿದೆ. ಹನ್ನೆರಡನೇ ಶತಕದ ತಾಮ್ರಪಟವೊಂದರಲ್ಲಿ 'ಕೇವಲಜ್ಞಾನದ ಮಹಾಹೋಮ'ವು ಪೂಜಾವಿಧಿಗಳಲ್ಲಿ ಒಂದು.[154] ಎಲ್ಲಿಯವರೆಗೆ ಅನ್ಯಮತಾಚಾರಗಳು ಜೈನಧರ್ಮದ ಮೂಲತತ್ವಗಳಿಗೆ ಅಡ್ಡಿ ತರುವುದಿಲ್ಲವೋ ಅಲ್ಲಿಯವರೆಗೆ ಅವುಗಳ ವಿಷಯದಲ್ಲಿ ಸೋಮದೇವನ ಅಭ್ಯಂತರವಿಲ್ಲ.[155] ಕಾಲದಿಂದ ಕಾಲಕ್ಕೆ ಆಯಾ ಸನ್ನಿವೇಶಗಳಿಗೆ ಆದಷ್ಟುಮಟ್ಟಿಗೆ ಹೊಂದಿಕೊಳ್ಳಲು ಜೈನಧರ್ಮವು ಪ್ರಯತ್ನಪಟ್ಟಿರುವುದು ಕಂಡುಬರುತ್ತದೆ. ಈ ಬಸದಿಗಳು ಬಹು ದೊಡ್ಡ ವಿದ್ಯಾಕೇಂದ್ರಗಳೂ ಆಗಿದ್ದುವು.[156]

## ಸಮಾಧಿಮರಣ

ಪಂಪನ ಭರತಚಕ್ರವರ್ತಿ ಪ್ರಥಮತೀರ್ಥಂಕರನನ್ನು ಪ್ರಾರ್ಥಿಸಿಕೊಳ್ಳುತ್ತ ತನಗೆ ಕ್ಷಣಿಕಗಳಾದ ಅಮರೇಂದ್ರೋನ್ನತಿ, ಖೇಚರೇಂದ್ರ ವಿಭವಗಳು ಬೇಕಿಲ್ಲವೆಂದೂ, ಸಮಾಧಿಮರಣ, ಕರ್ಮಕ್ಷಯಗಳು ಲಭಿಸಲೆಂದೂ ಹಾರೈಸಿಕೊಂಡಿದ್ದಾನೆ.[157] ಪ್ರಾಚೀನ ಕರ್ನಾಟಕದಲ್ಲಿ ಈ 'ಸಮಾಧಿಮರಣ'ವು ಬಹುಜನ ಜೈನರು ಹಾರೈಸುತ್ತಿದ್ದ ಆದರ್ಶ ಮರಣವಾಗಿತ್ತು. ಜೈನರಲ್ಲಿ ಮಾತ್ರವಲ್ಲ, ಹಿಂದುಗಳಲ್ಲೂ ಗ್ರಹಣದ ದಿನಗಳೇ ಮುಂತಾದ ಪುಣ್ಯದಿನಗಳಲ್ಲಿ ಮುಂದಿನ ಜನ್ಮದಲ್ಲಿ ಸದ್ಗತಿ ದೊರೆಯಲೆಂದು ತಾವೇ ಪ್ರಾಣವನ್ನು ಬಿಡುತ್ತಿದ್ದುದುಂಟು. ಆದರೆ ಇದನ್ನು

---

150 ಜಲ, ಗಂಧ, ಪುಷ್ಪ, ಅಕ್ಷತೆ, ಧೂಪ, ದೀಪ, ನೈವೇದ್ಯ ಮತ್ತು ತಾಂಬೂಲ.

151 ಪೂಜಾವಿಧಿಯ ವಿವರಣೆಗಳಿಗೆ—EC. XI. Hk. 1, 1154 A.D.—ಈ ತಾಮ್ರಪಟಗಳನ್ನು ನೋಡಬಹುದು.

152 EC. IX. Nl. 61, 802 A.D.

153 Yaśastilaka and Indian Culture, p. 333.

154 EC. XI. Hk. 1, 1154 A.D.

155 Yaśastilaka and Indian Culture, p. 332.

156 ಮಾಳ್ಖೇಡ (= ಮಾನ್ಯಖೇಟ)ದಲ್ಲಿ ಪ್ರಚಲಿತವಾಗಿರುವ ಒಂದು ವದಂತಿಯ ಪ್ರಕಾರ, ಹಿಂದೆ ಅಲ್ಲಿ ಹದಿನಾಲ್ಕು ಬಸದಿಗಳಿದ್ದುವು, ಹದಿನಾಲ್ಕು ದೊಡ್ಡ ಪೆಟ್ಟಿಗೆಗಳ ತುಂಬ ಧರ್ಮಗ್ರಂಥಗಳಿದ್ದುವು, ಅವು ಈಗ ಭೂಗತವಾಗಿವೆ. ಶಾಸನಗಳಲ್ಲಿ ಈ ಊರನ್ನು 'ಘಟಿಕಾಸ್ಥಾನ' ಎಂದು ಕರೆದಿದೆ (JISI. p. 195). 'ಘಟಿಕಾಸ್ಥಾನ'—ಒಂದು ರೀತಿಯಲ್ಲಿ ಪ್ರೌಢ ವಿದ್ಯಾಕೇಂದ್ರವೆಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು.

157 ಆದಿಪುರಾಣ, 10.61.

ಧರ್ಮದ ಒಂದು ಅಂಗವಾಗಿ ಮಾಡಿದವರು ಜೈನರು. ಈ 'ಸಮಾಧಿ ಮರಣ' ಅಥವಾ ಸಲ್ಲೇಖನ ವ್ರತವನ್ನು ಕುರಿತು ರತ್ನಕರಂಡಕದಲ್ಲಿ (ಪು. 516–56) ಹೀಗೆ ಹೇಳಿದೆ :

ಉಪಸರ್ಗೇ ದುರ್ಭಿಕ್ಷೇ ಜರಸಿ ರುಜಾಯಾಂ ಚ ನಿಃಪ್ರತೀಕಾರೇ
ಧರ್ಮಾಯ ತನುವಿಮೋಚನಂ ಆಹುಃ ಸಲ್ಲೇಖನಾಮಾರ್ಯಾಃ ॥
ಅಂತಕ್ರಿಯಾಧಿಕರಣಂ ತಪಃ ಫಲಂ ಸಕಲದರ್ಶಿನಃ ಸ್ತುವತೇ
ತಸ್ಮಾದ್ ಯಾವದ್ವಿಭವಂ ಸಮಾಧಿಮರಣೇ ಪ್ರಯತಿತವ್ಯಂ ॥
ಸ್ನೇಹಂ ವೈರಂ ಸಂಗಂ ಪರಿಗ್ರಹಂ ಚಾಪಹಾಯ ಶುದ್ಧಮನಾಃ
ಸ್ವಜನಂ ಪರಿಜನಮಪಿ ಚ ಕ್ಷಾಂತ್ವಾ ಕ್ಷಮಯೇತ್ ಪ್ರಿಯೈರ್ವಚನೈಃ ॥
ಆಲೋಚ್ಯ ಸರ್ವಮೇನಃ ಕೃತಕಾರಿತಂ ಅನುಮತಂ ಚ ನಿರ್ವ್ಯಾಜಂ
ಆರೋಪಯೇನ್ ಮಹಾವ್ರತಂ ಆಮರಣಸ್ಥಾಯಿ ನಿಃಶೇಷಂ ॥
ಆಹಾರಂ ಪರಿಹಾಪ್ಯ ಕ್ರಮಶಃ ಸ್ನಿಗ್ಧಂ ವಿವರ್ಧಯೇತ್ಪಾನಂ
ಸ್ನಿಗ್ಧಂ ಚ ಹಾಪಹಿತ್ವಾ ಖರಪಾನಂ ಪೂರಯೇತ್ ಕ್ರಮಶಃ ॥
ಖರಪಾನಹಾಪನಾಂ ಅಪಿ ಕೃತ್ವಾ ಕೃತ್ವೋಪವಾಸಂ ಅಪಿ ಶಕ್ತ್ಯಾ
ಪಂಚನಮಸ್ಕಾರಮನಾಸ್ತನುಂ ತ್ಯಜೇತ್ ಸರ್ವಯತ್ನೇನ ॥
ಜೀವಿತ ಮರಣಾಶಂಸೇ ಭಯಮಿತ್ರಸ್ಮೃತಿನಿದಾನನಾಮಾನಃ
ಸಲ್ಲೇಖನಾತಿಚಾರಾಃ ಪಂಚ ಜಿನೇಂದ್ರೈಃ ಸಮಾದಿಷ್ಟಾಃ ॥

ಕ್ಷಾಮಕಾಲದಲ್ಲಿ, ಮುಪ್ಪಿನಲ್ಲಿ, ವಾಸಿಯಾಗದ ರೋಗ ಬಂದಾಗ–ಅವುಗಳಿಗೆ ಇನ್ನು ಪರಿಹಾರವಿಲ್ಲವೆಂದು ಖಚಿತವಾದರೆ, ಧಾರ್ಮಿಕ ವಿಧಿಗಳಿಗನುಗುಣವಾಗಿ ('ಸನ್ಯಸ್ಯ ಶಾಸ್ತ್ರಕ್ರಮಾತ್')[158] ಸಾಯುವುದಕ್ಕೆ 'ಸಲ್ಲೇಖನ' ಅಥವಾ 'ಸಮಾಧಿಮರಣ'ವೆನ್ನುತ್ತಾರೆ (ವಾಸ್ತವವಾಗಿ ಸಲ್ಲೇಖನವೆಂಬುದು ಸಮಾಧಿಮರಣದ ಪ್ರಭೇದಗಳಲ್ಲೊಂದು). ಈ ಸಮಾಧಿಮರಣವನ್ನು ಸಮರ್ಥಿಸುತ್ತ ಪೂಜ್ಯಪಾದರು ದೃಷ್ಟಾಂತವೊಂದನ್ನು ಕೊಡುತ್ತಾರೆ. ಮುತ್ತುರತ್ನಗಳಿರುವ ಮನೆಗೆ ಬೆಂಕಿಬಿದ್ದರೆ ಅದನ್ನು ಆರಿಸಲು ಪ್ರಯತ್ನಪಡುತ್ತಾರೆ. ಅದು ಅಸಾಧ್ಯವಾದರೆ ಮನೆಯನ್ನು ಕೆಡವಿಯಾದರೂ ಮುತ್ತುರತ್ನಗಳನ್ನು ರಕ್ಷಿಸುತ್ತಾರೆ[159] (ಇಲ್ಲಿ 'ಮನೆ'ಯೆಂದರೆ ಮಾನವದೇಹ). ಯಾವುದೋ ಕ್ಷುದ್ರದೇವತೆಗೆ ಹರಕೆ ಹೊತ್ತು ಉಪವಾಸಮಾಡಿ ಸಾಯುವುದು, ವಿಷಪಾನ ಮಾಡಿ ಅಥವಾ ನೀರಲ್ಲಿ ಮುಳುಗಿ ಸಾಯುವುದು, ಇರಿದುಕೊಂಡು ಸಾಯುವುದು–ಇವುಗಳನ್ನು 'ಬಾಲಮರಣ'ವೆಂದೂ (ಬಾಲ=ಅಜ್ಞಾನಿ, ಅವಿವೇಕಿ), ಸಲ್ಲೇಖನವನ್ನು 'ಪಂಡಿತಮರಣ'ವೆಂದೂ ಕರೆಯುತ್ತಾರೆ.[160]

ಸಮಾಧಿಮರಣ ವ್ರತವನ್ನು ಅಂಗೀಕರಿಸಿದವನು ಅನ್ನಪಾನಾದಿಗಳನ್ನು ತ್ಯಜಿಸಿ, ಎಲ್ಲ ರೀತಿಯ ಸ್ನೇಹ, ವೈರ, ಸಂಗಗಳನ್ನು ತ್ಯಜಿಸಿ, ತನ್ನ ಕರ್ಮಗಳನ್ನು ಕುರಿತು ಯೋಚಿಸಿ ಪಶ್ಚಾತ್ತಾಪ ಪಡುತ್ತಾ, ಪಂಚ ಪರಮೇಷ್ಠಿಗಳನ್ನು ಧ್ಯಾನಿಸುತ್ತಾ ತನಗೆ ಉತ್ತಮಗತಿ ದೊರೆಯಲೆಂದು ಹಾರೈಸುತ್ತಾ ಪ್ರಾಣತ್ಯಾಗ ಮಾಡಬೇಕು. ಜೈನರ

---

[158] EC. II. 75, C. 650 A.D.

[159] ಜೈನಧರ್ಮ, ಪು. 508.

[160] ಈ 'ಸಲ್ಲೇಖನ'ಗಳು ಈಗ ವಿರಳ. ಶ್ರೀಮತಿ ಸ್ಟೀವನ್‌ಸನ್ ತಾವು ಕಣ್ಣಾರೆ ಕಂಡ, ಕೇಳಿದ ಒಂದೆರಡು ನಿದರ್ಶನಗಳನ್ನು ಕೊಟ್ಟಿದ್ದಾರೆ. ರೋಗಿಯಾದ ಜೈನ ಸ್ತ್ರೀಯೊಬ್ಬಳು 22 ದಿವಸ ಈ ವ್ರತವನ್ನು ನಡೆಯಿಸಿ ಸತ್ತಳು; ಆರೋಗ್ಯಶಾಲಿಯಾದ ಸಾಧುವೊಬ್ಬನು ಈ ವ್ರತವನ್ನು ಅಂಗೀಕರಿಸಿ 41 ದಿನ ಉಪವಾಸಮಾಡಿ ಮರಣವನ್ನಪ್ಪಿದನು. [The Heart of Jainism, p. 163.] ಈ ಕರಡು ಪ್ರತಿಯನ್ನು ತಿದ್ದುತ್ತಿರುವ ದಿನ (19-10-1965) ಮೈಸೂರು ಜಿಲ್ಲೆಯ ಸಾಲಿಗ್ರಾಮದಲ್ಲಿ ಒಬ್ಬ ಜೈನವೃದ್ಧರು ಸಲ್ಲೇಖನವ್ರತಧಾರಿಯಾಗಿದ್ದಾರೆ ಎಂದು ತಿಳಿದುಬರುತ್ತದೆ. (ಬೇರೆಯವರ ಒತ್ತಾಯದ ಮೇರೆಗೆ ಅವರು ವ್ರತವನ್ನು ಬಿಟ್ಟುಕೊಟ್ಟರೆಂದೂ ಆಮೇಲೆ ತಿಳಿಯಿತು.)

ನಂಬಿಕೆಯ ಪ್ರಕಾರ, ಕೊನೆಯ ಗಳಿಗೆಯಲ್ಲಿ ಯಾವ ಭಾವನೆ ಮನಸ್ಸಿನಲ್ಲುಳಿದಿರುತ್ತದೆಯೋ ಅದನ್ನು ಅನುಸರಿಸುತ್ತದೆ ಅವನ ಮುಂದಿನ ಹುಟ್ಟು. ವ್ಯಕ್ತಿಯ ಮನಸ್ಸಿನಲ್ಲಿ ಶುದ್ಧಭಾವನೆ ಉದಾತ್ತ ಆಕಾಂಕ್ಷೆಗಳನ್ನು ಮೂಡಿಸುವುದಕ್ಕಾಗಿಯೇ ಈ ವ್ರತವಿರುವುದು.[161] ಈ ವ್ರತದ ಕಷ್ಟಗಳನ್ನು ಸಂತೋಷದಿಂದ ಸಹಿಸಿಕೊಳ್ಳಬೇಕು. ಈ ವ್ರತವು ಕತ್ತಿಯ ಅಲಗು ಇದ್ದಂತೆ, ಬೆಂಕಿಯಂತೆ, ವಿಷಸರ್ಪದ ಹಲ್ಲಿನಂತೆ ಕಠೋರವಾದದ್ದು, ಸಹಿಸಲಶಕ್ಯವಾದದ್ದು–ಎಂದು ವರ್ಣಿಸಿದೆ ಶಾಸನವೊಂದರಲ್ಲಿ.[162] ಆದರೆ " ತಪಸಾ ಸರ್ವಂ ಸುಖಂ ಪ್ರಾಪ್ಯತೇ "[163]–ತಪಸ್ಸಿನಿಂದಲೇ ಸರ್ವಸುಖಗಳು. ತಪಸ್ಸು ಎಂದರೆ ತಾನೆ ಏನು ?–" ಪೆತ್ತ ಪರೀಷಹ ಜಯಮೆ ತಪಂ ತಪಕೆ ಬೇರೆ ಕೋಡೆರಡೊಳವೇ ?"[164] ಎನ್ನುತ್ತಾನೆ ಜನ್ನ. ಬಂದ ಕಷ್ಟಗಳನ್ನು ಜಯಿಸುವುದೇ ತಪಸ್ಸು. ಈ ತಪಸ್ಸಿನಿಂದಲೇ ಮಹಾಪುರುಷರು ದೇವಲೋಕಕ್ಕೆ ಸಂದರು, ಅಮರೇಂದ್ರಾವಾಸಕ್ಕೆ ಹೋದರು, ಮುಕ್ತಿಯನ್ನು ಸಂಪಾದಿಸಿದರು ಎಂದು ಶಾಸನಗಳಲ್ಲಿ ವರ್ಣಿಸಲಾಗಿದೆ.

ಕೆಲವರು, ತಮಗೆ ಆಯುಸ್ಸು, ಆರೋಗ್ಯಾದಿಗಳಿದ್ದರೂ, ಜೀವನವೆಂಬುದು ಮಳೆಬಿಲ್ಲಿನಂತೆ ಮಿಂಚಿನಂತೆ ಮಂಜಿನಂತೆ ಸುಂದರವಾದರೂ ಕ್ಷಣಿಕವಾದುದು ಎಂಬ ವೈರಾಗ್ಯದಿಂದ ಈ ವ್ರತವನ್ನು ಅಂಗೀಕರಿಸಿ ಮಡಿದಿದ್ದಾರೆ.[165] ಆದರೆ ಬಹುಮಟ್ಟಿಗೆ ಜೀವನದ ಮೇಲೆ ಆಸೆಯನ್ನು ತೊರೆದವರು, "ಮೃತ್ಯುವರವಾನ್ ಅಜಿದ"ವರು,[166] ರೋಗಕ್ಕೆ ತುತ್ತಾದವರು,[167] ಹಾವಿಂದ ಕಡಿಸಿಕೊಂಡು ಪ್ರಾಣದ ಆಸೆ ತೊರೆದವರು[168], ತಮಗೆ ಆಪ್ತರಾದವರು ಸತ್ತು ಜೀವನದ ವಿಷಯದಲ್ಲಿಯೇ ವೈರಾಗ್ಯ ಹುಟ್ಟಿದವರು[169] ಈ ವ್ರತವನ್ನು ಅಂಗೀಕರಿಸಿ ಮರಣವನ್ನಪ್ಪುತ್ತಿದ್ದರು. ಈ

---

161 ಸೋಮದೇವ ಈ ರೀತಿ ಇದನ್ನು ವಿವರಿಸುತ್ತಾನೆ. ಎಷ್ಟು ಯುದ್ಧಾಭ್ಯಾಸ ಮಾಡಿದರೇನು-ಎಲ್ಲವೂ ವ್ಯರ್ಥವಾಗುತ್ತದೆ, ರಾಜನೊಬ್ಬ ಯುದ್ಧರಂಗದಲ್ಲಿ ಮೂರ್ಛಿತನಾದರೆ. ಹಾಗೇ ಮನುಷ್ಯ ಕೊನೆಯ ಕ್ಷಣದಲ್ಲಿ ಅವಿವೇಕಿಯಾದರೆ ಗತಿಯೇನು ? ಆದ್ದರಿಂದಲೇ ಸಮಾಧಿಮರಣದ ಆವಶ್ಯಕತೆ.

[Yaśastilaka and Indian Culture, p. 287.]

162 EC.II.22, C. 700 A.D. 'ಶ್ರೀಬಾಳಾ ಮೇಲ್ಮಿಖಿ ಮೇಲೆ ಸರ್ಪದ ಮಹಾದಂತಾಗ್ರದುಳ್ಸಲ್ವವೊಲ್'

163 EC. II. 75, C. 650 A.D.

164 ಯಶೋಧರ ಚರಿತೆ (ಸಂ : ಕೆ. ವಿ. ರಾಘವಾಚಾರ್), 1.22.

165 EC. II. 88, C. 700 A.D.

''ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೊಲ್ ಮಂಜುವೊಲ್ ತೋಱಿ ಬೇಗಂ
ಪಿ(ಪ)ರಿಗುಂ ಶ್ರೀರೂಪಲೀಲಾಧನವಿಭವಮಾರಾಶಿಗಳ್ ನಿಲ್ಲವಾರ್ಗ್ಗಂ
ಪರಮಾರ್ತ್ಥಂ ಮೆಚ್ಚೆನಾನೀ ಧರಣಿಯುಳಿರವಾನೆಂದು ಸನ್ಯಾಸನಂಗೆ
ಯ್ದುರುಸತ್ವನ್ನಂದಿಸೇನಪ್ರವರಮುನಿವರನ್ ದೇವಲೋಕಕ್ಕೆ ಸಂದಾನ್ ॥"

166 EC. II. 113, C. 700 A.D.

167 EC. VII. Sk. 219, 918 A.D.

168 EC. II. 21, C. 700. A.D. ಅಕ್ಷಯಕೀರ್ತಿ ಎಂಬಾತ ದಕ್ಷಿಣದ ಮಧುರೆಯಿಂದ ಶ್ರವಣಬೆಳಗೊಳಕ್ಕೆ ಬಂದು ವ್ರತ ತೆಗೆದುಕೊಂಡನು. ಕಾರಣ, ಅವನನ್ನು ಒಂದು ಹಾವು ಮುಟ್ಟಿದ್ದಿತು. 'ಲಕ್ಷಣವಂತ'ರು ಎಂದರೆ, ವೈದ್ಯಶಾಸ್ತ್ರ ಬಲ್ಲವರು ವಾಸಿಯಾಗುವುದಿಲ್ಲ ಎಂದು ಹೇಳಿದುದರಿಂದಾಗಿ ಅವನು ಸನ್ಯಸನ ವ್ರತವನ್ನು ಸ್ವೀಕರಿಸಿದನು.

169 MAR (1943). p. 71, C. 1150. A.D. ಸತ್ಯವೆಗ್ಗಡೆ ಎಂಬಾತ ಯುದ್ಧದಲ್ಲಿ ಸತ್ತನೆಂದು ಕಾಣಿಸುತ್ತದೆ. ಅವನ ಹೆಂಡಿರಿಬ್ಬರೂ ಸನ್ಯಸನ ವಿಧಿಯಿಂದ ಪ್ರಾಣ ಬಿಡುತ್ತಾರೆ. ಈ ಶಾಸನದ ಮೇಲೆ ಸ್ತ್ರೀಯರಿಬ್ಬರನ್ನು ದೇವತೆಗಳು ಸ್ವರ್ಗಕ್ಕೆ ಒಯ್ಯುವ, ಅವರು ಜಿನನ ಸಾನ್ನಿಧ್ಯದಲ್ಲಿರುವ ಚಿತ್ರಗಳಿವೆ.

ಇನ್ನೊಂದು ಶಾಸನದಲ್ಲಿ, ತಂದೆಯ ಸಾವಿನ ವಿಷಯ ಕೇಳಿ, ಮಗಳು ಸನ್ಯಸನ ವಿಧಿಯಿಂದ ಮಡಿದ ವಿಷಯವಿದೆ (EC. IX. Bn. 94, C. 900 A.D.).

ಸಮಾಧಿಮರಣಕ್ಕೆ ಧರ್ಮಗ್ರಂಥಗಳು[170] ಕೆಲವು ವಿಧಿಗಳನ್ನು ನಿಯಮಿಸಿವೆ. ಈ ವಿಧಿಗಳನ್ನನುಸರಿಸಿ ಮಡಿಯು ವುದರಿಂದ ಹೆಚ್ಚು ಪುಣ್ಯ ಬರುತ್ತದೆ ಎಂಬ ಭಾವನೆಯಿತ್ತು. ಮಹಾಸೇನರು ಶ್ರೀ ಸಂಘಗಳು ಹೇಳಿದ ವಿಧಿಗಳನ್ನು ತಪ್ಪದೇ ಅನುಸರಿಸಿ ಸತ್ತರು;[171] ಮಲ್ಲಿಷೇಣ ಎಂಬ ಮುನಿ 'ಜೈನಾಗಮ ಪ್ರಸಿದ್ಧ ಸಲ್ಲೇಖನಾವಿಧಿ'ಯಿಂದ ದೇಹ ವನ್ನು ವಿಸರ್ಜಿಸಿದರು;[172] ಅನಂತಮತಿಗಂತಿಯರು 'ದ್ವಾದಶ ವಿಧಾನ ಮುಖದಿಂದ'–ವ್ರತವನ್ನು ನಡೆಯಿಸಿ ಉಪಮೆಯಿಲ್ಲದ ಸುರಲೋಕಸೌಖ್ಯವನ್ನು ಪಡೆದರು.[173] (ಅನಶನ, ಅವಮೌದರ್ಯ, ವೃತ್ತಿಪರಿಸಂಖ್ಯಾನ, ರಸ ಪರಿತ್ಯಾಗ, ವಿವಿಕ್ತ ಶಯ್ಯಾಸನ, ಕಾಯಕ್ಲೇಶ, ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ–ಇವು ಹನ್ನೆರಡು ರೀತಿಯ ತಪಸ್ಸುಗಳು. ವಿವರಗಳಿಗೆ–ತತ್ವರತ್ನ ಪ್ರದೀಪಿಕೆ, ಪು. 341 ನೋಡಿ). 'ಆರಾಧನಾ ಯೋಗ'ದ ಮಾರ್ಗದಲ್ಲಿ ನಡೆದು ಸಮಾಧಿಮರಣ ಪಡೆದ ವಿಷಯವೂ ಒಂದು ಶಾಸನದಲ್ಲಿದೆ.[174]

ಈ ಹಿಂದೆ ವಿವರಿಸಿದ ಸಮಾಧಿಮರಣದ ರೀತಿಯನ್ನು 'ಭಕ್ತಪ್ರತ್ಯಾಖ್ಯಾನ' (=ಆಹಾರದ ಪೂರ್ಣ ನಿರಾಕರಣೆ)ವೆಂದು ಹೆಸರಿಸಬಹುದು. ಇದಲ್ಲದೆ, ಶಾಸನಗಳಲ್ಲಿ 'ಪಂಡಿತಮರಣ'ದ ಇನ್ನೆರಡು ಪ್ರಭೇದಗಳು ಉಕ್ತ ವಾಗಿವೆ. ಉದಾಹರಣೆಗೆ–'ಇಂಗಿಣೀಮರಣ'[175] (ಸಂ. ಇಂಗಿತ ಮರಣ). ಇದರ ಪ್ರಕಾರ ಸನ್ಯಾಸಿಯನ್ನು ಹುಲ್ಲಿನ ಹಾಸಿಗೆಯ ಮೇಲೆ ಮಲಗಿಸದೆ ಬರಿಯ ನೆಲದ ಮೇಲೆ ಮಲಗಿಸುತ್ತಿದ್ದರು. 'ಸಮಿತಿ' ಮತ್ತು 'ಗುಪ್ತಿ'ಗಳ ನಿಯಮ ಗಳಿಗೆ ಅಡ್ಡಿ ಬಾರದ ರೀತಿಯಲ್ಲಿ ಅವನು ಕೈಕಾಲುಗಳನ್ನು ಆಡಿಸಬಹುದಿತ್ತು. ಬೇಸರವಾದರೆ ಸ್ವಲ್ಪ ಓಡಾಡ ಬಹುದು–ಆದರೆ ಸಂಪೂರ್ಣವಾಗಿ ಆಹಾರವನ್ನು ತ್ಯಜಿಸಬೇಕಿತ್ತು.[176] ಮತ್ತೊಂದು ಪ್ರಭೇದ–'ಪಾಉಗ್ಗ ಮಣ'.[177] ಇದು ಸಂಸ್ಕೃತದ ಪ್ರಾಣೋತ್ಕ್ರಮಣದ ಪ್ರಾಕೃತ ರೂಪ ಎಂದು ಸಂಪಾದಕರು ಭಾವಿಸಿದ್ದಾರೆ. ಆದರೆ ಇದು ಸಂಸ್ಕೃತದ 'ಪ್ರಾಯೋಪಗಮನ' (ಪ್ರಾಕೃತ. ಪಾಓವಗಮಣ)ದ ತದ್ಭವವೇ ಸರಿ. ಇದರ ಪ್ರಕಾರ ವ್ರತಧಾರಿಯಾದವನು ಜೀವಿಗಳಿಲ್ಲದ ಕಡೆ ಆಹಾರವಿಲ್ಲದೆ ಸಾಯುವವರೆಗೆ ಮರದಂತೆ ಅಲುಗಾಡದೆ ನಿಂತಿರಬೇಕು.[178]

---

170 ಉತ್ತರಾಧ್ಯಯನ, ರತ್ನಕರಂಡಕ, ಸ್ಥಾನಾಂಗ, ಸಮವಾಯಾಂಗ–ಮುಂತಾದ ಗ್ರಂಥಗಳಲ್ಲಿ ಇವುಗಳ ವಿವರಗಳಿವೆ.

171 EC. II. 27, C. 700 A.D.

172 EC. II. 67, 1129 A.D.

173 EC. II. 98, C. 700 A.D.

174 EC. II. 106, C. 700 A.D. ; No. 76, C. 700 A.D.

175 JISI. No. 22, C. 1008 A.D.

ಶಾಸನ ಸಾಹಿತ್ಯ ಸಂಚಯ, ಪು. 31 (ಹನ್ನೊಂದನೇ ಶತಮಾನದ ಶಾಸನ)–

"ಏಂ ಗಹನಮೊ ನಿಱಿಸಿದನು । ತ್ತುಂಗಾದ್ರಿಯ ಮೇಗೆ ಸಿಂಹನಂದ್ಯಾಚಾರ್ಯಂ ಬಂ ।
ದಿಂಗಿಣಿ ಮರಣಂ ಗೆಯ್ದೊಡ । ಸಂಗಡೆ ಕಲ್ಯಾಣಕೀರ್ತಿ ಜಿನಶಾಸನಮಂ ॥
ಕಡುತಪವಿಂಗಿಣಿ ಮರಣದೊ । ಳೊಡಲಂ ತವೆ ನೋನ್ತು ಸಿಂಹಣಂದ್ಯಾಚಾರ್ಯರ್ ।
ಮುಡಿಪಿದೆಡೆಯೊಳ್ಪಿಡೆಂಗಂ । ಪಡೆದಿರೆ ಮಾಡಿಸಿ ಜಿನೇಂದ್ರ ಚೈತ್ಯಾಳಯಮಂ ॥"

176 History of Jaina Monachism, p. 201.

177 EC. II. 82, C. 750 A.D.

178 History of Jaina Monachism, p. 201.

ವಡ್ಡಾರಾಧನೆಯಲ್ಲಿ ಪ್ರಾಯೋಪಗಮನದ ಲಕ್ಷಣವನ್ನು ಈ ರೀತಿ ಹೇಳಿದೆ :

ಸ್ಥಿತಸ್ಯ ವಾ ನಿಷಣ್ಣಸ್ಯ ಯಾವತ್ ಸುಪ್ತಸ್ಯ ವಾ ಪುನಃ ।
ಸರ್ವಾಭೀಷ್ಟಪರಿತ್ಯಾಗಃ ಪ್ರಾಯೋಪಗಮನಂ ಸ್ಮೃತಂ ॥ (ಪು. 96).

ಲಲಿತಘಟೆ ಮುಂತಾದವರು ಅತ್ತಿತ್ತ ಹೊರಳದೆ, ಕುಳ್ಳಿರದೆ, ಏಳದೆ ಒಂದೇ ಕಡೆ ಮಲಗಿ "ಪ್ರಾಯೋಪ ಮಗನಂಗೆಯ್ದು" ವಿಷಯ ಅಲ್ಲಿ ಬಂದಿದೆ.

ಅನೇಕ ಬಾರಿ ಕಾಣಿಸಿಕೊಳ್ಳುವ ಮತ್ತೊಂದು ಪ್ರಭೇದನೆಂದರೆ ಸಲ್ಲೇಖನ (ಪ್ರಾ. ಸಂಲೇಹಣ). ಇದರ ಅವಧಿ ಹನ್ನೆರಡು ವರ್ಷ. ಮೊದಲ ನಾಲ್ಕು ವರ್ಷ ರುಚಿಯಾದ ಆಹಾರಗಳನ್ನು ಬಿಡಬೇಕು ; ಮುಂದಿನ ನಾಲ್ಕು ವರ್ಷ ಅನೇಕ ಉಪವಾಸಗಳನ್ನು ಮಾಡಬೇಕು ; ಒಂಬತ್ತನೇ ಹತ್ತನೇ ವರ್ಷಗಳಲ್ಲಿ ಎರಡನೆ ಉಪವಾಸದನಂತರ 'ಆಚಾಮ್ಲ'[179]ವನ್ನು ತಿನ್ನಬೇಕು. ಕೊನೆಕೊನೆಗೆ ದೀರ್ಘವಾದ ಉಪವಾಸಗಳನ್ನು ಕೈಗೊಳ್ಳಬೇಕು. ಹನ್ನೊಂದನೇ ವರ್ಷ ಸ್ವಲ್ಪವೇ 'ಆಚಾಮ್ಲ'ದ ಮೇಲೆ ಬದುಕಬೇಕು. ಹನ್ನೆರಡನೇ ವರ್ಷ ಸ್ವಲ್ಪ 'ಆಚಾಮ್ಲ' ತಿಂದು ಮಾರನೆಯ ದಿನ ಉಪವಾಸ ಮಾಡಿ ಮತ್ತೆ ಮರುದಿನ 'ಆಚಾಮ್ಲ'ವನ್ನು ತಿನ್ನಬಹುದು, ಇಲ್ಲವೇ ಹದಿನೈದು ದಿನ ಅಥವಾ ಒಂದು ತಿಂಗಳವರೆಗೆ ಪೂರ್ಣವಾಗಿ ಉಪವಾಸ ಮಾಡಬಹುದು. ಪ್ರಾಣವು ಹೋಗುವವರೆಗೆ ಈ ರೀತಿಯ ನಿಯಮಾನುಸರಣೆ ಇರಬೇಕು.[180] ಇದನ್ನೇ ಸಲ್ಲೇಖನವ್ರತ ಎನ್ನುವುದು.[180.1]

ಈ ವ್ರತವನ್ನು ಮುನಿಗಳಲ್ಲದೆ ಸಂಸಾರಿಗಳಾದ ಪುರುಷರೂ, ಸ್ತ್ರೀಯರೂ ಅಂಗೀಕರಿಸುತ್ತಿದ್ದರು. ಚಂದ್ರದೇವಾಚಾರ್ಯ,[181] ಸರ್ವನಂದಿ ಭಟಾರ,[182] ವಿಮಳಚಂದ್ರ ಪಂಡಿತದೇವ[183] ಮುಂತಾದ ಮುನಿಗಳು ಈ ವ್ರತಧಾರಿಗಳಾಗಿ ಮಡಿದರು. ಶಶಿಮತಿಗಂತಿ,[184] ರಾಜ್ಞೀಮತಿಗಂತಿಯರೂ[185] ಹೀಗೇ ಮಡಿದರು. ಶ್ರೀಮತಿಗಂತಿ ಎಂಬಾಕೆಯ ಸಾವಿನ ವಿಷಯ ಹೇಳಿದನಂತರ ಆಕೆಯ ಗುರುಗಳ ವರ್ಣನೆ ಬರುತ್ತದೆ.[186] ಅವಳ ಸಾವಿನ ವಿಷಯದಲ್ಲಿ ಯಾರಿಗೂ ದುಃಖವಿಲ್ಲ. ಅದು ಸಾವಲ್ಲ, ಸಿದ್ಧಿ ಎನ್ನುವ ಭಾವನೆ ಅವರಿಗಿತ್ತು. ಮಲ್ಲಿಷೇಣ ಎಂಬುವರು ಸಲ್ಲೇಖನವ್ರತವನ್ನು ಅಂಗೀಕರಿಸಿ, ತಮ್ಮ ದೇಹಪರಿತ್ಯಾಗವನ್ನು ನೋಡಲು ಬಂದಿದ್ದ "ಸಕಳ ಸಂಘ[187] ಸಂತೋಷನಿಮಿತ್ತ"ವಾಗಿ "ಅಂತಃಕರಣಪರಿಣತಿಪ್ರಕಾಶನಾಯ''—ಎಂದರೆ, ಸಾವು ಸಮೀಪಿಸಿದ್ದರೂ ಅಂತರಂಗ ಕಳೆಗುಂದಿಲ್ಲ, ಅದು ಹೆಚ್ಚು ಪಕ್ವತೆಯಿಂದ ಕೂಡಿದೆ ಎಂಬುದನ್ನು ತೋರಿಸಲು ಆಶುಪದ್ಯವೊಂದನ್ನು ರಚಿಸಿ ಹೇಳಿದ ಆಶ್ಚರ್ಯಕರವಾದ ವಿಷಯವೊಂದು ಶಾಸನೋಕ್ತವಾಗಿದೆ.[188]

---

179 "ಆಚಾಮ್ಲವರ್ಧನಮೆಂಬ ನೋಂಪಿಯುಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದಂ ಮುಡಿಪೆ...'' (ವಡ್ಡಾರಾಧನೆ, ಪು. 61). ಸಲ್ಲೇಖನಕ್ಕೆ ಆಚಾಮ್ಲವರ್ಧನದ ನೋಂಪಿ ಎಂಬ ಮತ್ತೊಂದು ಹೆಸರಿದ್ದಿರುವಂತೆ ಕಾಣುತ್ತದೆ.

180 History of Jaina Monachism, pp. 201–2.

180.1 ಪಂಡಿತ ಮರಣದ ಪ್ರಭೇದಗಳಾದ ಭಕ್ತ ಪ್ರತ್ಯಾಖ್ಯಾನ, ಇಂಗಿಣಿ ಮತ್ತು ಪ್ರಾಯೋಪಗಮನಗಳಲ್ಲಿ ಕೊನೆಯ ಎರಡು ಬಹಳ ಕಷ್ಟಸಾಧ್ಯವಾದುವು ಆದ್ದರಿಂದ ಸಾಮಾನ್ಯವಾಗಿ ಮೊದಲನೆಯದೇ ಹೆಚ್ಚು ಬಳಕೆಯಲ್ಲಿದ್ದುದು. 'ಸಲ್ಲೇಖನ', 'ಸಮಾಧಿಮರಣ', 'ಸನ್ಯಸನ'ಗಳನ್ನು ಸಮಾನಾರ್ಥವಾಗಿ ಬಳಸುವುದುಂಟು. ಇವು ಮೂರಕ್ಕೂ 'ಭಕ್ತಪ್ರತ್ಯಾಖ್ಯಾನ'ವೆಂಬ ಅರ್ಥವೇ. ವಿವರಗಳಿಗೆ, ನೋಡಿ— B. K. Khadabadi : 'The Vow of Samādhimaraṇa in Early Kannada' (Studies in Indian Culture and History, pp. 383-7)

181 EC. II. 84, C. 700 A.D.

182 JISI. No. 19, 881–2 A.D.

183 EC. VI. Mg. 11, C. 990 A.D.

184 EC. II. 76, C. 700 A.D.

185 EC. II. 97, C. 700 A.D.

186 EC. II. 351, 1119 A.D.

187 ಇದು ಬಹುಶಃ ಹಿಂದೆ ಹೇಳಿದ 'ಚಾತುರ್ವರ್ಣ ಶ್ರವಣ ಸಂಘ'ವಿರಬೇಕು.

188 EC. II. 67, 1129 A.D. ಆಶುಪದ್ಯವಿದು–

" ಆರಾಧ್ಯರತ್ನತ್ರಯಮಾಗಮೋಕ್ತಂ । ವಿಧಾಯ ನಿಶ್ಶಲ್ಯಮಶೇಷ ಜಂತೋಃ ।
ಕ್ಷಮಾಂ ಚ ಕೃತ್ವಾ ಜಿನಪಾದಮೂಲೇ । ದೇಹಂ ಪರಿತ್ಯಜ್ಯ ದಿವಂ ವಿಶಾಮಃ "॥

[ಆಗಮೋಕ್ತವಾದ ರತ್ನತ್ರಯವನ್ನು ಆರಾಧಿಸಿ, ಸಮಸ್ತ ಜಂತುಗಳ ವಿಷಯದಲ್ಲಿಯೂ ಹಿಂಸೆಯನ್ನು ಬಿಟ್ಟು, ಜಿನನ ಪಾದ ಮೂಲದಲ್ಲಿ ಕ್ಷಮೆಯನ್ನು ಭಾವಿಸಿ, ದೇಹವನ್ನು ತ್ಯಜಿಸಿ ಸ್ವರ್ಗವನ್ನು ಸೇರುತ್ತೇವೆ.]

ಸಮಾಧಿಮರಣವನ್ನು ಕಣ್ಣಾರೆ ಕಾಣಲು ಬಂದಿದ್ದ ಜನರ ಮನಸ್ಸಿನ ಮೇಲೆ ಇದು ಅದ್ಭುತವಾದ ಪರಿಣಾಮವನ್ನುಂಟುಮಾಡಿರಬೇಕು.

ಜೈನಮತೀಯರಾದ ಅನೇಕ ರಾಜರು ಸಮಾಧಿವಿಧಿಯಿಂದ ಮಡಿದಂತೆ ತಿಳಿದುಬರುತ್ತದೆ. ಗಂಗರಾಜ ನೊಳಂಬ ಕುಲಾಂತಕ ತನ್ನ ದಿಗ್ವಿಜಯಗಳ ನಂತರ ಒಂದು ವರ್ಷ ರಾಜ್ಯವನ್ನು ತ್ಯಜಿಸಿ, ಮೂರು ದಿನ 'ನೋಂತು'-ಎಂದರೆ, ವ್ರತಧಾರಿಯಾಗಿ ಮಡಿದನು.[189] ನೀತಿಮಹಾರಾಜನೂ,[190] ರಾಷ್ಟ್ರಕೂಟರ ಇಂದ್ರ ರಾಜನೂ[191] ಹೀಗೇ ಮಡಿದರು. ಚಾಳುಕ್ಯರಾಜ ಸೋಮೇಶ್ವರನು ತುಂಗಭದ್ರೆಯಲ್ಲಿ ಮುಳುಗಿ ಪ್ರಾಣಬಿಟ್ಟ ವಿಷಯವು ಶಾಸನವೊಂದರಲ್ಲಿ ಬಂದಿದೆ.[192] ಇದನ್ನು ರೈಸ್ ಅವರು ಸಮಾಧಿಮರಣವೆಂದು ಭಾವಿಸಿರುವಂತಿದೆ.[193] ಈ ರೀತಿಯಲ್ಲಿ ಸಾಯುವುದನ್ನು ('ಜಲಪ್ಪವೇಸ') ಜೈನ ಗ್ರಂಥಗಳು ನಿರ್ಬಂಧಿಸಿರುವುದರಿಂದಲೂ, ಚಾಳುಕ್ಯರು ಪ್ರಧಾನವಾಗಿ ಶೈವರಾಗಿದ್ದುದರಿಂದಲೂ ಸೋಮೇಶ್ವರನ ಸಾವನ್ನು ಸಮಾಧಿಮರಣವೆಂದು ಭಾವಿಸುವುದು ಸರಿಯಲ್ಲ. ಜೈನೇತರರೂ ಕೂಡ ವ್ರತಧಾರಿಗಳಾಗಿ ಮಡಿದ ನಿದರ್ಶನಗಳುಂಟು.[194] ಹೆಗ್ಗಡೆಯ ಅಧಿಕಾರದಲ್ಲಿದ್ದ ಬೀರಯ್ಯ,[195] ವ್ಯಾಪಾರಿ ಮಲ್ಲಿಶೆಟ್ಟಿ[196]ಯರೂ ಹೀಗೆಯೇ ಸಮಾಧಿಮರಣವನ್ನು ಪಡೆದ ವಿಷಯವು ಶಾಸನಗಳಲ್ಲಿದೆ.

ದಿಗಂಬರರ ಪ್ರಕಾರ ಸ್ತ್ರೀಯರಿಗೆ ಈ ಜನ್ಮದಲ್ಲಿ ಮೋಕ್ಷವಿಲ್ಲ. ಅವರು ತಮ್ಮ ಪುಣ್ಯಕರ್ಮಗಳಿಂದ ಮುಂದಿನ ಜನ್ಮದಲ್ಲಿ ಪುರುಷರಾಗಿ ಹುಟ್ಟಿದರೆ ಮಾತ್ರ ಮೋಕ್ಷವನ್ನು ಸಾಧಿಸಿಕೊಳ್ಳಬಹುದು ಎಂಬ ಭಾವನೆಯಿರುವುದರಿಂದಲೋ ಏನೋ ಸಮಾಧಿಮರಣವನ್ನು ಹೊಂದುವ ವಿಷಯದಲ್ಲಿ ಪುರುಷರಷ್ಟೇ, ಅಥವಾ ಅವರಿಗಿಂತ ಸ್ವಲ್ಪ ಮಿಗಿಲಾಗಿಯೇ, ಸ್ತ್ರೀಯರು ಆಸಕ್ತಿಯನ್ನು ತೋರಿಸಿದ್ದಾರೆ. ನಾಣಬ್ಬೆಕಂತಿಯರ ಶಿಷ್ಯೆ, ಪಡಿಯರ ದೋರಪಯ್ಯನ ಹಿರಿಯ ಹೆಂಡತಿ ಪಾಂಬಬ್ಬೆ "ತಲೆವಱಿದು" ಮೂವತ್ತು ವರ್ಷ ತಪಸ್ಸುಮಾಡಿ, ಕೊನೆಗೆ ವ್ರತವನ್ನು ಅಂಗೀಕರಿಸಿ ಉತ್ತಮ ಸ್ಥಾನವನ್ನು ಪಡೆದಳು.[197] ಹೊಯ್ಸಳರ ಭಂಡಾರಿ ಚಂದಿಮಯ್ಯನ ಹೆಂಡತಿ ಬೊಪ್ಪವ್ವೆಯೂ ಹಾಗೇ.[198] ಬೂಚಿದೇವನನ್ನು ಅನುಸರಿಸಿ ಅವನ ತಂಗಿಯೂ ಕೂಡ ಎಲ್ಲರಿಗೂ ಆಹಾರ, ಅಭಯ, ಭೇಷಜ, ಶಾಸ್ತ್ರ ಎಂಬ ನಾಲ್ಕು ರೀತಿಯ ದಾನಗಳನ್ನು ಮಾಡಿ, ಸಮಾಧಿಕ್ರಿಯೆಯ ಅಂತ್ಯದಲ್ಲಿ ಸ್ವರ್ಗವನ್ನು ತನ್ನ ಮನೆಯೆಂಬಂತೆ ("ಸ್ವಸ್ಥಾನವತ್") ಪ್ರವೇಶಿಸಿದಳು. ಈ ವಿಷಯವನ್ನು ಹೇಳುವ ಶಿಲಾ

---

189 EC. II. 59, 974 A.D.

190 EC. V. Mj. 55, C. 1035 A.D.

191 EC. II. No. 133, 982 A.D.

192 EC. VII. Sk. 136, 1068 A.D. ಬಿಲ್ಹಣನು ತನ್ನ ವಿಕ್ರಮಾಂಕದೇವ ಚರಿತದಲ್ಲಿಯೂ ಈ ಅಂಶವನ್ನು ಪ್ರಸ್ತಾಪಿಸಿದ್ದಾನೆ. ಸೋಮೇಶ್ವರನಿಗೆ ಮಹಾದಾರುಣವಾದ ಜ್ವರವು ಪ್ರಾಪ್ತವಾಯಿತೆಂದೂ, ತನ್ನ ಅವಸಾನವನ್ನರಿತ ಅವನು ತುಂಗಭದ್ರೆಗೆ ಹೋಗಿ, ಸ್ನಾನವನ್ನು ಮಾಡಿ, ಬೇಕಾದಷ್ಟು ದಾನಗಳನ್ನು ಕೊಟ್ಟು, ನದಿಯಲ್ಲಿ ಮುಳುಗಿ ಪ್ರಾಣವನ್ನು ತ್ಯಜಿಸಿದನೆಂದೂ ಅಲ್ಲಿ ಹೇಳಿದೆ [EC. VII. Introduction, p. 20].

193 Mysore and Coorg from Inscriptions, p. 185.

194 ಮಲ್ಲಿದೇವರಸ ಎಂಬಾತ ತಾನು ಕಟ್ಟಿಸಬೇಕೆಂದಿದ್ದ ಶಿವದೇವಸ್ಥಾನವನ್ನು ಕಟ್ಟಿಸಿ ತೃಪ್ತನಾಗಿ "ಇನಿ ಲೋಕದಲಿರೆನೆಂದು ಸನ್ಯಾಸದಿಂ ಕವಿಸಳಕೆ ಹೋದ" [ಇನ್ನು ಲೋಕದಲ್ಲಿರುವುದು ಸಾಕು ಎಂದು ಸನ್ಯಸನ ವಿಧಿಯಿಂದ (ಅಥವಾ ಸನ್ಯಾಸಿಯಾಗಿ?) ಕೈಲಾಸಕ್ಕೆ ಹೋದನು.]–EC. XI. Cl. 22, C. 1090 A.D.

195 EC. IV. Yd. 50, C. 1120 A.D.

196 EC. II. 159, C. 1130 A.D.

197 EC. VI. Kd. 1, 971 A.D.

198 EC. VIII. Tl. 198, C. 1090 A.D.

ಸ್ತಂಭವು ಅವಳ ಜಯಸ್ತಂಭವೂ ಆಗಿದೆಯಂತೆ.[199] ವಿಷ್ಣುವರ್ಧನನ ರಾಣಿ ಶಾಂತಲೆ ಶಿವಗಂಗೆಯಲ್ಲಿ 'ಮುಡುಪಿ'[200] ಸ್ವರ್ಗಸ್ಥಳಾದುದನ್ನು ಕೇಳಿ ತಾಯಿ ಮಾಚಿಕಬ್ಬೆಗೆ ವೈರಾಗ್ಯ ಹುಟ್ಟಿ ಶ್ರವಣಬೆಳಗೊಳದಲ್ಲಿ 'ದುರ್ಧರ ಸನ್ಯಸನ' ವ್ರತವನ್ನು ಸ್ವೀಕರಿಸಿ ಮುಡಿದ ವಿಷಯವು ಶಾಸನವೊಂದರಲ್ಲಿದೆ.[201] ಉಪವಾಸದಿಂದ ಮುಚ್ಚಿದ ಅವಳ ಅರೆಗಣ್ಣುಗಳು, ಮುನಿಗಳು ಓದುತ್ತಿದ್ದ ಪಂಚ ಪರಮೇಷ್ಠಿಗಳ ಸ್ತೋತ್ರ, ಅವಳ ಜಿನಧ್ಯಾನ, ಬಂಧುಜನಗಳು ಬಂದು ದುಃಖಿಸುತ್ತಿದ್ದರೆ ಅವರನ್ನು ಅವಳು ಸಮಾಧಾನಪಡಿಸುತ್ತಿದ್ದ ರೀತಿ-ಇವುಗಳ ವರ್ಣನೆಯೆಲ್ಲ ಅಲ್ಲಿ ಬಂದಿದೆ. ಅವಳು ಒಂದು ತಿಂಗಳು ಉಪವಾಸ ಮಾಡಿದಳು. ಸನ್ಯಸನವನ್ನಂಗೀಕರಿಸಿದ ಸ್ತ್ರೀಯರಲ್ಲಿ ಇಷ್ಟು ನಿಷ್ಠಾವಂತರನ್ನು ನಾವು ಕಾಣಲಿಲ್ಲವೆಂದು ಧಾತ್ರಿ ಹೊಗಳಿತು.

ಮೇಲೆ ಹೇಳಿದಂತೆ ಮಾಚಿಕಬ್ಬೆ ಒಂದು ತಿಂಗಳು ಉಪವಾಸಮಾಡಿದಳು. ಮೂರು ತಿಂಗಳುಗಳವರೆಗೆ ನೋಂತು ಮುಡಿದ ನಿದರ್ಶನಗಳೂ ಇವೆ.[202]

## ನಿಸಿದಿ(ಗೆ)

ಸನ್ಯಸನ ವಿಧಿಯಿಂದ ಮುಡಿದವರ ಸ್ಮಾರಕವಾಗಿ-ವೀರರಿಗೆ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದಂತೆ-ಕೆಲವು ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು. ಇವುಗಳನ್ನು 'ನಿಸಿದಿಗಲ್ಲು'ಗಳೆಂದು ಕರೆಯುತ್ತಾರೆ. 'ನಿಸಿಧಿಗೆ',[203] 'ನಿಶೀಧಿಗೆ'[204], 'ನಿಸಿಧಿ',[205] 'ನಿಶೀಧಿಕಾ'[206], 'ನಿಶಿಧಿಗೆ'[207], 'ನಿಷಿದ್ಯಾಲಯ'[208], 'ನಿಸಿದಿಗೆ'[209] (ಪಾಠಾಂತರ-ನಿಸಿದಿ), ಸಂಸ್ಕೃತದಲ್ಲಿ ನಿಷೀದಿಕಾ, ಪ್ರಾಕೃತದಲ್ಲಿ 'ನಿಸೀಹಿಯಾ' ಎಂಬ ರೂಪಗಳುಂಟು. (ಈಗಲೂ ಉತ್ತರ ಕರ್ನಾಟಕದಲ್ಲಿ ನಿಸಿದ್ದಿ ಎಂದು ಕರೆಯುತ್ತಾರೆ.) ಇವುಗಳು ಬಸದಿಗಳ ಮುಂದಿನ ಪ್ರತ್ಯೇಕ ಶಿಲಾಫಲಕಗಳಲ್ಲಿ, ಬಸದಿಯ ಕಂಬಗಳ ಮೇಲೆ, ಊರ ಹೊರಗಿನ ಹೊಲಗಳಲ್ಲಿ ನೆಟ್ಟ ಕಲ್ಲುಗಳಲ್ಲಿ, ಬಂಡೆಗಳ ಮೇಲೆ ಕಾಣಿಸಿಕೊಳ್ಳುತ್ತವೆ. ಇವುಗಳಲ್ಲಿ ಸನ್ಯಸನದ ವಿಷಯವನ್ನು ಮಾತ್ರ ಹೇಳಿರಬಹುದು, ಅಥವಾ ಅದರ ಜೊತೆಗೆ ಸನ್ಯಸನವನ್ನು ಸ್ವೀಕರಿಸಿದ ವ್ಯಕ್ತಿಯ ಚಿತ್ರವೂ ಇರಬಹುದು. ಸ್ತ್ರೀಯರಿಬ್ಬರು ಹೀಗೆ ಮುಡಿದ ವಿಷಯವನ್ನು ತಿಳಿಸುವ ಶಾಸನವೊಂದರಲ್ಲಿ ಮೂರು ಹಂತಗಳಿವೆ. ಕೆಳಗಿನ ಅಂತಸ್ತಿನಲ್ಲಿ ಆ ಇಬ್ಬರು ಸ್ತ್ರೀಯರ ಚಿತ್ರವೂ, ಮಧ್ಯದ ಹಂತದಲ್ಲಿ ಅವರನ್ನು ವಿಮಾನದಲ್ಲಿ ಕರೆದೊಯ್ಯುತ್ತಿರುವ ಚಿತ್ರವೂ, ಮೇಲಿನ ಹಂತದಲ್ಲಿ ಜಿನಸಾನ್ನಿಧ್ಯ

---

199 EC. II. 129, 1120 A.D.

200 'ಮುಡಿ' ಎಂಬ ಮಾತಿಗೆ ಕೇಶಿರಾಜ "ಕೇಶಬಂಧನೇ, ನಿರ್ವಹಣೇ" ಎಂಬ ಅರ್ಥ ಮಾಡುತ್ತಾನೆ. ನಿರ್ವ್ರ್ಃ= ಮುಡಿ, ಬಿಡಿಸಿಕೊ. 'ಮುಡಿಪ್ಪಿದರ್' ಎಂಬ ಮಾತು ಆಹಾರವನ್ನು ತ್ಯಜಿಸುವ, ಮೋಹದಿಂದ ಬಿಡಿಸಿಕೊಳ್ಳುವ, ಮುಡಿಯುವ ಮೂರು ಅರ್ಥಗಳನ್ನೂ ಸೂಚಿಸುತ್ತದೆ ಎನ್ನುತ್ತಾರೆ, ರೈಸ್ ಅವರು ( IA. II. p. 322 ). "ಮುಡಿಪ್ಪು" ಎಂಬ ಪದಕ್ಕೆ ವ್ರತವನ್ನು ಮುಗಿಸು, ಮರಣವನ್ನು ಹೊಂದು ಎಂದು ಅರ್ಥೈಸಬಹುದೆಂದು ಪ್ರೊ|| ಬಿ. ಎಂ. ಶ್ರೀ. ಅವರು ಸೂಚಿಸುತ್ತಿದ್ದರೆಂದು ಪ್ರೊ|| ತೀ. ನಂ. ಶ್ರೀ. ಯವರು ತಿಳಿಸುತ್ತಾರೆ. ಹೋಲಿಸಿ—ತಮಿಳು. ಮುಡಿ=ಮುಗಿಸು, ಸಾಯಿ ; ಮುಡಿವು=ಕೊನೆ, ಸಾವು.

201 EC. II. 143, 1131 A.D.

202 EC. II. 20, C. 700 A.D

203 MAR (1942). p. 207, 1013 A.D.

204 BKI. I. i. 52, 1007 A.D.

205 EC. IX. Cg. 56, C. 1044 A.D.

206 EC. VI. Kp. 3, C. 1090 A.D.

207 EC. II. 117, 1123 A.D.

208 EC. II. No. 66.

209 ವಡ್ಡಾರಾಧನೆ, ಪು. 85.

ದಲ್ಲಿ ಅವರಿಬ್ಬರು ನಿಂತಿರುವ ಚಿತ್ರವೂ ಇದೆ.[210] ನಿಸಿದಿಗಲ್ಲುಗಳ ಮೇಲೆ ಸಾಮಾನ್ಯವಾಗಿ ಮುಕ್ಕೊಡೆಯಿರುವ ಜಿನನ, ಗುರುವಿನ ಮುಂದೆ ಸನ್ಯಸನವ್ರತಧಾರಿಯಾಗಿರುವ ವ್ಯಕ್ತಿಯ ಚಿತ್ರಗಳಿರುತ್ತವೆ.[211] ಸನ್ಯಸನ ವ್ರತವನ್ನು ಬಸದಿಯಲ್ಲಾದರೂ ಸರಿಯೆ[212] ಅಥವಾ ಬೆಟ್ಟದ ಮೇಲೆಯೋ ಊರ ಹೊರಗೋ[213] ಆಚರಿಸಬಹುದಾಗಿದ್ದಿತು. 'ನಿಶಿಧಿಯಂ ನಿಜಿಸಿ', 'ನಿಶಿಧಿಯಂ ಮಾಡಿಸಿ', 'ನಿಶೀಧಿಕಾ ಕೃತಾ', 'ನಿಶಿಧಿಗೆಯ ನಿಲಿಸಿ' ಮುಂತಾದ ಮಾತುಗಳು ಬರುವುದರಿಂದಲೂ, ನಿಶಿದಿಗೆ ಎಂದು ಹೇಳಿರುವ ಸ್ಥಳದಲ್ಲಿ ಯಾವ ರೀತಿಯ ಕಟ್ಟಡವೂ ಅನಿವಾರ್ಯವಾಗಿ ಇರಲೇಬೇಕಾಗಿಲ್ಲವಾದುದರಿಂದಲೂ, ಫ್ಲೀಟ್ ಅವರು ಭಾವಿಸಿರುವಂತೆ[214] ಅದು ಸನ್ಯಸನ ವಿಧಿಯಿಂದ ಸತ್ತವರ ಅವಶೇಷಗಳ ಮೇಲೆ ಕಟ್ಟಿದ ಗೋರಿ ಅಲ್ಲ. ಫ್ಲೀಟ್ ಅವರು ಮತ್ತೊಂದು ಕಡೆ ಡಾ|| ಭಾವುದಾಜಿ ಅವರು ಸೂಚಿಸಿದ "a house of rest" ಎಂಬ ಅರ್ಥವನ್ನು ಒಪ್ಪಿಕೊಂಡಿದ್ದಾರೆ.[215] ಇವೆಲ್ಲ ಅರ್ಥಗಳನ್ನೂ ಒಟ್ಟಿಗೆ ಸೇರಿಸಿ ಪಿ. ಕೆ. ಆಚಾರ್ಯರು ನಿಸಿದಿಯನ್ನು "a house of rest, a tomb, a monument" ಎಂಬರ್ಥಗಳನ್ನು ಕೊಟ್ಟಿದ್ದಾರೆ.[216] ಮೇಲೆ ಹೇಳಿದಂತೆ ಹೊಲದಲ್ಲಿನ ಕಲ್ಲುಗಳ ಮೇಲೆ, ಕೆಲವು ಸಾರಿ ಬಂಡೆಯ ಮೇಲೆ[217] ಇರುವ ನಿಸಿದಿಗಳನ್ನು 'ವಿಶ್ರಾಂತಿ ಸ್ಥಳ, ಗೋರಿ' ಎಂದು ಹೇಗೆ ಭಾವಿಸುವುದು? ಸನ್ಯಾಸಿಗಳ ದೇಹಗಳನ್ನು ಸುಟ್ಟ ಸ್ಥಳಗಳು ಎಂದು ಭಾವಿಸುವುದೂ ಕಷ್ಟ. ಬಸದಿಗಳಲ್ಲಿ ದೇಹಗಳನ್ನು ಸುಡುತ್ತಿದ್ದರೆಂಬುದನ್ನು ಊಹಿಸಿಕೊಳ್ಳುವುದು ಅಸಾಧ್ಯ. ಪದದ ನಿಷ್ಪತ್ತಿಯಲ್ಲಂತೂ ಇದಕ್ಕೆ ಅವಕಾಶವೇ ಇಲ್ಲ. ಬಸದಿಯ ಒಂದು ಭಾಗವನ್ನೋ, ಕಂಬವನ್ನೋ, ಮಂಟಪವನ್ನೋ ಸತ್ತವರ ಸ್ಮಾರಕವಾಗಿ ಬಿಟ್ಟ ಸ್ಥಳವೇ ನಿಸಿದಿ ಎಂದು ಡಾ|| ದೇಸಾಯಿಯವರು ಅರ್ಥೈಸುತ್ತಾರೆ. ನಿಸಿದಿ ಸತ್ತವರಿಗಾಗಿ ಕಟ್ಟಿದ ಸ್ಮಾರಕವಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತಾರೆ.[218] ವೀರಗಲ್ಲು, ಮಾಸ್ತಿಗಲ್ಲುಗಳಿಗೂ ನಿಸಿದಿಗಲ್ಲುಗಳಿಗೂ ಹತ್ತಿರದ ಸಾಮ್ಯವಿದೆ ಎಂಬುದನ್ನು ಹಿಂದೆಯೇ ನೋಡಿದೆವು. ವೀರಗಲ್ಲುಗಳು 'ಸ್ಮಾರಕ ಮಂದಿರ'ಗಳಲ್ಲವೇ ಅಲ್ಲ ಎನ್ನುವುದು ಸ್ಪಷ್ಟ. ವೀರಗಲ್ಲುಗಳಂತೆಯೇ ಇವುಗಳನ್ನೂ 'ಪರೋಕ್ಷವಿನಯ'ಕ್ಕಾಗಿ ನಿಲ್ಲಿಸುತ್ತಿದ್ದರು. 'ನಿಷೀದಿಕಾ' ಎಂಬ ಮಾತನ್ನು ಕೇಳಿದೊಡನೆಯೇ ಸಹಜವಾಗಿ 'ಉಪನಿಷತ್' ಎಂಬ ಮಾತು ನೆನಪಿಗೆ ಬರುತ್ತದೆ. 'ಉಪನಿಷತ್' ಎಂದರೆ (ಗುರುವಿನ) ಸಮೀಪದಲ್ಲಿ ಕುಳಿತುಕೊಳ್ಳುವುದು ಎಂದರ್ಥ. ನಿಸಿದಿಗಲ್ಲುಗಳ ಮೇಲೆ ಜಿನಸ್ತೋತ್ರವನ್ನು ಹೇಳುತ್ತಿರುವ ಗುರು, ಗುರುವಿನ ಮುಂದೆ ಪುಸ್ತಕವಿರುವ ವ್ಯಾಸಪೀಠ (ಅಥವಾ ಠವಣೆ ಕೋಲು. ಇದಕ್ಕೆ ಗೊಂಡೆಗಳೂ ಇರುವುದುಂಟು), ವ್ಯಾಸಪೀಠದ ಇನ್ನೊಂದು ಕಡೆ ವ್ರತಧಾರಿಯಾಗಿ ಜಿನಸ್ತೋತ್ರವನ್ನು ಕೇಳುತ್ತಿರುವ ವ್ಯಕ್ತಿ–ಈ ಚಿತ್ರಗಳಿರುತ್ತವೆ. ಗುರುವಿನ ಹತ್ತಿರ ಕುಳಿತು ಪ್ರಾಣ ತ್ಯಜಿಸಿದ ಸ್ಥಳಕ್ಕೆ,

---

210 MAR (1943). p. 71, C. 1150 A.D.

211 JISI. No. 26.

212 ಅತ್ತಿಮಬ್ಬೆ ಕಟ್ಟಿಸಿದ ಬಸದಿಗಳಲ್ಲೆಲ್ಲಾ ಲಕ್ಕುಂಡಿಯ ಬಸದಿಯೇ ಶ್ರೇಷ್ಠ. ಏಕೆಂದರೆ ಅಲ್ಲಿ "ಸನ್ಯಸನಾರಾಧನೆಯ ಜವದಿ ಸಂದ ನಿಶೀಧಿಗೆ"ಗಳಿದ್ದವು ಎಂದು ಒಂದು ಶಾಸನವು ಹೇಳುತ್ತದೆ [BKI. I. i. 52, 1007 A.D.].

213 EC. IX. Cg. 46, C. 1044 A.D. 'ಪ್ರಭಾಚಂದ್ರದೇವರ ನಿಸಿಧಿ' ಎಂದಿರುವ ಈ ಶಿಲಾಶಾಸನ ಒಂದು ಹೊಲದಲ್ಲಿದೆ.

214 Fleet ಅವರ "Niśīdhi and Guḍḍa" ಎಂಬ ಲೇಖನವನ್ನು (IA. XII) ನೋಡಿ. "a tomb erected on the remains of a Jaina ascetic" ಎಂದು ಸೂಚಿಸಿದವರು ಪಾಠಕ್ ಅವರು. ಫ್ಲೀಟರು ಅದನ್ನು ಒಪ್ಪಿಕೊಂಡಿದ್ದಾರೆ.

215 IA. VIII. p. 246.

216 Mānasāra–An Encyclopaedia of Hindu Architecture, Vol. VII, p. 284.

217 EC. VI. Kp. 3, C. 1090 A.D.

218 JISI. p. 225.

ಆ ಸ್ಥಳವನ್ನು ಮುಂದಿನವರ ನೆನಪಿನಲ್ಲಿ ಉಳಿಸುವುದಕ್ಕಾಗಿ ಕೆತ್ತಿದ್ದ ಬರಹಕ್ಕೆ "ನಿಷೀದಿಕಾ"[219] ಎಂದು ಹೆಸರು. 'ಸದ್' ಎಂಬ ಧಾತುವಿನಿಂದ ಹೊರಟ ನಿಷತ್ತಿ ಎಂಬ ಪದಕ್ಕೆ sitting, resting ಎಂದೂ, ನಿಷಾದಿನ್ ಎಂಬ ಪದಕ್ಕೆ sitting down ಅಥವಾ lying ಎಂದೂ ಅರ್ಥಗಳಿವೆ. ಬಂಡೆಯ ಮೇಲೆ ಇಂತಹ ಬರಹಗಳಿದ್ದರೆ ಆ ಬಂಡೆಯ ತುದಿಯಲ್ಲಿ (ಅಥವಾ ಕೆಳಗಡೆ) ಮಳೆ ಬಿಸಿಲುಗಳನ್ನು ಸಹಿಸಿ ವ್ರತವನ್ನು ಆ ವ್ಯಕ್ತಿಯು ಪೂರೈಸಿದನು ಎಂದು ತಿಳಿಯಬೇಕು.

'ನಿಷೀದಿಕಾ' ಎಂಬ ರೂಪವು ಸರಿ. ಆದರೆ ನಿಸಿಧಿ, ನಿಶೀಧಿಕಾ ಮುಂತಾದ ಕಡೆ ಮಹಾಪ್ರಾಣವಿಲ್ಲವೆಯಲ್ಲ? ಎಂದರೆ, ಅದನ್ನು ಹೀಗೆ ಡಾ|| ಉಪಾಧ್ಯೆಯವರು ವಿವರಿಸುತ್ತಾರೆ–"ಸಂಸ್ಕೃತದ 'ನಿಷೀದಿಕಾ'ಕ್ಕೆ ಪ್ರಾಕೃತದ 'ನಿಸೀಹಿಯಾ' ಸಮಾನ. ಸಾಮಾನ್ಯವಾಗಿ ಪ್ರಾಕೃತದ 'ಹ' ಸಂಸ್ಕೃತದ 'ಧ'ಕ್ಕೆ ಸಮಾನ. ಉದಾಹರಣೆಗೆ, ಕಕುಹ–ಕಕುಧ. ಪ್ರಾಕೃತವನ್ನು ಚೆನ್ನಾಗಿ ಅಭ್ಯಸಿಸಿದ್ದ ಕನ್ನಡ ಕವಿಗಳಿಗೆ 'ನಿಸೀಹಿಯಾ' ಎಂಬ ರೂಪವೇ ಮನಸ್ಸಿನಲ್ಲುಳಿದು ಅದನ್ನು ಸಂಸ್ಕೃತಕ್ಕೆ ತಿರುಗಿಸುವಾಗ 'ನಿಷೀಧಿಕಾ' ಎಂದು ಮಾಡಿಬಿಟ್ಟರು. ಕ್ರಿ.ಪೂ. 2ನೇ ಶತಮಾನದ ಖಾರವೇಲನ ಶಾಸನದಲ್ಲಿ 'ನಿಸೀದಿಯಾ' ಎಂಬ ಅಲ್ಪಪ್ರಾಣ ಸಹಿತವಾದ ಪದವಿದೆ."[220]

ಈ ನಿಸಿದಿಗಳು ತೀರ್ಥಕ್ಷೇತ್ರಗಳಂತೆ ಪರಮ ಪವಿತ್ರ ಪ್ರದೇಶಗಳಾಗಿದ್ದುವು. ಭದ್ರಬಾಹುವು ಸನ್ಯಸನ ವಿಧಿಯಿಂದ ಮುಡಿದಮೇಲೆ ಭದ್ರಬಾಹುವಿನ ನಿಸಿದಿಗೆಯನ್ನು ಚಂದ್ರಗುಪ್ತನು ವಂದಿಸುತ್ತ ಅಲ್ಲಿಯೇ ತಪಸ್ಸು ಮಾಡುತ್ತಿದ್ದನೆಂದೂ, ದಕ್ಷಿಣಕ್ಕೆ ಹೋದ ಮುನಿಗಳು ಭದ್ರಬಾಹುವಿನ ನಿಸಿದಿಗೆಯನ್ನು ವಂದಿಸಿ ಹೋಗಲು ಶ್ರವಣಬೆಳಗೊಳಕ್ಕೆ ಹಿಂದಿರುಗಿ ಬಂದರೆಂದೂ ವಡ್ಡಾರಾಧನೆಯಲ್ಲಿ ಹೇಳಿದೆ.[221]

## ಹಬ್ಬಗಳು

ಜೈನ ಶಾಸನಗಳಲ್ಲಿ ಎರಡು ಹಬ್ಬಗಳ ಅಥವಾ ವ್ರತಗಳ ಪ್ರಸಕ್ತಿ ವಿಶೇಷವಾಗಿ ಬರುತ್ತದೆ. 'ಜೀವದಯಾಷ್ಟಮಿ' ಎಂಬ 'ಪರ್ವ' ಒಂದು ;[222] ಮತ್ತೊಂದು 'ನಂದೀಶ್ವರದಷ್ಟಮಿ';[223] ಎರಡನೆಯ ಪರ್ವಕ್ಕೆ 'ಅಷ್ಟನಂದೀಶ್ವರ' ಎಂಬ ಹೆಸರೂ ಉಂಟು.[224] ಗೃಹಸ್ಥರಾದವರು ಅನಿವಾರ್ಯವಾಗಿ ತಿಳಿದೋ ತಿಳಿಯದೆಯೋ ರಾಗ ಕ್ರೋಧಾದಿಗಳಿಗೆ ವಶರಾಗಿ ಅನೇಕ ಹಿಂಸೆಗಳನ್ನು ಮಾಡುತ್ತಾರೆ. ಈ ಹಿಂಸಾ ದೋಷವನ್ನು ಪರಿಹರಿಸಲು ಗೃಹಸ್ಥರು ಕೈಗೊಳ್ಳುವ ನೋಂಪಿಯೇ ಜೀವದಯಾಷ್ಟಮಿಯ ನೋಂಪಿ. ಈ ನೋಂಪಿಯ ಮಹಿಮೆಯನ್ನು ವಿವರಿಸಲೋಸುಗವಾಗಿಯೇ ಕನ್ನಡದಲ್ಲಿ ಕೆಲವು ಕಥೆಗಳಿವೆ.[225] ನಂದೀಶ್ವರ ನೋಂಪಿಯ ಸಮಯದಲ್ಲಿ ದಾನ

---

[219] ಹಾಗೆ ಮುಡಿದ ಸ್ಥಳದಲ್ಲಿ ವೇದಿಕೆಯೊಂದನ್ನು ಕಟ್ಟಿ ಅದರ ಮೇಲೆ ಒಂದು ಕೊಡೆಯನ್ನೋ, ವ್ಯಕ್ತಿಯ ಹೆಜ್ಜೆಗಳನ್ನೋ, ಅಥವಾ ಪ್ರತಿಮೆಯನ್ನೋ ಇಟ್ಟಿರಬಹುದು. ಹೀಗೆ ಪುಟ್ಟ ಸ್ಮಾರಕವನ್ನು ಕಟ್ಟಿಸುವುದು ಬಹಳ ಅಪೂರ್ವ. ಡಾ|| ಎ. ಎನ್. ಉಪಾಧ್ಯೆ ಅವರು "It is the inscription and not the monument that can be called an *epitaph*" ಎಂದು ಹೇಳಿರುವುದು ಸರಿ.

[Annals of the Bhandarkar Research Institute, XIV, p. 264.]

[220] Annals of the Bhandarkar Research Institute, XIV (1932–33), pp. 265–66.

[221] ವಡ್ಡಾರಾಧನೆ, ಪು. 85.

[222] JISI. No. 2, 1098 A.D.

[223] JISI. No. 3, 1124 A.D.

[224] EC. VI. Mg. 13, 1063 A.D.

[225] ಯಶೋಧರ ಚರಿತೆ (ಸಂ. ಕೆ. ವೆಂ. ರಾಘವಾಚಾರ್) ಎಂಬ ಗ್ರಂಥದಲ್ಲಿ 'ಜೀವದಯಾಷ್ಟಮಿ ನೋಂಪಿಯ ಕಥೆ' ಎಂಬ ಹೆಸರಿನ ಎರಡನೇ ಅನುಬಂಧವನ್ನು ನೋಡಿ. ಹಿಂದುಗಳ 'ದುರ್ಗಾಷ್ಟಮಿ'ಯ ದಿನವೇ ಜೈನರ 'ಜೀವದಯಾ

ಮಾಡುವುದು ಶ್ರೇಷ್ಠವೆಂದು ಶಾಸನವೊಂದು ಹೇಳುತ್ತದೆ.[226] ನಂದೀಶ್ವರದ ನೋಂಪಿಯ ಮಹಿಮೆಯನ್ನು ವರ್ಣಿಸುವ ಚಂಪೂ ಗ್ರಂಥವೊಂದು ಕನ್ನಡದಲ್ಲಿದೆ.[227] ರತ್ನತ್ರಯಗಳ ಆರಾಧನೆಯಿಂದ ಸಿದ್ಧ ಪದವಿಯನ್ನು ಪಡೆದುದರ ಸಂಕೇತವೇ ನಂದೀಶ್ವರದ ಪ್ರತಿಮೆ. ನಂದೀಶ್ವರದ ಪೂರ್ಣ ಪ್ರತಿಮೆ ಹೀಗಿರಬೇಕು. ಪ್ರತಿಮೆಯ ಪ್ರತಿ ಮುಖದ ಮೇಲೂ ತೀರ್ಥಂಕರರ 1014 ಪ್ರತಿಮೆಗಳಿದ್ದು ತುದಿಯಲ್ಲಿ ಸಿದ್ಧನ ಚಿತ್ರವಿರಬೇಕು. ಇದನ್ನು ಈಗಲೂ ಲಕ್ಷ್ಮೇಶ್ವರದ ಶಂಖ ಬಸ್ತಿಯಲ್ಲಿ ಕಾಣಬಹುದಾಗಿದೆ.[228] ಈ ನೋಂಪಿಗಳ ಜೊತೆಯಲ್ಲಿ ಸಿದ್ಧಚಕ್ರದ ನೋಂಪಿ ಮತ್ತು ಶ್ರುತ ಪಂಚಮಿ ಎಂಬ ಎರಡು ನೋಂಪಿಗಳಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ.[229] ಸಿದ್ಧಚಕ್ರದ ನೋಂಪಿಯನ್ನು ಸಿದ್ಧರ ಗೌರವಾರ್ಥವಾಗಿ ಆಚರಿಸಿದರೆ, ಶ್ರುತ ಪಂಚಮಿ ನೋಂಪಿಯ ಆಚರಣೆಯು ಜೈನ ಗ್ರಂಥಗಳ ಅಧ್ಯಯನಕ್ಕೆ ಸಂಬಂಧಪಟ್ಟುದು.

## ಯಕ್ಷಿಯ ಆರಾಧನೆ

ಯಾವುದೇ ಧರ್ಮವಾಗಲಿ ಅದು ತನ್ನ ಮೇಲ್ಮಟ್ಟದ ಆದರ್ಶಗಳ ಎತ್ತರಕ್ಕೆ ಎಲ್ಲರೂ ಏರಬೇಕು ಎಂಬ ಹಿರಿಯ ಆಸೆಯನ್ನು ಹೊಂದಿರುವುದು ಸಹಜವೇ. ಆ ಧರ್ಮದ ಮೂಲಪುರುಷರು ಆ ಎತ್ತರಕ್ಕೆ ಏರಿ ಆ ಆದರ್ಶಗಳನ್ನು ಸಾಧಿಸಿರುತ್ತಾರೆ. ಆದರೆ ಧರ್ಮವೆಂಬುದು ಕೇವಲ ಕೆಲವು ಹಿರಿಯ ಚೇತನಗಳಿಗೆ ಮಾತ್ರ ಮೀಸಲಾಗಿಟ್ಟ ವಸ್ತುವಲ್ಲ ತಾನೇ. ಅದು ಜನಸಾಮಾನ್ಯರನ್ನು ತನ್ನ ಮಟ್ಟಕ್ಕೆ ಅಲ್ಲದಿದ್ದರೂ, ಅವರನ್ನು ಸ್ವಲ್ಪ ಮೇಲಕ್ಕಾದರೂ ಎತ್ತಲು ಪ್ರಯತ್ನಿಸಬೇಕಾಗುತ್ತದೆ. ಹಾಗೆ ಪ್ರಯತ್ನಿಸಬೇಕಾದರೆ ಧರ್ಮವೆನ್ನುವುದು ಸ್ವಲ್ಪ ಕೆಳಗಿಳಿಯಬೇಕಾಗುತ್ತದೆ. ಜನಸಾಮಾನ್ಯರ ದೌರ್ಬಲ್ಯಗಳಲ್ಲಿ ಎಲ್ಲವನ್ನೂ ತಿರಸ್ಕರಿಸದೆ ಕೆಲವನ್ನಾದರೂ ಒಪ್ಪಿಕೊಂಡು ಪುರಸ್ಕರಿಸಬೇಕಾಗುತ್ತದೆ. ಹಾಗೆ ಒಪ್ಪಿಕೊಂಡಾಗ ಜನತೆಗೆ ಆ ಧರ್ಮವು ತಮ್ಮ ಧರ್ಮವೆಂಬ ಭಾವನೆ ಬೆಳೆದು ಅದರಲ್ಲಿ ಹೆಚ್ಚು ಶ್ರದ್ಧೆ ಮೂಡುತ್ತದೆ. ಕೆಳಗೆ ಬಿದ್ದವನನ್ನು ಎತ್ತಬೇಕಾದರೆ ಸ್ವಲ್ಪ ಬಾಗಬೇಕು ತಾನೇ! ತನ್ನ ಪರಿಶುದ್ಧತೆಯನ್ನು ಉಳಿಸಿಕೊಂಡು ಬಂದಿರುವ ಧರ್ಮಕ್ಕೆ ಹೊಸದಾದ, ಬಾಹ್ಯವಾದ ಆರಾಧನಾ ವಿಧಾನಗಳೂ ನಂಬಿಕೆಗಳೂ ತತ್ವಗಳೂ ಹರಿದುಬಂದು ಸೇರುವುದು ಹೀಗೆ. ಧರ್ಮವು ಸ್ವಲ್ಪಮಟ್ಟಿಗೆ ಜನಸಾಮಾನ್ಯರ ನಂಬಿಕೆ ಮತ್ತು ಶ್ರದ್ಧೆಗಳೊಡನೆ ರಾಜಿಮಾಡಿಕೊಳ್ಳಬೇಕಾಗುತ್ತದೆ.

ಬಾಹ್ಯವಾದ ಆರಾಧನಾವಿಧಾನ ಇತ್ಯಾದಿಗಳು ಧರ್ಮಕ್ಕೆ ಸೇರಲು ಮತ್ತೊಂದು ಕಾರಣವೂ ಉಂಟು. ಒಂದು ಧರ್ಮ ಪ್ರಚಾರದಲ್ಲಿದ್ದರೆ ಅದರ ಮೇಲೆ ಉಳಿದ ಧರ್ಮಗಳ ಪ್ರಭಾವ ಬೇಡವೆಂದರೂ ಆಗುತ್ತಲೇ ಇರುತ್ತದೆ. ಆರಂಭದಲ್ಲಿ ಈ ಪ್ರಭಾವವನ್ನು ಪ್ರತಿಭಟಿಸಿದರೂ ಕಾಲಕ್ರಮೇಣ ಆ ಪ್ರಭಾವ ರೂಢಮೂಲವಾಗಿ ನಿಂತಮೇಲೆ ಅದು ಆ ಧರ್ಮದ ಅಂಗವಾಗಿ ನಿಂತುಬಿಡುತ್ತದೆ. ಮುಂದೆ ಅದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ.

ಜೈನಧರ್ಮದಲ್ಲಿ ಇವೆರಡೂ ನಡೆದವು. ಅದರ ಮೂಲತತ್ವಗಳ ಪ್ರಕಾರ, ಅದರಲ್ಲೂ ದಿಗಂಬರರ ಪ್ರಕಾರ, ಮುಕ್ತಿಯನ್ನು ಪಡೆದಿರುವವರು ಪುರುಷರು, ಆದ್ದರಿಂದ ಪುರುಷರು ಮಾತ್ರವೇ ಅವರ ಗೌರವಾರಾಧನೆಗಳಿಗೆ ಅರ್ಹರು. ಆದರೆ ಜನತೆಯ ದೌರ್ಬಲ್ಯವೆಂದು ಕರೆಯಬೇಕೋ, ಕರೆಯಬಾರದೋ, ಕೆಳವರ್ಗದ ಜನತೆಗೆ ಉಪಕಾರಿಗಳಾಗಿ ಅವರ ಪೂಜೆಯನ್ನು ಕೈಗೊಳ್ಳುವ ದೈವಗಳೆಂದರೆ ಸಾಮಾನ್ಯವಾಗಿ ಸ್ತ್ರೀದೇವತೆಗಳು. ಹೀಗಾಗಿ ಮಾತೃಪೂಜೆಯು ಜೈನರಿಗೆ ಹೊಸದಾದರೂ, ಜನಸಾಮಾನ್ಯರ ದೃಷ್ಟಿಯಿಂದ ಜೈನಧರ್ಮವು ಬಹು ಹಿಂದೆಯೇ ಮಾತೃಪೂಜೆಯನ್ನು

---

ಷ್ಟಮಿ.' ಹಿಂದುಗಳ ಹಬ್ಬದ ದಿನ ನಡೆಯುತ್ತಿದ್ದ ಹಿಂಸೆಗಳಿಗೆ ಜೈನಧರ್ಮವು ತೋರಿದ ಪ್ರತಿಭಟನೆಯೇ ಜೀವದಯಾಷ್ಟಮಿ ಎಂಬುದು ಸ್ಪಷ್ಟ.

[226] EC. VI. Mg. 13, 1063 A.D.

[227] ಯಶೋಧರ ಚರಿತೆ, ಪೀಠಿಕೆ, ಪು. 67.

[228] Annual Report on Kannada Research in Bombay Province (1939-40), p. 90.

[229] JISI. No. 50, C. 1150 A.D.

ಆರಂಭಿಸಿತು. ತೀರ್ಥಂಕರರನಿಗೆ ಸಲ್ಲಬೇಕಾದ ಪೂಜೆಯ ಜೊತೆಯಲ್ಲಿ ಅವನ ಪಕ್ಕದ ಅವನ ಶಾಸನದೇವತೆಗಳಿಗೂ ಪೂಜೆ ಸಲ್ಲಲು ಆರಂಭವಾಗಿ ಮುಂದೆ ಶಾಸನ ದೇವತೆಗಳಿಗೇ ಸ್ವತಂತ್ರವಾಗಿ ಪೂಜೆ ಸಲ್ಲಲು ಮೊದಲಾಯಿತು. ಇದನ್ನೇ ಡಾ|| ದೇಸಾಯಿಯವರು 'ಯಕ್ಷೀ ಆರಾಧನಾ' (Yakṣī Cult) ಎಂದು ಕರೆದಿರುವುದು.[230] ಈ ಯಕ್ಷೀ ಆರಾಧನೆಯ ಮುಂದಿನ ಹೆಜ್ಜೆಯಾಗಿ ಜೈನಧರ್ಮದಲ್ಲಿ ತಾಂತ್ರಿಕ ಆರಾಧನೆ ಪ್ರಬಲಿಸಿ ಅನೇಕ ಜೈನ ಭಟ್ಟಾರಕರು ಅಥವಾ ಮಠಾಧಿಪತಿಗಳು ಮಂತ್ರ ತಂತ್ರಗಳಲ್ಲಿ ನಿಷ್ಣಾತರಾದರು (ಮುಂದೆ ನೋಡಿ). ತಮಿಳು ನಾಡಿನಲ್ಲಿ ಕ್ರಿ.ಶ. 2ನೇ ಶತಮಾನದಲ್ಲಿಯೇ ಈ ತಾಂತ್ರಿಕ ಆರಾಧನೆ ಕಾಣಿಸಿಕೊಳ್ಳುತ್ತದೆ. ಪ್ರಾಚೀನ ತಮಿಳು ಕಾವ್ಯಗಳಲ್ಲೊಂದಾದ ಶಿಲಪ್ಪದಿಕಾರದಲ್ಲಿ ಇದರ ಉಲ್ಲೇಖವಿದೆ.[231] ತಮಿಳು ನಾಡಿನಲ್ಲಿ ತೀರ್ಥಂಕರರಿಗೆ ಸಮಾನವಾದ ಗೌರವವು ಯಕ್ಷಿಯರಿಗೆ ಸಿಕ್ಕಿದೆ. ಕರ್ನಾಟಕದಲ್ಲಿ ಇಷ್ಟು ಅತಿರೇಕಕ್ಕೆ ಹೋಗಿಲ್ಲ.

ಕರ್ನಾಟಕದಲ್ಲಿ ಪದ್ಮಾವತಿ ಮತ್ತು ಜ್ವಾಲಾಮಾಲಿನಿ ಎಂಬ ಯಕ್ಷಿಯರಿಗೆ ವಿಶೇಷ ಗೌರವ ಸಂದಿದೆ. ಪದ್ಮಾವತಿಯು ಪಾರ್ಶ್ವನಾಥನ ಯಕ್ಷಿ, ಜ್ವಾಲಾಮಾಲಿನಿಯು ಚಂದ್ರಪ್ರಭನ ಯಕ್ಷಿ. ಪದ್ಮಾವತಿಯು ಪೊಂಬುಚ್ಚ (ಈಗಿನ ಹುಂಚ)ದ ಸಾಂತರರ ಮನೆದೇವತೆ. ಶಾಸನಗಳಲ್ಲಿ ಬರುವ ಕಥೆಗಳ[232] ಪ್ರಕಾರ ಸಾಂತರರ ವಂಶದಲ್ಲಿ ಬಹು ಹಿಂದೆ ಸಹಕಾರ ಎಂಬುವನು ನರಮಾಂಸಾಸಕ್ತನಾಗಲು ಅದಕ್ಕೆ ಅವನ ಮಗ ಜಿನದತ್ತನು ಹೇಸಿ ದಕ್ಷಿಣಕ್ಕೆ ಬಂದು ಪೊಂಬುಚ್ಚದಲ್ಲಿ ಪದ್ಮಾವತಿಯ ಕೃಪೆಯಿಂದ ನೆಲಸುತ್ತಾನೆ. ಪದ್ಮಾವತಿಯು ಲೊಕ್ಕಿ ಎಂಬ ಮರದಲ್ಲಿದ್ದುದರಿಂದ ಅವಳಿಗೆ ಲೊಕ್ಕಿಯಬ್ಬೆ ಎಂಬ ಪರ್ಯಾಯನಾಮವೂ ಇತ್ತು. ನನ್ನಿಯಗಂಗ ಮತ್ತು ಆತನ ಪಟ್ಟಮಹಾದೇವಿ ಕಂಚಲದೇವಿಯರು ಪದ್ಮಾವತಿಗೆ ಹರಸಿಕೊಂಡು ಹೆಮ್ಮಾಡಿ ದೇವನನ್ನು ಪಡೆದರೆಂದು ಶಾಸನವೊಂದು ಹೇಳುತ್ತದೆ.[233] ಗಂಗವಂಶದ ಪದ್ಮನಾಭ ತನಗೆ ಮಕ್ಕಳಿಲ್ಲದಿರಲು ಚಿಂತಾಕ್ರಾಂತನಾಗಿ 'ಆರ್ಹಿನ ಕಣಿ ಶಾಸನದೇವತೆಯಂ ಪೂಜಿಸಿ ದಿವ್ಯ ಮಂತ್ರದಿಂದ' ರಾಮ ಲಕ್ಷ್ಮಣರೆಂಬ ಮಕ್ಕಳನ್ನು ಪಡೆಯುತ್ತಾನೆ.

ಹನ್ನೊಂದನೆಯ ಶತಮಾನದ ಮುಳುಗುಂದದ ಜೈನಗುರು ಮಲ್ಲಿಷೇಣ ಸೂರಿಯು ತಾಂತ್ರಿಕ ಆರಾಧಕನಾಗಿ ಭೈರವ ಪದ್ಮಾವತೀ ಕಲ್ಪ, ಜ್ವಾಲಿನೀ ಕಲ್ಪ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಜ್ವಾಲಾಮಾಲಿನಿಯ ದೇವಸ್ಥಾನಗಳು ಗೇರಸೊಪ್ಪ, ಚಿಕ್ಕಮಗಳೂರು ಜಿಲ್ಲೆಯ ಎಡೆಹಳ್ಳಿಗಳಲ್ಲಿ ಈಗಲೂ ಇವೆ.[234]

ಈ ಮಾತೃಪೂಜೆಯ ಮುಂದಿನ ಹೆಜ್ಜೆಯೇ ಮಂತ್ರತಂತ್ರಗಳಲ್ಲಿ ಬೆಳೆದ ಅತ್ಯಾಸಕ್ತಿ. ಜನತೆಯನ್ನು ತಮ್ಮೆಡೆಗೆ ಸೆಳೆಯಲು ಇದು ಸಾಧಕವಾಗುತ್ತದೆಯೆಂದು ಭಾವಿಸಿದರೋ ಏನೋ! ಅರ್ಕಕೀರ್ತಿ ಎಂಬ ಜೈನ ಮುನಿ ವಿಮಳಾದಿತ್ಯನಿಗೆ ಬಂದ ಶನಿಕಾಟವನ್ನು ಹೋಗಲಾಡಿಸಿದನೆಂದು ತಾಮ್ರಪಟಗಳಲ್ಲಿ ಹೇಳಿದೆ.[235] ಉರಗ, ಪಿಶಾಚ, ಭೂತ, ಪಕ್ಷಿ, ಉಗ್ರ ನವಗ್ರಹಗಳು, ಶಾಕಿನೀ ನಿಶಾಚರರು ವಿಪರೀತಗಳಾದರೂ ಜೈನಮುನಿಗಳ ಮುಂದೆ ನಿಲ್ಲುತ್ತಿರಲಿಲ್ಲ, ಏಕೆಂದರೆ ಅವರು ಬರೆದುದೆ ಯಂತ್ರವಾಗಿತ್ತು, ಹೇಳಿದ್ದೆ ತಂತ್ರವಾಗಿತ್ತು.[236] ಜಿನಚಂದ್ರದೇವ ಎಂಬಾತನು 'ಮಹಾ ಮಂತ್ರವಾದಿ' ಯಾಗಿದ್ದನು.[237] ತ್ರೈಕಾಲ್ಯಯೋಗಿ ಎಂಬುವನ ತಪಸ್ಸಾಮರ್ಥ್ಯ ಎಷ್ಟಿತ್ತೆಂದರೆ ಬ್ರಹ್ಮರಾಕ್ಷಸವೊಂದು ಅವನ ಶಿಷ್ಯನಾಗಿತ್ತು. ಅವನ ಸ್ಮರಣಮಾತ್ರದಿಂದ

---

230 Jainism in South India, p. 72.
231 ಅದೇ.
232 EC. VIII. Nr. 35, 1077 A.D.
233 EC. VII. Sh. 4, 1122 A.D.
234 JISI. pp. 170-4.
235 EC. XII. Gb. 61, 812 A.D.
236 EC. VII. Sk. 136, 1068 A.D.
237 JISI. No. 2, 1098 A.D.

ಮಹಾ ಗ್ರಹಗಳು ಬಿಟ್ಟು ಓಡುತ್ತಿದ್ದುವು.[238] ಹಾವು ಕಚ್ಚಿದಾಗ ಮಂತ್ರತಂತ್ರಗಳಿಗೆ ಮರೆಹೋಗದೆ, ಪಂಚ ಪರಮೇಷ್ಠಿಗಳನ್ನು ಶುದ್ಧಭಕ್ತಿಯಿಂದ ಮರೆಹೊಕ್ಕು ವಿಷವನ್ನು ಹೋಗಲಾಡಿಸಿಕೊಂಡ ವಿರಳ ನಿದರ್ಶನಗಳೂ ಶಾಸನಗಳಲ್ಲಿ ದೊರೆಯುತ್ತವೆ.[239]

ಸೋಮದೇವನ ಯಶಸ್ತಿಲಕ ಚಂಪುವಿನಲ್ಲಿ ಈ ಮಂತ್ರತಂತ್ರಗಳ ಮತ್ತು ಮಾತೃಪೂಜೆಯ ಉಲ್ಲೇಖ ವಿಲ್ಲದಿದ್ದರೂ ಜನಸಾಮಾನ್ಯರಿಗಾಗಿ ಇಂತಹ ಸಂಪ್ರದಾಯಗಳನ್ನು ಅವಲಂಬಿಸುವುದರಲ್ಲಿ ತಪ್ಪಿಲ್ಲವೆಂದು ಅವನ ಭಾವನೆ ಇದ್ದಂತೆ ತೋರುತ್ತದೆ. ಅವನ ಪ್ರಕಾರ ಜೈನ ಗೃಹಸ್ಥರ ಧರ್ಮವನ್ನು ಲೌಕಿಕ ಮತ್ತು ಪಾರಲೌಕಿಕ ಎಂದು ಎರಡಾಗಿ ವಿಂಗಡಿಸಬಹುದು. ಮೊದಲನೆಯದು ಜನರಲ್ಲಿ ರೂಢಿಯಲ್ಲಿರುವುದು, ಎರಡನೆಯದು ಧರ್ಮ ಗ್ರಂಥಗಳಲ್ಲಿ ಉಕ್ತವಾದುದು. ಜೈನಧರ್ಮದ ಮೂಲತತ್ವಗಳಿಗೆ ಎಲ್ಲಿಯವರೆಗೆ ಅಡ್ಡಿ ಬರುವುದಿಲ್ಲವೋ ಅಲ್ಲಿಯ ವರೆಗೆ ಲೌಕಿಕವಾದ ಧರ್ಮಾಚರಣೆಗೆ ತನ್ನ ಆಕ್ಷೇಪಣೆಯೇನೂ ಇಲ್ಲವೆನ್ನುತ್ತಾನೆ.[240] ಮನೆದೇವತೆಯ ಕಲ್ಪನೆಯೇ ಜೈನಧರ್ಮಕ್ಕೆ ವಿರುದ್ಧವಾದರೂ ಈಗಲೂ ದಿಗಂಬರ ಜೈನರಲ್ಲಿ ಕೆಲವರು ಭೈರವ, ಕಾಲಿಕಾದೇವಿ ಮುಂತಾದ ದೇವತೆಗಳನ್ನು ಮನೆದೇವತೆಗಳೆಂದು ಪೂಜಿಸುವುದುಂಟು.[241]

ಧಾರ್ಮಿಕವಾದ ಸಾಧನೆಗಳಿಂದ ಮನುಷ್ಯನಿಗೆ ಅಪೂರ್ವವಾದ ಯೌಗಿಕ ಶಕ್ತಿಗಳು ಬರುತ್ತವೆ ಎಂಬುದಕ್ಕೆ ಆಧುನಿಕ ನಿದರ್ಶನಗಳನ್ನು ಕೊಡಬಹುದು. ರಾಮಕೃಷ್ಣ ಪರಮಹಂಸರಂತೂ ಇಂತಹ ಅದ್ಭುತ ಶಕ್ತಿಸಂಪನ್ನರಾಗಿದ್ದರೂ, ಅವುಗಳನ್ನು ಅಲ್ಲಗಳೆದು ಸಾಧಕನಾದವನು ಅವುಗಳಿಗೆ ಮನಸೋಲಬಾರದೆಂದೂ ಅವುಗಳನ್ನು ಉಪಯೋಗಿಸಿಕೊಳ್ಳಕೂಡದೆಂದೂ ಎಚ್ಚರಿಸಿದ್ದಾರೆ.[242] ಜೈನ ಧಾರ್ಮಿಕ ಗ್ರಂಥಗಳೂ ಇದೇ ರೀತಿ ಅಭಿಪ್ರಾಯಪಟ್ಟಿರುವಂತಿದೆ. ಉದಾಹರಣೆಗೆ–ಸೂತ್ರಕೃತಾಂಗ ಎಂಬ ಗ್ರಂಥವು ಶಕುನ ಮಂತ್ರತಂತ್ರಾದಿಗಳನ್ನು ಆಚರಿಸಕೂಡದೆಂದೂ, ಅಲೌಕಿಕಶಕ್ತಿಗಳನ್ನು ಉಪಯೋಗಿಸಕೂಡದೆಂದೂ ವಿಧಿಸುತ್ತದೆ.[243]

## ಜೈನಧರ್ಮದ ಇಳಿಮುಖ

ಹನ್ನೊಂದನೆಯ ಶತಮಾನದ ಮಧ್ಯಭಾಗದ ಶಾಸನವೊಂದರಲ್ಲಿ ಈ ಮಾತುಗಳು ಬರುತ್ತವೆ– ''ತೊಲಗದೆ ಜೈನ ಮಾರ್ಗದೊಳ್ ನಿಶ್ಚಳರಪ್ಪುದು.''[244] ಇದು ಜೈನಧರ್ಮದ ಒಕ್ಕೊರಲಿನ ಕೂಗು. ಆ ಕಾಲಕ್ಕೆ ಕರ್ನಾಟಕದಲ್ಲಿ ಜೈನಧರ್ಮದ ಭದ್ರ ಮಂದಿರದ ಮಹಡಿ ಮಾತ್ರವಲ್ಲ, ಅದರ ಬೇರುಗಳೂ ಸಡಿಲ ವಾಗುತ್ತಿದ್ದುವೆಂದು ಕಾಣಿಸುತ್ತದೆ. ಜೈನಧರ್ಮ ಪ್ರಸಾರವಾಗುವುದಿರಲಿ, ಅದು ತನ್ನ ಅಸ್ತಿತ್ವವನ್ನು ಉಳಿಸಿ ಕೊಳ್ಳುವುದೇ ಪ್ರಯಾಸಕರವಾಯಿತು. ಕ್ರಿ. ಶ. ದ ಆದಿ ಶತಮಾನಗಳಿಂದ ಹತ್ತನೆಯ ಶತಮಾನದವರೆಗಿನ ಕಾಲವನ್ನು ಜೈನಧರ್ಮದ ಸಮೃದ್ಧಿಯ ಸುವರ್ಣಯುಗವೆನ್ನಬಹುದು. ಆ ಅವಧಿಯಲ್ಲಿ ಅದು ಇತರ ಧರ್ಮ

---

238 EC. II. 127, 1115 A.D.
239 IA. XIV. p. 15, 1123–4 A.D.
240 YAIC. p. 332.
241 Jaina Community–A Social Survey, pp. 344–5.
242 The Gospel of Sri Ramakrishna, pp. 508-9.
243 History of Jaina Monachism, pp. 198–9.
244 SII. IX. i. 117, 1055 A.D.

ಗಳೊಡನೆ ತಿಕ್ಕಾಟ ನಡೆಸಬೇಕಾಗಲಿಲ್ಲ. ಇತರ ಧರ್ಮಗಳೊಡನೆ ಹೊಂದಿಕೊಂಡೇ ಅದು ಹಬ್ಬಿತು.[245] ಕೆಲವು ರಾಜಮನೆತನಗಳ ಆಶ್ರಯದಲ್ಲಾದರೂ ಅದು ರಾಷ್ಟ್ರೀಯ ಧರ್ಮ ಎನ್ನಿಸಿಕೊಂಡಿತು. ಡಾ॥ ಸಾಲೆತ್ತೂರರು ಹೇಳುವಂತೆ ಕ್ರಿ. ಶ. 2ನೆಯ ಶತಮಾನದಿಂದ ಹಲವಾರು ಶತಮಾನಗಳವರೆಗೆ ಅನೇಕ ಶಕ್ತ ಹಾಗೂ ಪ್ರಸಿದ್ಧ ರಾಜಕುಲಗಳನ್ನು ಜೈನಧರ್ಮವು ನಿಯಂತ್ರಿಸಿತು.[246] ಕದಂಬರು, ರಾಷ್ಟ್ರಕೂಟರು, ಬಾದಾಮಿ ಚಾಳುಕ್ಯರು ಜೈನರಲ್ಲದಿದ್ದರೂ, ಅವರು ಜೈನಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನಿತ್ತಿದ್ದರು ; ಅಷ್ಟೇ ಅಲ್ಲ, ಅವರಲ್ಲಿ ಕೆಲವರಿಗಾದರೂ (ಉದಾಹರಣೆಗೆ ನೃಪತುಂಗ) ಜೈನಧರ್ಮದ ವಿಷಯದಲ್ಲಿ ಪಕ್ಷಪಾತವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಗಂಗರು ತಾವೇ ಸ್ವತಃ ಜೈನರಾಗಿದ್ದು ಜೈನಧರ್ಮದ ಪ್ರಸಾರಕ್ಕೆ ತಮ್ಮ ಸರ್ವಸ್ವವನ್ನು ಧಾರೆ ಎರೆದರು. ಹತ್ತನೆಯ ಶತಮಾನದಲ್ಲಿ ಗಂಗರ ಮಾರಸಿಂಹನು ಬಂಕಾಪುರದಲ್ಲಿ ತನ್ನ ಗುರುಗಳ ಪಾದಮೂಲದಲ್ಲಿಯೂ, ಅವನ ನಂತರ ಕ್ರಿ. ಶ. 982ರಲ್ಲಿ ರಾಷ್ಟ್ರಕೂಟರ ಇಂದ್ರನು ಶ್ರವಣಬೆಳಗೊಳದಲ್ಲಿಯೂ ಸಲ್ಲೇಖನ ವ್ರತದಿಂದ ಮಡಿದರು. ಇವರೊಂದಿಗೆ ಗಂಗ ಮತ್ತು ರಾಷ್ಟ್ರಕೂಟ ಮನೆತನಗಳು ನಶಿಸಿದುವು.[247] ಜೈನ ಧರ್ಮದ ಸುವರ್ಣಯುಗವೂ ಮುಗಿಯಿತು.

ಜೈನಧರ್ಮದ ಇಳಿಮುಖಕ್ಕೆ ರಾಜಾಶ್ರಯದ ನಷ್ಟವೊಂದೇ ಕಾರಣವಲ್ಲ. ಅದರ ಇಳಿಮುಖಕ್ಕೆ ಉಳಿದ ಅನೇಕ ಅಂಶಗಳೂ ಪೋಷಕವಾಗಿವೆ. ಯಕ್ಷೀ ಆರಾಧನೆ, ತಂತ್ರಮಂತ್ರಗಳ ಮೋಹ ಇತ್ಯಾದಿಗಳನ್ನು ನೋಡುವಾಗ, ಕೇವಲ ಸಾತ್ವಿಕವಾದ ವೈರಾಗ್ಯವನ್ನೇ ಬೋಧಿಸುವ ಜೈನಧರ್ಮಕ್ಕೆ ರಾಜಸಿಕ ಅಥವಾ ತಾಮಸಿಕವಾದ ತಾಂತ್ರಿಕ ಆಚರಣೆಗಳು ಒಗ್ಗದ ವಿಷಯಗಳು—ಎಂಬುದು ಆಗಲೇ ಸ್ಪಷ್ಟವಾಗಿರಬೇಕು. ಜೈನಧರ್ಮವನ್ನು ಜನಪ್ರಿಯಗೊಳಿಸುವ ಸದುದ್ದೇಶದಿಂದ ಇವು ಹೊರಟರೂ, ಒಮ್ಮೆ ಧರ್ಮದಲ್ಲಿ ಯಾವುದೋ ರೀತಿಯ ಶೈಥಿಲ್ಯ ಆರಂಭವಾದರೆ ಜನರು ಅದನ್ನೇ ಹಿಡಿದು ಅದರ ಮರೆಯಲ್ಲಿ ತಮ್ಮ ದೌರ್ಬಲ್ಯಗಳನ್ನು ರಕ್ಷಿಸಿಕೊಳ್ಳುತ್ತ ಅದನ್ನೇ ಬೆಳಸುವುದುಂಟು. ದೇವದಾಸೀ ಪದ್ಧತಿ ಹಿಂದೂ ದೇವಾಲಯಗಳಲ್ಲಿ ಮೊದಲು ಕಾಣಿಸಿಕೊಂಡು ಕ್ರಮೇಣ ಜೈನರ ಬಸದಿಗಳನ್ನು ಪ್ರವೇಶಿಸಿದಂತೆ ಊಹಿಸಬಹುದು. ಒಂಬತ್ತನೆಯ ಶತಮಾನದ ತಾಮ್ರಪಟಗಳಲ್ಲಿ ಜಿನಭವನದ "ವಾರವಿಲಾಸಿನೀ ವಿರಚಿತ ನೃತ್ಯಗೀತ ವಾದ್ಯ ಬಲಿ ವಿಲೇಪನ ದೇವಪೂಜಾ ನವಕರ್ಮಪ್ರವರ್ತ್ತನಾರ್ಥಂ" ದಾನಬಿಡಲಾಗಿದೆ.[248] ಲೊಕ್ಕಿಗುಂಡಿಯಲ್ಲಿ ಅತ್ತಿಮಬ್ಬೆ ಕಟ್ಟಿಸಿದ ಬಸದಿಗಾಗಿ ಒಬ್ಬ 'ಸೂಳೆ' ಇದ್ದು ಅವಳಿಗೂ ದಾನವನ್ನು ಬಿಡಲಾಗಿದೆ.[249] ಲೌಕಿಕವಾದ ಸುಖಗಳ ಅನಿತ್ಯತೆಯನ್ನು, ಅದರಲ್ಲೂ ದೈಹಿಕವಾದ ಆಕರ್ಷಣೆಗೆ ಸಂಬಂಧಿಸಿದ ಪ್ರವೃತ್ತಿಯನ್ನು ಉಗ್ರವಾಗಿ ಖಂಡಿಸಿ ತೀವ್ರವೈರಾಗ್ಯವನ್ನು ಅಷ್ಟೇ ಪ್ರಬಲರೀತಿಯಲ್ಲಿ ಪ್ರತಿಪಾದಿಸುವ ಜೈನಧರ್ಮವೆಲ್ಲಿ, ಈ 'ವಾರವಿಲಾಸಿನಿ' ಯರೆಲ್ಲಿ ! ಹೀಗೆ ಬೋಧನೆ ಮತ್ತು ಆಚರಣೆಗಳಿಗೆ ಸಮತೋಲನ ತಪ್ಪಿತು. ಜನತೆಯ ಮೇಲೆ ಈ ವಿಷಯ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವವನ್ನು ಬೀರಿರಬೇಕು.

ಜೈನಧರ್ಮವನ್ನು ಮೊತ್ತಮೊದಲು ಪ್ರಬಲವಾಗಿ ವಿರೋಧಿಸಿ ಅದರ ಪ್ರಸಾರಕ್ಕೆ ಅಡ್ಡಿಯನ್ನೊಡ್ಡಿದವರು ಬಹುಶಃ (ವೀರ) ಶೈವರು. ವೈದಿಕಧರ್ಮ ಮತ್ತು ಜೈನಧರ್ಮಗಳು ಬಹುಮಟ್ಟಿಗೆ ಪರಸ್ಪರ ಹೊಂದಿ

---

[245] ಆ ಕಾಲದಲ್ಲಿ ಒಬ್ಬ ವ್ಯಕ್ತಿ ಎಲ್ಲ ಮತಗಳ ದೇವತೆಗಳಿಗೂ ಭಕ್ತನಾಗಿದ್ದು ಏಕಕಾಲದಲ್ಲಿ ಶೈವನೂ ಜೈನನೂ ಆಗಿದ್ದ ಉದಾರ ಭಾವನೆಯ ನಿದರ್ಶನಗಳು ಹಲವಿವೆ. ಒಂದೇ ಸಂಸಾರದಲ್ಲಿ ಬೇರೆ ಬೇರೆ ವ್ಯಕ್ತಿಗಳು ಬೇರೆ ಬೇರೆ ಧರ್ಮಗಳ ವಿಷಯದಲ್ಲಿ ನಿಷ್ಠೆಯಿಂದ ನಡೆದುಕೊಂಡ ನಿದರ್ಶನಗಳೂ ಇವೆ.

[246] Mediaeval Jainism, p. 6.

[247] Mysore and Coorg from Inscriptions, p. 72.

[248] EC. IX. Nl. 61, 802 A.D.

[249] BKI. I. i. 52, 1007 A.D.

ಕೊಂಡಿದ್ದುವು. ಅವರ ಮಧ್ಯೆ ಅಂತಹ ಘರ್ಷಣೆ ನಡೆದಂತೆ ಕಾಣದು. ಬಸವಣ್ಣನವರು ವೀರಶೈವ ಮತದ ಸ್ಥಾಪಕರಲ್ಲ, ಆದರ ಪುನರುದ್ಧಾರಕರು ಎಂಬ ವಿಷಯವನ್ನು ವಿದ್ವಾಂಸರು ಬಹುಮಟ್ಟಿಗೆ ಒಪ್ಪಿಕೊಂಡಿದ್ದಾರೆ. ಕನ್ನಡನಾಡಿನಲ್ಲಿ ವೀರಶೈವ ಧರ್ಮ ಹೇಗೆ ಉದಯವಾಯಿತು, ಅದು ಅಷ್ಟುಹೊತ್ತಿಗಾಗಲೇ ಕನ್ನಡನಾಡಿನಲ್ಲಿ ಪ್ರಚಲಿತವಾಗಿದ್ದ ಕಾಳಾಮುಖ–ಪಾಶುಪತ ಶೈವಕ್ಕೆ ಎಷ್ಟರಮಟ್ಟಿಗೆ ಋಣಿ ಎಂಬ ವಿಷಯಗಳಿನ್ನೂ ಅಜ್ಞಾತವಾಗಿಯೇ ಇವೆ. ಹನ್ನೊಂದನೆಯ ಶತಮಾನದ ಮಧ್ಯಭಾಗದಲ್ಲಿದ್ದ ದೇವರದಾಸಿಮಯ್ಯನೊಬ್ಬ ವಚನಕಾರನಾಗಿದ್ದು ಅವನನ್ನು ಮುಂದೆ ಬಂದ ಬಸವಣ್ಣ ಮುಂತಾದ ವೀರಶೈವ ವಚನಕಾರರು ಸ್ತುತಿಸಿದ್ದಾರೆ. ಆದ್ದರಿಂದ ಹನ್ನೆರಡನೇ ಶತಮಾನಕ್ಕಿಂತ ಮುಂಚೆಯೇ ವೀರಶೈವ ಧರ್ಮ ಒಂದಲ್ಲ ಒಂದು ರೂಪದಲ್ಲಿದ್ದಿತೆಂಬುದು ಸ್ಪಷ್ಟವಾಗುತ್ತದೆ. ದೇವರದಾಸಿಮಯ್ಯನಿಗೂ ಜೈನರಿಗೂ ವಾಗ್ವಾದವಾಗಿ ದಾಸಿಮಯ್ಯ ಗೆದ್ದು ಚಾಳುಕ್ಯ ಚಕ್ರವರ್ತಿಯಿಂದ ಜಯಪತ್ರವನ್ನು ಪಡೆದಂತೆ, ಚಾಳುಕ್ಯರಾಣಿ ಸುಗ್ಗಲದೇವಿ ಅವನ ಶಿಷ್ಯಳಾಗಿದ್ದಂತೆ ಮುಂದಿನ ಕೆಲವು ವೀರಶೈವ ಗ್ರಂಥಗಳು ತಿಳಿಸುತ್ತವೆ. ಜೈನಧರ್ಮಾವಲಂಬಿಗಳಾಗಿದ್ದ ಹಲವರು ತಮ್ಮ ಧರ್ಮವನ್ನು ತ್ಯಜಿಸಿ ಅನ್ಯಧರ್ಮವನ್ನು, ಬಹುಶಃ ಶೈವಧರ್ಮವನ್ನು ಅವಲಂಬಿಸುತ್ತಿದ್ದ ವಿಷಯವನ್ನು ಹೇಳುವ ಶಾಸನವನ್ನು ನಾವು ಹಿಂದಾಗಲೇ ನೋಡಿದ್ದೇವೆ.[250] ಈ ಶಾಸನದ ಕಾಲ ಕ್ರಿ. ಶ. 1055 ಎಂಬುದನ್ನು ಜ್ಞಾಪಕದಲ್ಲಿಟ್ಟುಕೊಂಡರೆ ಆ ಕಾಲದಲ್ಲೇ ಇದ್ದ ದೇವರದಾಸಿಮಯ್ಯನ[251] ವೀರಶೈವಧರ್ಮಪ್ರಚಾರದ ಬಿಸಿ ಜೈನಧರ್ಮಕ್ಕೆ ತಟ್ಟಿರಬೇಕು. ಈ ದೃಷ್ಟಿಯಿಂದ ಇದು ಪ್ರಮುಖವಾದ ಶಾಸನ. (ವೀರಶೈವಕ್ಕಿಂತ ಭಿನ್ನವಾಗಿದ್ದ) ಶೈವಕ್ಕೆ ಜೈನದಿಂದ ಮತಾಂತರ ಹೊಂದಿದ ಸ್ಪಷ್ಟ ನಿದರ್ಶನಗಳು ದೊರೆಯಬೇಕಾದರೆ ಮುಂದಿನ ಶತಮಾನಕ್ಕೆ ಬರಬೇಕು. ಬಾಸವೂರ 140ನ್ನು ಆಳುತ್ತಿದ್ದ, ಮನ್ನೆಯರಸು ಆಗಿದ್ದ ಹೆಮ್ಮಾಡಿಯರಸನನ್ನು[252] ಮೊದಲು ''ಪದ್ಮಾವತೀಲಬ್ಧವರಪ್ರಸಾದಂ'' ಎಂದು ಕರೆದು ಅನಂತರ ಅವನು ''ಮಾಹೇಶ್ವರ ದೀಕ್ಷೆಯಂ ಕೊಂಡು'' ತನ್ನ ಗುರು ತ್ರಿಭುವನಸಿಂಗಿ ಪಂಡಿತರ ಕಾಲು ತೊಳೆದು ತ್ರಿಭುವನೇಶ್ವರ ದೇವರಿಗೆ ಭೂಮಿಯನ್ನು ದತ್ತಿಯಾಗಿ ಬಿಟ್ಟ ವಿಷಯ ಶಾಸನವೊಂದರಲ್ಲಿ ಬಂದಿದೆ.[253] ಈ ಶಾಸನ ಅನೇಕ ದೃಷ್ಟಿಗಳಿಂದ ಪ್ರಮುಖವಾದುದು. ಒಂದು ಪ್ರಾಂತವನ್ನು ಆಳುತ್ತಿರುವ ಒಬ್ಬ ಮಾನ್ಯ ಅಥವಾ ಅರಸು ಮತಾಂತರವನ್ನು ಹೊಂದಿದರೆ ಜನತೆಯ ಮೇಲೆ ಅದು ಅಗಾಧ ಪರಿಣಾಮವನ್ನುಂಟುಮಾಡುತ್ತದೆ. ಈ ಶಾಸನದಲ್ಲಿ ಬರುವ 'ಮಾಹೇಶ್ವರ ದೀಕ್ಷೆ' ಎಂಬ ಮಾತಿಗೆ ಬಹುಶಃ 'ಶೈವದೀಕ್ಷೆ' ಎಂದೇ ಅರ್ಥಮಾಡಬೇಕೋ ಏನೋ! ಇಷ್ಟೇ ಅಲ್ಲ, ವೀರಶೈವದ ಉಗ್ರ ಅನುಯಾಯಿಗಳಲ್ಲಿ ಕೆಲವರು ಜೈನ ದೇವಸ್ಥಾನಗಳನ್ನು ಒಡೆದು ವಿಗ್ರಹಗಳನ್ನು ನಾಶಪಡಿಸಿ ಅಲ್ಲಿ ಶಿವಲಿಂಗಗಳನ್ನು ಪ್ರತಿಷ್ಠಿಸಿದ ಕೆಲವು ನಿದರ್ಶನಗಳಿವೆ. ಕ್ರಿ. ಶ. 1184ರ ಅಣ್ಣಿಗೇರಿ ಶಾಸನದಲ್ಲಿ ಗೊಗ್ಗಿದೇವ ಎಂಬ ಶಿವಭಕ್ತ ಸಾಮಂತನು ಶಿವಧರ್ಮಕ್ಕೆ ತನ್ನ ಧನವನ್ನೆಲ್ಲ ಮೀಸಲಿಟ್ಟವನು ಎಂದು ಹೊಗಳಿ ಜೈನಮೃಗಬೇಂಟೆಕಾರ, ಜೈನಕುಠಾರ ಎಂದು ಮುಂತಾದ ವಿಶೇಷಣಗಳಿಂದ ಹೊಗಳಿ, ಅವನು ಘಟಾಂತಕಿಯ ಮತ್ತು ಜಿನನ ವಿಗ್ರಹಗಳನ್ನು ಭಂಗ ಮಾಡಿದ ಸಾಹಸವನ್ನು ಕೊಂಡಾಡಲಾಗಿದೆ.[254] ಹಾಗೆಯೇ ಬಿಜಾಪುರ ಜಿಲ್ಲೆಯ ತಾಳಿಕೋಟೆಯ ಅದೇ ಕಾಲದ ಶಾಸನವೊಂದರಲ್ಲಿ[255]

---

250 SII. IX. i. 117, 1055 A.D.

251 ಗೋವಿಂದ ಪೈ ಅವರ ಪ್ರಕಾರ ದೇವರ ದಾಸಿಮಯ್ಯ ಹನ್ನೊಂದನೆಯ ಶತಮಾನದ ಮಧ್ಯ ಭಾಗದಲ್ಲಿದ್ದನು. ''ದೇವರದಾಸಿಮಾರ್ಯ ಪ್ರಶಸ್ತಿ''ಯಲ್ಲಿ ದೇವರದಾಸಿಮಯ್ಯನ ಕಾಲವಿಚಾರವನ್ನು ಕುರಿತ ಅವರ ಲೇಖನವನ್ನು ನೋಡಿ.

252 EI. XIX. p 180, 1045 A.D. ಈತ ಕ್ರಿ. ಶ. 1045ರಲ್ಲಿ ಆಳುತ್ತಿದ್ದ ಜಿನಭಕ್ತ ಕಲಿಯಮ್ಮರಸರ ವಂಶದವನು, ಬಹುಶಃ ಆತನ ಮಗನಿರಬೇಕು.

253 EI. XIX. p. 192, 1121 A.D.

254 JISI. p. 397.

255 ಅದೇ. p. 398.

ವಿರುಪರಸ ದೇವರನ್ನು 'ಜಿನಸಮಯಪನದಪನನಾವಾನಳರು', ಎಂದೂ 'ಅನಂತ ದೇಶಾಂತರದಲ್ ಇದಿರಾದ ಪರಸಮಯಿಗಳಂ ಪಡಲ್ವಡಿಸಿ ಲೋಕಮನಾಕಂಪಂಗೊಳಿಸಿ ಬಸದಿಗಳಂ ಹೊಸೆದು ಮುಕ್ಕಿ ಶಿವಲಿಂಗ ಸಿಂಹಾಸನಮಂ ಕಣ್ಗೊಳಿಸಿ ಚಲಮಂ' ಮೆರೆಯುತ್ತಿದ್ದರೆಂದೂ ಹೊಗಳಿದೆ. ಅವನು 'ಪುರಾತನ ನೂತನ'ರೆನ್ನಿಸಿಕೊಂಡ ಅಸಂಖ್ಯಾತ ಗಣಗಳ ಸೇವೆಯನ್ನು ಮಾಡುತ್ತಿದ್ದ ವಿಷಯವೂ ಅಲ್ಲಿ ಬಂದಿದೆ. ಪುರಾತನ, ನೂತನ ಮುಂತಾದ ಪಾರಿಭಾಷಿಕ ಪದಗಳು ಅವನು ವೀರಶೈವನೆಂಬುದನ್ನು ಸ್ಪಷ್ಟಪಡಿಸುತ್ತವೆ. ಇವೆಲ್ಲಕ್ಕಿಂತ ಮುಖ್ಯವಾದುವು ವೀರಶೈವನಾದ ಏಕಾಂತದ ರಾಮಯ್ಯನ ಶೌರ್ಯಸಾಹಸಗಳನ್ನು ಹೊಗಳುವ ಅಬ್ಬಲೂರಿನ ಶಾಸನಗಳು. ಅಲ್ಲಿಯ ಶಾಸನಗಳಲ್ಲಿ[256] ಏಕಾಂತದ ರಾಮಯ್ಯನು ಜೈನಬಸದಿಯನ್ನೊಡೆದು ಶೈವ ವಿಗ್ರಹಗಳನ್ನು ಪ್ರತಿಷ್ಠಾಪಿಸಿದ ವಿಷಯವನ್ನು ಪ್ರಸ್ತಾಪಿಸಿರುವುದಲ್ಲದೆ ಅವನು ಬಸದಿಯ ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ಸಾಹಸಕಾರ್ಯಗಳನ್ನು ಮಾಡಿದ ಎಂಬುದನ್ನು ಶಿಲ್ಪದಲ್ಲಿ ಚಿತ್ರಿಸಿ ಕೆಳಗೆ ಆ ವಿಷಯಗಳನ್ನು ಕೊರೆಯಲಾಗಿದೆ. ಉದಾಹರಣೆಗೆ -"ಶ್ರೀ ಬ್ರಹ್ಮೇಶ್ವರ ದೇವರಲ್ಲಿ ಏಕಾಂತದ ರಾಮಯ್ಯಂ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಹರೆದ ಟಾವು."; "ಸಂಕಗಾವುಂಡನೊಡೆಯಲೀಯದೆ ಆಳುಂ ಕುದುರೆಯ ನೊಡ್ಡಿರಲು ಏಕಾಂತದ ರಾಮಯ್ಯಂ ಕಾದಿ ಗೆಲ್ದು ಜಿನನನೊಡೆದು ಲಿಂಗ ಪ್ರತಿಷ್ಠೆಯಂ ಮಾಡಿದ ಟಾವು;" "ಶ್ರೀನುದೇಕಾಂತದ ರಾಮಯ್ಯಂಗೆ ಸಂಕಗೌಮ್ವುಂಡನೋಲೆಯಂ ಕುಡುವ ಠಾವು"—ಇಲ್ಲೆಲ್ಲಾ ಆಯಾ ಶಾಸನಗಳ ಮೇಲೆ ಶಾಸನೋಕ್ತ ವಿಷಯವನ್ನು ಶಿಲ್ಪದಲ್ಲಿ ನಿರೂಪಿಸಿದೆ. ಈ ಶಾಸನಗಳಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ಜೈನಧರ್ಮದ ಅನುಯಾಯಿಗಳಿಂದ ಜೈನಧರ್ಮದ ರಕ್ಷಣೆಯ ಪ್ರಯತ್ನ ನಡೆಯಿತು. ಆದರೆ ಅಷ್ಟುಹೊತ್ತಿಗಾಗಲೇ ವೀರಶೈವ ಧರ್ಮದ ಕೋಟೆಯ ಗೋಡೆ ದುರ್ಭೇದ್ಯವಾಗಿದ್ದು ಅದು ಕನ್ನಡ ನಾಡಿನಲ್ಲಿ ನೆಲೆಸಲು ಬಂದಿತ್ತು.[257]

ಡಾ|| ಪಿ. ಬಿ. ದೇಸಾಯಿಯವರು 'ಏಕಾಂತದ' ಎಂಬ ವಿಶೇಷಣವು ರಾಮಯ್ಯನಿಗೆ ಜೈನಧರ್ಮದ ಮೇಲಿನ ಅವನ ವಿಜಯದ ನಂತರ ಬಂದಿರಬಹುದೆಂದು ಊಹಿಸಿ, ಆ ವಿಶೇಷಣವು ಅವನ ಶಿವನಿಷ್ಠೆಯನ್ನು ಸೂಚಿಸುವುದಲ್ಲದೆ 'ಅನೇಕಾಂತವಾದ' ಎಂದು ಕರೆಯಿಸಿಕೊಳ್ಳುವ ಜೈನಧರ್ಮವನ್ನು ಗೆದ್ದದ್ದಕ್ಕೆ ಸಂಕೇತವಾಗಿಯೂ ಇರಬಹುದೆಂದು ಪ್ರತಿಪಾದಿಸುತ್ತಾರೆ.[258] ಆದರೆ ಅಬ್ಬಲೂರು ಶಾಸನದಲ್ಲಿ ಅವನು ಶಿವನನ್ನು 'ಏಕಾಗ್ರ ಭಕ್ತಿಯೋಗದಿನೇಕಾಕಿಯೆನಲ್ಕೆ....ಏಕಾಂತದೊಳ್' ಆರಾಧಿಸಿದ್ದರಿಂದ ಅವನಿಗೆ 'ಏಕಾಂತದ ರಾಮಯ್ಯ'ನೆಂಬ ಹೆಸರು ಬಂದಿತೆಂದು ಸ್ಪಷ್ಟವಾಗಿ ಹೇಳುತ್ತದೆ.[258.1]

ಹೀಗೆ ನಡೆದ ಜೈನ ಮತ್ತು ಶೈವಧರ್ಮಗಳ ಘರ್ಷಣೆಯ ಫಲವಾಗಿ ಅನೇಕ ಬಸದಿಗಳು ಶೈವ ದೇವಾಲಯಗಳಾಗಿಯೂ, ಕೆಲವು ಕಡೆ ವೈಷ್ಣವ ದೇವಾಲಯಗಳಾಗಿಯೂ ಪರಿವರ್ತಿತವಾದುವು. ಐಹೊಳೆಯ ಮೇಗೂಟಿ ಶಾಸನ ಇರುವ ಕಟ್ಟಡವು ಮೊದಲು ಜಿನ ಬಸದಿಯಾಗಿದ್ದು ಕ್ರಮೇಣ ಶೈವ ದೇಗುಲವಾಗಿ ಪೂಜೆಯಿಲ್ಲದೆ ಹಾಳುಸ್ಥಿತಿಯಲ್ಲಿ ನಿಂತಿದೆ.[258.2] ಮತ್ತೊಂದು ಶಾಸನದ ಮೇಲಿನ ಮತ್ತು ಕೆಳಗಣ ಶಿಲ್ಪ ನೋಡಿದರೆ ಅದು ಜೈನಶಾಸನ. ಶಾಸನದ ಆರಂಭದ ವಿಷಯವೂ ಅದನ್ನೇ ಸ್ಥಿರೀಕರಿಸುತ್ತದೆ. ಆದರೆ ಶಾಸನದ ಮಧ್ಯದಿಂದ ಕೊನೆಯವರೆಗೆ 12ನೇ ಶತಮಾನದಲ್ಲಿ ಯಾರೋ ಭೋಗೇಶ್ವರ ದೇವರಿಗೆ ಎಣ್ಣೆ ಬತ್ತಗಳನ್ನು ಕೊಟ್ಟ ವಿಷಯವನ್ನು

---

256 EI. V.p. 213 ; EI. XXIX. p. 140, C. 1200 A.D.

257 'ಜೈನ ಕೆಟ್ಟು ಬಣಜಿಗನಾದ' ಎಂಬ ಗಾದೆಯು ಜೈನರು ವೀರಶೈವಧರ್ಮಕ್ಕೆ ಮತಾಂತರಗೊಂಡದ್ದನ್ನು ಸೂಚಿಸುವಂತೆ ಕಾಣುತ್ತದೆ.

258 Jainism in South India, p. 140.

258.1 EI. XVI.p. 46.

258.2 IA. VIII. p. 237.

ಸೇರಿಸಿದ್ದಾರೆ ; ಎಂದರೆ ಬಸದಿಯು ಶೈವ ದೇಗುಲವಾಗಿ ಆ ಕಾಲದಲ್ಲೇ—ಹನ್ನೆರಡನೇ ಶತಕದಲ್ಲೇ—ಪರಿವರ್ತಿತವಾಗಿರಬೇಕು.[259] ಹೊಳೇನರಸೀಪುರ ತಾಲ್ಲೂಕಿನ ಅಂಕನಾಥಪುರದಲ್ಲಿನ ಶಾಸನಗಳೆಲ್ಲ ಹೆಚ್ಚು ಕಡಮೆ ಜೈನ ಶಾಸನಗಳು ; ಈಗ ಅಲ್ಲಿರುವುವು ಶೈವ ದೇವಸ್ಥಾನಗಳು. ನಿಸಿದಿಕಲ್ಲು ಒಂದನ್ನು ಸುಬ್ರಹ್ಮಣ್ಯ ದೇವಸ್ಥಾನದ ಮೇಲ್ಛಾವಣಿಗೆ ಬಳಸಿಕೊಳ್ಳಲಾಗಿದೆ.[260] ಹಾಗೇ ಪ್ರಾಚೀನಕಾಲದ ನಿಸಿದಿಗಲ್ಲು[261] ಈಗ ಬಸವಣ್ಣನ ಗುಡಿಯ ಒಂದು ತೊಲೆಯಾಗಿದೆ. ವಿನಯಾದಿತ್ಯಾಲಯ ಎಂಬ ಜಿನಾಲಯವು ಈಗ ಮಾಧವ ದೇವರ ದೇವಾಲಯವಾಗಿದೆ.[262] ಜನತೆಯ ಧಾರ್ಮಿಕ ಜೀವನದ ಕನ್ನಡಿಗಳು ದೇವಸ್ಥಾನಗಳು. ಜನ ಮತಾಂತರಗೊಂಡಂತೆ ಅವರ ಸೃಷ್ಟಿಗಳಾದ ದೇವಸ್ಥಾನಗಳೂ ಮತಾಂತರಗೊಂಡುವು. ಹಾಗೆ ಮತಾಂತರ ಗೊಳ್ಳುವಾಗ ಕೆಲವು ಕಡೆ ರಕ್ತಪಾತವೂ ಆಗಿದ್ದರೆ ಆಶ್ಚರ್ಯವಿಲ್ಲ.

ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿ ನಡೆದ ಈ ಘರ್ಷಣೆಯು ಶಾಸನಗಳಲ್ಲಿಯೂ, ಕಾವ್ಯ ಗಳಲ್ಲಿಯೂ[263] ಪ್ರತಿಫಲಿತವಾಗಿದೆ. ಈ ಘರ್ಷಣೆ ಎರಡು ಮಟ್ಟಗಳಲ್ಲಿ ನಡೆದಂತೆ ಕಾಣಿಸುತ್ತದೆ. ಒಂದು, ಆಸ್ಥಾನಗಳಲ್ಲಿಯೂ ವಾದ ಮಂಟಪಗಳಲ್ಲಿಯೂ ವಿದ್ವತ್ತಿನ ಮಟ್ಟದಲ್ಲಿ ನಡೆದ ಘರ್ಷಣೆ. ಜೈನದರ್ಶನಕ್ಕೂ ಇತರ ದರ್ಶನಗಳಿಗೂ ನಡೆದ ಘರ್ಷಣೆಯು ಹತ್ತನೇ ಶತಮಾನಕ್ಕೂ ಹಿಂದಿನಿಂದಲೇ ಕಂಡುಬಂದರೂ, ಜೈನ ಸನ್ಯಾಸಿಗಳನ್ನು ಹೊಗಳುವಾಗ 'ಪರವಾದಿಶರಭಭೇರುಂಡ' ಎಂಬ ವಿಶೇಷಣವು ವಿಶೇಷವಾಗಿ ಗೋಚರ ವಾಗುವುದು ಹತ್ತನೇ ಶತಮಾನದಿಂದೀಚಿನ ಶಾಸನಗಳಲ್ಲಿ. ಉದಾಹರಣೆಗೆ–"ಬೌದ್ಧವಾದಿ ತಿಮಿರ ಪತಂಗರುಂ ಸಾಂಖ್ಯವಾದಿ ಕುಳಾದ್ರಿ ವಜ್ರಧರರುಂ" ಇತ್ಯಾದಿ ವಿಶೇಷಣಗಳು ಹತ್ತನೇ ಶತಮಾನದ ಅಂತ್ಯದ ಶಾಸನದಲ್ಲಿ ಬಂದಿವೆ[264] (ಈ ವಿಶೇಷಣಗಳು ಸ್ವಲ್ಪಮಟ್ಟಿಗೆ ಸಾಂಪ್ರದಾಯಿಕವೂ ಹೌದು ಎಂದು ನೆನಪಿನಲ್ಲಿಡಬೇಕು). ನಂದಿಪಂಡಿತದೇವರಿಗೆ "ಪರವಾದಿಶರಭಭೇರುಂಡ" ಎಂಬುದು ಮತ್ತೊಂದು ಹೆಸರಾಗಿತ್ತು.[265] ವಾದಿ ವಜ್ರಾಂಕುಶ ಎಂದು ಹೆಸರಾದ ಶುಭಕೀರ್ತಿಗಳು ಬೌದ್ಧರನ್ನೂ ಮೀಮಾಂಸಕರನ್ನೂ ಸೋಲಿಸಿದ್ದರು.[266] ಕನಕನಂದಿ ಎಂಬುವರು "ವಾದಿವಿಷೋರಗ ತಾರ್ಕ್ಷ್ಯಕರ್" ಆಗಿದ್ದರು.[267] ಹೀಗೆ ವಾದದ ಮಟ್ಟದಲ್ಲಿ ನಡೆದ ಘರ್ಷಣೆ, ಅದರಲ್ಲಿ ದೊರೆತ ಜಯಪತ್ರ—ಇವುಗಳು ಜನತೆಯ ಮೇಲೆ ಪ್ರಭಾವವನ್ನು ಬೀರಿ ಧರ್ಮಪ್ರಚಾರಕ್ಕೆ ಸಹಾಯಕವಾಗುತ್ತಿದ್ದುವೆನ್ನುವುದರಲ್ಲಿ ಸಂದೇಹವಿಲ್ಲ.

ಇನ್ನೊಂದು ಮಟ್ಟದಲ್ಲಿ ನಡೆದ ಘರ್ಷಣೆಯೆಂದರೆ ಜನಸಾಮಾನ್ಯರ ಮಟ್ಟದಲ್ಲಿ ನಡೆದದ್ದು. ಇಲ್ಲಿ ಬುದ್ಧಿಗಿಂತ ಹೃದಯವನ್ನು ಗೆಲ್ಲಬೇಕಿತ್ತು. ಇಲ್ಲಿ ಬರಿಯ ಮಾತಿನಿಂದಲ್ಲ, ಕೆಲವು ಸಾರಿ ತೋಳ್ಬಲದಿಂದಲೂ ಅನ್ಯವಾದಿಯನ್ನು ಗೆಲ್ಲಬೇಕಿತ್ತು. ಶೈವಧರ್ಮಕ್ಕೂ ಜೈನಧರ್ಮಕ್ಕೂ ನಡೆದ ಘರ್ಷಣೆ ಈ ರೀತಿಯದು.

---

259 IA. XII. p.224, 916–7 A.D.

260 EC. V. Hn. 65, C. 950 A.D.

261 EC. V. Ag. 96, 1095 A.D.

262 EC. V. Hn. 112, C. 1120 A.D.

263 ಟಿ. ಎಸ್. ವೆಂಕಣ್ಣಯ್ಯ : ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು, ಪು. 91

264 MAR (1923). p. 114, C. 990 A.D.

265 IA. XVIII. p. 38, 1076 A.D.
ಚಂದ್ರಣಂದಿ ಎಂಬಾತನಿಗೂ ಇದೇ ಬಿರುದಿತ್ತು (SII. IX. i. 130, C. 1066).

266 EC. II. 69, C. 1100 A.D.

267 IA. XIV. p. 14, 1123–24 A.D.
ವಾದದಲ್ಲಿ ಇತರ ಸಮಯಗಳನ್ನು ಗೆದ್ದ ವಿಷಯ EC. IV. Ng. 100, 1145 A.D.–ಈ ಶಾಸನ ದಲ್ಲಿಯೂ ಬರುತ್ತದೆ.

ವಿದ್ವತ್ತಿನ ಮಟ್ಟದಲ್ಲಿ ನಡೆದ ಘರ್ಷಣೆಯಲ್ಲಿ ಜೈನಧರ್ಮ ಗೆದ್ದಿತಾದರೂ, ಜನಸಾಮಾನ್ಯರ ಮಟ್ಟದಲ್ಲಿ ನಡೆದ ಘರ್ಷಣೆಯಲ್ಲಿ ಸ್ವಲ್ಪಮಟ್ಟಿಗೆ ಸೋತಿತು ಎಂದೇ ಹೇಳಬೇಕು. ವೀರಶೈವಧರ್ಮದ ಮುಂದಾಳುಗಳು ಜನತೆಯ ಒಲವನ್ನು ಗೆಲ್ಲಲು ಮೊದಲು ಪ್ರಯತ್ನಪಟ್ಟರು, ಗೆದ್ದರು. ಅವರ ಸಾಹಿತ್ಯ ಸೃಷ್ಟಿಯಲ್ಲೂ ಇದೇ ದೃಷ್ಟಿಯನ್ನು ಕಾಣಬಹುದು. ಈ ಮಟ್ಟದಲ್ಲಿ ನಡೆದ ಘರ್ಷಣೆಯ ಪ್ರತಿಧ್ವನಿಗಳೇ ಹಿಂದೆ ನಾವು ನೋಡಿದ ಹೆಮ್ಮಾಡಿಯರಸ, ಗೊಗ್ಗಿದೇವ, ರಾಮಯ್ಯ ಮುಂತಾದವರ ಶಾಸನಗಳು.

ಇದರ ಫಲವಾಗಿ ಮುಂದೆ ಬಂದ ಜೈನಧರ್ಮವು ಹಿಂದೆ ಆಗಿಹೋಗಿದ್ದ ಗಂಗರ ಕಾಲದ ಸುವರ್ಣ ಯುಗವನ್ನು ಆಗಾಗ್ಗೆ ಜ್ಞಾಪಿಸಿಕೊಳ್ಳುತ್ತಿತ್ತು. ಗೋಪಣಂದಿ ಎಂಬ ಮುನಿಗಳು ತಮ್ಮ ಸಾಮರ್ಥ್ಯದಿಂದ "ಗಂಗನೃಪಾಳರಂದಿನ ವಿಭೂತಿಯ ರೂಢಿಯನೆಯ್ದೆ ಮಾಡಿದರ್" ಎಂದು ಒಂದು ಶಾಸನವು ಅವರನ್ನು ಹೊಗಳಿದೆ.[268] ದಂಡಾಧಿಪ ಗಂಗರಾಜನ ಧಾರ್ಮಿಕ ಕ್ರಿಯೆಗಳಿಂದ "ಪಳೆಯ ಮಾಳ್ಕೆವೊಲಾದುದು" ಎಂದು ಹನ್ನೆರಡನೇ ಶತಮಾನದ ಜೈನರು ತಮ್ಮ ಗತವೈಭವವನ್ನು ಸ್ಮರಿಸಿಕೊಳುತ್ತಿದ್ದುದೂ ಉಂಟು.[269]

ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ಬ್ರಹ್ಮಶಿವನ ಸಮಯಪರೀಕ್ಷೆಯಲ್ಲಿ ಹಿಂದಿನ ಜನ್ಮದಲ್ಲಿ ಶನಿಯ ದೃಷ್ಟಿ ತಾಕಿದವನು ಈ ಜನ್ಮದಲ್ಲಿ ಜೈನನಾಗಿ ಹುಟ್ಟುತ್ತಾನೆ ಎಂಬ ಜನೋಕ್ತಿ ಬರುತ್ತದೆ.[270] ಈ ಉಕ್ತಿಯನ್ನು ಬ್ರಹ್ಮಶಿವನು ಹಾಸ್ಯಮಾಡಿದ್ದರೂ ಜೈನಧರ್ಮದ ಮತ್ತು ಜೈನ ಸನ್ಯಾಸಿಗಳ ಬಗೆಗೆ ಆ ಕಾಲದ ಹಲವರಿಗಿದ್ದ ಮನೋಭಾವವನ್ನು ಅದು ಸೂಚಿಸುವಂತೆ ಕಾಣುತ್ತದೆ. ಜೈನಧರ್ಮದ ಪ್ರಾಬಲ್ಯವು ಕಡಮೆಯಾಗಲು ಕಾರಣಗಳೇನು ಎಂಬುದರ ಚರ್ಚೆ ನಮ್ಮ ಈ ಅಧ್ಯಯನದ ವ್ಯಾಪ್ತಿಗೆ ಹೊರಗಾದರೂ ಕೆಲವು ಕಾರಣಗಳನ್ನು ಮಾತ್ರ ಸೂಚಿಸುತ್ತೇವೆ. ಜೈನಧರ್ಮವು ತನ್ನ ತತ್ವಗಳಲ್ಲಿ ಒಂದೆರಡನ್ನು ಅತಿರೇಕಕ್ಕೆ ಕೊಂಡೊಯ್ದಿದೆ. ಉದಾಹರಣೆಗೆ ಅಹಿಂಸಾ ವ್ರತವನ್ನೇ ತೆಗೆದುಕೊಳ್ಳಬಹುದು. ಜನಸಾಮಾನ್ಯರಿಗೆ ಇದನ್ನು ಸಮರ್ಪಕವಾಗಿ ಆಚರಣೆಗೆ ತರಲು ಎಷ್ಟು ಕಷ್ಟವಾಗುತ್ತದೆಯೆಂಬುದನ್ನು ಹೇಳಬೇಕಾಗಿಲ್ಲ. ಸಲ್ಲೇಖನ ವ್ರತವನ್ನು ಧರಿಸಿ ಪ್ರಾಣವನ್ನು ತ್ಯಜಿಸಿದವರ ನಿಷ್ಠೆ, ಶ್ರದ್ಧೆ, ಮೋಕ್ಷಾಪೇಕ್ಷೆ, ಧೈರ್ಯಗಳು ಪ್ರಶಂಸನೀಯವಾದರೂ, ಸಲ್ಲೇಖನ ವ್ರತಗಳು ಸಾರ್ವತ್ರಿಕವಾಗಿರದಿದ್ದರೂ, ವ್ಯಾವಹಾರಿಕವಾದ ದೃಷ್ಟಿಯಿಂದ ನೋಡಿದರೆ ಅವು ಧರ್ಮದ ಜನಪ್ರಿಯತೆಯನ್ನು ಸ್ವಲ್ಪಮಟ್ಟಿಗೆ ಕುಂಠಿತಗೊಳಿಸತಕ್ಕವುಗಳೇ ಆಗಿವೆ. ಅಲ್ಲದೆ ಜೈನಧರ್ಮದಲ್ಲಿ ದೈವ ಕೃಪೆಗೆ (Divine grace) ಸ್ಥಾನವಿಲ್ಲ. ವ್ಯಕ್ತಿ ತನ್ನ ಪ್ರಯತ್ನಗಳಿಂದಲೇ, ಅಪಾರವಾದ ದುಃಖಾನುಭವದಿಂದಲೇ ತನ್ನ ಕರ್ಮಕ್ಷಯವನ್ನು ಮಾಡಿಕೊಳ್ಳಬೇಕಾಗುತ್ತದೆ. ಆದರೆ ಧರ್ಮವು ಪ್ರಸಾರವಾಗಬೇಕಾದರೆ, ಕಷ್ಟಗಳಲ್ಲಿ ಪ್ರಾರ್ಥಿಸಿಕೊಂಡಾಗ ಬಂದು ದುಃಖವನ್ನು ನಿವಾರಿಸುವ ದೈವವೊಂದನ್ನು ಪ್ರತಿಪಾದಿಸಬೇಕಾಗುತ್ತದೆ. ಈ ಕಾರಣಗಳ ಜೊತೆಯಲ್ಲಿ ಹನ್ನೆರಡನೆಯ ಶತಮಾನದ ಪೂರ್ವಾರ್ಧ ಮತ್ತು ಉತ್ತರಾರ್ಧಗಳಲ್ಲಿ ಕರ್ನಾಟಕದಲ್ಲಿ ಹೆಚ್ಚುಹೆಚ್ಚಾಗಿ ಪ್ರಚಾರಗೊಂಡ ಶ್ರೀ ವೈಷ್ಣವ ಮತ್ತು ವೀರಶೈವ ಧರ್ಮಗಳ ಪ್ರಾಬಲ್ಯವೂ ಜೈನಧರ್ಮದ ಇಳಿಮುಖಕ್ಕೆ ಕಾರಣಗಳಾದುವು.

ಹೀಗೆ ಹಿಂದೊಮ್ಮೆ ಬಹು ಪ್ರಬಲವಾಗಿದ್ದ ಜೈನಧರ್ಮವು ಹನ್ನೆರಡನೆಯ ಶತಮಾನದ ಹೊತ್ತಿಗೆ ಜನತೆಯ ಮೇಲೆ ತನಗಿದ್ದ ಹಿಡಿತವನ್ನು ಕಳೆದುಕೊಂಡಿತು. ಆದರೆ ಜೈನಧರ್ಮವು ಕನ್ನಡ ಸಂಸ್ಕೃತಿಗೆ ಕೊಟ್ಟಿರುವ ಕಾಣಿಕೆಯು ಅಪರಿಮಿತ ಮತ್ತು ಉಪಮಾತೀತ. ಕನ್ನಡ ಸಾಹಿತ್ಯದ ಆರಂಭದ ದೆಸೆಯಲ್ಲಿ ಕೃಷಿ ಮಾಡಿ ಅತ್ಯಮೂಲ್ಯ ಕೃತಿಗಳನ್ನು ರಚಿಸಿದವರು ಜೈನರು. ಕರ್ನಾಟಕದ ವಾಸ್ತು ಮತ್ತು ಶಿಲ್ಪಗಳಿಗೆ ಅವರದೇ ಆದ ವಿಶಿಷ್ಟ ಕೊಡುಗೆಗಳಿವೆ. ಕರ್ನಾಟಕಕ್ಕೆ ಅತ್ತಿಮಬ್ಬೆ ಮತ್ತು ಚಾವುಂಡರಾಯರಂತಹ ಮಹಾವ್ಯಕ್ತಿಗಳನ್ನು

268 EC. V. Cn. 148, 1094 A.D.

269 EC. II. 73, 1118 A.D.

270 ಸಮಯ ಪರೀಕ್ಷೆ, 2.5-"ಶನಿ ಕಾಣಲ್ಪುಟ್ಟಿದವಂ ಜಿನಭಕ್ತನೆಯಕ್ಕುಮೆಂಬರ್."

ಒದಗಿಸಿದ್ದು ಜೈನಧರ್ಮವೇ. ಅಹಿಂಸೆಯನ್ನೇ ಪ್ರತಿಪಾದಿಸುವ ಜೈನಧರ್ಮವು ಕರ್ನಾಟಕಕ್ಕೆ ಅನೇಕ ಯುದ್ಧವೀರರನ್ನೂ ಒದಗಿಸಿಕೊಟ್ಟಿತು. ಬೌದ್ಧಧರ್ಮವು ಕರ್ನಾಟಕಕ್ಕೆ ಏನನ್ನು ಕೊಟ್ಟಿತೋ ಬಿಟ್ಟಿತೋ ತಿಳಿಯದು. ಆದರೆ ಕನ್ನಡನಾಡಿನ ಜೀವನಕ್ಕೆ ಶಾಸ್ತ್ರದ ಬೆಳಕನ್ನು, ಕಾವ್ಯದ ತಂಪನ್ನು ತಂದುಕೊಟ್ಟು ಅದನ್ನು ರೂಪಿಸಿದವರು ಜೈನರು. ಅದಕ್ಕಾಗಿಯೇ ಈ ಅಧ್ಯಾಯದಲ್ಲಿ ಕರ್ನಾಟಕಕ್ಕೆ ಜೈನಧರ್ಮದ ಪ್ರವೇಶ, ಅದರ ಪ್ರಸಾರ, ಅದರ ತತ್ವಗಳು, ಉನ್ನತಿ ಮತ್ತು ಇಳಿಮುಖಗಳನ್ನು ವಿಸ್ತಾರವಾಗಿ ಚರ್ಚಿಸಿರುವುದು.

# V

# ಬೌದ್ಧಧರ್ಮ

## ಆಜೀವಿಕರು

ಕರ್ನಾಟಕದ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದಾದ ಬೌದ್ಧಧರ್ಮವನ್ನು ಕುರಿತು ಚರ್ಚಿಸುವ ಮೊದಲು, ಬುದ್ಧ ಮತ್ತು ಮಹಾವೀರರ ಕಾಲದಲ್ಲಿ ಹುಟ್ಟಿಕೊಂಡ 'ಅಜೀವಿಕ'[1] ಎಂಬ ಹೆಸರಿನ ಪಂಥದ ವಿವೇಚನೆ ಮಾಡುವುದು ಅನುಚಿತವಾಗಲಾರದು. ಈ ಪಂಥವು ಜೈನ ಮತ್ತು ಬೌದ್ಧಧರ್ಮಗಳಿಗಿಂತ ಭಿನ್ನವಾದುದು. ಈ ಆಜೀವಿಕರು ಕರ್ನಾಟಕದಲ್ಲಿ ಇದ್ದರು ಎಂಬುದಕ್ಕೆ ನಮಗೆ ಯಾವ ಕನ್ನಡ ಶಾಸನಾಧಾರಗಳೂ ಇಲ್ಲ. ಸೋಮದೇವ ತನ್ನ 'ಯಶಸ್ತಿಲಕ ಚಂಪು'ವಿನಲ್ಲಿ ಆಜೀವಿಕರನ್ನು ಹೆಸರಿಸುತ್ತಾನೆಯೇ ಹೊರತು ಅವರ ತತ್ವಗಳನ್ನು ನಿರೂಪಿಸಿಲ್ಲ.[2] ಕರ್ನಾಟಕದಲ್ಲಿ ಆಜೀವಿಕರು ಬಹುಶಃ ಅತ್ಯಲ್ಪ ಸಂಖ್ಯಾತರಾಗಿ ಇದ್ದರು ಎಂಬುದಕ್ಕೆ ನಮಗೆ ಇರುವ ಸಾಕ್ಷಿಯೆಂದರೆ ಇದೊಂದೇ. ಕರ್ನಾಟಕದ ಅಕ್ಕಪಕ್ಕದ ಆಂಧ್ರ ಮತ್ತು ತಮಿಳುನಾಡುಗಳಲ್ಲಿ ಆಜೀವಿಕರು ಇದ್ದರು ಎಂಬುದಕ್ಕೆ ನಮಗೆ ಆಧಾರಗಳುಂಟು. ಆಂಧ್ರದ ನಾಗಾರ್ಜುನ ಪರ್ವತದ ಮಹಾದೇವಾಲಯಗಳನ್ನು ಆಜೀವಿಕರಿಗೆ ಬಿಟ್ಟುಕೊಡಲಾಗಿದೆ.[3] ಅದೇ ಆಂಧ್ರದ ನೆಲ್ಲೂರು ಜಿಲ್ಲೆಯಲ್ಲಿ ಕ್ರಿ. ಶ. 5ನೆಯ ಶತಕದಲ್ಲಿ ಆಜೀವಿಕರು ಇದ್ದರೆಂಬುದಕ್ಕೆ ಸಾಕ್ಷಿಗಳಿವೆ.[4] ತಮಿಳು ಮಹಾಕಾವ್ಯಗಳಾದ ಶಿಲಪ್ಪದಿಕಾರಂ ಮತ್ತು ಮಣಿಮೇಖಲೈಗಳಲ್ಲಿ ಆಜೀವಿಕರ ತತ್ವಗಳನ್ನು ನಿರೂಪಿಸಲಾಗಿದೆ.[5] ಕ್ರಿಸ್ತಶಕದ ಆರಂಭದ ಆಚೆ ಮತ್ತು ಈಚಿನ ಶತಕಗಳಲ್ಲಿ ಆಜೀವಿಕರು ತಕ್ಕಮಟ್ಟಿನ ಪ್ರಬಲ ಪಂಥವಾಗಿದ್ದರೆಂಬುದಕ್ಕೆ ಇವು ಪ್ರಮಾಣಗಳು. ಕ್ರಿಸ್ತಶಕ 5ನೆಯ ಶತಮಾನದಿಂದ 14ನೆಯ ಶತಮಾನದವರೆಗಾದರೂ ಮೈಸೂರಿನ ಪೂರ್ವಭಾಗಗಳಲ್ಲಿ ಅದಕ್ಕೆ ಹೊಂದಿಕೊಂಡಂತೆ ಇರುವ ಮದರಾಸಿನ ಭಾಗಗಳಲ್ಲಿ ಆಜೀವಿಕ ಪಂಥವು ಅಲ್ಪಸಂಖ್ಯಾತರ ಪಂಗಡವಾಗಿತ್ತು ಎಂದು ಬಾಷಂ ಹೇಳುತ್ತಾರೆ.[6] ಇದಕ್ಕೆ ಅವರು ಕೊಡುವ ಆಧಾರಗಳಿಷ್ಟು–ಮಣಿಮೇಖಲೈ, ನೀಲಕೇಶಿ ಮತ್ತು ಶಿವಜ್ಞಾನ ಚಿತ್ತಿಯಾರ್ ಎಂಬ ತಮಿಳು ಗ್ರಂಥಗಳಲ್ಲಿ ಮಾತ್ರವಲ್ಲದೆ, ತಮಿಳುನಾಡಿನ ಕನ್ನಡ ನಾಡಿನ ಶಾಸನಗಳಲ್ಲೂ ಆಜೀವಿಕ ಪಂಥದ ಹೆಸರು

---

[1] ಆಜೀವಿಕ ಮತ್ತು ಆಜೀವಕ ಎಂಬ ಎರಡು ರೂಪಗಳೂ ಉಂಟು. 'ಆಜೀವ' ಎಂದರೆ, ಹೋರ್ನ್‌ಲೆ ಅವರ ಪ್ರಕಾರ, "ಒಂದು ವರ್ಗದ ಜನರ ಜೀವನ ವಿಧಾನ"; "ಆಜೀವಕ" ಎಂದರೆ "ತನ್ನ ವರ್ಗದ ಜೀವನ ವಿಧಾನವನ್ನು ಪರಿಪಾಲಿಸತಕ್ಕವನು" ಎಂದರ್ಥ. ಇನ್ನೊಂದು ಸೂಚನೆಯ ಪ್ರಕಾರ "ಯಾವಜ್ಜೀವಂ" ಎಂದರೆ "ಜೀವನದ ಉದ್ದಕ್ಕೂ" "ಮರಣ ಪರ್ಯಂತ" ಎಂದರ್ಥ; "ಆಜೀವಿಕ" ಎಂದರೆ "ತನ್ನ ವ್ರತಗಳನ್ನು ಮರಣ ಪರ್ಯಂತ ಪಾಲಿಸತಕ್ಕವನು" ಎಂದರ್ಥ. ಬೌದ್ಧರು ಸ್ವೀಕರಿಸುತ್ತಿದ್ದ ಅಲ್ಪಕಾಲಿಕ ವ್ರತಗಳನ್ನು ವಿಡಂಬನೆಗೈಯಲು ಈ ಮಾತು ಹುಟ್ಟಿಕೊಂಡಿರಬಹುದು.

[A. L. Basham : History and Doctrines of the Ājivikas, pp. 101–3]

[2] Yaśastilaka and Indian Culture, p. 375.

[3] IA. XX. pp 361–2.

[4] EI. XXIV. p. 296.

[5] Yasástilaka and Indian Culture, pp. 375–6.

[6] The Wonder that was India, pp. 294–6.

ಗಳಿವೆ. ನೆಲ್ಲೂರು ಜಿಲ್ಲೆಯ (ಈಗ ಆಂಧ್ರದಲ್ಲಿದೆ) ಊರೊಂದನ್ನು ಸಿಂಹವರ್ಮ ಪಲ್ಲವನು ಕ್ರಿ. ಶ. 446ರಲ್ಲಿ ವಿಷ್ಣುವರ್ಮ ಎಂಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟ ಶಾಸನದಲ್ಲಿ ಅನೇಕ ತೆರಿಗೆಗಳ ಸಾಲಲ್ಲಿ 'ಆಜೀಪಿಕಕರ' ಎಂಬ ತೆರಿಗೆಯನ್ನೂ ಹೇಳಲಾಗಿದೆ. ಕೋಲಾರ ಜಿಲ್ಲೆಯ ಆವನಿ ಶಾಸನ[7] (ಕ್ರಿ. ಶ. 1072), ಮಡಿವಾಳದ ಶಾಸನ[8] (ಸು. ಕ್ರಿ. ಶ. 1291), ಕಲ್ಲುಹಳ್ಳಿ ಶಾಸನ[9] (ಕ್ರಿ. ಶ. 1294),–ಇತ್ಯಾದಿ ಅನೇಕ ಶಿಲಾಶಾಸನಗಳಲ್ಲಿ ಆಶುವಿಮುಕ್ಕಳ್, ಆಶುವಕ್ಕಡಮೈ ಮುಂತಾದ ಮಾತುಗಳು ಬರುತ್ತವೆ. 'ಆಚುವ' ಎಂಬುದು ಆಜೀವಿಕ ಪಂಥವನ್ನು ಸೂಚಿಸುತ್ತದೆ; ಆ ಪದಗಳು ಬರುವ ಸಂದರ್ಭವನ್ನು ನೋಡಿದರೆ ಆ ಪಂಥದವರು ತೆರಿಗೆಯನ್ನು ಕೊಡಬೇಕಾಗಿತ್ತು ಎಂದೂ ಅರ್ಥವಾಗುತ್ತದೆ. ಎಂದರೆ, ಆ ತೆರಿಗೆಯನ್ನು ಹಾಕಿದ್ದು ಆಜೀವಿಕ ಸನ್ಯಾಸಿಗಳ ಮೇಲಲ್ಲ, ಬಹುಶಃ ಶ್ರೀಮಂತರಾಗಿದ್ದ ಅವರ ಅನುಯಾಯಿಗಳ ಮೇಲೆ. ಇವರೆಲ್ಲ ಯಾವುದೋ ಹೆಚ್ಚು ಹಣವನ್ನು ತರುತ್ತಿದ್ದ ವೃತ್ತಿಯನ್ನವಲಂಬಿಸಿದ್ದಿರಬಹುದು. ತಮಿಳುನಾಡಿನ ಅನೇಕ ಶಾಸನಗಳಲ್ಲಿ ಇದೇ ರೀತಿಯ ಮಾತುಗಳು ಬರುತ್ತವೆ.[10]

ನಮಗೆ ತಿಳಿದಮಟ್ಟಿಗೆ ಸೋಮದೇವನ ಯಶಸ್ತಿಲಕ ಚಂಪುವನ್ನು ಬಿಟ್ಟರೆ ಕರ್ನಾಟಕದಲ್ಲಿ ಈ ಪಂಥವಿತ್ತು ಎಂಬುದಕ್ಕೆ ಯಾವ ಆಧಾರಗಳೂ ಇಲ್ಲ. ಕೋಲಾರ ಜಿಲ್ಲೆಯ ತಮಿಳು ಶಾಸನಗಳಲ್ಲಿ ಮಾತ್ರ 'ಆಚುವ' ಎಂಬ ಮಾತು ಬರುತ್ತದೆಯೇ ವಿನಾ ಅದೇ ಕಾಲದ ಕನ್ನಡ ಶಾಸನಗಳಲ್ಲಿ ಆ ರೀತಿಯ ಪದ ಎಲ್ಲಿಯೂ ಬರುವುದಿಲ್ಲ. 'ಆಚುವ' ಎಂಬ ಮಾತಿಗೆ ಇನ್ನೂ ಸ್ಪಷ್ಟವಾಗಿ ಅರ್ಥವನ್ನು ನಿರ್ಣಯಿಸಬೇಕಾಗಿದೆ. ಈ ಪಂಥದ ವಿಷಯ ಕನ್ನಡಿಗರಿಗೆ ಗೊತ್ತಿತ್ತು ಎಂಬುದಕ್ಕೆ ಒಂದೆರಡು ದುರ್ಬಲ ಸಾಕ್ಷಿಗಳನ್ನು ಒದಗಿಸಬಹುದು. ಹಲಾಯುಧನ ಅಭಿಧಾನ ರತ್ನಮಾಲೆಯ ಪ್ರಾಚೀನ ಕನ್ನಡ ವ್ಯಾಖ್ಯಾನವೊಂದರಲ್ಲಿ 'ಆಜೀವಕ' ಎಂದರೆ ಸವಣ (=ಜೈನ ಸನ್ಯಾಸಿ) ಎಂದೂ ಅರ್ಥೈಸಲಾಗಿದೆ (ಕಿಟ್ಟೆಲ್ ಅವರ ಕನ್ನಡ–ಇಂಗ್ಲಿಷ್ ಕೋಶ, ಪು. 149). ಮಂಗರಾಜನ ನಿಘಂಟಿನಲ್ಲಿ 'ದಂಡಾಜೀವಕ' ಎಂದರೆ ದಂಡಧಾರಿ ಸನ್ಯಾಸಿ ಎಂದೂ, ಐಂದ್ರಜಾಲಿಕ ('ಮಾಯೆಗೆಯ್ವಂ') ಎಂದೂ ಅರ್ಥಮಾಡಲಾಗಿದೆ (ಅದೇ, ಪು. 770).

ಆಜೀವಿಕ ಪಂಥದ ಆದ್ಯಪ್ರವರ್ತಕ ಗೋಶಾಲಮಸ್ಕರೀಪುತ್ರ ಅಥವಾ ಮಸ್ಕರಿಗೋಶಾಲ (ಮಸ್ಕರಿ ಎಂದರೆ ದಂಡ ಅಥವಾ ಊರೆಗೋಲು. ಗೋಶಾಲನು ಹಿಡಿದಿರುತ್ತಿದ್ದ ದಂಡದಿಂದ ಅವನಿಗೆ ಆ ಹೆಸರು ಬಂದಿದೆ.) ಇವನು ಬುದ್ಧ ಮತ್ತು ಮಹಾವೀರರ ಸಮಕಾಲೀನನಾಗಿದ್ದು, ಸ್ವಲ್ಪಕಾಲ ಮಹಾವೀರನೊಡನೆ ಇದ್ದು, ನಂತರ ಅವನಿಂದ ಒಡೆದು ಪ್ರತ್ಯೇಕವಾಗಿ ತಾನೇ ಸ್ವತಂತ್ರ ಪಂಥವೊಂದನ್ನು ಸ್ಥಾಪಿಸಿದನು. ಇವನ ತತ್ವಗಳನ್ನು ಜೈನ ಬೌದ್ಧ ಗ್ರಂಥಗಳು ಏಕಪ್ರಕಾರವಾಗಿ ನಿಂದಿಸಿವೆ. ಆಜೀವಿಕ ಪಂಥದ ಸನ್ಯಾಸಿಗಳಿಗೆ ಅಶೋಕ ಕೆಲವು ಗುಹೆಗಳನ್ನು ಮಾಡಿಸಿಕೊಟ್ಟಂತೆ ಅವನ ಶಾಸನಗಳು ಹೇಳುತ್ತವೆ.[11]

---

[7] EC. X. Mb. 49, 1072 A.D.

[8] EC. X. Kl. 28.

[9] EC. X. Kl. 18.

[10] Basham : History and Doctrines of the Ājīvikas, pp. 187–194. ಬಾಷಂ ಅವರ "ಆಶುವಿ" ಎಂದರೆ "ಆಜೀವಿಕ" ಎಂಬ ಅಭಿಪ್ರಾಯವನ್ನು ಬಿ. ಸೀತಾರಾಮನ್ ಒಪ್ಪುವುದಿಲ್ಲ. ಭಿಕ್ಷೆ ಮಾಡಿಕೊಂಡು ಜೀವಿಸುತ್ತಿದ್ದ ಆಜೀವಿಕರ ಮೇಲೆ ತೆರಿಗೆ ಹಾಕುತ್ತಿದ್ದರೆಂದು ಭಾವಿಸುವುದು ಹಾಸ್ಯಾಸ್ಪದ ಎಂಬ ಪ್ರೊ. ಚಕ್ರವರ್ತಿಯವರ ಅಭಿಪ್ರಾಯವನ್ನು ಉಲ್ಲೇಖಿಸಿ, "ಆಶುವಕ್ಕಡಮೈ" ಎಂಬುದು ನೇಯ್ಗೆಯ ಮಗ್ಗದ ಮೇಲೆ ಹಾಕುತ್ತಿದ್ದ ತೆರಿಗೆ (ತಮಿಳು. ಆಶು = ನೂಲುವ ರಾಟೆಯ ಒಂದು ಭಾಗ ; ರಾಟೆ) ಎಂಬುದೇ ನಿಜವಾದ ಅರ್ಥವೆಂದು ಭಾವಿಸುತ್ತಾರೆ ('Asuvika and Ajivika'–Studies in Indian History and Culture, pp. 483–7). ಈ ಅಭಿಪ್ರಾಯ ಸಾಧಾರವಾಗಿ ತೋರುತ್ತದೆ.

[11] EI. II. p. 272; ನಾ ಕಸ್ತೂರಿ: ಅಶೋಕ, ಪು. 191.

ಗೋಶಾಲ ಬೋಧಿಸಿದ ತತ್ವವನ್ನು ನಿಯತಿವಾದವೆಂದು ಕರೆಯಬಹುದು. ಇದು ನಿರೀಶ್ವರವಾದವೂ ಹೌದು. ಮನುಷ್ಯನ ಈಗಿನ ಸ್ಥಿತಿಗೆ ಅವನ ಪ್ರಾಚೀನ ಕರ್ಮಗಳು ಕಾರಣವಾಗಿದ್ದರೂ, ಉತ್ತಮ ಚಾರಿತ್ರದಿಂದ ಈಗಿನ ಜೀವನವನ್ನು ಉತ್ತಮಪಡಿಸಿಕೊಳ್ಳಬಹುದೆಂಬ ವಾದವನ್ನು ಇವನು ಒಪ್ಪಲಿಲ್ಲ. ಇಡೀ ಪ್ರಪಂಚವನ್ನು ವಿಶ್ವತತ್ವವಾದ ನಿಯತಿಯು ನಿಯಂತ್ರಿಸಿದೆ. ಅದರ ಮಾರ್ಗವನ್ನು ಯಾರೂ ಬದಲಾಯಿಸರು. ಕಾಲದ ಪ್ರವಾಹದಲ್ಲಿ ಮನುಷ್ಯ ಸುಮ್ಮನೆ ತೇಲಬೇಕು. ದಾರದ ಉಂಡೆಯ ಒಂದು ತುದಿಯನ್ನು ಹಿಡಿದು ಎಸೆದಾಗ ಅದು ತನ್ನ ಉದ್ದವಿರುವಷ್ಟು ಬಿಚ್ಚಿಕೊಳ್ಳುವಂತೆ, ಮನುಷ್ಯ ತನ್ನ ಕರ್ಮಫಲಾನುಸಾರ ಜೀವಿಸಿ ಕೊನೆಗೆ ಎಂದೋ ಒಮ್ಮೆ ದುಃಖವನ್ನು ಕೊನೆಗಾಣಿಸಿಕೊಳ್ಳುತ್ತಾನೆ. ಈ ಜನ್ಮದಲ್ಲಿ ಒಬ್ಬ ತಪಸ್ವಿಯಾಗಿ ಉತ್ತಮ ಕಾರ್ಯಗಳನ್ನು ಮಾಡುತ್ತಿದ್ದರೆ ಅವು ಅವನ ಹಿಂದಿನ ಕರ್ಮಗಳ ಫಲಗಳೇ ಹೊರತು, ಬಿಡುಗಡೆಗೆ ಕಾರಣಗಳಲ್ಲ.[12] ಶುದ್ಧ ಜೀವನವನ್ನು ನಡೆಯಿಸುವ ವ್ಯಕ್ತಿ ಉಳಿದ ವ್ಯಕ್ತಿಗಳಿಗಿಂತ ಬಿಡುಗಡೆಯ ಸಮೀಪದಲ್ಲಿದ್ದಾನೆ ಎಂದು ತಿಳಿಯಬೇಕೇ ಹೊರತು, ಅವನು ತಾನೇ ತನ್ನ ಶುದ್ಧ ಕ್ರಿಯೆಗಳಿಂದ ಬಿಡುಗಡೆಯನ್ನು ಸಮೀಪಿಸಿದ್ದಾನೆ ಎಂದರ್ಥವಲ್ಲ.

ಇಂತಹ ಅತಿರೇಕದ ನಿಯತಿವಾದ ಅಥವಾ ನಾಸ್ತಿಕವಾದವು ಭರತಖಂಡದಲ್ಲಿ ಬಹುಕಾಲ ಬದುಕಿರಲಾರದೆ ನಾಶವಾದದ್ದು ಸಹಜವೇ. ಈ ಪಂಥದಲ್ಲಿಯೂ ಇತರ ಪಂಥಗಳಲ್ಲಿದ್ದ ವಾಮಾಚಾರಗಳು–ಕುಣಿತ, ಆವೇಶ, ರಕ್ತಬಲಿ, ಮಾಟ ಮಂತ್ರಗಳು–ಇದ್ದುವು. ಮಂಗರಾಜನ ನಿಘಂಟಿನಲ್ಲಿ 'ದಂಡಾಜೀವಕ' ಎಂಬುದಕ್ಕೆ 'ಮಾಯೆಗೆಯ್ವಂ' ಎಂದು ಅರ್ಥ ಕೊಟ್ಟಿರುವುದು ಇದನ್ನೇ ಪೋಷಿಸುತ್ತದೆ. ತಮಿಳು ನಾಡಿನಲ್ಲಿಯೇ ಆಜೀವಿಕರನ್ನು ಜೈನಧರ್ಮದ ಒಂದು ಶಾಖೆ ಎಂದು ಕೆಲವರು ಭಾವಿಸಿರುವುದೂ ಉಂಟು (ಆಜೀವಕನ್ ಅಮಣರ್ಕಳ್. 'ಅಮಣ' ಎಂದರೆ 'ಶ್ರವಣ', 'ಶ್ರಮಣ'). ಕನ್ನಡದ ವ್ಯಾಖ್ಯಾನವೊಂದರಲ್ಲಿಯೂ ಇದೇ ಅರ್ಥವನ್ನು ಹೇಳಿದೆಯೆಂದು ಹಿಂದೆಯೇ ನೋಡಲಾಗಿದೆ. ಆಪ್ಟೆ, ಮೋನಿಯರ್ ವಿಲಿಯಮ್ಸ್ ಮುಂತಾದವರ ಕೋಶಗಳಲ್ಲಿ 'ಆಜೀವಿಕ' ಎಂಬುದಕ್ಕೆ ಇತರ ಅರ್ಥಗಳ ಜೊತೆಗೆ 'ಜೈನಸನ್ಯಾಸಿ' ಎಂಬ ಅರ್ಥವನ್ನೂ ಕೊಡಲಾಗಿದೆ. ವಿದ್ವಾಂಸರು ಆಜೀವಿಕ ಪಂಥವು ಬೌದ್ಧಧರ್ಮಕ್ಕಿಂತ ಜೈನಧರ್ಮಕ್ಕೆ ಸಮೀಪವಾದುದು ಎಂಬರ್ಥ ಬರುವಂತೆ ಬರೆಯುತ್ತಾರೆ.

ಕ್ರಿ. ಶ. 1153ರಲ್ಲಿದ್ದ ವೀರನಂದಿಯ 'ಆಚಾರಸಾರ' ಎಂಬ ಕೃತಿಯಲ್ಲಿ 'ಆಜೀವಿಕ'ರ ಹೆಸರಿದೆ. ಈ ಗ್ರಂಥದ ವ್ಯಾಖ್ಯಾನದಲ್ಲಿ 'ಆಜೀವಿಕ' ಎಂದರೆ ಬೌದ್ಧಭಿಕ್ಷು ಎಂದು ಅರ್ಥಮಾಡಲಾಗಿದೆ.[13] ನೇಮಿಚಂದ್ರನ ತ್ರಿಲೋಕಸಾರದ ಕನ್ನಡ ವ್ಯಾಖ್ಯಾನದಲ್ಲಿ ಆಜೀವಿಕರು ಅಂಬಲಿಕೂಳನ್ನು ಉಣ್ಣುವರೆಂದೂ, ಅಚ್ಯುತಕಲ್ಪವನ್ನು ಸೇರುವರೆಂದೂ ಹೇಳಿದೆ.[14] ಈ ಗ್ರಂಥಗಳು ಕರ್ನಾಟಕದಲ್ಲಿ ರಚಿತವಾಗಿವೆ. ಹಿಂದೆ ಉದ್ಧರಿಸಿದ ಶಾಸನಗಳಿಂದ ಇಂತಹ ಒಂದು ಪಂಥ ಕರ್ನಾಟಕದಲ್ಲಿ ಬಹುಶಃ ಅದರ ದಕ್ಷಿಣ–ಪೂರ್ವದ ಮೂಲೆಯಲ್ಲಿ ಎಂದರೆ ಕೋಲಾರ ಜಿಲ್ಲೆಯಲ್ಲಿ ಇದ್ದಿತು ಎಂದು ಸಾಧಿಸಬಹುದಾದರೂ, ಅತ್ಯಲ್ಪ ಸಂಖ್ಯಾತರ ಧರ್ಮವಾಗಿ, ಅಜ್ಞಾತವಾಗಿ ಇದ್ದು ಕಾಲ ಕ್ರಮೇಣ ಮರೆಯಾಗಿ ಹೋಯಿತು ಎಂದು ಊಹಿಸಬಹುದು.

## ಬೌದ್ಧಧರ್ಮ

ಬೌದ್ಧಧರ್ಮದ ತತ್ವಗಳನ್ನು ಹೀಗೆ ಸಂಗ್ರಹಿಸಬಹುದು–"ಜೀವನವು ದುಃಖಮಯವಾಗಿದೆ. ಆತ್ಮದ ನಿಜವಾದ ಸ್ವರೂಪವನ್ನು ಅರಿಯದಿರುವುದೇ ಅವಿದ್ಯೆ. ಈ ಅವಿದ್ಯೆಯೇ ಎಲ್ಲ ದುಃಖಗಳಿಗೆ ಮೂಲ. ದೇಹ (ರೂಪ) ಮತ್ತು ಮನಸ್ಸು (ನಾಮ) ಗಳಿಂದ ಭಿನ್ನವಾದ ಆತ್ಮವೆಂಬ ವಸ್ತುವಿಲ್ಲ. ಪ್ರತ್ಯೇಕ ಅಸ್ತಿತ್ವವಿಲ್ಲದ ಈ

[12] Zimmer: Philosophies of India, p. 268.

[13] ಕರ್ಣಾಟಕ ಕವಿಚರಿತೆ (1961), I. ಪು. 172.

[14] ಬಾಷಂ ಅವರು ಈ ವಿಷಯಗಳನ್ನು ಕೆ. ಬಿ. ಪಾಠಕ್ ಅವರ ಲೇಖನವೊಂದರಿಂದ ಆರಿಸಿಕೊಂಡಿರುವುದಾಗಿ ತಮ್ಮ ಗ್ರಂಥದಲ್ಲಿ ಹೇಳಿಕೊಂಡಿದ್ದಾರೆ (ಪು. 203-4)

ಆತ್ಮಕ್ಕೆ ಅಂಟಿಕೊಳ್ಳುವುದೇ ಜೀವನದ ಸಮಸ್ತ ದುಃಖಕ್ಕೆ ಕಾರಣ. ದುಃಖವನ್ನು ಹೋಗಲಾಡಿಸಿಕೊಳ್ಳುವುದು ಸಾಧ್ಯ. ಆತ್ಮವೆಂಬುದು ಅನೇಕ ಸ್ಕಂಧಗಳ ಮೊತ್ತ–ಚಕ್ರ, ನೊಗ ಇತ್ಯಾದಿಗಳ ಮೊತ್ತವೇ ರಥ ಎಂದು ಕರೆಯಿಸಿಕೊಳ್ಳುವಂತೆ. ಈ ಆತ್ಮವು ನಿರ್ವಾಣದಲ್ಲಿ ಸಂಪೂರ್ಣವಾಗಿ ಲಯವನ್ನು ಹೊಂದುತ್ತದೆ (ಇಂತಹ ತತ್ವ ಗಳಿಂದ ಬೌದ್ಧಧರ್ಮವನ್ನು 'ನೈರಾತ್ಮ್ಯವಾದ'ವೆಂದೂ ಕರೆಯುವುದುಂಟು). ಆತ್ಮಸ್ವಭಾವದ ನಿಜವಾದ ಅರಿವಿನ ಅಭಾವವೊಂದೇ ಅಲ್ಲ, ದುಃಖಕ್ಕೆ ಇನ್ನೂ ಹನ್ನೊಂದು ಕಾರಣಗಳಿವೆ. ಅವುಗಳಲ್ಲಿ ಮುಖ್ಯ ಮೂರು–ತೃಷ್ಣೆ, ಮರಣ, ಪುನರ್ಜನ್ಮ. ಮನುಷ್ಯನ ಅವಿದ್ಯೆಯಿಂದ ಬಯಕೆಗಳ ನೀರಡಿಕೆ (ತೃಷ್ಣಾ) ಹುಟ್ಟುತ್ತದೆ; ತೃಪ್ತಿ ಗೊಳ್ಳದ ಈ ಬಯಕೆಗಳ ಫಲವಾಗಿ ಮರಣದ ಬಳಿಕ ಪುನರ್ಜನ್ಮ ಒದಗುತ್ತದೆ. ಈ ಹುಟ್ಟು ಸಾವುಗಳಿಗೆ ಒಂದು ಮುಕ್ತಾಯವನ್ನು ತರಲೇಬೇಕು, ಅದೇ ನಿರ್ವಾಣ.[15] ಅವಿದ್ಯಾ, ತೃಷ್ಣಾ, ಜನನ, ಮರಣ ಇವುಗಳ ಪರಿ ಸಮಾಪ್ತಿಯೇ ನಿರ್ವಾಣ. ಇದನ್ನು ಪಡೆದವನೇ 'ಅರ್ಹನ್'. ದುಃಖದ ನಿವಾರಣೆಗೆ ಸರಿಯಾದ ಜ್ಞಾನವೊಂದೇ ಮಾರ್ಗ. ಶೀಲ, ಪ್ರಜ್ಞಾ, ಸಮಾಧಿ ಇತ್ಯಾದಿಗಳ ಅನುಸರಣೆಯೇ ಈ ಮಾರ್ಗ."[16]

ಬುದ್ಧನು ಮಹಾಧರ್ಮವೊಂದರ ಪ್ರತಿಷ್ಠಾಪಕ ಎಂಬ ಗೌರವಕ್ಕೆ ಪಾತ್ರನಾಗಬಲ್ಲ ಏಕೈಕ ಆರ್ಯನೆಂದು ರೈಸ್ ಡೇವಿಡ್ಸ್ ತಮ್ಮ ಗ್ರಂಥದಲ್ಲಿ ಕರೆದಿದ್ದಾರೆ.[17] ಅದೇ ಗ್ರಂಥದಲ್ಲಿ ಮತ್ತೊಂದು ಕಡೆ[18] ಗೌತಮಬುದ್ಧ ಹುಟ್ಟಿದ್ದು, ಬೆಳೆದದ್ದು, ಕೊನೆಯನ್ನು ಕಂಡದ್ದು ಹಿಂದುವಾಗಿಯೇ, ಅವನ ಬೋಧನೆಗಳು ಎಷ್ಟೇ ಹೊಸತಾಗಿದ್ದರೂ ಆ ಕಾಲದ ಧರ್ಮಗಳಿಗೆ ವಿರೋಧವಾಗಿದ್ದರೂ, ಅವು ಸಂಪೂರ್ಣವಾಗಿ ಅಚ್ಚ ಭಾರತೀಯ ಎಂದಿದ್ದಾರೆ. ಈ ಧರ್ಮ ಒಂದಾನೊಂದು ಕಾಲದಲ್ಲಿ ಅಶೋಕನಂತಹ ಚಕ್ರವರ್ತಿಯ ಆಶ್ರಯ ಸಿಕ್ಕಿ ಇಡೀ ಭರತಖಂಡದಲ್ಲಿ ವ್ಯಾಪಿಸಿದ್ದರೂ, ಅದರಲ್ಲೂ ದಕ್ಷಿಣದಲ್ಲಿ ಮಹಾರಾಷ್ಟ್ರ ಮತ್ತು ಆಂಧ್ರಗಳಲ್ಲಿ ವಿಶೇಷವಾಗಿ ವ್ಯಾಪಿಸಿದ್ದರೂ, ತಮಿಳುನಾಡಿನಲ್ಲಿ ತಕ್ಕ ಮಟ್ಟಿಗೆ ಪ್ರಬಲವಾಗಿದ್ದರೂ, ಕರ್ನಾಟಕದಲ್ಲಿ ನಮಗೆ ತಿಳಿದಮಟ್ಟಿಗೆ ಯಾವಾಗಲೂ ಅದು ಪ್ರಬಲ ಧರ್ಮವಾಗಿರಲಿಲ್ಲ. ಈಗಲಂತೂ ನಾಲ್ಕಾರು ಮುಖ್ಯ ಶಾಸನಗಳನ್ನೂ ವಿಗ್ರಹಗಳನ್ನೂ ಬಿಟ್ಟರೆ ಕರ್ನಾಟಕದಲ್ಲಿ ಎದ್ದು ಕಾಣುವಂತಹ

---

[15] "ನಿರ್ವಾಣವೆನ್ನುವುದು ಸಾಧಿಸಿ ಪಡೆಯಬೇಕಾದ ಒಂದು ಆನಂದ ಸ್ಥಿತಿ, ಉಪನಿಷತ್ತುಗಳ ಮೋಕ್ಷಕ್ಕೆ ಸಮಾನ ವಾದುದು. ಉಪನಿಷತ್ತುಗಳಲ್ಲಿಯೂ, ಗೀತೆಯಲ್ಲಿಯೂ ಬರುವ ಈ ಪದಕ್ಕೆ 'ಬ್ರಹ್ಮದಲ್ಲಿ ಏಕತೆಯನ್ನು ಪಡೆವುದು' ಎಂದರ್ಥ.... ನಿರ್ವಾಣ ಎಂಬ ಮಾತಿಗೆ 'ನಾಶವಾಗುವುದು' ಎಂದು ಅರ್ಥೈಸಲು ಬೌದ್ಧ ಗ್ರಂಥಗಳಲ್ಲಿ ಆಧಾರವಿಲ್ಲ."

—S. Radhakrishnan : Gautama the Buddha, pp. 56–58.

ಡಾ॥ ರಾಧಾಕೃಷ್ಣನ್‌ರವರ 'ನಿರ್ವಾಣವೆಂದರೆ ಅದೊಂದು ಚಿತ್ತಸ್ಥಿತಿ' ಎಂಬ ಮಾತಿಗೆ ಪೋಷಕವಾಗಿ ಬೌದ್ಧ ಗ್ರಂಥ ವೊಂದರ ಆಧಾರವನ್ನು ಕೊಡಬಹುದು. ಅದರ ಪ್ರಕಾರ, ಅಸಂಖ್ಯಾತ ಸಂಕಲ್ಪಗಳೆಂಬ ತಮಸ್ಸಿನಿಂದ ಆವೃತವಾಗಿರುವುದೂ, ಬಿರುಗಾಳಿಯಂತೆ ಉನ್ಮತ್ತವೂ ಮಿಂಚಿನಂತೆ ಚಂಚಲವೂ, ರಾಗಾದಿಗಳೆಂಬ ಮಲದಿಂದ ಲೇಪಿತವೂ ಆಗಿರುವ ಚಿತ್ತಸ್ಥಿತಿಯೇ ಸಂಸಾರ. ಇದಕ್ಕೆ ವಿರುದ್ಧವಾಗಿ, ಪ್ರಭಾಪೂರ್ಣವೂ, ಕಲ್ಪನೆಗಳಿಂದ ಮುಕ್ತವೂ, ರಾಗಾದಿ ಮಲಗಳಿಂದ ಬಿಡುಗಡೆ ಹೊಂದಿ, ಅನುಭವಿಸುವವನು–ಅನುಭವಿಸಬೇಕಾದ್ದು ಎಂಬ ಭೇದವಳಿದ ಸತ್ವಪೂರ್ಣ ಚಿತ್ತ ಸ್ಥಿತಿಯೇ ನಿರ್ವಾಣ :

"ಅನಲ್ಪಸಂಕಲ್ಪ ತಮೋಭಿಭೂತಂ। ಪ್ರಭಂಜನೋನ್ಮತ್ತ ತಡಿಚ್ಚಲಂ ಚ।
ರಾಗಾದಿ ದುರ್ವಾರ ಮಲಾವಲಿಪ್ತಂ। ಚಿತ್ತಂ ಹಿ ಸಂಸಾರಮುವಾಚ ವಜ್ರೀ॥
ಪ್ರಭಾಸ್ವರಂ ಕಲ್ಪನಯಾ ವಿಮುಕ್ತಂ। ಪ್ರಹೀನರಾಗಾದಿ ಮಲಪ್ರಲೇಪಂ।
ಗ್ರಾಹ್ಯಂ ನ ಚ ಗ್ರಾಹಕಮಗ್ರಸತ್ವಂ। ತದೇವ ನಿರ್ವಾಣವರಂ ಜಗಾದ॥"

(—S. B. Dasgupta : An Introduction to Tantric Buddhism, p. 45).

[16] M. Hiriyanna : The Essentials of Indian Philosophy, pp. 75–77.

[17] Rhys Davids : Buddhism, p. 185.

[18] ಅದೇ, ಪು. 116.

ಬೌದ್ಧ ಸ್ಮಾರಕಗಳೇ[19] ಇಲ್ಲ ಎನ್ನಬಹುದು. ಆದರೂ ಕರ್ನಾಟಕದಲ್ಲಿ ಈ ಧರ್ಮ ತಕ್ಕಮಟ್ಟಿಗೆ ಪ್ರಚಾರದಲ್ಲಿತ್ತು ಎಂಬುದಕ್ಕೆ ಕೆಲವು ನಿದರ್ಶನಗಳನ್ನು ಹೆಸರಿಬಹುದು.

## ಕರ್ನಾಟಕದಲ್ಲಿ ಬೌದ್ಧ ಧರ್ಮ[19.1]

ಕರ್ನಾಟಕದಲ್ಲಿ ಬೌದ್ಧಧರ್ಮದ ಅತ್ಯಂತ ಪ್ರಾಚೀನ ಕುರುಹುಗಳೆಂದರೆ, ಮಧ್ಯಕರ್ನಾಟಕದ ಚಿತ್ರ ದುರ್ಗಜಿಲ್ಲೆಯ ಸಿದ್ಧಾಪುರ, ಜಟಿಂಗ ರಾಮೇಶ್ವರ, ಬ್ರಹ್ಮಗಿರಿಗಳಲ್ಲಿ, ಉತ್ತರ ಕರ್ನಾಟಕದ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಸಿಕ್ಕಿರುವ ಅಶೋಕನ ಕ್ರಿಸ್ತಪೂರ್ವ ಮೂರನೇ ಶತಮಾನದ ಶಾಸನಗಳು. ಆದರೆ ಬೌದ್ಧಧರ್ಮ ಕರ್ನಾಟಕದಲ್ಲಿ ಪ್ರಬಲವಾಗಿತ್ತು ಎನ್ನುವುದಕ್ಕಿಂತ ಮೌರ್ಯ ಸಾಮ್ರಾಜ್ಯ ಇಲ್ಲಿಯವರೆಗೆ ಹಬ್ಬಿತ್ತು ಎಂಬುದಕ್ಕೆ ಇವು ಪ್ರಬಲವಾದ ಸಾಧನಗಳು. ಮಹಾವಂಶ ಮತ್ತು ದೀಪವಂಶಗಳ ಪ್ರಕಾರ ಮೊಗ್ಗಲಿಪುತ್ತ ತಿಸ್ಸನು (ಅಶೋಕ ನನ್ನು ಬೌದ್ಧಧರ್ಮಕ್ಕೆ ಮತಾಂತರಗೊಳಿಸಿದವನು) ಥೇರನಾದ ಮಹಾದೇವನನ್ನು ಮಹಿಷಮಂಡಲಕ್ಕೂ (ಈಗಿನ ಮೈಸೂರು) ರಕ್ಖಿತ ಎಂಬ ಥೇರನನ್ನು ವನವಾಸಿಗೂ (ಈಗಿನ ಬನವಾಸಿ) ಬೌದ್ಧಧರ್ಮ ಪ್ರಚಾರಕ್ಕೆ ಕಳುಹಿಸಿ ಕೊಟ್ಟನು. ಕ್ರಿ. ಪೂ. 2ನೇ ಶತಮಾನದಲ್ಲಿ ಸಿಂಹಳದಲ್ಲಿ ಪ್ರಮುಖ ಬೌದ್ಧಗುರುಗಳ ಮಹಾಸಭೆಯೊಂದು ನಡೆ ಯಿತು. ದುತ್ತಗಮನಿ ಅಬಯ (Duttagamani Abaya) ಎಂಬ ರಾಜನ ಕಾಲದಲ್ಲಿ ಮಹಾವಿಹಾರವೊಂದು ಪ್ರತಿಷ್ಠಾಪಿತವಾದುದರ ಸ್ಮಾರಕವಾಗಿ ನಡೆದ ಆ ಸಭೆಯಲ್ಲಿ ಭಾಗವಹಿಸಿದ ಗುರುಗಳಲ್ಲಿ 'ವನವಾಸ'ದ (ಬನವಾಸಿ) ಚಂದಗುತ್ತ ಮಹಾಥೇರ ಒಬ್ಬರು.* ಬನವಾಸಿಯಲ್ಲಿ ರಕ್ಖಿತಥೇರನ ಸ್ಥಾನವನ್ನು ಅಲಂಕರಿಸಿದ ಈ ಚಿನ ಬೌದ್ಧ ಗುರು ವೀತ ಎಂಬುದು ಸ್ಪಷ್ಟ. ಕ್ರಿಸ್ತಪೂರ್ವದ ಆರಂಭದ ಶತಕಗಳಲ್ಲಿ ಉನ್ನತಿಯನ್ನು ಹೊಂದಿದ್ದ ಚಂದ್ರವಳ್ಳಿಯಲ್ಲಿ ಬುದ್ಧನ ವಿಗ್ರಹಗಳು ಸಿಕ್ಕಿರುವುದರಿಂದ ಅಲ್ಲಿ ಬೌದ್ಧಧರ್ಮದ ಅನುಯಾಯಿಗಳಿದ್ದರು ಎಂದು ಊಹಿಸಬಹುದಾಗಿದೆ.[20] ಕ್ರಿಸ್ತಶಕದ ಆರಂಭದ ಶತಮಾನಗಳಿಗೆ ಸೇರುವ ಗುಲ್ಬರ್ಗಜಿಲ್ಲೆಯ ಸನ್ನತಿಯ ಸುಮಾರು ಮೂವತ್ತಕ್ಕೂ ಮೀರಿದ ಚಿಕ್ಕ ಚಿಕ್ಕ ಪ್ರಾಕೃತ ಶಾಸನಗಳು ಬೌದ್ಧಧರ್ಮಕ್ಕೆ ಸಂಬಂಧಿಸಿವೆ. ಅಲ್ಲಿ ಸ್ತೂಪವೂ ಇತ್ತೆಂಬು ದಕ್ಕೆ ಆಧಾರಗಳಿವೆ. (Karnataka Througb the Ages, App. IX) ಸನ್ನತಿ ಒಂದು ಬೌದ್ಧಕೇಂದ್ರವೆಂಬ ಸಂಗತಿಯನ್ನು ಎಲ್ಲರ ಗಮನಕ್ಕೆ ಮೊದಲು ತಂದವರು ಎಸ್. ನಾಗರಾಜು, ಆರೇಳುವರ್ಷಗಳ ಹಿಂದೆ. ಆದರೆ, ಅಲ್ಲಿಯ ಬೌದ್ಧಸ್ಮಾರಕಗಳನ್ನು ಕುರಿತು ಕಪಟರಾಳ ಕೃಷ್ಣರಾಯರು 1954ರಲ್ಲಿ ಲೇಖನ ಬರೆದಿದ್ದುದು ಗಮನಾರ್ಹ. (ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಪು. 258-9) ಕ್ರಿಸ್ತಶಕದ ಆರಂಭದಲ್ಲಿ ಆ ಭಾಗವನ್ನು ಆಳುತ್ತಿದ್ದ ಶಾತ ವಾಹನರು ಬೌದ್ಧ ಪಕ್ಷಪಾತಿಗಳಾಗಿದ್ದರು. ಬನವಾಸಿಯ ಕ್ರಿಸ್ತಶಕ ಮೂರನೆಯ ಶತಮಾನದ ಪ್ರಾಕೃತ ಶಾಸನ

---

19 ಮಹಾರಾಷ್ಟ್ರದಲ್ಲಿ ಅಜಂತ, ಎಲ್ಲೋರ, ಕಾರ್ಲ್ಲಾ, ಭಾಜಾ, ಕನ್ಹೇರಿ, ಉತ್ತರ ಕರ್ನಾಟಕದ ಗಡಿಗೆ ಸಮೀಪ ವಾಗಿರುವ ಕೊಲ್ಲಾಪುರ; ಆಂಧ್ರದಲ್ಲಿ ನಾಗಾರ್ಜುನಕೊಂಡ, ಅಮರಾವತಿ: ಮದರಾಸ್ ಪ್ರಾಂತದಲ್ಲಿ ಕಂಚಿ, ತಂಜಾವೂರು ಮತ್ತು ಪಶ್ಚಿಮದಲ್ಲಿ ಗೋವ-ಇವು ಬೌದ್ಧ ಸ್ಮಾರಕಗಳನ್ನು ಉಳ್ಳ ಸ್ಥಳಗಳು.
("2500 Years of Buddhism" ಎಂಬ ಗ್ರಂಥದಲ್ಲಿ ಪುಟ 338ರ ಎದುರಿಗಿರುವ ಪಟವನ್ನು ನೋಡಿ.)

19.1 ಕರ್ನಾಟಕದ ಬೌದ್ಧ ಧರ್ಮವನ್ನು ಕುರಿತಾದ ಚರ್ಚೆಗೆ, ಇದನ್ನೂ ನೋಡಿ-M. Chidanandamurthy : 'Buddhism in Karnāṭaka' (Quarterly Journal of the Mythic Society, Liii. 4, January, 1963).

*J. M. Senavartana : History of the Sinhalese, vol. II. p. 16. (Quoted by Alexander : Buddhism in Kerala, p. 18)

20 ಎಂ. ಎಚ್. ಕೃಷ್ಣ : ಕರ್ನಾಟಕದ ಪೂರ್ವಚರಿತ್ರೆ, ಪು. 29-33.

ದಲ್ಲಿ[21] ಚುಟುಕುಲದ ಸಾತಕರ್ಣಿಯ ಮಗಳು ಬನವಾಸಿಯಲ್ಲಿ ನಾಗವನ್ನೂ ಕೆರೆಯನ್ನೂ ಒಂದು ವಿಹಾರವನ್ನೂ ದಾನಮಾಡಿದಳೆಂದು ಹೇಳಿದೆ. ಕ್ರಿ. ಶ. ನಾಲ್ಕನೇ ಶತಮಾನದ ತಾಮ್ರಪಟವೊಂದು 'ಓಂ ನಮಃ ಶಿವಾಯ' ಎಂದು ಆರಂಭವಾಗಿ, ಮಧ್ಯದಲ್ಲಿ ರಾಜನನ್ನು "ಪ್ರಾಣಿಗಳಿಗೆ ದಯೆತೋರುವುದರಲ್ಲಿ ಬೋಧಿಸತ್ವನನ್ನು ಹೋಲುವನು" ('ಪ್ರಾಣಿನಾಂ ಪರಮಕಾರುಣಿಕತಯಾ ಬೋಧಿಸತ್ವೋಪಮಾನಸ್ಯ') ಎಂದು ಹೊಗಳಿದೆ.[22] ಈ ಬೋಧಿಸತ್ವನ ಕಲ್ಪನೆ ಅಷ್ಟು ಪ್ರಾಚೀನಕಾಲಕ್ಕೆ ಕರ್ನಾಟಕವನ್ನು ಪ್ರವೇಶಿಸಿತ್ತು. ಅದೇ ಶತಮಾನದ ಮತ್ತೊಂದು ತಾಮ್ರಪಟದಲ್ಲಿ[23] ಗಂಗಕುಲದ ಮಾಧವಶರ್ಮನು ಬೌದ್ಧವಿಹಾರಕ್ಕೆ ಭೂಮಿಯನ್ನು ದಾನಮಾಡಿದ ವಿಷಯಬಂದಿದೆ. ಆ ಶಾಸನದಲ್ಲಿ ಹೊಲದ ಮೇರೆಯನ್ನು ಹೇಳುವಾಗ 'ಶಾಕ್ಯಶಿಲಾ' ಎಂಬ ಮಾತು ಬರುತ್ತದೆ. ಶೈವದತ್ತಿಗಳ ಮತ್ತು ಜೈನದತ್ತಿಗಳ ಗಡಿಗಳನ್ನು ಹೇಳುವ ಕಲ್ಲುಗಳಿಗೆ 'ಲಿಂಗಮುದ್ರೆಯ ಕಲ್ಲು', 'ಮುಕ್ಕೊಡೆಯ ಕಲ್ಲು' ಎಂಬ ಹೆಸರುಗಳಿರುವ ಹಾಗೆ ಬ್ರಾಹ್ಮಣರಿಗೆ ಬಿಟ್ಟುಕೊಟ್ಟ ದತ್ತಿಗಳನ್ನು ಸೂಚಿಸುವ ಕಲ್ಲುಗಳಿಗೆ ವಾಮನಮುದ್ರೆಕಲ್ಲು ಎನ್ನುವ ಹಾಗೆ ಬೌದ್ಧದತ್ತಿಗಳ ಮೇರೆಯ ಕಲ್ಲುಗಳಿಗೆ 'ಶಾಕ್ಯಶಿಲಾ' ಎಂಬ ಹೆಸರಿತ್ತು (ಬುದ್ಧನು ಶಾಕ್ಯವಂಶದವನು ಎಂಬುದನ್ನು ಇಲ್ಲಿ ನೆನೆಯಬಹುದು). ಶಾಸನದ ಕೊನೆಯಲ್ಲಿ "ಇತಿ ಯಸ್ಮಿನ್ ಗಾಂಗೇಯರಾಜ್ಯೇ ತಸ್ಮಿನ್ ಶ್ರೀ ಮಾಧವ ಶರ್ಮಣಃ ಶಾಸನಬುದ್ಧಸತ್ವಾಯ ದತ್ತಮಾಚಂದ್ರಾರ್ಕತಾರಕಂ" ಎಂದಿದೆ. ಇಲ್ಲಿಯೂ 'ಬುದ್ಧಸತ್ವ' ಎಂಬ ಮಾತು ಗಮನಾರ್ಹವಾದುದು. ಜೈನರಾಗಿದ್ದ ಗಂಗರು ಬೌದ್ಧವಿರೋಧಿಗಳಾಗಿದ್ದಿಲ್ಲ ಎಂಬುದು ಇದರಿಂದ ಸೂಚಿತವಾಗುತ್ತದೆ. ಈ ತಾಮ್ರಪಟದ ಎರಡನೆಯ ಹಲಗೆ ಕಳೆದುಹೋಗಿರುವುದರಿಂದ ಶಾಸನದಲ್ಲಿ ಉಕ್ತವಾಗಿರುವ ವಿಹಾರವು ಎಲ್ಲಿತ್ತು ಎಂಬುದನ್ನು ನಿರ್ಧರಿಸುವುದು ಕಷ್ಟವಾಗಿದೆ. 'ಅವನಿನದಿ'ಯ ಹೆಸರು ಬರುವುದರಿಂದ ಬಹುಶಃ ಕೋಲಾರ ಜಿಲ್ಲೆಯಲ್ಲಿ, ಆವಣಿ ಎಂಬ ತೀರ್ಥಕ್ಷೇತ್ರದ ಸಮೀಪದಲ್ಲಿ ಇತ್ತೋ ಏನೋ ! ಕ್ರಿ.ಶ. 5ನೇ ಶತಮಾನದ ತಾಮ್ರಪಟದಲ್ಲಿ[24] ಬರುವ ಸರ್ವಜ್ಞ, ಸಿದ್ಧಾಯತನ, ಸಂಘ ಮುಂತಾದ ಮಾತುಗಳಿಂದ ಅದು ಬೌದ್ಧ ಶಾಸನವೇ ಜೈನಶಾಸನವೇ ಎಂದು ನಿರ್ಧರಿಸುವುದು ಕಷ್ಟ. ಸಂಪಾದಕರೇನೋ ಅದು ಜೈನಶಾಸನ ಎಂದು ತೀರ್ಮಾನಿಸಿದ್ದರೂ, ಬೌದ್ಧರಲ್ಲಿಯೂ ಅತೀಂದ್ರಿಯ ಶಕ್ತಿಗಳನ್ನು ಪಡೆದುಕೊಂಡ 84 ಸಿದ್ಧರ ಪೂಜೆ ಇತ್ತು ಎಂಬುದನ್ನು ಜ್ಞಾಪಿಸಿಕೊಂಡರೆ, ಜೈನರಲ್ಲಿ ತೀರ್ಥಂಕರರಿಗೆ ಇರುವಂತೆ ಸಿದ್ಧರಿಗೆ ದೇವಸ್ಥಾನಗಳು ಬಹಳ ವಿರಳವಾಗಿರುವುದರಿಂದ ಆ ಶಾಸನ ಬೌದ್ಧಶಾಸನವಿರಬಹುದೇ ಎಂಬ ಸಂದೇಹವನ್ನು ಹುಟ್ಟಿಸುತ್ತದೆ. ಅದೇ ಕಾಲದ ಪಶ್ಚಿಮ ಕರ್ನಾಟಕದ ತಾಮ್ರಪಟದ[25] ಆರಂಭದಲ್ಲಿ 'ನಿಷ್ಕಾರಣವತ್ಸಲ' ಬುದ್ಧನನ್ನು ಪ್ರಾರ್ಥಿಸಿ 'ವಿಹಾರ' ಮತ್ತು 'ಆರ್ಯ ಸಂಘ'ಗಳಿಗೆ ದೀಪಕ ಎಂಬ ನಾಡಿನಲ್ಲಿ ಸುಂದರಿಕಾ ಎಂಬ ಹೆಸರಿನ ಗ್ರಾಮವನ್ನು ದಾನವಾಗಿ ಕೊಡಲಾಗಿದೆ. ಈ ದೀಪಕ (<ದ್ವೀಪ) ಎಂಬುದು ಕಾರ್ವಾರದ ಸಮೀಪದ ಆಂಜಿದಿವ್, ಅಥವಾ ಗೋವದ ಸಮೀಪದ 'ದೀವರ್' ಇರಬಹುದೆಂದು ಸಂಪಾದಕರಾದ ಡಾ|| ಪಿ. ಬಿ. ದೇಸಾಯಿಯವರು ಊಹಿಸಿದ್ದಾರೆ.[26] ಕರ್ನಾಟಕದ ಪಶ್ಚಿಮಕ್ಕಿರುವ ಗೋವದಲ್ಲಿ ಧ್ಯಾನಭಂಗಿಯಲ್ಲಿರುವ ಬುದ್ಧನ ಪ್ರತಿಮೆ ಸಿಕ್ಕಿದೆ. ಈ ಪ್ರತಿಮೆ ಕ್ರಿಸ್ತಶಕದ ಆರಂಭಕ್ಕೆ ಸೇರಿದ್ದಿರಬಹುದು. ಸಿಲೋನಿನ ಸನ್ಯಾಸಿಗಳು ಬನವಾಸಿ ಪ್ರಾಂತದಲ್ಲಿ ಬೌದ್ಧಧರ್ಮವನ್ನು ಪ್ರಚಾರಮಾಡಿದರೆಂದು ನಾಗಾರ್ಜುನಕೊಂಡದ (ಕ್ರಿ. ಶ. 3ನೇ ಶತಮಾನ) ಶಾಸನದಲ್ಲಿ ಹೇಳಿದೆ. ಹ್ಯುಯೆನ್ ತ್ಸಾಂಗನ ಪ್ರಕಾರ ಕ್ರಿ. ಶ. ಏಳನೆಯ ಶತಮಾನದಲ್ಲಿ ಬನವಾಸಿಯಲ್ಲಿ ನೂರು ಸಂಘಾರಾಮಗಳಿದ್ದುವು. ಹತ್ತು

---

21 ಕರ್ನಾಟಕದ ಅರಸು ಮನೆತನಗಳು, ಪು. 3.

22 EC. X. Mb. 157, 338 A.D.

23 EC. XVI. Tm. 78, C. 400 A.D.

24 MAR (1933). p. 109, C. 500 A.D.

25 EI. XXIII. p. 75, C. 500 A.D.

26 ಅದೇ, ಪು. 73.

ಸಾವಿರ ಭಿಕ್ಷುಗಳಿದ್ದರು, ಅವರು ಹೀನಯಾನ, ಮಹಾಯಾನ ಎಂಬ ಎರಡೂ ಮಾರ್ಗಗಳನ್ನು ಅನುಸರಿಸುತ್ತಿದ್ದರು.[27] ಬಾದಾಮಿ ಚಾಳುಕ್ಯರ ನಿರ್ಮಾಣವಾದ ಐಹೊಳೆಯ ಮಂದಿರಗಳಲ್ಲಿ ಒಂದನ್ನು 'ಬೌದ್ಧವಿಹಾರ'ವೆಂದು ಗುರುತಿಸಿದ್ದಾರೆ. ಕುಳಿತಿರುವ ಬುದ್ಧನ ಚಿತ್ರವನ್ನು ಆ ವಿಹಾರದಲ್ಲಿ ನೋಡಬಹುದು.[27.1] ಕಾರ್ಲಾ, ಕನ್ಹೇರಿ ಮುಂತಾದ ಕಡೆ ಬೌದ್ಧ ಗುಹೆಗಳ ರಚನೆಗೆ ಬನವಾಸಿಯ ಕನ್ನಡ ವರ್ತಕರು ಬೇಕಾದಷ್ಟು ದಾನಮಾಡಿದ್ದಾರೆ.[28] ಬನವಾಸಿ ಪಶ್ಚಿಮ ಕರ್ನಾಟಕದ ಬೌದ್ಧ ಕೇಂದ್ರವಾಗಿತ್ತು ಎನ್ನುವುದು ಇದರಿಂದ ಸಿದ್ಧವಾಗುತ್ತದೆ. ಕೊಪ್ಪಳದಲ್ಲಿ ಅಶೋಕನ ಎರಡು ಶಾಸನಗಳು ಸಿಕ್ಕಿರುವುದಲ್ಲದೆ, ಹ್ಯೂಯೆನ್‌ತ್ಸಾಂಗನ ಪ್ರಕಾರ ಅದು ಅವನ ಕಾಲದಲ್ಲಿ ಬೌದ್ಧ ಕೇಂದ್ರವಾಗಿತ್ತು. ಅವನು ಅದನ್ನು 'ಕೊಂಕಿನಪುಲೊ' ಎಂದು ಕರೆಯುತ್ತಾನೆ.[29] ಕಾಡಿಯೂರಿನಲ್ಲಿ ಚತುಸ್ಸಮಯದ ದೇವತಾನಿಳಯಗಳಿದ್ದು, ಅಲ್ಲಿಯ ಪೂಜೆ, ಅಲ್ಲಿಯ ಮುನಿನಾಥರು, ಅಲ್ಲಿಯ ಮಹಾಸಂಪತ್ತು ಆಶ್ಚರ್ಯಕರವಾಗಿದ್ದುವು.[30] ಶೈವ, ವೈಷ್ಣವ, ಜೈನ, ಬೌದ್ಧಗಳೇ ಆ ನಾಲ್ಕು ಸಮಯ ಅಥವಾ ಧರ್ಮಗಳು. 10ನೆಯ ಶತಮಾನದ ಹೊತ್ತಿಗಾಗಲೇ ಮಂಗಳೂರಿನ ಕದ್ರಿಯು ಸುಪ್ರಸಿದ್ಧ ಬೌದ್ಧಕೇಂದ್ರವಾಗಿದ್ದಿತು. ಅಲ್ಲಿನ ಅವಲೋಕಿತೇಶ್ವರನ ಕಂಚಿನ ವಿಗ್ರಹದ ಮೇಲೆ ಕ್ರಿ. ಶ. 968ರ ಒಂದು ಶಾಸನವಿದೆ. ಈ ಶಾಸನದಿಂದ ಅಲ್ಲಿ ಒಂದು 'ವಿಹಾರ'ವಿದ್ದಿತೆಂಬ ವಿಷಯ ಗೊತ್ತಾಗುತ್ತದೆ (ಮುಂದೆ ಈ ಬೌದ್ಧರ ಕೇಂದ್ರವು ನಾಥಸಂಪ್ರದಾಯದ ಗುರುಗಳ ಅಧೀನಕ್ಕೆ ಬಂದಿತು.[30.1] ಯಶಸ್ತಿಲಕ ಚಂಪುವಿನ ಸೋಮೇಶ್ವರನು ಮಾಂಸಾಹಾರಿಗಳಾದ ಬೌದ್ಧರನ್ನು ಹೆಸರಿಸುತ್ತಾನೆ.[31] ಬುದ್ಧನು ಅಹಿಂಸೆಯನ್ನು ಬೋಧಿಸಿದರೂ ಮಾಂಸಾಹಾರದ ವಿಷಯದಲ್ಲಿ ಅವನು ವಿರೋಧಿಯಾಗಿದ್ದಿಲ್ಲ. ಅಲ್ಲದೆ, ಮುಂದೆ ನಾವು ನೋಡುವಂತೆ ಹತ್ತನೇ ಶತಮಾನದ ಹೊತ್ತಿಗಾಗಲೇ ಬೌದ್ಧ ಧರ್ಮದಲ್ಲಿ ತಾಂತ್ರಿಕ ವಿಧಾನಗಳು ಪ್ರಬಲಿಸಿ ಮಾಂಸಭಕ್ಷಣೆಯು ಸಾಧನೆಯ ಅನಿವಾರ್ಯ ಅಂಗವಾಗಿತ್ತು. ಆರು ಅಥವಾ ಏಳನೇ ಶತಮಾನಗಳಲ್ಲಿ ನಿರ್ಮಿತವಾಗಿರುವ ಐಹೊಳೆಯ ದುರ್ಗಾದೇವಾಲಯವು ಬೌದ್ಧ ಚೈತ್ಯವನ್ನು ಹೋಲುತ್ತದೆ. ಚಕ್ರವರ್ತಿ ಜಯಸಿಂಹನ ಸೋದರಿಯಾದ ಅಕ್ಕಾದೇವಿ 'ಜಿನಬುದ್ಧಾನಂತ ರುದ್ರಾಗಮ ನಿಗದಿತ ಧರ್ಮಂಗಳಂ ಮಾಡಿ'ದಂತೆ ಶಾಸನವೊಂದು ತಿಳಿಸುತ್ತದೆ.[32] ಕಾಳಾಮುಖ ಶೈವದ ಗುರುಗಳೊಬ್ಬರನ್ನು 'ಸುಗತಶಾಸ್ತ್ರೇ ಸೌಗತಾನಾಂ ಗುರುಃ'[33] ಎಂದು ಹೊಗಳಿರುವುದರಿಂದ ಅನ್ಯಮತೀಯರೂ ಬೌದ್ಧ ಶಾಸ್ತ್ರಗ್ರಂಥಗಳನ್ನು ಅಭ್ಯಸಿಸುತ್ತಿದ್ದರು ; ಅಷ್ಟೇ ಅಲ್ಲ ಬೌದ್ಧದರ್ಶನವು ಪ್ರಾಚೀನ ವಿದ್ಯಾಭ್ಯಾಸದ ಅಭ್ಯಾಸ ವಿಷಯಗಳಲ್ಲೊಂದಾಗಿತ್ತು ಎಂಬುದೂ ಸೂಚಿತವಾಗುತ್ತದೆ. ಪಾಶುಪತಾಚಾರ್ಯರೊಬ್ಬರನ್ನು 'ಬೌದ್ಧಧ್ವಾನ[ನ್ತ]ಭಾನವೇ' ಎಂದು ಹೊಗಳಿರು

---

[27] Moraes : The Kadamba Kula, p. 256. ಬನವಾಸಿಯಲ್ಲಿ ಬೌದ್ಧ ಧರ್ಮದ ಸ್ಮಾರಕಗಳು ನಶಿಸಿ ಹೋಗಿದ್ದರೂ, ಅಲ್ಲಿ "ಉತ್ತರಕ್ಕಿರುವ ಬಯಲಿನಲ್ಲಿ ಮೂರು ಸ್ತೂಪಗಳ ಇಟ್ಟಿಗೆಯ ಬುಡಗಳು ಮಾತ್ರ ಕಾಣಿಸುತ್ತವೆ" (ಎಂ. ಎಚ್. ಕೃಷ್ಣ : ಕನ್ನಡನಾಡಿನ ಚರಿತ್ರೆ, III, ಪು. 4).

[27.1] S. Rajashekhara : 'Identification of the early Chalukya Temples' (Śrīkaṇṭhikā, p. 17)

[28] Karmarkar : Cultural History of Karnatak, p. 175.

[29] JISI. p. 201.

[30] EI. XIII. p. 329, 929 A.D.

[30.1] S. Nagaraju : 'A rare Śaivo–Buddhist work with Vaiṣṇavite interpolations' (Kannada Studies, III. i. p. 67).

[31] YAIC. p. 249.

[32] IA. XIII. p. 273, 1022 A.D.

[33] EC. VIII. Sa. 108 (bis), 1042 A.D.

ವುದರಿಂದ[34] ಅಲ್ಪಸಂಖ್ಯಾತರಾಗಿದ್ದ ಬೌದ್ಧರಿಗೂ ಶೈವರಿಗೂ ಘರ್ಷಣೆ ನಡೆಯುತ್ತಿತ್ತೆಂದು ಊಹಿಸಬಹುದು. ಹೆಚ್ಚುಕಡಮೆ ಅದೇ ಕಾಲದ ಶಾಸನವೊಂದರಲ್ಲಿ ಶ್ರೀಮನ್ಮಹಾಪ್ರಧಾನ ರೂಪಭಟ್ಟಯ್ಯಗಳು ಬಳ್ಳಿಗಾವೆಯಲ್ಲಿ ಜಯಂತಿಪ್ರಭ ಬೌದ್ಧವಿಹಾರವನ್ನು ಮಾಡಿಸಿ ತಾವು ಮಾಡಿಸಿದ ತಾರಾಭಗವತಿಯ, ಶ್ರೀ ಕೇಶವದೇವರ, ಲೋಕೇಶ್ವರದೇವರ, ಬೌದ್ಧದೇವರ ಮತ್ತು ಅಲ್ಲಿಯ ಸಮಸ್ತ ಪರಿವಾರದೇವರ ಅರ್ಚನೆ ಪೂಜೆಗಳ ನಿಮಿತ್ತಕ್ಕೂ, ಅಲ್ಲಿಯ ಯೋಗಿನಿಯರ, ಕುಸಳಿಯರ (?), ಸನ್ಯಾಸಿಗಳ ಆಹಾರದಾನಕ್ಕೂ ಚಾಳುಕ್ಯ ಚಕ್ರವರ್ತಿಯ ಒಪ್ಪಿಗೆ ಪಡೆದು ಸ್ವಲ್ಪ ಭೂಮಿ ಬಿಡುತ್ತಾನೆ.[35] ಅದೇ ಸ್ಥಳದ ಮತ್ತೊಂದು ಶಾಸನದಲ್ಲಿ ಚಾಳುಕ್ಯ ಚಕ್ರಿ ತ್ರೈಲೋಕ್ಯಮಲ್ಲನ ಸಹವಾಸಿ[36] ಹಂಪಚಟ್ಟನ ಕುಲವಧುವಾದ ನಾಗಿಯಕ್ಕ—ಇವಳು ಬಹಳ ಪ್ರಭಾವಶಾಲಿನಿ ವ್ಯಕ್ತಿಯಾಗಿದ್ದಿರಬೇಕು—ಬಳ್ಳಿಗಾವೆಯಲ್ಲಿ ತಾರಾಭಗವತಿಯ ದೇವಸ್ಥಾನವನ್ನು ಮಾಡಿಸಿ, ಅದರ ಪೂಜಾ ನಿಮಿತ್ತಕ್ಕೆ '....ಪ್ರಭ ಬೌದ್ಧ ಬಳಾರರ' ಕಾಲನ್ನು ತೊಳೆದು, ಚಾಳುಕ್ಯ ಚಕ್ರವರ್ತಿಯ ಒಪ್ಪಿಗೆ ಪಡೆದು ಭೂಮಿಯನ್ನು ದಾನಮಾಡಿದ ವಿಷಯ ಬಂದಿದೆ.[37] ಶಾಸನಗಳಲ್ಲಿ ಬರುವ, ಬಳ್ಳಿಗಾವೆಯ ಸಮೀಪದ 'ಪುಲ್ಲೆಯ ಬಯಲ್' ಬೌದ್ಧರಿಗೆ ಪ್ರಿಯವಾದ ಮೃಗದಾವ (Deer Park) ಇರಬಹುದು ಎಂದು ಶ್ರೀ ಹಯವದನರಾಯರು ಊಹಿಸಿದ್ದಾರೆ.[38] ಇಷ್ಟೇ ಪ್ರಸಿದ್ಧವಾದ ಶಾಸನ ಗದಗ್ ತಾಲ್ಲೂಕಿನ ಡಂಬಳ ಶಾಸನ.[39] ಇದನ್ನು ಮೊದಲು ಪ್ರಕಟಿಸಿದ ಫ್ಲೀಟರು ಜೈನ ಶಾಸನವೆಂದು ಪ್ರತಿಪಾದಿಸಿದರು. ಇದು ತಪ್ಪೆಂದು ಜೆ. ಬರ್ಗೆಸ್ ಅವರು ಪ್ರತಿಪಾದಿಸಿ ಅದು ಬೌದ್ಧಶಾಸನವೆಂದು ಸ್ಪಷ್ಟಪಡಿಸಿದ್ದಾರೆ.[40] ತಾರಾದೇವಿಯ ಪ್ರಾರ್ಥನೆಯೊಂದಿಗೆ ಆರಂಭವಾಗುವ ಈ ಶಾಸನದಲ್ಲಿ ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗವಯ್ಯ ಸೆಟ್ಟಿಯರು ಕಟ್ಟಿಸಿದ ಆರ್ಯ ತಾರಾದೇವಿಯ ವಿಹಾರಕ್ಕೂ, ಅಲ್ಲಿಯ ಹದಿನಾರು ಶೆಟ್ಟಿಗಳು ಮಾಡಿಸಿದ ಬೌದ್ಧವಿಹಾರಕ್ಕೂ, ಅಲ್ಲಿನ ಪೂಜಾದಿಗಳಿಗೂ ಭಿಕ್ಷುಗಳಿಗೂ ದಾನವನ್ನು ಬಿಡಲಾಗಿದೆ. ಇದು ಬೌದ್ಧಶಾಸನವೆಂಬುದು ಅತಿಸ್ಪಷ್ಟ. ಈ ಶಾಸನ (IA. X. p. 185) 'ನಮೋ ಬುದ್ಧಾಯ' ಎಂದು ಆರಂಭವಾಗುತ್ತದೆ. ಜೈನರ ಅರ್ಹಂತನಿಗೆ 'ಬುದ್ಧ' 'ತಥಾಗತ' ಎಂಬ ವಿಶೇಷಣಗಳಿದ್ದರೂ ಶಾಸನಗಳಲ್ಲಿ ಆ ಅರ್ಥದಲ್ಲಿ ಇವುಗಳ ಬಳಕೆ ಕಡಮೆ. ಜೈನರಲ್ಲಿ 'ತಾರಾ' ಎಂಬ ದೇವತೆಯಿದ್ದರೂ ಅವಳಿಗೆ ಪ್ರಾಶಸ್ತ್ಯ ಕಡಮೆ. 'ವಿಹಾರ' ಎಂಬ ಮಾತೂ, 'ಬುದ್ಧಶಾಸನ' 'ಬುದ್ಧ ದಕ್ಷಿಣಾ' ಎಂಬ ಮಾತುಗಳೂ, ಇದು ಬೌದ್ಧ ಶಾಸನವೆಂಬುದನ್ನು ಸ್ಪಷ್ಟಪಡಿಸುತ್ತವೆ. ಬಳ್ಳಿಗಾವೆಯ ಶಾಸನಗಳು ಮತ್ತು ಈ ಶಾಸನ ಅತ್ಯಂತ ಪ್ರಮುಖವಾದ ಲೇಖಗಳಾಗಿವೆ. ಕರ್ನಾಟಕದಲ್ಲಿ ಬೌದ್ಧಧರ್ಮದ ಯಾವ ಶಾಖೆ ಪ್ರಚಲಿತವಾಗಿತ್ತೆಂಬುದನ್ನು ಮುಂದೆ ವಿವೇಚಿಸುವಾಗ ಇವುಗಳ ಪ್ರಧಾನತೆಯ ಅರಿವಾಗುತ್ತದೆ. ಕ್ರಿ. ಶ. 1104ರ ಶಾಸನವೊಂದರಲ್ಲಿ[41] ಮುಳ್ಗುಂದದ ವೀರನಾರಾಯಣಸ್ವಾಮಿಯ ಸ್ಥಾನವನ್ನಾಳುತ್ತಿದ್ದ ಸನ್ಯಾಸಿಯೊಬ್ಬನನ್ನು 'ಬೌದ್ಧಮದೇಭ ಪಂಚಾನನ' ಎಂದು ಕರೆದಿದೆ. ಇಂತಹ ಮಾತುಗಳಿಂದ ಇಷ್ಟು ಗೊತ್ತಾಗುತ್ತದೆ—ಇತರ ಧರ್ಮಗಳು ಶೀರಾ ಕಡೆಗಣಿಸಬಹುದಾಗಿದ್ದ ಧರ್ಮವಾಗಿರಲಿಲ್ಲ ಬೌದ್ಧಧರ್ಮ ; 'ನಾನು ಇದ್ದೇನೆ' ಎಂದು ತೋರಿಸಿಕೊಳ್ಳುವಷ್ಟರ ಮಟ್ಟಿಗಾದರೂ ಪ್ರಬಲವಾಗಿತ್ತು. ತೇರದಾಳದಲ್ಲಿ

---

[34] BKI. I. i. 99, 1063 A.D.

[35] EC. VII. Sk. 170, 1065 A.D. ಅಲ್ಲಿ ತಾರಾದೇವಿಯ ವಿಗ್ರಹವೂ ಸಿಕ್ಕಿದೆ.

[36] 'ಸಹವಾಸಿ' ಎಂಬುದು 'ವೇಳೆವಾಳಿ'ಯನ್ನು ಸೂಚಿಸುತ್ತದೆ ಎಂದು ಡಾ. ಕೆ. ಎ. ನೀಲಕಂಠಶಾಸ್ತ್ರಿಗಳವರು ಅಭಿಪ್ರಾಯಪಡುತ್ತಾರೆ (A History of South India, p. 307).

[37] EC. VII. Sk. 169, 1067 A.D. (ಗುರುಗಳ ಹೆಸರು 'ಜಯಂತಿಪ್ರಭ ಬೌದ್ಧಬಳಾರ' ಎಂದಿರಬೇಕು)

[38] C. Hayavadanarao : Mysore Gazetteer, II. i. p. 144.

[39] IA. X. p. 185, 1095–6 A.D.

[40] ಅದೇ, ಪು. 273.

[41] BKI. I. ii. 157, 1104 A.D.

ಶಂಕರ ಜಿನರಿಗೆ ದೇವಾಲಯಗಳಿದ್ದಂತೆ ಬುದ್ಧನಿಗೂ ಇದ್ದಿತೆಂದು ತಿಳಿದುಬರುತ್ತದೆ.[42] ಅಲ್ಲಿಯ ಗಾವುಂಡರು ಚತುಸ್ಸಮಯಗಳನ್ನು ರಕ್ಷಿಸುತ್ತಿದ್ದರು ಎಂದು ಅದೇ ಶಾಸನದಲ್ಲಿ ಉಕ್ತವಾಗಿದೆ. ತುಮಕೂರು ಜಿಲ್ಲೆಯ ಕೈದಾಳದ ಶಾಸನದ[43] ಪ್ರಾರ್ಥನಾಪದ್ಯದಲ್ಲಿ ಶಿವ, ಬ್ರಹ್ಮ, ಸುಗತ (=ಬುದ್ಧ), ವಿಷ್ಣು, ಜಿನ ಇವೆಲ್ಲ ಪರಮಾತ್ಮನಿಗೆ ಬೇರೆ ಬೇರೆ ಹೆಸರುಗಳು ಎಂದು ಹೇಳಿದೆ. ಹನ್ನೆರಡನೆಯ ಶತಮಾನದ ಬ್ರಹ್ಮಶಿವ ತನ್ನ ಸಮಯಪರೀಕ್ಷೆಯಲ್ಲಿ ತಂಗೂಳನ್ನು ಉಣ್ಣುವ ಬೌದ್ಧರನ್ನು, ಮದ್ಯಮಾಂಸಾದಿಗಳಲ್ಲಿ ನಿರತರಾದ ಕೌಳರನ್ನು ಅಪಹಾಸ್ಯಮಾಡಿದ್ದಾನೆ.[44] ಈ ಕೌಳರು ಸರ್ವದೇವತಾ ಪುರುಷರಿಂದ ಅರ್ಚಿತಳಾದ ಚಂಡಿಯನ್ನು ಪೂಜಿಸುತ್ತಿದ್ದರು.[45] ಈ ಕೌಳರು ತಮ್ಮನ್ನು ಹಿಂದುಗಳೆಂದು ಕರೆದುಕೊಂಡರೂ, ಹಾಗೆ ನೋಡಿದರೆ ಬೌದ್ಧರ ವಾಮಾಚಾರದ ಒಂದು ಶಾಖೆಯಾಗಿದ್ದರೂ ಆಗಿರಬಹುದೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.[46] (ಆದರೆ ಈ ತೀರ್ಮಾನವು ಪರೀಕ್ಷಾರ್ಹವಾದುದು). ಬ್ರಹ್ಮಶಿವನೇ ಮತ್ತೊಂದೆಡೆ[47] ಚೇಳಿನರೂಪದಲ್ಲಿ[47.1] ಜನನಿಯ ಗರ್ಭವನ್ನು ಸೀಳಿ ಹೊರಗೆ ಬಂದ ಬುದ್ಧನು ಸಕಳವನ್ನು ತ್ಯಜಿಸಿದರೂ ಕಷಾಯವಸ್ತ್ರದ ಮೋಹವನ್ನು ಮಾತ್ರ ಅವನಿಂದ ಬಿಡಲಾಗಲಿಲ್ಲವಲ್ಲಾ ಎಂದು ಕೊರಗಿದ್ದಾನೆ. ಪಂಪಭಾರತದ ಪ್ರಕಾರ (4.26, ವ) ನಾಗಾನಂದದ ಕಥೆ ನಡೆದದ್ದು ಗೋಕರ್ಣದ ಸಮೀಪದಲ್ಲಿ—ಕನ್ನಡನಾಡಿನ ಪಶ್ಚಿಮ ತೀರದಲ್ಲಿ. ಕನ್ನಡ ಶಾಸನಗಳಲ್ಲಿ ಶಿಲಾಹಾರರು ತಾವು ಜೀಮೂತವಾಹನನ ವಂಶದವರೆಂದೂ, ತಗರಪುರಾಧೀಶ್ವರರೆಂದೂ ಹೇಳಿಕೊಂಡಿದ್ದಾರೆ. ಗೋಕರ್ಣಕ್ಕೆ ಎರಡು ಮೈಲಿ ದೂರದಲ್ಲಿ ತೊರ್ಕೆ ಎಂಬ ಗ್ರಾಮವಿದೆ. ಅಲ್ಲಿ ಗರುಡನಮೂತಿ, ನಾಗರಬಯಲು ಎಂಬ ಸ್ಥಳಗಳೂ ಕೆಲವು ಬೌದ್ಧ ಗುಹೆಗಳೂ ಇವೆ. ಆದ್ದರಿಂದ ತೊರ್ಕೆ ಎಂಬ ಗ್ರಾಮವೇ ಶಾಸನಗಳ "ತಗರ" ಇರಬೇಕು, ಬಹುಶಃ 'ತಾರ್ಕ್ಷ್ಯ ಪುರ'ವೇ 'ತಗರಪುರ'ವಾಗಿ 'ತೊರ್ಕೆ' ಆಗಿರಬೇಕು ಎಂದು ಪ್ರೊ|| ಕೆ. ಜಿ. ಕುಂದಣಗಾರ ಅವರು ಊಹಿಸಿರುತ್ತಾರೆ.[48] ಈ ತಗರ ಬಹುಶಃ ಬೌದ್ಧ ಕೇಂದ್ರಗಳಲ್ಲೊಂದಾಗಿತ್ತೆಂದು ಕಾಣುತ್ತದೆ. ಅಲ್ಲಮನು ಸಾತ್ವಿಕ ಭಕ್ತಿಯನ್ನು ಪ್ರತಿಪಾದಿಸುವ, ವಾಮಾಚಾರವನ್ನು ಟೀಕಿಸುವ ತನ್ನ ವಚನವೊಂದರಲ್ಲಿ ಹೀಗೆ ಹೇಳಿದ್ದಾನೆ—"ಹಠಯೋಗ ಲಂಬಿಕೆಯೆಂದು (ಪಾಠಾಂತರ,

---

42 IA. XIV. p. 15, 1123–4 A.D.

43 EC. XII. Tm. 9, 1151 A.D.

ಜಯಂತಿ ಯಸ್ಯಾವದತೋಪಿ ಭಾರತೀ—
ವಿಭೂತಯಸ್ತೀರ್ಥ ಕೃತೋಪಿ ನೈಹ್ರಿತೇ (?)
ಶಿವಾಯ ಧಾತ್ರೇ ಸುಗತಾಯ ವಿಷ್ಣವೇ
ಜಿನಾಯ ತಸ್ಮೈ ಸಕಳಾತ್ಮನೇ ನಮಃ ||

44 ಸಮಯ ಪರೀಕ್ಷೆ, 14. 56 ; 14.64.

[ಕೌಳರೆಂಬ ವಾಮಾಚಾರದವರು ಕರ್ನಾಟಕದಲ್ಲಿ ಇದ್ದರೆಂಬುದಕ್ಕೆ ಚನ್ನಬಸವಣ್ಣನವರ ಈ ವಚನವನ್ನು ನೋಡಬಹುದು : "ಶೈವ ಸೈವೆರಗಾದ ಪಾಶುಪತಿ ಪಥವನರಿಯ ಕಾಳಾಮುಖಿ ಕಂಗೆಟ್ಟ ಮಹಾವ್ರತಿ ಮದವೇರಿದ ಸಂನ್ಯಾಸಿ ಪಾಷಂಡಿಯಾದ ಕೌಲಿ ಮರುಳಾಗಿ ಹೋದ, ಈ ಆರು ಭಕ್ತಿಸ್ಥಲಕ್ಕೆ ಸಲ್ಲವು ಕೇಳಿರಣ್ಣಾ." ಇಲ್ಲಿಯ ಮಹಾವ್ರತಿ ಬಹುಶಃ ಕಾಪಾಲಿಕ ಸನ್ಯಾಸಿ, ಬಹುಶಃ ಬೌದ್ಧ ಸನ್ಯಾಸಿ.]

45 ಸಮಯ ಪರೀಕ್ಷೆ, 8.117

46 Bhattacharya : An Introduction to Buddhist Esoterim, p. 81.

47 ಸಮಯ ಪರೀಕ್ಷೆ, 8.177 ; 8.179

47.1 ಚೇಳುಮರಿ ಹುಟ್ಟಿದ ತಕ್ಷಣವೇ ಅದರ ತಾಯಿ ಸತ್ತುಹೋಗುತ್ತದೆ ಎಂಬ ನಿರಾಧಾರ ನಂಬಿಕೆ ಇತ್ತು, ಇದೆ. "ಚೇಳಿಂಗೆ ಬಸುರಾಯಿತ್ತೆ ಕಡೆ" ಎಂದು ಬಸವಣ್ಣನವರ ಉಕ್ತಿಯಿದೆ. ಬುದ್ಧ ಹುಟ್ಟಿದ ಸ್ವಲ್ಪ ಕಾಲದಲ್ಲೇ ಅವನ ತಾಯಿ ಮಡಿದದ್ದರಿಂದ ಅವನು ಚೇಳಿನ ರೂಪದಲ್ಲಿ ಹುಟ್ಟಿ ತಾಯಿಯನ್ನು ಕೊಂದುಹಾಕಿದ ಎಂಬ ಕಥೆ ಹುಟ್ಟಿಕೊಂಡು ಬ್ರಹ್ಮಶಿವನ ಕಾಲದಲ್ಲಿ ರೂಢಿಯಲ್ಲಿದ್ದಿರಬೇಕು. ಅಥವಾ ಆ ಕಥೆಯನ್ನು ಅವನೇ ಸೃಷ್ಟಿಸಿದನೇ ?

48 ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, 19.3, ಪು. 230–3.

'ಅಂಬಿಕೆಯೆಂದು'—ಮೈಸೂರು ಪ್ರಾಚ್ಯ ಕೋಶಾಗಾರದ ಶೂನ್ಯಸಂಪಾದನೆಯ ಹಸ್ತಪ್ರತಿ, K. A. 154,) ಆಕುಂಚನವೆಂದು, ವಜ್ರ ಅಮರಿಯ ಕಲ್ಪವೆಂದು ಮಲಮೂತ್ರಂಗಳಂ ಸೇವಿಸುತ ಇದು ಪೂರ್ವ ಸವನಾಥಸಿದ್ಧರ ಮತೋಕ್ತವೆಂದು ಕಾಪಾಲಿಕಾಚರಣೆಯನಾಚರಿಸುವರಲ್ಲ ಶರಣರು"[49]–ಇಲ್ಲಿ ಬರುವ 'ವಜ್ರಿ' ಅಥವಾ 'ವಜ್ರಾ' ಬೌದ್ಧಧರ್ಮದ ವಜ್ರಯಾನದ ಆರಾಧ್ಯದೇವತೆಗಳಲ್ಲೊಬ್ಬಳು.[50] ಹನ್ನೆರಡನೇ ಶತಮಾನದ ಹೊಯ್ಸಳ ದೇವಸ್ಥಾನಗಳಲ್ಲಿ ಬುದ್ಧನ ವಿಗ್ರಹಗಳು (ವಿರಳವಾಗಿ ಉಷ್ಣೀಷವಿಲ್ಲದ ವಿಗ್ರಹಗಳು) ದೊರಕುತ್ತವೆ.[51] ಬುದ್ಧನನ್ನು ಹಿಂದೂಗಳು ವಿಷ್ಣುವಿನ ಅವತಾರವೆಂದು ಭಾವಿಸಿ ತಮ್ಮ ದೇವತೆಗಳಲ್ಲಾಗಲೇ ಸೇರಿಸಿಕೊಂಡಿದ್ದರು. ಬಿಜಾಪುರ ಜಿಲ್ಲೆಯ ಶಾಸನವೊಂದರಲ್ಲಿ ಮಹಾಮಂಡಲೇಶ್ವರ ವಿರುಪರಸನು ಬೌದ್ಧ ಮೊದಲಾದ ಅನ್ಯಮತೀಯರನ್ನು ನಾಶಪಡಿಸಿ ಶೈವರ ಪ್ರಶಂಸೆಗೆ ಪಾತ್ರನಾದನೆಂದು ಹೇಳಿದೆ. 'ಬೌದ್ಧವಾಡಿಗೆ' ಎಂಬ ಹೆಸರಿನ ಬಡಾವಣೆ ಏಳಾಪುರ ಎಂಬ ಅಗ್ರಹಾರದಲ್ಲಿದ್ದ ಸಂಗತಿಯನ್ನು ಒಂದು ಶಾಸನ ತಿಳಿಸುತ್ತದೆ (SII. XV. 153, 1191 A.D.) ಅಲ್ಲಿ ಬೌದ್ಧರೇ ವಿಶೇಷವಾಗಿ ವಾಸಿಸುತ್ತಿದ್ದರೆಂದು ಕಾಣುತ್ತದೆ. ಬ್ರಾಹ್ಮಣರೇ ಇರುತ್ತಿದ್ದ 'ಬ್ರಹ್ಮಪುರಿ'ಯನ್ನು ಈ ಬೌದ್ಧವಾಡಿಗೆ ಹೋಲುತ್ತದೆ. ಕ್ರಿ. ಶ. 1196ರಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ಚಿಕ್ಕಿಂಡಿಯಲ್ಲಿ ಬೌದ್ಧಾಲಯವೂ ಬೌದ್ಧರೂ ಇದ್ದರೆಂದು ಒಂದು ಶಾಸನ ತಿಳಿಸುತ್ತದೆ.[52] ಹದಿಮೂರನೇ ಶತಮಾನದ ಸಂಸ್ಕೃತ ಶಾಸನವಿರುವ ತಾರಾದೇವಿಯ ವಿಗ್ರಹವೊಂದು ಹುಬ್ಬಳ್ಳಿ ತಾಲ್ಲೂಕಿನ ಕೋಳಿವಾಡದಲ್ಲಿ ಸಿಕ್ಕಿದೆ.[53] ಹೀಗೆ ಬೌದ್ಧಧರ್ಮದ ಅವಶೇಷಗಳು ಕ್ರಿಸ್ತಪೂರ್ವ ಮೂರನೇ ಶತಮಾನದಿಂದ ಕ್ರಿಸ್ತಶಕ ಹದಿಮೂರನೇ ಶತಮಾನದವರೆಗೆ ಕರ್ನಾಟಕದಲ್ಲಿ ದೊರಕುತ್ತವೆ.

ಇಲ್ಲಿಯವರೆಗೆ ನಮಗೆ ದೊರಕಿರುವ ಸಾಧನಗಳಿಂದ ಕರ್ನಾಟಕದ ಯಾವ ಭಾಗಗಳಲ್ಲಿ ಬೌದ್ಧಧರ್ಮ ಪ್ರಚಾರದಲ್ಲಿತ್ತೆಂಬುದನ್ನು ಸ್ಥೂಲವಾಗಿ ನಿರ್ಧರಿಸಬಹುದು. ಹಳೆಯ ಮೈಸೂರಿನ ಮಧ್ಯ ಮತ್ತು ದಕ್ಷಿಣ ಭಾಗಗಳಲ್ಲಿ ಜೈನಧರ್ಮವು ಶ್ರವಣಬೆಳಗೊಳವನ್ನು ತನ್ನ ಕೇಂದ್ರವನ್ನಾಗಿ ಮಾಡಿಕೊಂಡು ಆ ಕಡೆ ಬೌದ್ಧಧರ್ಮ ಹರಡದಂತೆ ನೋಡಿಕೊಂಡಂತೆ ಕಾಣುತ್ತದೆ. ತುಮಕೂರು ಜಿಲ್ಲೆಯ ತಾಮ್ರಪಟವು ಎಲ್ಲಿ ಲಿಖಿತವಾಯಿತೋ ತಿಳಿಯದು. ಹಳೆಯ ಮೈಸೂರಿನ ಉತ್ತರ ಭಾಗ ಅಥವಾ ಮಧ್ಯ ಕರ್ನಾಟಕದ ಚಂದ್ರವಳ್ಳಿಯಿಂದ ಪಶ್ಚಿಮಕ್ಕೆ ಬನವಾಸಿಯನ್ನು ಹಾದು ಸಮುದ್ರವನ್ನು ಸೇರುವಂತೆ ರೇಖೆಯನ್ನು ಎಳೆದರೆ, ಆ ರೇಖೆಯ ಉತ್ತರಕ್ಕೆ ಬೌದ್ಧಧರ್ಮ ಪ್ರಚಾರದಲ್ಲಿತ್ತೆಂದು ಸ್ಥೂಲವಾಗಿ ಹೇಳಬಹುದು. ಹಾಗೆಯೇ ಪಶ್ಚಿಮ ಕರ್ನಾಟಕದಲ್ಲಿ ಬೌದ್ಧ ಧರ್ಮ ಇನ್ನೂ ಸ್ವಲ್ಪ ಕೆಳಗೆ ಇಳಿದು ಮಂಗಳೂರಿನ ಬಳಿ ಕದರಿ ಬೆಟ್ಟದಲ್ಲಿ ವಿಹಾರವನ್ನು ಸ್ಥಾಪಿಸಿಕೊಂಡಂತೆ ಕಾಣುತ್ತದೆ.[54] ಕದರಿ ಬೆಟ್ಟದ ಗುಹೆಗಳು ಬೌದ್ಧವಿಹಾರವನ್ನು ನೆನಪಿಗೆ ತರುತ್ತವೆ. ಅಲ್ಲಿಯ ಮಂಜುನಾಥ ದೇವರು ಬಹುಶಃ ಬೌದ್ಧರ ಮಂಜುನಾಥ.[55] ಈಗ ಹಿಂದೂಗಳ ದೇವತೆ. ಉತ್ತರ ಕರ್ನಾಟಕದಲ್ಲಿ ಬೌದ್ಧ

---

49 ಅಲ್ಲಮನ ವಚನ ಚಂದ್ರಿಕೆ (ಸಂ : ಎಲ್. ಬಸವರಾಜು), ಪು. 158.

50 Bhattacharya : An Introduction to Buddhist Esoterism, p. 156.

51 MAR (1933). p. 78.

52 ಕನ್ನಡನಾಡಿನ ಕೆಲವು ಶಾಸನ ಕವಿಗಳು (ಸಂ. ಮೇವುಂಡಿ ಮಲ್ಲಾರಿ), ಪು.99–"ಹರಿಗೃಹದಿಂ ಹರಗೃಹದಿಂ। ಸುರಗೃಹದಿಂದರುಹಗೃಹದೆ ಬೌದ್ಧಾಲಯದಿಂ। ಗೊರವರ ಸವಣರ ಬೌದ್ಧರ। ನೆರವಿಗಳಿಂದಿಂಡಿ ನಾಡೆ ಸೊಗಯಿಸಿ ತೋರ್ಕುಂ" (ಚಿಕ್ಕಿಂಡಿಯಲ್ಲಿ ಬೌದ್ಧರ ಸಂಖ್ಯೆ ಸಾಕಷ್ಟು ಪ್ರಮಾಣದಲ್ಲಿತ್ತೆಂದು ತೋರುತ್ತದೆ.)

53 Journal of Indian History, XXXII (1954), pp. 85-92. ಕೋಳಿವಾಡವು ಇದರ ಜೊತೆಗೆ ಜೈನರ ಕೇಂದ್ರವೂ ಆಗಿದ್ದಿತೆಂಬುದಕ್ಕೆ ಶಾಸನಧಾರವಿದೆ (KI.V. No. 5).

54 Ancient Karnataka, Vol. I, pp. 382-4,

55 ಬೌದ್ಧರ ಮಂಜುನಾಥನ ವರ್ಣನೆಗೆ–ನೋಡಿ : B. Bhattacharya ಅವರ Buddhist Iconography, p. 31.

ಧರ್ಮವು ತಕ್ಕಮಟ್ಟಿಗೆ ಕಾಣಿಸಿಕೊಳ್ಳುವುದಕ್ಕೆ ಕಾರಣಗಳು ಸ್ಪಷ್ಟವಾಗಿವೆ. ಉತ್ತರದಲ್ಲಿ ಮಹಾರಾಷ್ಟ್ರದ ಬೌದ್ಧ ಕೇಂದ್ರಗಳು, ಪಶ್ಚಿಮದಲ್ಲಿ ಆಂಧ್ರದ ನಾಗಾರ್ಜುನಕೊಂಡ, ಅಮರಾವತಿ, ಭಟ್ಟಿಪ್ರೋಲು ಮುಂತಾದ ಕೇಂದ್ರಗಳು ಉತ್ತರ ಕರ್ನಾಟಕಕ್ಕೆ ಹೆಚ್ಚು ಸಮೀಪದಲ್ಲಿವೆ. ದಕ್ಷಿಣ ಕರ್ನಾಟಕದಲ್ಲಿ, ಹಳೆಯ ಮೈಸೂರಿನ ಭಾಗದಲ್ಲಿ ಬೌದ್ಧಧರ್ಮವು ಹೆಚ್ಚಾಗಿ ಹರಡಿದಂತೆ ಕಾಣುವುದಿಲ್ಲ. ಇಷ್ಟಾದರೂ ಬೌದ್ಧಧರ್ಮವು ಕರ್ನಾಟಕದಲ್ಲಿ ಪ್ರಬಲ ಧರ್ಮಗಳಲ್ಲೊಂದು ಎಂದು ಯಾವಾಗಲೂ ಅನ್ನಿಸಿಕೊಳ್ಳಲಿಲ್ಲ–ಕೊನೆಯ ಪಕ್ಷ ಶಾಸನಗಳು ತಲೆದೋರಲಾರಂಭ ವಾದಂದಿನಿಂದ.

## ಹೀನಯಾನ, ಮಹಾಯಾನ ಮತ್ತು ವಜ್ರಯಾನ

ಕನ್ನಡ ನಾಡಿನಲ್ಲಿ ಪ್ರಚಲಿತವಾಗಿದ್ದ ಬೌದ್ಧಧರ್ಮದ ಸ್ವರೂಪವನ್ನು ತಿಳಿಯಲು ನಮಗೆ ಕೆಲವು ಸ್ಪಷ್ಟ ಸೂಚನೆಗಳು ಶಾಸನಗಳಲ್ಲಿ ದೊರಕುತ್ತವೆ. ಬೌದ್ಧಧರ್ಮದ ಇತಿಹಾಸದಲ್ಲಿ ಪ್ರಧಾನವಾಗಿ ಕೊನೆಯ ಪಕ್ಷ ಮೂರು ಶಾಖೆಗಳು ಕಂಡುಬರುತ್ತವೆ–ಹೀನಯಾನ, ಮಹಾಯಾನ ಮತ್ತು ವಜ್ರಯಾನ. ಐತಿಹಾಸಿಕ ಪುರುಷನಾದ ಬುದ್ಧನು ಬೋಧಿಸಿದ ಧರ್ಮಕ್ಕೆ ಮುಂದೆ ಹೀನಯಾನವೆಂಬ ಹೆಸರು ಬಂದಿತು. ಈ ಧರ್ಮದಲ್ಲಿ ವ್ಯಕ್ತಿಯ ಶಮ, ದಮ, ಕರುಣೆ, ಮುಂತಾದ ಶೀಲಗಳನ್ನು ಒತ್ತಿ ಹೇಳಿದರೂ, ವ್ಯಕ್ತಿ ತನ್ನ ಸ್ವಂತ ಮೋಕ್ಷವನ್ನು ಪಡೆಯುವ ವಿಷಯದಲ್ಲಿ ಈ ಧರ್ಮದ ಆಕ್ಷೇಪಣೆಯೇನೂ ಇಲ್ಲ. ಈ ಪಂಥದ ಗ್ರಂಥಗಳು ಮುಖ್ಯವಾಗಿ ಪಾಲಿ ಯಲ್ಲಿವೆ. ಇದು ಸಿಲೋನ್, ಬರ್ಮ, ಸಯಾಂ ಮುಂತಾದ ದೇಶಗಳಲ್ಲಿ ಪ್ರಚಾರದಲ್ಲಿರುವುದರಿಂದ ಇದನ್ನು ದಕ್ಷಿಣದ ಬೌದ್ಧಧರ್ಮ ಎಂದೂ ಕರೆಯುವುದುಂಟು. ಇದರ ಪ್ರಕಾರ ಗೌತಮಬುದ್ಧನು ಈ ಜನ್ಮದಲ್ಲೇ ಮೋಕ್ಷವನ್ನು ಪಡೆದನು. ಈ ಪಂಥದವರ ತತ್ವಗಳನ್ನು ಒಪ್ಪದೆ ಕಾನಿಷ್ಕನ ಕಾಲದಲ್ಲಿ (ಕ್ರಿ. ಶ. 1-2ನೇ ಶತಮಾನ) ಮಹಾಯಾನ ಎಂಬ ಹೊಸ ಪಂಥ ಹುಟ್ಟಿಕೊಂಡಿತು. ಇದು ಚೀನಾ, ಜಪಾನ್, ಟಿಬೆಟ್ ಮುಂತಾದ ದೇಶಗಳಲ್ಲಿ ಪ್ರಚಾರದಲ್ಲಿರುವುದರಿಂದ ಇದನ್ನು ಉತ್ತರದ ಬೌದ್ಧಧರ್ಮವೆಂದು ಕರೆಯುತ್ತಾರೆ. ಈ ಪಂಥದ ಗ್ರಂಥಗಳು ಸಂಸ್ಕೃತದಲ್ಲಿವೆ. ಈ ಪಂಥದ ಆದರ್ಶವ್ಯಕ್ತಿ ಬೋಧಿಸತ್ವ. ಮೋಕ್ಷವನ್ನು ಪಡೆದು 'ಬುದ್ಧ' ನಾಗುವ ಮುನ್ನಿನ ಸ್ಥಿತಿಯೇ ಬೋಧಿಸತ್ವ ಸ್ಥಿತಿ. ಜಗತ್ತಿನ ಜೀವಿಗಳ ವಿಷಯದಲ್ಲಿ ಅಪಾರ ಕರುಣೆಯಿಂದಿದ್ದು, ಅವರ ದುಃಖವನ್ನು ತೊಡೆಯಲೋಸುಗವಾಗಿಯೇ ಜನ್ಮವೆತ್ತಿರುವ ಬೋಧಿಸತ್ವನು 'ಅರ್ಹತ್' ಪದವಿಗೆ ಅರ್ಹ ನಾಗಿದ್ದರೂ ದುಃಖಿತ ಜಗತ್ತು ಇನ್ನೂ ತೊಳಲುತ್ತಿರುವಾಗಲೇ ಹೇಗೆ ಮೋಕ್ಷವನ್ನು ಬಯಸಿಯಾನು? ಕಾರಂಡ ವ್ಯೂಹದಲ್ಲಿ ಚಿತ್ರಿತವಾಗಿರುವಂತೆ ಅವಲೋಕಿತೇಶ್ವರ ಬೋಧಿಸತ್ವನು ನಿರ್ವಾಣವನ್ನು ಪಡೆದು ಸುಮೇರು ಪರ್ವತದ ತುದಿಯಲ್ಲಿ ಇನ್ನೇನು ಅನಂತವಾದ ಶೂನ್ಯದಲ್ಲಿ ಲಯವಾಗಿ ಹೋಗಬೇಕು, ಅಷ್ಟರಲ್ಲಿ ದೂರದಲ್ಲಿ ಕೆಳಗೆ ಜಗತ್ತಿನ ದುಃಖಿತರ ಆಕ್ರಂದನ ಧ್ವನಿ ಬಂದು ಅವನ ಕಿವಿಗೆ ಬಡಿಯುತ್ತದೆ. ಆಗ ಧ್ಯಾನದಿಂದ ಅರಿಯುತ್ತಾನೆ–ಇಲ್ಲಿಯವರೆಗೆ ಅವರ ದುಃಖವನ್ನು ಉಪಶಮನಗೊಳಿಸುತ್ತಿದ್ದ ತಾನು ಅವರಿಂದ ಬೇರೆಯಾಗುತ್ತಿರುವುದನ್ನು ಅರಿತು ಅವರು ಗೋಳಾಡುತ್ತಿದ್ದಾರೆ ಎಂದು. ಆಗ ಅಪಾರವಾದ ಶ್ರಮದಿಂದ ಲಭ್ಯವಾದ ಮೋಕ್ಷವನ್ನು ಕಡೆಗಣಿಸಿ ಮತ್ತೆ ಜಗತ್ತಿಗೆ ಹಿಂದಿರುಗುತ್ತಾನೆ. ಜಗತ್ತಿನ ಪ್ರತಿ ಜೀವಿಯೂ ದುಃಖದಿಂದ ಬಿಡುಗಡೆ ಹೊಂದುವ ತನಕ ತನಗೆ ಮೋಕ್ಷವೇ ಬೇಡವೆಂದು ನಿರ್ಧರಿಸುತ್ತಾನೆ.[56] ಮಹಾಯಾನದ ಗ್ರಂಥಗಳ ತುಂಬಾ ಈ 'ಮಹಾಕರುಣೆ'ಯ ಪ್ರಸಕ್ತಿಯೇ ಪ್ರಸಕ್ತಿ. ಮಹಾಯಾನದಲ್ಲಿ ಜಗತ್ತಿನ ವಿಷಯದಲ್ಲಿ ಕರುಣೆ, ಸ್ವತಂತ್ರವಿಚಾರ, ಉದಾರ ದೃಷ್ಟಿಗಳು ಮೂಡಿ ಅದೊಂದು ಉದಾತ್ತ ಧರ್ಮವಾಯಿತು. ಇದರ ಪ್ರಕಾರ ಬುದ್ಧ ಕೇವಲ ಐತಿಹಾಸಿಕ ವ್ಯಕ್ತಿ ಅಲ್ಲ, ಶಾಶ್ವತನಾದ ತಥಾಗತ ಅಥವಾ ಧರ್ಮಕಾಯ ಬುದ್ಧನ ನೆರಳು ಮಾತ್ರ; ಮನುಷ್ಯನಿಂದ ಪರಿಪೂರ್ಣತೆಯನ್ನು ಸಾಧಿಸುವುದು

[56] B. Bhattacharya : An Introduction to Buddhist Esoterism, p. 29.

ಅಸಾಧ್ಯವಲ್ಲವೆಂಬುದನ್ನು ತೋರಿಸಲು ತಥಾಗತನು ಮಾಡಿದ ಒಂದು ಪ್ರಯತ್ನ.[57] ಹೀಗೆ ಮಹಾಯಾನದಲ್ಲಿ ಐತಿಹಾಸಿಕ ಪುರುಷ ಗೌತಮಬುದ್ಧನನ್ನು ಅವತಾರಪುರುಷನೆಂದು ಪರಿಗಣಿಸಿ ಅವನಿಗೆ ದೇವತ್ವದ ಪಟ್ಟವನ್ನು ಕಟ್ಟಲಾಯಿತು.

ಸ್ವತಂತ್ರ ವಿಚಾರ, ಔದಾರ್ಯ, ಕರುಣೆಗಳೇ ಪ್ರಧಾನವಾಗಿರುವ ಮಹಾಯಾನ ಪಂಥವು ಉದಾತ್ತವಾದ ದರ್ಶನದ ಮಟ್ಟಕ್ಕೆ ಏರುವ ಬದಲು, ಅದು ಸಂಯಮ ರಾಹಿತ್ಯವೇ ಪ್ರಧಾನ ಗುಣವಾಗಿರುವ ತಾಂತ್ರಿಕ ಬೌದ್ಧ ಧರ್ಮ ಅಥವಾ ವಜ್ರಯಾನದಲ್ಲಿ ಪರ್ಯವಸಾನವಾದದ್ದು ದುರದೃಷ್ಟ. ಬುದ್ಧನೇನೋ ಸನ್ಯಾಸಿನಿಯರ ವಿಷಯದಲ್ಲಿ, ಎಂದರೆ, ಸ್ತ್ರೀಯರನ್ನು ತನ್ನ ಸಂಘಕ್ಕೆ ಸೇರಿಸಿಕೊಳ್ಳುವ ವಿಷಯದಲ್ಲಿ ಬಹಳ ಹಿಂದುಮುಂದು ನೋಡಿದನೆಂಬುದು ಪ್ರಸಿದ್ಧವಾದ ವಿಷಯವೇ. ಅವನು ಸನ್ಯಾಸಿ ಸನ್ಯಾಸಿನಿಯರ ವಿಷಯದಲ್ಲಿ ಬಹು ಕಠಿಣ ನಿಯಮಗಳನ್ನು ಹಾಕಿದ್ದನು. ಬುದ್ಧನ ಕಾಲದಲ್ಲೇ ಈ ನಿಯಮಗಳನ್ನು ಉಲ್ಲಂಘಿಸಿದ್ದುಂಟು. ಮಹಾಯಾನ ಪಂಥವು ಜನಸಾಮಾನ್ಯರ ವಿಷಯದಲ್ಲಿ ಕರುಣೆ, ಆಲೋಚನೆಯಲ್ಲಿ ಸ್ವಾತಂತ್ರ್ಯ ಇತ್ಯಾದಿಗಳನ್ನು ಪ್ರತಿಪಾದಿಸಿದ ಮೇಲೆ, ಅನೇಕ ಸನ್ಯಾಸಿಗಳ ಸುಖಾಪೇಕ್ಷೆಗೆ ಪುಟ ಕೊಟ್ಟಂತಾಯಿತು. ಇವರು ರಹಸ್ಯವಾಗಿ ತಾಂತ್ರಿಕ ವಿಧಾನಗಳನ್ನು ಅಭ್ಯಸಿಸುತ್ತಿದ್ದರು. 'ಗುಹ್ಯಸಮಾಜ'ವೆಂಬ ಬೌದ್ಧ ತಾಂತ್ರಿಕ ಗ್ರಂಥದಲ್ಲಿ ಕೊಲೆ, ಸುಳ್ಳು, ಕಳ್ಳತನ, ವಿಷಯಲಂಪಟತ್ವಗಳನ್ನು ಸಾಧಕರಿಗೆ ವಿಧಿಸಿದೆ.[85] ಪ್ರತಿಯೊಬ್ಬ ಸ್ತ್ರೀಯೂ ಪ್ರಜ್ಞೆಯ ಅವತಾರವಾದ್ದರಿಂದ ಸ್ತ್ರೀಭೋಗವು ಪಾಪವೇ ಅಲ್ಲ ಎಂದು ಕಂಠೋಕ್ತವಾಗಿ ಹೇಳಿದೆ. ಹೀನಯಾನವು ನಿರ್ವಾಣವನ್ನು 'ಶೂನ್ಯ' ವೆಂದು ಕರೆದರೆ ಮಹಾಯಾನವು 'ಶೂನ್ಯ ಮತ್ತು ವಿಜ್ಞಾನ'ವೆನ್ನುತ್ತದೆ. ವಜ್ರಯಾನವು 'ಶೂನ್ಯ, ವಿಜ್ಞಾನ, ಮಹಾಸುಖ' ಎಂದು ವಿವರಿಸುತ್ತದೆ. ಹೀಗೆ ವಜ್ರಯಾನ ಅಥವಾ ತಾಂತ್ರಿಕ ಬೌದ್ಧ ಧರ್ಮವು ಮಹಾಯಾನದಿಂದಲೇ ಮೂಡಿ ಬಂದಿರುವುದು ಗೋಚರವಾಗುತ್ತದೆ.

ವಜ್ರಯಾನದಲ್ಲಿ ಅಸಂಖ್ಯಾತ ದೇವತೆಗಳೂ, ಅವರ ಪೂಜಾವಿಧಾನಗಳೂ ಮುಖ್ಯ. ಅವರ ವಜ್ರಸತ್ವನು ಹಿಂದೂಗಳ ಪರಬ್ರಹ್ಮನಿಗೆ ಸಮಾನ. ಈ ವಜ್ರಸತ್ವ (ಅಥವಾ ಆದಿಬುದ್ಧ)ನ ಪಂಚಗುಣಗಳಿಂದ ಪಂಚಧ್ಯಾನಗಳೂ, ಈ ಪಂಚಧ್ಯಾನಗಳಿಂದ ಐವರು ಧ್ಯಾನೀಬುದ್ಧರೂ ಉದಯಿಸಿದರು. ವೈರೋಚನ, ರತ್ನಸಂಭವ, ಅಮಿತಾಭ, ಅಮೋಘಸಿದ್ಧಿ, ಅಕ್ಷೋಭ್ಯ–ಈ ಐವರಿಗೂ ಕ್ರಮವಾಗಿ ವಜ್ರಧಾತೇಶ್ವರಿ, ಲೋಚನಾ, ಮಾಮಕಿ, ಪಾಂಡರಾ, (ಆರ್ಯ) ತಾರಾ ಎಂಬ ಐವರು ಶಕ್ತಿದೇವತೆಗಳುಂಟು. ಬೌದ್ಧರ ದೇವತೆಗಳೆಲ್ಲ ಈ ಧ್ಯಾನೀಬುದ್ಧರ 'ಕುಲ'ಗಳಿಗೆ ಸೇರಿದವರು. ಈ ದೇವತೆಗಳನ್ನು ತಾಂತ್ರಿಕ ವಿಧಾನಗಳಿಂದ ಅರ್ಚಿಸಿದವರು 'ವಜ್ರಸತ್ವ'ರಾಗುತ್ತಾರೆ. ತಾಂತ್ರಿಕ ವಿಧಾನಗಳು ರಹಸ್ಯವಾಗಿರಬೇಕಾದ್ದರಿಂದ, ಅವುಗಳ ನಿರೂಪಣೆ ಇರುವ ಗ್ರಂಥಗಳನ್ನು 'ಸಂಧ್ಯಾಭಾಷಾ'[59] ಎಂದರೆ ಎರಡು ಅರ್ಥಗಳು ಹೊರಡುವ ಭಾಷೆಯಲ್ಲಿ ರಚಿಸಿದರು. ಪಂಚ ಮಕಾರಗಳು (ಮತ್ಸ್ಯ, ಮಾಂಸ, ಮದ್ಯ, ಮುದ್ರೆ, ಮೈಥುನ) ಈ ತಾಂತ್ರಿಕ ಆಚರಣೆಗಳಲ್ಲಿ ಸೇರಿಹೋಗಿ ಅನೇಕ ಬೀಭತ್ಸ ಕರ್ಮಗಳು ಕಾಣಿಸಿಕೊಂಡವು. ಈ ತಾಂತ್ರಿಕಧರ್ಮ ಬಹುಶಃ ಬಂಗಾಳ ಮತ್ತು ಅಸ್ಸಾಮುಗಳಲ್ಲಿ ಮೊದಲು ಉದಯವಾಗಿರಬೇಕು. ಎಲ್ಲರ ಅಭಿರುಚಿಗೆ ತಕ್ಕ ತತ್ವಗಳೂ ಆಚರಣೆಗಳೂ ಇಲ್ಲಿ ಇದ್ದುದರಿಂದ ಇದು ಒಂದು ಕಾಲದ ಭರತಖಂಡದಲ್ಲಿ ಬಹುವಾಗಿ ಪ್ರಚಾರದಲ್ಲಿತ್ತು.

---

57 S. B. Dasgupta : An Introduction to Tāntric Buddhism, p. 12.

58 2500 Years of Buddhism, p. 359.

59 ಈ ಸಂಧ್ಯಾಭಾಷೆಯ ಮೇಲೆ ಸಾಕಷ್ಟು ಚರ್ಚೆ ನಡೆದಿದೆ. ಇದು ವಾಸ್ತವವಾಗಿ 'ಸಂಧಾಭಾಷೆ' ಯೆಂದಿರಬೇಕು ಎಂದು ವಿದ್ವಾಂಸರ ಈಚಿನ ಅಭಿಪ್ರಾಯ. 'ಸಂಧಾಭಾಷೆ'ಯ ಶೈಲಿ ಕನ್ನಡದ ಬೆಡಗಿನ ವಚನಗಳ ಶೈಲಿಯೇ ಆಗಿದೆ. ಬೆಡಗಿನ ವಚನಕಾರರು ಈ ಶೈಲಿಯನ್ನು ತಾಂತ್ರಿಕ ಗ್ರಂಥಗಳಿಂದ ಸ್ವೀಕರಿಸಿರುವ ಸಾಧ್ಯತೆ ಇದೆ.

ಇವು ಮೂರೂ ತಮ್ಮ ಪ್ರಾಬಲ್ಯದ ಕಾಲದಲ್ಲಿ ಕರ್ನಾಟಕದಲ್ಲಿ ತಕ್ಕಮಟ್ಟಿಗೆ ಪ್ರಚಾರದಲ್ಲಿದ್ದುವು. ಕ್ರಿಸ್ತಪೂರ್ವದ ಅಶೋಕನ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಧರ್ಮವೆಂದರೆ ಬಹುಶಃ ಬೌದ್ಧ ಧರ್ಮದ 'ಹೀನಯಾನ'. ಕ್ರಿಸ್ತಶಕದ ಆರಂಭದಲ್ಲಿ ಮಹಾಯಾನವು ಹೀನಯಾನದಿಂದ ಬೇರೆಯಾಗಿ, ಮಹಾಯಾನದಲ್ಲಿ ಬೋಧಿಸತ್ವನ ಕಲ್ಪನೆ ಪ್ರಧಾನವಾಯಿತು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಕರ್ನಾಟಕದಲ್ಲಿ ಕ್ರಿಸ್ತಶಕದ ಮುಂದಿನ ಶತಕಗಳಲ್ಲಿ ಮಹಾಯಾನ ಪಂಥವು ಪ್ರಚಾರವಾಯಿತು. ಕ್ರಿ. ಶ. 338ರ ತಾಮ್ರಪಟದಲ್ಲಿ[60] ರಾಜನೊಬ್ಬನನ್ನು ಪ್ರಾಣಿಗಳಲ್ಲಿ ಕರುಣೆಯಿಟ್ಟಿರುವುದರಿಂದ ಬೋಧಿಸತ್ವನಿಗೆ ಸಮಾನನೆಂದು ಹೊಗಳಿರುವುದು, ಇನ್ನೊಂದು ತಾಮ್ರಪಟದಲ್ಲಿ[61] 'ಬುದ್ಧಸತ್ವ'ನನ್ನೂ, ಮತ್ತೊಂದರಲ್ಲಿ[62] 'ನಿಷ್ಕಾರಣವತ್ಸಲ ಬುದ್ಧ'ನನ್ನೂ ಹೊಗಳಿರುವುದು ಕ್ರಿಸ್ತಶಕದ ಆರಂಭದಿಂದ ಕೊನೆಯ ಪಕ್ಷ ಐದಾರು ಶತಮಾನಗಳವರೆಗಾದರೂ ಇಲ್ಲಿ ಮಹಾಯಾನವು ಪ್ರಚಲಿತವಾಗಿತ್ತೆಂಬ ವಿಷಯವನ್ನು ಸ್ಪಷ್ಟಪಡಿಸುತ್ತವೆ. ಬಹುಶಃ ಏಳನೇ ಶತಮಾನದಲ್ಲಿ ನಾಗಾರ್ಜುನನೆಂಬ[63] ಬೌದ್ಧ ತಾಂತ್ರಿಕನ ಮೂಲಕ ತಾಂತ್ರಿಕ ಬೌದ್ಧ ಧರ್ಮವು ದಕ್ಷಿಣ ಭಾರತದಲ್ಲಿ ಪ್ರಸಾರವಾಯಿತು. ಈ ವಜ್ರಯಾನದ ಕುರುಹುಗಳು ಮತ್ತು ತಾಂತ್ರಿಕ ಆಚರಣೆಗಳು ನಮಗೆ ಶಾಸನಗಳಲ್ಲಿ ಸ್ಪಷ್ಟವಾಗಿ ದೊರೆಯದಿದ್ದರೂ ಬೌದ್ಧದೇವತೆಯಾದ 'ತಾರಾಭಗವತಿ'ಗೆ ಇದ್ದ ಸ್ಥಾನದಿಂದ ಅದನ್ನು ಊಹಿಸಬೇಕಾಗಿದೆ. ಬಳ್ಳಿಗಾವೆಯಲ್ಲಿ[64] "ತಾರಾಭಗವತಿ ಶ್ರೀ ಕೇಶವದೇವರ ಲೋಕೇಶ್ವರದೇವ ಬೌದ್ಧದೇವರ ಅಲ್ಲಿಯ ಸಮಸ್ತ ಪರಿವಾರ ದೇವರ" ದೇವಾಲಯಗಳೂ, 'ಜಯಂತಿಪ್ರಭ ಬೌದ್ಧವಿಹಾರ'ವೂ ನಿರ್ಮಾಣವಾದ ವಿಷಯವನ್ನು ಹಿಂದೆ ನೋಡಿದ್ದೇವೆ. ಆ ವಿಹಾರದಲ್ಲಿ 'ಯೋಗಿನಿ'ಯರೂ, 'ಕುಸಳಿ'ಯರೂ, 'ಸನ್ಯಾಸಿ'ಗಳೂ ಇದ್ದರು. ತಾರಾಭಗವತಿಯನ್ನು ಕುರಿತು ಮುಂದೆ ವಿಸ್ತಾರವಾಗಿ ಚರ್ಚಿಸಲಾಗುತ್ತದೆ. ಇಲ್ಲಿಯ 'ಬೌದ್ಧದೇವ'ರು ಪ್ರಸಿದ್ಧನಾದ ಬುದ್ಧನೇ. 'ಶ್ರೀ ಕೇಶವದೇವ' ಬಹುಶಃ ಬೌದ್ಧರು ಹಿಂದುಗಳಿಂದ ಸ್ವೀಕರಿಸಿದ ಹಿಂದುಗಳ ದೇವತೆ ಇರಬೇಕೆಂದು ಕೆಲವರ ಅಭಿಪ್ರಾಯ.[65] 'ಲೋಕೇಶ್ವರ' ಎಂಬ ದೇವತೆ ಬೌದ್ಧರಲ್ಲಿ ಪ್ರಸಿದ್ಧನಾಗಿರುವ ಅವಲೋಕಿತೇಶ್ವರ. ಇವನಿಗೆ ಈ ಎರಡು ಹೆಸರುಗಳೂ ಉಂಟು. ಅಮಿತಾಭನ 'ಕುಲ'ಕ್ಕೆ ಸೇರಿದವನಾಗಿದ್ದು, ಕರುಣೆಯ ಸಾಕಾರಮೂರ್ತಿಯಾದ ಇವನು ವಜ್ರಯಾನ ಪಂಥದ ದೇವತೆಗಳಲ್ಲಿ ಅತ್ಯಂತ ಪ್ರಮುಖ ದೇವತೆಯಾಗಿದ್ದಾನೆ. ಇವನ ನೂರಾರು ರೂಪಗಳಲ್ಲಿ 'ಖಸರ್ಪಣ' ಎಂಬುದೂ ಒಂದು. ಈ ಖಸರ್ಪಣನೇ 'ಕೇಶವ'ನಿರಬಹುದೇ ಎಂದು ಊಹಿಸಲು ಅವಕಾಶವಿದೆ. ಈ ಖಸರ್ಪಣನ ಜೊತೆಯಲ್ಲಿ ತಾರಾ, ಸುಧನಕುಮಾರ, ಭೃಕುಟೀ, ಹಯಗ್ರೀವ ಎಂಬ

---

60 EC. X. Mb. 157, 338 A.D.

61 EC. XVI. Tm. 78, C. 400 A.D.

62 EI. XXIII. p. 75, C. 500 A.D.

63 ಎರಡನೆಯ ಶತಮಾನದಲ್ಲಿದ್ದ ನಾಗಾರ್ಜುನ ಮಹಾಯಾನದ ಮಾಧ್ಯಮಿಕ ಶಾಖೆಯ ಪ್ರವರ್ತಕ. ಇನ್ನೊಬ್ಬ, ಏಳನೇ ಶತಮಾನಕ್ಕೆ ಸೇರಿದವನು. 'ಸಾಧನಮಾಲಾ' ಎಂಬ ತಾಂತ್ರಿಕ ಗ್ರಂಥದಲ್ಲಿನ ವಜ್ರತಾರೆ ಮತ್ತು ಏಕಜಟೆಯ ಆರಾಧನೆಗಳು ಇವನಿಗೆ ಸೇರಿವೆ ಎಂಬ ಪ್ರತೀತಿ ಇದೆ. ಇವುಗಳನ್ನು ಭೋಟದೇಶದಿಂದ (ಈಗಿನ ಟಿಬೆಟ್) ಕಲಿತನೆಂದೂ ಹೇಳುತ್ತಾರೆ.

(An Introduction to Buddhist Esoterism, pp. 67–68)

ದಕ್ಷಿಣಭಾರತದ ನಾಗಾರ್ಜುನಕೊಂಡ, ಶ್ರೀಶೈಲಗಳಿಗೂ ನಾಗಾರ್ಜುನನ ಹೆಸರಿಗೂ ಸಂಬಂಧವಿದೆ.

(ಡಿ. ಎಲ್. ನರಸಿಂಹಾಚಾರ್ ಅವರಿಂದ ಸಂಪಾದಿತ-ಸಿದ್ಧರಾಮಚಾರಿತ್ರ, ಟಿಪ್ಪಣಿ-ಪು.169)

64 EC. VII. SK. 170, 1055 A.D. ; 1067 A.D.

65 C. Hayavadanarao : Mysore Gazetteer, II. i. p. 150.

ನಾಲ್ವರು ದೇವತೆಗಳಿರುತ್ತಾರೆ[66] ಎಂಬುದು ಗಮನಾರ್ಹವಾದುದು. 'ಯೋಗಿನಿ' ಎಂಬ ಮಾತು, 'ಯೋಗಿನಿ'ಯರೂ 'ಸನ್ಯಾಸಿ'ಗಳೂ ಒಟ್ಟಿಗೆ ವಿಹಾರದಲ್ಲಿ ಇದ್ದದ್ದು, ಅಲ್ಲಿ ನಡೆಯುತ್ತಿದ್ದ ತಾಂತ್ರಿಕ ಪದ್ಧತಿಯ ಆಚರಣೆಗಳನ್ನು ಸೂಚಿಸುವಂತಿದೆ. ಸಾಧನೆಯ ಹೆಸರಿನಲ್ಲಿ ಸ್ತ್ರೀಪುರುಷರ ಸಂಯೋಗವನ್ನೂ ವಿಷಯಸುಖವನ್ನೂ ವಜ್ರಯಾನವು ವಿರೋಧಿಸುವುದಿಲ್ಲವೆಂಬುದನ್ನು ಹಿಂದೆಯೇ ನೋಡಿದ್ದೇವೆ. 'ಕುಸಳಿ' ಎನ್ನುವುದನ್ನು ವಿವರಿಸುವುದು ಕಷ್ಟ.

ಬಳ್ಳಿಗಾವೆಯ ಶಾಸನದ ಸಹಾಯದಿಂದ ಆ ಕಾಲದಲ್ಲಿ ಕರ್ನಾಟಕದಲ್ಲಿದ್ದ ಬೌದ್ಧಧರ್ಮವು, ಶ್ರೀ ಹಯವದನರಾಯರೂ ಶ್ರೀ ದೇಸಾಯಿಯವರೂ ಊಹಿಸಿರುವಂತೆ ಮಹಾಯಾನವಲ್ಲ, ತಾಂತ್ರಿಕ ಬೌದ್ಧಧರ್ಮ ಅಥವಾ ವಜ್ರಯಾನ. ಡಂಬಳದ ಶಾಸನವೂ, ಕೋಳಿವಾಡದಲ್ಲಿ ದೊರಕಿದ ತಾರಾದೇವಿಯ ವಿಗ್ರಹ ಮತ್ತು ಶಾಸನಗಳೂ ಇದನ್ನೇ ಪೋಷಿಸುತ್ತವೆ. ಬಳ್ಳಿಗಾವೆಯ ಶಾಸನದಲ್ಲಿ ಬುದ್ಧನಿಗಿಂತ ತಾರಾದೇವಿಗೆ ಹೆಚ್ಚು ಪ್ರಾಮುಖ್ಯತೆ ದೊರಕಿರುವುದನ್ನು ಗಮನಿಸಬಹುದು. ಡಂಬಳದ ಶಾಸನವೂ[67] ಕೂಡ 'ನಮೋ ಬುದ್ಧಾಯ' ಎಂದು ಆರಂಭವಾದರೂ ಅದು ಸಾಂಪ್ರದಾಯಿಕವಾದ ಸ್ತುತಿಯಂತೆ ಕಂಡುಬರುತ್ತದೆ. ಮುಂದೆ ತಾರಾದೇವಿಯ ಸ್ತುತಿ ವಿಸ್ತಾರವಾಗಿ ಬರುವುದಲ್ಲದೆ, ಅಲ್ಲಿ ಮಾಡಿಸಿದ ವಿಹಾರವನ್ನು ಶ್ರೀ ಭಗವತಿ ಆರ್ಯ ತಾರಾದೇವಿಯ ವಿಹಾರವೆಂದೇ ಕರೆದಿದೆ. ಅವಳು ಹರಿ, ಕರಿ, ಶಿಖಿ, ಫಣಿ, ತಸ್ಕರ, ಜಳ, ಅರ್ಣವ, ಪಿಶಾಚಗಳ ಭಯವನ್ನು ಹೋಗಲಾಡಿಸತಕ್ಕವಳು ;[68] ಅವಳು ಜ್ಞಾನಸಮುದ್ರವನ್ನು ಮಥಿಸಿದ್ದರಿಂದ ಹುಟ್ಟಿದವಳು ; ಅವಳನ್ನು 'ಪ್ರಜ್ಞಾ' ಎಂದು ಕರೆಯುತ್ತಾರೆ ; ಅವಳು ಬುದ್ಧನಿಗೆ ವಿಭೂತಿ ಅಥವಾ ವೈಭವವನ್ನು ಕೊಟ್ಟವಳು ('ಬುದ್ಧಸ್ಯ ವಿಭೂತಿದಾ') ; ಅವಳು ಬೋಧಿಸ್ವರೂಪಳು ; ತಥಾಗತನ ಹೃದಯಾಕಾಶದಲ್ಲಿ ನೆಲಸಿರತಕ್ಕವಳು—ಇತ್ಯಾದಿಯಾಗಿ ಸ್ತೋತ್ರಮಾಡಲಾಗಿದೆ. ಹಾಗೆಯೇ ಶಾಸನದ ಕೊನೆಯಲ್ಲಿ, ಜಗತ್ತಿನ ವಿಷಯದಲ್ಲಿ 'ಕರುಣವ್ಯಾಪಾರ ಚಿಂತಾತುರೆ'ಳಾಗಿರುವ ತಾರೆಯನ್ನು ಮತ್ತೆ ಸ್ತೋತ್ರ ಮಾಡಲಾಗಿದೆ. ಇಲ್ಲಿ ಬರುವ ಕೆಲವು ವಿಷಯಗಳು ಬಹಳ ಗಮನಾರ್ಹವಾದುವು.

ಮೊದಲನೆಯದಾಗಿ ತಾಂತ್ರಿಕ ವಿಧಾನಗಳು ಜನಸಾಮಾನ್ಯರಲ್ಲಿರುವ ಲೌಕಿಕವಾದ ಕಷ್ಟಗಳ ನಿವಾರಣೆಗಾಗಿ ಪ್ರಚಲಿತವಾಗಿದ್ದು ಅವು ಪ್ರಸಾರವಾಗುತ್ತಿರುವ ಧರ್ಮಗಳನ್ನು ಅನಂತರ ಪ್ರವೇಶಿಸುತ್ತವೆ. ಹಾವು, ಚೇಳು, ಪಿಶಾಚಾದಿಗಳನ್ನು ಮಂತ್ರತಂತ್ರಾದಿಗಳಿಂದ ನಿವಾರಿಸುವುದು ಅವುಗಳ ಮುಖ್ಯಗುರಿ. ಧರ್ಮವೊಂದು ಜನರಲ್ಲಿ ಪ್ರಸಾರವಾಗಬೇಕಾದರೆ, ಜನತೆಯ ವಿಶ್ವಾಸವನ್ನು ಗಳಿಸಬೇಕಾದರೆ ಜನತೆಯ ಆಚರಣೆಗಳನ್ನು, ನಂಬಿಕೆಗಳನ್ನು ಸ್ವಲ್ಪ ಒಪ್ಪಿಕೊಳ್ಳಬೇಕಾಗುತ್ತದೆ. ಆಧ್ಯಾತ್ಮಿಕ ಸಾಧನೆಮಾಡಿ ಕೇವಲಜ್ಞಾನವನ್ನು ಪಡೆದ ವ್ಯಕ್ತಿಗಳಿಗಿಂತ, ಲೌಕಿಕ ಕಷ್ಟಗಳನ್ನು ಹೋಗಲಾಡಿಸುವ ಸ್ತ್ರೀದೇವತೆಗಳ ಪೂಜೆಯನ್ನು ಮುಂದು ಮಾಡಬೇಕಾಗುತ್ತದೆ. ಬುದ್ಧ, ಬೋಧಿಸತ್ವ, ತಾರಾ ಇವರ ಇತಿಹಾಸವೇ ಭರತಖಂಡದ ಬೌದ್ಧಧರ್ಮದ ಇತಿಹಾಸ. ಡಂಬಳದ ಶಾಸನದಲ್ಲಿ ಬರುವ 'ಪ್ರಜ್ಞಾ' ಎಂಬ ಮಾತು ತುಂಬ ಗಮನಾರ್ಹವಾದುದು. ಮನುಷ್ಯ

---

66 An Introduction to Buddhist Esoterism, p. 140.

67 IA. X. p. 185, 1095–6 A.D.

68 ಎಂಟನೇ ಶತಮಾನದಲ್ಲಿ ಕಾಶ್ಮೀರದ ಕಯ್ಯವಿಹಾರದಲ್ಲಿದ್ದ ಸರ್ವಜ್ಞಮಿತ್ರನೆಂಬ ಬೌದ್ಧ ಭಿಕ್ಷುವು 'ಸ್ರಗ್ಧರಾ ಸ್ತೋತ್ರ'ವನ್ನು ಬರೆದಿದ್ದಾನೆ. ಸ್ರಗ್ಧರಾ ಛಂದಸ್ಸಿನಲ್ಲಿ ಬರೆದಿರುವ ತಾರಾದೇವಿಯ ಸ್ತುತಿಯಿದು. ಜಗತ್ತಿನ ರಕ್ಷಕಳು ಎಂದೂ, ದುರ್ಬಲರಿಗೆ ಶಕ್ತಿದಾಯಕಳು ಎಂದೂ ಅಲ್ಲಿ ತಾರಾ ವರ್ಣಿತಳಾಗಿದ್ದಾಳೆ. ಅದನ್ನು ಪಠಿಸಿದವರ ಪಾಪಗಳು ಮತ್ತು ಕಷ್ಟಗಳು ಪರಿಹಾರವಾಗುತ್ತವೆಂದು ಜನ ನಂಬಿದ್ದಾರೆ. 'ಆರ್ಯತಾರಾನಾಮಶತೋತ್ತರಶತಕಸ್ತೋತ್ರ' ಎಂಬ ಪದ್ಯಕಾವ್ಯದಲ್ಲಿ ಇದೇ ಕವಿ ತಾರಾದೇವಿಯ ನೂರೆಂಟು ಹೆಸರುಗಳನ್ನು ಸ್ಮರಿಸಿದ್ದಾನೆ.

(J. N. Ganhar and P. N. Ganhar : Buddhism in Kashmir and Ladakh,p. 104.)

ಸಂಪಾದಿಸಬೇಕಾದುದು 'ಪ್ರಜ್ಞಾ' ಅಥವಾ 'ಶೂನ್ಯತಾ'. ಇದನ್ನು ಸಾಧಿಸಲು ಇರುವ ಮಾರ್ಗವೇ 'ಉಪಾಯ' ಅಥವಾ 'ಕರುಣಾ'. ಇವೆರಡೂ ಕೇವಲಸತ್ಯದ ಎರಡು ಮುಖಗಳು. 'ಪ್ರಜ್ಞಾ' ಎಂಬ ವಧು, 'ಉಪಾಯ' ಎಂಬ ವರ—ಇವರಿಬ್ಬರ ಮಿಲನದಿಂದಲೇ ಮನುಷ್ಯ ಪೂರ್ಣನಾಗುವುದು. ಇದನ್ನೇ ನೇಪಾಳದಲ್ಲಿ ಕಮಲದಿಂದೇಳುವ ಅಗ್ನಿಯ ಮೂಲಕ, ಟಿಬೆಟ್ಟಿನಲ್ಲಿ ಆಲಿಂಗನದಲ್ಲಿರುವ ದಂಪತಿಗಳ ಮೂಲಕ ('ಯಬ್ಯುಂ') ಸಾಂಕೇತಿಕವಾಗಿ ಚಿತ್ರಿಸಿದ್ದಾರೆ. ವಜ್ರಯಾಸದ ಪ್ರಕಾರ ಪ್ರಜ್ಞೆ ಮತ್ತು ಉಪಾಯಗಳು ಪ್ರಪಂಚದಲ್ಲಿ ಸ್ತ್ರೀಪುರುಷರಾಗಿ ಕಾಣಿಸಿಕೊಂಡಿವೆ. ಈ ಶಾಸನದಲ್ಲಿ ತಾರಾಭಗವತಿಯನ್ನು 'ಪ್ರಜ್ಞಾ' ಎಂದೂ, 'ಬೋಧಿಸ್ವರೂಪಾ' ಎಂದೂ ಕರೆದಿರುವುದರ ಔಚಿತ್ಯವನ್ನು ಕಾಣಬಹುದು. ಕೋಳಿವಾಡದಲ್ಲಿ ಸಿಕ್ಕಿರುವ ತಾರಾವಿಗ್ರಹದ ಪೀಠದ ಮೇಲೆ "ಸಿದ್ಧಂ ಓಂ ನಮೋ" ಎಂದು ಆರಂಭವಾಗುವ ಶಾಸನವಿದೆ.[69] ಈ ಶಾಸನವನ್ನು ಸಂಪಾದಿಸಿರುವ ಶ್ರೀ ಪಿ. ಬಿ. ದೇಸಾಯಿಯವರು ಈ ಆರಂಭಪದ್ಯ ಉತ್ತರ ಭಾರತದ ಬೌದ್ಧ ಶಾಸನಗಳಲ್ಲಿ ಸಾಮಾನ್ಯವೆನ್ನುತ್ತಾರೆ. 'ಹ್ರೀಂ ಸ್ತ್ರೀಂ ಹ್ರೂಂ ಫಟ್'—ಇದು ತಾರಾ ಮಂತ್ರ. ಈ ಮಂತ್ರದ ನಾಲ್ಕಕ್ಷರಗಳ ಸ್ಥಳಪಲ್ಲಟದಿಂದ ಇನ್ನೂ ಏಳು ಮಂತ್ರಗಳು ಹುಟ್ಟುತ್ತವೆ. ಆ ಮಂತ್ರಗಳ ಅಧಿದೇವತೆಗಳು ಉಗ್ರಾ, ಮಹೋಗ್ರಾ, ವಜ್ರಾ, ಕಾಲೀ, ಸರಸ್ವತೀ, ಕಾಮೇಶ್ವರೀ ಮತ್ತು ಭದ್ರಕಾಲೀ. ಕೋಳಿವಾಡದ ತಾರಾ ವಿಗ್ರಹದ ಒಡೆದಿರುವ ಪ್ರಭಾವಳಿಯ ಮೇಲೆ ಎರಡು ವಿಗ್ರಹಗಳಿವೆ, ನ್ಯಾಯವಾಗಿ ಏಳು ಇರಬೇಕು. ಬಳ್ಳಿಗಾವೆ ಮತ್ತು ಡಂಬಳದ ಶಾಸನಗಳನ್ನು ಜ್ಞಾಪಿಸಿಕೊಂಡರೆ ಇಲ್ಲಿಯೂ ಒಂದು ಬೌದ್ಧ ವಿಹಾರವಿತ್ತೋ ಏನೋ !

ತಾರಾದೇವಿಗೆ 'ತಾರಾಭಗವತೀ' ಎಂಬ ಹೆಸರೂ ಇದೆ.[69.1] ಅವಳ ನಾಮಸ್ಮರಣೆ ಸಾಕು, ಮನುಷ್ಯನಿಗೆ ಅಷ್ಟಸಿದ್ಧಿಗಳು ಲಭಿಸುತ್ತವೆ. ಈ ತಾರಾದೇವಿಯನ್ನು ವೈದಿಕ ತಂತ್ರಗಳು ಮಹಾ ವಿದ್ಯಾಧಿದೇವತೆಗಳಲ್ಲೊಬ್ಬಳೆಂದು ಭಾವಿಸಿದರೂ,[70] ತಾರಾ ಮೂಲತಃ ಬೌದ್ಧದೇವತೆ, ಬಹುಶಃ ಟಿಬೆಟ್ಟಿನಿಂದ ಬಂದವಳು.[71] ಕಾಳೀ, ತಾಂತ್ರಿಕ ಪೂಜೆಯ ಸರಸ್ವತೀ—ಇವರು ಕೂಡ ಮೂಲತಃ ಬೌದ್ಧದೇವತೆಗಳೆಂದೂ, ಹಿಂದೂ ತಂತ್ರಗಳು ಮುಂದೆ ಇವರನ್ನು ತಮ್ಮವರನ್ನಾಗಿ ಮಾಡಿಕೊಂಡರೆಂದೂ ಕೆಲವರು ಅಭಿಪ್ರಾಯಪಡುತ್ತಾರೆ.

ಕನ್ನಡದಲ್ಲಿ ಇಲ್ಲಿಯವರೆಗೆ ಬೌದ್ಧಗ್ರಂಥಗಳು ಸಿಕ್ಕಿಲ್ಲ. ಒಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ರಚಿತವಾಗಿರುವ ಕವಿರಾಜಮಾರ್ಗವೇ ನಮಗೆ ದೊರೆತಿರುವ ಅತ್ಯಂತ ಪ್ರಾಚೀನವಾದ ಗ್ರಂಥ. ಅದಕ್ಕಿಂತ ಹಿಂದೆ ಕ್ರಿಸ್ತಶಕದ ಆರಂಭದಿಂದಲೂ ಕನ್ನಡದಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು, ಹಾಗೆ ರಚಿಸಿದವರಲ್ಲಿ ಬೌದ್ಧರೂ ಸಾಕಷ್ಟು ಸಂಖ್ಯೆಯಲ್ಲಿದ್ದಿರಬೇಕು ಎಂದು ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು ಪ್ರತಿಪಾದಿಸು

---

69 Journal of Indian History, XXXII (1954), pp. 85-92.

(ಅ) ಸಿದ್ಧಂ ಓಂ ನಮೋ ಭಗವತ್ತ್ಯೈ ಆರ್ಯ ತಾರಾಯೈ ॥
ಯೇ ಧ[ರ್]ಮಾ ಹೇತುಪ್ರಭವಾ ಹೇತುಂ ತೇಷಾಂ ತಥಾ-

(ಆ) ಗತೋ ಹ್ಯವದತ್ತೇ (ದತ್[ ]ತೇ) ಷಾಂ ಚ ಯೋ
ನಿರೋಧಃ ಏವಂ ವಾದೀ ಮಹಾ ಸ್ರ (ಶ್ರ) ವ (ಮ)ಣಃ ॥

69.1 ಕೇರಳದಲ್ಲಿ ಬುದ್ಧನ ವಿಗ್ರಹಗಳು ದೊರೆತಿರುವೆಡೆಯಲ್ಲೆಲ್ಲ ಭಗವತಿ ನಿಲಯಗಳಿರುವುದನ್ನು ಪಿ. ಸಿ. ಅಲೆಕ್ಸಾಂಡರ್ ಗಮನಿಸಿದ್ದಾರೆ (Buddhism in Kerala, p. 86.). ಕರ್ನಾಟಕದಲ್ಲಿಯೂ ಭಗವತಿ ದೇವಾಲಯಗಳಿವೆ. ಇವುಗಳಲ್ಲಿ ಕೆಲವಾದರೂ, 'ಮೂಲತಃ' ಬೌದ್ಧ ಧರ್ಮಕ್ಕೆ ಸಂಬಂಧಪಟ್ಟವೆಯೇ ವಿಚಾರಾರ್ಹವಾದುದು.

70 ಕಾಳೀ, ತಾರಾ, ಷೋಡಶೀ, ಭುವನೇಶ್ವರೀ, ಭೈರವೀ, ಚಿನ್ನಮಸ್ತಾ, ಧೂಮಾವತೀ, ಬಗಲಾ, ಮಾತಂಗೀ, ಕಮಲಾ—ಇವರು ಹತ್ತು ಮಹಾ ವಿದ್ಯಾಧಿದೇವತೆಗಳು,

71 An Introduction to Buddhist Esoterism, p. 155.

ತ್ತಾರೆ. ಅವರ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸಬಹುದು-"ಬಹುಶಃ ಬೌದ್ಧರೇ ಕನ್ನಡ ಭಾಷೆಗೆ ಆದಿ ಕವಿಗಳು. ಕನ್ನಡ ದೇಶದಲ್ಲಿ ಬೌದ್ಧಮತವು ಪ್ರಾಬಲ್ಯಕ್ಕೆ ಬಂದ ಕಾಲದಿಂದ—ಎಂದರೆ ಸುಮಾರು ಕ್ರಿಸ್ತಶಕದ ಆದಿಭಾಗದಿಂದಲೂ ಕನ್ನಡಭಾಷೆಯಲ್ಲಿ ಗ್ರಂಥರಚನೆಯಾಗುತ್ತಿದ್ದಿರಬೇಕು............ಪ್ರಾಚೀನ ಕಾಲದಲ್ಲಿ, ಅದರಲ್ಲಿಯೂ ಬೌದ್ಧಮತ ಪ್ರಾಬಲ್ಯವು ನಾಶವಾದಂದಿನಿಂದ ಜೈನರೂ, ವೈದಿಕ ಮತಾನುಸಾರಿಗಳಾದ ಕವಿಗಳೂ ಗ್ರಂಥರಚನೆ ಮಾಡಿದರು. ಬೌದ್ಧಮತದ ನಾಶದೊಂದಿಗೆ ಬೌದ್ಧಗ್ರಂಥನಾಶವೂ ಆಯಿತು."[72] ಈ ಊಹೆಗಳು ನಿಜವಾಗಿರುವ ಸಾಧ್ಯತೆ ಬಹುಕಡಮೆ. ಏಕೆಂದರೆ ಅವುಗಳನ್ನು ಸಾಧಿಸಲು ಇನ್ನೂ ಹೆಚ್ಚು ಖಚಿತವಾದ ಆಧಾರಗಳು ಬೇಕು. ಕನ್ನಡ ನಾಡಿನಲ್ಲಿ ಬೌದ್ಧಧರ್ಮವಿತ್ತು ಎಂಬುದು ಎಷ್ಟು ಖಚಿತವೋ ಅಷ್ಟು ಖಚಿತವಾಗಿ ಬೌದ್ಧರು ಕನ್ನಡದಲ್ಲಿ ಗ್ರಂಥರಚನೆಯನ್ನು ಮಾಡಿದರು ಎಂದು ಹೇಳಲು ಸದ್ಯದಲ್ಲಿ ಆಧಾರಗಳಿಲ್ಲ.

ಕರ್ನಾಟಕದಲ್ಲಿ ಬೌದ್ಧಧರ್ಮದ ಕೊನೆಯ ಉಲ್ಲೇಖವೆಂದರೆ ಹದಿನಾರನೇ ಶತಮಾನದ ಶಾಸನವೊಂದರಲ್ಲಿ ಕಂಡುಬರುವ 'ಕಲವತಿ' ಎಂಬ ಊರಿನ ಹೆಸರು[73]. ಇದನ್ನು 'ಬೌದ್ಧವಸಾಮಹಾಪುರಿ' ಎಂದು ಆ ಶಾಸನವು ಬಣ್ಣಿಸುತ್ತದೆ. ಬಹುಶಃ ಅಲ್ಲಿ ಬೌದ್ಧರು ಸಾಕಷ್ಟು ಸಂಖ್ಯೆಯಲ್ಲಿದ್ದರೆಂದು ಕಾಣುತ್ತದೆ.

ಒಟ್ಟು ಸಾರಾಂಶ–ಕ್ರಿ. ಪೂ. ಮೂರನೇ ಶತಮಾನದಿಂದ ಕ್ರಿಸ್ತಶಕ ಹದಿನಾರನೇ ಶತಮಾನದವರೆಗೆ ಕರ್ನಾಟಕದಲ್ಲಿ ಬೌದ್ಧಧರ್ಮವು ಪ್ರಚಲಿತವಾಗಿದ್ದಿತು. ಅದು ಬಹುಶಃ ಯಾವಾಗಲೂ ಪ್ರಬಲ ಧರ್ಮವಾಗಿರಲಿಲ್ಲ. ಆರಂಭದಿಂದ ಕ್ರಿಸ್ತಶಕ ಒಂದನೇ ಶತಮಾನದವರೆಗೆ ಹೀನಯಾನವೂ, ಅಲ್ಲಿಂದ ಮುಂದೆ ಆರೇಳು ಶತಮಾನಗಳವರೆಗೆ ಮಹಾಯಾನವೂ ಸುಮಾರು ಏಳು ಎಂಟನೇ ಶತಮಾನಗಳಿಂದ ವಜ್ರಯಾನವೂ ಕರ್ನಾಟಕದಲ್ಲಿ ಪ್ರಚಾರಗೊಂಡವು. ಕರ್ನಾಟಕ ಸಂಸ್ಕೃತಿಗೆ ಬೌದ್ಧಧರ್ಮದ ಕೊಡುಗೆ ಏನು ಎಂಬುದನ್ನು ನಿರ್ಧರಿಸುವುದು ಸದ್ಯದಲ್ಲಿ ಕಷ್ಟವಾಗಿದೆ.[74]

---

[72] ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು, ಪು. 18.

[73] C. Hayavadanarao : Mysore Gazetteer, II. i. p. 151.

[74] ಸನ್ನತಿಯಲ್ಲಿ ದೊರಕಿರುವ ಬೌದ್ಧ ಶಿಲ್ಪಗಳು ಬಹು ಸುಂದರವಾಗಿದ್ದು, ಆಂಧ್ರದ ನಾಗಾರ್ಜುನಿಕೊಂಡ, ಅಮರಾವತಿ ಶಿಲ್ಪಗಳನ್ನು ನೆನಪಿಗೆ ತರುತ್ತವೆ. ಕರ್ನಾಟಕದ ಶಿಲ್ಪದ ಇತಿಹಾಸದಲ್ಲಿ ಇವು ಹೊಸ ಅಧ್ಯಾಯವನ್ನು ಸ್ಥಾಪಿಸುತ್ತವೆ ಎಂಬ ಡಾ॥ ಎಂ. ಶೇಷಾದ್ರಿಯವರ ಮಾತು ಗಮನಾರ್ಹವಾಗಿದೆ (Karnataka through the Ages, App. IX. p. 1018). ಸನ್ನತಿಯ ಪಕ್ಕದಲ್ಲಿರುವ ದಿಬ್ಬಗಳು ಬೌದ್ಧ ಸ್ತೂಪಗಳನ್ನೊಳಗೊಂಡಿರಬಹುದೆಂಬ ಊಹೆಯೂ ಇದೆ.

# VI

# ಶೈವಧರ್ಮ

## ಪ್ರಾಚೀನತೆ

ಭರತಖಂಡದಲ್ಲಿ ಶೈವಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು. ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ. ಹರಪ್ಪ–ಮೊಹೆಂಜೊದಾರೋಗಳ ಸೈಂಧವ ಸಂಸ್ಕೃತಿಯಲ್ಲಿ (ಸು. ಕ್ರಿ. ಪೂ. 3250–2750) ಕೊಂಬುಗಳಿರುವ ದೇವತೆಯ ಚಿತ್ರವಿರುವ ಮುದ್ರಿಕೆಗಳೂ ಲಿಂಗಗಳೂ ದೊರಕಿವೆ. ಕೊಂಬುಗಳಿರುವ ದೇವತೆಗೆ ಮೂರು ಮುಖಗಳಿವೆ. ಅವನು ಯೋಗಸಮಾಧಿಯ ಭಂಗಿಯಲ್ಲಿ ಕುಳಿತಿದ್ದಾನೆ. ಅವನ ಸುತ್ತಮುತ್ತ ಮತ್ತು ಪೀಠದ ಕೆಳಗೆ ಆನೆ, ಹುಲಿ, ಖಡ್ಗಮೃಗ, ಎಮ್ಮೆ, ಜಿಂಕೆಗಳು ಸುತ್ತುವರಿದಿವೆ. ಇದನ್ನು ಪರಿಶೀಲಿಸಿ ಆ ವಿಗ್ರಹವು ಹಿಂದೂಧರ್ಮದ ಮಹಾಯೋಗಿಯೂ, ಪಶುಪತಿಯೂ ಆದ ಶಿವನ ಪ್ರಾಚೀನ ರೂಪವನ್ನು ಸೂಚಿಸುತ್ತದೆಯೆಂದು ಸರ್ ಜಾನ್ ಮಾರ್ಷಲ್ಲರು ಅಭಿಪ್ರಾಯಪಡುತ್ತಾರೆ.[1] ಮೊಹೆಂಜೊದಾರೋ ಮತ್ತು ಹರಪ್ಪಗಳ ಅವಶೇಷಗಳಿಂದ ಶೈವಧರ್ಮವು ಪ್ರಪಂಚದಲ್ಲಿಯೇ ಅತ್ಯಂತ ಪ್ರಾಚೀನವಾದ ಜೀವಂತಧರ್ಮವೆಂದು ಭಾವಿಸಬೇಕಾಗುತ್ತದೆಯೆಂದು ಅವರು ತಮ್ಮ ಗ್ರಂಥದ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.[2]

ಋಗ್ವೇದದಲ್ಲಿ ರುದ್ರನು ದುಷ್ಟಶಕ್ತಿಗಳಿಗೆ ಅಧಿಪತಿಯೆಂಬಂತೆ ಚಿತ್ರಿತನಾಗಿದ್ದಾನೆ. ರುದ್ರ ಎಂದರೇ ಗರ್ಜಿಸುವವನು ಎಂದರ್ಥ. ಮುಂದೆ ಶಿವನಿಗೆ ಅನ್ವಯಿಸಲಾದ ಅನೇಕ ಲಕ್ಷಣಗಳನ್ನು ರುದ್ರನಿಗೆ ಅನ್ವಯಿಸಿ ಹೇಳಲಾಗಿದೆ. ಉದಾಹರಣೆಗೆ, ರುದ್ರನ ವಾಸಸ್ಥಾನವು ಪರ್ವತಗಳಲ್ಲಿ; ಅವನು ಜಟೆಯನ್ನು ಎತ್ತಿ ಕಟ್ಟಿದ್ದಾನೆ; ಚರ್ಮವನ್ನು ಧರಿಸಿದ್ದಾನೆ. ಸ್ವಭಾವತಃ ಭಯಂಕರನಾದ ಅವನು ಮಂಗಳಕರ ಅಥವಾ 'ಶಿವ'ನಾಗಲೆಂದು ಪ್ರಾರ್ಥನೆಮಾಡಿರುವುದು ಕಂಡುಬರುತ್ತದೆ. ವೇದದ ಈಚಿನ ಭಾಗಗಳಲ್ಲಿ ರುದ್ರನಿಗೆ 'ಶಿವ' ಎಂಬುದು ಒಂದು ವಿಶಿಷ್ಟ ವಿಶೇಷಣವಾಗಿ ಪರಿಣಮಿಸಿಬಿಡುತ್ತದೆ. ಅವನನ್ನು 'ಮಹಾದೇವ' ಎಂದು ಕರೆದಿರುವುದೂ ಉಂಟು.[3] ಋಗ್ವೇದದ ರುದ್ರ–ಶಿವನ ಆರಾಧನೆಗೂ, ಮೊಹೆಂಜೊದಾರೋದಲ್ಲಿ ದೊರಕಿರುವ ಪಶುಪತಿಯ ವಿಗ್ರಹ ಆರಾಧನೆಗೂ ಸ್ಪಷ್ಟ ಸಂಬಂಧವನ್ನು ಕಲ್ಪಿಸಲಾಗಿಲ್ಲ.[4]

ಇದೇ ರುದ್ರ–ಶಿವನನ್ನು ಒಬ್ಬ ವೈದ್ಯನೆಂದು ಭಾವಿಸಿ, ಅವನು ಔಷಧಿಗಳಿಗೆ ಅಧಿಪತಿಯಾದ್ದರಿಂದ ದೇವಲೋಕದ ವೈದ್ಯನೆಂದೂ ಕರೆದಿದೆ. ಅವನು ಬಯಲು ಹೊಲಗಳ ಯಜಮಾನ, ಪಶುಗಳ ಒಡೆಯ, ಆದ್ದರಿಂದ ಅವನು ಪಶುಗಳ ಪತಿಯೂ ಹೌದು ("ಪಶೂನಾಂ ಪತಿಃ"). ಹೀಗೆ ರುದ್ರ-ಶಿವನಿಗೆ ಪಶುಪತಿಯೆಂಬುದು ಒಂದು ವಿಶಿಷ್ಟ ವಿಶೇಷಣವಾಗಿ ಪರಿಣಮಿಸಿತು.[5]

---

[1] Sir John Marshall : Mohenjodaro and the Indus Civilization, I, pp. 52–4.

[2] 'Among the many revelations that Mohenjodaro and Harappa have had in store for us, none perhaps is more remarkable than this discovery that Śaivism has a history going back to the chalcolithic age or perhaps, even further still, and that it thus takes its place as the most ancient living faith in the world."–(Ibid, Preface, p. vii).

[3] M. Hiriyanna : The Essentials of Indian Philosophy, p. 33.

[4] ಅದೇ, ಪು. 34.

[5] R.G. Bhandarkar : Vaiṣṇavism, Śaivism and Minor Religious Systems, p. 147.

ಅಥರ್ವ ಶಿರಸ್ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ–"ರುದ್ರನ ಸಾಕ್ಷಾತ್ಕಾರಕ್ಕಾಗಿ ಶ್ರಮಿಸಬೇಕಾದವನು ಆಹಾರದ ವಿಷಯದಲ್ಲಿ ಸಂಯಮಿಯಾಗಿರಬೇಕು. ಶ್ರವಣ, ಮನನ ಇತ್ಯಾದಿಗಳಲ್ಲಿ ನಿರತನಾಗಿರಬೇಕು. ಪರಮ ಹಂಸನಾಗಿ ಬಾಳಬೇಕು. ಅವನು ಪಾಶುಪತ ವ್ರತವನ್ನು ಅಂಗೀಕರಿಸಬೇಕು. ಆ ವ್ರತದ ಸ್ವರೂಪ ಕೆಳಗೆ ಹೇಳು ವಂತಹುದು–ಅತಿಯಾಸೆ ಮತ್ತು ಕೋಪಗಳನ್ನು ತ್ಯಜಿಸಬೇಕು. ಕ್ಷಮೆಯನ್ನು ಸಾಧಿಸಬೇಕು. ಓಂ ಎಂಬ ಮಂತ್ರವನ್ನು ಮತ್ತೆ ಮತ್ತೆ ಉಚ್ಚರಿಸಬೇಕು. ........ಹೃದಯದ ಅಂತರಾಳದಲ್ಲಿ ಸೂಕ್ಷ್ಮ ಶರೀರವೊಂದಿದೆ. ಅದರಲ್ಲೇ ದುರಾಸೆ, ಕೋಪ, ಕ್ಷಮೆಗಳು ವಾಸಿಸುತ್ತಿರುವುದು. ಮನುಷ್ಯನ ದುರ್ಗುಣಗಳಿಗೆಲ್ಲ ಮೂಲವಾದ ದುರಾಸೆ ಯನ್ನು ನಾಶಪಡಿಸಿ ಅದ್ವಿತೀಯನೂ ಅನಂತನೂ ಆದ ರುದ್ರನ ಮೇಲೆ ಮನಸ್ಸನ್ನು ಕೇಂದ್ರೀಕರಿಸಿ, ಆಹಾರ ಪಾನೀಯಗಳ ವಿಷಯಗಳಲ್ಲಿ ಸಂಯಮವನ್ನು ಸಾಧಿಸಬೇಕು. 'ಭಸ್ಮವೇ ಅಗ್ನಿ, ಭಸ್ಮವೇ ವರುಣ, ಭಸ್ಮವೇ ಭೂಮಿ, ಎಲ್ಲವೂ ಭಸ್ಮವೇ ; ಆಕಾಶ ಮನಸ್ಸು ಕಣ್ಣುಗಳು ಇತ್ಯಾದಿ ಇಂದ್ರಿಯಗಳೆಲ್ಲವೂ ಭಸ್ಮವೇ ಎಂಬ ಪದ ಗಳನ್ನು ಉಚ್ಚರಿಸುತ್ತ ದೇಹಕ್ಕೆ ಭಸ್ಮಧಾರಣ ಮಾಡಬೇಕು. ಪಶುವಿನ ಪಾಶವನ್ನು ಕತ್ತರಿಸಿ ಹಾಕಲು ಸಮರ್ಥ ವಾದ ಪಾಶುಪತವ್ರತ ಇದೇ."[6]

ಶೈವಧರ್ಮಕ್ಕೆ ಮೂಲಾಧಾರಗಳಾದ ಆಗಮುಗಳ ವಿಷಯವಾಗಿ ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸ ಬಹುದು. ಆಗಮ ಎಂಬುದು √ಗಮ್ ಎಂಬ ಧಾತುವಿನಿಂದ ಬಂದಿದೆ. ಆಗಮ ಎಂದರೆ ಬಂದದ್ದು, ಕಾಣಿಸಿ ಕೊಂಡದ್ದು, " A Revealed Text " ಎಂದರ್ಥ.[7] ಶಿವನು ಪಾರ್ವತಿಗೆ ಬೋಧಿಸಿದ ವಿಷಯಗಳೇ (ಶೈವ ಮತ್ತು ಶಾಕ್ತ) ಆಗಮುಗಳಲ್ಲಿರುವುವು ಎಂದು ನಂಬುತ್ತಾರೆ. ಆದ್ದರಿಂದ, ಸಂಪ್ರದಾಯದ ಪ್ರಕಾರ, ಆಗಮುಗಳ ಕರ್ತೃ ಪರಮಾತ್ಮನಾದ ಶಿವನೇ. ಆಗಮುಗಳನ್ನು ತಂತ್ರಗಳೆಂದು ಕರೆದರೂ ಸಾಮಾನ್ಯವಾಗಿ ಶೈವಾಗಮುಗಳನ್ನು ಆಗಮ ಗಳೆಂದೂ ಶಾಕ್ತಾಗಮುಗಳನ್ನು ತಂತ್ರಗಳೆಂದೂ ಕರೆಯುವುದು ರೂಢಿ. ಶಿವನನ್ನು ಆರಾಧ್ಯದೈವವಾಗಿ ಭಾವಿಸುವ ಆಗಮುಗಳು ಶೈವಾಗಮುಗಳು ; ಶಕ್ತಿಯನ್ನು ಆರಾಧ್ಯದೈವವಾಗಿ ಭಾವಿಸುವ ಆಗಮುಗಳು ಶಾಕ್ತಾಗಮುಗಳು ಅಥವಾ ತಂತ್ರಗಳು; ವಿಷ್ಣುವನ್ನು ಆರಾಧ್ಯದೈವವಾಗಿ ಭಾವಿಸುವ ಆಗಮುಗಳು ಪಾಂಚರಾತ್ರಾಗಮುಗಳು. ಹೀಗೆ ಆಗಮುಗಳಲ್ಲಿ ಮೂರು ಬಗೆ.

ಶೈವಧರ್ಮಕ್ಕೆ ಆಧಾರಗ್ರಂಥಗಳಾದ ಶೈವಾಗಮುಗಳು ಇಪ್ಪತ್ತೆಂಟು. ಇವು ಮುಖ್ಯಾಗಮುಗಳು. ಇವಲ್ಲದೆ ಇವುಗಳಲ್ಲಿ ಒಂದೊಂದಕ್ಕೂ ಹೊಂದಿಕೊಂಡಂತೆ ಉಪಾಗಮುಗಳಿವೆ. ಉದಾಹರಣೆಗೆ ಕಾಮಿಕಾಗಮಕ್ಕೆ ಮೂರು ಉಪಾಗಮುಗಳಿವೆ–ಉತ್ತರ, ಭೈರವೋತ್ತರ ಮತ್ತು ನಾರಸಿಂಹ. ಯೋಗಜಾಗಮಕ್ಕೆ ಐದು ಉಪಾಗಮುಗಳಿವೆ- ವಿನಾಶಿರೋತ್ತರ, ತಾರಕ, ಸಾಂಖ್ಯ, ಶಾಂತಿ ಮತ್ತು ಆತ್ಮಯೋಗ. ಉಪಾಗಮುಗಳು ಸಾಮಾನ್ಯವಾಗಿ ಮುಖ್ಯಾ ಗಮುಗಳಲ್ಲಿನ ವಿಷಯಗಳನ್ನೇ ಇನ್ನೂ ಮುಂದುವರಿಸಿ ಚರ್ಚಿಸುತ್ತವೆ.[8]

ಒಂದೊಂದು ಆಗಮವನ್ನೂ ಸಾಮಾನ್ಯವಾಗಿ ನಾಲ್ಕು 'ಪಾದ'ಗಳಾಗಿ ವಿಂಗಡಿಸುತ್ತಾರೆ : ಜ್ಞಾನ, ಕ್ರಿಯಾ, ಯೋಗ ಮತ್ತು ಚರ್ಯಾ. ಈ ಒಂದೊಂದು ಪಾದದಲ್ಲಿಯೂ, 'ಶಿವತತ್ವರತ್ನಾಕರ'ದ ಪ್ರಕಾರ, ಚರ್ಚಿತ ವಾಗಿರುವ ವಿಷಯಗಳು ಹೀಗಿವೆ–[9] ಜ್ಞಾನಪಾದದಲ್ಲಿ ಮಹೇಶ್ವರನ ಸ್ವರೂಪ, ಪಶುಪ್ರಭೇದ, ಪಂಚಪಾಶಗಳ

---

[6] ಅದೇ, ಪು. 159.

[7] S.C. Nandimath : 'The Śaivāgamas : their literature and theology' (Journal of the Karnatak University, Humanities, VI. p. 2).

[8] M. R. Sakhare : History and Philosophy of Lingayat Religion (Introduction to Liṅgadhāraṇacandrikā), p. 238. ಆಗಮ ಮತ್ತು ಉಪಾಗಮುಗಳ ಪಟ್ಟಿಗೆ ಮೇಲಿನ ಡಾ॥ ಎಸ್. ಸಿ. ನಂದೀ ಮಠರ ಲೇಖನದಲ್ಲಿ ಪು. 9-19ಗಳನ್ನು ನೋಡಿ.

[9] M. R. Sakhare : History and Philosophy of Lingayat Religion, pp. 297–98.

ಸ್ವರೂಪ, ಜೀವನು ಮಲತ್ರಯಗಳಿಂದ ಮುಕ್ತನಾಗಿ ಶಿವಪದವನ್ನು ಸೇರುವ ಬಗೆ, ಲೋಕಗಳು, ಪ್ರಳಯ ಇತ್ಯಾದಿ ವಿಷಯಗಳು ಚರ್ಚಿತವಾಗಿರುತ್ತವೆ. ಕ್ರಿಯಾಪಾದದಲ್ಲಿ ಮಂತ್ರಗಳ ಉಚ್ಚಾರಣಾ ಕ್ರಮ, ಸಂಧ್ಯಾವಂದನ, ಜಪ ಹೋಮಾದಿಗಳ ವಿವರಣೆಯಿರುತ್ತದೆ. ಯೋಗಪಾದದಲ್ಲಿ ಮೂಲಾಧಾರಾದಿ ಚಕ್ರಗಳ ವಿವರಣೆಯೂ, ಯೋಗಕ್ಕೆ ಸಂಬಂಧಿಸಿದ ವಿಷಯಗಳೂ; ಚರ್ಯಾಪಾದದಲ್ಲಿ ಪವಿತ್ರಾರೋಪಣ, ದೇವತಾಪ್ರತಿಷ್ಠೆ ಇತ್ಯಾದಿ ವಿಷಯಗಳೂ ನಿರೂಪಿತವಾಗಿರುತ್ತವೆ.

ದೇವಸ್ಥಾನಗಳ ನಿರ್ಮಾಣ, ವಿಗ್ರಹಾರಾಧನೆ, ಪೂಜಾವಿಧಾನ ಇತ್ಯಾದಿಗಳೆಲ್ಲವೂ ಹಿಂದೂ ಧರ್ಮವನ್ನು ಸೇರಿರುವುದು ಆಗಮಗಳಿಂದಲೇ. ಆಗಮಗಳು ಪಶುಬಲಿಯನ್ನು ನಿರಾಕರಿಸಿ ಅಹಿಂಸೆಯನ್ನು ಒತ್ತಿ ಹೇಳುತ್ತವೆ. ವೈದಿಕ ಧರ್ಮವೂ, ಆಗಮೋಕ್ತವಾದ ಧರ್ಮಗಳೂ ಮೊದಮೊದಲು ಒಂದರಿಂದ ಒಂದು ಭಿನ್ನವಾಗಿದ್ದು ಕ್ರಮೇಣ ಒಂದು ಇನ್ನೊಂದರಲ್ಲಿ ಸೇರಿಹೋದವು. ಆಧುನಿಕ ಹಿಂದೂಧರ್ಮವು ಸ್ವಲ್ಪಮಟ್ಟಿಗೆ ವೈದಿಕವೂ ಹೌದು, ಸ್ವಲ್ಪ ಮಟ್ಟಿಗೆ ಆಗಮಿಕವೂ ಹೌದು.

## ಲಕುಲೀಶ-ಪಾಶುಪತ

ಮಹಾಭಾರತದಲ್ಲಿ ಹೇಳಿರುವ ಐದು ಸಿದ್ಧಾಂತಗಳಲ್ಲಿ ಪಾಶುಪತವೂ ಒಂದು.[10] ಅರ್ಜುನನು ಶಿವನ ಕೃಪೆಯಿಂದ ಪಾಶುಪತಾಸ್ತ್ರವನ್ನು ಪಡೆದ ವಿಷಯ ಪ್ರಸಿದ್ಧವೇ. ಹೀಗೆ ಶೈವ ಧರ್ಮ ಅತ್ಯಂತ ಪುರಾತನವಾದ ಧರ್ಮವಾಗಿದೆ. ಅದರ ಒಟ್ಟು ತಿರುಳು ಇದು—ಒಬ್ಬೊಬ್ಬ ಜೀವಿಯೂ ಪಶು; ಅವನನ್ನು ಕಟ್ಟಿ ಹಾಕಿರುವುದು ಪಾಶ; ಜೀವಿಗಳ ಒಡೆಯ ಪಶುಪತಿ; ಪಾಶವನ್ನು ಕತ್ತರಿಸಲು ("ಪಶು ಪಾಶ ವಿಮೋಕ್ಷಣ") ಪಶುಪತಿ ಅಥವಾ ಮಹೇಶ್ವರನಿಗೆ ಶರಣುಹೋಗಬೇಕು; ಪಾಶುಪತ ವ್ರತವನ್ನು ಅಂಗೀಕರಿಸಿ ಆಚರಿಸಬೇಕು. ಹೀಗೆ ಪಾಶುಪತ ಧರ್ಮವು ಶೈವಧರ್ಮಕ್ಕೆ ಮತ್ತೊಂದು ಹೆಸರಾಯಿತು. ಅದರ ಅನುಯಾಯಿಗಳು ಮಾಹೇಶ್ವರರೆಂದು ಪ್ರಸಿದ್ಧರಾದರು. ಕುಶಾಣರ ದೊರೆ ವೆಮಕಡ್ಫಿಸೆಸ್ (ಕ್ರಿ. ಶ. 3ನೇ ಶತಮಾನ) ತನ್ನ ನಾಣ್ಯಗಳ ಹಿಂದೆ ತಾನು ಮಹೇಶ್ವರನ ಭಕ್ತನೆಂದು ಹೇಳಿಕೊಳ್ಳುತ್ತಾನೆ.[11] ಏಳನೆಯ ಶತಮಾನದ ಚೀನೀ ಪ್ರವಾಸಿ ಹ್ಯುಯೆನ್‌ತ್ಸಾಂಗ್ ತನ್ನ ಪುಸ್ತಕದಲ್ಲಿ ಪಾಶುಪತರ ಹೆಸರನ್ನು ಹನ್ನೆರಡು ಸಾರಿ ಹೇಳುವುದಲ್ಲದೆ, ಮಹೇಶ್ವರನ ದೇವಸ್ಥಾನಗಳು ಕೆಲವೆಡೆ ಇದ್ದುವೆಂದೂ, ಅಲ್ಲಿ ಪಾಶುಪತರು ಧ್ಯಾನಮಾಡುತ್ತಿದ್ದರೆಂದೂ ಹೇಳುತ್ತಾನೆ.[12] ದೇಹಕ್ಕೆ ಭಸ್ಮವನ್ನು ಬಳಿದು, ಜಡೆಯನ್ನು ಗಂಟು ಗಂಟಾಗಿ ಕಟ್ಟಿ, ನಗ್ನರಾಗಿದ್ದುಕೊಂಡು ದೇವ(ಬಹುಶಃ ಶಿವ ಅಥವಾ ಮಹೇಶ್ವರ)ನನ್ನು ಉಪಾಸನೆ ಮಾಡುತ್ತಿದ್ದ ಸನ್ಯಾಸಿಗಳನ್ನು ವಾರಣಾಸಿಯಲ್ಲಿ ಕಂಡುದಾಗಿ ಹೇಳುತ್ತಾನೆ.[13] ಬಾಣನು ತನ್ನ ಕಾದಂಬರಿಯಲ್ಲಿ ತಾರಾಪೀಡನ ಮಂತ್ರಿ ಶುಕನಾಸನನ್ನು ಕಾಣಲು ಕೆಂಪು ವಸ್ತ್ರಗಳನ್ನು ಧರಿಸಿದ್ದ ಪಾಶುಪತರು ನಿಂತಿದ್ದರು ಎಂದು ವರ್ಣಿಸುತ್ತಾನೆ.[14]

---

[10] Upadhyaya : India in Kālidāsa, p. 314.

[11] Vaiṣṇavism, Śaivism and Minor Religious Systems, p. 167.

[12] Thomas Watters: On Yuan Chwang's Travels in India, I. p. 296, 331; II, p. 229, 242.

[13] ಅದೇ. II, P. 47.

[14] Collected works of Bhandarkar, IV, p. 168.

ಯಜ್ಞೋಪವೀತವನ್ನು ಧರಿಸಿದ್ದ ಮಹಾಶ್ವೇತೆಯು 'ದೃಢಪಾಶುಪತವ್ರತೆ'ಯಾಗಿದ್ದಳೆಂದು ನಾಗವರ್ಮನು ವರ್ಣಿಸುತ್ತಾನೆ. ಅವಳ ಗುಹಾಂಗಣವನ್ನು ವರ್ಣಿಸುತ್ತ ಅಲ್ಲಿಯ ಯೋಗದಂಡ (=ಲಾಕುಳ), ಜೋಗವಟ್ಟಿಗೆ ಮತ್ತು ಭಸ್ಮಶಯ್ಯೆಗಳನ್ನು ಹೆಸರಿಸುತ್ತಾನೆ (ಕರ್ಣಾಟಕ ಕಾದಂಬರೀ ಸಂಗ್ರಹ, 3.32, 39). ಪಾಶುಪತವ್ರತದಲ್ಲಿ ಭಸ್ಮಕ್ಕೆ ದೊಡ್ಡ ಸ್ಥಾನವುಂಟು. ಭಸ್ಮಶಯನ, ಭಸ್ಮಸ್ನಾನಗಳು ಪಾಶುಪತವ್ರತಗಳಲ್ಲಿ ಕೆಲವು.

9

ಶೈವಧರ್ಮಕ್ಕೆ ಲಾಕುಳ ಸಮಯ ಎಂಬ ಮತ್ತೊಂದು ಹೆಸರೂ ಇದೆ. ಈ ಹೆಸರೇ ಬಹುಶಃ ಪ್ರಾಚೀನ ವಾದುದೆಂದೂ, ಇದು ಲಕುಲೀಶ ಎಂಬ ಒಬ್ಬ ಮಾನವ ವ್ಯಕ್ತಿಯನ್ನು ಸೂಚಿಸುವುದರಿಂದ ಇದರ ಸ್ಥಾನದಲ್ಲಿ ಪಶುಪತಿ ಎಂಬ ಭಗವಂತನ ಹೆಸರನ್ನಿಟ್ಟು ಪಾಶುಪತ ಸಮಯ ಎಂದು ಮುಂದಿನವರು ಮಾಡಿಕೊಂಡಿರಬೇಕೆಂದೂ ಹೇಳುತ್ತಾರೆ ಡಾ॥ ಭಂಡಾರ್ಕರ್ ಅವರು.[15] ಮಹೇಶ್ವರನು ಶ್ಮಶಾನದಲ್ಲಿ ಬಿದ್ದಿದ್ದ ದೇಹವೊಂದನ್ನು ಹೊಕ್ಕು ಲಕುಲಿನ್ ಎಂಬ ಬ್ರಹ್ಮಚಾರಿಯಾಗಿ ಅವತರಿಸುವುದಾಗಿಯೂ, ಹಾಗೆ ಅವತರಿಸಿದ ಸ್ಥಳಕ್ಕೆ ಕಾಯಾವತಾರ ಅಥವಾ ಕಾಯಾವರೋಹಣ ಎಂದು ಹೆಸರಾಗುವುದಾಗಿಯೂ, ಅವನಿಗೆ ಕುಶಿಕ, ಗರ್ಗ, ಮಿತ್ರ, ಕೌರುಷ್ಯರೆಂಬ ನಾಲ್ವರು ಶಿಷ್ಯರು ಇರುವರೆಂದೂ, ಇವರ ಅನುಯಾಯಿಗಳಾದ ಪಾಶುಪತರು ಭಸ್ಮಧಾರಣೆ ಮಾಡಿಕೊಂಡು ಮಾಹೇಶ್ವರ ಯೋಗವನ್ನು ಅನುಸರಿಸಿ ಕೊನೆಯಲ್ಲಿ ರುದ್ರಲೋಕಕ್ಕೆ ಹೋಗುವರೆಂದೂ ವಾಯುಪುರಾಣ (ಅಧ್ಯಾಯ, 23) ಮತ್ತು ಲಿಂಗಪುರಾಣ(ಅಧ್ಯಾಯ, 24)ಗಳಲ್ಲಿ ಹೇಳಿದೆ. ಹತ್ತನೆಯ ಶತಮಾನದ ಏಕಲಿಂಗಜೀಯ ಶಾಸನವೊಂದರಲ್ಲಿ ಲಕುಲಧಾರಿಯಾದ (ಲಕುಲ=ಲಗುಡ=ಕೋಲು) ಶಿವನು ಭೃಗುಕಚ್ಛದಲ್ಲಿ ಅವತಾರಮಾಡಿದನೆಂದು ಹೇಳಿದೆ. ಇದೇ ವಿಷಯ 13ನೆಯ ಶತಮಾನದ ಚಿಂತ್ರಪ್ರಶಸ್ತಿಯಲ್ಲಿಯೂ ಬಂದಿದೆ.[16] ಶಿವನು ಲಕುಲೀಶನಾಗಿ ಅವತರಿಸಿದ ಕಾಯಾವರೋಹಣವು ಹಿಂದಿನ ಬರೋಡ ಸಂಸ್ಥಾನದ (ಈಗ ಗುಜರಾತಿನ) ಕಾರ್ವಾಣ್[17] ಎಂಬ ಹಳ್ಳಿಯೆಂದು ಗುರುತಿಸಲಾಗಿದೆ. ಆ ಹಳ್ಳಿಯಲ್ಲಿರುವ "ಕಾರ್ವಾಣ್ ಮಾಹಾತ್ಮ್ಯ" ಎಂಬ ಗ್ರಂಥದಲ್ಲಿ ಶಿವನು ಲಕುಲೀಶನಾಗಿ ಅವತರಿಸಿದ ಕಥೆಯನ್ನು ಹೇಳಿದೆ. ಆ ಊರಲ್ಲಿ ನಕ್ಲೇಶ್ವರ (=ಲಕುಲೀಶ್ವರ)ನ ದೇವಸ್ಥಾನವಿದೆ. ಆ ಊರಿನ ಎರಡು ಲಿಂಗಗಳಲ್ಲಿಯೂ ಲಕುಲೀಶನ ಮೂರ್ತಿಯನ್ನು ಕೆತ್ತಲಾಗಿದೆ.[18] ಲಕುಲೀಶನ ವಿಗ್ರಹಗಳು ಸಾಮಾನ್ಯವಾಗಿ ಬಲಗೈಯಲ್ಲಿ ಮಾದಲದ ಹಣ್ಣನ್ನೂ ಎಡಗೈಯಲ್ಲಿ ದಂಡ(=ಲಕುಲ)ವನ್ನೂ ಹಿಡಿದಿರುತ್ತವೆ. ಆ ವಿಗ್ರಹಗಳಿಗೆ ಎರಡು ಕೈಗಳಿರುವುದು ಅವನು ಬುದ್ಧ, ಮಹಾವೀರರಂತೆ ಮನುಷ್ಯನಾಗಿ ಅವತರಿಸಿದನೆನ್ನುವುದನ್ನು ಸೂಚಿಸುತ್ತದೆ. ಲಕುಲೀಶನ ದೇವಸ್ಥಾನಗಳು ರಾಜಪುತಾಣದಿಂದ ದಕ್ಷಿಣದಲ್ಲಿ ಮೈಸೂರಿನವರೆಗೆ, ಪಶ್ಚಿಮದಲ್ಲಿ ಒರಿಸ್ಸಾದವರೆಗೆ ಹಬ್ಬಿರುವುದು ಕಂಡುಬರುತ್ತದೆ. ಲಕುಲೀಶಮತವು ಕರ್ನಾಟಕಕ್ಕೆ ಗುಜರಾತಿನಿಂದ ಬಂದಿರಬೇಕು.

## ಕಾಳಾಮುಖ

ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ. ಕಾಳಾಮುಖರು ಕಾಪಾಲಿಕರ ಗುಂಪಿಗೆ ಸೇರಿದಂತೆ ರಾಮಾನುಜರು ನಿರೂಪಿಸುವುದನ್ನು ಆಧಾರವಾಗಿಟ್ಟುಕೊಂಡು ಡಾ॥ ಆರ್. ಜಿ. ಭಂಡಾರ್ಕರ್ ಅವರು ಕಾಳಾಮುಖರೂ, ಕಾಪಾಲಿಕರೂ ಒಂದೇ ಎಂದು ಹೇಳುತ್ತಾರೆ. ಇದಕ್ಕೆ ಯಾವ ಆಧಾರವೂ ಇಲ್ಲ.[19]

---

[15] Vaiṣṇavism, Śaivism etc. p. 172.

[16] ಅದೇ, ಪು. 165–6.

[17] ಈ ಹಳ್ಳಿಯ ವಿವರಗಳಿಗೆ ನೋಡಿ—Gazetteer of the Bombay Presidency, VII, pp. 550–1. ಕ್ರಿ. ಶ. 7ನೆಯ ಶತಮಾನದಲ್ಲಿ ತೇವಾರಂ ಎಂಬ ಹಾಡುಗಳನ್ನು ಹಾಡಿದ ತಮಿಳು ನಾಡಿನ ಶಿವಭಕ್ತರ ಕಾಲದಲ್ಲಿ ಶೈವ ಕೇಂದ್ರಗಳಾಗಿದ್ದ ನಾಗಪಟ್ಟಣ ಮತ್ತು ಕುಂಬಕೋಣಗಳು ಕಾಯಾವರೋಹಣ ಅಥವಾ ಕಾರ್ರೋಣ ಎಂದು ಪ್ರಸಿದ್ಧವಾಗಿದ್ದುವು. ಕಾಯಾವರೋಹಣವು ಶೈವರಿಗೆ ಪವಿತ್ರಸ್ಥಾನವಾಗಿತ್ತೆಂಬುದು ಇದರಿಂದ ಸುವಿದಿತವಾಗುತ್ತದೆ. [T.A Gopinatharao : Elements of Hindu Iconography, II. i. p. 19.]

[18] D. R. Bhandarkar : "Lakulīśa" (Archaeological Survey of India, 1906–7).

[19] ಅನೇಕ ವಿದ್ವಾಂಸರು ಇಂತಹ ತಪ್ಪುಗಳನ್ನು ಮಾಡಿದ್ದಾರೆ. ಉದಾಹರಣೆಗೆ ಡಾ॥ ಕೆ. ಎ. ನೀಲಕಂಠಶಾಸ್ತ್ರಿಗಳವರು ಒಂದುಕಡೆ ಕಾಪಾಲಿಕರನ್ನೂ ಕಾಳಾಮುಖರನ್ನೂ ಒಂದೇ ಗುಂಪಿಗೆ ಸೇರಿಸಿದ್ದಾರೆ. (A History of South India, p. 422.)

ಕಾಪಾಲಿಕರದು ಸಂಪೂರ್ಣವಾಗಿ ವಾಮಾಚಾರಗಳ ಪಂಥವಾದರೆ, ಕಾಳಾಮುಖರದು ಶುದ್ಧ ಸಾತ್ವಿಕಾಚರಣೆಗಳ ಪಂಥ. ಕನ್ನಡ ಶಾಸನಗಳನ್ನು ಅಧ್ಯಯನಮಾಡಿದರೆ ಎಲ್ಲಿಯೂ ಕಾಳಾಮುಖರನ್ನು ಕಾಪಾಲಿಕರೆಂದು ಕರೆದಿಲ್ಲ ವೆಂಬುದು ಗೋಚರವಾಗುತ್ತದೆ. ಮಾತ್ರವಲ್ಲ, ಅವರು ಪಾಶುಪತ–ಲಾಕುಲ ವರ್ಗಕ್ಕೆ ಸೇರಿದವರೆಂಬುದು ಸ್ಪಷ್ಟ ವಾಗುತ್ತದೆ. ಇವರನ್ನು 'ಅಸಿತವಕ್ತ್ರ'ರೆಂದು ತಮಿಳು ನಾಡಿನ ಶಾಸನವೊಂದರಲ್ಲಿ ಕರೆದಿದೆ.[20] ಮುಖದ ಮೇಲೆ ಕರಿಯ ಗೆರೆಗಳನ್ನು ಹಚ್ಚಿಕೊಳ್ಳುತ್ತಿದ್ದುದರಿಂದ ಇವರನ್ನು ಕಾಳಾಮುಖರೆಂದು ಕರೆಯುತ್ತಿದ್ದಿರಬೇಕು.[21] ('ಕಾಳಾಮುಖ' ಎಂಬಲ್ಲಿನ 'ಳಾ'ದಲ್ಲಿ ಬರುವ ದೀರ್ಘಕ್ಕೆ ಔಚಿತ್ಯವೇನೋ ತಿಳಿಯದು). ಮಸಿಯನ್ನು ಹಚ್ಚಿಕೊಳ್ಳುವ ಸನ್ಯಾಸಿಗಳ ವಿಷಯವನ್ನು ವೃತ್ತವಿಲಾಸ (ಸು. 1360) ತನ್ನ ಧರ್ಮಪರೀಕ್ಷೆಯಲ್ಲಿ ಹೇಳುತ್ತಾನೆ.[22] ಇವರು ಕಾಳಾಮುಖರಿರ ಬಹುದೇ ಎಂಬ ಊಹೆಗೆ ಅವಕಾಶವಿದೆ. ಶಿಷ್ಯರೆಂಬ ಚಾತಕಕುಲಕ್ಕೆ 'ವರ್ಷಾಕಾಳ ಮುಖ'ರೆಂದು ಕಾಳಾಮುಖ ಗುರುಗಳೊಬ್ಬರನ್ನು ಕನ್ನಡ ಶಾಸನಗಳಲ್ಲಿ ಹೊಗಳಲಾಗಿದೆ.[23] 'ಕಾಳಾಮುಖ ಸಮಯ'ವೆಂದು ಅವರ ಧರ್ಮವನ್ನು ಕರೆಯಲಾಗಿದೆ.[24] ಕಾಳಾಮುಖ ಎಂಬುದು ಆರು ಜ್ಯೋತಿರ್ಲಿಂಗಗಳಲ್ಲಿ ಒಂದು.[25]

ವೀರಶೈವಧರ್ಮದ ಉದಯಕ್ಕೆ ಮುನ್ನ ಕನ್ನಡನಾಡಿನಲ್ಲಿ ಜೈನರನ್ನು ಬಿಟ್ಟರೆ ಈ ಶೈವರೇ ಅತ್ಯಂತ ಪ್ರಬಲರಾಗಿದ್ದವರು. ಇವರು ಅನೇಕ ರಾಜರಿಂದ ಪೂಜಿತರಾಗಿದ್ದರು ; ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಈ ಧರ್ಮವನ್ನು ಹೆಸರಿಸುವ ಅತ್ಯಂತ ಪ್ರಾಚೀನಶಾಸನವೆಂದರೆ ಸು. ಕ್ರಿ. ಶ. 700ರ ಕಿಗ್ಗದ ಶಾಸನ.[26] ಈ ಶಾಸನ ದಲ್ಲಿ ಪಾಶುಪತವನ್ನು ಹೆಸರಿಸಿದೆ. ಕ್ರಿ. ಶ. 1049ರ ಶಾಸನದಲ್ಲಿ 'ಪಾಶುಪತಯೋಗಾಚಾರ್ಯ ಜ್ಞಾನರಾಶಿ ವ್ಯಾಖ್ಯಾನ ದೇವರ' ಹೆಸರಿದೆ.[27] ಕೊಲ್ಲಾಪುರದ ಲಕ್ಷ್ಮಿಯ ಆರಾಧಕರಾದ ಪರಮಪಾಶುಪತಾಚಾರ್ಯರ ಹೆಸರು ಅದೇ ಕಾಲದ ಶಾಸನವೊಂದರಲ್ಲಿದೆ.[28] ರುದ್ರಶಕ್ತಿ ಎಂಬಾತ 'ಮಹಾಪಾಶುಪತ'ದಲ್ಲಿ ಪ್ರಸಿದ್ಧನಾಗಿದ್ದು ಕಾಳಾ ಮುಖಶ್ರೇಷ್ಠನಾಗಿದ್ದನೆಂದು ಮತ್ತೊಂದು ಶಾಸನ ವರ್ಣಿಸುತ್ತದೆ.[29] ಶ್ರೀಮಲ್ಲಕುಲೀಶ್ವರನ ಮುಖದಿಂದ ಹೊರಟ ಧರ್ಮವನ್ನು ಪಾಲಿಸುತ್ತ, ಹೂಲಿಯ ಶ್ರೀ ಪಂಚಲಿಂಗದೇವನನ್ನು ಆರಾಧಿಸುತ್ತ, ಅಲ್ಲಿಯ "ಅಭಿನವ ಪಾಶುಪತ ಮಠ"ಕ್ಕೆ ಒಡೆಯರಾಗಿದ್ದ ಶ್ರೀ ವಿದ್ಯಾರಾಶಿಪಂಡಿತ ದೇವರನ್ನು ಶಾಸನವೊಂದು ಸ್ತುತಿಸುತ್ತದೆ.[30]

ಲಕುಲೀಶ ಅಥವಾ ಲಾಕುಳ ಎಂಬ ಹೆಸರುಗಳು ಬರುವ ಕೆಲವು ಶಾಸನಗಳನ್ನು ನೋಡಬಹುದು. ಶ್ರೀಕಂಠಪಂಡಿತ ಭಟಾರರ ಶಿಷ್ಯರಾದ ಲಕುಳೀಶ್ವರ ಭಟಾರರು ಶಾಸನವೊಂದನ್ನು ಬರೆದಂತೆ ಒಂದೆಡೆ ಹೇಳಿದೆ.[31] ಲಾಕುಳಿದೇವ ಎಂಬ ಹೆಸರಿನ ಒಬ್ಬ ಸನ್ಯಾಸಿಯ ಹೆಸರು 10ನೇ ಶತಮಾನದ ಶಾಸನದಲ್ಲಿದೆ.[32] ಶಿರಾ ತಾಲ್ಲೂಕಿನ ಶಾಸನವೊಂದರಲ್ಲಿ ಜಗತ್ತು ಎಲ್ಲಿ ತನ್ನ ಹೆಸರನ್ನು ಮರೆತುಬಿಡುವುದೋ ಎಂದು ಹೆದರಿ ಲಕುಲೀಶನು ಚಿಲ್ಲುಕಾರ್ಯ

---

[20] Yaśastilaka and Indian Culture, p. 510.
[21] Gopinatharao : Elements of Hindu Iconography, p. 25.
[22] ಕರ್ಣಾಟಕ ಕವಿಚರಿತೆ, I (1961), ಪು. 479.
[23] EC. VII. Sk. 99, 1113 A.D.
[24] SII. IX. i. 235, 1141 A.D.
[25] P. K. Acharya : Architecture of Mānasāra, p. 633.
[26] EC. VI. Kp. 39, C. 700. A.D.
[27] BKI. I. i. 83, 1049 A.D.
[28] BKI. I. i. 85, 1049 A.D.
[29] KI. I. 24, 1148 A.D.
[30] SII. IX. i. 251, C. 1149 A.D.
[31] MAR (1938). P. 189, C. 908 A.D.
[32] BKI. I. i. 41, 969 A.D.

ಮುನಿಯಾಗಿ ಅವತರಿಸಿದನು ಎಂದು ಹೇಳಿದೆ.[33] ವಿಮಳಶಕ್ತಿಪಂಡಿತ ಎಂಬ ಒಬ್ಬ ಯತಿಯು ಪರಮತತ್ತ್ವಜ್ಞಾನ ಸರ್ವಜ್ಞತ್ವದಲ್ಲಿ ಲಕುಲೀಶನೇ ಆಗಿದ್ದನು ಎಂದು ಶಾಸನವೊಂದು ತಿಳಿಸುತ್ತದೆ.[34] ಈ ಶೈವರನ್ನು "ಲಗುಡಿಗ"ರೆಂದು ಅಲ್ಲಲ್ಲಿ ಕರೆದಿದೆ.[35] ಈ ಶೈವರ ಮುಖ್ಯಚಿಹ್ನೆ "ಲಕುಳ"ವೆಂಬ ಹೆಸರಿನ ಯೋಗದಂಡ.[35.1]

ಕಾಳಾಮುಖ ಎಂಬ ಹೆಸರು ಬರುವ ಕೆಲವು ಶಾಸನಗಳನ್ನು ಇಲ್ಲಿ ಹೆಸರಿಸಬಹುದು. ಶಿವಶಕ್ತಿ ಪಂಡಿತರೆಂಬುವರು "ಕಾಳಾಮುಖಾಗ್ರಗಣ್ಯ"ರಾಗಿದ್ದರೆಂದು ಶಾಸನವೊಂದು ತಿಳಿಸುತ್ತದೆ.[36] "ಕಾಳಾಮುಖ ನಿರಂಜನ ಪಂಡಿತ"ರೆಂಬ ಹೆಸರಿನ ಗುರುಗಳು ಮೋರಕಂಡಿಯ ಡವಕೇಶ್ವರ ದೇವಸ್ಥಾನಕ್ಕೆ ಆಚಾರ್ಯರಾಗಿದ್ದರು.[37] ಶ್ರೀಮತ್ ತ್ರಿಲೋಚನ ಪಂಡಿತದೇವರನ್ನು "ಶ್ರೀಮದಿಟ್ಟಗೆಯ ಸಂತತಿಯ ಭುಜಂಗಾವಳಿಯ ಶಕ್ತಿ ಪರ್ಷೆಯ ಕಾಳಾಮುಖಾಗ್ರಗಣ್ಯರ್" ಎಂದು ಕರೆದಿದೆ.[38] ಹನಸೆಯ ಪರಶುರಾಮೇಶ್ವರ ದೇವಸ್ಥಾನವು "ಕಾಳಾಮುಖ ಸ್ಥಾನಕರ್ತಾರ" ಮಠವಾಗಿತ್ತು.[39] ಉತ್ತರ ಭಾರತದ ಯಾವ ಶಾಸನದಲ್ಲಿಯೂ ಕಾಳಾಮುಖರ ಹೆಸರಿಲ್ಲದಿರುವುದು[40] ಈ ಪಂಗಡವು ಉತ್ತರ ಭಾರತದಲ್ಲಿ ಪ್ರಚುರವಾಗಿರಲಿಲ್ಲವೆಂಬುದನ್ನು ಸೂಚಿಸುತ್ತದೆ. ಇವರು ವಿಶೇಷವಾಗಿ ತಮಿಳುನಾಡಿನಲ್ಲಿ ಮತ್ತು ಕನ್ನಡನಾಡಿನಲ್ಲಿ, ತಕ್ಕಮಟ್ಟಿಗೆ ಆಂಧ್ರದಲ್ಲಿ ಪ್ರಬಲರಾಗಿದ್ದರು. ಹಿಂದಿನ ಪುದುಕ್ಕೋಟ್ಟೈ ಸಂಸ್ಥಾನದ ಕೊಡುಂಬಾಳೂರ್ ಎಂಬುದು 10ನೆಯ ಶತಮಾನದಲ್ಲಿ ಬಹು ಪ್ರಸಿದ್ಧವಾದ ಕಾಳಾಮುಖ ಕೇಂದ್ರವಾಗಿದ್ದಿತು.[41] ಎರಡನೆಯ ಪರಾಂತಕನ ಕಾಲದ (956-73) ಶಾಸನವೊಂದರಲ್ಲಿ 'ಅಸಿತ ವಕ್ತ್ರ' ಸನ್ಯಾಸಿಗಳಿಗಾಗಿ, ಎಂದರೆ ಕಾಳಾಮುಖರಿಗಾಗಿ ದತ್ತಿಗಳನ್ನು ಬಿಟ್ಟುಕೊಟ್ಟ ವಿಷಯವಿದೆ.[42] ಹೀಗೆಯೇ ಕಾಳಾಮುಖರನ್ನು ಹೆಸರಿಸುವ ಹಲವಾರು ಶಾಸನಗಳಿವೆ ತಮಿಳುನಾಡಿನಲ್ಲಿ.[43] ಆಂಧ್ರದಲ್ಲಿಯೂ ತಕ್ಕಮಟ್ಟಿಗೆ ಬಹು ಪ್ರಾಚೀನ ಕಾಲದಿಂದ ಕಾಳಾಮುಖರು ಪ್ರಬಲರಾಗಿದ್ದಂತೆ ತಿಳಿದು ಬರುತ್ತದೆ. ಪೂರ್ವ ಚಾಳುಕ್ಯರ ದೊರೆ ಅಮ್ಮ (945-70) ಎಂಬುವನ ಕಾಲದಲ್ಲಿ ವಿದ್ಯೇಶ್ವರ ಎಂಬ ಕಾಳಾಮುಖ ಗುರುವಿದ್ದನು.[44] ಕ್ರಿ.ಶ. 1084ರ ಒಂದು ಶಾಸನ ನ್ಯಾನ ಶಕ್ತಿ ಪಂಡಿತ ದೇವನನ್ನು ಶಿವನೇ ಕಾಳಾಮುಖನಾಗಿ ಅವತರಿಸಿದವನೆಂದು ಹೊಗಳಿದೆ. (SII. XX. No. 57). ದಾನಗಳಲ್ಲಿ ವಿದ್ಯಾದಾನ, ಆಹಾರದಾನಗಳೇ ಶ್ರೇಷ್ಠವೆಂದು ತಿಳಿದ ಅವನು ಅವುಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದನಂತೆ ("ದಾನಂಗಳೊಳಗೆ ವಿದ್ಯಾದಾನಮುಮಾಹಾರ ದಾನಮುಂ ಮೇಲೆಂದೀ ನ್ಯಾನಶಕ್ತಿ ಬ್ರತೀಂದ್ರಂ ತಾನೆಯ್ದೆ ನೆಗಱ್ತೆವಡೆದನವಱಿಂದ

---

[33] EC. XII. Si. 28, 943 A.D.

[34] KI. I. 20, C. 1110 A.D.

[35] SII. IX. i. 105, 1047 A.D.

[35.1] ಕ್ರಿ. ಶ. 1226ರ ಒಂದು ಶಾಸನದಲ್ಲಿ—"ಶ್ರೀಮಲ್ಲಕುಳೇಶ್ವರ ದೇವ ಮುಖಕಮಳ ವಿನಿರ್ಗತ ಸಕಲಶಾಸ್ತ್ರ ತತ್ವಜ್ಞ"ರಾದ ಕಳೇಶ ಬ್ರತಿಯನ್ನು ವರ್ಣಿಸುತ್ತ ಅವರ ಜಡೆ, ಲಾಕುಳ, ಮೇಖಲೆಗಳನ್ನು ಪ್ರಸ್ತಾಪಿಸುತ್ತದೆ. (SII. IX. i. No. 343).

[36] MAR (1929). P. 131, 1024 A.D.

[37] SII. IX. i. 133, 1068 A.D.

[38] EC. VII. Sk. 292, 1077 A.D.

[39] SII. IX. i. 184, 1111 A.D.

[40] Indian Historical Quarterly, Vol. 35, p. 131.

[41] T. V. Mahalingam : 'The Pāśupatas in South India' (Journal of Indian History, XXVII, p. 47.)

[42] ಅದೇ.

[43] ಅದೇ, ಪು. 48.

[44] ಅದೇ, ಪು. 50

ಜಗದೊಳ್"). ಕ್ರಿ. ಶ. 1115ರ ಶಾಸನವೊಂದರಲ್ಲಿ ದೇವಸ್ಥಾನವೊಂದರ ಸ್ಥಾನಪತಿಯಾಗಿದ್ದ ಕಾಳಾಮುಖ ಗುರು ಮಲ್ಲಿಕಾರ್ಜುನನ ಹೆಸರಿದೆ.[45] ಶ್ರೀಶೈಲವು ಒಂದು ಸುಪ್ರಸಿದ್ಧ ಕಾಳಾಮುಖ ಕೇಂದ್ರವಾಗಿದ್ದಿತು.[46] ಹೀಗೆ ಕಾಳಾಮುಖರು ಹೆಚ್ಚುಕಡಮೆ ಇಡೀ ದಕ್ಷಿಣ ಭಾರತದಲ್ಲೆಲ್ಲಾ ಒಮ್ಮೆ ಪ್ರಭಾವಶಾಲಿಗಳಾಗಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ.

## ಪರ್ಷೆ, ಆಮ್ನಾಯ, ಸಂತತಿ

ಜೈನಗುರುಗಳು ತಾವು ಸಂಬಂಧಿಸಿರುವ ಸಂಘ, ಗಣ, ಗಚ್ಛ, ಅನ್ವಯಾದಿಗಳನ್ನು ಹೇಳಿಕೊಳ್ಳುವಂತೆ ಶೈವ ಗುರುಗಳೂ ತಮ್ಮ 'ಪರ್ಷೆ', 'ಆಮ್ನಾಯ' ('ಆವಳಿ') 'ಸಂತತಿ'ಗಳನ್ನು ಹೇಳಿಕೊಳ್ಳುತ್ತಾರೆ.[47] ಪರ್ಷೆಗಳಲ್ಲಿ (ಪರ್ಷೆ ಬಹುಶಃ ಪರಿಷತ್‌ನ ತದ್ಭವ) ಬಹು ಪ್ರಸಿದ್ಧವಾದುವು ಎರಡು—ಶಕ್ತಿಪರ್ಷೆ ಮತ್ತು ಸಿಂಹಪರ್ಷೆಗಳು. ಶಕ್ತಿಪರ್ಷೆಯಲ್ಲಿ ಎರಡು 'ಆಮ್ನಾಯ' ಅಥವಾ 'ಆವಳಿ'ಗಳು—ಒಂದು, 'ಪರ್ವತಾಮ್ನಾಯ' ಅಥವಾ 'ಪರ್ವತಾವಳಿ[48]'; ಮತ್ತೊಂದು, 'ಭುಜಂಗಾವಳಿ'.[48.1] ಇಲ್ಲಿ 'ಪರ್ವತ'ವೆಂದರೆ ಶ್ರೀ ಪರ್ವತ ಅಥವಾ ಶ್ರೀಶೈಲ. 'ಭುಜಂಗ' ಎಂದರೆ ಏನೋ ಗೊತ್ತಿಲ್ಲ (ಪಲ್ಲವರ ಕಾಲದ ಶಾಸನವೊಂದರಲ್ಲಿ ಬರುವ ರುದ್ರಬೊಜಂಗ[49] ಬಹುಶಃ ಈ ಭುಜಂಗಾವಳಿಗೆ ಸೇರಿದವನಿರಬಹುದು). ಈ ಶಕ್ತಿಪರ್ಷೆಯ ಭುಜಂಗಾವಳಿಗೆ ಸೇರಿದ ಸಂತತಿಯೇ 'ಮೂವರ ಕೋಣೆಯ ಸಂತತಿ'. ಒಂದು ದೇವಸ್ಥಾನದ ಅಥವಾ ಮಠದ ಸ್ಥಾನಪತಿಯ ನೇತೃತ್ವದಲ್ಲಿ ಇನ್ನೊಂದೆಡೆ ಅವನ ಮಠದ ಅಂಗವಾಗಿ ಸ್ಥಾಪಿತವಾದ ಮಠವನ್ನು 'ಸಂತತಿ' ತಿಳಿಸುವಂತೆ ಕಾಣುತ್ತದೆ. ಉದಾಹರಣೆಗೆ 'ಸಾರಥಿಯ ಮಠದ ಸಂತತಿಯ ಮಠ',[50] 'ಶ್ರೀಪರ್ವತದಗಸ್ತ್ಯೇಶ್ವರದ ಸಂತತಿಯ ಮಠ'[51]–ಇವುಗಳನ್ನು ನೋಡಬಹುದು. 'ಮೂವರ ಕೋಣೆ' ಎಂಬಲ್ಲಿ 'ಮೂವರು' ಎಂಬುದು ಮೂವರು ದೇವತೆಗಳನ್ನು ಸೂಚಿಸುತ್ತದೆ. ಮೂವರ ಕೋಣೆಯ ಸಂತತಿಯವನಾದ ವಾಮಶಕ್ತಿಗೆ ಕೊಟ್ಟ ದಾನಶಾಸನದಲ್ಲಿ "ಕೋಣೈಯ್ಯ ಆ ಮೂವರ ದೇವರ" (=ಕೋಣೆಯ ಮೂವರು ದೇವರ) ಎಂದು ಹೇಳಿ 'ಆ ಮೂವರ ದೇವರ ನೈವೇದ್ಯಕ್ಕೆ' ದತ್ತಿ ಬಿಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[52] ಆ ಮೂವರು ದೇವತೆಗಳು ಯಾರು ಎಂಬುದು ಸ್ಪಷ್ಟವಾಗುವುದಿಲ್ಲ. ಬಹುಶಃ ಅದೇ ಶಾಸನದಲ್ಲಿ ಬರುವ 'ಮಹಾದೇವೇಶ್ವರ', '.ಳಪೇಶ್ವರ', 'ಕೇಶವಮೂರ್ತಿ'ಗಳಿದ್ದರೂ ಇರಬಹುದು. ಮಧ್ಯದ ಹೆಸರು ಬ್ರಹ್ಮನನ್ನು ಸೂಚಿಸುವುದಾದರೆ—(ಇದು ಅಸಂಭವ), ಆ ಮೂವರು ಬೇರೆ ಯಾರೂ ಅಲ್ಲ, ತ್ರಿಮೂರ್ತಿಗಳೇ ಆಗಿರುತ್ತಾರೆ.

---

45 ಅದೇ

46 ಅದೇ.

47 'ಪರ್ಷೆ'ಯು ಜೈನರ 'ಸಂಘ'ಕ್ಕೆ, 'ಆಮ್ನಾಯ'ವು 'ಗಣ' ಅಥವಾ 'ಗಚ್ಛ'ಕ್ಕೆ, 'ಸಂತತಿ'ಯು 'ಅನ್ವಯ'ಕ್ಕೆ ಸಮಾನವೆಂದು ಸ್ಥೂಲವಾಗಿ ಭಾವಿಸಬಹುದು (ಜೈನರ ಸಂಘ, ಗಣ, ಗಚ್ಛ, ಅನ್ವಯಗಳಿಗೆ "ಜೈನಧರ್ಮ" ಎಂಬ ಅಧ್ಯಾಯವನ್ನು ನೋಡಿ.)

48 EC. VII. Sk. 316, 1117 A.D.

48.1 EC. VII. Sk. 292, 1077 A.D.

49 SII. VII. No. 535.

50 EC. VII. SK. 276, 1143 A.D.

51 SII. IX. i. 128, 1065 A.D.

52 EC. VII. SK. 108, 1164 A.D.

ತಮಿಳುನಾಡಿನಲ್ಲಿ ಪರಾಂತಕ II (956-73)ನ ಕಾಲದ ಸಾಮಂತನೊಬ್ಬ "ಮೂವರ್ ಕೋಯಿಲ್" ಎಂದು ಕರೆಯಲಾಗುವ ದೇವಸ್ಥಾನವೊಂದನ್ನು ಕಟ್ಟಿಸಿ ಕಾಳಾಮುಖರಿಗೆ ಬಿಟ್ಟುಕೊಟ್ಟಂತೆ ಶಾಸನವೊಂದು ತಿಳಿಸುತ್ತದೆ. ( Indian Historical Quarterly, Vol. 27, pp. 47-8 ) ಬಳ್ಳಾರಿ ಜಿಲ್ಲೆಯ ಹಡಗಲಿಯ ಶೈವ ಶಾಸನವೊಂದರಲ್ಲಿ "ಮೂರ್ಮನೆವಾರ್ತೆಗರ ಮನೆ ಪೊಕ್ಕಡೆ ಪನ್ನೆರಡು ಗದ್ಯಾಣ ದಂಡ" ಎಂದಿದೆ.[53] ಈ 'ಮೂರ್ಮನೆವಾರ್ತೆಗ'ರು ಬಹುಶಃ ಮೂವರ ಕೋಣೆಯ ಸಂತತಿಯವರೇ ಆಗಿರಬಹುದು. ಬೊಂಬಾಯಿ ಕರ್ನಾಟಕದ ಶಾಸನವೊಂದರಲ್ಲಿ ಅಯ್ವತ್ತು ಒಕ್ಕಲುಗಳಿದ್ದ 'ಕೋಣೆವಂಶ'ದವರ ಹೆಸರು ಬರುತ್ತದೆ. ಅಲ್ಲಿಯೇ 'ಗೊರವರ ಚಿಣ್ಣ'ನ ಹೆಸರೂ ಬರುತ್ತದೆ.[54] ಇವರು ಬಹುಶಃ ಕಾಳಾಮುಖರ ಅನುಯಾಯಿಗಳಾಗಿದ್ದು 'ಮೂವರ ಕೋಣೆಯ ಸಂತತಿ'ಯವರ ಗುಂಪಿಗೆ ಸೇರಿದವರಾಗಿದ್ದರೆಂದು ಊಹಿಸಬಹುದು. 'ಮೂವರ ಕೋಣೆಯ ಸಂತತಿ'ಗೆ 'ದೇವವ್ರಾತಮುನಿಸಂತತಿ' ಎಂಬುದು ಮತ್ತೊಂದು ಹೆಸರು.[55]

ಶಕ್ತಿಪರ್ಷೆಯ ಭುಜಂಗಾವಳಿಯಲ್ಲಿ 'ಇಟ್ಟಿಗೆಯ ಸಂತತಿ' ಎಂಬುದು ಮತ್ತೊಂದು ಶಾಖೆ. ಈ ಪರ್ಷೆಯ ಗುರುಗಳೆಲ್ಲರನ್ನೂ ಕಾಳಾಮುಖರೆಂದು ಕರೆದಿದೆ. ಇವರು ಲಕುಳೀಶನ ಭಕ್ತರು. ಬಹುಶಃ ಇದೇ ಪರ್ಷೆಯ ಪರ್ವತಾವಳಿಯ ಅಗಸ್ತ್ಯೇಶ್ವರದ ಸಂತತಿಯ ಮಠದ ಹೆಸರು ಒಂದು ಕಡೆ ಕಂಡುಬರುತ್ತದೆ.[56] "ಶ್ರೀಪರ್ವತದ ಸಿದ್ಧವಟ್ಟದಾಚಾರ್ಯ" ಎಂಬಲ್ಲಿ ಸಿದ್ಧವಟ್ಟ ಅಥವಾ ಸಿದ್ಧಪಟ್ಟ ಎಂಬುದು ಶ್ರೀಪರ್ವತಕ್ಕೆ ಸೇರಿದ ಯಾವುದೋ ಶಾಖೆಯ ಮೂಲ ಮಠವನ್ನು ಸೂಚಿಸುವಂತೆ ಕಾಣಿಸುತ್ತದೆ. ಸಿದ್ಧವಟ್ಟವು ಶ್ರೀ ಶೈಲದ ದಕ್ಷಿಣದ್ವಾರವೆನ್ನಿಸಿಕೊಂಡಿತ್ತೆಂದು ಲಕ್ಕಣ್ಣದಂಡೇಶನ 'ಶಿವತತ್ವಚಿಂತಾಮಣಿ'ಯು ಹೇಳುತ್ತದೆ (38·1). ಕರ್ನೂಲ್ ಜಿಲ್ಲೆಯ 'ಸಿದ್ಧೋಟ್' ಎಂಬುದು ಬಹುಶಃ ಮೇಲಿನ ಸಿದ್ಧವಟ್ಟವಾಗಿರಬಹುದು.

ಶಕ್ತಿಪರ್ಷೆಯಷ್ಟೇ ಪ್ರಸಿದ್ಧವಾದುದು ಸಿಂಹಪರ್ಷೆ. ಇದರ ವಿವರಗಳು ಶಾಸನಗಳಿಂದ ಅಷ್ಟಾಗಿ ತಿಳಿದುಬರುವುದಿಲ್ಲ. "ಎಳೆಮೇಲ ಸಿಂಹಪರ್ಷನ್ ಮಂಡಲಿ"ಯ ಮಲೆಯಾಳ ಪಂಡಿತದೇವರ,[57] ಸಿಂಹ ಪರ್ಷೆಯ ಮಲೆಯಾಳ ಪಂಡಿತರ (ಇಬ್ಬರೂ ಒಂದೇ ಆಗಿರಬಹುದು),[58] "ಶ್ರೀ ಸಿಂಹಪರ್ಷೆ ಅಭಿನವ ಪಾಶುಪತಮಠ"ದ ವಿದ್ಯಾರಾಶಿ ಪಂಡಿತರ[59] ಹೆಸರುಗಳು ಶಾಸನಗಳಲ್ಲಿ ಬರುತ್ತವೆ. ಇವರೆಲ್ಲರೂ ಲಕುಳೀಶನ ಭಕ್ತರು. ಪಾಶುಪತ ಸಂಪ್ರದಾಯಕ್ಕೆ ಸೇರಿದವರು.

"ಶಾಲೆಯ ಪರ್ಷೆ"ಎಂಬ ಮತ್ತೊಂದು ಪರ್ಷೆಯಿದ್ದಂತೆ ತಿಳಿದುಬರುತ್ತದೆ. ಅದರ ಅನುಯಾಯಿಗಳು ಕಾಳಾಮುಖರಾಗಿದ್ದಂತೆ ಕಂಡುಬರುವುದಿಲ್ಲವೆನ್ನುತ್ತಾರೆ, ಡಾ|| ಎ. ವೆಂಕಟಸುಬ್ಬಯ್ಯನವರು.[60]

---

[53] ಕಹಟರಾಳ ಕೃಷ್ಣರಾಯ : ಕರ್ನಾಟಕ ಲಾಕುಳಶೈವರ ಇತಿಹಾಸ, ಪು. 49.

[54] BKI. I. ii. 133, 1087 A.D.

[55] A. Venkatasubbaiah : A Twelfth Century University in Mysore, p. 22.

[56] SII. IX. i. 128, 1065 A.D.

[57] EI. XII. p. 274, 1077 A.D.

[ಎಳೆಮಲೆಯ ಗುರು ಶಾಂತದೇವ (ಸು. 1565) ಎಂಬ ಒಬ್ಬ ವಚನಸಂಕಲನಕಾರನಿದ್ದನು. (ಕರ್ಣಾಟಕ ಕವಿಚರಿತೆ, II, ಪು. 298). ಕಪೋತವಾಕ್ಯದ ಕರ್ತೃ ಎರಮಲೆಯ ಈಶ್ವರನನ್ನು ಪ್ರಾರ್ಥಿಸಿದ್ದಾನೆ. ಇವೆರಡೂ 'ಎಳೆಮೆಲ'ವನ್ನು ಸೂಚಿಸುವಂತೆ ಕಾಣುತ್ತದೆ. ಎಳಮಲೆ ಎಂಬುದು ಉತ್ತರ ಕರ್ನಾಟಕದಲ್ಲಿ ಒಂದು ಗ್ರಾಮ.]

[58] SII. IX. I. 101, 1045 A.D.

[59] SII. IX. i. 251, C. 1149 A.D.

[60] A Twelfth Century University in Mysore, p. 22.

## ಶೈವಧರ್ಮದ ಶಾಖೆಗಳು

ನಮ್ಮ ಈ ಪ್ರಬಂಧದುದ್ದಕ್ಕೂ ಲಕುಲೀಶ-ಪಾಶುಪತ ಮತ್ತು ಕಾಳಾಮುಖಗಳೆರಡೂ ಒಂದೇ ಎಂದೂ, ಅವು ಶೈವಧರ್ಮಕ್ಕೆ ಇರುವ ಇನ್ನೆರಡು ಹೆಸರುಗಳೆಂದೂ ಕಲ್ಪಿಸಿಕೊಂಡು ವಿಷಯನಿರೂಪಣೆ ಮಾಡಿದ್ದೇವೆ. ಇದನ್ನು ಮೊದಲು ಸ್ಪಷ್ಟಪಡಿಸುತ್ತೇವೆ. ಹರಿಭದ್ರಸೂರಿಯ ಷಡ್ದರ್ಶನ ಸಮುಚ್ಚಯದ ವ್ಯಾಖ್ಯಾನಕಾರ ಹರಿಭದ್ರನ ಪ್ರಕಾರ ಶೈವ, ಪಾಶುಪತ, ಮಹಾವ್ರತಧರ, ಕಾಳಾಮುಖಗಳು ಶೈವದ ನಾಲ್ಕು ಶಾಖೆಗಳು.[61] ಯಾಮುನಾಚಾರ್ಯನ ಆಗಮಪ್ರಾಮಾಣ್ಯದಲ್ಲಿ ಶೈವ, ಪಾಶುಪತ, ಕಾಪಾಲಿಕ, ಕಾಳಾಮುಖರ ಹೆಸರಿವೆ.[62] ಶಂಕರ ಬ್ರಹ್ಮಸೂತ್ರಭಾಷ್ಯದ ಮೇಲೆ ವ್ಯಾಖ್ಯಾನಮಾಡುತ್ತಾ ವಾಚಸ್ಪತಿಯು ತನ್ನ ಭಾಮತಿ ಯಲ್ಲಿ ಶೈವ, ಪಾಶುಪತ, ಕಾರುಣಿಕ ಸಿದ್ಧಾಂತಿ, ಕಾಪಾಲಿಕರನ್ನು ಹೆಸರಿಸುತ್ತಾನೆ.[63] ರಾಮಾನುಜರು ಕಾಪಾಲ, ಕಾಳಾಮುಖ, ಪಾಶುಪತ ಮತ್ತು ಶೈವರನ್ನು ಹೆಸರಿಸುತ್ತಾರೆ.[64] ಸೂತಸಂಹಿತೆಯಲ್ಲಿ ಕಾಪಾಲಿಕ, ಲಾಕುಲ, ಪಾಶುಪತ, ಸೋಮ ಮತ್ತು ಭೈರವರ ಹೆಸರಿದೆ.[65] ಕನ್ನಡ ವಚನಕಾರ ಚನ್ನಬಸವಣ್ಣನವರು ಕಾಳಾಮುಖ ಮತ್ತು ಪಾಶುಪತಗಳನ್ನು ಪ್ರತ್ಯೇಕವಾಗಿ ಹೇಳುತ್ತಾರೆ.[66] ಬ್ರಹ್ಮಶಿವನು ಕಾಳಾಮುಖ, ಕಾಪಾಲ, ಪಾಶುಪತ ಮತ್ತು ಶೈವರನ್ನು ಹೆಸರಿಸುತ್ತಾನೆ.[67] ಸಾಯಣಮಾಧವರು ಲಕುಲೀಶ-ಪಾಶುಪತವನ್ನು ಹೇಳಿದ್ದಾರೆ. ಕಾಳಾಮುಖರನ್ನು ಅವರು ಹೆಸರಿಸಿಲ್ಲ.

ಹಿಂದೆ ಉದ್ಧರಿಸಿದ ಸಂಸ್ಕೃತ ಮೂಲಗಳನ್ನು ನೋಡಿದರೆ ಬಹು ಕಡೆ ಪಾಶುಪತವೂ ಕಾಳಾಮುಖವೂ ಬೇರೆಬೇರೆ ಎಂದು ಅಭಿಪ್ರಾಯಪಟ್ಟರೆ, ಒಂದೆಡೆ ಮಾತ್ರ ಪಾಶುಪತರೂ ಮತ್ತು ಲಾಕುಲರೂ ಬೇರೆಬೇರೆ ಎಂದು ಭಾವಿಸಿದೆ. ಒಂದೆರಡು ಕಡೆ ಕಾಳಾಮುಖರ ಹೆಸರನ್ನೇ ಹೇಳಿಲ್ಲ. ಅದರಲ್ಲೂ ಮಾಧವರು ಕಾಳಾ ಮುಖರ ಹೆಸರನ್ನು ಹೇಳದಿರುವುದು ಗಮನಾರ್ಹ. ಒಂದು ವಿಷಯವಂತೂ ಸ್ಪಷ್ಟ. ಹೆಚ್ಚುಕಡಮೆ ಎಲ್ಲರೂ—ಸೂತಸಂಹಿತೆಯನ್ನು ಬಿಟ್ಟು—ಲಕುಲೀಶ ಮತ ಮತ್ತು ಪಾಶುಪತ ಮತ ಒಂದೇ ಎಂದು ಒಪ್ಪಿಕೊಳ್ಳುತ್ತಾರೆ. ಡಾ|| ಎಸ್. ಎನ್. ದಾಸಗುಪ್ತರೂ ಇದೇ ತೀರ್ಮಾನಕ್ಕೆ ಬರುತ್ತಾರೆ. ಲಕುಲೀಶ-ಪಾಶುಪತದ ಧರ್ಮ ಗ್ರಂಥಗಳು ದೊರಕಿದಂತೆ ಕಾಳಾಮುಖರ ಧರ್ಮಗ್ರಂಥಗಳು ಪ್ರತ್ಯೇಕವಾಗಿ ದೊರೆತಿಲ್ಲ. ಅವರ ಧರ್ಮಗ್ರಂಥ ಗಳೆಲ್ಲವೂ ನಾಶವಾಗಿವೆಯೆಂದು ಹೇಳಲು ಸಾಧ್ಯವೆ? ಅವರ ಧರ್ಮಗ್ರಂಥಗಳು ಲಕುಲೀಶ—ಪಾಶುಪತದ ಧರ್ಮಗ್ರಂಥಗಳಿಂದ ಬೇರೆಯೆ? ಈ ವಿಷಯಗಳ ಮೇಲೆ ಶಾಸನಗಳು ಯಾವ ಬೆಳಕನ್ನು ಬೀರುತ್ತವೆ, ನೋಡೋಣ.

ಶಾಸನಗಳಲ್ಲಿ ಎಲ್ಲಿಯೂ ಲಕುಲೀಶ-ಪಾಶುಪತ ಮತ್ತು ಕಾಳಾಮುಖಗಳೆರಡೂ ಬೇರೆಬೇರೆ ಎಂದು ಸ್ಪಷ್ಟವಾಗಿ ಹೇಳಿಲ್ಲ. ಹೆಸರುಗಳನ್ನು ನೋಡಿದರೆ, ಇಬ್ಬರ ಹೆಸರುಗಳೂ ಶಕ್ತಿ, ಪಂಡಿತ, ದೇವ ಎಂದು

---

61 S. N. Dasgupta : A History of Indian Philosophy, V, p. 9.

62 Yaśastilaka and Indian Culture, p. 234.

63 S. N. Dasgupta : A History of Indian Philosophy, V, pp. 69–70.

64 ಅದೇ, ಪು. 70.

65 ಅದೇ, ಪು. 50.

66 ಶ್ರೀ ಚನ್ನಬಸವಣ್ಣನವರ ವಚನಗಳು (1932) ಪು, 19, 25, 33. ಚನ್ನಬಸವಣ್ಣನವರ ಪ್ರಕಾರ ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖಿ, ಪಾಶುಪತಿ-ಇವರು "ಷಡ್ದರ್ಶನದ ಶೈವ ಕರ್ಮಿಗಳು".

67 ಸಮಯಪರೀಕ್ಷೆ, 14.50.

ಕೊನೆಯಾಗುತ್ತವೆ. ಇಬ್ಬರನ್ನೂ 'ಗೊರವ'ರೆಂದೂ[68], 'ನೈಷ್ಠಿಕತಪೋಧನ'ರೆಂದೂ ಕರೆಯುತ್ತಾರೆ. ಬಹುಶಃ ಕಾಳಾಮುಖರಿಗೆ ಪ್ರತ್ಯೇಕವಾದ ಧರ್ಮಗ್ರಂಥಗಳಿದ್ದಿಲ್ಲ. ಅಷ್ಟೇ ಅಲ್ಲ, ಅವರಿಗೂ ಲಕುಲೀಶ-ಪಾಶುಪತರಂತೆಯೇ "ಲಾಕುಲಾಗಮ"ವೇ ಆಧಾರ ಗ್ರಂಥ. ಉದಾಹರಣೆಗೆ ಸೂಂಡಿಯ ಸ್ಥಾನಪತಿಗಳು ಲಾಕುಳಾಗಮದಲ್ಲಿ ಪ್ರವೀಣರಾಗಿದ್ದರು. ಅಲ್ಲಿಯ ಸ್ಥಾನಪತಿಗಳು ನೈಷ್ಠಿಕರೂ, ಕಾಳಾಮುಖರೂ ಆಗಿರಬೇಕು ಎಂಬ ನಿಯಮವನ್ನು ಶಾಸನಗಳು ವಿಧಿಸಿವೆ.[69] ಪಾಶುಪತರು ಹೇಗೆ ಲಕುಲೀಶ್ವರನ ಮುಖದಿಂದ ಹೊರಟ ಶಾಸ್ತ್ರದ ಅನುಯಾಯಿಗಳೋ[70] ಹಾಗೆಯೇ ಕಾಳಾಮುಖರೂ ಕೂಡ ಆಗಿದ್ದರು. ಅಷ್ಟೇ ಅಲ್ಲ, ಕೆಲವು ಕಾಳಾಮುಖ ಗುರುಗಳಂತೂ ಸರ್ವಜ್ಞತ್ವದಲ್ಲಿ ಸ್ವತಃ ಲಕುಲೀಶರೇ ಆಗಿದ್ದರು.[71] ಸುರೇಶ್ವರ ಪಂಡಿತ ರೆಂಬುವರು 'ಕಾಳಾಮುಖಸಮಯಸರೋವರರಾಜಹಂಸ'ರೂ 'ಲಾಕುಳಸಿದ್ಧಾಂತನೈಯಾಯಿಕನಳಿನೀ ದಿವಾಕರ'ರೂ ಆಗಿದ್ದರೆಂದು ಶಾಸನವೊಂದು ಪ್ರಶಂಸಿಸುತ್ತದೆ.[72] ಲಾಕುಳರೂ ಮತ್ತು ಕಾಳಾಮುಖರೂ ನಡೆಯಿಸಿದ ಸಾಮಾಜಿಕ ಚಟುವಟಿಕೆಗಳೂ ಒಂದೇ ರೀತಿಯವು.

ಲಕುಲೀಶ-ಪಾಶುಪತರಿಗೂ ಕಾಳಾಮುಖರಿಗೂ ಅಂತಹ ಪ್ರಧಾನವಾದ ವ್ಯತ್ಯಾಸವೇನೂ ಇಲ್ಲ ವೆಂಬುದಕ್ಕೆ ಮತ್ತೊಂದು ಪ್ರಬಲವಾದ ಆಧಾರ ಸಾಯಣಮಾಧವರ ಸರ್ವದರ್ಶನ ಸಂಗ್ರಹ. ಇದರಲ್ಲಿ ಕಾಳಾಮುಖರ ಹೆಸರಿಲ್ಲದಿರುವುದು ಅತ್ಯಂತ ಗಮನಾರ್ಹವಾದ ಸಂಗತಿಯೆಂದು ಹಿಂದೆಯೇ ತಿಳಿಸಲಾಯಿತು. ಕಾಳಾಮುಖರ ಹೆಸರು ಸೂಚಿಸುವಂತೆ ಅವರು ಧರಿಸುತ್ತಿದ್ದ ಚಿಹ್ನೆಯಿಂದ, ಬಹುಶಃ ಮುಖದ ಮೇಲಿನ ಕಪ್ಪು ಗೆರೆಯಿಂದ ಅವರು ಪಾಶುಪತರಿಂದ ಭಿನ್ನರಿರಬಹುದು ("ಅಸಿತ ವಕ್ತ್ರ"ರೆಂದು ಶಾಸನವೊಂದು ಅವರನ್ನು ಬಣ್ಣಿಸುತ್ತದೆ.) ತಾತ್ವಿಕವಾಗಿ ಅವರಿಗೂ ಲಕುಲೀಶ-ಪಾಶುಪತರಿಗೂ ಯಾವ ವ್ಯತ್ಯಾಸವೂ ಇರುವಂತೆ ಕಾಣುವುದಿಲ್ಲ. ಇದ್ದರೂ ಅದು ಅತ್ಯಲ್ಪವೆಂದೇ ನಮ್ಮ ಭಾವನೆ. ಡಾ|| ಟಿ. ವಿ. ಮಹಾಲಿಂಗಂ ಅವರೂ ಕೂಡ ಕಾಳಾಮುಖವು ಪಾಶುಪತದ ಪ್ರಭೇದಗಳಲ್ಲಿ ಒಂದು ಎಂದು ಭಾವಿಸುತ್ತಾರೆ.[73] ಆದ್ದರಿಂದ ಈ ನಮ್ಮ ವಿವೇಚನೆಯಲ್ಲಿ ಲಕುಲೀಶ-ಪಾಶುಪತ ಮತ್ತು ಕಾಳಾಮುಖ ಎಂಬ ಹೆಸರುಗಳನ್ನು ಶೈವಕ್ಕೆ ಸಮಾನವಾಗಿ ಸ್ವೀಕರಿಸಿದ್ದೇವೆ. ಸದ್ಯಕ್ಕೆ ಕಾಳಾಮುಖ ಮತ್ತು ಲಕುಲೀಶ-ಪಾಶುಪತಗಳೆರಡೂ ಶೈವಧರ್ಮದ ಎರಡು ಶಾಖೆ

---

68 'ಗೊರವ' ಎಂಬ ಮಾತಿಗೆ ಈಗ ಹೀನಾರ್ಥ ಬಂದಿದ್ದರೂ ಶಾಸನಗಳಲ್ಲಿ ಗೌರವಾರ್ಥದಲ್ಲಿ ಆ ಪದವನ್ನು ಬಳಸಿದೆ. ಅದರ ನಿಷ್ಪತ್ತಿಯೂ ಇದನ್ನೇ ಸಮರ್ಥಿಸುತ್ತದೆ. ಗುರು ಎಂಬ ಸಂಸ್ಕೃತ ಪದದ ಬಹುವಚನದ ರೂಪ 'ಗುರವಃ' ಎಂಬುದೇ ಗುರವ, ಗೊರವ ಎಂದಾಗಿ ಅದಕ್ಕೆ 'ಅಡಿಗಳ್' ಎಂಬುದು ಸೇರಿ 'ಗುರವಡಿಗಳ್' ಅಥವಾ 'ಗೊರವಡಿಗಳ್' ಎಂದಾಗುತ್ತದೆ. ಡಾ|| ಸಾಲೆತಊ್ರ್ ಅವರು ತಮ್ಮ ಲೇಖನವೊಂದರಲ್ಲಿ ("The Sthānikas and their Historical Importance", Bombay University Journal, VII. i. p. 5) ಗೊರವ ಎಂಬುದು ಸಂಸ್ಕೃತದ ಗುರು+ಅಡಿಯ ತದ್ಭವವೆಂದೂ, ಗೊರವ ಎಂದರೆ ದೇವಸ್ಥಾನದ "ಗುರು ಅಥವಾ ಭಗವಂತನ ಪಾದದ ಸಮೀಪದಲ್ಲಿರುವವನು ಎಂದರ್ಥ"ವೆಂದೂ ಹೇಳುತ್ತಾರೆ. ಇದು ಬಹು ವಿಚಿತ್ರವಾದ ಮತ್ತು ತಪ್ಪಾದ ವಿವರಣೆ ಎಂದು ಬೇರೆ ಹೇಳಬೇಕಾಗಿಲ್ಲ.

ಸಂಸ್ಕೃತದ ಪ್ರಥಮಾವಿಭಕ್ತಿಯ ಬಹುವಚನರೂಪವು ಕನ್ನಡದಲ್ಲಿ ವಿಸರ್ಗವನ್ನು ಕಳೆದುಕೊಂಡು ತದ್ಭವವಾಗುವ ನಿದರ್ಶನಗಳು ಹಲವಿವೆ: ಹನುಮಂತ, ವಿದ್ವಾಂಸ, ಶ್ವಾನ ಇತ್ಯಾದಿ.

69 EI. XV. P. 97, 1074 A.D; EI. XV. P. 87, 1058 A.D.

70 SII. IX. i. 251, C. 1149 A.D.

71 EC. VII. Sk. 94, 1094 A.D.

72 SII. IX. i. 119, 1057 A.D.

73 'The Pāśupatas in South India' (Journal of Indian History, Vol. 27, p. 46).

ಗಳೆಂದು ಭಾವಿಸಬಹುದು.[73.1] ಕ್ರಿ. ಶ. 1189ರ ಒಂದು ಶಾಸನದಲ್ಲಿ 'ಕಾಳಾಮುಖಮುನೀಶ್ವರ'ನಾಗಿದ್ದ ಬೊಂತೆಯ ದೇವನಿಗೆ 'ಸಿದ್ಧಲಕುಳೀಶ್ವರ' ಎಂಬ ಇನ್ನೊಂದು ಹೆಸರಿತ್ತೆಂಬುದನ್ನು ಇಲ್ಲಿ ನೆನೆಯಬಹುದು. (SII. XV. No. 73).

ಕಾಳಾಮುಖ ಸಮಯವನ್ನು 'ಎಕ್ಕೋಟಿ ಸಮಯ'ವೆಂದೂ, ಕಾಳಾಮುಖ ಮಠವನ್ನು 'ಎಕ್ಕೋಟಿ ಮಠ'ವೆಂದೂ ಅನೇಕ ಶಾಸನಗಳು ಕರೆದಿವೆ.[74] ಶಾಸನಗಳು ತಮ್ಮ ಫಲಶ್ರುತಿಯಲ್ಲಿ ಶಾಸನವನ್ನು ಮೀರಿದವರಿಗೆ 'ಎಳ್ಕೋಟಿ ಮುನೀಂದ್ರ"ರನ್ನು ಕೊಂದ ಪಾಪವು ಬರುತ್ತದೆ ಎಂದು ಹೇಳುತ್ತವೆ. ಈ 'ಎಳ್ಕೋಟಿ'ಯೇ ಆ 'ಎಕ್ಕೋಟಿ'. "ಮಾಧವಾಚಾರ್ಯನ 'ಸರ್ವದರ್ಶನ ಸಂಗ್ರಹ'ದಲ್ಲಿ ಮಹೇಶ್ವರ ದರ್ಶನಗಳಲ್ಲೊಂದಾದ ಶೈವ ಮತವನ್ನು ಹೇಳಿದೆ. ಅದರಲ್ಲಿ, ಪಶುಗಳಲ್ಲಿ ಮೂರು ಭೇದಗಳು, (1) ವಿಜ್ಞಾನಾಕಲ (2) ಪ್ರಲಯಾಕಲ (3) ಸಕಲ. ವಿಜ್ಞಾನಾಕಲರು ಮಲಯುಕ್ತರು, ಪ್ರಲಯಾಕಲರು ಮಲಕರ್ಮಯುಕ್ತರು, ಸಕಲರು ಮಲಮಾಯಾಕರ್ಮಯುಕ್ತರು. ಇವುಗಳಲ್ಲಿ ಮೊದಲನೆಯ ವರ್ಗದ ವಿಜ್ಞಾನಾಕಲರಲ್ಲಿ ಪುನಃ ಎರಡು ಬಗೆ-ಸಮಾಪ್ತಕಲುಷರು ಮತ್ತು ಅಸಮಾಪ್ತಕಲುಷರು. ಸಮಾಪ್ತಕಲುಷರೇ ಪರಮೇಶ್ವರನ ಅನುಗ್ರಹದಿಂದ ವಿದ್ಯೇಶ್ವರ ಪದವಿಗೆ ಬರುವರು. ಅಸಮಾಪ್ತಕಲುಷರು ಮಂತ್ರಗಳಾಗುವರು. ಈ ಮಂತ್ರಗಳು ಏಳುಕೋಟಿ. ಮಂತ್ರೇಶ್ವರರು ಏಳುಕೋಟಿ ಕೋಟಿಗಳು. ಅಂತೆಯೇ ಈ ಮತಕ್ಕೆ 'ಎಕ್ಕೋಟಿ ಸಮಯ' ಎಂದು ಹೆಸರು. ಇಂದಿಗೂ ಕರ್ನಾಟಕದಲ್ಲಿ ಮೈಲಾರನ ಒಕ್ಕಲರು 'ಏಳುಕೋಟಿ ಏಳುಕೋಟಿ ಉಘೇ ಚಾಂಗು ಭಲಾ' ಎಂದು ಶಿವನ ಜಯಘೋಷವನ್ನು ಮಾಡುತ್ತಾರೆ. ಇದುವೆ ಪೂರ್ವದ ಲಾಕುಳ ಸಿದ್ಧಾಂತವಿದ್ದಂತೆ ತೋರುತ್ತದೆ."[75] ಉತ್ತರ ಕರ್ನಾಟಕದಲ್ಲಿ ಈಗಲೂ ಕೆಲವು ವ್ಯಕ್ತಿಗಳ ಹೆಸರುಗಳ ಮುಂದೆ 'ಎಕ್ಕೋಟಿ' ಎಂಬ ಉತ್ತರ ಪದವಿರುವುದನ್ನು ಇಲ್ಲಿ ಹೆಸರಿಸಬಹುದು. ಮೈಲಾರ ಲಿಂಗನ ಭಕ್ತರು ಈಗಲೂ "ಎಕ್ಕೋಟಿ ಉಘೇ" ಎಂದು ಜಯಘೋಷಮಾಡುತ್ತಾರೆ. ಇವರನ್ನು ಕೆಲವೆಡೆ 'ಗ್ವಾರಯ್ಯ', 'ಗ್ವಾರಪ್ಪ' (ಗೊರವಯ್ಯ, ಗೊರವಪ್ಪ) ಎಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಇವರನ್ನು 'ವಗ್ಗಯ್ಯ'ಗಳೆನ್ನುತ್ತಾರೆ.[76] ಇವರು ಮೈತುಂಬಾ ಕರಿಯ ಕಂಬಳಿಯನ್ನು ಹೊದ್ದು, ತಲೆಯ ಮೇಲೆ ಕರಡಿಯ ಚರ್ಮದ ದೊಡ್ಡ ಟೊಪ್ಪಿಗೆಯಿಟ್ಟು, ಕೈಯಲ್ಲಿ ಡಮರುಗವನ್ನು ಹಿಡಿದು "ಎಕ್ಕೋಟಿ ಉಘೇ" ಎಂದು ಜಯಘೋಷಮಾಡುತ್ತಾ ಭಿಕ್ಷೆಗೆ ಬರುತ್ತಾರೆ. ಇವರಲ್ಲಿ ಮೈಲಾರನ 'ನಾಯಿ ಭಕ್ತ'ರು ನಾಯಿಯಂತೆ ಕೂಗುತ್ತಾ ಓಡಾಡುತ್ತಾ ವಿಚಿತ್ರ ಧ್ವನಿಗಳನ್ನು ಹೊರಡಿಸುತ್ತಾರೆ. ಕಾಳಾಮುಖರನ್ನೂ ಶಾಸನಗಳು 'ಗೊರವ'ರೆಂದು ಕರೆದಿರುವುದು ಗಮನಾರ್ಹ. ಈಗಿನ ಮೈಲಾರಲಿಂಗನ ಭಕ್ತರಿಗೂ, ಪ್ರಾಚೀನ ಕರ್ನಾಟಕದ ಕಾಳಾಮುಖರಿಗೂ ಏನಾದರೂ ಸಂಬಂಧವಿದೆಯೇ ಎನ್ನುವುದು ವಿಚಾರಯೋಗ್ಯವಾದುದು.

ಲಾಕುಳ–ಪಾಶುಪತ–ಕಾಳಾಮುಖ ಧರ್ಮವನ್ನು ಶಾಸನಗಳಲ್ಲಿ ಶಿವಸಮಯ, ಶಿವಧರ್ಮ, ಲಗುಡಿಗಳ ಧರ್ಮ, ಕಾಳಾಮುಖ ಸಮಯ ಎಂದು ಮುಂತಾಗಿ ಕರೆದಿದೆ. ಈ ಧರ್ಮದ ಅನುಯಾಯಿಗಳನ್ನು ಮಹೇಶ್ವರರು[77], ಮಾಹೇಶ್ವರರು[78] ಎಂಬ ವಿಶಿಷ್ಟ ಹೆಸರಿನಿಂದ ಕರೆಯುತ್ತಿದ್ದರು. ಬ್ರಹ್ಮಶಿವನೆಂಬ ಕವಿ

---

[73.1] ಪಿ. ಸಿ. ದಿವಾಣ್‌ಜೀ ಕೂಡ ಹಾಗೇ ಭಾವಿಸುತ್ತಾರೆ. (–ನೋಡಿ 'The Mahēśvara cult and ts offshoots' (Journal of the Asiatic Society of Bombay. XXX. II. 1955), p. 18.

[74] SII. IX. i. 235, 1141 A.D. ; EC. VIII. Sb. 276, 1070 A.D.

[75] ಕಪಟರಾಳ ಕೃಷ್ಣರಾಯ : ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. 85-86.

[76] 'ವಗ್ಗ' ಎನ್ನುವುದು 'ವ್ಯಾಘ್ರ'ದ ತದ್ಭವ. ವ್ಯಾಘ್ರ> ವಗ್ಗ.

[77] MAR (1929). p. 131, 1024 A.D.

EI. XIV. p. 365, 945 A.D.

ಮೊದಲು ತಾನು 'ಮಾಹೇಶ್ವರ' ಧರ್ಮವನ್ನು ಅಪ್ಪಿ, ಅದರಲ್ಲಿ ತಿರುಳನ್ನು ಕಾಣದೆ ಮತ್ತೆ ಜೈನಧರ್ಮವನ್ನು ಸೇರಿದಂತೆ ಹೇಳಿಕೊಂಡಿದ್ದಾನೆ.[79] ಬಹುಶಃ ಈ 'ಮಾಹೇಶ್ವರ' ಧರ್ಮ ಎಂಬುದು ಹನ್ನೆರಡನೆಯ ಶತಮಾನದಲ್ಲಿ ಪುನರುತ್ಥಾನಕ್ಕೆ ಬಂದ ವೀರಶೈವ ಧರ್ಮವನ್ನಲ್ಲ, ಅದಕ್ಕಿಂತಲೂ ಮುನ್ನವೇ ಕನ್ನಡನಾಡಿನಲ್ಲಿ ಪ್ರಬಲವಾಗಿದ್ದ ಲಕುಲೀಶ–ಪಾಶುಪತವನ್ನು ಸೂಚಿಸುತ್ತದೆ. ಬ್ರಹ್ಮಚಾರಿಯ ಒಡಲನ್ನು ಹೊಕ್ಕು ಅವತರಿಸಿದ ಲಕುಲೀಶನನ್ನು ಬ್ರಹ್ಮಶಿವ ಅನೇಕ ಕಡೆ ಹಾಸ್ಯಮಾಡಿದ್ದಾನೆ.[80] ಎಲ್ಲಿಯೂ ವೀರಶೈವವನ್ನಾಗಲಿ, ಅದರ ವಿಧಿಗಳನ್ನಾಗಲಿ ನಿಂದಿಸಿಲ್ಲ. ಅಷ್ಟೇ ಅಲ್ಲ, ಅದಕ್ಕೆ ವಿಶಿಷ್ಟವಾದ ಯಾವ ಪಾರಿಭಾಷಿಕ ಪದವೂ ಇಲ್ಲಿ ಬಂದಿಲ್ಲ. ಅವನು ಕಾಳಾಮುಖ, ಕಾಪಾಲಿ, ಪಾಶುಪತ, ಶೈವ ಎಂಬ ನಾಲ್ಕು ಶಾಖೆಗಳನ್ನು ಹೇಳಿ ಅವುಗಳಲ್ಲಿ ಒಬ್ಬ 'ಮಹಾಬ್ರತಿ ಗೊರವ' (ಬಹುಶಃ ಕಾಪಾಲಿಕ) ಮಾತ್ರ ರುದ್ರಮಾರ್ಗದಲ್ಲಿ ನಡೆವನೆಂದೂ, ಉಳಿದ ಮೂವರೂ ನಡೆಯರೆಂದೂ ಹೇಳುತ್ತಾನೆ.[81] ಕಾಪಾಲಿಕರನ್ನು ಉಳಿದ ಶೈವ ಪಂಗಡಗಳಿಂದ ಸುಲಭವಾಗಿ ಪ್ರತ್ಯೇಕಿಸಬಹುದು, ಅವರ ಅತಿಮಾರ್ಗಿಕ ವಾಮಾಚಾರಗಳಿಂದ. ಆದರೆ ಉಳಿದ ಶಾಖೆಗಳನ್ನು ಶಾಸನಗಳ ಸಹಾಯದಿಂದ ಪ್ರತ್ಯೇಕಿಸುವುದು ಸದ್ಯಕ್ಕಂತೂ ಅಸಾಧ್ಯ. ಆ ಶಾಖೆಗಳಿಗೆ ಏನಾದರೂ ವ್ಯತ್ಯಾಸಗಳಿದ್ದರೆ ಅತ್ಯಲ್ಪ ಎಂದು ಕಾಣುತ್ತದೆ. ಲಾಕುಳ, ಪಾಶುಪತ, ಕಾಳಾಮುಖ–ಈ ಮೂರನ್ನೂ ಒಂದು ಎಂದು ಭಾವಿಸುವುದರಲ್ಲಿ ಯಾವ ಆಕ್ಷೇಪಣೆಯೂ ಕಾಣದು.[82] ಒಂದೇ ಶಾಸನದಲ್ಲಿ ಒಬ್ಬ ಗುರುವನ್ನು ಕಾಳಾಮುಖನೆಂದೂ, ಪಾಶುಪತನೆಂದೂ, ಲಾಕುಳ ಸಿದ್ಧಾಂತದಲ್ಲಿ ವಿದ್ವಾಂಸನೆಂದೂ ಹೊಗಳಿರುವ ಅನೇಕ ಸ್ಪಷ್ಟ ನಿದರ್ಶನಗಳಿವೆ.

ಈ ಕಾಳಾಮುಖರು ಕರ್ನಾಟಕಕ್ಕೆ ಎಲ್ಲಿಂದ ಬಂದಿರಬಹುದು ? ಹೊರಗಿನಿಂದ ಇಲ್ಲಿಗೆ ಬಂದು ಧರ್ಮಪ್ರಚಾರ ಮಾಡಿದ ಬೌದ್ಧರಾಗಲಿ, ಅವರ ಅನುಯಾಯಿಗಳಾಗಲಿ ಕನ್ನಡದಲ್ಲಿ ಏನೂ ಬರೆಯಲಿಲ್ಲವೆ ?— ಎಂಬುದು ಆಶ್ಚರ್ಯದ ಸಂಗತಿಯಾದರೆ, ಅದಕ್ಕಿಂತಲೂ ಆಶ್ಚರ್ಯದ ಸಂಗತಿ ಈ ಶೈವರು ಕನ್ನಡದಲ್ಲಿ ಏನೂ ಬರೆಯದಿರುವುದು. ಇವರು ಸಂಸ್ಕೃತದಲ್ಲಿ ಶ್ರೇಷ್ಠ ವಿದ್ವಾಂಸರಾಗಿದ್ದ ಅಂಶವನ್ನು ಶಾಸನಗಳೆಲ್ಲ ಮುಕ್ತಕಂಠದಿಂದ ಹೊಗಳುತ್ತವೆ. ಇವರ ವಿದ್ಯಾಕೇಂದ್ರಗಳಲ್ಲಿ ಸಂಸ್ಕೃತದ ಅಭ್ಯಾಸವೇ ನಡೆಯುತ್ತಿದ್ದು, ಕನ್ನಡದ ಅಭ್ಯಾಸಕ್ಕೆ ತುಂಬಾ ಪರಿಮಿತವಾದ ಸ್ಥಾನವಿದ್ದಂತೆ ಕಾಣುತ್ತದೆ. ಕನ್ನಡ ಭಾಷೆ ಮತ್ತು ಸಾಹಿತ್ಯಗಳ ವಿಷಯದಲ್ಲಿ ಇವರ ಅನಾಸಕ್ತಿಯು ಇವರು ಕನ್ನಡ ನಾಡಿಗೆ ಹೊರಗಿನಿಂದ ಬಂದವರು ಎಂಬ ಭಾವನೆಯನ್ನು ಸ್ಥಿರಪಡಿಸುತ್ತದೆ. ಲಕುಲೀಶನು ಕ್ರಿ. ಶ. ದ ಆರಂಭದಲ್ಲಿ ಅವತರಿಸಿ ಪೂರ್ವದಲ್ಲಿಯೇ ಇದ್ದ ಶೈವಧರ್ಮವನ್ನು ಪುನರುತ್ಥಾನಗೊಳಿಸಿದ್ದರಿಂದ, ಆ ಕಾಲಕ್ಕೆ ಗುಜರಾತ್ ದೇಶವು ಶೈವಧರ್ಮದ ಒಂದು ಕೇಂದ್ರವಾಗಿ ಪರಿಣಮಿಸಿತು. ಕನ್ನಡ ಶಾಸನಗಳಲ್ಲಿ ಎಲ್ಲಿಯೂ ಶೈವರು ತಮ್ಮ ಮೂಲವನ್ನು ಹೇಳಿಕೊಂಡಿಲ್ಲ. ಶ್ರೀಶೈಲ ಪರ್ವತವು ಶೈವರ ಶಾಸನಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ

---

79 ಸಮಯಪರೀಕ್ಷೆ, 1.59–"ಪಿರಿದರ್ತ್ತಿ ಮುನ್ನ ಮಾಹೇ। ಶ್ವರದೊಳ್ತನಗದಱಿಕೊಳೊಳ್ಪುಗಾಣದೆ ನೆಗಳ್ದೀ ಪರಮಜಿನಧರ್ಮದೊಳ ಪೊ। ಕ್ಕು ರಾಗಿಪಂ ಸುಕವಿ ಪಂಪರಾಜನ ಮೊಮ್ಮಂ" ||

80 ಅದೇ, 10.13, 14–"ಅನುನಯದೆ ಸೋಮಶರ್ಮನ ತನಯನ ಪೆಣನೊಳಗೆ ಲಾಕುಳೇಶಂ ಪೊಕ್ಕಾತನೆ ಶೈವಾಗಮಮೆಲ್ಲಮನನಂತರಂ ಪೇಲ್ದಿನೆಂಬರಿದು ಶೈವಮತಂ".

81 ಅದೇ, 14.50. –"ಕ್ರಮದಿಂ ವರ್ತಿಸುವಾ ಕಾಳಮುಖಾಖ್ಯ ಕಪಾಳಿ ಪಾಶುಪತ ಶೈವರೊಳೋರ್ವ ಮಹಾಬ್ರತಿ ಗೊರವನ್ ರುದ್ರಮಾರ್ಗದಿಂ ನಡೆವನುಳಿದ ಮೂವರ್ ನಡೆಯರ್"

82 ಶ್ರೀ ಬಿ. ರಾಮರಾಯರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ—

"The followers of Lakulīśa are also known as Kālāmukhas, an important Śaiva sect". [Quarterly Journal of the Mythic Society, XIV, p.207].

ಕಾಳಾಮುಖರಿಗೂ ಪಾಶುಪತರಿಗೂ ಯಾವುದೋ ಭೇದವಿದ್ದಿರಬೇಕು ಎಂಬುದನ್ನು ಈ ವಿದ್ವಾಂಸರು ಗಮನಿಸಿಲ್ಲ. ಆ ಭೇದಗಳಾವುವೆಂಬುದು ಇನ್ನೂ ಅಜ್ಞಾತವಾಗಿಯೇ ಉಳಿದಿದೆ.

ಕನ್ನಡ ಶಾಸನವೊಂದರಲ್ಲಿ "ಕಾಳಾಮುಖ ಸಮಯ ಸರೋವರ ರಾಜಹಂಸರ್ ಲಾಕುಳಸಿದ್ಧಾಂತ ನೈಯಾಯಿಕ ನಳಿನೀ ದಿವಾಕರರ್..........ಶ್ರೀ ಶೈಳ ಪಶ್ಚಿಮದ್ವಾರ ತೋರಣರ್ ಮಲ್ಲಿಕಾರ್ಜುನ ದೇವ ದರ್ಶನ ಕಾರಣಪುರುಷರ್"[83] ಎಂದು ಸುರೇಶ್ವರಪಂಡಿತದೇವ ಎಂಬ ಯತಿಯನ್ನು ಹೊಗಳಿದೆ. ಶ್ರೀ ಶೈಲದ ಮಲ್ಲಿಕಾರ್ಜುನ ದೇವಾಲಯದ ವ್ಯವಹಾರವನ್ನು ಲಾಕುಳ ಶೈವರು ನಡೆಯಿಸುತ್ತಿದ್ದರೆಂಬುದಕ್ಕೆ ಇದು ಒಂದು ಸಾಕ್ಷಿ. ಶೈವರ ಒಂದು ಪ್ರಸಿದ್ಧ ಶಾಖೆ ತನ್ನನ್ನು 'ಪರ್ವತಾವಳಿ'ಯ ಶಾಖೆ ಎಂದು ಕರೆದುಕೊಳ್ಳುತ್ತದೆ.[84] ಒಂದು ಶಾಸನವಂತೂ ಒಂದು ಗುರುಪರಂಪರೆಯನ್ನು ಪರ್ವತಾವಳಿಯಲ್ಲಿ ಜನಿಸಿದ ಕೇದಾರಶಕ್ತಿಪಂಡಿತ ದೇವನಿಂದ ಆರಂಭಿಸುತ್ತದೆ.[85] ಕ್ರಿ. ಶ. 1149ರ ಶಾಸನವೊಂದರಲ್ಲಿ ಗಂಗರಾಶಿದೇವರು "ಶ್ರೀಪರ್ವತದ ಸಿದ್ಧವಟ್ಟದಾಚಾರ್ಯ" ನಾಗಿದ್ದು ಅವನ ಶಿಷ್ಯರು ಕರ್ನಾಟಕದಲ್ಲಿ ಸ್ಥಾನಪತಿಗಳಾಗಿದ್ದರು[86] ಎಂದಿದೆ. ಶ್ರೀಶೈಲವು ಕಾಪಾಲಿ ಮುಂತಾದ ಶೈವಶಾಖೆಗಳ ಕೇಂದ್ರವೂ ಆಗಿತ್ತು. ಹೀಗೆ ಶ್ರೀಶೈಲವು ಲಾಕುಳ ಶೈವರ ಒಂದು ಪ್ರಸಿದ್ಧ ಕೇಂದ್ರವಾಗಿದ್ದಿತೆಂದು ತಿಳಿದುಬರುತ್ತದೆ ಅಷ್ಟೆ. ಆ ಕೇಂದ್ರದಿಂದ ಅದು ಕನ್ನಡ ನಾಡಿನಲ್ಲಿ ಪ್ರಸಾರಗೊಂಡಿತು ಎಂದು ಹೇಳುವುದು ಕಷ್ಟವೇ. ವೀರಶೈವರಿಗೂ ಅದು ಬಹು ಪವಿತ್ರ ಕೇಂದ್ರವಾಗಿದ್ದಿತು. ಹನ್ನೆರಡನೆಯ ಶತಮಾನದಲ್ಲಿ ಅಲ್ಲಮ, ಅಕ್ಕಮಹಾದೇವಿ ಮುಂತಾದವರು ತಮ್ಮ ಅಂತಿಮ ದಿನಗಳನ್ನು ಶ್ರೀಶೈಲದಲ್ಲಿ ಕಳೆದರು.

ಕಾಳಾಮುಖರು ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದವರು ಎಂದು ಡಾ|| ಎಂ. ಎಚ್. ಕೃಷ್ಣ ಅವರು ಅಭಿಪ್ರಾಯಪಟ್ಟಿದ್ದಾರೆ.[87] ಇದಕ್ಕೆ ಆಧಾರ ಸಾಲದು. ಕಾಶ್ಮೀರದಲ್ಲಿ ಶೈವಧರ್ಮವು ಸುವ್ಯವಸ್ಥಿತವಾದ ಒಂದು ಸಿದ್ಧಾಂತವಾಗಿ ಹೊರಬಿದ್ದುದು 9ನೆಯ ಶತಮಾನದಲ್ಲಿ, ವಸುಗುಪ್ತನ ಶಿವಸೂತ್ರಗಳ ಮೂಲಕ.[88] ಅದಕ್ಕಿಂತ ಮುಂಚಿನಿಂದಲೇ ಕನ್ನಡ ನಾಡಿನಲ್ಲಿ ಲಾಕುಳ ಶೈವಧರ್ಮವು ಪ್ರಚಾರದಲ್ಲಿತ್ತು. ಕ್ರಿ. ಶ. 754ರ ಶಾಸನವೊಂದರಲ್ಲಿ "ಶಿವಶಾಸನ" ಎಂಬ ಪ್ರಶಸ್ತಿಯನ್ನು ಪಡೆದಿದ್ದ ಪಯೋಭಕ್ಷಿನ್ ಎಂಬಾತನು ಗಂಗೆಯ ಉತ್ತರ ತಡಿಯ "ಮೃಗಥಣಿಕಾಹಾರವಿಷಯ"ದಿಂದ ಬಂದವನೆಂದು ಹೇಳಿದೆ.[89] ಈ ಮೃಗಥಣಿಕಾಹಾರ ಎಂಬ ದೇಶ ಯಾವುದೋ ತಿಳಿಯದು.[90] ಆದರೂ ಕಾಶ್ಮೀರ ಶೈವಪ್ರವಾಹದ ಒಂದು ಹೊನಲು ಇಲ್ಲಿಯ ಶೈವ ಧರ್ಮವನ್ನು 10 ಅಥವಾ 11ನೆಯ ಶತಮಾನದಲ್ಲಿ ಕೂಡಿಕೊಂಡಂತೆ ಕಾಣುತ್ತದೆ. ಕಾಶ್ಮೀರ ಪಂಡಿತದೇವ ಎಂಬ ಗುರುವೊಬ್ಬನ ಹೆಸರು 11ನೆಯ ಶತಮಾನದಲ್ಲಿ ಕಾಣಿಸಿಕೊಳ್ಳುತ್ತದೆ.[91] ಬಹುಶಃ ಇವರ ಶಿಷ್ಯವರ್ಗವನ್ನೇ ಎಂದು ಕಾಣಿಸುತ್ತದೆ, "ಕಾಶ್ಮೀರ ದೇವರ ಸಂತಾನ" ಎಂದು ಮುಂದೆ ಕರೆದಿರುವುದು.[92] ಕಾಶ್ಮೀರಕ್ಕೆ ಯಾವುದೋ ರೀತಿಯಲ್ಲಿ ಸಂಬಂಧಿಸಿರುವ ಕೆಲವರ ಹೆಸರುಗಳನ್ನು ಹೆಸರಿಸಬಹುದು. ಶ್ರೀಮನ್ಮಹಾ ಪ್ರಧಾನನೂ, ವಿಪ್ರಕುಳಶ್ರೇಷ್ಠನೂ ಆದ ಭೀವಣಯ್ಯ ಎಂಬಾತನನ್ನು "ಕಾಶ್ಮೀರ ವಿಷಯ ಮುಖ್ಯ

---

[83] SII. IX. i. 119, 1057 A.D.

[84] EC. VIII. Sa. 108 (bis), 1042 A.D. ; BKI. I. i. 116, 1075 A.D.

[85] EC. VII. Sk. 100, 1129 A.D.

[86] EC. XII. Ck. 29, 1149 A.D.

[87] ಕಪಟರಾಳ ಕೃಷ್ಣರಾಯ : ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. 107.

[88] K. C. Pandey : Abhinavagupta, A Historical and philosophical study, p. 91

[89] EI. III. p. 4, 754 A.D.

[90] 'ಮೃಗಥಣ' ಎಂಬುದು ಹಿಮಾಲಯ ಪರ್ವತ ಪಂಕ್ತಿಯಲ್ಲಿ ಒಂದು ಬೆಟ್ಟಕ್ಕೆ ಹೆಸರು. ಅದರ ಸುತ್ತ ಮುತ್ತಣ ಪ್ರದೇಶವೇ ಬಹುಶಃ "ಮೃಗಥಣಿಕಾಹಾರ ವಿಷಯ."

[91] EC. VII. Sk. 19, 1066 A.D.

[92] EC. VII. Sk. 114, 1096 A.D.

ಮುಂಡನ"[93] ಎಂದು ಕರೆದಿದೆ. ಶಾಸನಾಧಿಕಾರಿಯೂ, ಮಹಾಪ್ರಚಂಡದಂಡನಾಯಕನೂ ಆಗಿದ್ದ ಕಾಶ್ಮೀರ ಭಟ್ಟ ಮಲ್ಲಯ್ಯಪಂಡಿತ ಎಂಬುವನ ಹೆಸರು ಒಂದೆಡೆ ಸಿಗುತ್ತದೆ.[94] ಶಾಸನವೊಂದರಲ್ಲಿ ಶ್ರೀ ಮಲ್ಲಿಕಾರ್ಜುನ ದೇವರಿಗೆ ಬಿಟ್ಟ ಭೂಮಿಯನ್ನು "ಕಾಶ್ಮೀರ ಭೂಮಿ"ಎಂದು ಕರೆದಿದೆ. ಇವೆಲ್ಲವೂ ಕನ್ನಡ ನಾಡಿಗೂ ಕಾಶ್ಮೀರಕ್ಕೂ ಅಲ್ಪಪ್ರಮಾಣದಲ್ಲಾದರೂ ಇದ್ದ ಸಾಂಸ್ಕೃತಿಕ ಸಂಬಂಧವನ್ನು ಎತ್ತಿ ತೋರಿಸುತ್ತವೆ. ಆದರೆ ಅಲ್ಲಿಯ ಶೈವಧರ್ಮ ಇಲ್ಲಿಯ ಶೈವಧರ್ಮವನ್ನು ಶ್ರೀಮಂತವಾಗಿಸಿರಬೇಕು.[95] ದೇವಗಿರಿ ಯಾದವರ ಕಾಲದ ಶಾಸನವೊಂದರಲ್ಲಿ ಒಬ್ಬ ಶೈವ ಯತಿಯು ಕಾಶ್ಮೀರ ಶೈವಧರ್ಮದ ಸಿದ್ಧ ಸೋಮಾನಂದನಂತೆ ತನ್ನ ಪರಂಪರೆಯನ್ನು ದೂರ್ವಾಸನಿಂದ ಆರಂಭಿಸುತ್ತಾನೆ. ಕನ್ನಡ ಶಾಸನಗಳಲ್ಲಿ ಒಂದೆರಡು ಕಡೆ ಶೈವರು ಭೈರವನ ಆರಾಧನೆಯನ್ನು ಮಾಡುತ್ತಿದ್ದಂತೆ ಹೇಳಿದೆ. ಹುಂಚದ ಕಾಳಭೈರವನ ಗುಡಿಯಲ್ಲಿ ಸರ್ವಜ್ಞಜೀಯ ಎಂಬ ಒಬ್ಬ ಶೈವಗುರುವಿದ್ದಂತೆ ಶಾಸನವೊಂದು ತಿಳಿಸುತ್ತದೆ.[96] ಗಂಗರಾಶಿ ಎಂಬಾತ ಜೀರ್ಣವಾಗಿದ್ದ ಭೈರವ ದೇವಸ್ಥಾನವನ್ನೂ, ಗುಹೆಯ ದೇವತಾಭವನವನ್ನೂ ಹೊಸದು ಮಾಡಿಸಿದಂತೆ ತಿಳಿದುಬರುತ್ತದೆ.[97] ಕಾಶ್ಮೀರ ಶೈವಸಿದ್ಧಾಂತದಲ್ಲಿ ಸಾಧನೆಯ ಫಲವಾಗಿ ಶಿವನಿಗೆ ಸಮಾನವಾದ ಸ್ಥಿತಿಯನ್ನು ಪಡೆದವನನ್ನು 'ಭೈರವ'ನೆಂದು ಕರೆಯುತ್ತಾರೆ.[98] ಕಾಶ್ಮೀರ ಶೈವದ ಹಿರಿಯ ಲೇಖಕ ಅಭಿನವಗುಪ್ತನು 'ಭೈರವಸ್ತವ' ಎಂಬ ಸ್ತೋತ್ರವನ್ನು ಬರೆದಂತೆ ತಿಳಿದುಬರುತ್ತದೆ.[99] ಅವನು ಈ ಭೈರವ ಸ್ತೋತ್ರವನ್ನು ಪಠಿಸುತ್ತಾ 'ಭೈರವಗುಹೆ'ಯನ್ನು ಪ್ರವೇಶಿಸಿದಂತೆ ಒಂದು ಐತಿಹ್ಯವಿದೆ. ಕನ್ನಡ ಶಾಸನಗಳಲ್ಲಿ ಬರುವ ಭೈರವ ಪೂಜೆ, ಭೈರವ ಗುಹೆಗಳು ಕಾಶ್ಮೀರ ಶೈವದ ಕೊಡುಗೆ ಎಂದು ಹೇಳಲು ಧೈರ್ಯ ಸಾಲದು. ಕರ್ನಾಟಕದಲ್ಲಿ ಭೈರವ ಪೂಜೆಯು ಬಹುಶಃ ಕಾಪಾಲಿಕರಿಂದ ಬಂದಿರಬೇಕು.

ಕ್ರಿ. ಶ. 7ನೆಯ ಶತಮಾನದಲ್ಲಿ ತಮಿಳುನಾಡಲ್ಲಿ ನಾಯನಾರ್ ಎಂಬ ಶೈವಭಕ್ತರಿಂದ ಶೈವಧರ್ಮದ ಪ್ರಚಾರ ನಡೆಯಿತು. ಈ ಧರ್ಮದ ಅರವತ್ತುಮೂವರು ಭಕ್ತರನ್ನು 'ಪುರಾತನ'ರೆಂದು ಕರೆದು ವೀರಶೈವ ಧರ್ಮವು ತನ್ನವರನ್ನಾಗಿ ಮಾಡಿಕೊಂಡಿತು. ಇವರ ಜೀವನಚರಿತ್ರೆಯನ್ನು ಹರಿಹರ ಕವಿ ತನ್ನ ರಗಳೆಗಳಲ್ಲಿ ಹಾಡಿದ್ದಾನೆ. ಈ ತಮಿಳುನಾಡಿನ ಶೈವಕ್ಕೂ, ಕನ್ನಡನಾಡಿನ ಶೈವಕ್ಕೂ ಏನಾದರೂ ಸಂಬಂಧವಿತ್ತೇ ಎನ್ನುವುದರ ಮೇಲೆ ಬೆಳಕು ಬೀರಬಲ್ಲ ಯಾವ ಅಂಶವೂ ಕನ್ನಡ ಶಾಸನಗಳಲ್ಲಿ ದೊರಕುವುದಿಲ್ಲ. 'ಮಲಯಾಳ ಜೀಯರ್' ಎಂಬ ಹೆಸರಿನ ಗುರುಗಳೊಬ್ಬರಿದ್ದರು.[100] ಮಲಯಾಳವೆಂದರೆ ಈಗಿನ ಕೇರಳ.

## ಲಾಕುಳಶೈವರು ಮತ್ತು ದೇವಸ್ಥಾನಗಳು

ಕನ್ನಡ ಸಂಸ್ಕೃತಿಗೆ ಲಾಕುಳ ಶೈವರ ಮುಖ್ಯ ಕೊಡುಗೆಗಳು ಎರಡು. ಒಂದು-ಹಳ್ಳಿ ಹಳ್ಳಿಗಳಲ್ಲಿ ಕಂಡುಬರುವ ದೇವಸ್ಥಾನಗಳು. ಮತ್ತೊಂದು-ಸಂಸ್ಕೃತಭಾಷೆಯಲ್ಲಿ ನಿಕ್ಷಿಪ್ತವಾಗಿದ್ದ ಜ್ಞಾನದ ಬೆಳಕು ಆರದಂತೆ ನೋಡಿಕೊಂಡದ್ದು. ಇವರು ಬಹುದೊಡ್ಡ ದೇವಸ್ಥಾನ ನಿರ್ಮಾಪಕರು. ತಾವು ಕಟ್ಟಿಸಿದ, ಅಥವಾ

[93] BKI. I. ii. 139, 1095 A.D.

[94] EI. XII. p. 150, 1123 A.D.

[95] ಕಾಶ್ಮೀರಶೈವಧರ್ಮದ ಪ್ರಭಾವವು ವೀರಶೈವ ಧರ್ಮದ ಮೇಲೆ ಸಾಕಷ್ಟಾಗಿದೆ. ವೀರಶೈವಧರ್ಮದ ಅನೇಕ ತತ್ವಗಳಿಗೂ ಅಲ್ಲಿಯ ತತ್ವಗಳಿಗೂ ಬಹು ಹತ್ತಿರದ ಸಾಮ್ಯವುಂಟು. ಕಾಶ್ಮೀರದ ಹಲವು ಭಕ್ತರು ವೀರಶೈವರಿಗೂ ಪೂಜ್ಯರಾಗಿದ್ದಾರೆ.

[96] EC. VIII. Nr. 63, C. 1062 A.D.

[97] EC XI. Cd. 78, 1060 A.D.

[98] ಶಿವಸೂತ್ರಗಳು (ಸಂ. ಜೆ. ರುದ್ರಪ್ಪ), ಪು. 61.

[99] K.C. Pandey : Abhinavagupta, A Historical and philosophical study, p. 412.

[100] EC. V. Ag. 93, 1066 A.D.

ತಮಗಾಗಿ ಕಟ್ಟಿಸಿದ ದೇವಸ್ಥಾನದಲ್ಲಿ ತಾವು ವಾಸಿಸುತ್ತಾ ಅಲ್ಲಿ ತಮ್ಮ ವೈಯಕ್ತಿಕ ಆಧ್ಯಾತ್ಮಿಕ ಸಾಧನೆಯ ಜೊತೆಗೆ ವಿದ್ಯಾಪ್ರಸಾರದ ದೊಡ್ಡ ಹೊಣೆಯನ್ನೂ ಹೊತ್ತಿದ್ದರು. ಆ ಕಾಲದಲ್ಲಿ ದೇವಸ್ಥಾನವೇ ಮಠವಾಗಿ, ಮಠವೇ ಶಾಲೆಯಾಗಿತ್ತು. (ಈಗಲೂ ಹಳ್ಳಿಗಳಲ್ಲಿ ಶಾಲೆಯನ್ನು ಮಠವೆಂದು ಕರೆಯಲು ಬಹುಶಃ ಇದೇ ಕಾರಣ). ಕೋಲಾರ ಜಿಲ್ಲೆಯ ಅವನಿಕ್ಷೇತ್ರದ 'ಸ್ಥಾನ'ವನ್ನು ನಲವತ್ತು ವರ್ಷ ಆಳಿ, ಐವತ್ತು ದೇಗುಲ ಗಳನ್ನೂ ಎರಡು ದೊಡ್ಡ ಕೆರೆಗಳನ್ನೂ ಕಟ್ಟಿಸಿ 'ಕಲಿಯುಗ ರುದ್ರ' ಎಂದು ಪ್ರಸಿದ್ಧನಾದ ತ್ರಿಭುವನ ಕರ್ತಾರ ದೇವರು ಕ್ರಿ. ಶ. 931ರಲ್ಲಿ ರುದ್ರಲೋಕ ಪ್ರಾಪ್ತರಾದ ವಿಷಯ ಶಾಸನ[101]ವೊಂದರಲ್ಲಿ ಬಂದಿದೆ. ಕಾಳಾಮುಖ ಶೈವರಿಗೆ ದೇವಸ್ಥಾನ ನಿರ್ಮಾಣದಲ್ಲಿದ್ದ ಆಸಕ್ತಿಗೆ ಈ ಶಾಸನ ಅತ್ಯುತ್ತಮ ನಿದರ್ಶನ.

ಲಾಕುಳ ಶೈವರು ಕರ್ನಾಟಕದಲ್ಲಿ ಕಟ್ಟಿಸಿದ ಅತ್ಯಂತ ಪ್ರಾಚೀನ ದೇವಸ್ಥಾನಗಳಲ್ಲೊಂದು ಬಾದಾಮಿಯ ಬಳಿ ಇರುವ ಮಹಾಕೂಟೇಶ್ವರ (ಇದರ ನಿಜವಾದ ಹೆಸರು ಮಕುಟೇಶ್ವರ). ಕ್ರಿ. ಶ. 602ರ ಮಂಗಳೇಶನ ಶಾಸನದಲ್ಲಿ ಅವನಿಗೆ ಮಾತೃಸ್ವರೂಪಳಾಗಿದ್ದ ದುರ್ಲಭದೇವಿ ಎಂಬಾಕೆಯು ಮಕುಟೇಶ್ವರ ನಾಥನಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ.[102] ಈ ದೇವಸ್ಥಾನದ ಮುಂದಿರುವ ದ್ವಾರಪಾಲಕ ವಿಗ್ರಹಗಳು ಬಹುಜನ ಭಾವಿಸಿರುವಂತೆ ವಾತಾಪಿ-ಇಲ್ವಲರ ವಿಗ್ರಹಗಳಲ್ಲ, ಮಹಾಕೂಟೇಶ್ವರನ ದ್ವಾರಪಾಲಕರಾಗಿ ಕೆಲಸಮಾಡುತ್ತಿದ್ದ ಕಾಳಾಮುಖ ಭಕ್ತರ ವಿಗ್ರಹಗಳಿರಬೇಕೆಂದು ಶ್ರೀ. ಆರ್. ಎಸ್. ಪಂಚಮುಖಿಯವರು ಅಭಿಪ್ರಾಯಪಡುತ್ತಾರೆ.[103] ಆ ದೇವಸ್ಥಾನದ ಹೊರಭಾಗದ ಚಿತ್ರಗಳಲ್ಲಿ ಲಕುಲೀಶ್ವರನ ಚಿತ್ರಗಳು ಪ್ರಾಮುಖ್ಯವಾಗಿವೆ. ಇದು ನಿಜವಾದರೆ ಕರ್ನಾಟಕದ ಲಾಕುಳ ಶೈವರ ಇತಿಹಾಸವು ಕ್ರಿ. ಶ. 6ನೆಯ ಶತಕಕ್ಕಿಂತ ಹಿಂದೆ ಹೋಗಬೇಕಾಗುತ್ತದೆ.[104] ಬಾದಾಮಿಯಲ್ಲಿ ಲಕುಲೀಶನಿಗಾಗಿಯೇ ಕಟ್ಟಿರುವ ಪ್ರತ್ಯೇಕ ದೇವಸ್ಥಾನವಿದ್ದು, ಗರ್ಭಗುಡಿಯಲ್ಲಿ ಜೀರ್ಣವಾಗಿರುವ ಲಕುಲೀಶನ ವಿಗ್ರಹವಿದೆ.[105] ಶಿವನ ಅವತಾರವಾದ ಲಕುಲೀಶನು ಇವರ ಆರಾಧ್ಯದೈವವಾದರೂ ಶಿವನನ್ನು ನಾನಾ ಹೆಸರುಗಳಿಂದ ಅರ್ಚಿಸುತ್ತ ನೂರಾರು ಶೈವ ದೇವಸ್ಥಾನಗಳ 'ಸ್ಥಾನಪತಿ'ಗಳಾಗಿದ್ದರು. ರಾಮೇಶ್ವರ ಎಂಬ ತೀರ್ಥಕ್ಕೆ ಶಿವಧಾರಿ ಎಂಬ ಗೊರವರು ಸ್ಥಾನಪತಿಗಳಾಗಿದ್ದಂತೆ ಒಂದು ರಾಷ್ಟ್ರಕೂಟ ತಾಮ್ರಪಟದಿಂದ ತಿಳಿದುಬರುತ್ತದೆ.[106] ಲಿಂಗಶಿವಜೀಯ ಎನ್ನುವವರು 'ಭಿಕ್ಷಾವೃತ್ತಿ'ಯಿಂದ ದ್ರವ್ಯವನ್ನು ಸಂಪಾದಿಸಿ ಇಟ್ಟಿಗೆಯ ದೇವಾಲಯವನ್ನು ಕೆಡವಿಸಿ ಕಲ್ಲ ದೇಗುಲಗಳನ್ನೂ, ಕೊಂಡಗಳನ್ನೂ ಕಟ್ಟಿಸಿದ ವಿಷಯವು ಒಂದೆಡೆ ಇದೆ.[107] ದೇವಸ್ಥಾನ ನಿರ್ಮಾಣದಲ್ಲಿ

---

101 EC. X. Mb. 65, 931 A.D.

102 IA. XIX. p. 7, 602 A.D.

103 Annual Report on Kannada Research in Bombay province (1939–40), p. 17.

104 ರಾಷ್ಟ್ರಕೂಟ ಗೋವಿಂದ IIIನ ನಂದಿ ತಾಮ್ರಪಟಗಳಲ್ಲಿ (ಕ್ರಿ. ಶ. 807) ಮೊತ್ತಮೊದಲು ಕಾಳಾಮುಖರ ಪ್ರಸ್ತಾಪವಿರುವುದರಿಂದ ಕ್ರಿ. ಶ. 807ನ್ನು ಕಾಳಾಮುಖರ ಅತ್ಯಂತ ಪ್ರಾಚೀನ ಉಲ್ಲೇಖವೆಂದು ಭಾವಿಸಿ ಅಲ್ಲಿಂದ ಕಾಳಾಮುಖರು ಶೀಘ್ರವಾಗಿ ಪ್ರಸರಿಸಿದರು ಎಂದು ಡಾ॥ ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಡುತ್ತಾರೆ (A Twelfth Century University in Mysore, p. 21). ನಾವು ಹಿಂದೆಯೇ ಸು. ಕ್ರಿ. ಶ. 700ರ ಶಾಸನ ದಲ್ಲಿಯೇ ಕಾಳಾಮುಖ ಸನ್ಯಾಸಿಯ ಪ್ರಸ್ತಾಪವಿರುವುದನ್ನು ತೋರಿಸಿದ್ದೇವೆ. ಮಹಾಕೂಟದ ಶಾಸನದ ಸಹಾಯದಿಂದ ಕಾಳಾಮುಖರ ಇತಿಹಾಸ 6ನೆಯ ಶತಕಕ್ಕಿಂತ ಹಿಂದಿನಿಂದಲೇ ಆರಂಭವಾಗುತ್ತದೆಂದು ಭಾವಿಸಬೇಕಾಗುತ್ತದೆ.

105 Cousens : The Cālukyan Architecture, p. 56.

ಎಲ್ಲೋರದಲ್ಲಿ ಅತ್ಯಂತ ಸುಂದರವಾದ ಲಕುಲೀಶನ ವಿಗ್ರಹವಿದೆ. "ಇದು ಬಹುಶಃ ಲಕುಲೀಶನ ಅತ್ಯಂತ ಪ್ರಾಚೀನ ವಾದ ವಿಗ್ರಹ" (A. Goswami : The Art of the Rāṣṭrakūṭas, Notes on plate No. III). ತಲೆಯಲ್ಲಿ ಕಿರೀಟ, ಕೊರಳಲ್ಲಿ ಹಾರ, ಎದೆಯಲ್ಲಿ ಜನಿವಾರ ಇದೆ. ಎಡಗೈಯಲ್ಲಿ ಲಕುಟ ಅಥವಾ ಯೋಗದಂಡವಿದೆ. ಅವನು ಕುಳಿತಿರುವ ಕಮಲದ ನಾಳವನ್ನು ನಾಗರು ಹಿಡಿದಿದ್ದಾರೆ. ಅಕ್ಕಪಕ್ಕದಲ್ಲಿ ನಾಗಕನ್ನೆಯರು ಕೈಮುಗಿದು ನಿಂತಿದ್ದಾರೆ.

106 IA. XI. p. 126, 803-4 A.D.

107 EC. XI. Mk. 27, 962 A.D.

ಅವರಿಗಿದ್ದ ವೀರನಿಷ್ಠೆ ಇದರಿಂದ ವ್ಯಕ್ತವಾಗುತ್ತದೆ. ಈ ನಿಷ್ಠೆ ಬರಿಯ ಶೈವಗುರುಗಳಲ್ಲಿ ಮಾತ್ರವಲ್ಲ, ಅವರ ಅನುಯಾಯಿಗಳಾದ ಭಕ್ತರಲ್ಲೂ ಕಾಣಿಸಿಕೊಳ್ಳುತ್ತದೆ. ಬಳೆಗಾರ ಕುಲದ ಬಮ್ಮೊಣ ಎಂಬಾತ ಸ್ವಯಂಭೂ ದೇವರಿಗೆ ಪೌಳಿಯನ್ನು ಕಟ್ಟಿಸುವುದಾಗಿ "ತಪಂಬಟ್ಟು" ಎಂದರೆ ಅದಕ್ಕಾಗಿ ಪ್ರತಿಜ್ಞೆಯನ್ನು ಕೈಗೊಂಡು ಕಟ್ಟಿಸುತ್ತಾನೆ.

ಶಾಸನಗಳಲ್ಲಿ ಬರುವ 'ಸ್ಥಾನ', 'ನೈಷ್ಠಿಕಸ್ಥಾನ', 'ಸ್ಥಾನಪತಿ' ಎಂಬುವು ಒಂದು ರೀತಿಯಲ್ಲಿ ಪಾರಿಭಾಷಿಕ ಪದಗಳೆಂದು ಅಂಗೀಕರಿಸಬೇಕಾಗುತ್ತದೆ. ಶೈವಗುರುಗಳು ವಾಸವಾಗಿದ್ದ ದೇವಸ್ಥಾನಗಳು 'ಸ್ಥಾನ'ಗಳು. ಆ ದೇವಸ್ಥಾನದ ಆಗುಹೋಗುಗಳನ್ನು ನೋಡಿಕೊಳ್ಳುವ ಕರ್ತವ್ಯವನ್ನು ಹೊತ್ತಿರುವವರು 'ಸ್ಥಾನಪತಿ'ಗಳು ಅಥವಾ 'ಸ್ಥಾನಿಕ'ರು. ಒಬ್ಬರಿಗಿಂತ ಹೆಚ್ಚಾಗಿ ಗುರುಗಳಿದ್ದರೆ ಅವರಲ್ಲಿ ಹಿರಿಯನೇ ಸಾಮಾನ್ಯವಾಗಿ ಸ್ಥಾನಪತಿ ಎನ್ನಿಸಿಕೊಳ್ಳುತ್ತಿದ್ದನು. ಶೈವಗುರುಗಳು ಅಖಂಡ ಬ್ರಹ್ಮಚಾರಿಗಳಾಗಿದ್ದು ಕೊಂಡು ಬ್ರಹ್ಮಚಾರಿ ವಿದ್ಯಾರ್ಥಿಗಳಿಗೆ ವಿದ್ಯಾದಾನಮಾಡುತ್ತಿದ್ದ ಸ್ಥಾನವೇ 'ನೈಷ್ಠಿಕಸ್ಥಾನ' (ಕಾಳಾಮುಖ ಶೈವ ಗುರುಗಳಲ್ಲಿ ಕೆಲವರು ವಿವಾಹಿತರೂ ಆಗಿರುತ್ತಿದ್ದರು). ಆದಿತ್ಯಭಟ್ಟಾರ ಎಂಬುವರ ಸ್ಥಾನವನ್ನು ರಕ್ಷಿಸಲು ಮತ್ತು ಊರ್ಜಿತಗೊಳಿಸಲು ಗೋಕರ್ಣಪಂಡಿತ ಭಟಾರರೇ ಸಮರ್ಥರೆಂದು ಆ ಸ್ಥಾನವನ್ನು ಅವರ ಕಾಲುತೊಳೆದು ಅವರಿಗೆ ಒಪ್ಪಿಸುತ್ತಾರೆ.[108] ದೇವಸ್ಥಾನವೆಂಬುದು ಒಂದು ಧಾರ್ಮಿಕ ಸಂಸ್ಥೆಯಾಗಿದ್ದು ಅದರ ಕೀರ್ತಿ, ಅಪಕೀರ್ತಿಗಳು ಬಹುಮಟ್ಟಿಗೆ ಅದರ ಸ್ಥಾನಪತಿಯ ಮೇಲೆ ನಿಂತಿದ್ದುವು. ರಾಜನೂ ಅವನ ಅಧಿಕಾರಿಗಳೂ ಸೇರಿ ದೇವಸ್ಥಾನಗಳನ್ನು 'ನೈಷ್ಠಿಕಸ್ಥಾನ'ಗಳನ್ನಾಗಿ ಪರಿವರ್ತಿಸಿದ ಉದಾಹರಣೆಗಳು ಕೆಲವು ದೊರೆಯುತ್ತವೆ.[109] ನೈಷ್ಠಿಕನನ್ನು ಗರುಡಪುರಾಣದಲ್ಲಿ[110] ಈ ರೀತಿ ವರ್ಣಿಸಲಾಗಿದೆ—

> ನೈಷ್ಠಿಕೋ ಬ್ರಹ್ಮಚಾರೀ ಚ ವಸೇದಾಚಾರ್ಯ ಸನ್ನಿಧೌ ।
> ತದಭಾವೇऽಸ್ಯ ತನಯೇ ಪತ್ನ್ಯಾಂ ವೈಶ್ವಾನರೇऽಪಿ ವಾ ।
> ಅನೇನ ವಿಧಿನಾ ದೇಹಂ ಸಾಧಯೇದ್ವಿಜಿತೇಂದ್ರಿಯಃ ॥

ಶಾಸನವೊಂದರಲ್ಲಿ, ಮಠದಲ್ಲಿ ವಾಸಿಸುತ್ತಿದ್ದ ತಪೋಧನರು "ನಿಯಮಸ್ಥರುಂ ಸದಾಚಾರರ್" ಆದದ್ದರಿಂದ ಅದು ನೈಷ್ಠಿಕಸ್ಥಾನವೆಂದು ಹೆಸರಾಗಿತ್ತು ಎಂದು ಸ್ಪಷ್ಟವಾಗಿ ಹೇಳಿದೆ.[111] ಇಂತಹ ನೈಷ್ಠಿಕಸ್ಥಾನಗಳಲ್ಲಿದ್ದ ಗೊರವರು, ಅವರಿಂದ ವಿದ್ಯಾದಾನವನ್ನು ಪಡೆಯುತ್ತಿದ್ದ ವಿದ್ಯಾರ್ಥಿಗಳು ಅಖಂಡ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬರಬೇಕೆಂದೂ, ಪಾಲಿಸಲು ಅಸಮರ್ಥರಾದರೆ ಅಂತಹ ಬ್ರಹ್ಮಚರ್ಯಹೀನರನ್ನು ಆ ಸ್ಥಾನಗಳಿಂದ ಓಡಿಸಬೇಕೆಂದೂ ಕಠಿಣನಿಯಮಗಳನ್ನು ವಿಧಿಸುತ್ತಿದ್ದರು.

> "ಈ ಸ್ಥಾನಮನಾಳ್ವ ಗೊರವರಖಂಡಬ್ರಹ್ಮಚಾರಿಯಪ್ಪುದು ಬ್ರಹ್ಮಚರ್ಯಹೀನರಪ್ಪೊಡೆ ಸಮಯದ ಗೊರವರ್ ಕಳೆವೊರ್ ಈ ಪದ್ಧತಿಯಂ ಶಿಲಾಲೇಖೆ ಮಾಡಿ ನಿಱಿಸಿದರ್ ಪಂಡಿತ ಭಟಾರರ್"[112]; "ಮಠಮಿದು ನೈಷ್ಠಿಕ ಮಠಮೀ ಮಠದೊಡೆಯಂ ಬ್ರಹ್ಮಚರ್ಯಮಿಲ್ಲದೊಡಂದೀ ಮಠದಿಂ ಪೊಱಮಡಿಸುವುದು."[113]

ಎಂಬ ಉಕ್ತಿಗಳು ಅನೇಕ ದಾನಶಾಸನಗಳ ಅಂತ್ಯದಲ್ಲಿ ಬರುತ್ತವೆ. ಮಹಾವಿದ್ವಾಂಸರೂ, ಮಹಾ ತಪಸ್ವಿಗಳೂ, ಮಹಾ ವೈರಾಗ್ಯಪರರೂ ಆಗಿ, ದೇವಸ್ಥಾನಕ್ಕೆ ದತ್ತಿಯನ್ನು ಅಂಗೀಕರಿಸುವ ವಿಷಯದಲ್ಲಿ ಸಂಪೂರ್ಣ ಅನಾಸಕ್ತರಾದ ಗುರುಗಳೂ,[114] ದುರ್ವ್ಯಸನಗಳಲ್ಲಿ ತೊಡಗಿ, ಪ್ರತಿದಿನ ದೇವಸ್ಥಾನದ ದ್ರವ್ಯವನ್ನು ವ್ಯಯ

[108] KI. I. 13, 865 A.D.
[109] KI. I. 17, 1055 A.D.; EI.XIII. p. 170, 1050 A.D.
[110] KI. I. p. 20.
[111] SII. IX. I. 128, 1065 A.D.
[112] KI. I. 13, 865 A.D.
[113] EC. VII. SK. 276, 1143 A.D.
[114] EC. VII. Sk. 99, 1113 A.D.

ಮಾಡುತ್ತ, ದುರ್ಜನರಲ್ಲಿ ವ್ಯವಹರಿಸುತ್ತ, ಲೋಕಾಪವಾದಕ್ಕೆ ಹೆದರದ 'ತಾಪಸ ನಿಕೃಷ್ಟ'ರೂ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ[115]. ಕಾಳಾಮುಖ ಗುರುಗಳಲ್ಲಿ ಕೆಲವರು ವಿವಾಹಿತರಾಗಿದ್ದುಕೊಂಡು ತಪಸ್ಸನ್ನಾಚರಿಸುತ್ತಿದ್ದ ನಿದರ್ಶನಗಳೂ ಶಾಸನಗಳಲ್ಲಿ ಅಪೂರ್ವವಾಗಿ ದೊರೆಯುತ್ತವೆ. ಶಾಸನಗಳಲ್ಲಿ 'ದೀಕ್ಷಾಸುತ' ಎಂದರೆ ಶಿಷ್ಯನೆಂದೂ,[116] 'ಸುತ' ಎಂದರೆ ಮಗನೆಂದೂ ಅರ್ಥೈಸಬೇಕಾಗುತ್ತದೆ. ವಾಮಜೀಯ ಎಂಬಾತ ಲಕುಳ ಸಹದೇವರ ಪುತ್ರನೂ, ಗಂಗರಾಶಿ ಪಂಡಿತರ ದೀಕ್ಷಾಸುತನೂ ಆಗಿದ್ದಂತೆ ಶಾಸನವೊಂದು ಹೇಳುತ್ತದೆ[117]. ಈ ವಾಮಜೀಯನು ವಿಪುಳತಪೋಲಕ್ಷ್ಮೀಕಾಂತನೂ, ಶಿವಶಾಸ್ತ್ರಗಳಲ್ಲಿ ನಿಪುಣನೂ, ಗೀರ್ವಾಣನಾಮ ಲಲಾಮನೂ ಆಗಿದ್ದನು. ಆ 'ತಪೋಧನ'ನಿಗೆ ಐವರು ಮಕ್ಕಳಿದ್ದರೆಂದು ಅದೇ ಶಾಸನ ತಿಳಿಸುತ್ತದೆ. ಇಂದ್ರಶಿವಜೀಯರ ಮಗಳು ಚಂದಿಯಕ್ಕನು ತನ್ನ 'ಗೊರವಂಬೊಲ'ದಲ್ಲಿ ಸ್ವಲ್ಪ ಭೂಮಿಯನ್ನು ದಾನಮಾಡಿದಂತೆ ಮತ್ತೊಂದು ಶಾಸನ ತಿಳಿಸುತ್ತದೆ[118]. ಗುಣರತ್ನಸೂರಿಯ (ಸು. ಕ್ರಿ. ಶ. 1363) ಷಡ್ದರ್ಶನ ಸಮುಚ್ಚಯದ ಮೇಲಿನ 'ತರ್ಕರಹಸ್ಯದೀಪಿಕಾ' ಎಂಬ ವ್ಯಾಖ್ಯಾನದಲ್ಲಿ ಶೈವರನ್ನು ಕಾಳಾಮುಖ, ಪಾಶುಪತ, ಶೈವ ಮತ್ತು ಮಹಾವ್ರತಧರ ಎಂದು ನಾಲ್ಕು ಭಾಗಗಳಾಗಿ ಮಾಡಿ ಅವರಲ್ಲಿ ಗೃಹಸ್ಥರು ("ಸಸ್ತ್ರೀಕ"), ಬ್ರಹ್ಮಚಾರಿಗಳು ("ನಿಸ್ತ್ರೀಕ") ಎಂದು ಎರಡು ರೀತಿಯವರೂ ಉಂಟೆಂದು ಹೇಳಿದೆ.[119]

## ತಪಸ್ಸು ಮತ್ತು ವಿದ್ವತ್ತು

ಶಾಸನಗಳಲ್ಲಿ ಚಿತ್ರಿತವಾಗಿರುವಂತೆ ಈ ಲಾಕುಳ ಶೈವರ ತಪಸ್ಸು[120] ಅಸಾಮಾನ್ಯವಾದುದು. ಭಗವಚ್ಚಿಂತನೆಯೊಂದೇ ಅವರ ನಿತ್ಯಕರ್ಮವಾಗಿತ್ತು. ವರುಣಶಿವಭಟಾರರ್ ಎಂಬ ಸನ್ಯಾಸಿಯನ್ನು "ತಪೋವನಾನುರಾಗ"ನೆಂಬೂ "ಭಗವತ್‌ಪಾದೈಕಾಭರಣ"ನೆಂದೂ ಒಂದೆಡೆ ಹೊಗಳಿದೆ.[121] ಮುಳುಗುಂದದ ನಗರೇಶ್ವರ ದೇವಸ್ಥಾನದ ಸ್ಥಾನಪತಿಯಾಗಿದ್ದ ಧ್ರುವೇಶ್ವರ ಪಂಡಿತದೇವನನ್ನಂತೂ ಶಾಸನವೊಂದು ಆವೇಶಪೂರ್ಣವಾಗಿ ವರ್ಣಿಸುತ್ತದೆ. ಸಂಸಾರಸುಖದ ಕಡೆ ಮನಸ್ಸನ್ನೆಳೆಯುವ ಇಂದ್ರಿಯಗಳನ್ನು ಗೆದ್ದು ಕಾಮಾರಿಯಾದ ಶಿವನನ್ನಾರಾಧಿಸುವ ಆ ಮುನಿಯು ತಪಸ್ಸಿನಲ್ಲಿ ವಸಿಷ್ಠ ಮತ್ತು ಅಗಸ್ತ್ಯರಿಗೆ ಸಮನೇ ಸರಿ. ಅವನಿಂದ ಆ ನಗರೇಶ್ವರದ ಮಠವು ವಸುಧೆಗೆ

---

115 BKI. I. ii. 152, 1103 A.D. ಭಕ್ತರಿಂದ ಪಡೆದ ಹಣವನ್ನೆಲ್ಲ ಜಡೆಯ ಸಂದುಗಳಲ್ಲಿಟ್ಟುಕೊಂಡು ವೇಶ್ಯೆಯರಿಗೆ ಕೊಡುವ 'ತುಡುಗುಣಿಗೊರವ'ರ ವಿಡಂಬನೆ ಶಾಸನವೊಂದರಲ್ಲಿ ಬಂದಿದೆ. (EC. XII. Ck. 30, 1149 A.D.) "ಹಡದ ಹಣ ಹಾಗವೆಲ್ಲವು ಜಡೆಯಿಡುಕುಳ್ಳಿಮಡಸಿ ಮಿಂಡಿದೊತ್ತಿರಿಗಿ(ಗೀ) ವಿ (ವೀ) ತುಡುಗುಣಿ ಗೊರವರ ಮೆಚ್ಚಂ ಪೊಡವಿಗೆ ಸಿವಸಕ್ತಿ ತಾನೆ ನೈಷ್ಟಿಕಮುನಿಪಾ."

116 ಉಪನಯನವೆಂದರೆ ವಿದ್ಯಾರ್ಥಿಯನ್ನು ಗುರುವಿನ ಸಮೀಪಕ್ಕೆ ಕರೆದೊಯ್ಯುವುದು ಎಂದರ್ಥ. ಹಾಗೆ ಬಂದ ವಿದ್ಯಾರ್ಥಿಯನ್ನು ಗುರು 'ತನ್ನ ಉದರದಲ್ಲಿ ಧರಿಸಿ' ಮತ್ತೊಂದು ಜನ್ಮವನ್ನು ಕೊಡುತ್ತಾನೆ. ಅಂದಿನಿಂದ ಅವನು 'ದ್ವಿಜ'ನಾಗುತ್ತಾನೆ. 'ದೀಕ್ಷಾಸುತ' ಎಂದರೆ ಇದೇ ಅರ್ಥ.

117 EC. V. Ak. 17, 1139 A.D.

118 BKI. I. ii. 191, 1112 A D.

119 D. R. Bhandarkar : "Lakulīśa" (Archaeological Survey of India, 1906-7.)

120 ಕೆಲವೆಡೆ ಇವರ ತಪಸ್ಸನ್ನು 'ವೀರತಪ' ಎಂದು ಕರೆದಿದೆ. ವೀರತಪ ಎಂದರೆ ಕಠಿಣ ತಪಸ್ಸು ಎಂದರ್ಥ. ಲಕುಲೀಶನ ಬಾಯಿಂದ ಬಂದುದೆಂದು ಹೇಳಲಾದ ಪಾಶುಪತ ಸೂಕ್ತದಲ್ಲಿ ಪಾಶುಪತರಿಗೆ ಅನೇಕ ಕಠಿಣ ವಿಧಿಗಳನ್ನು ವಿಧಿಸಿದೆ. ಲೋಕದ ಕಣ್ಣಿಗೆ ಹುಚ್ಚರಂತೆ ಕಾಣಿಸಿಕೊಂಡು, 'ಅಪಮಾನ'ವನ್ನು ಹೊಂದಿ, ಸಹಿಸಿಕೊಂಡು ವಿನಯವನ್ನು ಸಾಧಿಸಬೇಕು. ಕುಂಟನಂತೆ ಕುಂಟುವುದು, ಹುಚ್ಚನಂತೆ ಮಾತನಾಡುವುದು, ಬೂದಿಯನ್ನು ಬಳಿದುಕೊಳ್ಳುವುದು, ಕೂಗುವುದು, ನಗುವುದು, ಕುಣಿಯುವುದು, ದೇವರಿಗೆ ಮುಡಿಸಿದ ಮಾಲೆಯನ್ನು ಮುಡಿದುಕೊಳ್ಳುವುದು—ಇತ್ಯಾದಿಗಳೇ ಈ ಕಠಿಣ ವ್ರತಗಳು. ನೋಡಿ-ಪಾಶುಪತ ಸೂತ್ರಮ್ (ತಿರುವಾಂಕೂರು ವಿಶ್ವವಿದ್ಯಾನಿಲಯದ ಪ್ರಕಟಣೆ), 1.8.

121 SII. IX. i. 24, 936 A.D.

ಪೂಜ್ಯವಾಯಿತು.[122] ಈ ಲಾಕುಳ ಶೈವರ ತಪಸ್ಸಿಗೆ ಸರಿ ಅಥವಾ ಮಿಗಿಲು ಅವರ ವಿದ್ಯಾಪ್ರತಿಷ್ಠೆ. ಇವರು ನಡೆಯಿಸುತ್ತಿದ್ದ ವಿದ್ಯಾಕೇಂದ್ರಗಳ ವಿಸ್ತಾರವಾದ ಚರ್ಚೆ ಮುಂದಿನ ಅಧ್ಯಾಯವೊಂದರಲ್ಲಿ ಬರುತ್ತದೆ. ಇಲ್ಲಿ ಅವರ ವಿದ್ಯಾಪ್ರತಿಷ್ಠೆಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ಸೂಂಡಿ ಎಂಬಲ್ಲಿ ಒಂದು ಪ್ರಸಿದ್ಧ ವಿದ್ಯಾಕೇಂದ್ರವಿದ್ದಂತೆ ತಿಳಿದು ಬರುತ್ತದೆ. ಅಲ್ಲಿಯ ಸೋಮೇಶ್ವರ ಪಂಡಿತದೇವರನ್ನು ಹೊಗಳುವಾಗ "ಲೋಕದಲ್ಲಿ ಹಲವಾರು ಜನ ವ್ರತೀಂದ್ರರು ಇರಬಹುದು. ಅವರಲ್ಲಿ ಒಂದಿದ್ದರೆ ಒಂದಿಲ್ಲ. ಆದರೆ ಸೋಮೇಶ್ವರನಲ್ಲಿ ತಪೋ ವಿಖ್ಯಾತಿ, ಅಮಲಿನ ಚರಿತಖ್ಯಾತಿ, ವಿದ್ಯಾಚತುರತ್ವಖ್ಯಾತಿ, ಅಖಿಳ ಗುಣಗಣಖ್ಯಾತಿಗಳು ಉಂಟು" ಎಂದು ಶಾಸನವೊಂದು ಹೇಳುತ್ತದೆ. ಮುಂದುವರಿದು, ಅವನು ಅನೇಕ ರಾಜರಿಂದ ಪೂಜಿತನೆಂದೂ, ವೈಶೇಷಿಕ ಚೂಡಾ ರತ್ನನೆಂದೂ, ನೈಯಾಯಿಕ ಸರಸಿಜ ಮಾರ್ತಾಂಡನೆಂದೂ, ಸಾಂಖ್ಯ ಪ್ರಭಾವಾಧಿಕ ಶಬ್ದಜ್ಞಾನ ಪದ್ಮಾಸನ ನೆಂದೂ, ಮೀಮಾಂಸಕ ಗೋತ್ರ ತ್ರಾಸಿಯೆಂದೂ ಹೊಗಳಿದೆ. ಅಲ್ಲಿ 'ವಿಶ್ವವಿದ್ಯಾರ್ಥಿ'ಗಳಿಗೆ ಎಂದರೆ ಪ್ರಪಂಚದ ಮೂಲೆ ಮೂಲೆಗಳಿಂದ ಬಂದ ವಿದ್ಯಾರ್ಥಿಗಳಿಗೆ ವಿದ್ಯಾದಾನ ನಡೆಯುತ್ತಿತ್ತು.[123] ಶೈವಗುರುಗಳಲ್ಲಿ ಕೆಲವರು ವೀರರೂ, ಧನುರ್ವೇದ ಪಾರಂಗತರೂ, ಗಿರಿದುರ್ಗಗಳನ್ನು ಭೇದಿಸುವ ವಿದ್ಯೆಯನ್ನರಿತವರೂ ಆಗಿದ್ದು, ತಮ್ಮ "ಶಸ್ತ್ರ ಶಾಸ್ತ್ರ ಪರಿಣತಿ"ಯ ಮಹಿಮೆಯಿಂದ ಅನೇಕ ರಾಜಕುಲಗಳನ್ನು "ಸಮುದ್ಧರಣ" ಮಾಡಿದ ಅತ್ಯಪೂರ್ವ ವ್ಯಕ್ತಿಗಳೂ ಆಗಿದ್ದರು. ಉದಾಹರಣೆಗೆ ಶ್ರೀಮತ್ ರಾಜಗುರುದೇವರ ಪ್ರಶಸ್ತಿಯನ್ನು ನೋಡಬಹುದು—"ಸಾಹ ಸೋತ್ತುಂಗಂ ವೀರಾವತಾರಂ ವೀರಚೂಡಾಮಣಿ ಶೈವಪ್ರಾಕಾರಂ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವ ಸಸ್ತ್ರಸಾಸ್ತ್ರ ವಿಶಾರದಂ ನಾರಾಚಪರಶುರಾಮ ಗಿರಿದುರ್ಗಭಂಜಾನಾಂಜನೆಯ ಕೊಂಕಣ ರಕ್ಷಾಳಂ ಕದಂಬಾನ್ವಯಸಮುದ್ಧರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್"[124]. ಇವರ ಅಭ್ಯಾಸವು ಸಿದ್ಧಾಂತ, ತರ್ಕ, ವ್ಯಾಕರಣಗಳನ್ನು ಮಾತ್ರವೇ ಅಲ್ಲ; ಕಾವ್ಯ ನಾಟಕ ನರ್ತನಾದಿಗಳನ್ನೂ ಒಳಗೊಂಡಿತ್ತು. ಕೆಲವರನ್ನಂತೂ 'ಸಾಹಿತ್ಯ ವಿದ್ಯಾಪ್ರವೀಣರ್', 'ಸರ್ವಜ್ಞಕಲ್ಪರ್', ಎಂದು ಬಹು ಗೌರವ ದಿಂದ ಕರೆದಿದೆ.[125] ಎಲ್ಲ ಷಡ್ದರ್ಶನಗಳನ್ನೂ ಕರತಲಾಮಲಕವಾಗಿ ಮಾಡಿಕೊಂಡು ತರ್ಕ, ನಾಟಕ, ಕಾವ್ಯ, ವ್ಯಾಕರಣ, ಲಾಕುಳ ಸಿದ್ಧಾಂತಗಳನ್ನು ಅಭ್ಯಸಿಸಿ 'ದೇವನದೀಪ್ರವಾಹ' ದಂತೆ ಹರಿಯುವ 'ನಿರುಪಮೋಪನ್ಯಾಸ' ವನ್ನು ಮಾಡುತ್ತಾ, ತನ್ನಿಂದ ದೀಕ್ಷೆಪಡೆದು ಸಂವರ್ಧಿಸಿರುವ ಶಿಷ್ಯರ ಪರಂಪರೆಯನ್ನೇ ಹೊಂದಿರುವ ಸೋಮೇಶ್ವರ ಪಂಡಿತ ದೇವರಂತಹವರು[126] ಲಾಕುಳಶೈವರಲ್ಲಿ ಅನೇಕರಿದ್ದಾರೆ. ವಾಮಶಕ್ತಿ ಎಂಬ ಶೈವಗುರುವಿನ ಬಹುಮುಖ ಜ್ಞಾನವನ್ನು ತಿಳಿಸುತ್ತದೆ ಈ ಪದ್ಯ :

[122] BKI. I. i. 97, 1062 A.D.

"ಧಾರಣ ಹಾರಣ ಬ್ರತದೊಳಿಂತೊಡಲಂ [ಜಡ] ಮಾಡಿ ನೈಷ್ಠಿಕಾಯಾತದೊಳೊಪ್ಪಿ ಕೂಡಿ ಸಿವಪೂಜನೆಯಂ ಬಲವಂದು ಮಾಡಿ ಸಂಸಾರಸುಖಕ್ಕೆ ದರ್ಪವಿಷಯಂಗಳನೇಳಿಸಿ ಕಾಡಿಯಾಡಿ ಕಾಮಾರಿಯನರ್ಚಿಸಲ್ಕೆ ನಲಿದಿರ್ಪ ಮುನೀಶ್ವರಸೀ ಧ್ರುವೇಶ್ವರ॥ ಮನಮೆಂಬಂಕುಸದಿನ್ದಯ್ದೆನಯಿಂದ್ರಿಯಗಜಮನುಗಿದು ವಿಷಯಂ ತನಗೆ ತಲೆ [ದೋಃಜಿಲೆಂಬಿ] ದವೆನೆ ನೆಗರ್ದ ಮುನೀಶ್ವರಂ ಧ್ರುವೇಶ್ವರದೇವ॥ ಮುನಿಗಳೊಳಾ ಮಹಾಮುನಿ ಧ್ರುವೇಶ ಪಂಡಿತರೀ ಜಗತ್ರಯಂ ಪೊಗಳೆ ತಪಪ್ರಭಾವನಿಧಿ ....ದೊರೆ ಪದ್ಮಸಂಭವಂ ದೊರೆ ಮುನಿಯಾ ವಸಿಷ್ಠ ಮುನಿಯುಂ ಸಮನಾದನಘಸ್ತ್ಯನುತ್ತಮಂ ಸರಿಯೆನೆ ಬಣ್ಣಿಸಲು ತ್ರಿಭು ವನಂ ಪೊಗಳುತ್ತಿರೆಯಾ ಮುನೀಶನುತ್ತಮನಿರೆ ಪೂಜ್ಯಮಾಗಿ ನಗರೇಃಶ್ವರದೀ ಮಠಮೊಪ್ಪಿ ತೋಃಜುಗುಂ ॥"

[123] EI. XV. P. 87, 1058 A. D.

[124] EI. XIX. p. 180, 1045 A. D.

[125] EC. VII. Sk. 94, 1094 A.D.

[126] EC. VII. Sk. 98, 1103 A.D.

ವ್ರತದೀಕ್ಷಾವಿಧಿ ಕುಂಡಮಂಡಳವಿಧಾನಂ ಲಿಂಗಪೀಠಕ್ರಮಂ
ಪ್ರತಿಮಾದೂಷಣಶೋಷಣಭುವನಕೋಶಂ ವಾಸ್ತುಭೂದೇವಸಂ
ಸ್ತುತಿ ಭೂಭೇದಪರೀಕ್ಷೆ ದೇವನಿವಹಪ್ರಾಸಾದವೆಂಬಾಗಮ–
ಸ್ಥಿತ ವಿದ್ಯಾವಳಿ ವಾಮಶಕ್ತಿಮುನಿಯಿಂ ವಿಖ್ಯಾತಮಾಯುರ್ವಿಯೊಳ್ ||[127]

ಹೀಗೆ ಇವರು ಜ್ಞಾನಾರ್ಜನೆ ತಪಸ್ಸುಗಳಲ್ಲಿ ಮಗ್ನರಾಗಿದ್ದರೂ ತಮ್ಮ ಊರಿನ, ತಮ್ಮ ದೇಶದ ಆಗು ಹೋಗುಗಳ ವಿಷಯದಲ್ಲಿ ಅನಾಸಕ್ತರಾಗಿದ್ದಂತೆ ತೋರಿಬರುವುದಿಲ್ಲ. ಇವರಿಗೆ ವನವಾಸವನ್ನಾಗಲಿ, ಏಕಾಂತ ವಾಸವನ್ನಾಗಲಿ ಅಥವಾ 'ಚಾತುರ್ಮಾಸ್ಯ' ವ್ರತವನ್ನಾಗಲಿ ವಿಧಿಸಿರುವಂತೆ ತೋರದು.[128] ಇವರು ಜನರ ಮಧ್ಯೆ, ಜನರಲ್ಲಿ ಬೆರೆತು ಬಾಳಿರುವಂತೆ ಕಾಣುತ್ತದೆ. ಊರಿನ ಸತ್ರಕ್ಕೋ ಕೆರೆಗೋ ಅಥವಾ ಇನ್ನಾವುದಾದರೂ ಸಾಮಾಜಿಕವಾದ ಚಟುವಟಿಕೆಗೋ ಯಾರಾದರೂ ದತ್ತಿಯನ್ನು ಬಿಟ್ಟುಕೊಟ್ಟಾಗ ಅದು ಆ ಊರಿನ ಶೈವ ಗುರುಗಳ ಅಥವಾ ಸ್ಥಾನಪತಿಗಳ ಸಮ್ಮುಖದಲ್ಲಿ ನಡೆಯಿತು ಎಂಬ ವಿವರಣೆ ಶಾಸನಗಳಲ್ಲಿ ಬರುತ್ತದೆ.[129] ಇವರು ಜನರ ಹಿತಕ್ಕಾಗಿ ಕೆರೆಗಳನ್ನು ಕಟ್ಟಿಸುತ್ತಿದ್ದುದು ಮಾತ್ರವಲ್ಲ, ಊರಿನ ರಕ್ಷಣೆಗಾಗಿ ಹೋರಾಡಿ ಸತ್ತವರ ಸಂಸಾರದ ನಿರ್ವಹಣೆಗಾಗಿ ದತ್ತಿಗಳನ್ನು ಬಿಟ್ಟುಕೊಟ್ಟು ಸಾಮಾಜಿಕ ಜೀವನದಲ್ಲಿ ಪಾಲುಗಾರರೂ ಆಗುತ್ತಿದ್ದರು.[130] ಇವರಲ್ಲಿ ಕೆಲವರು ತಮ್ಮ ಕಾಲದ ರಾಜಕೀಯ ವ್ಯವಹಾರಗಳಲ್ಲೂ ಸ್ವಲ್ಪ ಮಟ್ಟಿಗೆ ಕೈಹಾಕಿದ್ದಕ್ಕೆ ಕೆಲವು ಸ್ಪಷ್ಟ ಸೂಚನೆಗಳಿವೆ. ರಾಜಗುರುದೇವರನ್ನು "ಕದಂಬಾನ್ವಯ ಸಮುದ್ಧರಣ" ಎಂದು ಹೊಗಳಿರುವುದನ್ನು ಜ್ಞಾಪಿಸಿಕೊಳ್ಳಬಹುದು. ಅಷ್ಟೇ ಅಲ್ಲ, ಪ್ರಸಿದ್ಧ ಶೈವ ಕೇಂದ್ರವಾಗಿದ್ದ ಬಳ್ಳಿಗಾವೆಯ ಶಾಸನವೊಂದರಲ್ಲಿ ಬನವಾಸಿಯ ದಂಡನಾಯಕ ಪದ್ಮರಸನ ಅಪ್ಪಣೆಯ ಪ್ರಕಾರ ದಕ್ಷಿಣಕೇದಾರ ದೇವರ ಪಾದಾರಾಧಕರಾದ ವಾಮಶಕ್ತಿದೇವರನ್ನು ಬಂಧಿಸಿದಾಗ ತೊಣವತ್ತಿಯ ಮೆಜಿಗಾಜ (?) ನಾದ ಬಾಚೆಯ ನಾಯಕನು ಕಾದಿ ಸ್ವರ್ಗಸ್ಥನಾದ ವಿಷಯವನ್ನು ಹೇಳಿದೆ[131]. ವಾಮಶಕ್ತಿದೇವರನ್ನು ಬಂಧಿಸಲು ಪ್ರಯತ್ನಿಸಿದ್ದು ಏಕೆ ಎನ್ನುವುದು ಸ್ಪಷ್ಟವಿಲ್ಲ: ಅಂತೂ ಈ ಶಾಸನದ ಶೈವ ಗುರುಗಳು ರಾಜಕೀಯ ವ್ಯವಹಾರಗಳಲ್ಲಿ ಕೈಹಾಕಿರಬೇಕು ಎಂದಿಷ್ಟು ಮಾತ್ರ ಖಚಿತ.

ಇಷ್ಟು ಪ್ರಭಾವಶಾಲಿಗಳಾಗಿದ್ದ ಅನೇಕರು 'ರಾಜಪೂಜಿತ'ರಾಗಿದ್ದರು. ಚಾಲುಕ್ಯ ಚಕ್ರವರ್ತಿ ಪೆರ್ಮಾಡಿರಾಯನಿಗೆ ಇಂದ್ರಶಿವದೇವಾಚಾರ್ಯರು 'ರಾಜಗುರು'ಗಳಾಗಿದ್ದರು[132]. ಶ್ರೀ ಮಾಹೇಂದ್ರಾಧಿರಾಜ

---

127 ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. 7.

128 ಇದು ಶಾಸನಗಳ ಅಭ್ಯಾಸದಿಂದ ನಮ್ಮ ಮನಸ್ಸಿನಲ್ಲಿ ಬರುವ ಭಾವನೆ. ಆದರೆ ಪಾಶುಪತ ಸೂತ್ರಗಳಲ್ಲಿ, ಭಾಸರ್ವಜ್ಞನ ಗಣಕಾರಿಕೆಯ ಮೇಲಿನ ವ್ಯಾಖ್ಯಾನದಲ್ಲಿ ಸಾಧಕರಿಗೆ ಬೇರೆ ಬೇರೆ ಹಂತಗಳನ್ನೂ ಕಠಿಣ ನಿಯಮಗಳನ್ನೂ ವಿಧಿಸಿದೆ. ಆರಂಭದಲ್ಲಿ ಸರ್ವವನ್ನೂ ತ್ಯಾಗಮಾಡಿ ದೇವಸ್ಥಾನದ ವಲಯದಲ್ಲಿ ವಾಸಿಸಬೇಕು. ಇದು ಮೊದಲನೆಯ ಹಂತ. ಎರಡನೆಯ ಹಂತದಲ್ಲಿ ಜನರ ಕೈಯಲ್ಲಿ ತಮ್ಮ ವಿಚಿತ್ರ ವರ್ತನೆಗಳಿಂದ ಅಪಮಾನವನ್ನು ಹೊಂದಿ ಅಹಂಕಾರವನ್ನು ಜಯಿಸಿರುವೆನೆಂದು ತೋರಿಸಿಕೊಳ್ಳಬೇಕು. ಮೂರನೆಯ ಹಂತದಲ್ಲಿ, ಸಮಾಜದಿಂದ ದೂರವಿದ್ದು ಗುಹೆಗಳಲ್ಲಿ ವಾಸಿಸುತ್ತಾ ಚಳಿ, ಗಾಳಿ, ಮಳೆ, ಬಿಸಿಲುಗಳನ್ನು ಲೆಕ್ಕಿಸದೆ ತಪಸ್ಸು ಮಾಡಬೇಕು. ನಾಲ್ಕನೆಯ ಹಂತದಲ್ಲಿ, ಪಶುಪತಿಯಲ್ಲೇ ನಟ್ಟ ಮನಸ್ಸುಳ್ಳವರಾಗಿ ಶ್ಮಶಾನವಾಸಿಗಳಾಗಬೇಕು. ಐದನೆಯ ಹಂತದಲ್ಲಿ ಸುತ್ತಮುತ್ತಣ ಅರಿವಿಲ್ಲದೆ ಪಶುಪತಿಯ ಧ್ಯಾನದಲ್ಲಿ ಮಗ್ನವಾಗಿರಬೇಕು.

—ಪಾಶುಪತ ಸೂತ್ರಂ (ಸಂ. ಆರ್. ಅನಂತಕೃಷ್ಣ ಶಾಸ್ತ್ರಿ), ಮುನ್ನುಡಿ, ಪುಟ 9–10.

129 SII. IX. i. 24, 936 A.D.

130 EC. X. SP. 27, C. 870 A.D.

131 EC. VII. Sk. 139, 1160 A.D. ಈ ಸಂಗತಿ ಶಾಸನದ ಕಲ್ಲಿನ ಮೇಲಿನ ಶಿಲ್ಪದಲ್ಲೂ ಚಿತ್ರಿತವಾಗಿದೆ.

132 BKI. I. ii. 156, 1105 A.D.

ಎಂಬಾತ ತಾನು 'ಪರಮಮಾಹೇಶ್ವರ'ನಾದುದರಿಂದ ತನ್ನ ಅರಮನೆಯನ್ನೇ ಮಹಾದೇವರಿಗೆ ನಿವೇದಿಸಿ ಅದಕ್ಕೆ ಮಹೇಂದ್ರೇಶ್ವರ ಎಂಬ ಹೆಸರಿಟ್ಟು ಅದಕ್ಕೆ ಬೇಕಾದಷ್ಟು ದತ್ತಿಗಳನ್ನು ಬಿಟ್ಟುಕೊಟ್ಟ ವಿಷಯ ಒಂದೆಡೆ ಬಂದಿದೆ.[133] ರಾಜನು ದೇಶವನ್ನು ಆಳುತ್ತಿದ್ದರೆ, ಇವರು ಜನದ ಮನಸ್ಸನ್ನು ಆಳುತ್ತಿದ್ದರು, 'ತಪ್ರೋರಾಜ್ಯಂಗೆಯ್ಯು'ತ್ತಿದ್ದರು.[134]

## ಶೈವರು ಮತ್ತು ವೈದಿಕರು

ಶೈವಧರ್ಮವು ಮೂಲತಃ ಅವೈದಿಕವಾಗಿದ್ದರೂ ಕ್ರಮೇಣ ಅದರಲ್ಲಿ ಅನೇಕ ವೈದಿಕಾಚರಣೆಗಳು ಸೇರಿಕೊಂಡುವು. ಕನ್ನಡ ಶಾಸನಗಳನ್ನು ನೋಡಿದರೆ ಲಕುಲೀಶ–ಪಾಶುಪತರು ವೈದಿಕರಾಗಿದ್ದು ಬ್ರಾಹ್ಮಣರಿಂದಲೂ ಪೂಜಿತರಾಗಿದ್ದರು. ಅವರು ಶಿವಾಗಮಗಳಲ್ಲಿ ಎಷ್ಟು ನಿಷ್ಣಾತರಾಗಿದ್ದರೋ ವೇದಗಳಲ್ಲೂ ಅಷ್ಟೇ ಪಾಂಡಿತ್ಯವನ್ನು ಪಡೆದಿದ್ದರು. ಶೈವರಿಗೂ ವೈದಿಕಬ್ರಾಹ್ಮಣರಿಗೂ ಇದ್ದ ಸ್ನೇಹವನ್ನು ಸೂಚಿಸಲು ಒಂದೆರಡು ನಿದರ್ಶನಗಳನ್ನು ಕೊಡಬಹುದು. ಚಕ್ರವರ್ತಿಪೂಜಿತರೂ ಮಹಾವೈದಿಕರೂ ಆದ ಚಾಮುಂಡಭಟ್ಟರ ಸೋದರನು 'ಲಾಕುಳ ಸಿದ್ಧಾಂತ'ದಲ್ಲಿಯೂ ಪಾರಂಗತನಾಗಿದ್ದನೆಂದು ಶಾಸನವೊಂದು ಹೇಳುತ್ತದೆ.[135] ಇನ್ನೊಂದು ಶಾಸನವನ್ನು ಹೆಸರಿಸಿದರೆ ಮಾತ್ರ ಸಾಲದು. ಅಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಸಂಗ್ರಹವಾಗಿ ಹೇಳುವುದು ಅತ್ಯಾವಶ್ಯಕ. ಮುಳುಗುಂದದ ಶೋಭನೇಶ್ವರದ ಸ್ಥಾನಪತಿ ಭಾವಶಿವದೇವರು ಮಹಾತಪಸ್ವಿಗಳು, ಉದಾರಿಗಳು, ಅನಾಥರನ್ನು ವಿಪ್ರರನ್ನು ವಿದ್ವಾಂಸರನ್ನು ಸಕಲ ಧರ್ಮಗಳನ್ನು ರಕ್ಷಿಸುತ್ತಿದ್ದ ಮಹಾನುಭಾವರು. ಇವರು 'ದಶಪ್ರತ್ಯಯ ಜ್ಞಾನಿ'[136]ಗಳು; ಚಕ್ರವರ್ತಿ, ಮಾಂಡಳಿಕ, ಸಾಮಂತಾದ್ಯರಿಂದ ಪೂಜಿತರು. ಇವರು ಶೋಭನೇಶ್ವರ, ಗುಣದಬ್ಬೇಶ್ವರ ಮತ್ತು ಮೂಗುಂಡಿಯ ಲೋಕಬ್ಬೇಶ್ವರಗಳ ಸ್ಥಾನಪತಿಗಳಾಗಿದ್ದರು. ಇವರು ಒಬ್ಬ ಪುಟ್ಟ ಹುಡುಗನನ್ನು ಸಾಕಿ ಸಲಹಿ, ಅವನು ದೊಡ್ಡವನಾದ ಮೇಲೆ ಮದುವೆಯನ್ನು ಮಾಡಿದರು. ಅವನೇ ಬ್ರಹ್ಮಪುರಿಗೆ ಮುಖ್ಯನಾದ ನಾಗಸ್ವಾಮಿ. ಇವನು ಮಹಾ ಧರ್ಮಿಷ್ಠ. ಅನೇಕ ಧರ್ಮಕಾರ್ಯಗಳನ್ನು ಮಾಡುತ್ತಾನೆ. ಹೀಗಿರಲು ಭಾವಶಿವರಿಗೆ ತಮ್ಮ ಮುಕ್ತಿಕಾಲವು ಸಮೀಪಿಸುತ್ತಿದ್ದುದು ತಿಳಿದು ಎಲ್ಲರನ್ನೂ ಬರಮಾಡಿಕೊಂಡು ತಮ್ಮ ಸ್ಥಾನವನ್ನು ತಮ್ಮ ಹೆಸರಿನ (ಬಹುಶಃ ತಮ್ಮ ಶಿಷ್ಯ) ವ್ಯಕ್ತಿಗೆ ವಹಿಸಿಕೊಟ್ಟು, ತಮಗೆ ಪರೋಕ್ಷವಿನಯವಾಗಿ ಗಂಗಾಸ್ನಾನ, ಗಂಗೆಯಲ್ಲಿ ಪಿಂಡಪ್ರದಾನ, ವಾರಣಾಸಿಯಲ್ಲಿ ದೇವಸ್ಥಾನನಿರ್ಮಾಣ ಇವುಗಳನ್ನು ಮಾಡಿಸುವಂತೆ ನಾಗಸ್ವಾಮಿಯನ್ನು ಬೇಡಿಕೊಳ್ಳುತ್ತಾರೆ. ಮುಂದೆ ಭಾವಶಿವರ ಸಮಾಧಿಯನಂತರ ನಾಗಸ್ವಾಮಿಯು ಗುರುಗಳ ಇಚ್ಛಾಪೂರ್ತಿಗಾಗಿ ತೀರ್ಥಯಾತ್ರೆಗೆ

---

[133] EC. XII. Si. 38, 878 A D.

[134] BKI. I. i. 64, 1028 A.D.

[135] BKI. I. i. 45, 980 A.D.

[136] 'ದಶಪ್ರತ್ಯಯ' ಎನ್ನುವುದು ಲಾಕುಳಸಿದ್ಧಾಂತದ ಪಾರಿಭಾಷಿಕ ಪದವಾಗಿರುವಂತೆ ಕಾಣುತ್ತದೆ. 'ದಶಕುಶಳ ಧರ್ಮ' 'ದಶಧರ್ಮ' ಎಂಬ ಮಾತುಗಳು ಇನ್ನೊಂದು ಶಾಸನದಲ್ಲಿ ಬರುತ್ತವೆ. (BKI. I. ii. 198, 1123 A D.) ವೈಜಯಂತೀ ಕೋಶ (ಪುಟ 7, ಶ್ಲೋಕ 47–8)ದ ಪ್ರಕಾರ ಜ್ಞಾನ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮಾ, ಧೃತಿ, ಸ್ರಷ್ಟೃತ್ವ, ಆತ್ಮಸಂಬೋಧ, ಅಧಿಷ್ಠಾತೃತ್ವಗಳು ಪರಮಾತ್ಮನ ಹತ್ತು ಅವ್ಯಯಗಳು. ನಾರದಪರಿವ್ರಾಜಕೋಪನಿಷತ್ತಿನ ಪ್ರಕಾರ (3. 23–24) ಧರ್ಮವು ದಶಲಕ್ಷಣಕವಾಗಿದೆ. ಧೃತಿ, ಕ್ಷಮಾ, ದಮ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ, ಧೀ, ವಿದ್ಯಾ, ಸತ್ಯ ಅಕ್ರೋಧ—ಇವುಗಳನ್ನು ಲಕ್ಷಣವಾಗಿ ಉಳ್ಳುದೇ ಧರ್ಮ. ಜೈನರಲ್ಲಿಯೂ ದಶಧರ್ಮಗಳುಂಟು. ನೋಡಿ-– "ತ್ರಿದಂಡರಹಿತರುಂ ತ್ರಿಶಲ್ಯವರ್ಜಿತರುಂ ಚತುಷ್ಕಷಾಯದೂರರುಂ ತ್ರಯೋದಶವಿಧಚಾರಿತ್ರಸಂಪನ್ನರುಂ ಪಂಚಾಚಾರಯುಕ್ತರುಂ ದಶಧರ್ಮಧರರುಮಾಗಿ. . ." (ಧರ್ಮಾಮೃತ, 11.109).

ಹೋಗುತ್ತಾ "ಧರ್ಮಮೇಕಂ ಪರಂ ಸಖಾ" ಎಂದು ತಿಳಿದು, ತನ್ನ ಆಸ್ತಿಯಲ್ಲಿ ಸ್ವಲ್ಪವನ್ನು ತನ್ನ ಸಂತತಿಗೆ ಇಟ್ಟು ಉಳಿದ ಎಲ್ಲವನ್ನೂ ಧರ್ಮಕ್ಕಾಗಿ ವಿನಿಯೋಗಿಸುತ್ತಾನೆ.[137]

ಈ ಶಾಸನ ಅನೇಕ ದೃಷ್ಟಿಗಳಿಂದ ಗಮನಾರ್ಹವಾದುದು. ಒಂದು 'ಸ್ಥಾನ'ಕ್ಕೆ ಅಧೀನವಾಗಿ ಅನೇಕ ಸ್ಥಾನಗಳಿದ್ದು ಆ ಮೂಲಸ್ಥಾನದ ಸ್ಥಾನಪತಿಯು ಅಧಿಕಾರ ಉಳಿದ ಸ್ಥಾನಗಳ ಮೇಲೆ ಇರುತ್ತಿದ್ದಿತು ಎಂಬುದು ಇದರಿಂದ ಗೊತ್ತಾಗುತ್ತದೆ (ಕುಪ್ಪಟೂರಿನ ಕೋಟೀಶ್ವರ ದೇವಾಲಯದ ಸ್ಥಾನಪತಿಯು ಆಡಳಿತದಲ್ಲಿದ್ದ ಒಂಬತ್ತು ದೇವಸ್ಥಾನಗಳ ಹೆಸರನ್ನು ಶಾಸನವೊಂದರಲ್ಲಿ ಹೆಸರಿಸಿದೆ)[138]. ಶೈವರಾದ ಭಾವ ಶಿವರು ವೈದಿಕ ಶಿಶುವನ್ನು ಸಾಕಿ ಪೋಷಿಸಲು ಬ್ರಾಹ್ಮಣ ಸಮಾಜವು ಅಡ್ಡಿ ಬಂದಿಲ್ಲ. ಅಷ್ಟೇ ಅಲ್ಲ, ಅವರು ಸಾಕಿದ ನಾಗಸ್ವಾಮಿಯು ಬ್ರಹ್ಮಪುರಿಗೆ ಪ್ರಧಾನ ವ್ಯಕ್ತಿಯಾದನು ಎಂಬುದು ಗಮನಾರ್ಹ. ಸ್ಥಾನಪತಿಯು ತನ್ನ ಅವಸಾನಕಾಲದಲ್ಲಿ ಎಲ್ಲರ ಮುಂದೆ ತನ್ನ ಸ್ಥಾನದ ಅಧಿಕಾರವನ್ನು ವಹಿಸಿಕೊಡುವ ಚಿತ್ರ ಇಲ್ಲಿ ಬಂದಿದೆ. ಗಂಗಾಸ್ನಾನ, ಗಂಗೆಯಲ್ಲಿ ಪಿಂಡಪ್ರದಾನ, ವಾರಣಾಸಿಯಲ್ಲಿ ದೇವಸ್ಥಾನ ನಿರ್ಮಾಣಗಳ ಬಯಕೆಯನ್ನು ಬಹುಜನ ಹೊಂದಿದ್ದು ಅವುಗಳ ಪೂರೈಕೆಗಾಗಿ ವಾಹನಸೌಕರ್ಯಗಳಿಲ್ಲದ ಆ ಕಾಲದಲ್ಲಿ ದೀರ್ಘವಾದ ತೀರ್ಥ ಯಾತ್ರೆಗಳನ್ನು ಕೈಗೊಳ್ಳುತ್ತಿದ್ದರು. ಅಲ್ಲದೆ ನಾಗಸ್ವಾಮಿಯು ತೀರ್ಥಯಾತ್ರೆಗೆ ಹೊರಡುವ ಮುನ್ನ ತನ್ನ ಆಸ್ತಿಯ ವಿತರಣೆಯನ್ನು ಮಾಡುವುದೂ ಗಮನಾರ್ಹ. ಆ ಕಾಲದಲ್ಲಿ ತೀರ್ಥಯಾತ್ರೆಯಿಂದ ಪ್ರಾಣಸಹಿತ ಸುರಕ್ಷಿತವಾಗಿ ಹಿಂದಕ್ಕೆ ಬರುವುದು ಬಹು ಸಂಶಯಾಸ್ಪದವಾಗಿದ್ದಿರಬೇಕು. ಶೈವರಲ್ಲಿಯೂ ಪಿಂಡಪ್ರದಾನ ದಂತಹ ವೈದಿಕ ಕರ್ಮಗಳ ಆಚರಣೆ ಇದ್ದುವೆಂಬುದಕ್ಕೆ ಇಲ್ಲಿ ಸೂಚನೆ ದೊರಕುತ್ತದೆ (ಪರಿಶಿಷ್ಟವನ್ನು ನೋಡಿ). ಕ್ರಿ. ಶ. 1071ರ ಒಂದು ಶಾಸನದಲ್ಲಿ[139] ಹೂವಿನ ಹಡಗಿಲೆಯ ಕೆಲವು ಬ್ರಾಹ್ಮಣರು ಶ್ರೀ ತ್ರಿಭುವನಮಲ್ಲದೇವನನ್ನು ಹರಸಿದಾಗ ಅವನು ಕೊಟ್ಟಗನೂರನ್ನು ಹೂವಿನ ಹಡಗಿಲೆಯ ಕಲಿದೇವ ಸ್ವಾಮಿಗೆ ಬಿಟ್ಟುಕೊಡುತ್ತಾನೆ. ದಾನಸ್ವೀಕಾರಮಾಡಿದ ವೈದಿಕರು ಆ ಊರಿನ ಆದಾಯವನ್ನು ಲಕುಳೀಶ್ವರ ಪಂಡಿತರ ಮಠದ ತಪೋಧನರಿಗೆ, ವಿದ್ಯಾರ್ಥಿಗಳ ಊಟ, ವಸ್ತ್ರ ಇತ್ಯಾದಿಗಳಿಗೆ ಹಂಚುತ್ತಾರೆ. ಲಾಕುಳ ಶೈವರಿಗೂ ವೈದಿಕರಿಗೂ ಇದ್ದ ಪರಸ್ಪರ ಬಾಂಧವ್ಯದ ದ್ಯೋತಕಗಳು ಇವು.

## ಲಕುಲೀಶಮತದ ಸ್ವರೂಪ

ಲಕುಲೀಶ–ಪಾಶುಪತ ಧರ್ಮವನ್ನು ತತ್ವಪ್ರಧಾನ ಎಂದು ಕರೆಯುವುದಕ್ಕಿಂತ ಮತಪ್ರಕ್ರಿಯಾ ಪ್ರಧಾನ (Ritualistic) ಎಂದು ಕರೆಯುವುದು ಹೆಚ್ಚು ಉಚಿತವಾದುದು. ಈ ಧರ್ಮದ ವಿಷಯದಲ್ಲಿ ಸೋಮದೇವನ ಆಕ್ಷೇಪಣೆಯೇ ಇದು.[140] ಶೈವಧರ್ಮಗಳಿಗೆಲ್ಲ ಸಮಾನವಾಗಿ ಪೂಜ್ಯವಾಗಿರುವ ಆಗಮ ಗಳಲ್ಲದೆ, ಈ ಲಕುಲೀಶ-ಪಾಶುಪತಕ್ಕೆ ಮೂಲಭೂತ ಧರ್ಮಗ್ರಂಥಗಳು ಎರಡು ನಮಗೆ ಸಿಕ್ಕಿವೆ—ಕೌಂಡಿನ್ಯ ಭಾಷ್ಯ ಸಮೇತವಾದ ಪಾಶುಪತ ಸೂತ್ರಗಳು (ಸು. ಕ್ರಿ. ಶ. 1ನೆಯ ಶತಮಾನ) ಮತ್ತು ರತ್ನಟೀಕಾ ಎಂಬ ವ್ಯಾಖ್ಯಾನ ಸಮೇತವಾದ ಗಣಕಾರಿಕಾ (ಸು. 10ನೇ ಶತಮಾನ). ಪಾಶುಪತ ಸೂತ್ರಗಳನ್ನು ಸ್ವಯಂ ಲಕುಲೀಶನೇ ಬೋಧಿಸಿದನೆಂದು ಐತಿಹ್ಯವಿದೆ. ಸಾಯಣ ಮಾಧವನ ಸರ್ವದರ್ಶನಸಂಗ್ರಹದಲ್ಲಿ ಲಕುಲೀಶ-ಪಾಶುಪತವನ್ನು ವಿವರಿಸುವಾಗ "ತದುಕ್ತಂ ಸೂತ್ರಕಾರೇಣ" ಎಂದು ಹೇಳಿ ಆ ಮುಂದೆ ಕೊಡುವ ಸೂತ್ರವು ಪಾಶುಪತ ಸೂತ್ರಗಳಲ್ಲಿ ಕಂಡುಬರುವುದರಿಂದ ಅವನ ವಿವರಣೆಗೆ ಪಾಶುಪತ ಸೂತ್ರವೇ ಆಧಾರಗ್ರಂಥ

---

137 BKI. I. i. 64, 1028 A.D.

138 EC. VIII. Sb. 275, 1231 A.D.

139 SII. IX. i. 135, 1071 A.D.

140 Yaśastilaka and Indian Culture, p. 199.

ಎಂಬುದರಲ್ಲಿ ಸಂದೇಹವಿಲ್ಲ.[141] ಸರ್ವದರ್ಶನ ಸಂಗ್ರಹವನ್ನು ಆಧರಿಸಿ ಲಕುಲೀಶ–ಪಾಶುಪತದ ತತ್ತ್ವಗಳನ್ನು ಹೀಗೆ ಸಂಗ್ರಹಿಸಬಹುದು—"ದುಃಖದ ಅಂತ್ಯವನ್ನು ಎರಡು ಭಾಗವಾಗಿ ವಿಂಗಡಿಸಬಹುದು—ಅನಾತ್ಮಕ ಮೋಕ್ಷ, ಸಾತ್ಮಕ ಮೋಕ್ಷ. ದುಃಖದಿಂದ ಸಂಪೂರ್ಣ ವಿಮುಕ್ತಿಯೇ ಅನಾತ್ಮಕ ಮೋಕ್ಷ. ಪರಮೇಶ್ವರನ ಗುಣಗಳಾದ ಕ್ರಿಯಾಶಕ್ತಿ, ಜ್ಞಾನಶಕ್ತಿ[142]ಗಳ ಲಾಭವೇ ಸಾತ್ಮಕ ಮೋಕ್ಷ. ಅತಿ ಸೂಕ್ಷ್ಮವಾಗಿರುವ ಮತ್ತು ಅತಿ ದೂರದಲ್ಲಿರುವ ವಸ್ತುಗಳ ಜ್ಞಾನ, ಎಲ್ಲ ಧ್ವನಿಗಳನ್ನೂ ಕೇಳುವುದು, ಎಲ್ಲಾ ಶಾಸ್ತ್ರಗಳ ಜ್ಞಾನ—ಇವೇ ಮುಂತಾದುವು ಜ್ಞಾನಶಕ್ತಿ. ಎಲ್ಲ ಕೆಲಸಗಳನ್ನೂ ಮಾಡುವ ಶಕ್ತಿ, ಇಷ್ಟ ಬಂದ ರೂಪಧಾರಣಮಾಡುವ ಶಕ್ತಿ—ಇವೇ ಮುಂತಾದುವು ಕ್ರಿಯಾಶಕ್ತಿ. 'ಪತಿ'ಯೊಡನೆ ಐಕ್ಯ ಅಥವಾ 'ಯೋಗ'ವನ್ನು ಎರಡು ರೀತಿಗಳಿಂದ ಸಾಧಿಸಬಹುದು—ಜಪ, ಧ್ಯಾನ ಮುಂತಾದ ಕರ್ಮಗಳಿಂದ ಮತ್ತು ಇಂದ್ರಿಯಗಳ ಮೇಲಿನ ಸಂಯಮದಿಂದ. ಈ ಯೋಗದಿಂದ ಮೇಲಿನ ಎರಡು ರೀತಿಯ ಮೋಕ್ಷವನ್ನೂ ಪಡೆಯಬಹುದು. ಶೀಲ ಸಂಬಂಧಿಯಾದ ನಿಯಮಾವಳಿಯನ್ನೇ 'ವಿಧಿ' ಎಂದು ಕರೆಯುವುದು. ದಿನದಲ್ಲಿ ಮೂರುವೇಳೆ ಭಸ್ಮಸ್ನಾನ,[143] ಅಹಾ ಅಹಾ ಎಂದು ಕೂಗುವುದು, ಭಗವಂತನ ನಾಮವನ್ನು ಸ್ಮರಿಸುವುದು, ಕುಣಿಯುವುದು, ಹುಡುಕ್ಕಾರ ಎಂಬ ಶಬ್ದವನ್ನು ಮಾಡುವುದು, ನಮಸ್ಕರಿಸುವುದು—ಇವೇ ಆ ವ್ರತಗಳು. ಇವನ್ನು ಏಕಾಂತದಲ್ಲಿ ಆಚರಿಸಬೇಕು. ಪಾಶುಪತರು ಹುಚ್ಚರಂತೆ ವರ್ತಿಸಬೇಕು. ನಿದ್ದೆಯಿಲ್ಲದಿದ್ದರೂ ನಿದ್ದೆ ಬಂದವರಂತೆ, ಲಕ್ವ ಹೊಡೆದವರಂತೆ, ವಾಯುರೋಗ ಪೀಡಿತರಂತೆ, ಕುಂಟರಂತೆ, ಕಾಮುಕರಂತೆ ನಟಿಸಬೇಕು. ಇವರು ಭಿಕ್ಷೆ ಬೇಡಬಹುದು, ಭುಕ್ತಾನ್ನ ತಿನ್ನಬಹುದು."[144] ಈ ವಿಚಿತ್ರ ಆಚರಣೆಗಳಿಗೆ ಅರ್ಥವಿದೆಯೆಂದು ಸಾಧಿಸುತ್ತದೆ, ಹಿಂದೆ ಹೇಳಿದ ರತ್ನ ಟೀಕಾ ಎಂಬ ವ್ಯಾಖ್ಯಾನ. ಇಂತಹ ಆಚರಣೆಗಳಿಂದ ಜನರ ಮನಸ್ಸಿನಲ್ಲಿ ಉಪಾಸಕನ ವಿಷಯದಲ್ಲಿ ಜುಗುಪ್ಸೆ ಹುಟ್ಟಿ ಅವನಿಗೆ 'ಅಪಮಾನ' ಆಗುತ್ತದೆ. ಅದೆಲ್ಲವನ್ನೂ ಅವನು ಸಹಿಸಿಕೊಳ್ಳಬೇಕು. ಸಹಿಸಿಕೊಂಡಷ್ಟೂ ವಿನಯ ಹೆಚ್ಚುತ್ತದೆ, ಅಹಂಕಾರ ಕಡಮೆಯಾಗುತ್ತದೆ.[145] ಮೇಲೆ ಹೇಳಿದ ಹುಡುಕ್ಕಾರ ಎಂಬ ಮಾತಿಗೆ ಸ್ವಲ್ಪ ವಿವರಣೆ ಅಗತ್ಯ. ಮೂಲ ಪಾಶುಪತಸೂತ್ರಗಳಲ್ಲಿ "ಡುಂಡುಂಕಾರ" ಎಂದಿದ್ದು ಅದಕ್ಕೆ "ಹುಡುಕ್ಕಾರ" ಎಂಬ ಪಾಠಾಂತರವಿದೆ ಆ ಸೂತ್ರ ಈ ರೀತಿಯಿದೆ—"ಹಸಿತ ಗೀತ ನೃತ್ತ ಡುಂಡುಂಕಾರ ನಮಸ್ಕಾರ ಜಪ್ಯೋಪಹಾರೇಣೋಪತಿಷ್ಠೇತ್"[146]. "ಡುಂಡುಂಕಾರ" ಎಂದರೆ ನಾಲಗೆಯ ತುದಿಯನ್ನು ತಾಲುವಿಗೆ ಒತ್ತಿ ಹೊರಡಿಸುವ ಧ್ವನಿ. ಇದು ಗೂಳಿಯ ಗುಟುರನ್ನು ಹೋಲುತ್ತದೆ ಎಂದು ಕೌಂಡಿನ್ಯಭಾಷ್ಯ ವಿವರಿಸುತ್ತದೆ. ಸಾಯಣ ಮಾಧವರೂ ಕೂಡ 'ಹುಡುಕ್ಕಾರ' ಎಂಬ ಪದವನ್ನು

---

141 ಸರ್ವದರ್ಶನಸಂಗ್ರಹ (ಭಂಡಾರ್ಕರ್ ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್ ಪ್ರಕಟಣೆ, 1924), ಪು. 169.

ಪಾಶುಪತ ಸೂತ್ರಂ (ತಿರುವಾಂಕೂರು ವಿಶ್ವವಿದ್ಯಾನಿಲಯ ಪ್ರಕಟಣೆ), ಪು. 13.

142 ಕ್ರಿಯಾಶಕ್ತಿ, ಜ್ಞಾನಶಕ್ತಿ ಎಂಬ ಹೆಸರಿನ ಅನೇಕ ಗುರುಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತಾರೆ.

143 ಮಹಾಶ್ವೇತೆಯು 'ದೃಢ ಪಾಶುಪತ ವ್ರತೆ' ಯಾಗಿದ್ದಳೆಂದೂ, ಅವಳ ಗುಹೆಯಲ್ಲಿ ಭಸ್ಮಶಯ್ಯೆ ಇತ್ತೆಂದೂ ಬಾಣನ ಕಾದಂಬರಿಯನ್ನು ಕನ್ನಡಕ್ಕೆ ಅನುವಾದಿಸಿರುವ ನಾಗವರ್ಮನ ಹೇಳಿಕೆ. (ಕರ್ನಾಟಕ ಕಾದಂಬರಿ ಸಂಗ್ರಹ, 3.32 ; 3.39). ಕೇದಾರಶಕ್ತಿ ಎಂಬ ಶೈವಗುರು ಭಸ್ಮವನ್ನು ಸರ್ವಾಂಗಕ್ಕೂ ಲೇಪಿಸಿಕೊಂಡು ಬೆಳ್ಳಿಯ ಬೆಟ್ಟದಂತೆ ಇದ್ದನೆಂದು ಶಾಸನವೊಂದು ಹೊಗಳುತ್ತದೆ. (EC. VII. Sk. 108, 1164 A.D.). ಭಸ್ಮಶಯನ ಭಸ್ಮಸ್ನಾನಗಳು ಬಹುಮುಖ್ಯವಾದ ಪಾಶುಪತ ವ್ರತಗಳಲ್ಲಿ ಕೆಲವು ಎಂದು ಹಿಂದೆಯೇ ನೋಡಿದ್ದೇವೆ.

144 T. V. Gopinatharao : Elements of Hindu Iconography, II. i, p. 21.

145 Yaśastilaka and Indian Culture, p. 200.

146 ಪಾಶುಪತಸೂತ್ರಂ, 1.8.

ಹೀಗೆಯೇ ವಿವರಿಸುತ್ತಾರೆ.[147] ಈ 'ಡುಂಡುಂಕಾರ' ಎಂಬುದೇ ಬಹುಶಃ ಮಧುರ ಕವಿ ಹೇಳಿರುವ ಗೊರವರ ಅಥವಾ ಪಾಶುಪತರ ''ಡುಂಡುಚಿ''[148]. ಕೂಗುವುದು, ಕುಣಿಯುವುದು, ಡುಂಡುಂಕಾರ ಎಂಬ ಶಬ್ದವನ್ನು ಮಾಡುವುದು—ಇತ್ಯಾದಿ ಆಚರಣೆಗಳು ಇದ್ದುವೆಂಬುದಕ್ಕೆ ಶಾಸನಗಳಿಂದ ಒಂದೇ ಒಂದು ಆಧಾರವನ್ನು ಕೊಡಬಹುದು. ಶೈವಗುರುವೊಬ್ಬನನ್ನು ಹೊಗಳುವಾಗ ''ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾಣ ಜಪ ಷಡಂಗೋಪಹಾರಾದಿ ಸಂಪನ್ನರ್'' ಎಂದು ಶಾಸನವೊಂದು ಹೇಳುತ್ತದೆ[149] ಇಲ್ಲಿಯ 'ಷಡಂಗ'ವೆಂಬುದು ಶೈವಧರ್ಮದ ಪಾರಿಭಾಷಿಕ ಪದ. ಅದು ಹಸಿತ, ಗೀತ, ನೃತ್ಯ, ಹುಡುಕ್ಕಾರ, ನಮಸ್ಕಾರ, ಜಪ್ಯ—ಎಂದು ಆರು ವಿಧವಾಗಿದೆ. ನೋಡಿ—''ತದುಕ್ತಂ ಭಗವತಾ ನಕುಲೀಶೇನ-ಭಸ್ಮನಾ ತ್ರಿಷವಣಂ ಸ್ನಾಯೀತ ಭಸ್ಮನಿ ಶಯೀತೇತಿ। ಅತ್ರೋಪಹಾರೋ ನಿಯಮಃ। ಸ ಚ ಷಡಂಗಃ। ತದುಕ್ತಂ ಸೂತ್ರಕಾರೇಣ—ಹಸಿತ ಗೀತ ನೃತ್ಯ ಹುಡುಕ್ಕಾರ ನಮಸ್ಕಾರ ಜಪ್ಯ ಷಡಂಗೋಪ ಹಾರೇಣೋಪತಿಷ್ಠೇತೇತಿ''.[150] (ಅಚ್ಚಾಗಿರುವ ಪಾಶುಪತ ಸೂತ್ರಗಳಲ್ಲಿ 'ಷಡಂಗ' ಎಂಬುದು ಬಿಟ್ಟು ಹೋಗಿದೆ). ಮಧುರನ ಪದ್ಯ, ಮೇಲೆ ಹೇಳಿದ ಶಾಸನಗಳು—ಇವೆರಡೂ, ಪಾಶುಪತಸೂತ್ರಗಳಲ್ಲಿ ಹೇಳಿದ ಆಚರಣೆಗಳು ಕರ್ನಾಟಕದ ಶೈವರಲ್ಲಿ ಇದ್ದುವೆಂಬುದಕ್ಕೆ ಪ್ರಬಲವಾದ ಪ್ರಮಾಣಗಳು.

ಶಾಸನಗಳಲ್ಲಿ ಪಾಶುಪತ ಸೂತ್ರವನ್ನೇ 'ಲಾಕುಳಾಗಮ'[151], 'ಶ್ರೀಮಲ್ಲಕುಳೀಶ್ವರದೇವ ಮುಖಕಮಳ ವಿನಿರ್ಗತ ಸಕಳ ಶಾಸ್ತ್ರ'[152], 'ಲಾಕುಳದೇವಾಗಮ'[153]—ಎಂದು ಮುಂತಾಗಿ ಕರೆದಂತೆ ತೋರುತ್ತದೆ. ಲಕುಲೀಶನು ತನ್ನ ಹೆಸರನ್ನು ತನ್ನ ಧರ್ಮವನ್ನು ಜನ ಮರೆಯುವರೋ ಏನೋ ಎಂಬ ಶಂಕೆಯಿಂದ ಚಿಲ್ಲುಕ ಎಂಬ ಹೆಸರಿನ ಮುನಿಯಾಗಿ ಹುಟ್ಟಿದನೆಂದು ಶಾಸನವೊಂದು ಹೇಳುತ್ತದೆ[154]. ಇವನನ್ನು ಆ ಶಾಸನ 'ತಪದಂಕಕಾಱ,' ಎಂದರೆ ತಪೋವೀರ ಎಂದು ಹೊಗಳುತ್ತದೆ. ಲಕುಲೀಶನ ಮುಖ ದಿಂದ ಹೊರಟ ಶಾಸ್ತ್ರವು ಸಂಸಾರಸಾಗರದಲ್ಲಿ ಮುಳುಗಿ ಪುಣ್ಯವಶಾತ್ ಶಿವಕೃಪೆಗೆ ಪಾತ್ರರಾದವರನ್ನು ಎತ್ತಲು ಸಮರ್ಥವಾಗಿದೆ.[155] ಈ ಲಕುಳೀಶನು ಪುರಂದರ, ಬಲಿಂದ, ಮಾರವಿಂದ, ನಂದನ ಎಂಬ ದಿವ್ಯ ಮುನಿಗಳಿಂದ

---

147 ಸರ್ವದರ್ಶನಸಂಗ್ರಹ (ಪೂನಾ ಭಂಡಾರ್ಕರ್ ಇನ್ಸ್‌ಟಿಟ್ಯೂಟ್ ಪ್ರಕಟಣೆ), ಪು. 169.—" ತದುಕ್ತಂ ಭಗವತಾ ನಕುಲೀಶೇನ—ಭಸ್ಮನಾ ತ್ರಿಷವಣಂ ಸ್ನಾಯೀತ ಭಸ್ಮನಿ ಶಯೀತೇತಿ। ಅತ್ರೋಪಹಾರೋ ನಿಯಮಃ। ಸ ಚ ಷಡಂಗಃ। ತದುಕ್ತಂ ಸೂತ್ರಕಾರೇಣ-ಹಸಿತ ಗೀತ ನೃತ್ಯ ಹುಡುಕ್ಕಾರ ನಮಸ್ಕಾರ ಜಪ್ಯ ಷಡಂಗೋಪಹಾರೇಣೋಪತಿಷ್ಠೇತೇತಿ। ತತ್ರ ಹಸಿತಂ ನಾಮ ಕಂಠೋಷ್ಠ ಪುಟ ವಿಸ್ಫೂರ್ಜನಪುರಃಸರಂ ಅಹಹಹೇತ್ಯಟ್ಟಹಾಸಃ। ಗೀತಂ ಗಾಂಧರ್ವಶಾಸ್ತ್ರ ಸಮಯಾನುಸಾರೇಣ ಮಹೇಶ್ವರ ಸಂಬಂಧಿ ಗುಣಧರ್ಮಾದಿ ನಿಮಿತ್ತಾನಾಂ ಚಿಂತನಂ। ನೃತ್ಯಮಪಿ ನಾಟ್ಯಶಾಸ್ತ್ರಾನುಸಾರೇಣ ಹಸ್ತ ಪಾದಾದೀನಾಮುತ್ಕ್ಷೇಪಣಾದಿಕಮಂಗಪ್ರತ್ಯಂಗೋಪಾಂಗಸಹಿತಂ ಭಾವಾಭಾವ ಸಮೇತಂ ಚ ಪ್ರಯೋಕ್ತವ್ಯಂ। ಹುಡುಕ್ಕಾರೋ ನಾಮ ಜಿಹ್ವಾತಾಲು ಸಂಯೋಗಾನ್ನಿಷ್ಪಾದ್ಯಮಾನಃ ಪುಣ್ಯೋ ವೃಷನಾದಸದೃಶೋ ನಾದಃ। ಹುಡುಗಿತಿ ಶಬ್ದಾನುಕಾರೋ ವಷಡಿತಿವತ್........॥"

148 " ಪಂಡಿತರುಂ ವಿವಿಧಕಳಾ। ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ !
ಕಂಡರ್ ಕೇಳ್ವೊಡೆ ಗೊರವರ। ಡುಂಡುಚಿಯೇ ಬೀದಿವಱಯ ಬೀರನ ಕತೆಯೇ ॥
(ಧರ್ಮನಾಥ ಪುರಾಣ, 1.57)

149 BKI, I. ii. 175, 1124 A.D ;
EC. VII. Sk. 19, 1066 A D.

150 ಸರ್ವದರ್ಶನ ಸಂಗ್ರಹ, ಪು. 169.

151 BKI. I. ii. 191, 1112 A.D ; MAR (1927). P. 132, 1114 A.D.

152 SII. IX. i. 163, 1093 A.D. ಇಲ್ಲಿಯ 'ಸಕಳಶಾಸ್ತ್ರ'ಗಳಲ್ಲಿ ಲಾಕುಳಾಗಮವೂ ಒಂದು.

153 SII. IX. i. 128, 1065 A.D.

154 EC. XII. Si. 28, 943 A.D.

155 SII. IX. i. 101, 1045 A.D.

ಸೇವಿತನಾದವನು[156]. ಅವನು ತ್ರೈಲೋಕ್ಯವಂದ್ಯನು ; ಅವನ ಶಾಸನವು ದೃಷ್ಟ, ಅದೃಷ್ಟಗಳೆಂಬ ಫಲಗಳನ್ನು ಕೊಡಲು ಸಮರ್ಥವಾದುದು; ವೇದಗಳೆಂಬ ದಂಡವನ್ನು ಹಿಡಿದು ಧರ್ಮಗಳೆಂಬ ನಟಿಯನ್ನು ಆಡಿಸುತ್ತಿರುವ ನಟನೇ ಲಕುಲೀಶ್ವರ; ಅವನ ಪದವೀಸ್ತುತಿರೂಪವಾದ ವೇದ ವ್ರಾತವು ಶಾಸನಶಿಲಾ ತಲದಂತೆ ಜೆಳಗುತ್ತಿದೆ.[157] ಅವನು 'ವಿಶ್ವನಾಥ' ಅಥವಾ 'ಮಹೇಶ್ವರ.' ಮೂರೂ ಹೊತ್ತು ಶಿವನ ಪಾದಾಂಬುಜವನ್ನು ಹೃದಯದಲ್ಲಿ ಧರಿಸಬೇಕು.[158] ಅಷ್ಟೇ ಅಲ್ಲ, ಅಜ್ಜಮನಾಯಕ ಎಂಬ ಶಿವಭಕ್ತನಂತೆ ಕನಸಿನಲ್ಲೂ ಶಿವನನ್ನು ಕಾಣುತ್ತ 'ನಮಶ್ಶಿವಾಯ' ಎಂಬ ಮಂತ್ರವನ್ನು ಕನವರಿಸಬೇಕು.[159] ಶಿವ ಪಾದಾಂಬುಜ ಸೇವೆಯೇ ಸೇವೆ, ಶಿವಧರ್ಮವೇ ಧರ್ಮ, ಶಿವನೇ ಆಪ್ತ, ಶಿವಪೂಜೆಯೇ ವ್ಯವಸಾಯ, ಮಹಾ ಪಂಚಾಕ್ಷರೀ ಮಂತ್ರವೇ ಮಂತ್ರ.[160] ಆಗಮೋಕ್ತಿಯನ್ನು ಅರಿತು ಶಿವಜ್ಯೋತಿಯನ್ನು ಮನಸ್ಸಿನಲ್ಲಿ ಮೂಡಿಸಿ, ಚಿತ್ತದ ಗತಿಯನ್ನು ನಿಲ್ಲಿಸಬೇಕು.[161] ಪರಮೇಶ್ವರನು ಅತ್ಯಂತ ಸೂಕ್ಷ್ಮನೂ ವ್ಯಾಪಕನೂ ಆಗಿದ್ದಾನೆ, ಅವನಲ್ಲಿ, 'ಒಡಗೂಡುವ ನಿಷ್ಠಾಪರತೆ'ಯನ್ನು ಬೆಳೆಯಿಸಿ ಕೊಳ್ಳಬೇಕು.[162] ಇಂತಹ ನಿಷ್ಠೆಯಿಂದ ಪರಮೇಶ್ವರನು ಹೃದಯಕಮಳದಲ್ಲಿ 'ಮನಃ ಪ್ರೇರಕ'[163] ನಾಗುತ್ತಾನೆ ಮಾತ್ರವಲ್ಲ, ಅವನು ಉಪಾಸಕನ ಸಾಧನೆಗೆ ಮೆಚ್ಚಿ ಮೇರುವಿನಿಂದ ಇಳಿದುಬಂದು ಭುವನ ಕರ್ತಾರರ ಕನಸಿನಲ್ಲಿ ಕಾಣಿಸಿಕೊಂಡು ಅಸಗಗೋಡಿನಲ್ಲಿ ಸ್ವಯಂಭುವಾಗಿ ನಿಂತಂತೆ ಉಪಾಸಕನಿಗೆ ದರ್ಶನವೀಯುತ್ತಾನೆ. ಸಾವಿನ ನಂತರ ಉಪಾಸಕ 'ರುದ್ರಲೋಕಪ್ರಾಪ್ತ' ನಾಗುತ್ತಾನೆ.[164] ಸ್ಕಂದನಂತೆ 'ಶಿವಪದ'ವನ್ನು, ಎಂದರೆ, ಶಿವನ ಸಾಮೀಪ್ಯವನ್ನು ಪಡೆಯುತ್ತಾನೆ.[165]

ಇಷ್ಟೂ ಶಾಸನಗಳಿಂದ ಸಂಗ್ರಹಿಸಬಹುದಾದ ಲಕುಲೀಶ–ಪಾಶುಪತದ ತಿರುಳು. ಅದು ಬಹು ಮಟ್ಟಿಗೆ ದ್ವೈತಪರವಾದುದು. ಕಾಶ್ಮೀರ ಶೈವಧರ್ಮದ ಪ್ರತಿಪಾದಕನಾದ ಕ್ಷೇಮರಾಜನ ಅಭಿಪ್ರಾಯದಲ್ಲೂ ಪಾಶುಪತವು ಶಿವಸಮಾನತೆಯೇ ಮೋಕ್ಷವೆಂದು ಹೇಳುವುದರಿಂದ ಅದು ಅವನ ಪ್ರಕಾರ ದ್ವೈತಪರವಾದುದು. ಕಾಶ್ಮೀರ ಶೈವಧರ್ಮವಾದರೋ ಅದ್ವಯಪರವಾದುದು.[166]

ಲಕುಲೀಶ–ಪಾಶುಪತರು ಷಡ್ದರ್ಶನಗಳಲ್ಲಿ (ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವ ಮೀಮಾಂಸೆ ಮತ್ತು ಉತ್ತರ ಮೀಮಾಂಸೆ) ನ್ಯಾಯವನ್ನು ಬಹುಮಟ್ಟಿಗೆ ಒಪ್ಪಿಕೊಂಡಿದ್ದಾರೆ. ವೈಶೇಷಿಕ, ನ್ಯಾಯ, ಸಾಂಖ್ಯ ಎಂಬೀ ದರ್ಶನಗಳ ಪಕ್ಷಪಾತಿಯಾಗಿದ್ದ ಸೋಮೇಶ್ವರ ಯತಿಪತಿಯನ್ನು ಶಾಸನವೊಂದು "ಮೀಮಾಂಸಕ ಗೋತ್ರತ್ರಾಸಿ" ಎಂದು ಕರೆದಿದೆ.[167] ವಿದ್ಯಾಭರಣನೆಂಬ ಮತ್ತೊಬ್ಬ ಯತಿಯನ್ನು "ಮೀಮಾಂಸಾಮತ ಕುಂಭಿ ಕುಂಭ ದಳನ ಪ್ರೋದ್ಯನ್ಮೃಗಾಧೀಶ"ನೆಂದು ಕರೆದು "ನೈಯಾಯಿಕಾನಾಂ

---

[156] ಅದೇ. ಲಕುಲೀಶನಿಗೆ ಕೌಶಿಕ, ಗಾರ್ಗ್ಯ, ಮೈತ್ರೇಯ, ಕೌರುಷರೆಂಬ ನಾಲ್ವರು ಶಿಷ್ಯರಿದ್ದಂತೆ 'ಕಾಯಾವ-ರೋಹಣ ಮಾಹಾತ್ಮ್ಯ'ವು ತಿಳಿಸುತ್ತದೆ.

[157] EC. VII. Sk. 99, 1113 A.D.

[158] EC. V. Cn. 186, 1143 A.D.

[159] BKI. I. ii. 175, 1124 A.D.

[160] EC. VII. Sk. 18, 1158 A.D.

[161] SII. IX. i. 102, 1046 A.D.

[162] SII. IX. i. 186, 1111 A.D.

[163] SII. IX. i. 296, 1176 A.D.

[164] EC. XI. Jl. 10, 1054 A.D.

[165] EC. VII. Sk. 92, 1068 A.D.

[166] ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. 87.

[167] EI. XV. p. 87, 1058 A.D.

ಮುನಿಃ" ಎಂದು ಒಂದು ಶಾಸನದಲ್ಲಿ ಹೊಗಳಿದೆ.[168] ಶ್ರೀಮಲ್ಲಕುಳೀಶ್ವರನೆಂಬ ಯತಿಯನ್ನು "ನೈಯಾಯಿಕ ಸಂರಕ್ಷಣೈಕದಕ್ಷಂ" ಎಂದು ಒಂದೆಡೆ ಕರೆದಿದೆ.[169] ಪಾಶುಪತರ ವಿಶೇಷವಾದ ಒಲವಿಗೆ ಪಾತ್ರವಾದದ್ದು ನ್ಯಾಯದರ್ಶನ, ಉಗ್ರವಿರೋಧಕ್ಕೆ ಗುರಿಯಾದದ್ದು ಮೀಮಾಂಸಾದರ್ಶನ. ಇದಕ್ಕೆ ಪೋಷಕವಾಗಿ ತರ್ಕ-ರಹಸ್ಯದೀಪಿಕಾ ಎಂಬ ಜೈನಗ್ರಂಥದಲ್ಲಿ ಶೈವರು ನೈಯಾಯಿಕರೆಂದೂ, ಪಾಶುಪತರು ವೈಶೇಷಿಕರೆಂದೂ ಹೇಳಿದೆ.[170] ಜೈನ ಲೇಖಕನಾದ ರಾಜಶೇಖರನೂ ಕೂಡ ತನ್ನ ಷಡ್ದರ್ಶನ ಸಮುಚ್ಚಯದಲ್ಲಿ ಇದೇ ಅಭಿಪ್ರಾಯ ವನ್ನು ವ್ಯಕ್ತಪಡಿಸಿದ್ದಾನೆ.[171] ಬೇರೆ ಬೇರೆ ಮತಗಳು ಷಡ್ದರ್ಶನಗಳಲ್ಲಿ ಒಂದರೊಡನೆ ಸಮೀಕರಿಸಿಕೊಳ್ಳುವ ಪ್ರಯತ್ನವನ್ನು ಇದು ತೋರಿಸುತ್ತದೆ.[172]

ವೈದಿಕ ಬ್ರಾಹ್ಮಣರಿಗೂ ಶೈವರಿಗೂ ಇದ್ದ ಸ್ನೇಹಸಂಬಂಧವನ್ನು ಹಿಂದೆಯೇ ನೋಡಿದ್ದೇವೆ. ವೇದ ಗಳೆಂಬ ದಂಡವನ್ನು ಹಿಡಿದು ಧರ್ಮಗಳೆಂಬ ನಟಿಯನ್ನು ಆಡಿಸುತ್ತಿರುವ ನಟನೇ ಲಕುಲೀಶನೆಂಬ ವರ್ಣನೆ ಯನ್ನು ಆಗಲೇ ನೋಡಿದ್ದೇವೆ. ಶ್ರೀಮಲ್ಲಕುಳೀಶ್ವರ ಪಂಡಿತನೆಂಬ ಯತಿಯ ಪ್ರಶಸ್ತಿಯಿರುವ ಶಾಸನ ವೊಂದರ ಅಂತ್ಯದಲ್ಲಿ "ತ್ರಯೀ ಪ್ರೋಕ್ತೋ ಧರ್ಮಃ ಕ್ರಮಘಟಿತ ವರ್ಣಾಶ್ರಮ ವಿಧಿಃ" ಎಂಬ ಮಾತುಗಳು ಬಂದಿವೆ.[173] 'ತ್ರಯೀ' ಎಂದರೆ ಮೂರು ವೇದಗಳು. ಕರ್ನಾಟಕದ ಶೈವಧರ್ಮವು ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಾಶ್ರಮಗಳನ್ನು ಒಪ್ಪಿಕೊಂಡಿರುವಂತೆ ಕಾಣುತ್ತದೆ. ಪಾಶುಪತ ಸೂತ್ರಗಳು "ಶೂದ್ರನೊಡನೆ ಮಾತನಾಡಬೇಡ. ಬ್ರಾಹ್ಮಣರು ಮಾತ್ರ ಮೋಕ್ಷಕ್ಕೆ ಅರ್ಹ" ಎಂದು ಹೇಳುತ್ತವೆ. ಮುಂದೆ ಬಂದ ಪಾಶುಪತದ ಬೇರೆ ಬೇರೆ ಶಾಖೆಗಳು ಶೂದ್ರರಿಗೆ ಆದ ಅನ್ಯಾಯವನ್ನು ಕಂಡು ಮರುಗಿ "ಪಂಚಾಕ್ಷರೀ ಅಥವಾ ಅಷ್ಟಾಕ್ಷರೀ ಮಂತ್ರವನ್ನು ಜಪಿಸಿ ಶಿವ ಅಥವಾ ವಿಷ್ಣುವನ್ನು ಅರ್ಚಿಸುವ ಶೂದ್ರನು ಶ್ರೇಷ್ಠ ಬ್ರಾಹ್ಮಣನಿಗೆ ಸಮಾನ" ಎಂದು ಸಾರಿದುವು.[174]

ಶೈವಧರ್ಮದ ಅನುಯಾಯಿಗಳಲ್ಲಿ ಕೆಲವು ಸ್ತ್ರೀಯರು ವಿದ್ಯಾವಂತರಾಗಿ ಪ್ರಾಮುಖ್ಯಕ್ಕೆ ಬಂದಂತೆ ಕಾಣುತ್ತದೆ. ಅವರಲ್ಲಿಯೂ ಸನ್ಯಾಸಿನಿಯರಿದ್ದಂತೆ ಕೆಲವು ಶಾಸನಗಳಿಂದ ತಿಳಿಯಬಹುದಾಗಿದೆ.[175]

---

168 EC. VII. Sk. 100, 1129 A.D.

169 EC. VII. Sk. 126, 1036 A.D.

170 D. R. Bhandarkar : 'Lakulīśa' (Archaeological Survey of India, 1906-7), p. 192.

171 S. N. Dasgupta : A History of Indian Philosophy, V, p. 9.

172 D. R. Bhandarkar : 'Lakulīśa' (Archaeological Survey of India, 1906–7); p. 192.

173 EC. VII. Sk. 126, 1036 A.D.

"ಮಹಾದೇವೋ ದೇವಸ್ಸಕಳ ಜಗದಾರಾಧ್ಯಚರಣಸ್ತ್ರಯೀ ಪ್ರೋಕ್ತೋ ಧರ್ಮಃ ಕ್ರಮಘಟಿತ ವರ್ಣಾಶ್ರಮ ವಿಧಿಃ। ತಯೋಃ ಯೋಃ ವಾ ಕುರ್ಯಾದ್ವೃಜಿನ ಮನಸೋಸ್ತಸ್ಯ ಸಿದಧೇ ಶಿರಸ್ಯಂಘ್ರಿಂ ವಾದಿ ಪ್ರಳಯ ದಹನೋಹಂ ನೃಪಸಭೇ॥"

174 ಪಾಶುಪತ ಸೂತ್ರಂ, ಮುನ್ನುಡಿ, ಪು. 7.

175 "ತಾಂ ತಿರಿವ ಗೊರವಿ ಬೆನಕನುಮಂ ತಿರಿಯಿಪಳ್" (ಶಾಂತಿಪುರಾಣ, 8.130) ಎಂಬಲ್ಲಿನ ಗೊರವಿ ಯಾರು? ಅವಳು ವಿನಾಯಕ ಅಥವಾ ಗಣಪತಿಯನ್ನು ಹೊತ್ತು ತಿರುಗುತ್ತಿದ್ದಂತೆ ಮೇಲೆ ನಿರೂಪಿತವಾಗಿರುವುದರಿಂದ ಗಾಣಾಪತ್ಯ ಸನ್ಯಾಸಿನಿಯಾಗಿರಬಹುದೇ? "ಯೋಗಿಗೆ ಯೋಗಿಣಿಯಾಗಿತ್ತು ಮಾಯೆ" ಎಂದು ಅಕ್ಕಮಹಾದೇವಿಯ ಹೇಳಿಕೆ. ಇಲ್ಲಿಯ 'ಯೋಗಿಣಿ' ಯಾರು? ಬೌದ್ಧರಲ್ಲಿ ಮತ್ತು ಜೈನರಲ್ಲಿ ಸನ್ಯಾಸಿನಿಯರಿದ್ದುದನ್ನು ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ನಮಗೆ ತಿಳಿದಮಟ್ಟಿಗೆ ಒಂದೆರಡು ಕಡೆ ಕಾಳಾಮುಖ ಸನ್ಯಾಸಿನಿಯರ ಹೆಸರುಗಳು ಬಂದಿವೆ. ಸಿರಿವುರ ಎಂಬ ಊರಿನ ಮೂಲ

## ಬಳ್ಳಿಗಾವೆಯ ಕೋಡಿಯಮಠ

ಲಾಕುಳ ಶೈವರ ಬಹುಮುಖವಾದ ಚಟುವಟಿಕೆಗೆ ಅತ್ಯುತ್ತಮ ನಿದರ್ಶನವೆಂದರೆ ಬಳ್ಳಿಗಾವೆಯ ಕೇದಾರ ಮಠ ಅಥವಾ ಕೋಡಿಯ ಮಠ. ಅದು 11 ಮತ್ತು 12 ನೆಯ ಶತಮಾನಗಳಲ್ಲಿ ಪ್ರಸಿದ್ಧ ಶೈವ ಕೇಂದ್ರವಾಗಿ ದಕ್ಷಿಣದ ಕೇದಾರವೆಂದು ಪ್ರಸಿದ್ಧವಾಗಿತ್ತು. ನೈಷ್ಠಿಕರಾದ ಬ್ರಹ್ಮಚಾರಿ ಮುನಿಗಳ ವಾಸಸ್ಥಾನವಾಗಿತ್ತು: ಅಲ್ಲಿ ನಾಲ್ಕು ವೇದಗಳ, ಕೌಮಾರ, ಶಾಕಟಾಯನ, ಪಾಣಿನೀಯ ಮುಂತಾದ ವ್ಯಾಕರಣಗಳ, ನ್ಯಾಯ, ವೈಶೇಷಿಕ, ಮೀಮಾಂಸಾ, ಸಾಂಖ್ಯ, ಬೌದ್ಧ ಮುಂತಾದ ದರ್ಶನಗಳ, ಲಾಕುಳ ಸಿದ್ಧಾಂತ, ಪತಂಜಲಿಯ ಯೋಗಶಾಸ್ತ್ರ, ಅಷ್ಟಾದಶ ಪುರಾಣ, ಕಾವ್ಯ, ನಾಟಕ, ನಾಟಿಕೆ–ಮುಂತಾದುವುಗಳ ಅಧ್ಯಯನ ನಡೆಯುತ್ತಿತ್ತು. ದೇಶದ ಎಲ್ಲೆಡೆಗಳಿಂದ ಅಲ್ಲಿಗೆ ದೀನರು, ಅನಾಥರು, ಕುರುಡರು, ಕುಂಟರು, ಮೂಕರು, ಕಥಕರು, ಗಾಯಕರು, ವಾದಕರು,ನರ್ತಕರು, ವೈತಾಳಿಕರು, ನಗ್ನ ಭಗ್ನ ಕ್ಷಪಣಕರು, ಏಕದಂಡಿ ತ್ರಿದಂಡಿ ಹಂಸ ಪರಮಹಂಸ ಮುಂತಾದ ಭಿಕ್ಷು ಸಾಧುಜನರು ಬಂದು ದಾನವನ್ನು ಸ್ವೀಕರಿಸುತ್ತಿದ್ದರು. ಅಷ್ಟೇ ಅಲ್ಲ, ದೇಶದ ಎಲ್ಲೆಡೆಗಳಿಂದ ಅನಾಥರೋಗಿ ಜನರು ಬಂದು ವೈದ್ಯಕೀಯ ಚಿಕಿತ್ಸೆಯನ್ನು ಪಡೆಯುತ್ತಿದ್ದರು. ಎಲ್ಲ ರೀತಿಯ ಜನರಿಗೂ ಅದು ಒಂದು ಅಭಯಸ್ಥಾನವಾಗಿತ್ತು.[176] ಇಷ್ಟು ಅಪೂರ್ವರೀತಿಯ ಸಾಮಾಜಿಕ ಸಂಬಂಧವಿದ್ದ ಧಾರ್ಮಿಕ ಕೇಂದ್ರ ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿಯೇ ಅತ್ಯಪೂರ್ವ. ಆ ಮಠದ ವಿಶ್ವಭಾವನೆ ಆಶ್ಚರ್ಯವನ್ನು ಹುಟ್ಟಿಸುತ್ತದೆ. ಒಂದು ರೀತಿಯಲ್ಲಿ ಬಳ್ಳಿಗಾವೆ ಶೈವರ ಶ್ರವಣಬೆಳಗೊಳ. ಬಳ್ಳಿಗಾವೆಯಲ್ಲದೆ ಬೇರೆ ಕಡೆಯ ಶಾಸನಗಳಲ್ಲಿಯೂ ಶೈವಗುರುಗಳ ಔದಾರ್ಯದ ವರ್ಣನೆಯಿದೆ. ಶ್ರೀಜ್ಞಾನಸಿದ್ಧದೇವ ಎಂಬಾತ 'ಅನ್ನದಾನ ವಿನೋದ' ನಾಗಿದ್ದರೆ[177], ವಿದ್ಯಾರಾಶಿ ಎಂಬಾತ ಅಕ್ಕರಿಗನಿಗೆ, ಬೇಡಿದ ನರನಿಗೆ, ತಪಸ್ವಿಗೆ, ದೇಸಿಗನಿಗೆ, ಒಕ್ಕಲಿಗನಿಗೆ, ದೀನ, ನಟ, ಪಾಠಕ, ವಂದಿ ಜನರಿಗೆ ಅವರು ನಕ್ಕರೆ ಸಾಕು, ನಿಂತು ನೋಡಿದರೆ ಸಾಕು, ಮೆಚ್ಚಿದರೆ ಸಾಕು ಕೇಳಿದ್ದನ್ನು ಕೊಡುವ ಉದಾರಿಯಾಗಿದ್ದನು.[178]

## ತಾಂತ್ರಿಕಾಚರಣೆಗಳು

ಪಾಶುಪತರಲ್ಲಿದ್ದ ತಾಂತ್ರಿಕಾಚರಣೆಗಳ ವಿವರಣೆ ಶಾಸನಗಳಲ್ಲಿ ವಿಶೇಷವಾಗಿ ಗೋಚರವಾಗುವುದಿಲ್ಲ. ಇವರಲ್ಲಿ ಕೆಲವರು ಕಾಳಭೈರವನ ಅರ್ಚಕರಾಗಿದ್ದರು. ಅವರ ಸ್ಮಾರಕವಾಗಿ ಅವರ ಶಿಷ್ಯರು ಭೈರವ ದೇವಸ್ಥಾನಗಳನ್ನು ಕಟ್ಟಿಸಿದ ಮತ್ತು ಜೀರ್ಣೋದ್ಧಾರ ಮಾಡಿಸಿದ[179] ನಿದರ್ಶನಗಳು ಕೆಲವಿವೆ. ಕರ್ನೂಲ್ ಜಿಲ್ಲೆಯ ಕನ್ನಡ ಶೈವ ಶಾಸನದಲ್ಲಿ ಕೋಕಿಲಬಿಲಾಧಿಪ ಭೈರವನ ಹೆಸರೂ, ದೇವೀ, ತ್ರಿಪುರಾ, ಕರಾಳೀ,

---

ಸ್ಥಾನದಲ್ಲಿ ರೇವಬ್ಬೆಗೊರವಿ ಎಂಬ ಸನ್ಯಾಸಿನಿಯೊಬ್ಬಳು ಇದ್ದಂತೆ ಶಾಸನವೊಂದು ತಿಳಿಸುತ್ತದೆ. (BKI. I. i. 50, 1005 A.D.). ಆದ್ದರಿಂದ ಕಾಳಾಮುಖರಲ್ಲಿಯೂ ಸನ್ಯಾಸಿನಿಯರಿದ್ದರೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಕ್ರಿ. ಶ. 1067ರ ಒಂದು ಶಾಸನದಲ್ಲಿ 'ತಪೋನಿಯಮಜಪಸಮಾಧಿ ಶೀಲಸಂಪನ್ನೆಯರಪ್ಪ ತಪಸ್ವಿ ಗಂಗಬ್ಬೆ'ಯ ಹೆಸರೂ, ಮಠದ ವಿದ್ಯಾದಾನದ ಸಲುವಾಗಿ ಅಕ್ಕಾದೇವಿ ಎಂಬಾಕೆ ಬಿಟ್ಟುಕೊಟ್ಟ ದತ್ತಿಯ ವಿಷಯವೂ ಬಂದಿವೆ (EI. XVI. p. 80).

176 EC. VII. Sk. 102, 1162 A.D.

177 EI. XXVII. p. 71, 1114 A.D.

178 SII. VII. No. 535 (ಪಲ್ಲವರ ಕಾಲದ ತಮಿಳು ನಾಡಿನ ಶಾಸನ).

ಅಕ್ಕರಿಗಂಗೆ ಬೇಡಿದ ನರಂಗೆ ತಪಸ್ವಿಗೆ ದೇಸಿಗಂಗೆ ಕ
ಟ್ಟೊಕ್ಕಲಿಗಂಗೆ ದೀನ ನಟ ಪಾಠಕ ವಂದಿ ಜನಕ್ಕೆ ರಾಗದಿ
ನ್ನಕ್ಕೊಡೆ ನಿಂದು ನೋಡಿದೊಡೆ ಮೆಚ್ಚಿದೊಡೋತೊಡೆ ಕೂರ್ತೋಡಿಗಳು
ಮ್ಮಿಕ್ಕೆ [ಡರ್ಗಿ]ೀವೇನೆಂಬುದಿದು [ವೀ]ವ ಗುಣಂ ಸಲೆ ವಿದ್ದೆ ರಾಶಿಯ ||

179 EC. XI. Cd. 78, 1060 A.D.

ಕಾಳೀ, ಶ್ಮಶಾನತಲವಾಸಿನೀ ಎಂದು ಪ್ರಸಿದ್ಧಳಾದ ಭದ್ರಕಾಳಿಯ ಹೆಸರೂ ಬಂದಿವೆ.[180] ಹುಂಚದ ಕಾಳಭೈರವನ ಗುಡಿಯ ಗೋಡೆಯ ಮೇಲೆ ವೀರ ಸಾಂತರನು ಗೊರವರ ಪಳ್ಳಿಯನ್ನು ಸರ್ವಜ್ಞಜೀಯನಿಗೆ ಕೊಟ್ಟ ವಿಷಯ ಲಿಖಿತವಾಗಿದೆ.[181] ಕೋಲಾರ ಜಿಲ್ಲೆಯ ಸೀತಿಗುಡ್ಡದಮೇಲಿನ ಕಾಳಭೈರವನ ದೇವಸ್ಥಾನದ ಪಶ್ಚಿಮದಲ್ಲಿ ಬಹಳ ಪ್ರಾಚೀನ ದೇವಾಲಯವೊಂದಿದೆ. ಗರ್ಭಗುಡಿಯಲ್ಲಿ ಮೂರ್ತಿಯಿಲ್ಲ. ಆದರ ಗೋಡೆಯ ಮೇಲೆ ಕಿವಿಯಲ್ಲಿ ಕಿವಿಯುಂಗುರಗಳನ್ನು ಧರಿಸಿ, ಕೌಪೀನಧಾರಿಯಾಗಿ, ಬಲಗೈಯಲ್ಲಿ ದಂಡವನ್ನು ಹಿಡಿದು, ಎಡಗೈಯಲ್ಲಿ ಕಮಂಡಲವನ್ನು ಧರಿಸಿ ಎಡಗೈಯ ಕೆಳಭಾಗದಲ್ಲಿ ಜೋಳಿಗೆಯನ್ನು ನೇತುಹಾಕಿಕೊಂಡಿರುವ ಒಬ್ಬ ಸನ್ಯಾಸಿಯ ಚಿತ್ರವಿದೆ.[182] ಇದು ಬಹುಶಃ ಲಕುಲೀಶನ ಅಥವಾ ಲಾಕುಳ ಶೈವಗುರುವಿನ ಚಿತ್ರವಿರಬೇಕು. ಲಾಕುಳ ಶೈವರು ಆರಾಧಿಸುತ್ತಿದ್ದ ಭೈರವನ ದೇವಸ್ಥಾನವನ್ನು ಹಿಂದೆಯೇ ಉಲ್ಲೇಖಿಸಲಾಯಿತು. ಇವರಲ್ಲಿ ಕೆಲವರು ಯಂತ್ರ ಮಂತ್ರ ತಂತ್ರಗಳಲ್ಲಿಯೂ ಪ್ರವೀಣರಾಗಿದ್ದರು.[183]

## ಕಾಪಾಲಿಕರು ಮತ್ತು ಕೌಳರು

ಶೈವಧರ್ಮದ ಒಂದು ಶಾಖೆ ವಾಮಾಚಾರ ಪದ್ಧತಿಯ ಕಾಪಾಲಿಕರದು. ಇವರು ಶ್ರೀಶೈಲದಲ್ಲಿದ್ದರೆಂದೂ, ಇವರಲ್ಲಿ ಒಬ್ಬನಾದ ಗೋರಕ್ಷನನ್ನು ವಾದದಲ್ಲಿ ಅಲ್ಲಮಪ್ರಭು ಸೋಲಿಸಿದನೆಂದೂ ಪ್ರಭುಲಿಂಗ ಲೀಲೆ ಹೇಳುತ್ತದೆ[184] (ಅಲ್ಲಮಪ್ರಭು ಸಂಧಿಸಿದ ಗೋರಕ್ಷ ಇನ್ನೂ ಸಮಸ್ಯಾತ್ಮಕವ್ಯಕ್ತಿಯಾಗಿಯೇ ಉಳಿದಿದ್ದಾನೆ). ಕರ್ನಾಟಕದಲ್ಲಿ ಇವರು ಪ್ರಬಲರಾಗಿರಲಿಲ್ಲವೆಂದೇ ತೋರುತ್ತದೆ. ಉತ್ತರ ಭಾರತದಲ್ಲಿ ಇವರು ತಕ್ಕಮಟ್ಟಿನ ಸಂಖ್ಯೆಯಲ್ಲಿದ್ದರೆಂಬುದನ್ನು ಕೆಲವು ಶಾಸನಗಳೂ, ಕಾವ್ಯ ನಾಟಕಗಳೂ ಸೂಚಿಸುತ್ತವೆ. ಏಳನೆಯ ಶತಮಾನದ ತಾಮ್ರಪಟಗಳಿಂದ ನಾಸಿಕಜಿಲ್ಲೆಯ ಕಾಪಾಲೇಶ್ವರ ದೇವಸ್ಥಾನದಲ್ಲಿ ಕಾಪಾಲಿಕರು ಇದ್ದರೆಂಬುದಾಗಿ ತಿಳಿದುಬರುತ್ತದೆ.[185] ಅದೇ ಕಾಲದ ಪಲ್ಲವ ದೊರೆ ಮಹೇಂದ್ರ ವಿಕ್ರಮನ ಮತ್ತವಿಲಾಸ ಪ್ರಹಸನದಲ್ಲಿ, ಹ್ಯುಯೆನ್‌ತ್ಸಾಂಗನ ಪ್ರವಾಸಕಥನದಲ್ಲಿ ಕಾಪಾಲಿಕರ ಪ್ರಸ್ತಾಪವಿದೆ.[186] ಕೃಷ್ಣಮಿಶ್ರನ ಪ್ರಬೋಧ ಚಂದ್ರೋದಯದ ಕಾಪಾಲಿಕನು ಮಹಾಭೈರವನ ಆರಾಧಕನಾಗಿದ್ದು, ಅದೇ ತಾನೇ ಕಡಿದ ನರ ಮುಂಡಗಳ ರಕ್ತದಿಂದ ಭೈರವನನ್ನು ತೃಪ್ತಿಪಡಿಸಬೇಕು ಎನ್ನುತ್ತಾನೆ.[187] ಆನಂದಗಿರಿಯ ಶಂಕರ ವಿಜಯದಲ್ಲಿ ಉನ್ಮತ್ತ ಭೈರವನು ಕಾಪಾಲಿಕರ ಗುರುವೆಂದೂ, ಅವನು ಶಂಭು, ಭೈರವ ಮತ್ತು ಕಾಲೀಶರ ಸ್ಮರಣೆ ಮಾಡುತ್ತಿದ್ದನೆಂದೂ ಹೇಳಿದೆ.[188] ಶಂಕರಾಚಾರ್ಯರು ತಾವು ಕರ್ನಾಟಕಕ್ಕೆ ಹೋಗುವುದಾಗಿ ಹೇಳಿದಾಗ,

---

[180] SII. IX. i. 204, 1122 A.D.

[181] EC. VIII. Nr. 63, c. 1062 A.D.

[182] MAR (1927), p. 2.

[183] SII. IX. i. 253, 1143 A.D.

[184] ಪ್ರಭುಲಿಂಗಲೀಲೆ, 19. 21-22.

[185] G. S. Ghurye : Indian Sadhus, p. 52.

[186] ಅದೇ, ಪು. 52, 48-49.

[187] ಕಾಪಾಲಿಕ—ಅರೇ ಕ್ಷಪಣಕ, ಧರ್ಮಂ ತಾವದಸ್ಮಾಕಮವಧಾರಯ,
ಮಸ್ತಿಷ್ಕಾಂತ್ರವಸಾಭಿಪೂರಿತ ಮಹಾಮಾಂಸಾಹುತೀರ್ಜುಹ್ವತಾಂ
ವಹ್ನೌ ಬ್ರಹ್ಮಕಪಾಲಕಲ್ಪಿತ ಸುರಾಪಾನೇನ ನಃ ಪಾರಣಾ
ಸದ್ಯಃಕೃತ್ತಕಠೋರ ಕಂಠ ವಿಗಲತ್ ಕೀಲಾಲಭಾರೋಜ್ವಲೈ–
ರರ್ಚ್ಯೋ ನಃ ಪುರುಷೋಪಹಾರಬಲಭಿರ್ದೇವೋ ಮಹಾಭೈರವಃ ॥
(ಪ್ರಬೋಧ ಚಂದ್ರೋದಯ, ಅಂಕ 3, ಶ್ಲೋಕ 13).

[188] G. S. Ghurye : Indian Sadhus, p. 142.

ಅಲ್ಲಿ ಕಾಪಾಲಿಕರು ಹೆಚ್ಚು, ಆದ್ದರಿಂದ ಹೋಗಬೇಡ ಎಂದು ವಿದರ್ಭದ ದೊರೆ ಸೂಚಿಸಿದಂತೆ ಮಾಧವ ವಿದ್ಯಾರಣ್ಯರ (14ನೇ ಶತಮಾನ) ಶಂಕರ ದಿಗ್ವಿಜಯವು ಹೇಳುತ್ತದೆ.[189] ಯಶಸ್ತಿಲಕ ಚಂಪುವಿನಲ್ಲಿ ತಮ್ಮ ದೇಹದ ಮಾಂಸವನ್ನೇ ಮಾರುತ್ತಿದ್ದ 'ಮಹಾವ್ರತಿ'ಗಳ ಪ್ರಸ್ತಾಪವಿದೆ.[190] ಈ ಮಹಾವ್ರತಿಗಳನ್ನು ಚನ್ನಬಸವಣ್ಣನವರೂ ಹೆಸರಿಸುತ್ತಾರೆ.[191] ಕಾಪಾಲಿಕರಿಗೆ 'ಮಹಾವ್ರತಿ' ಎಂಬುದು ಮತ್ತೊಂದು ಹೆಸರು ಅಷ್ಟೆ.[192] ಇವರ ಸಿದ್ಧಾಂತವನ್ನು ಸೋಮಸಿದ್ಧಾಂತ[193] ಎಂದು ಕರೆಯುವುದುಂಟು. ಉಮಾಸಮೇತನಾದ ಶಿವನನ್ನು ಆರಾಧಿಸಿ ತತ್ಫಲವಾದ ಪುಣ್ಯದಿಂದ ಕೈಲಾಸವನ್ನು ಸೇರಿ ಅಲ್ಲಿ ಉಮೆಯಷ್ಟೇ ಸುಂದರಿಯಾದ ಸ್ತ್ರೀಯೊಡನೆ ವಿಹರಿಸುವುದು ಇವರ ಗುರಿ.[194] ನರಕಪಾಲ, ಖಟ್ವಾಂಗಗಳು ಇವರ ಪ್ರಮುಖ ಚಿಹ್ನೆಗಳು.

ಕಾಪಾಲಿಕರನ್ನು ಹೋಲುವ ಮತ್ತೊಂದು ಪಂಗಡ ಕೌಲರದು. ಕೌಲಸಿದ್ಧಾಂತದ ಮೂಲ ಪ್ರವರ್ತಕ ಪಾಶುಪತ ಗುರುವಾದ ವಿಶ್ವರೂಪನ ಶಿಷ್ಯ ಅಲ್ಲಟ ಅಥವಾ ಭಾವರಕ್ತ.[195] ರಾಜಶೇಖರನ ಕರ್ಪೂರ ಮಂಜರಿಯಲ್ಲಿ (10ನೆಯ ಶತಮಾನ) ಭೈರವಾನಂದನೆಂಬ ಮಂತ್ರವಾದಿ ತಾನು ಕೌಲನೆಂದೂ, ಮದ್ಯಪಾನ ಮತ್ತು ಸ್ತ್ರೀಸಂಗಗಳನ್ನು ತಾನು ಮಾಡುವುದಾಗಿಯೂ . ಹೇಳಿಕೊಳ್ಳುತ್ತಾನೆ.[196] ಚನ್ನಬಸವಣ್ಣನವರು ಕೌಲರ ಆಚರಣೆಗಳನ್ನು ಕಟುವಾಗಿ ನಿಂದಿಸಿದ್ದಾರೆ.[197] ಬ್ರಹ್ಮಶಿವನಂತೂ ತನ್ನ ಸಮಯಪರೀಕ್ಷೆಯಲ್ಲಿ ಮದ್ಯಪಾನ, ಮಾಂಸಭಕ್ಷಣೆ ಮಾಡುವ ಕೌಳ ಗುರುಗಳನ್ನು ಬಹುವಾಗಿ ವಿಡಂಬನೆ ಮಾಡಿದ್ದಾನೆ.[198] ಶಂಕರದಾಸಿಮಯ್ಯನ ಪುರಾಣದಲ್ಲಿ ಕೌಳರಿಗೆ ಸಂಬಂಧಿಸಿದ ಹೆಚ್ಚಿನ ವಿವರಗಳು ದೊರಕುತ್ತವೆ. ಆಚರಣೆಗಳ ಸಾದೃಶ್ಯದ ಮೇಲೆ ಕಾಪಾಲಿಕರೂ ಕೌಳರೂ ಬಹುಮಟ್ಟಿಗೆ ಒಂದೇ ಎಂದು ಹೇಳಬಹುದು. ಕಾಪಾಲಿಕರು ಶೈವರಾದರೆ ಕೌಳರು ಶಾಕ್ತರು. ಕೌಳರಲ್ಲಿ ಪೂರ್ವಕೌಳರೆಂದೂ, ಉತ್ತರಕೌಳರೆಂದೂ ಎರಡು ಬಗೆ. ಕೌಳರು ಮದ್ಯ, ಮಾಂಸ, ಮತ್ಸ್ಯ ಮುಂತಾದುವನ್ನು ದೇವತಾಪೂಜೆಯ ಸಮಯದಲ್ಲಿ ಬಳಸುತ್ತಿದ್ದರು.[199]

---

189 ಅದೇ, ಪು. 143.

190 YAIC, p. 358.

191 ಶ್ರೀ ಚನ್ನಬಸವೇಶ್ವರನ ವಚನಗಳು (ಸಂ. ಫ. ಗು. ಹ.), 1932, ಪು. 33.

192 V. S. Pathak: 'Some obscure Śaiva cults as known from Inscriptions' (Indian Historical Quarterly, Vol. 35, p. 120.)

ಕಾಪಾಲಿಕರೂ ಮಹಾವ್ರತಿಗಳೂ ಒಂದೇ ಎಂಬ ಇವರ ತೀರ್ಮಾನ ಸಾಧಾರವಾದುದು. ಆದರೆ ಈ ಗುಂಪಿಗೆ ಕಾಲಾನನ ಅಥವಾ ಕಾಳಾಮುಖರನ್ನು ಸೇರಿಸಿರುವುದು ಅಸುಚಿತವೆಂದೇ ಹೇಳಬೇಕು.

193 ಶಾಸನವೊಂದರಲ್ಲಿ ವೈದಿಕ ಬ್ರಾಹ್ಮಣನೊಬ್ಬನ ಬಹುಮುಖ ಪಾಂಡಿತ್ಯವನ್ನು ಹೊಗಳುವಾಗ "ಸೋಮಸಿದ್ಧಾಂತಾಚ್ಛಾದನಾಚ್ಛನ[ನ್ನ]ರ್" ಎಂಬ ಮಾತುಗಳು ಬಂದಿವೆ. (BKI. I. i. 22, 897 A.D.)

194 ಕಾಪಾಲಿಕ :—ಶ್ರುಣು—

ದೃಷ್ಟಂ ಕ್ವಾಪಿ ಸುಖಂ ವಿನಾ ನ ವಿಷಯೈರಾನಂದಬೋಧೋಜ್ಝಿತಾ
ಜೀವಸ್ಯ ಸ್ಥಿತಿರೇವ ಮುಕ್ತಿರುಪಲಾವಸ್ಥಾ ಕಥಂ ಪ್ರಾರ್ಥ್ಯತೇ
ಪಾರ್ವತ್ಯಾಃ ಪ್ರತಿರೂಪಯಾ ದಯಿತಯಾ ಸಾನಂದಮಾಲಿಂಗಿತೋ
ಮುಕ್ತಃ ಕ್ರೀಡತಿ ಚಂದ್ರಚೂಡವಪುರಿತ್ಯೂಚೇ ಮೃಡಾನೀಪತಿಃ ॥
(ಪ್ರಬೋಧಚಂದ್ರೋದಯ, ಅಂಕ 3, ಶ್ಲೋಕ 16)

195 V. S. Pathak ಅವರ ಲೇಖನ, ಪು. 131.

196 YAIC. p. 355.

197 ವಚನಧರ್ಮಸಾರ (1946), ಪು. 3.

198 ಸಮಯಪರೀಕ್ಷೆ, 14.56, 14.77, 14.89.

199 Collected works of Bhandarkar, IV, p. 209.

ಇವರಲ್ಲಿ ಕೌಳರು ಕರ್ನಾಟಕದಲ್ಲಿದ್ದರೆಂಬುದಕ್ಕೆ ಗ್ರಂಥಾಧಾರವಿದೆಯೇ ಹೊರತು ಶಾಸನಗಳಲ್ಲಿ ಎಲ್ಲಿಯೂ ಅವರ ಪ್ರಸ್ತಾಪವಿಲ್ಲ. ಶಾಸನಗಳಲ್ಲಿ ಭೈರವ ದೇವಸ್ಥಾನಗಳ ಪ್ರಸ್ತಾಪವಿರುವುದನ್ನು ಹಿಂದೆಯೇ ನೋಡಿದ್ದೇವೆ. ಅವುಗಳಲ್ಲಿ ಕೆಲವು ಕಾಪಾಲಿಕರ ದೇವಸ್ಥಾನಗಳಾಗಿದ್ದರೂ ಆಗಿರಬಹುದು. ಕಾಲವು ಖಚಿತವಾಗಿ ತಿಳಿದುಬರದ ಶಾಸನವೊಂದರಲ್ಲಿ 'ಕಾವಾಳಿಗಭಟಾರ' ಎಂಬ ಒಬ್ಬರು ಭೂಮಿಯನ್ನು ದಾನವಾಗಿ ಪಡೆದ ವಿಷಯು ಬಂದಿದೆ.[200] ಇದನ್ನು ಸಂಸ್ಕೃತಕ್ಕೆ ತಿರುಗಿಸಿದರೆ 'ಕಾಪಾಲಿಕಭಟ್ಟಾರಕ' ಎಂದಾಗುತ್ತದೆ. ಬಹುಶಃ ಈತ ಒಬ್ಬ ಕಾಪಾಲಿಕಗುರುವಾಗಿರಬಹುದು. ಸಾಂತರರ ವಂಶದಲ್ಲಿ ಬಹು ಹಿಂದೆ ಸಹಕಾರ ಎಂಬುವನು ನರಮಾಂಸದಲ್ಲಿ ಆಸಕ್ತನಾದಾಗ ಅದಕ್ಕೆ ಹೇಸಿ ಅವನ ಮಗ ಜಿನದತ್ತ ದಕ್ಷಿಣಕ್ಕೆ ಬಂದು ಪದ್ಮಾವತೀದೇವಿಯ ಕೃಪೆಯಿಂದ ಪೊಂಬುಚ್ಚ (ಈಗಿನ ಹುಂಚ)ದಲ್ಲಿ ನೆಲಸಿದಂತೆ ಒಂದು ಶಾಸನ ಹೇಳುತ್ತದೆ.[201] ಈ ಸಹಕಾರ ಎಲ್ಲಿಯವನು, ಯಾವ ಕಾಲದವನು, ಕಾಪಾಲಿಕರ (ಅಥವಾ ಕೌಲರ) ಪ್ರಭಾವ ಅವನ ಮೇಲೆ ಬಿದ್ದಿತ್ತೇ ಎಂಬ ವಿಷಯಗಳು ಪ್ರಶ್ನೆಯಲ್ಲಿಯೇ ಉಳಿಯುತ್ತವೆ. ಶ್ರವಣಬೆಳಗೊಳದ ಶಾಸನವೊಂದರಲ್ಲಿ ಕಾಪಾಲಿಕರು ಹಸಿಯ ತಲೆಗಳನ್ನು ಪೋಣಿಸಿ ಮಾಲೆ ಮಾಡಿಕೊಳ್ಳುತ್ತಿದ್ದ ವಿಷಯವಿದೆ.[202] ಕ್ರಿ. ಶ. 1148ರ ಶಾಸನದಲ್ಲಿ 'ಮಹಾಬ್ರತಿ'ಗಳ (= ಕಾಪಾಲಿಕ) ಪ್ರಸ್ತಾಪವಿದೆ.[203] 13ನೇ ಶತಮಾನದ ಶಾಸನವೊಂದರಲ್ಲಿ (SII. XV. No. 643) "ಶ್ರೀ ಕಪಾಳೇಸ್ವರ ಕೆಯಿ", ಎಂದಿರುವುದು, ಕಾಪಾಲಿಕರ ದೇವಾಲಯವೊಂದನ್ನು ಸೂಚಿಸುವಂತೆ ಕಾಣುತ್ತದೆ. ಕಾಪಾಲಿಕರ ಕೆಲವು ಆಚರಣೆಗಳನ್ನು ಅಲ್ಲಮನು ಹೆಸರಿಸಿ ಖಂಡಿಸುತ್ತಾನೆ. ಅವರು ನವನಾಥಸಿದ್ಧರ ಹೆಸರಿನಲ್ಲಿ ಮಲಮೂತ್ರಗಳನ್ನು ಸೇವಿಸುತ್ತಾ, ವಾತಪಿತ್ತಶ್ಲೇಷ್ಮಗಳನ್ನು ತೆಗೆದು ಅಮೃತವೆಂದು ತೋರಿಸುತ್ತ, ಹಣ್ಣಿನ ರಸ ಹಾಲುಗಳನ್ನು ಸೇವಿಸಿ ಅನ್ನವನ್ನು ಮಾತ್ರ ಬಿಟ್ಟಿದ್ದೇವೆ ಎಂದು ಹೇಳಿಕೊಳ್ಳುತ್ತಾ ಜನರನ್ನು ಮೋಸಪಡಿಸುತ್ತಾರೆ ಎನ್ನುತ್ತಾನೆ ಅಲ್ಲಮ.[204] ಸತ್ಯನಾಥ, ಸತೋಕನಾಥ, ಆದಿನಾಥ, ಅನಾದಿನಾಥ, ಅಕುಳಿತನಾಥ, ಮಾತಂಗನಾಥ, ಮಚ್ಚೇಂದ್ರನಾಥ, ಘಟಯಂತ್ರನಾಥ ಮತ್ತು ಗೋರಕ್ಷನಾಥರೇ ಆ ನವನಾಥರು. ಅವರಿಂದ ಕಲ್ಪಿತವಾದುದು ಕೌಳಯಾಮಳಶಾಖೆ ಎನ್ನುತ್ತಾರೆ ನಿಜಗುಣರು.[205] ಅವರ ಪ್ರಕಾರ ಪಾಶುಪತ, ಕಾಪಾಲಿಕ, ಮಹಾವ್ರತಗಳು ಅತಿಮಾರ್ಗಿಕಗಳು. ಕಾಪಾಲಿಕವು ನರಕಪಾಲ ಭಿಕ್ಷಾಟನಾದಿಗಳನ್ನು ವರ್ಣಿಸಿದರೆ, ಮಹಾವ್ರತವು ಅಸ್ಥಿಧಾರಣಾದಿಗಳನ್ನು ವಿವರಿಸುತ್ತದೆ.[206] ಪಾಶುಪತದಲ್ಲಿ ಇಂತಹ ಬೀಭತ್ಸಕೃತ್ಯಗಳಿಲ್ಲವೆಂಬುದು ನಿಜಗುಣರ ಮಾತಿನಿಂದಲೇ ತಿಳಿದುಬರುತ್ತದೆ. ಮಾಲತೀಮಾಧವದಲ್ಲಿ ಕಾಪಾಲಿಕ ವ್ರತವನ್ನು ಮಹಾವ್ರತವೆಂದಿರುವುದಲ್ಲದೆ ನಾಸಿಕದ ಬಳಿಯಿರುವ ಕಾಪಾಲೇಶ್ವರದಲ್ಲಿರುವ ಸನ್ಯಾಸಿಗಳನ್ನು 'ಮಹಾವ್ರತಿ'ಗಳೆಂದು ಈಗಲೂ ಕರೆಯುತ್ತಾರೆ.[207] ಮೈಸೂರು ಪ್ರಾಂತದ ಆದಿಚುಂಚನಗಿರಿಯಲ್ಲಿರುವ ಕೆಲವು ಸಮಾಧಿಗಳು ಕಾಪಾಲಿಕರವು ಎಂಬ

---

[200] EC. XI. Cd. 94, C. 500 A.D.
[201] EC. VIII. Nr. 35, 1077 A.D.
[202] EC. II. 59, C. 1100 A.D.
[203] KI. I. 24, 1148 A.D.
[204] ಅಲ್ಲಮನ ವಚನ ಚಂದ್ರಿಕೆ, ಪು. 158.
[205] ವಿವೇಕಚಿಂತಾಮಣಿ (1953), ಪು. 8.
[206] ಅದೇ, ಪು. 9.
[207] S. N. Dasagupta : A History of Indian Philosophy, V, p. 2.

ಪ್ರತೀತಿಯಿದೆ.[207·1] ನಾಥಸಂಪ್ರದಾಯವು ಕರ್ನಾಟಕದಲ್ಲಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ. ಒಂದು ಶಾಸನದಲ್ಲಿ[208] ಛಾಯಾಪರಮೇಶ್ವರನ ಮಗ ಸ್ತಂಭನಾಥ, ಅವನ ಮಗ ದ್ವೀಪನಾಥ, ಅವನ ಶಿಷ್ಯ ಮೌನಿನಾಥ, ಅವನ ಶಿಷ್ಯ ರೂಪಶಿವ ಎಂಬ ಪರಂಪರೆಯನ್ನು ಕೊಟ್ಟಿದೆ. ಇವರು ನಾಥಸಂಪ್ರದಾಯದವರೆಂಬುದು ಬಹಳ ಸ್ಪಷ್ಟವಾಗಿದೆ. ಕದ್ರಿ ಮತ್ತು ಆದಿಚುಂಚನಗಿರಿಗಳು ನಾಥ ಸಂಪ್ರದಾಯದ ಪ್ರಮುಖ ಕೇಂದ್ರಗಳು. 'ಕದಲೀ ಮಂಜುನಾಥಮಹಾತ್ಮ್ಯಂ' ಮತ್ತು 'ಆದಿಚುಂಚನಗಿರಿ ಮಹಾತ್ಮ್ಯವು' ಎಂಬ ಗ್ರಂಥಗಳಿಂದ ಮತ್ತು ಕೆಲವು ಶಾಸನಗಳಿಂದ ಇದು ಸ್ಪಷ್ಟವಾಗುತ್ತದೆ. ಕಾಪಾಲಿಕನೆಂದು ಪ್ರಭುಲಿಂಗಲೀಲೆ ಕರೆದಿರುವ ಗೋರಕ್ಷ ಶ್ರೀಶೈಲದವನು. ಅವನ ಕೆಲವು ಬೆಡಗಿನ ವಚನಗಳು ಅಚ್ಚಾಗಿವೆ. ಹೀಗೆ ಕಾಪಾಲಿಕರು ಮತ್ತು ಕೌಳರು ಕರ್ನಾಟಕದಲ್ಲಿ ಅಲ್ಪಸಂಖ್ಯೆಯಲ್ಲಾದರೂ ಇದ್ದರು; ಆಚರಣೆಯಲ್ಲಿ ಇವರಿಗೂ ಕಾಳಾಮುಖ ಶೈವರಿಗೂ ಅಜಗಜಾಂತರ ವ್ಯತ್ಯಾಸವಿತ್ತು ಎಂಬುದರಲ್ಲಿ ಸಂದೇಹವಿಲ್ಲ.

## ಶೈವಧರ್ಮ ಮತ್ತು ಇತರ ಧರ್ಮಗಳು

ಕಾಳಾಮುಖ ಶೈವಧರ್ಮವು ಆ ಕಾಲದ ಸನ್ನಿವೇಶಕ್ಕನುಗುಣವಾಗಿ ಇತರ ಧರ್ಮಗಳೊಡನೆ ಪ್ರತಿಸ್ಪರ್ಧಿಸಿ ಬದುಕಬೇಕಾಗಿತ್ತು. ಅದು ಮುಖ್ಯವಾಗಿ ಹನ್ನೆರಡನೆಯ ಶತಮಾನದ ಮಧ್ಯದವರೆಗೆ ಜೈನಧರ್ಮದೊಡನೆಯೂ ಬಳಿಕ ವೀರಶೈವಧರ್ಮದೊಡನೆಯೂ ಪ್ರತಿಸ್ಪರ್ಧಿಸಿತು. ಈ ಸ್ಪರ್ಧೆಯ ವಿವರಗಳು ನಮಗೆ ತಿಳಿದುಬರುವುದಿಲ್ಲವಾದರೂ ಅದರ ಕುರುಹುಗಳು ಮಾತ್ರ ಅಲ್ಲಲ್ಲಿ ದೊರಕುತ್ತವೆ. "ಕಾಳಾಮುಖ ಸಮಯ ಸಮುದ್ಧರಣ"[209], "ಶಿವದ್ರೋಹಸಂಹರಣ"[210], "ಸಮಯ ಸಂರಕ್ಷಣೈಕದಕ್ಷ"[211] ಮುಂತಾದ ವಿಶೇಷಣಗಳು ಆ ಕಾಲದ ಮತೀಯ ಸ್ಪರ್ಧೆಗಳ ಸ್ಪಷ್ಟ ಕುರುಹುಗಳು. ಕೆಲವು ಸಾರಿ ಇಂತಹ ಸ್ಪರ್ಧೆಗಳು ರಕ್ತಪಾತದಲ್ಲಿ ಕೊನೆಗೊಳ್ಳುತ್ತಿದ್ದ ಸಾಧ್ಯತೆಯನ್ನು ಸಂಪೂರ್ಣವಾಗಿ ತಳ್ಳಿಹಾಕುವಂತಿಲ್ಲ. ಪರವಾದಿಗಳೊಡನೆ ಚರ್ಚೆ ನಡೆದು ವಿಜಯಪತ್ರವನ್ನು ಪಡೆದು ತನ್ಮೂಲಕ ತಮ್ಮ ಧರ್ಮದ ಉತ್ಕರ್ಷವನ್ನು ಸ್ಥಾಪಿಸಲು ಆ ಕಾಲದಲ್ಲಿ ಪ್ರಯತ್ನಗಳು ನಡೆಯುತ್ತಿದ್ದುವು (ಇಂತಹ ಪ್ರಯತ್ನಗಳ ಒಂದು ಸ್ಪಷ್ಟ ಚಿತ್ರಣ ಅಬ್ಬಲೂರು ಶಾಸನದಲ್ಲಿ ಸಿಗುತ್ತದೆ. ಅಲ್ಲಿ ವೀರಶೈವನಾದ ಏಕಾಂತದ ರಾಮಯ್ಯನಿಗೂ ಜೈನರಿಗೂ ನಡೆದ ಸ್ಪರ್ಧೆಯ ಚಿತ್ರವಿದೆ).[212] ಕಾಳಾಮುಖ ಗುರುಗಳು ಮಹಾವಿದ್ವಾಂಸರಾದ್ದರಿಂದ ಪ್ರತಿಪಕ್ಷದವರನ್ನು ಸೋಲಿಸಿ "ಪರವಾದಿಮದನ ಮಹೇಶ್ವರ"[213] ಮುಂತಾದ ಬಿರುದುಗಳನ್ನು ಸಂಪಾದಿಸಿಕೊಂಡಿದ್ದರು.

ಜೈನಧರ್ಮ ಮತ್ತು ಶೈವಧರ್ಮಗಳ ಸ್ಪರ್ಧೆಯ ಫಲವಾಗಿಯೇ ಇರಬಹುದು, ಸಮಯ ಪರೀಕ್ಷೆಯ ಕರ್ತೃ ಬ್ರಹ್ಮಶಿವನು ಮೊದಲು 'ಮಾಹೇಶ್ವರ'ವನ್ನು ಅಪ್ಪಿ, ನಂತರ ಅದರಲ್ಲಿ "ಒಳ್ಪುಗಾಣದೆ" ಜಿನಧರ್ಮವನ್ನು ಅಂಗೀಕರಿಸಿದ್ದು.[214] ಜೈನಧರ್ಮವನ್ನು ಬಿಟ್ಟು ಶೈವಧರ್ಮವನ್ನು ಅಂಗೀಕಾರಮಾಡಿದ

[207·1] 'ಆದಿಚುಂಚನಗಿರಿ ಮಹಾತ್ಮ್ಯ' ಎಂಬ ಕೃತಿಯ ಬಗ್ಗೆ, ಕಾಪಾಲಿಕರ, ನಾಥರ ಬಗ್ಗೆ ಹೆಚ್ಚಿನ ವಿವರಗಳಿಗೆ, ನೋಡಿ–ಎಂ. ಚಿದಾನಂದಮೂರ್ತಿ : 'ಮಧ್ಯಕಾಲೀನ ಕರ್ನಾಟಕದ ಕೆಲವು ರಹಸ್ಯತಾಂತ್ರಿಕ ಪಂಥಗಳು' (ಸಂಶೋಧನ ತರಂಗ, ಸಂಪುಟ II. ಪು. 263–4)

[208] EC. IX. Nl. 1, 1029 A.D.

[209] EC. VII. Sk. 20, 1032 A.D. ; BKI. I. ii, 172, 1121 A.D. ; EC. VI. Kd. 80, 1139 A.D.

[210] MAR (1925). p. 56, 1108 A.D.

[211] EI. XXVIII. p. 33, 1082 A.D.

[212] EI. XXIX. p. 140, c. 1200 A.D.

[213] SII. IX. i. 235, 1141 A.D.

[214] ಸಮಯಪರೀಕ್ಷೆ, 1. 59.

ಮತ್ತೊಂದು ನಿದರ್ಶನವನ್ನು ಶಾಸನದಿಂದ ಒದಗಿಸಬಹುದು. ಈ ಶಾಸನ 'ನಮಸ್ತುಂಗ........' ಎಂದು ಶಿವಸ್ತೋತ್ರದೊಂದಿಗೆ ಆರಂಭವಾಗುತ್ತದೆ. 'ಪದ್ಮಾವತೀ ಲಬ್ಧ ವರಪ್ರಸಾದ'ನಾದ (ಎಂದರೆ ಜೈನನಾದ) ಹೆಮ್ಮಾಡಿಯರಸನು ಮಹಾಸಾಮಂತನಾಗಿ ಬಾಸವುರ 140ನ್ನು ಆಳುತ್ತಿದ್ದು, ಕ್ರಿ. ಶ. 1121ರಲ್ಲಿ 'ಮಾಹೇಶ್ವರ ದೀಕ್ಷೆ'ಯನ್ನು ತೆಗೆದುಕೊಂಡು, ತ್ರಿಭುವನ ಸಿಂಗಿ ಪಂಡಿತರ ಕಾಲು ತೊಳೆದು ಭೈರವ ದೇವಸ್ಥಾನ ಇತ್ಯಾದಿಗಳಿಗೆ ದತ್ತಿ ಬಿಟ್ಟ ವಿಷಯ ಅಲ್ಲಿ ಬಂದಿದೆ.[215] ಕ್ರಿ. ಶ. 1045ರಲ್ಲಿ ಅದೇ ಬಾಸವೂರನ್ನು "ಜಿನಪದ ಪಂಕಜರಜಃಪುಂಜ ಪಿಂಜರಿತಗಾತ್ರ"ನಾದ ಕಲಿಯಮ್ಮರಸನು ಆಳುತ್ತಿದ್ದಂತೆ ಮತ್ತೊಂದು ಶಾಸನದಿಂದ ತಿಳಿದುಬರುತ್ತದೆ.[216] ಜೈನನಾದ ಕಲಿಯಮ್ಮರಸ ಮತ್ತು ಹೆಮ್ಮಾಡಿಯರಸರು ಒಂದೇ ವಂಶದವರು ಎನ್ನುವುದರಲ್ಲಿ ಸಂದೇಹವಿಲ್ಲ. ಒಬ್ಬ ಮಹಾಸಾಮಂತ ಒಂದು ಧರ್ಮವನ್ನು ಬಿಟ್ಟು ಮತ್ತೊಂದು ಹೊಸಧರ್ಮವನ್ನು ಅಪ್ಪಿದರೆ ಅವನ ಆಳಿಕೆಯಲ್ಲಿರುವ ಜನರ ಮೇಲೆ ಅದು ಬೀರುವ ಪ್ರಭಾವವನ್ನು ಊಹಿಸಿಕೊಳ್ಳಬಹುದು. ವೀರಶೈವ ಧರ್ಮದ ಉದಯದವರೆಗೆ, ಎಂದರೆ ಕ್ರಿ. ಶ. 1160ರಿಂದ 1200ರ ವರೆಗೆ ಈ ಶೈವಧರ್ಮದ ಪ್ರಕರ್ಷಕ್ಕೆ ಯಾವ ಕುಂದೂ ಬರಲಿಲ್ಲ. 12ನೆಯ ಶತಮಾನದ ನಂತರ ಅದರ ಅವನತಿ ಆರಂಭವಾದಂತೆ ತೋರುತ್ತದೆ. ಶಾಸನಗಳಲ್ಲಿ ಕಂಡುಬರುವ ಅದರ ಗುರುಗಳ ಸಂಖ್ಯೆಯೂ ಇದನ್ನು ಪುಷ್ಟೀಕರಿಸುತ್ತದೆ. ಐದು ಜಿಲ್ಲೆಗಳ ಶಾಸನಗಳಲ್ಲಿ "ಕ್ರಿ. ಶ. 10ನೆಯ ಶತಮಾನದಲ್ಲಿ 13 ಹೆಸರುಗಳಿದ್ದು ಕ್ರಿ. ಶ. 11ನೆಯ ಶತಮಾನದಲ್ಲಿ 39ರ ವರೆಗೆ ಹೋಗಿ; ಕ್ರಿ. ಶ. 12ನೆಯ ಶತಮಾನದಲ್ಲಿ 172ರ ವರೆಗೆ ಹೋಗಿ; ಕ್ರಿ. ಶ. 13ನೆಯ ಶತಮಾನದಲ್ಲಿ 80ಕ್ಕೆ ಇಳಿದಿದೆ. ಅನಂತರ ಕ್ರಿ. ಶ. 14ನೆಯ ಶತಮಾನದಲ್ಲಿ 11ಕ್ಕೆ ಬಂದು, ಆ ಮುಂದೆ ಇಳಿಯುತ್ತ ಜಂಗಮರ ಹೆಸರುಗಳು ಕಾಣಿಸಿಕೊಳ್ಳುತ್ತವೆ".[217] ವಿಜಯನಗರದ ದೊರೆಗಳಲ್ಲಿ ಕೆಲವರು ಕಾಳಾಮುಖ ಗುರುಗಳ ಅನುಯಾಯಿಗಳಾಗಿದ್ದಂತೆ ತಿಳಿದುಬರುತ್ತದೆ. "ಹರಿಹರ I ಮತ್ತು ಬುಕ್ಕ Iರ ಕುಲಗುರುವು ಪಾಶುಪತನಾಗಿದ್ದ ಕಾಶಿವಿಲಾಸ ಕ್ರಿಯಾಶಕ್ತಿ. ವಿಜಯನಗರದ ಸ್ಥಾಪನೆಗೆ ಬಹುವಾಗಿ ಶ್ರಮಿಸಿದ ಮಹಾದಂಡನಾಯಕನೂ, ಮಂತ್ರಿಯೂ ಆಗಿದ್ದ ಮಾಧವನಿಗೂ ಇವನೇ ಗುರುವಾಗಿದ್ದಂತೆ ಶಾಸನವೊಂದರಿಂದ (EC VII. Sk. 281) ತಿಳಿಯುತ್ತದೆ. ಕ್ರಿಯಾಶಕ್ತಿಯ ಸೂಚನೆಯಂತೆ ಮಾಧವನು ಒಂದು ವರ್ಷ ಶೈವವ್ರತಾಚಾರವನ್ನು ಅಂಗೀಕರಿಸಿ ಅದು ಮುಗಿದ ಮೇಲೆ ಕೆಲವು ಶೈವ ಬ್ರಾಹ್ಮಣರಿಗೆ ದತ್ತಿಗಳನ್ನು ಬಿಟ್ಟುಕೊಡುತ್ತಾನೆ (ಅದೇ.). ಮಾರಪ್ಪ ಮತ್ತು ಮಾಧವರು 'ಶೈವಾಗಮ ಸಾರಸಂಗ್ರಹ'ವನ್ನು ಒಟ್ಟಿಗೆ ಸಂಗ್ರಹಿಸಲು ಮೂಲ ಪ್ರಚೋದನೆಯು ಕ್ರಿಯಾಶಕ್ತಿ ಪಂಡಿತರಿಂದ ಬಂದಿತು (EC. VIII. Sl. 375). ಮೊದಲನೆಯ ಬುಕ್ಕನ ಮಗ ಕುಮಾರ ಕಂಪಣನಿಗೂ, ಹರಿಹರನ ಮಗ ಇಮ್ಮಡಿ ಬುಕ್ಕನಿಗೂ ಕ್ರಿಯಾಶಕ್ತಿಯೇ ಗುರು (MAR. 1918. Para. 105—6). ಇವರಲ್ಲಿ ಎರಡನೆಯವನು ಗುರುವಿನ ಅಪ್ಪಣೆಯ ಪ್ರಕಾರ ವಿದ್ಯಾಶಂಕರ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾನೆ. (EC. X. Mb 11)."[218] ಡಾ|| ಎ. ವೆಂಕಟಸುಬ್ಬಯ್ಯನವರ ಪ್ರಕಾರ ಕಾಳಾಮುಖ ಗುರುಗಳ ಕೊನೆಯ ಹೆಸರಿರುವುದು ಕ್ರಿ. ಶ. 1410ರ ಶಾಸನದಲ್ಲಿ (EC. XI. Dg. 23, 1410 A.D.). ಕೊನೆಯಪಕ್ಷ ಮೂರು ನಾಲ್ಕು ಶತಮಾನಗಳಾದರೂ ಕರ್ನಾಟಕದ ಧಾರ್ಮಿಕ ಜೀವನದ ಮೇಲೆ ಪ್ರಭುತ್ವ ನಡೆಯಿಸಿದ ಕಾಳಾಮುಖ ಧರ್ಮ, ಕಾಳಾಮುಖ ಮಠಗಳೆಲ್ಲ ಏನಾದುವು? ಇದರ ವಿಚಾರ ನಮ್ಮ ಅಧ್ಯಯನದ ವ್ಯಾಪ್ತಿಗೆ ಸೇರುವುದಿಲ್ಲವಾದರೂ ಇದನ್ನು ಕುರಿತು ನಡೆದಿರುವ ಚರ್ಚೆಯನ್ನು ಇಲ್ಲಿ ಸಂಗ್ರಹವಾಗಿ ಪರಿಶೀಲಿಸಬಹುದು.

---

215 EI. XIX. p. 192, 1121 A.D.

216 EI. XIX. p. 180, 1045 A.D.

217 ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು.100.

218 T.V. Mahalingam : 'The Pāśupatas in South India' (Journal of Indian History, XXVII, p. 50).

ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ—ಬಸವಣ್ಣನವರ ನೇತೃತ್ವದಲ್ಲಿ ವೀರಶೈವ ಧರ್ಮದ ಪುನರುತ್ಥಾನ ಕಾರ್ಯವು ನಡೆಯಿತು. ಈ ವೀರಶೈವ ಧರ್ಮವು ಅದಕ್ಕಿಂತ ಮುನ್ನ ಯಾವ ಸ್ವರೂಪದಲ್ಲಿತ್ತು, ಅದು ಕಾಳಾಮುಖ ಶೈವಕ್ಕೆ ಎಷ್ಟರಮಟ್ಟಿಗೆ ಋಣಿ ಎಂಬ ವಿಷಯದಲ್ಲಿ ನಮ್ಮ ಜ್ಞಾನಪಿನ್ಯಾ ಅಪೂರ್ಣ ವಾಗಿಯೇ ಉಳಿದಿದೆ. ಚನ್ನಬಸವಣ್ಣನವರು ಕಾಳಾಮುಖ —ಪಾಶುಪತರ ನೀತಿ ನಡವಳಿಕೆಗಳನ್ನು ಟೀಕಿಸಿರುವುದರಿಂದ ಕಾಳಾಮುಖ ಶೈವಕ್ಕಿಂತ ವೀರಶೈವವು ಭಿನ್ನ ಎಂಬುದು ಸ್ಪಷ್ಟ. ವೀರಶೈವದ ಉದಯ ದೊಡನೆ ಕಾಳಾಮುಖ ಶೈವದ ಅವನತಿಯೂ ಆರಂಭವಾಗಿರಬೇಕು. ಕಾಳಾಮುಖರು ಲಿಂಗಪ್ರತಿಷ್ಠೆಯನ್ನು ಒಪ್ಪಿ, ದೇವಸ್ಥಾನಗಳ ನಿರ್ಮಾಣ ಕಾರ್ಯವನ್ನು ವೀರವ್ರತವೆಂಬಂತೆ ಅಂಗೀಕರಿಸಿದ್ದರೆ, ಇಷ್ಟಲಿಂಗಾರಾಧಕರಾದ ವೀರಶೈವರು ಕಾಳಾಮುಖರ ಆ ಎರಡು ತತ್ವಗಳನ್ನೂ ಪ್ರತಿಭಟಿಸಬೇಕೆಂಬ ಉದ್ದೇಶದಿಂದಲೋ ಏನೋ ಸ್ಥಾವರ ಲಿಂಗಪ್ರತಿಷ್ಠೆಯನ್ನು ವಿರೋಧಿಸಿ ದೇವಸ್ಥಾನಗಳ ನಿರ್ಮಾಣವನ್ನೂ ಪ್ರತಿಭಟಿಸಿದರು. ದೇವಸ್ಥಾನ ನಿರ್ಮಾಣವು ಭಕ್ತಿಯ ಪ್ರತೀಕವಾಗುವುದರ ಬದಲು ಕೇವಲ ಒಂದು ಸಂಪ್ರದಾಯ ಅಥವಾ ಆಚರಣೆಯಾಗಿ ಪರಿಣಮಿಸಿರಬೇಕು. ಕಾಳಾಮುಖರ ಭಸ್ಮಸ್ನಾನ ಭಸ್ಮಶಯನ ಮುಂತಾದ ವಿಚಿತ್ರಾಚರಣೆಗಳು ಸರಳ ಭಕ್ತಿಯನ್ನು ಪ್ರತಿಪಾದಿಸಿದ ವೀರಶೈವ ಧರ್ಮದ ಮುಂದಾಳುಗಳಿಗೆ ಸರಿದೋರಿದಂತೆ ಕಂಡುಬರುವುದಿಲ್ಲ. ಬಸವ, ಚನ್ನಬಸವ, ಅಲ್ಲಮರಿಂದ ಉತ್ಕರ್ಷವನ್ನು ಪಡೆದ ವೀರಶೈವ ಧರ್ಮದ ಮುಂದೆ ಕಾಳಾಮುಖ ಧರ್ಮವು ಹೋರಾಡಿ, ಎದುರಿಸಲು ಅಸಮರ್ಥವಾಗಿ ಕೊನೆಗೆ ಅದರಲ್ಲೇ ವಿಲೀನಗೊಂಡಂತೆ ಕಾಣಿಸುತ್ತದೆ (ಪರಿಶಿಷ್ಟವನ್ನು ನೋಡಿ). ಅದಕ್ಕೆ ಉತ್ತಮ ನಿದರ್ಶನವೆಂದರೆ ಬೆಳಗಾವಿ ಜಿಲ್ಲೆಯ ಪೂವಲ್ಲಿ (ಈಗಿನ ಹೂಲಿ) ಮಠ. ರಾಜಮಹಾರಾಜರಿಂದ ಪೂಜಿತರಾಗಿದ್ದ ಶೈವಗುರುಗಳ ಪ್ರಸಿದ್ಧ ಕೇಂದ್ರವಾಗಿದ್ದ ಆ ಮಠ ಈಗ ಪ್ರಸಿದ್ಧ ವೀರಶೈವ ಮಠವಾಗಿದೆ.[219] ಕಾಳಾಮುಖ—ಪಾಶುಪತ ಮಠಗಳು ವೀರಶೈವ ಮಠಗಳಾದುವು ಎಂಬುದಕ್ಕೆ ಮತ್ತೊಂದು ಉತ್ತಮ ನಿದರ್ಶನವನ್ನು ಕೊಡಬಹುದು. ಎರಡನೆಯ ದೇವರಾಯ ಅಥವಾ ಪ್ರೌಢದೇವರಾಯನ ದಂಡಾಧಿಪ ಲಕ್ಕಣ್ಣ ದಂಡೇಶನು (ಕ್ರಿ. ಶ. 1430) ಶಾಸನಗಳಲ್ಲಿಯೂ ಪ್ರಸಿದ್ಧ ನಾಗಿದ್ದಾನೆ. 'ಶಿವತತ್ವಚಿಂತಾಮಣಿ' ಎಂಬ ವೀರಶೈವ ಗ್ರಂಥದ ಲೇಖಕನಾಗಿಯೂ ಪ್ರಸಿದ್ಧನಾಗಿದ್ದಾನೆ. ಹದಿನೈದನೆಯ ಶತಮಾನದ ವೀರಶೈವ ಧರ್ಮದ ಸ್ವರೂಪ ಮತ್ತು ವ್ಯಾಪ್ತಿಗಳನ್ನರಿಯುವವರಿಗೆ ಅವನ ಕೃತಿಯೊಂದು ದೊಡ್ಡ ಗಣಿ. ಅವನು ತನ್ನ ಗುರುವು 'ಪಾಶುಪತ ಸದ್ವ್ರತ ಗುಣಾಗ್ರಣಿ'ಯಾದ ಮಲ್ಲಿಕಾರ್ಜುನ ಎಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ. ( 1.4 ). ಕ್ರಿಯಾಶಕ್ತಿಯತಿರಾಯ ಎಂಬ ( ಕಾಳಾಮುಖ ) ಗುರುವನ್ನು ಭಕ್ತಿಯಿಂದ ಸ್ತುತಿಸಿದ್ದಾನೆ (38.246). ಇವನು ಕ್ರಿ. ಶ. 1410ರಲ್ಲಿದ್ದ, ಹರಿಹರ II ನ ಕುಲಗುರುವಾಗಿದ್ದ ಕಾಳಾಮುಖ ಗುರು ಕ್ರಿಯಾಶಕ್ತಿಯಿರಬೇಕು. ಧರ್ಮಮೂರ್ತಿ ವೃಷಭನಿಗೆ ಏಳು ಕೋಟಿ ಮಂತ್ರಗಳೇ ರೋಮಗಳು ಎಂದು ವರ್ಣಿಸುತ್ತಾನೆ ( 3.5 ). ಈ ಏಳುಕೋಟಿ ಮಂತ್ರಗಳು ಕಾಳಾಮುಖರಿಗೂ ಪೂಜ್ಯವಾದುವು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಇಷ್ಟೇ ಅಲ್ಲ, ತನ್ನ ಗ್ರಂಥದಲ್ಲಿ ಶ್ರೀಧರಾಚಾರ್ಯನೆಂಬ ಮೀಮಾಂಸಕನಿಗೂ ಬಸವಣ್ಣನಿಗೂ ನಡೆದ ವಾದವಿವಾದಗಳ ಚಿತ್ರವನ್ನು ಕೊಡುತ್ತಾನೆ. (ಇದನ್ನು ಇತರ ಪುರಾಣಕರ್ತೃಗಳೂ ವಿವರಿಸುತ್ತಾರೆ). ಈ ಶ್ರೀಧರಾಚಾರ್ಯನು ''ಮೆಯ್ಗೆ ಭಸ್ಮವ ಪೂಸಿ ಕೊಂಡಿರ್ದ ಶೈವ ಪಾಷಂಡಿ"ಯಾದ ಬಸವನು ಎದ್ದು ನನ್ನನ್ನು ಗೌರವಿಸಲಿಲ್ಲವಲ್ಲಾ ಎಂದು ನಿಂದಿಸುವುದಲ್ಲದೆ, ಇವನೇನು ಪಾಶುಪತನೋ ಕಾಳಾಮುಖನೋ ಎಂದು ಪ್ರಶ್ನಿಸುತ್ತಾನೆ (33.11). ಆಚಾರವ್ಯವಹಾರಗಳಲ್ಲಿ ಪಾಶು ಪತರಿಗೂ ಕಾಳಾಮುಖರಿಗೂ ಅಷ್ಟು ವ್ಯತ್ಯಾಸವಿಲ್ಲವೆನ್ನುವುದೂ ಇದರಿಂದ ಸೂಚಿತವಾಗುತ್ತದೆ. ಆ ಸಮಯದಲ್ಲಿ ಕವಿಯು ಪೂರ್ವ ಮೀಮಾಂಸಕರಾದ ಕುಮಾರಿಲ ಭಟ್ಟ ಮತ್ತು ಪ್ರಭಾಕರರನ್ನು ಖಂಡಿಸಿ ನೈಯಾಯಿಕ ಮತ್ತು

[219] S. C. Nandimath : A Hand-book of Vīraśaivism, pp. 9-10.

ವೈಶೇಷಿಕಗಳಲ್ಲಿ ನಲಿಯುವ ಶೈವರನ್ನು ಸ್ತುತಿಸುತ್ತಾನೆ.[220] ವೈಶೇಷಿಕಕ್ಕೆ ಪಕ್ಷಪಾತವನ್ನೂ ಮೀಮಾಂಸಕರ ವಿಷಯದಲ್ಲಿ ಕ್ರೋಧವನ್ನೂ ವ್ಯಕ್ತಪಡಿಸುವ ಬಸವಣ್ಣನವರ ವಚನವೊಂದನ್ನು ಕವಿ ಉದಾಹರಿಸುತ್ತಾನೆ (ಪು. 294). ಎಂದರೆ, ವೀರಶೈವವು ಷಡ್ದರ್ಶನಗಳಲ್ಲಿ ನ್ಯಾಯ ವೈಶೇಷಿಕದ ಪಕ್ಷಪಾತಿಯೂ, ಮೀಮಾಂಸೆಗೆ ವಿರೋಧಿಯೂ ಆಗಿತ್ತೆಂಬುದು ಇದರಿಂದ ಹೊರಡುತ್ತದೆ. ಕಾಳಾಮುಖರಿಗೂ ಇಂತಹ ವಿಶೇಷಣಗಳನ್ನು ಕೊಟ್ಟಿರುವುದನ್ನು ಹಿಂದೆಯೇ ಗಮನಿಸಿದ್ದೇವೆ. ಇದರಿಂದ ಕೆಲವು ಅಂಶಗಳು ಧ್ವನಿತವಾಗುತ್ತವೆ. (1) ಕಾಳಾಮುಖರಿಗೂ ಪಾಶುಪತರಿಗೂ ಅಂತಹ ಪ್ರಬಲ ವ್ಯತ್ಯಾಸಗಳಿರಲಿಲ್ಲ. (2) ಹದಿನೈದನೆಯ ಶತಮಾನದಲ್ಲಿ ವೀರಶೈವರು ಕಾಳಾಮುಖ-ಪಾಶುಪತ ಗುರುಗಳನ್ನು ಗೌರವಿಸುತ್ತಿದ್ದುದಕ್ಕೆ ಅವರು ವೀರಶೈವರಾಗಿ ಪರಿವರ್ತನೆ ಹೊಂದಿದುದು ಬಹುಮಟ್ಟಿಗೆ ಕಾರಣ. (3) ಕ್ರಿ.ಶ 1410 ರಿಂದ ಈಚೆಗೆ ಶಾಸನಗಳಲ್ಲಿ ಕಾಳಾಮುಖ ಗುರುಗಳ ಹೆಸರು ಕಂಡುಬರುವುದಿಲ್ಲ.[220.1] ಕ್ರಿ. ಶ. 1430ರ ಲಕ್ಕಣ್ಣದಂಡೇಶ ಕಾಳಾಮುಖ ಗುರುವನ್ನು ಹೊಗಳುತ್ತಾನೆ. ಕಾಳಾಮುಖರು ವೀರಶೈವರಾಗಿ ಪರಿವರ್ತನೆ ಹೊಂದುವ ಕಾರ್ಯ ಸರಿಸುಮಾರು ಕ್ರಿ.ಶ. 1410-30 ರಲ್ಲಿ ಅಥವಾ ಅದಕ್ಕೂ ಹಿಂದೆ ಆರಂಭವಾಗಿ ನಿಧಾನವಾಗಿ ಮುಂದುವರಿದಂತೆ ಕಾಣುತ್ತದೆ.

ಶ್ರೀ ಚನ್ನಪ್ಪ ಗಲಗಲಿಯವರು ಉತ್ತರ ಕರ್ನಾಟಕದ 'ಗೊರವರು' ಮತ್ತು ದಕ್ಷಿಣ ಕರ್ನಾಟಕದ 'ಜೀರರು' ಅಥವಾ 'ಜೀರ್ರು' ಎಂಬ ಪಂಗಡಗಳನ್ನು ಹೆಸರಿಸಿ ಇವರಿಗೂ ಹಿಂದಿನ 'ಗೊರವ' ಮತ್ತು 'ಜೀಯ'ರಿಗೂ ಸಂಬಂಧ ಕಲ್ಪನೆ ಮಾಡುತ್ತಾರೆ.[221] ಇವರು ವೀರಶೈವ ಧರ್ಮಕ್ಕೆ ಪರಿವರ್ತನೆ ಹೊಂದದೆ ಹಾಗೆಯೇ ಉಳಿದ ಕಾಳಾಮುಖ ಶೈವದ ಅನುಯಾಯಿಗಳಿದ್ದರೂ ಇರಬಹುದು. ಈಗಿನ ವೀರಶೈವರ ಜಂಗಮರಿಗೆ ಕಾಳಾಮುಖ ಗುರುಗಳೇ ಪೂರ್ವಜರು ಎಂದು ಕಪಟರಾಳ ಕೃಷ್ಣರಾಯರು ಅಭಿಪ್ರಾಯ ಪಡುತ್ತಾರೆ.[222] ಇದಕ್ಕೆ ಆಧಾರ ಸಾಲದು.

## ಕಾಳಾಮುಖಶೈವರು ಮತ್ತು ಕನ್ನಡ ಸಾಹಿತ್ಯ

ಹಿಂದಾಗಲೇ ಸೂಚಿಸಿದಂತೆ ಕನ್ನಡ ಸಂಸ್ಕೃತಿಗೆ ಲಾಕುಳ ಶೈವರ ವಿಶಿಷ್ಟ ಕೊಡುಗೆಯೆಂದರೆ ಅಸಂಖ್ಯಾತ ದೇವಸ್ಥಾನಗಳು ಮತ್ತು ಪ್ರಾಚೀನ ವಿದ್ಯಾಕೇಂದ್ರಗಳು. ಇವುಗಳ ವಿಸ್ತಾರವಾದ ಸಮಾಲೋಕನ ಮುಂದಿನ ಅಧ್ಯಾಯಗಳಲ್ಲಿ ಬರುತ್ತದೆ. ಕನ್ನಡ ಸಾಹಿತ್ಯಕ್ಕೆ ಮಾತ್ರ ಇವರ ಕೊಡುಗೆ ಏನೂ ಇಲ್ಲ ಎಂದು ಸದ್ಯಕ್ಕೆ ಹೇಳಬೇಕಾಗಿದೆ. ಆದರೂ ಒಂದು ಸಾಧಾರವಾದ ಊಹೆಯನ್ನು ಇಲ್ಲಿ ಸೂಚಿಸಬಹುದು. ವಚನಕಾರ ಸಿದ್ಧರಾಮನು ಆರಂಭದಲ್ಲಾದರೂ 'ಶೈವ'ನಾಗಿದ್ದ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ.[223] ಮುಂದೆ ಅವನು ಚನ್ನಬಸವಣ್ಣನವರಿಂದ 'ದೀಕ್ಷೆ'ಯನ್ನು ಪಡೆದು ವೀರಶೈವನಾಗುತ್ತಾನೆ. ಹಾಗೆ ದೀಕ್ಷೆ ಪಡೆಯುವುದಕ್ಕೆ ಮುನ್ನ ಅವನು ಲಕುಲೀಶ–ಪಾಶುಪತ ಪಂಥಕ್ಕೆ ಸೇರಿದವನಾಗಿದ್ದಿರಬಹುದು. ಹರಿಹರ, ರಾಘವಾಂಕರು ಆರಂಭದಲ್ಲಾದರೂ ಶೈವರಾಗಿದ್ದು ಕೆಲವು ಗ್ರಂಥಗಳನ್ನು ಬರೆದಿದ್ದರೆಂದು ಊಹಿಸಲು ಅವಕಾಶವಿದೆ. ಅದರಲ್ಲೂ ಹರಿಹರನ ಕೆಲವರು ಕಥಾನಾಯಕರು ಯಜ್ಞೋಪವೀತಧಾರಿಗಳೂ ಅಗ್ನಿ ಪೂಜಕರೂ ಆಗಿರುತ್ತಾರೆ. ಮುಂದಿನ ಕೆಲವು ವೀರಶೈವ ಗ್ರಂಥ

---

220 ಶಿವತತ್ವ ಚಿಂತಾಮಣಿ, 33.7. ಈ ಪದ್ಯದ ನಾಲ್ಕನೆಯ ಪಾದದಲ್ಲಿ 'ನೆಗಳೆ' ಎಂದು ಅಚ್ಚಾಗಿರುವುದನ್ನು 'ನೆಗಳೆ' ಎಂದು ತಿದ್ದಿಕೊಂಡು ಓದಿದರೆ ಪಾಠ ಸರಿಹೊಂದುತ್ತದೆ.

220.1 ದಿವಾಣ್‌ಜೀ ಅವರ ಪ್ರಕಾರ, ಮಧ್ಯ ಭಾರತದಲ್ಲಿ ಲಕುಲೀಶ ಮತಾನುಯಾಯಿಗಳಾದ ಕಾಳಾಮುಖರ ಪ್ರಾಬಲ್ಯ ಕಡಮೆಯಾಗಲಾರಂಭವಾದದ್ದು ಹದಿನಾಲ್ಕನೇ ಶತಮಾನದಲ್ಲಿ, ('The Māhēśvara cult and its offshoots.' Journal of the Asiatic Society of Bombay. xxx. ii. p. 19).

221 ಕರ್ನಾಟಕ ಲಾಕುಳ ಶೈವರ ಇತಿಹಾಸ, ಪು. 110.

222 ಅದೇ, ಪು. 130. (ಪರಿಶಿಷ್ಟವನ್ನು ನೋಡಿ).

223 ಇದರ ವಿವರಗಳಿಗೆ ಇದೇ ಲೇಖಕನ 'ಶೂನ್ಯ ಸಂಪಾದನೆಯನ್ನು ಕುರಿತು' ಎಂಬ ಗ್ರಂಥವನ್ನು ನೋಡಿ.

ಕಾರರು ಹರಿಹರ 'ಶೈವ 'ನಾದ್ದರಿಂದ ಅವನ ಅಭಿಪ್ರಾಯಗಳನ್ನು ಮನ್ನಿಸಬಾರದು ಎಂದು ಅಭಿಪ್ರಾಯಪಟ್ಟಿದ್ದಾರೆ. ಆದಯ್ಯ ಎಂಬ ವಚನಕಾರನು 'ಶುದ್ಧಶೈವ' ಎಂಬ ಮತವೊಂದನ್ನು ಹೆಸರಿಸಿ, ಶುದ್ಧಶೈವರು ಸ್ಥಾವರಲಿಂಗವನ್ನು ಪೂಜಿಸುವರೆಂದೂ, ವೀರಶೈವರು ಇಷ್ಟಲಿಂಗವನ್ನು ಪೂಜಿಸುವರೆಂದೂ ಹೇಳುತ್ತಾನೆ.[224] ಈ 'ಶುದ್ಧಶೈವ'ವು ಯಾವುದು ಎಂಬುದಿನ್ನೂ ತೀರ್ಮಾನವಾಗಬೇಕಾಗಿದೆ. ಆದಯ್ಯನು ಆರಂಭದಲ್ಲಾದರೂ ವೀರಶೈವದಿಂದ ಭಿನ್ನವಾದ ಶೈವಕ್ಕೆ ಸೇರಿದವನಿದ್ದಿರಬಹುದು. ಹೀಗೆ ಕನ್ನಡ ನಾಡಿನ ಶೈವಧರ್ಮವು ಕೆಲವು ಮಹನೀಯರನ್ನು ಸಾಹಿತ್ಯಕ್ಕೆ ಕೊಟ್ಟಿದೆ ಮಾತ್ರವಲ್ಲ, ಹರಿಹರನ ಕೆಲವು ಕೃತಿಗಳ ಮೂಲಕ ಸಾಹಿತ್ಯಕ್ಕೆ ನೇರವಾಗಿ ಪುಷ್ಟಿಯನ್ನೂ ಒದಗಿಸಿದೆ ಎಂದು ಹೇಳಬಹುದು. ಈ ವಿಷಯದಲ್ಲಿ ನಡೆಯಬೇಕಾಗಿರುವಷ್ಟು ಸಂಶೋಧನೆ ಇನ್ನೂ ನಡೆದಿಲ್ಲ.

## ಪರಿಶಿಷ್ಟ

ಉತ್ತರ ಕರ್ನಾಟಕದಲ್ಲಿ 'ಗುರವ' (ಜೀರರು ಅಥವಾ ಹೂಗಾರರು ಎಂದೂ ಕರೆಯುವುದುಂಟು)– ಎಂಬ ಪಂಗಡದ ಜನರಿದ್ದಾರೆ. ಅವರ ಆಚಾರವ್ಯವಹಾರಗಳನ್ನು ನೋಡಿದರೆ ಅವರು ಪ್ರಾಚೀನ ಕಾಳಾಮುಖರ ಸಂತತಿಯವರಾಗಿದ್ದಂತೆ ಕಂಡುಬರುತ್ತದೆ. ಕಾಳಾಮುಖರಿಗೆ ಗೊರವ ಅಥವಾ ಜೀಯ ಎಂಬ ಹೆಸರಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. 'ಹೂಗಾರ' ಎಂದರೆ ಏನೋ ತಿಳಿಯದು. ದೇವಸ್ಥಾನಗಳಲ್ಲಿ ಪೂಜಾದಿಗಳಿಗಾಗಿ ಹೂಗಳನ್ನು ತರುವ ವೃತ್ತಿಯುಳ್ಳವರು ಎಂದು ಅರ್ಥವಿರಬಹುದು. 'ಜೀರರು' ಎಂದರೆ 'ಜೀಯರು' ಎಂದರ್ಥವಿರಬಹುದು. ಪ್ರಾಚೀನ ಕಾಳಾಮುಖರಂತೆ ಈಗಿನ ಗುರವರೂ ದೇವಸ್ಥಾನಗಳಿಗೆ ಸಂಬಂಧಪಟ್ಟವರು. ಅವರಂತೆಯೇ ಇವರಿಗೂ ಉಂಬಳಿ ಜಮೀನುಗಳಿವೆ. ಪ್ರಾಚೀನ ಕಾಳಾಮುಖದಲ್ಲಿ ಕೆಲವು ವೈದಿಕಾಚರಣೆಗಳಿದ್ದಂತೆ ಈಗಿನ ಗುರವರಲ್ಲಿಯೂ ಉಂಟು. ಕಾಳಾಮುಖರು 12ನೆಯ ಶತಮಾನದ ನಂತರ ಕ್ರಮೇಣ ವೀರಶೈವರಾಗಿರಬಹುದು ಎಂಬ ಊಹೆಯನ್ನು ದೃಢಪಡಿಸುವಂತೆ ಈಗಿನ ಗುರವರಲ್ಲಿ ಕೆಲವರು ಯಜ್ಞೋಪವೀತವನ್ನೂ, ಕೆಲವರು ಇಷ್ಟಲಿಂಗವನ್ನೂ ಧರಿಸುತ್ತಾರೆ. ಈಗಲೂ ರತ್ನಗಿರಿ ಜಿಲ್ಲೆಯ ಶೈವ ದೇವಸ್ಥಾನಗಳಲ್ಲಿ ಲಿಂಗಧಾರಿಗಳಾದ ಗೊರವರು ಅರ್ಚಕರಾಗಿದ್ದಾರೆಂದು ತಿಳಿದು ಬರುತ್ತದೆ. ಮತದ ದೃಷ್ಟಿಯಿಂದ ಹೇಳುವುದಾದರೆ "ಗುರವರು ಬ್ರಾಹ್ಮಣರಿಗೂ ವೀರಶೈವರಿಗೂ ಮಧ್ಯೆ ಬರುತ್ತಾರೆ." ಅವರು ಬ್ರಾಹ್ಮಣ ಗುರುಗಳನ್ನೂ, ಜಂಗಮರನ್ನೂ ಸಮಾನವಾಗಿ ಗೌರವಿಸುತ್ತಾರೆ. ಇದೇ ಮೊದಲಾದ ಕಾರಣಗಳಿಂದ ಈಗಿನ ಗುರವರು ಅಥವಾ ಜೀರರು ಪ್ರಾಚೀನ ಕಾಳಾಮುಖ ಗುರುಗಳ ಅಥವಾ ಕಾಳಾಮುಖ ಸಂಪ್ರದಾಯದ ಅನುಯಾಯಿಗಳ ವಂಶದವರಿರಬಹುದು ಎಂದು ಭಾವಿಸಬಹುದಾಗಿದೆ. ಗುರವ ಪಂಗಡಕ್ಕೆ ಸಂಬಂಧಿಸಿದ ಕೆಲವು ಮುಖ್ಯಾಂಶಗಳನ್ನು ಆರಿಸಿ ಕೆಳಗೆ ಕೊಡಲಾಗಿದೆ–

## ಬಿಜಾಪುರ ಜಿಲ್ಲೆಯ ಗುರವರು

"Guravs, also called as Jīrs and Hūgārs, are returned as numbering 1622. One or two families are found in almost all good-sized villages. They are the ministrants of Māruti or Hanumān, the monkey God and village guardian, who wears both the sacred thread and the ling, and is worshipped both by Bramhanic and by Lingayat Hindus. --They speak Kanarese and are very early settlers in the district. --Like Lingayats they neither eat flesh, nor drink liquor. At least one family in every village holds hereditary rent-free land in return for worshipping the village Māruti, and lives on the produce of the land and the offerings made to the God. Most Shiv temples

[224] ಆದಯ್ಯನ ವಚನಗಳು (ಸಂ. ಉ. ಚನ್ನಪ್ಪ), ಪು. 23.

have Gurav priests. ---Some are musicians who beat the sambal or tabor at Brahman, Sonar and Lingayat weddings, accompanied by Korvis who blow the sarai or clarion. ....Though poor, the Guravs hold a good social position. ....In religion they come half-way between Brahmanism and Lingayatism, some of them wearing the sacred thread, some the ling, and some both the sacred thread and the ling. Their family divinities are Māruti, Saraswati, Rāmeśwar and family ghosts who are deified to prevent them bringing fever and other sickness into a house. They honour both Brahmans and Jangams, but do not ask either to conduct their marriage or other ceremonies All their ceremonies are performed by priests of their own caste. They have a guru or religious teacher who belongs to the Gurav caste. ....Their customs differ little from Sonar or Brahman customs. ....Those who wear the ling bury and the rest burn their dead. ... The teacher has great authority over his disciples, and is succeeded by his son or other heir. ...Guravs and Jir Lingayats, who are entered in the Census as separate castes, are the same caste "[225].

## ಬೆಳಗಾಂ ಜಿಲ್ಲೆಯ ಗುರವರು

"Guravs are returned as numbering 1402 and as found chiefly in Athni, Chikoḍi and Gokak. ...Some serve at the shrines of the village gods and live on the villagers' offerings of food and grain. At harvest time the villagers give them a small share of the grain. A few hold rent-free lands in return for performing the service in certain temples. ....Brahmans officiate at their marriages. They allow widow marriage. They burn their dead and throw the ashes into a running stream on the third day, they offer a ball of rice to the crows on the tenth, and perform the Śrāddha ceremony on the eleventh or twelfth when they feast the caste. ....They do not become ascetics. They have no Gurus or religious teachers and they never go on pilgrimage."[226]

ಮೈಲಾರಲಿಂಗನ ಭಕ್ತರಾದ 'ಗೊರವ'ರು ಈ 'ಗುರವ'ರಿಂದ ಭಿನ್ನ. ಇವರಿಬ್ಬರಿಗೂ ಸಂಬಂಧ ವಿದೆಯೇ, ಮೂಲಭೂತ ವ್ಯತ್ಯಾಸಗಳಾವುವು ಎಂಬುದನ್ನು ಇನ್ನೂ ಖಚಿತಪಡಿಸಿಕೊಳ್ಳಬೇಕು. ಆದರೆ ಇಬ್ಬರೂ ಕಾಳಾಮುಖ–ಪಾಶುಪತದ ಅನುಯಾಯಿಗಳ ಪರಂಪರೆಯವರು ಎಂಬ ಅನುಮಾನ ಹುಟ್ಟುತ್ತದೆ. ಕಾಳಾಮುಖ ರಿಗೂ ಪಾಶುಪತರಿಗೂ ಆಚರಣೆಗಳಲ್ಲಿ ಸ್ವಲ್ಪ ಭೇದಗಳಿದ್ದಿರಬೇಕು ಎಂಬ ಊಹೆಯನ್ನು ಹಿಂದೆ ಮಾಡಿದ್ದೇವೆ. 'ಗೊರವ'ರು ಮೈತುಂಬ ಮತ್ತು ತಲೆಯಮೇಲೆ ಕರಿಯ ವಸ್ತ್ರಗಳನ್ನು ಧರಿಸುವುದರಿಂದ ಕಾಳಾಮುಖರ ಅನು ಯಾಯಿಗಳ ಪರಂಪರೆಯವರಿರಬಹುದೇ? ಬ್ರಾಹ್ಮಣರಿಗೂ, ವೀರಶೈವರಿಗೂ ಮಧ್ಯೆ ಬರುವ 'ಗುರವ'ರು ಲಕುಲೀಶ-ಪಾಶುಪತರ ಅನುಯಾಯಿಗಳ ಪರಂಪರೆಯವರಿರಬಹುದೇ?

## ಆಂಧ್ರದ ಆರಾಧ್ಯರು

ಬ್ರಾಹ್ಮಣ ಸಂಪ್ರದಾಯಗಳನ್ನೂ ವೀರಶೈವ ಸಂಪ್ರದಾಯಗಳನ್ನೂ ಒಟ್ಟಿಗೆ ಉಳಿಸಿಕೊಂಡಿರುವ ಆಂಧ್ರ

225 Bombay Gazetteer, XXIII (Bijapur district), pp. 265-7.
226 Bombay Gazetteer, XXI (Belgaum district), pp. 106–7.

ದೇಶದ ಆರಾಧ್ಯರ ವಿಷಯವನ್ನು ಇಲ್ಲಿ ಸೂಚಿಸಬಹುದು.[227] ಇವರು ಬ್ರಾಹ್ಮಣರಂತೆ ಯಜ್ಞೋಪವೀತವನ್ನೂ, ವೀರಶೈವರಂತೆ ಇಷ್ಟಲಿಂಗವನ್ನೂ ಧರಿಸುತ್ತಾರೆ. ಇವರು ಬ್ರಾಹ್ಮಣರಂತೆ ವೇದಗಳನ್ನು ನಂಬುತ್ತಾರೆ (ವೀರಶೈವರಿಗೆ ವೇದಗಳಲ್ಲಿನ ಗೌರವ ಅಸ್ಪಷ್ಟ). ವೀರಶೈವರಂತೆ ಹೆಣವನ್ನು ಹೂಳುತ್ತಾರೆ, ಸುಡುವುದಿಲ್ಲ. ಹೀಗೆ ಇದೊಂದು ವೈದಿಕ ಮತ್ತು ವೀರಶೈವ ಧರ್ಮಗಳ ಸಮ್ಮಿಶ್ರಣವಾಗಿ ಕಾಣಿಸಿಕೊಳ್ಳುತ್ತದೆ. ಇದು ಬಸವಣ್ಣನವರಿಗಿಂತ ಪ್ರಾಚೀನವೋ ಅರ್ವಾಚೀನವೋ ಹೇಳುವುದು ಕಷ್ಟ. ಆಂಧ್ರದ ಆರಾಧ್ಯರಿಗೂ, ಲಕುಲೀಶ–ಪಾಶುಪತರಿಗೂ ಏನಾದರೂ ಸಂಬಂಧವಿದೆಯೇ ಎನ್ನುವುದು ವಿಚಾರಯೋಗ್ಯವಾದುದು.

---

[227] ಆರಾಧ್ಯ ಪಂಗಡಕ್ಕೆ ಸಂಬಂಧಿಸಿದ ವಿಷಯಗಳನ್ನು ಈ ಗ್ರಂಥಗಳಿಂದ ಆರಿಸಿಕೊಂಡಿದೆ :

Edger Thurston : Castes and Tribes of Southern India, I, pp. 50–4.

ಬಿ. ಎಸ್. ವೆಂಕಣ್ಣಯ್ಯ : ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು ಎಂಬ ಗ್ರಂಥದಲ್ಲಿ ಶಿವತತ್ವಸಾರ' ಎಂಬ ಲೇಖನ, ಪು. 202–237.

# VII

# ವೈಷ್ಣವ ಧರ್ಮ

### ಇತಿಹಾಸ

ಪ್ರಾಚೀನ ಕರ್ನಾಟಕದ ಶೈವಧರ್ಮವನ್ನು ಚರ್ಚಿಸಿರುವ ಹಿಂದಿನ ಅಧ್ಯಾಯದ ಆರಂಭದಲ್ಲಿ ಶಿವನ ಕಲ್ಪನೆ, ಆ ದೇವತೆಯ ಇತಿಹಾಸ, ವಿಕಾಸಾದಿಗಳನ್ನು ಕುರಿತು ಸಂಗ್ರಹವಾಗಿ ವಿಚಾರಮಾಡಲಾಗಿದೆ. ಶಿವನಿಗೆ ಒಂದು ಇತಿಹಾಸವಿರುವಂತೆ ಹಿಂದೂಧರ್ಮದಲ್ಲಿ ಅವನಷ್ಟೇ ಪ್ರಬಲ ದೇವತೆಯಾಗಿರುವ ವಿಷ್ಣುವಿಗೂ ಒಂದು ಇತಿಹಾಸವುಂಟು. ವಿಷ್ಣುವು ವೇದಗಳಲ್ಲಿ ಪ್ರಧಾನ ದೇವತೆಯಲ್ಲದಿದ್ದರೂ ಅಪ್ರಧಾನನೇನೂ ಅಲ್ಲ. ಅವನು ತನ್ನ ಮೂರು ಹೆಜ್ಜೆಗಳಿಂದ ಲೋಕ ಸಮಸ್ತವನ್ನೇ ಅಳೆಯುವುದನ್ನು ಉತ್ಸಾಹದಿಂದ ಋಗ್ವೇದದಲ್ಲಿ ಬಣ್ಣಿಸಲಾಗಿದೆ.[1] ಅವನ ಎರಡು ಹೆಜ್ಜೆಗಳನ್ನು ಮರ್ತ್ಯರು ಕಾಣಬಹುದು; ಮೂರನೆಯದನ್ನು ಮಾತ್ರ ಯಾರೂ ಕಾಣಲಾರರು, ಏಕೆಂದರೆ ಅದು ಹಕ್ಕಿಗಳ ಸಂಚಾರಪಥವನ್ನು ಮೀರಿ ಆಚೆಗಿದೆ.[2] ಜ್ಞಾನಿಗಳು ವಿಷ್ಣುವಿನ ಅತ್ಯುನ್ನತ ಲೋಕವನ್ನು ("ಪರಮಂ ಪದಂ") ಕಾಣಬಲ್ಲರು.[3] ವಿಷ್ಣುವಿನ ಆ ಅತ್ಯುನ್ನತ ಲೋಕದಲ್ಲಿ ಒಂದು ಜೇನಿನ ಬಾವಿಯಿದೆ, ಅಲ್ಲಿ ದೇವತೆಗಳೆಲ್ಲರೂ ರಮಿಸುವರು.[4] ಇದೇ ಮೊದಲಾದ ಉಕ್ತಿಗಳನ್ನು ನೋಡಿದರೆ ವಿಷ್ಣುವಿಗೆ ಋಗ್ವೇದದಲ್ಲಿ ತಕ್ಕಮಟ್ಟಿನ ಗೌರವದ ಸ್ಥಾನವಿದೆಯೆಂದು ಭಾವಿಸಬೇಕಾಗುತ್ತದೆ. ಬ್ರಾಹ್ಮಣಗಳ ಕಾಲದಲ್ಲಿ ಅವನ ಪ್ರಾಧಾನ್ಯವು ಹೆಚ್ಚುತ್ತಾ ಹೋಯಿತು. ದೇವತೆಗಳಲ್ಲೆಲ್ಲ ವಿಷ್ಣುವೇ ವರಿಷ್ಠದೇವತೆಯೆಂದೂ ಅಗ್ನಿಯೇ ಕನಿಷ್ಠ ದೇವತೆಯೆಂದೂ ಐತರೇಯ ಬ್ರಾಹ್ಮಣವು ಬಣ್ಣಿಸಿದೆ.[5] ಅದೇ ಬ್ರಾಹ್ಮಣದಲ್ಲಿ ಅಸುರರ ವಿರುದ್ಧ ಹೋರಾಡಲು ದೇವತೆಗಳಿಗೆ ಸಹಾಯ ಮಾಡುವವನು ವಿಷ್ಣು ಎಂದು ಹೇಳಿದೆ.[6] ಇತಿಹಾಸ ಮಹಾಕಾವ್ಯಗಳ ಕಾಲದಲ್ಲಿ ವಿಷ್ಣುವು ಪರಮ ದೇವತೆಯಾಗಿ ಪರಿಣಮಿಸಿದನು. ವಿಷ್ಣು ಮತ್ತು ವಾಸುದೇವ–ಕೃಷ್ಣರ[7] ಸಮೀಕರಣ ಕಾರ್ಯವು ನಡೆದದ್ದು ಬಹುಶಃ ಆ ಕಾಲದಲ್ಲಿಯೇ. ಈ ಸಮೀಕರಣ ಕಾರ್ಯಕ್ಕೆ ಒಂದು ಇತಿಹಾಸವುಂಟು. ಅದು ನಮ್ಮ ಅಧ್ಯಯನಕ್ಕೆ ಪ್ರಸಕ್ತವಾದ್ದರಿಂದ ಅದನ್ನು ಕೆಳಗೆ ನಿರೂಪಿಸುತ್ತೇವೆ.

ಯಜ್ಞಯಾಗಾದಿಗಳಿಗೂ, ವರ್ಣಾಶ್ರಮಧರ್ಮಕ್ಕೂ ಪ್ರಾಧಾನ್ಯವನ್ನು ಕೊಟ್ಟಿದ್ದ ವೈದಿಕ ಧರ್ಮದ ಅಕ್ಕಪಕ್ಕದಲ್ಲಿಯೇ ಮೂಲತಃ ಅದಕ್ಕಿಂತ ಭಿನ್ನವಾದ ಒಂದು ಧರ್ಮವು ಬೆಳೆದುಕೊಂಡು ಬಂದಿತು. ಅದೇ

---

1 R. G. Bhandarkar : Vaiṣṇavism, Śaivism and Minor Religious Systems, p. 47.

2 ಅದೇ.

3 ಅದೇ.

4 ಅದೇ.

5 ಅದೇ.

6 S. Radhakrishnan : Indian Philosophy (1923), I, pp. 492–3.

7 ವಾಸುದೇವನೂ ಕೃಷ್ಣನೂ ಮೂಲತಃ ಬೇರೆ ಬೇರೆ ದೇವತೆಗಳೆಂಬ ಡಾ॥ ಭಂಡಾರ್ಕರರ ಅಭಿಪ್ರಾಯವನ್ನು ಡಾ॥ ಎ. ಡಿ. ಪುಸಲ್ಕರರು ಒಪ್ಪುವುದಿಲ್ಲ. (Studies in Epics and Purāṇas of India, Bharatiya Vidya Bhavan Series, p. 63.)

ಭಾಗವತ ಧರ್ಮ. ಇದನ್ನು ಸಾತ್ವತ ಧರ್ಮವೆಂದೂ ಏಕಾಂತಿಕ ಧರ್ಮವೆಂದೂ ಕರೆಯುವುದುಂಟು. ಈ ಧರ್ಮದ ಸ್ಥಾಪಕ ಕ್ಷತ್ರಿಯನಾದ ಕೃಷ್ಣ–ವಾಸುದೇವ. ಇವನ ತಂದೆ ವಸುದೇವ, ತಾಯಿ ದೇವಕಿ. ಘೋರ ಆಂಗಿರಸ ಎಂಬ ಋಷಿಯ ಶಿಷ್ಯನೀತ. ಇವನದು ಸಾತ್ವತ ಕುಲ. ಸಂಸ್ಕೃತ ಮಹಾಭಾರತದ ಈಚಿನ ಭಾಗಗಳಲ್ಲಿ ಇವನು ದೊಡ್ಡ ಯೋಧನಂತೆ, ಧಾರ್ಮಿಕ ಸುಧಾರಕನಂತೆ ಕಾಣಿಸಿಕೊಳ್ಳುತ್ತಾನೆ. ಇವನು ಸ್ಥಾಪಿಸಿದ ಧರ್ಮದ ಮುಖ್ಯ ಲಕ್ಷಣವೆಂದರೆ ಏಕದೇವೋಪಾಸನೆ. ದೈವಸಾಕ್ಷಾತ್ಕಾರಕ್ಕೆ ಭಕ್ತಿ ಮುಖ್ಯ. ಈ ಏಕದೇವೋಪಾಸನೆ ಮತ್ತು ನಿರ್ಹೇತುಕವಾದ ಭಕ್ತಿ–ಇವೆರಡೂ ಈ ಧರ್ಮದ ವೈಶಿಷ್ಟ್ಯಗಳು. ಕೃಷ್ಣನು ತನ್ನ ಆರಾಧ್ಯದೈವವನ್ನು 'ಭಗವತ್' ಎಂದು ಕರೆದು ತನ್ನ ಅನುಯಾಯಿಗಳನ್ನು 'ಭಾಗವತ'ರೆಂದು ಕರೆದನು. ಕ್ರಮೇಣ ಈ ಧರ್ಮದ ಅನುಯಾಯಿಗಳು ಕೃಷ್ಣನಿಗೇ ದೈವದ ಪಟ್ಟವನ್ನು ಕಟ್ಟಿ ಅವನನ್ನು ಒಂದು ಅವತಾರವೆಂದು ಭಾವಿಸಿದರು. ಇದು ನಡೆದದ್ದು ಬಹುಶಃ ಕ್ರಿ. ಪೂ. 3ನೇ ಶತಮಾನದಲ್ಲಿ. ಭಗವಂತನು ಅನಂತನೆಂದೂ, ಅಮರನೆಂದೂ, ದಯಾಮಯನೆಂದೂ, ಅವನ ಬಳಿ ಶಾಶ್ವತವಾದ ಆನಂದ ದಲ್ಲಿರುವುದೇ ಮುಕ್ತಿಯೆಂದೂ ಭಾಗವತ ಧರ್ಮದ ನಂಬಿಕೆ.[8]

ಭಾಗವತ ಧರ್ಮದ ಇತಿಹಾಸದಲ್ಲಿ ಮುಖ್ಯವಾಗಿ ಮೂರು ಘಟ್ಟಗಳನ್ನು ಗುರುತಿಸಬಹುದು. ಮೊದಮೊದಲು ಭಾಗವತ ಧರ್ಮವು ತನಗೊಂದು ದರ್ಶನದ ಅವಲಂಬನವು ಬೇಕಾಗಿದ್ದುದರಿಂದ ಸಾಂಖ್ಯ ಮತ್ತು ಯೋಗಗಳ ಕಡೆಗೆ ತಿರುಗಿದಂತೆ ಕಾಣುತ್ತದೆ. ಇದರ ಫಲವಾಗಿ ಭಾಗವತ ಧರ್ಮವನ್ನು ಭಗವಂತ ಎಂಬ ಅರ್ಥದಲ್ಲಿ 'ಪುರುಷ' ಎಂಬ ಪದವೂ, ಭಗವಂತನಲ್ಲಿ ಶ್ರದ್ಧೆ, ಭಕ್ತಿ ಎಂಬ ಅರ್ಥದಲ್ಲಿ 'ಯೋಗ' ಎಂಬ ಪದವೂ ಪ್ರವೇಶಿಸಿದುವು. ಇದು ಮೊದಲನೆಯ ಘಟ್ಟ; ನಡೆದದ್ದು ಕ್ರಿ. ಪೂ. 4ನೆಯ ಶತಮಾನದಲ್ಲಿ. ಇದಕ್ಕಿಂತ ಬಹು ಮುಖ್ಯವಾದುದು ಎರಡನೆಯ ಘಟ್ಟ. ಕ್ರಿ. ಪೂ. 4ನೆಯ ಶತಮಾನದಲ್ಲಿ ವೈದಿಕ ಧರ್ಮವು ಬೌದ್ಧ ಧರ್ಮವನ್ನೆದುರಿಸಲಾರದೆ, ಆಗ ಬಹು ಜನಪ್ರಿಯವಾಗುತ್ತಿದ್ದ ಭಾಗವತಧರ್ಮದೊಡನೆ ಸ್ನೇಹವನ್ನು ಬೆಳಸಲು ಸಿದ್ಧವಾಯಿತು. ಅದರ ಫಲವಾಗಿ ವೈದಿಕ ಸಾಹಿತ್ಯದ ವಿಷ್ಣುವನ್ನು "ಭಗವಂತ" ನೊಡನೆ ಸಮೀಕರಿಸ ಬೇಕಾಯಿತು. ಇಲ್ಲಿಂದ ಮುಂದೆ ವೈಷ್ಣವ ಧರ್ಮವೆಂಬುದು ಭಾಗವತಧರ್ಮದ ಇನ್ನೊಂದು ಹೆಸರಾಗಿ ಪರಿಗಣಿತವಾಯಿತು. ವೈದಿಕ ಧರ್ಮದ ಫಲವಾಗಿ ಭಾಗವತ ಧರ್ಮ ಕೂಡ ವೈದಿಕವಾಗಿ ಪರಿಣಮಿಸಿತು. ಈ ಎರಡು ಧರ್ಮಗಳ ಒಪ್ಪಂದದ ಕುರುಹುಗಳನ್ನು ನಾವು ಭಗವದ್ಗೀತೆಯ ಹಳೆಯ ಭಾಗಗಳಲ್ಲಿ ಕಾಣಬಹುದು. ಭಗವದ್ಗೀತೆಯಲ್ಲಿ ಕಂಡುಬರುವ ಉದಾತ್ತ ಭಾವನೆಗಳೆಲ್ಲವೂ ಭಾಗವತ ಧರ್ಮಕ್ಕೆ ಸೇರತಕ್ಕವು. ಅದರಲ್ಲಾಗಲೇ ವಾಸುದೇವ ಮತ್ತು ವಿಷ್ಣುವಿನ ಸಮೀಕರಣವು ನಡೆದಿರುವುದನ್ನು ಕಾಣಬಹುದು. ಮಹಾಭಾರತದ ನಾರಾಯಣೀ-ಯದ ಭಾಗಗಳು ಮತ್ತು ಭಾಗವತ ಪುರಾಣಗಳು ವೈದಿಕಗೊಳಿಸಲ್ಪಟ್ಟ ಭಾಗವತ ಧರ್ಮದ ಧಾರ್ಮಿಕ ಗ್ರಂಥ ಗಳು. ಈ ಎರಡು ಧರ್ಮಗಳ ಒಪ್ಪಂದದಿಂದ ಭಾಗವತ ಸಂಪ್ರದಾಯದ ಕೆಲವು ಅನುಯಾಯಿಗಳಿಗೆ ಅತೃಪ್ತಿ ಯುಂಟಾಯಿತು. ಭಗವಂತನನ್ನೂ, ಅವನ ಭಕ್ತರಾದ ಭಾಗವತರನ್ನೂ ದೂರ ಮಾಡಿದಂತೆ ಭಾಸವಾಯಿತು. ಏಕನೂ, ಅದ್ವಿತೀಯನೂ ಆದ ತಮ್ಮ ಆರಾಧ್ಯದೈವವನ್ನು ತಮ್ಮಿಂದ ಕಿತ್ತುಕೊಂಡಂತೆ ಅವರಿಗೆ ಅನ್ನಿಸಿತು. ಅದರ ಫಲವಾಗಿ, ಒಬ್ಬನೇ ಭಗವಂತನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಉದ್ದೇಶಗಳಿಗಾಗಿ ಬೇರೆ ಬೇರೆ ರೂಪ ಗಳಲ್ಲಿ ಅವತರಿಸುತ್ತಾನೆಂದು ಕಲ್ಪಿಸಿ ಅವರನ್ನು ಸಮಾಧಾನಪಡಿಸಬೇಕಾಯಿತು. ಆಗ ಭಗವಂತನ ಕಡೆಗಿದ್ದ ಅವರ ಭಕ್ತಿಯು ಅವನ ಅವತಾರಗಳ ಕಡೆಗೆ ಹರಿಯಿತು. ಭಾಗವತ ಧರ್ಮವು ಪ್ರಧಾನವಾಗಿ ಕ್ಷತ್ರಿಯರದ್ದು. ಭಗವಂತನ ಅವತಾರಗಳಲ್ಲಿ ರಾಮ, ಕೃಷ್ಣರಿಬ್ಬರೂ ಕ್ಷತ್ರಿಯರಾದ್ದರಿಂದ ಭಾಗವತರಿಗೆ ಅವರಿಬ್ಬರೂ ಅಚ್ಚುಮೆಚ್ಚಿನ ದೇವತೆಗಳಾದರು.

---

[8] ಈ ಮತ್ತು ಮುಂದಿನ ಪ್ಯಾರಾಗಳಲ್ಲಿ ಬರುವ ವಿಷಯವನ್ನು George A. Grierson ಅವರ Bhakti-Mārga ಎಂಬ ಲೇಖನದಿಂದ ಆರಿಸಿಕೊಂಡಿದ್ದೇವೆ (Encyclopaedia of Religion and Ethics, II).

ಈ ವೈದಿಕ–ಭಾಗವತ ಸಂಪ್ರದಾಯವನ್ನೇ ತಮಿಳುನಾಡಿನ ಆಳ್ವಾರರು ಅನುಸರಿಸಿಕೊಂಡು ಬಂದದ್ದು. ಕ್ರಿ.ಶ. 8–9ನೇ ಶತಮಾನಗಳಲ್ಲಿ ಶಂಕರಾಚಾರ್ಯರು ವೈದಿಕ ಧರ್ಮವನ್ನು ಕ್ರಮಬದ್ಧಗೊಳಿಸಿ, ವೇದಾಂತವನ್ನು ಪ್ರತಿಪಾದಿಸಿ, ಭಾಗವತ ಧರ್ಮವನ್ನು ಕಟುವಾಗಿ ಖಂಡಿಸಿದಾಗ ಭಾಗವತ ಸಂಪ್ರದಾಯದ ಅನುಯಾಯಿಗ್ಳಳು ಅದನ್ನು ಸಮರ್ಥಿಸಿ ರಕ್ಷಿಸಬೇಕಾಯಿತು. ಆ ರಕ್ಷಣೆಯ ಕಾರ್ಯವನ್ನು ಕೈಗೊಂಡವರು 12ನೇ ಶತಮಾನದ ರಾಮಾನುಜರು, ಅವರಾದ ಮೇಲೆ ಬಂದ ಮಧ್ವಾಚಾರ್ಯರು. ಮೂರನೆಯ ಘಟ್ಟವು ಇವರಿಂದ ಆರಂಭವಾಗುತ್ತದೆ. ಆಧುನಿಕ ಭಾಗವತ ಭಕ್ತಿ ಸಂಪ್ರದಾಯಕ್ಕೆ ಇವರೇ ಮೂಲಕರ್ತರು.

ವಿಷ್ಣುವನ್ನೇ ಆರಾಧ್ಯದೈವವಾಗುಳ್ಳ ಈ ವೈಷ್ಣವ ಧರ್ಮದ ಸ್ವರೂಪವನ್ನು ಸಂಗ್ರಹವಾಗಿ ಹೀಗೆ ಹೇಳಬಹುದು. "ಭಗವಂತನು ಸಗುಣನೆಂದು ಭಾವಿಸಿ ಅವನ ಪ್ರತೀಕೋಪಾಸನೆಯನ್ನು ಮಾಡುವುದು ಇದರ ಮುಖ್ಯ ಲಕ್ಷಣ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕದೇವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಈ ಇಷ್ಟದೈವದ 'ಪ್ರಸಾದ' ಅಥವಾ ಕರುಣೆಗಾಗಿ ತನ್ನನ್ನು ತಾನು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು (ಇದೇ 'ಪ್ರಪತ್ತಿ'). ವಿಷ್ಣುವಿಗಿಂತ ಕೆಳಮಟ್ಟದಲ್ಲಿದ್ದರೂ, ಬೇರೆ ಬೇರೆ ಸಾಮರ್ಥ್ಯಗಳನ್ನು ಪಡೆದು, ಭಿನ್ನ ಭಿನ್ನ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ, ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಭಗವಂತನು ಈ ಲೋಕವನ್ನು ಸೃಷ್ಟಿಸಿರುವಂತೆಯೇ ಅದರ ಉದ್ಧಾರಕ್ಕಾಗಿ ಆಗಾಗ ಅವತರಿಸುತ್ತಾನೆಂದು ಅದು ನಂಬುತ್ತದೆ. ಮೋಕ್ಷದಲ್ಲಿ ಬೇರೆ ಬೇರೆ ಹಂತಗಳುಂಟೆಂದೂ, ಭಕ್ತಿಯೊಂದೇ ಪಾಪಗಳನ್ನು ಹೋಗಲಾಡಿಸಲು ಸಮರ್ಥವಾದುದೆಂದೂ, ಸಾಧಕನಿಗೆ ಗುರು ಅತ್ಯವಶ್ಯವೆಂದೂ, ಭಗವಂತನ ನಾಮೋಚ್ಚಾರಣೆಗೆ ಅದ್ಭುತವಾದ ಶಕ್ತಿಯಿದೆಯೆಂದೂ ಅದು ನಂಬುತ್ತದೆ. ಬೌದ್ಧಿಕವಾದ ಜ್ಞಾನಕ್ಕಿಂತ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವಧರ್ಮವು ಒತ್ತಿಹೇಳುತ್ತದೆ."[9] ಅಲ್ಲದೆ ಈ ಧರ್ಮವು "ವೇದಗಳಲ್ಲಿ, ಸ್ಮೃತಿಗಳಲ್ಲಿ ಉಕ್ತವಾಗಿರುವ ವಿಧಿಗಳಿಗನುಸಾರವಾದ ಕರ್ಮಗಳಿಂದ ಮಾತ್ರ ಮೋಕ್ಷವೆಂಬ ಮೀಮಾಂಸಕರ ವಾದವನ್ನು ಅಲ್ಲಗಳೆಯಿತು. ಜ್ಞಾನಮಾರ್ಗವನ್ನು ಒತ್ತಿಹೇಳಿದ ಶಂಕರಾಚಾರ್ಯರನ್ನು ವಿರೋಧಿಸಿ ಭಕ್ತಿಮಾರ್ಗವನ್ನು ಮುಂದುಮಾಡಿತು. ....ಹಿಂದೂಧರ್ಮದ ಇತರ ಮತಗಳಂತಲ್ಲದೆ ಸಮಾಜದ ಕೆಳವರ್ಗದ ಶೂದ್ರರನ್ನೂ ಹತ್ತಿರಕ್ಕೆ ಸೇರಿಸಿಕೊಂಡಿತು. ಅವರಿಗೂ ಮೋಕ್ಷವುಂಟೆಂದು ಸಾರಿತು."[10] (ಶೈವಧರ್ಮವೂ ಶೂದ್ರರನ್ನು ಬಹು ಸಹಾನುಭೂತಿಯಿಂದ ನೋಡಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ಭಕ್ತಿ ಪಂಥಗಳೆಲ್ಲ ಹೀಗೆಯೇ.)

## ತಮಿಳುನಾಡಿನ ವೈಷ್ಣವಧರ್ಮ

ಭಾಗವತದ (ಸು. 900) ಪ್ರಕಾರ ದಕ್ಷಿಣ ಭಾರತವೇ ಭಕ್ತಿಯ ತವರೂರು.[11] ತಮಿಳುನಾಡಿನ ವೈಷ್ಣವ ಧರ್ಮದ ಇತಿಹಾಸದ ಆರಂಭದಲ್ಲಿ ಆಳ್ವಾರರು ಗೋಚರಿಸುತ್ತಾರೆ. ಅನಂತರ ಆಚಾರ್ಯರ ಪರಂಪರೆಯು ಆರಂಭವಾಗಿ ಆ ಪರಂಪರೆಯು ಇಂದಿಗೂ ಉಳಿದುಕೊಂಡು ಬಂದಿದೆ. ''ಆಳ್ವಾರ್'' ಎಂದರೆ ಭಗವಂತನ ಅನಂತಗುಣಗಳ ಧ್ಯಾನದ ಮಡುವಿನಲ್ಲಿರತಕ್ಕವರು ಎಂದರ್ಥ. ಆಳ್ವಾರರು ದೊಡ್ಡ ವಿಷ್ಣು-ಭಕ್ತರು. ಬಾಯಿಂದ ಬಾಯಿಗೆ ಹರಿದುಬಂದ ಇವರ ತಮಿಳುಭಾಷೆಯ ಕೃತಿಗಳನ್ನು ಅಥವಾ ಪ್ರಬಂಧಗಳನ್ನು

[9] S.K. De : Early History of the Vaiṣṇava faith and movement in Bengal, pp.3-4.

[10] Hemchandra Ray Chaudhury : Materials for the study of the early History of the Vaiṣṇava sect, pp. 115-7.

[11] S. Krishnaswami Iyengar : Early History of Vaiṣṇavism in South India, p.8.

ಸಂಗ್ರಹಿಸಿ ಒಂದು ರೂಪವನ್ನು ಕೊಡುವ ಕಾರ್ಯವು ನಡೆದದ್ದು ರಾಮಾನುಜರ ಜೀವಿತದ ಕೊನೆಯ ದಿನಗಳಲ್ಲಿ. ಆಳ್ವಾರರು ಹನ್ನೆರಡು ಜನ. ಅವರಲ್ಲಿ ಪೊಯ್ಗೈ ಆಳ್ವಾರ್ ಎಂಬುವರು ಮೊದಲಿಗರು, ತಿರುಮಂಗೈ ಆಳ್ವಾರ್ ಎಂಬುವರು ಕೊನೆಯವರು. ಇವರಲ್ಲಿ ಮೊದನೆಯ ಆಳ್ವಾರರು ಕ್ರಿ. ಪೂ. 4203 ರಲ್ಲೂ, ಕೊನೆಯ ಆಳ್ವಾರರು ಕ್ರಿ. ಪೂ. 2706 ರಲ್ಲೂ ಇದ್ದುದಾಗಿ ಸಂಪ್ರದಾಯವು ಹೇಳುತ್ತದೆ. ಆದರೆ ಇದು ಸಂಪೂರ್ಣ ಕಾಲ್ಪನಿಕವೆನ್ನುವುದರಲ್ಲಿ ಸಂದೇಹವಿಲ್ಲ. ಡಾ॥ ಕೃಷ್ಣಸ್ವಾಮಿ ಅಯ್ಯಂಗಾರರ ಪ್ರಕಾರ ಮೊದಲ ಆಳ್ವಾರರು ಕ್ರಿ. ಶ. 2ನೆಯ ಶತಮಾನಕ್ಕೆ ಸೇರುತ್ತಾರೆ, ಕೊನೆಯ ಆಳ್ವಾರರು ಸುಮಾರು 9ನೆಯ ಶತಮಾನದಲ್ಲಿದ್ದರು.[12] ಕ್ರಿ. ಶ. 10ನೆಯ ಶತಮಾನದಲ್ಲಿ ಮೊದಲ ಆಚಾರ್ಯರಾದ ನಾಥಮುನಿಗಳಿದ್ದರು. ತಮಿಳು ನಾಡಿನ ವೈಷ್ಣವ ಧರ್ಮವು ಬಹುಶಃ ಕ್ರಿಸ್ತಶಕದ ಆದಿಯ ಶತಕಗಳಲ್ಲಿ ಆರಂಭವಾದರೂ, ಅದರ ನಿಯೋಜನೆಯ ಕಾರ್ಯವನ್ನು ನಾಥಮುನಿಗಳೇ ಆರಂಭಿಸಿದ್ದರೂ, ಅದಕ್ಕೆ ಪೂರ್ಣರೂಪವು ಒದಗಿ ಅದೊಂದು ಸಿದ್ಧಾಂತವಾಗಿ ನೆಲೆಗೊಂಡದ್ದು ಶ್ರೀ ರಾಮಾನುಜಾಚಾರ್ಯರಿಂದ, ಹನ್ನೆರಡನೆಯ ಶತಮಾನದಲ್ಲಿ.[13] ಮುಂದೆ ಬಂದ ವೇದಾಂತದೇಶಿಕರು (ಸು. 1350) ಅತ್ಯಂತ ದೊಡ್ಡ ವಿದ್ವಾಂಸರಾಗಿ ಹಲವು ಕೃತಿಗಳನ್ನು ರಚಿಸಿದರು. ವಿಶಿಷ್ಟಾದ್ವೈತದ ತತ್ವಗಳು ವಿದ್ವಾಂಸರಲ್ಲಿ ಮತ್ತು ಜನಸಾಮಾನ್ಯರಲ್ಲಿ ಪ್ರಚಾರವಾಗಲು ಅವರು ವಹಿಸಿದ ಪಾತ್ರವು ಅಲ್ಪವಾದುದೇನೂ ಅಲ್ಲ.

## ಕರ್ನಾಟಕದಲ್ಲಿ ವೈಷ್ಣವಧರ್ಮ

ಭಾಗವತ ಧರ್ಮವು ದಕ್ಷಿಣ ಭಾರತವನ್ನು ಕ್ರಿಸ್ತಶಕಕ್ಕಿಂತ ಪೂರ್ವದಲ್ಲಿಯೇ ಪ್ರವೇಶಿಸಿದ್ದಿತೆಂದು ನಾನಘಾಟ್ ಶಾಸನದಿಂದ ತಿಳಿದುಬರುತ್ತದೆ.[14] ಕ್ರಿಸ್ತಶಕದ ಆದಿಭಾಗದಲ್ಲಿದ್ದ ತಮಿಳು ನಾಡಿನ ಆಳ್ವಾರರ ಪ್ರಭಾವವು ಕನ್ನಡನಾಡಿನ ಮೇಲೆ ಎಷ್ಟರಮಟ್ಟಿಗೆ ಆಯಿತೋ ತಿಳಿಯದು. ಹಿಂದೆ ನಾವು ಭಾಗವತ ಧರ್ಮದ ಇತಿಹಾಸವನ್ನು ನೋಡಿದಂತೆ ಕ್ರಿಸ್ತಶಕದ ಮೊದಲ ಹತ್ತು ಅಥವಾ ಹನ್ನೊಂದು ಶತಕಗಳಲ್ಲಿ ವೈದಿಕಗೊಳಿಸಲ್ಪಟ್ಟ ಭಾಗವತ ಧರ್ಮವು ಕರ್ನಾಟಕದಲ್ಲಿ ಪ್ರಚುರವಾಗಿದ್ದಿರಬೇಕು. ಶಾಸನಗಳಲ್ಲಿ 'ಭಾಗವತ', 'ವೈಷ್ಣವ' ಎಂಬ ಉಕ್ತಿಗಳು ದೊರೆಯುತ್ತವೆ. ಕನ್ನಡ ಭಾಷೆಯ ಅತ್ಯಂತ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು[15] (ಸು. 450) ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗುತ್ತದೆ.

> ಜಯತಿ ಶ್ರೀ ಪರಿಷ್ವಂಗ ಶಾರ್ಙ್ಗ [ರ್ವ್ಯಾನತಿ] ರಚ್ಯುತಃ
> ದಾನವಾಕ್ಷ್ಣೋರ್ಯುಗಾಂತಾಗ್ನಿಃ [ಶಿಷ್ಟಾನಾನ್ತು] ಸುದರ್ಶನಃ ॥

[ದಾನವರ ಕಣ್ಣುಗಳಿಗೆ ಪ್ರಳಯಕಾಲದ ಅಗ್ನಿಯಂತೆಯೂ, ಸತ್ಪುರುಷರಿಗೆ ಸುದರ್ಶನನಾಗಿ (ಸುದರ್ಶನ ಚಕ್ರವಾಗಿ)ಯೂ, ಲಕ್ಷ್ಮಿಯಿಂದ ಆಲಿಂಗಿತನಾಗಿಯೂ, ಶಾರ್ಙ್ಗವೆಂಬ ಧನುಸ್ಸನ್ನು ಹಿಡಿದಿರುವ ಅಚ್ಯುತನು ಜಯಿಸುತ್ತಾನೆ.][16]

---

[12] ಅದೇ, ಪು. 75.

[13] S. Krishnaswamy Iyengar : Contributions of South India to Indian culture, p. 286.

[14] S. Radhakrishnan : Indian Philosophy, II (1948), p. 667.

[15] MAR (1936). p. 73.

[16] ಎಂ. ಎಚ್. ಕೃಷ್ಣ ಅವರ ಅನುವಾದ (ಪ್ರಬುದ್ಧ ಕರ್ಣಾಟಕ, 20.3, ಪು. 39).

6ನೆಯ ಶತಮಾನದಲ್ಲಿ 'ಮಹಾಭಾಗವತ'ನಾದ ಚಾಳುಕ್ಯರಾಜ ಮಂಗಳೇಶನು (ಕ್ರಿ.ಶ. 596-609) ಬಾದಾಮಿಯಲ್ಲಿ ಪ್ರಸಿದ್ಧವಾದ ವೈಷ್ಣವ ಗುಹಾಂತರ್ದೇವಾಲಯವನ್ನು ತೋಡಿಸಿದನು.[17] ಮುಂದಿನ ಅನೇಕ ಶಾಸನಗಳಲ್ಲಿ ವಿಷ್ಣುದೇವಾಲಯಗಳ ರಚನೆ, ಅವುಗಳಿಗಾಗಿ ಬಿಟ್ಟ ದಾನಗಳ ವಿವರಗಳು ಬಂದಿವೆ. ಕ್ರಿ.ಶ. 959-60ರ ಶಾಸನವೊಂದರಲ್ಲಿ,[18] ವಿಟ್ಟಯ್ಯ ಮತ್ತು ಚಾವಯ್ಯ ಎಂಬ ಇಬ್ಬರು ವಿಷ್ಣುವಿನ ಶ್ರೀಪದವನ್ನು ಸೇರಲಿ ಎಂದು ಆಶಿಸಿ ವಿಷ್ಣುದೇವಾಲಯವೊಂದಕ್ಕೆ ಭೂಮಿಯನ್ನು ಬಿಡಲಾಗಿದೆ. ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿ[19] ಲಕ್ಕುಂಡಿಯ ಮಹಾಜನರನ್ನು "ವೈಷ್ಣವಗೀತಿ ಮನೋಹರರ್" ಎಂದು ಕರೆದಿದೆ. ವಿಷ್ಣುವಿನ ಅನುಯಾಯಿಗಳ ಧರ್ಮವನ್ನು ಒಂದು ಶಾಸನವು "ವೈಷ್ಣವಧರ್ಮ"ವೆಂದು ಕರೆದು, ಅವರು ಶಿವಾಲಯವೊಂದರ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುವರೆಂದು ಹೇಳುತ್ತದೆ.[20] ವಿಷ್ಣುಗೃಹವೊಂದಕ್ಕೆ ಹೊಂದಿಕೊಂಡಂತೆ ಚತ್ರವನ್ನು ಮಾಡಿಸಿದ ವಿಷಯವು ಶಾಸನವೊಂದರಲ್ಲಿದೆ.[21] ಹರಭಕ್ತನಾದ ಪಿಟ್ಟಮಯ್ಯ ಎಂಬಾತನ ಮೊಮ್ಮಗ ಎಜ಼ಿಗ ಎಂಬಾತನು ವಿಷ್ಣು ಮತ್ತು ಸರಸ್ವತೀ ದೇವಾಲಯಗಳನ್ನು ಮಾಡಿಸಿದಂತೆ ಶಾಸನವೊಂದು ಹೇಳುತ್ತದೆ.[22] ಶ್ರೀಗೋವಿಂದರಾಜನೆಂಬ "ವೈಷ್ಣವ ಚೂಡಾಮಣಿ"ಯ ಹೆಸರು ಬರುವ ಶಾಸನವು[23] ಶಿವ ಮತ್ತು ವಿಷ್ಣುಗಳ ಸ್ತೋತ್ರದಿಂದ ಆರಂಭವಾಗುತ್ತದೆ.

ಹೆಚ್ಚು ಕಡಮೆ ಅದೇ ಕಾಲದ ಬೇಲೂರಿನ ಶಾಸನದಲ್ಲಿ ಶ್ರೀವೈಷ್ಣವರ ಹೆಸರುಗಳು ಕಾಣಿಸಿಕೊಳ್ಳುತ್ತವೆ.[24] ರಾಮಾನುಜರ ಅನುಯಾಯಿಗಳನ್ನು ಶ್ರೀವೈಷ್ಣವರೆಂದು ಕರೆಯುತ್ತಾರೆ. 12ನೆಯ ಶತಮಾನದಲ್ಲಿ ರಾಮಾನುಜರು ಕರ್ನಾಟಕಕ್ಕೆ ಬಂದು ವಿಷ್ಣುವರ್ಧನನ ಪ್ರೋತ್ಸಾಹವನ್ನು ಪಡೆದು ದಕ್ಷಿಣ ಕರ್ನಾಟಕದಲ್ಲಿ ಶ್ರೀವೈಷ್ಣವ ಧರ್ಮವನ್ನು ಪ್ರಚಾರಮಾಡಿದರು. ಆದರೆ ಅವರು ಇಲ್ಲಿಗೆ ಬರುವ ಮುನ್ನವೇ ತಮಿಳುನಾಡಿನ ಆಳ್ವಾರರ ವೈಷ್ಣವ ಧರ್ಮದ ಪ್ರಭಾವವು ಕರ್ನಾಟಕದ ಮೇಲೆ ಆಗಿತ್ತು ಎನ್ನುವುದಕ್ಕೆ ಒಂದೆರಡು ಶಾಸನಾಧಾರಗಳಿವೆ. ತಿರುಮಕೂಡಲು ನರಸೀಪುರ ತಾಲೂಕಿನ ಸು. 1090ರ ಒಂದು ಶಾಸನದಲ್ಲಿ ವಿಣ್ಣಕರ್ ಆಳ್ವಾರ್ ಎಂಬುವರಿಗೆ ದತ್ತಿಗಳನ್ನು ಕೊಟ್ಟ ವಿಷಯವಿದೆ.[25] ಅವರ ಹೆಸರು ಇನ್ನೂ ಒಂದೆರಡು ಶಾಸನಗಳಲ್ಲಿ ದೊರಕುತ್ತದೆ.[26] ಇಷ್ಟನ್ನು ಬಿಟ್ಟರೆ ರಾಮಾನುಜರು ಕರ್ನಾಟಕಕ್ಕೆ ಬರುವ ಮುನ್ನ ತಮಿಳು ನಾಡಿನ ಆಳ್ವಾರರ ಪ್ರಭಾವದ ಪ್ರಮಾಣವನ್ನು ಅಳೆಯಲು ಬೇರೆ ಸಾಧನಗಳಿಲ್ಲ. ಲಕ್ಕುಂಡಿ ಶಾಸನದಲ್ಲಿ ಬರುವ 'ವೈಷ್ಣವ ಗೀತಿ' ಎನ್ನುವುದು ಭಾಗವತ ಅಥವಾ ಪಾಂಚರಾತ್ರ ಪಂಥದ ಪಾಂಚರಾತ್ರಾಗಮಗಳನ್ನು[27] ಸೂಚಿಸುವುದೆಂದು ಊಹಿಸಬಹುದು.

---

17 IA. III. p. 305, 578 A.D.

18 SII. IX. i. 28, 959-60 A.D.

19 BKI. I. i. 52, 1007 A.D.

20 SII. IX. i. 102, 1046 A.D.

21 BKI. I. ii. 134, 1087 A.D.

22 BKI. I. ii. 134, 1087 A.D.

23 EC. VII. Sk. 137, 1114 A.D.

24 EC. V. Bl. 58, 1117 A.D.
"ಶ್ರೀ ವಿಜಯನಾರಾಯಣದೇವರ ಶ್ರೀ ಚನ್ನಕೇಶವದೇವರ ಶ್ರೀ ಲಕ್ಷ್ಮೀನಾರಾಯಣದೇವರ ನಿತ್ಯನೈಮಿತ್ತಿಕ ದಿವ್ಯಾಂಗಭೋಗ ತ್ರಿಕಾಲ ನಿವೇದ್ಯ ಶ್ರೀ ವೈಷ್ಣವ ಬ್ರಾಹ್ಮಣರ ಪಾತ್ರ ಪಾಗುಡದ ವಿದ್ಯಾವಂತರ ಮಾಲಗಾರ್‍ರ...ಜೀವಿತ ವರ್ಗಕವಾಗಿ...."

25 EC. III. Tn. 24, C. 1090 A.D.

26 ಅದೇ, Tn. 33 ; Tn. 35.

27 "ಪಾಂಚರಾತ್ರಾಗಮಗಳು ವೇದಗಳಂತೆ ಅಪೌರುಷೇಯಗಳೆಂದು ನಂಬುತ್ತಾರೆ. ಇವುಗಳ ಸಂಖ್ಯೆ 108 ಎಂದು ಪ್ರತೀತಿ ಇದೆಯಾದರೂ ಡಾ॥ ಶ್ರೇಡರ್ ಅವರು 215 ವೈಷ್ಣವಾಗಮಗಳ ಪಟ್ಟಿಯನ್ನು ಕೊಟ್ಟಿರುವರು......ಇವು ಮಹಾಭಾರತದ ತರುವಾಯ ಮತ್ತು ಕ್ರಿ. ಶ. 800ಕ್ಕೆ ಪೂರ್ವದಲ್ಲಿ ಹುಟ್ಟಿರಬೇಕು."
(ಎಸ್. ಸಿ. ನಂದೀಮಠ : ಕನ್ನಡ ನಾಡಿನ ಚರಿತ್ರೆ, II, ಪು. 236)

## ಶ್ರೀ ರಾಮಾನುಜರು

ಶ್ರೀ ರಾಮಾನುಜರಿಂದ ಶ್ರೀ ವೈಷ್ಣವ ಧರ್ಮ ಅಥವಾ ವಿಶಿಷ್ಟಾದ್ವೈತ ಸಿದ್ಧಾಂತವು ದಕ್ಷಿಣ ಕರ್ನಾಟಕದಲ್ಲಿ ಪ್ರಚುರವಾಯಿತೆಂದು ಹಿಂದೆಯೇ ಹೇಳಲಾಯಿತು. ರಾಮಾನುಜರು ಕ್ರಿ. ಶ. 1017ರಲ್ಲಿ ಮದರಾಸಿನ ಬಳಿ ಇರುವ ಶ್ರೀ ಪೆರಂಬುದೂರಿನಲ್ಲಿ ಆಸೂರಿ ಕೇಶವ ಪೆರುಮಾಳ್ ಮತ್ತು ಭೂದೇವಿ ಎಂಬ ದಂಪತಿಗಳಿಗೆ ಮಗನಾಗಿ ಜನಿಸಿದರು. ಮಗುವಿನ ಮುಖದ ಮೇಲಿನ ತೇಜಸ್ಸನ್ನೂ, ಮಂಗಳ ಲಕ್ಷಣಗಳನ್ನೂ ಕಂಡು ಅದಕ್ಕೆ 'ರಾಮಾನುಜ' ಎಂದು ಹೆಸರಿಟ್ಟರು. ಬಾಲ್ಯದಲ್ಲಿ ಸಕಲ ವಿದ್ಯಾಪಾರಂಗತರಾದಮೇಲೆ ಹದಿನಾರನೆಯ ವಯಸ್ಸಿನಲ್ಲಿ ಅವರಿಗೆ ವಿವಾಹವಾಯಿತು. ವಿವಾಹವಾದ ಅನತಿಕಾಲದಲ್ಲಿಯೇ ತಂದೆ ಕೇಶವ ಪೆರುಮಾಳರು ಮಡಿದದ್ದರಿಂದ ಎಲ್ಲರಿಗೂ ದುಃಖವಾಗಿ, ಇಡೀ ಸಂಸಾರವು ಕಾಂಚೀಪುರಕ್ಕೆ ಬಂದು ನೆಲಸಿತು. ಆ ಕಾಲಕ್ಕೆ ಕಾಂಚೀಪುರದಲ್ಲಿ ಅತ್ಯಂತ ಪ್ರಸಿದ್ಧ ವಿದ್ವಾಂಸರಾಗಿದ್ದ ಯಾದವ ಪ್ರಕಾಶರಿದ್ದರು. ಅವರು ಶುದ್ಧ ಅದ್ವೈತಿಗಳಾಗಿದ್ದರು. ಅವರ ಬಳಿ ಶಿಷ್ಯತ್ವವನ್ನು ವಹಿಸಿದ್ದ ರಾಮಾನುಜರಿಗೆ ಅವರ ದೃಷ್ಟಿಯೂ, ವ್ಯಾಖ್ಯಾನ ವಿಧಾನಗಳೂ ಸಮ್ಮತವಾಗದೆ ಹೋದುದರಿಂದ ಅವರ ಬಳಿಯ ಶಿಷ್ಯತ್ವವನ್ನು ತ್ಯಜಿಸಬೇಕಾಯಿತು. ಅವರ ಕಾಲದಲ್ಲಿ ಯಾಮುನಾಚಾರ್ಯರೆಂಬ ವೈಷ್ಣವ ಶಿರೋಮಣಿಗಳು ಶ್ರೀರಂಗದಲ್ಲಿದ್ದರು. ಅವರು ವಯೋವೃದ್ಧರೂ, ಜ್ಞಾನವೃದ್ಧರೂ, ಭಕ್ತವರೇಣ್ಯರೂ ಆಗಿದ್ದರು. ಅವರು ಒಮ್ಮೆ ಕಾಂಚೀಪುರಕ್ಕೆ ಬಂದು ರಾಮಾನುಜರನ್ನು ದೂರದಿಂದಲೇ ಕಂಡು ತಮ್ಮ ಹಲವಾರು ಕನಸುಗಳನ್ನು ಪೂರ್ಣಗೈಯಬಲ್ಲ ಸಮರ್ಥವ್ಯಕ್ತಿ ಈತನೇ ಎಂದು ಕಂಡುಕೊಂಡರು. ಹಾಗೆ ಭಗವಂತನನ್ನು ಬೇಡಿಕೊಂಡರು. ಯಾಮುನಾಚಾರ್ಯರಿಗೆ ಕೊನೆಯ ದಿನಗಳು ಸಮೀಪಿಸಿದವು. ತಾವು ವೈಕುಂಠವಾಸಿಗಳಾಗುವ ಮುನ್ನ ರಾಮಾನುಜರನ್ನು ಒಮ್ಮೆ ಕಂಡು ತಮ್ಮ ಇಷ್ಟವನ್ನು ವ್ಯಕ್ತಪಡಿಸುವ ಆಸೆಯು ಬಲವಾಯಿತು. ರಾಮಾನುಜರನ್ನು ಕರೆಯಲು ಬಂದ ಯಾಮುನಾಚಾರ್ಯರ ಪ್ರಧಾನ ಶಿಷ್ಯ ಮಹಾಪೂರ್ಣನಿಗೂ ರಾಮಾನುಜರಿಗೂ ಯಾಮುನಾಚಾರ್ಯರ ಪಾರ್ಥಿವ ಶರೀರದ ದರ್ಶನವಾಯಿತು, ಅಷ್ಟೆ. ರಾಮಾನುಜರು ಬಂದಾಗ ಯಾಮುನಾಚಾರ್ಯರ ಬಲಗೈಯ ಮೂರು ಬೆರಳುಗಳು ಮಡಿಸಿಕೊಂಡಿದ್ದುವು. ತಾವು ವೈಷ್ಣವ ಧರ್ಮದಲ್ಲೇ ನಿರತರಾಗಿದ್ದು ದ್ರಾವಿಡ ವೇದಗಳನ್ನು ಜನರಿಗೆ ಬೋಧಿಸುವುದಾಗಿಯೂ, ಜನರ ಶ್ರೇಯೋಭಿವೃದ್ಧಿಗಾಗಿ ಶ್ರೀಭಾಷ್ಯವನ್ನು ಬರೆಯುವುದಾಗಿಯೂ, ವಿಷ್ಣು ಪುರಾಣವನ್ನು ಬರೆದ ಪರಾಶರರ ಹೆಸರನ್ನು ಬಹು ದೊಡ್ಡ ವಿದ್ವಾಂಸನಾದ ಒಬ್ಬ ಶ್ರೀ ವೈಷ್ಣವನಿಗೆ ಇಡುವುದಾಗಿಯೂ ರಾಮಾನುಜರು ಭಾಷೆಯನ್ನಿತ್ತಕೂಡಲೆ ಯಾಮುನಾಚಾರ್ಯರ ಬೆರಳುಗಳು ನೆಟ್ಟಗಾದವು. (ಇದು ಸಂಪ್ರದಾಯ ನಂಬಿರುವ ಕತೆ.) ರಾಮಾನುಜರು ಮುಂದೆ ಇಷ್ಟು ಕೆಲಸಗಳನ್ನೂ ನಿರ್ವಹಿಸಿದರು.

ಇದಾದ ಮೇಲೆ ಅವರು ಕಾಂಚೀಪುರದಲ್ಲಿದ್ದ ಯಾಮುನಾಚಾರ್ಯರ ಭಕ್ತ ಕಾಂಚೀಪೂರ್ಣರ ಹತ್ತಿರ, ಅವರು ಶೂದ್ರರಾಗಿದ್ದರೂ, ಶಿಷ್ಯತ್ವವನ್ನು ವಹಿಸಿ ತಮ್ಮ ಅನೇಕ ಸಂದೇಹಗಳನ್ನು ಪರಿಹರಿಸಿಕೊಂಡರು. ರಾಮಾನುಜರು ಯಾಮುನಾಚಾರ್ಯರ ಪೀಠಕ್ಕೆ ಉತ್ತರಾಧಿಕಾರಿಯಾಗಬೇಕೆಂದು ಯಾಮುನಾಚಾರ್ಯರ ಇಷ್ಟವಾಗಿದ್ದಿತು, ಎಲ್ಲರೂ ಅದನ್ನೇ ನಿರೀಕ್ಷಿಸುತ್ತಿದ್ದರು. ರಾಮಾನುಜರು ಯಾಮುನಾಚಾರ್ಯರ ಶಿಷ್ಯರಾದ ಮಹಾಪೂರ್ಣರ ಬಳಿ ಶಿಷ್ಯತ್ವವನ್ನು ಸ್ವೀಕರಿಸಿ, ಗುರುವಿನ ಪದತಲದಲ್ಲಿ ಆಳ್ವಾರುಗಳ ಪ್ರಬಂಧಗಳನ್ನೂ, ವೈಷ್ಣವ ಧರ್ಮದ ರಹಸ್ಯಗಳನ್ನೂ ಅಭ್ಯಾಸಮಾಡಿದರು. ತರುವಾಯ ಅವರು ಕಾಂಚೀಪುರದ ವರದರಾಜಸ್ವಾಮಿಯ ದೇವಸ್ಥಾನದಲ್ಲಿ ಸನ್ಯಾಸವನ್ನು ಸ್ವೀಕರಿಸಿ ವಿರಕ್ತರಾದರು. ಅವರ ಬಾಳಿನಲ್ಲಿ ನಡೆದ ಸುಪ್ರಸಿದ್ಧ ಘಟನೆಯೊಂದು ಉಲ್ಲೇಖನೀಯವಾಗಿದೆ ತಮ್ಮ ಗುರು ಮಹಾಪೂರ್ಣರ ಸೂಚನೆಯಂತೆ ಪುದುಕೋಟೆಯ ಬಳಿಯ ತಿರುಕೊಟ್ಟೀಯೂರ್ ಎಂಬಲ್ಲಿ ವಾಸಿಸುತ್ತಿದ್ದ ಗೋಷ್ಠೀಪೂರ್ಣರ ಬಳಿಗೆ ತಮ್ಮ ಅನೇಕ ಸಂದೇಹಗಳ ನಿವಾರಣೆಗಾಗಿ ಬಂದರು. ಗೋಷ್ಠೀಪೂರ್ಣರು ಮೊದಮೊದಲು ರಾಮಾನುಜರ ವಿಷಯದಲ್ಲಿ ತಾತ್ಸಾರದಿಂದಿದ್ದು ಅವರ ತಾಳ್ಮೆಯನ್ನು, ಸಹನೆಯನ್ನು, ದೃಢನಿಶ್ಚಯವನ್ನು ಪರೀಕ್ಷಿಸಿ ಕೊನೆಗೆ ಬಹು ರಹಸ್ಯವಾದ ಅಷ್ಟಾಕ್ಷರೀ ಮಂತ್ರವನ್ನು ಬೋಧಿಸಿ, ಇದನ್ನು ಜಪಿಸಿದರೆ ಶಾಶ್ವತವಾದ ಶಾಂತಿಯು ದೊರಕುವುದೆಂದು ಹೇಳಿದರು. ಎಲ್ಲರನ್ನೂ ಸಂಸಾರದಿಂದ ಉತ್ತರಿಸಲು ಸಮರ್ಥವಾದ ಆ ಮಂತ್ರ

ವನ್ನು ತಾವೊಬ್ಬರೇ ಇಟ್ಟುಕೊಳ್ಳುವುದು ಸ್ವಾರ್ಥವೆಂದೆನಿಸಿತು. ಅದಕ್ಕೆ ಅವರು ಗೋಪುರವೊಂದನ್ನು ಏರಿ ಆ ಮಂತ್ರವು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಹೇಳಿಬಿಟ್ಟರು. ಅದರಿಂದ ಎಲ್ಲರಿಗೂ ಒಳ್ಳೆಯದಾಗುವುದಾದರೆ ಅದನ್ನು ಬಹಿರಂಗಪಡಿಸಿದ್ದರಿಂದ ಬರಬಹುದಾದ ಪಾಪವನ್ನು ತಾವು ಹೊರಲು ಸಿದ್ಧವೆಂದು ಗುರುಗಳಿಗೆ ತಿಳಿಸಿದರು.

ಮುಂದೆ ಶ್ರೀರಂಗವನ್ನು ತಲುಪಿ, ಶಾಸ್ತ್ರಾಧ್ಯಯನ, ಗ್ರಂಥರಚನೆ, ಶಿಷ್ಯಾರ್ಜನೆ, ಬೋಧನೆ, ತೀರ್ಥಯಾತ್ರೆ ಇತ್ಯಾದಿಗಳಲ್ಲಿ ಕಾಲಕಳೆಯುತ್ತಿದ್ದ ರಾಮಾನುಜರಿಗೆ ಚೋಳದೇಶದ ಶೈವನಾಗಿದ್ದ ರಾಜನಿಂದ ಮಹಾ ವಿಪತ್ತು ಒದಗಿತು. ಶಿವನೇ ಶ್ರೇಷ್ಠನೆಂಬ ಮಾತನ್ನು ರಾಮಾನುಜರಿಂದ ಹೊರಡಿಸಬೇಕೆಂದು ರಾಜನು ಹಟತೊಟ್ಟು ಅವರಿಗೆ ಹೇಳಿಕಳುಹಿಸಿದಾಗ, ರಾಜನ ದುರುದ್ದೇಶವನ್ನರಿತ ರಾಮಾನುಜರ ಶಿಷ್ಯ ಕೂರೇಶನು ತಾನೇ ರಾಮಾನುಜರೆಂದು ಹೇಳಿಕೊಂಡು ರಾಜಾಸ್ಥಾನಕ್ಕೆ ಹೋಗುತ್ತಾನೆ. ಅಲ್ಲಿ ಶಿವಪಾರಮ್ಯವನ್ನು ಒಪ್ಪದ ಕೂರೇಶನ ಎರಡು ಕಣ್ಣುಗಳನ್ನೂ ರಾಜನು ಕೀಳಿಸಿಬಿಡುತ್ತಾನೆ. ಅಪಾಯವನ್ನರಿತ ರಾಮಾನುಜರು ತಲೆತಪ್ಪಿಸಿಕೊಂಡು ಚೋಳನಾಡಿನಿಂದ ಹೊಯ್ಸಳ ನಾಡನ್ನು ಪ್ರವೇಶಿಸುತ್ತಾರೆ. ಹೊಯ್ಸಳ ನಾಡಿನಲ್ಲಿ ಆಳುತ್ತಿದ್ದ ವಿಠ್ಠಲದೇವರಾಯನು (ಅಥವಾ ಬಿಟ್ಟಿದೇವ) ಜೈನ ಧರ್ಮವನ್ನು ತ್ಯಜಿಸಿ ವೈಷ್ಣವನಾಗುತ್ತಾನೆ. ಅವನ ರಾಣಿ ಶಾಂತಲದೇವಿಯೂ ವೈಷ್ಣವ ದೀಕ್ಷೆಯನ್ನು ಸ್ವೀಕರಿಸುವಳು.[28] ತಾವು ವೈಷ್ಣವ ಧರ್ಮವನ್ನು ಅಪ್ಪಿದುದರ ಸ್ಮಾರಕವಾಗಿ ವಿಷ್ಣುವರ್ಧನ ಮತ್ತು ಶಾಂತಲೆಯರು ಬೇಲೂರಲ್ಲಿ ಚೆನ್ನಕೇಶವ ದೇವಾಲಯವನ್ನು ಕಟ್ಟಿಸುತ್ತಾರೆ. ರಾಮಾನುಜರು ಮೇಲುಕೋಟೆಯಲ್ಲಿ ಹದಿನ್ನಾಲ್ಕು ವರ್ಷಗಳಿದ್ದರು. ಅಲ್ಲಿ ನಾರಾಯಣ ದೇವಸ್ಥಾನವನ್ನು ಕಟ್ಟಿಸಿ ರಾಮಪ್ರಿಯ ಎಂಬ ವಿಗ್ರಹವನ್ನು ಅಲ್ಲಿ ಸ್ಥಾಪಿಸಿದರು (ಆ ವಿಗ್ರಹವು ದೆಹಲಿಯ ಬಾದಷಹನ ಮಗಳ ಬಳಿ ಇದ್ದಿತೆಂದೂ, ಅದನ್ನು ರಾಮಾನುಜರು ಉಪಾಯದಿಂದ ತಂದಾಗ, ಆ ರಾಜಪುತ್ರಿಯೂ ಅದನ್ನೇ ಹಿಂಬಾಲಿಸಿ ಬಂದು ಅದರಲ್ಲೇ ಕೊನೆಗೆ ಐಕ್ಯವಾದಳೆಂದೂ ಐತಿಹ್ಯವಿದೆ.)[29] ರಾಮಾನುಜರು ಹರಿಜನರ ವಿಷಯದಲ್ಲಿ ಅಪಾರವಾದ ಕರುಣೆಯನ್ನು ತಾಳಿ ಅವರೆಲ್ಲರೂ ತಮ್ಮ ಧರ್ಮಬೋಧನೆಯನ್ನು ಕೇಳಲು ಅವಕಾಶ ಕೊಟ್ಟಿದ್ದರು. ಇಷ್ಟು ಹೊತ್ತಿಗೆ ಚೋಳನಾಡಿನ ಮತಾಂಧನಾದ ದೊರೆಯು ಮಡಿದು

---

28 ಜೈನನಾಗಿದ್ದ ಹೊಯ್ಸಳ ದೊರೆ ವಿಷ್ಣುವರ್ಧನನನ್ನು (ಕ್ರಿ. ಶ. 1108–42) ವೈಷ್ಣವನನ್ನಾಗಿ ಪರಿವರ್ತಿಸಿದ ವಿಷಯವನ್ನು ರೈಸ್ ಮುಂತಾದವರು ಒಪ್ಪಿಕೊಂಡಿದ್ದಾರೆ. (Mysore and Coorg from Inscriptions, P. 207). ರಾಮಾನುಜರನ್ನು ಹಿಂಸಿಸಿದವನು ಮೊದಲನೆಯ ಕುಲೋತ್ತುಂಗ ಚೋಳನೆಂದೂ, ಸು. 1106ರಲ್ಲಿ ರಾಮಾನುಜರು ಚೋಳ ನಾಡಿನಿಂದ ತಪ್ಪಿಸಿಕೊಂಡು ಬಂದಿರಬಹುದೆಂದೂ ಶ್ರೀ ಎ. ಎನ್. ಕೃಷ್ಣಯ್ಯಂಗಾರರು ಅಭಿಪ್ರಾಯಪಡುತ್ತಾರೆ ("Contributions of Mysore to Vaiṣṇavism"–Quarterly Journal of the Mythic Society, XXXI, p. 432). ಮೇಲಿನ ಅಭಿಪ್ರಾಯಗಳಲ್ಲಿ ಕೆಲವಕ್ಕೆ ಐತಿಹಾಸಿಕ ಆಧಾರಗಳಿಲ್ಲವಾದ ಪ್ರಯುಕ್ತ ರಾಮಾನುಜರು ಶ್ರೀವೈಷ್ಣವ ಧರ್ಮದ ಪ್ರಚಾರದ ಉದ್ದೇಶದಿಂದ ಮಾತ್ರ ಕರ್ನಾಟಕಕ್ಕೆ ಬಂದರೆಂದು ಊಹಿಸುವುದು ಸೂಕ್ತವಾಗಿದೆಯೆಂದು ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ (ಭಾರತೀಯ ಸಂಸ್ಕೃತಿ, ಪು. 142). ರಾಮಾನುಜರು ಕರ್ನಾಟಕಕ್ಕೆ ಬರುವ ಮುನ್ನವೇ ಹೊಯ್ಸಳ ದೊರೆಗೆ ವಿಷ್ಣುವರ್ಧನನೆಂಬ ಹೆಸರಿದ್ದಿತೆಂದು ಶಾಸನಗಳಿಂದ ತಿಳಿದುಬರುತ್ತದೆ. "ಬಿಟ್ಟಿ" ಎಂಬುದು "ವಿಷ್ಣು"ವಿನ ತದ್ಭವವಾದುದರಿಂದ ಅವನು ವೈಷ್ಣವನಾದ ಮೇಲೆ ಅವನಿಗೆ ವಿಷ್ಣುವರ್ಧನನೆಂದು ರಾಮಾನುಜರು ಹೊಸದಾಗಿ ಹೆಸರಿಟ್ಟರೆಂಬುದಕ್ಕೆ ಐತಿಹಾಸಿಕ ಆಧಾರವಿಲ್ಲವಾದ ಪ್ರಯುಕ್ತ ವಿಷ್ಣುವರ್ಧನನು ಮತಾಂತರ ಹೊಂದಿದನೆಂಬುದನ್ನು ಡಾ॥ ಡೆರೆಟ್ ಅವರು ಒಪ್ಪುವುದಿಲ್ಲ (The Hoysaḷas, p. 222).

29 ರಾಮಾನುಜರ ಕಾಲದಲ್ಲಿ ದೆಹಲಿಯಲ್ಲಿ ಯಾವ ಮುಸ್ಲಿಂ ದೊರೆಯೂ ಆಳುತ್ತಿರಲಿಲ್ಲ. ಅದ್ದರಿಂದ ಅಲ್ಲಿ ಆಳುತ್ತಿದ್ದ ಹಿಂದೂ ದೊರೆಯ ಬಳಿಯಿದ್ದ ಯಾವನೋ ಮುಸ್ಲಿಂ ದಳಪತಿಯ ಬಳಿಯಿಂದ ಈ ವಿಗ್ರಹವನ್ನು ತಂದಿರಬಹುದೆಂದು ಸಮಾಧಾನ ಹೇಳುತ್ತಾರೆ.

ಪರಿಸ್ಥಿತಿ ಅನುಕೂಲವಾದ್ದರಿಂದ ರಾಮಾನುಜರು ಶ್ರೀರಂಗಕ್ಕೆ ಹಿಂದಿರುಗಿ ಸಾವಿರಾರು ಶಿಷ್ಯರಿಗೆ ಜ್ಞಾನದಾನವನ್ನು ಮಾಡಿ ತಮ್ಮ ನೂರಿಪ್ಪತ್ತನೆಯ ವಯಸ್ಸಿನಲ್ಲಿ ಕ್ರಿ. ಶ. 1137ರಲ್ಲಿ ಪರಂಧಾಮವನ್ನೈದಿದರು.[30]

12ನೆಯ ಶತಮಾನದಲ್ಲಿ ಶ್ರೀ ರಾಮಾನುಜರಿಂದ ಶ್ರೀ ವೈಷ್ಣವ ಧರ್ಮವು ಪ್ರಚಾರಗೊಂಡರೂ ಅವರ ಅನುಯಾಯಿಗಳು ಕನ್ನಡ ಸಾಹಿತ್ಯ ರಚನೆಯ ವಿಷಯದಲ್ಲಿ ಮೊದಮೊದಲು ಅಷ್ಟಾಗಿ ಆಸಕ್ತಿಯನ್ನು ವಹಿಸಿದಂತೆ ಕಾಣುವುದಿಲ್ಲ. ಸುಮಾರು 1570ರಲ್ಲಿದ್ದ ರಂಗಾಚಾರ್ಯ ಎಂಬ ಕವಿಯೇ ನಮಗೆ ತಿಳಿದ ಮಟ್ಟಿಗೆ ಮೊತ್ತಮೊದಲ ಶ್ರೀ ವೈಷ್ಣವ ಕನ್ನಡ ಕವಿ. 'ಶ್ರೀರಂಗಮಾಹಾತ್ಮ್ಯ' ಎಂಬ ಹತ್ತು ಪರಿಚ್ಛೇದಗಳುಳ್ಳ ಒಂದು ಗದ್ಯ ಗ್ರಂಥವನ್ನು ಬರೆದಿದ್ದಾನೆ.[31] ಚಿಕ್ಕದೇವರಾಜ ಒಡೆಯರ ಕಾಲದಲ್ಲಿ (1672–1704) ಶ್ರೀ ವೈಷ್ಣವ ಧರ್ಮಕ್ಕೆ ವಿಶೇಷವಾದ ಪ್ರೋತ್ಸಾಹವು ದೊರೆತದ್ದರಿಂದ ತಿರುಮಲಾರ್ಯ, ಚಿಕುಪಾಧ್ಯಾಯ, ಸಿಂಗರಾರ್ಯ, ಹೊನ್ನಮ್ಮ ಮುಂತಾದ ಶ್ರೀ ವೈಷ್ಣವರು ನೂರಾರು ಗ್ರಂಥಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಬೆಳಸಿದರು. ಇದರ ಇತಿಹಾಸವು ನಮ್ಮ ಅಧ್ಯಯನಕ್ಕೆ ಹೊರತಾದ್ದರಿಂದ ಅದನ್ನಿಲ್ಲಿ ವಿಸ್ತರಿಸುವುದಿಲ್ಲ.

## ವಿಷ್ಣುವಿನ ಅವತಾರಗಳು

ಶ್ರೀ ವಿಷ್ಣುವರ್ಧನನನ್ನು ಒಂದು ಶಾಸನವು ವಿಷ್ಣುವಿನ ಹನ್ನೊಂದನೆಯ ಅವತಾರವೆಂದು ("ಏಕಾದಶಾವತಾರನ್") ವರ್ಣಿಸುತ್ತದೆ.[32] ವಿಷ್ಣುವಿನ ಹತ್ತು ಅವತಾರಗಳಲ್ಲಿ ಪ್ರಾಚೀನ ಕನ್ನಡಿಗರ ಮನಸ್ಸನ್ನು ವಿಶೇಷವಾಗಿ ಸೆಳೆದದ್ದು ಬಹುಶಃ ವರಾಹಾವತಾರ. ಅನೇಕ ವೈಷ್ಣವ ಶಾಸನಗಳ ಆರಂಭದಲ್ಲಿ ವರಾಹನ ಪ್ರಾರ್ಥನೆಯ ಪದ್ಯಗಳು ಕಂಡುಬರುತ್ತವೆ; ಬಾದಾಮಿಯ ವೈಷ್ಣವ ಗುಹೆಯಲ್ಲಿ ಭೂದೇವಿಯನ್ನು ಸಮುದ್ರದಿಂದೆತ್ತಿ ತನ್ನ ದಂತಾಗ್ರದಲ್ಲಿ ನಿಲ್ಲಿಸಿಕೊಂಡಿರುವ ವರಾಹಮೂರ್ತಿಯ ಸುಂದರ ವಿಗ್ರಹವಿದೆ.[33] ಉಳಿದ ಅವತಾರಗಳಲ್ಲಿ ಇಬ್ಬರಾದ ಶ್ರೀರಾಮ[34] ಮತ್ತು ಪರುಶುರಾಮ[35] ದೇವಸ್ಥಾನಗಳು ಕರ್ನಾಟಕದಲ್ಲಿದ್ದಂತೆ ತಿಳಿದುಬರುತ್ತದೆ. "ಶ್ರೀರಾಮನವಮಿ" ಆಚರಣೆಯ ಹೆಸರು ಶಾಸನವೊಂದರಲ್ಲಿದೆ.[36] ಕ್ರಿ. ಶ. 1150ಕ್ಕೆ ಮುನ್ನ ಕೃಷ್ಣನಿಗಾಗಿ ದೇವಸ್ಥಾನಗಳನ್ನು ಕಟ್ಟಿಸಿದ ವಿಷಯವು ಎಲ್ಲಿಯೂ ಉಕ್ತವಾಗಿಲ್ಲದಿರುವುದು ಎದ್ದು ಕಾಣುವ ಅಂಶ. ವಾಸುದೇವನ ಹೆಸರು 7ನೆಯ ಶತಮಾನದ ತಾಮ್ರಪಟಗಳಲ್ಲಿ ಬರುತ್ತದೆ. ("ಶ್ರೀರಾಮತ್ವಾತ್ ವಾಸುದೇವ ಇವ")[37]. 11ನೆಯ ಶತಮಾನದ ಶಾಸನವೊಂದು ವಸುದೇವ ಮತ್ತು ದೇವಕಿಯರ ಪುತ್ರ ವಾಸುದೇವನನ್ನು ಹೆಸರಿಸುತ್ತದೆ.[38] ಮುಂದಿನ ಶತಮಾನದ ಒಂದು ಶಾಸನವು "ನಮೋ ಭಗವತೇ ವಾಸುದೇವಾಯ" ಎಂದು ಆರಂಭವಾಗುತ್ತದೆ.[39] ಇಲ್ಲೆಲ್ಲಾ ವಾಸುದೇವನೆಂದರೆ

[30] ರಾಮಾನುಜರ ಜೀವನಚರಿತ್ರೆಯ ನಿರೂಪಣೆಗೆ ಮುಖ್ಯವಾಗಿ ಎರಡು ಗ್ರಂಥಗಳನ್ನು ಅವಲಂಬಿಸಿದೆ. ಪ್ರೊ॥ ಎಂ. ಯಾಮುನಾಚಾರ್ಯರ "ಆಚಾರ್ಯ ರಾಮಾನುಜರು" (ಬೆಂಚಿನಬಳ್ಳಿ ಪ್ರಕಟನೆ) ; ಮತ್ತೊಂದು, ಸ್ವಾಮಿ ರಾಮಕೃಷ್ಣಾನಂದರು ಬರೆದಿರುವ "Life of Śri Rāmānuja".

[31] ಕರ್ನಾಟಕ ಕವಿಚರಿತೆ, II (1919), ಪು. 300.

[32] EC. V. Bl. 58, 1117 A.D.

[33] A. Goswamy : The Art of the Rāṣṭrakūṭas ಎಂಬ ಗ್ರಂಥದಲ್ಲಿನ ಚಿತ್ರಪಟವನ್ನು ನೋಡಿ.

[34] EC. XI. Cl. 21, 1087 A.D.

[35] EC. III. Nj. 110, 1148 A.D.

[36] EC. XI. Cl. 25, 1131 A.D.

[37] EC. XI. Dg. 66, 694 A.D.

[38] BKI. I. ii. 136, 1091 A.D.

[39] EI. XII. p. 329, 1105 A.D.

ಕೃಷ್ಣ ಎಂದೇ ಅರ್ಥ. (ಇವೆಲ್ಲವೂ ಭಾಗವತ ಸಂಪ್ರದಾಯದ ಸ್ಪಷ್ಟ ಕುರುಹುಗಳಾಗಿವೆ.) ಕೃಷ್ಣ, ಕೃಷ್ಣರಾಜ ಎಂಬ ಹೆಸರನ್ನು ಜನರು ಇಟ್ಟುಕೊಳ್ಳುತ್ತಿದ್ದರು. ಹತ್ತನೆಯ ಶತಮಾನದ ಪಂಪನು ತನ್ನ ಪಂಪಭಾರತದಲ್ಲಿ ಶ್ರೀಕೃಷ್ಣನು ಅವತಾರಪುರುಷನೆಂಬ ಭಾವನೆ ಬರುವಂತೆ ಕೆಲವು ಕಡೆ ಬರೆದಿದ್ದಾನೆ.[40] ರಾಧೆಯ ಹೆಸರಂತೂ ಶಾಸನಗಳಲ್ಲಾಗಲಿ, ಕಾವ್ಯಗಳಲ್ಲಾಗಲಿ ಗೋಚರವಾಗುವುದಿಲ್ಲ. ರಾಧಾ–ಕೃಷ್ಣರ ಕಲ್ಪನೆಯೇ 9ನೆಯ ಶತಮಾನಕ್ಕಿಂತ ಈಚಿನದು.[41] ಭಾಗವತದಲ್ಲಾಗಲಿ, ಅದಕ್ಕಿಂತ ಬಹು ಪ್ರಾಚೀನವಾದ ಮಹಾಭಾರತ, ಹರಿವಂಶಗಳಲ್ಲಾಗಲಿ ರಾಧೆಯ ಹೆಸರಿಲ್ಲ.[42] ಒಟ್ಟಿನಲ್ಲಿ ಸುಮಾರು 1150ಕ್ಕಿಂತ ಮುನ್ನ ಕೃಷ್ಣನು ಕನ್ನಡಿಗರ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದಂತೆ ತೋರುವುದಿಲ್ಲ ಎಂದು ಮಾತ್ರ ಸ್ಥೂಲವಾಗಿ ಹೇಳಬಹುದು.

## ವೈಷ್ಣವರು ಮತ್ತು ಶೈವರು

ಕ್ರಿ. ಶ. 450–ಕ್ರಿ. ಶ. 1150ರ ಅವಧಿಯಲ್ಲಿ ಶಿವ–ವಿಷ್ಣುಗಳಿಗೆ, ಶೈವ–ವೈಷ್ಣವ ಧರ್ಮಗಳಿಗೆ ಎಲ್ಲಿಯೂ ಘರ್ಷಣೆ ನಡೆದಂತೆ ಕಾಣದು.[43] ಹಿಂದೆ ನಾವು ನೋಡಿರುವಂತೆ ವೈಷ್ಣವರು ಶೈವದೇವಾಲಯಗಳನ್ನು ಕಟ್ಟಿಸಿದರು, ಶೈವರು ವೈಷ್ಣವ ದೇವಾಲಯಗಳನ್ನು ನಿರ್ಮಿಸಿದರು. ಬ್ರಹ್ಮ ವಿಷ್ಣು ಮಹೇಶ್ವರರು ಒಂದೇ ಶಕ್ತಿಯ ಮೂರು ಮುಖಗಳೆಂಬ ಭಾವನೆಯು ಇದ್ದಿತು. ಹೊಯ್ಸಳರ ಶಾಸನಗಳ ಆರಂಭದಲ್ಲಿ ಕೇಶವ ಮತ್ತು ಶಿವನಿಗೆ ಒಟ್ಟಿಗೆ ಗೌರವವನ್ನು ಸಲ್ಲಿಸುವ ("ಕೇಶವಾಯ ಶಿವಾಯ ಚ") ಪ್ರಾರ್ಥನಾ ಪದ್ಯಗಳಿವೆ. ಹರಿ ಮತ್ತು ಹರರನ್ನು ಸಮೀಕರಿಸಲು ಮಾಡಿದ ಪ್ರಯತ್ನಗಳಲ್ಲಿ ಹರಿಹರೇಶ್ವರ ಕಲ್ಪನೆಯೂ ಒಂದು. ಮಂಗಲೇಶನು ಕ್ರಿ. ಶ. 578ರಲ್ಲಿ ತೋಡಿಸಿದ ವೈಷ್ಣವ ಗುಹೆಯಲ್ಲಿ ಹರಿಹರನ ಸುಂದರ ವಿಗ್ರಹವಿದೆ. ಹರಿಹರದ ಹರಿಹರ ದೇವಸ್ಥಾನವು 13ನೇ ಶತಮಾನದಲ್ಲಿ ನಿರ್ಮಿತವಾಯಿತು.[43.1] ಪ್ರಾಚೀನ ಕರ್ನಾಟಕದಲ್ಲಿ ಒಂದೇ ಮನೆಯಲ್ಲಿ ಬೇರೆ ಬೇರೆಯವರು ಶಿವ ಮತ್ತು ವಿಷ್ಣುಗಳನ್ನು ಆರಾಧಿಸುತ್ತಿದ್ದ ನಿದರ್ಶನಗಳು ಹಲವಾರಿವೆ. ಇದಕ್ಕೆ ಶಾಸನಾಧಾರಗಳೂ ಉಂಟು. ಒಂದು ಕಡೆ ಜಿನಬಿಂಬವನ್ನು, ಮತ್ತೊಂದು ಕಡೆ ಶಿವಲಿಂಗವನ್ನು, ಮಗದೊಂದು ಕಡೆ ವಿಷ್ಣುಬಿಂಬವನ್ನು ಪೂಜಿಸುವವರನ್ನು ಬ್ರಹ್ಮಶಿವನು ಹಾಸ್ಯಮಾಡಿದ್ದಾನೆ.[44] ಒಂದೇ ಸಂಸಾರದಲ್ಲಿ ಹೆಂಡತಿಯು ಮಾಹೇಶ್ವರಿಯಾಗಿದ್ದು ಗಂಡನು ಜೈನನಾಗಿದ್ದ ನಿದರ್ಶನಗಳೂ ಇವೆ.[45] ಒಂದೇ ಸಂಸಾರದಲ್ಲಿ ಗಂಡ ಹೆಂಡಿರು ಭಿನ್ನ ಭಿನ್ನ ದೇವತೆಗಳನ್ನು ಪೂಜಿಸುತ್ತಿದ್ದ

---

[40] ತೀ. ನಂ. ಶ್ರೀಕಂಠಯ್ಯ : 'ಪಂಪಭಾರತದ ಕೃಷ್ಣ' (ಸಮಾಲೋಕನ, ಪು. 96-9).

[41] Pusalkar : Studies in Epics and Purāṇas of India, p. 81.

[42] ಬಂಕಿಮಚಂದ್ರ ಚಟ್ಟೋಪಾಧ್ಯಾಯ : ಶ್ರೀ ಕೃಷ್ಣಚರಿತ್ರೆ (ಕನ್ನಡಾನುವಾದ : ಆರ್. ವ್ಯಾಸರಾವ್), ಪು. 149. ರಾಧೆಯ ಹೆಸರು ಮೊದಲು ಕಂಡುಬರುವುದು ಬ್ರಹ್ಮವೈವರ್ತ ಪುರಾಣದಲ್ಲಿ. ಬಹು ಈಚಿನದಾದ ರಾಧಾ–ಕೃಷ್ಣರ ಕಲ್ಪನೆಯು ವಿಶೇಷವಾಗಿ ಬಂಗಾಳದಲ್ಲಿ "ನೂತನ ವೈಷ್ಣವಧರ್ಮ"ಕ್ಕೆ ಕಾರಣವಾಯಿತು. ಜಯದೇವ, ವಿದ್ಯಾಪತಿ, ಚೈತನ್ಯದೇವ ಮುಂತಾದವರ ಕೃಷ್ಣಸಂಗೀತಕ್ಕೆ ಮೂಲವಾಯಿತು. (ಅದೇ, ಪು. 155).

[43] ಮೊದಲ ಘರ್ಷಣೆ ನಡೆದದ್ದು ಬಹುಶಃ ವೀರಶೈವ ಧರ್ಮದ ಆರಂಭದ ಕಾಲದಲ್ಲಿ. ಬಸವಣ್ಣನವರ ಹಲವಾರು ವಚನಗಳಲ್ಲಿ ಶಿವಸ್ತುತಿಯೂ, ವಿಷ್ಣುನಿಂದೆಯೂ ಒಟ್ಟೊಟ್ಟಿಗೆ ಬರುತ್ತವೆ. ಹರಿಹರನ ಬಸವರಾಜದೇವರ ರಗಳೆಯಲ್ಲಿ ಬಸವಣ್ಣನವರಿಗೂ ವೈಷ್ಣವರಿಗೂ ನಡೆದ ಘರ್ಷಣೆಯ ಚಿತ್ರವಿದೆ.

[43.1] ವಾಸ್ತವವಾಗಿ ಹರಿಹರೇಶ್ವರನ ವಿಗ್ರಹವು ಅದಕ್ಕಿಂತಲೂ ಪ್ರಾಚೀನವಾದುದು. ಹದಿಮೂರನೇ ಶತಮಾನದ ಪೂರ್ವಾರ್ಧದಲ್ಲಿ ಕ್ರಿ. ಶ. 1224ರಲ್ಲಿ ಪೋಲಾಳ್ವ ದಂಡನಾಥನು ಹರಿಹರೇಶ್ವರ ವಿಗ್ರಹಕ್ಕೆ ಉಚಿತವಾದ ದೇವಸ್ಥಾನವನ್ನು ಕಟ್ಟಿಸಿದನು. ಹನ್ನೆರಡನೇ ಶತಮಾನದ ಬ್ರಹ್ಮಶಿವನ ಸಮಯಪರೀಕ್ಷೆಯಲ್ಲಿ ಹರಿಹರದ ಹರಿಹರೇಶ್ವರದೇವರ ಉಲ್ಲೇಖವಿದೆ.

[44] ಸಮಯ ಪರೀಕ್ಷೆ, 4.121—"ಒಂದೆಸೆಯೊಳ್ ಜಿನಬಿಂಬಮು। ನೊಂದೆಸೆಯೊಳ್ ಲಿಂಗ ವಿಷ್ಣುಬಿಂಬಮುನವನಂ। ತೊಂದೆಡೆಯೊಳ್ ಪೂಜಿಸುವಾ। ಸಂದೇಹಿಗೆ ಜೈನನೆಂಬ ಪೆಸರೆಂತೆಸೆಗುಂ॥"

[45] ಅದೇ, 4.125—"ಪೆಂಡತಿ ಮಾಹೇಶ್ವರಿ ಗಡ। ಗಂಡಂ ಜೈನಂ ಗಡವನ ಮಕ್ಕಳ್ ಗಡ ಮಾ। ರ್ತಂಡಂಗೆ ಭಕ್ತರೆನಿಪಾ। ಭಂಡಂಗುತ್ತಮದ ಜೈನವೆಸರೆಂತೆಸೆಗುಂ॥"

ಪದ್ಧತಿಯನ್ನು ಬಸವಣ್ಣನವರು ಹಾಸ್ಯಮಾಡಿದ್ದಾರೆ.[46] ಒಂದೇ ಸಂಸಾರದಲ್ಲಿ ಶೈವರು, ಜೈನರು ಅನ್ಯೋನ್ಯವಾಗಿ ಬದುಕುತ್ತಿದ್ದರೆ, ಶೈವರು ವೈಷ್ಣವರು ಇನ್ನೂ ಹೆಚ್ಚು ಅನ್ಯೋನ್ಯವಾಗಿ ಬದುಕುವುದರಲ್ಲಿ ಆಶ್ಚರ್ಯವೇನಿಲ್ಲ. ವಿಷ್ಣುವರ್ಧನನು ಎಲ್ಲಾ ಧರ್ಮಗಳಿಗೆ ಸಮಾನ ಗೌರವವನ್ನು ವ್ಯಕ್ತಪಡಿಸಿದ್ದರೂ ವಿಷ್ಣುವಿನ ಕಡೆಗೆ ಅವನ ಒಲವು ಹೆಚ್ಚು ಎಂಬುದು ನಿಸ್ಸಂದೇಹವಾದುದು. ಅವನ ಪತ್ನಿ ಶಾಂತಲೆಯು ಶಿವಭಕ್ತೆಯೂ ಜಿನಭಕ್ತೆಯೂ ಆಗಿದ್ದಳು. ಧರ್ಮೇಶ್ವರನ ವರಪ್ರಸಾದದಿಂದ ಹುಟ್ಟಿದವಳು ಅವಳು.[47] ಗಿರಿಜೆಯನ್ನು ಯಾವಾಗಲೂ ಆರಾಧಿಸುತ್ತಿದ್ದಳು.[48] ಅವಳ ತಂದೆ ಮಾರಸಿಂಗಮಯ್ಯನು ಹರಿಭಕ್ತ.[49] ಅವಳ ತಾಯಿ ಮಾಚಿಕಬ್ಬೆಯು ಜಿನಭಕ್ತಳಾಗಿದ್ದಳು.[50] ಶಾಂತಲೆಯು ಶಿವಗಂಗೆಯ ತೀರ್ಥದಲ್ಲಿ 'ಮುಡಿಪಿ' ಎಂದರೆ ಸನ್ಯಸನ ವಿಧಿಯಿಂದ ಮಡಿದಾಗ, ಅವಳ ಹೆಸರಿನಲ್ಲಿ ಶಾಂತಲೇಶ್ವರ ಎಂಬ ಶಿವದೇವಸ್ಥಾನವನ್ನು ಅವಳ ತಾಯಿಯು ಕಟ್ಟಿಸುತ್ತಾಳೆ.[51] ಅನಂತರ ಮೇಲೆ ಅವಳ ತಾಯಿಯು ಶ್ರವಣಬೆಳಗೊಳಕ್ಕೆ ಬಂದು ಸನ್ಯಸನ ವಿಧಿಯಿಂದ ಪ್ರಾಣವನ್ನು ತ್ಯಜಿಸುತ್ತಾಳೆ.[52] ಅವಳ ಗಂಡನಾದ ವಿಷ್ಣುವರ್ಧನನು ಪರಮ ಶ್ರೀ ವೈಷ್ಣವನಾಗಿದ್ದನು. ಹೀಗೆ ಅವಳು ಶೈವ ವೈಷ್ಣವ ಜೈನ ಸಂಪ್ರದಾಯಗಳ ತ್ರಿವೇಣೀಸಂಗಮವಾಗಿದ್ದಳು.

## ಶ್ರೀ ಮಧ್ವಾಚಾರ್ಯರು

ನಮ್ಮ ಪ್ರಸಕ್ತ ಅಧ್ಯಯನದ ವ್ಯಾಪ್ತಿಗೆ ಸೇರಿರದಿದ್ದರೂ ಕರ್ನಾಟಕದಲ್ಲಿ ವೈಷ್ಣವ ಸಂಪ್ರದಾಯವನ್ನು ಪ್ರಚಾರಮಾಡಿ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಬಹುಮುಖವಾದ ಬೆಳವಣಿಗೆಗೆ ಕಾರಣಕರ್ತರಾದ ಶ್ರೀ ಮಧ್ವಾಚಾರ್ಯರ ಮತ್ತು ಅವರ ಪರಂಪರೆಯ ವಿಷಯವಾಗಿ ನಾಲ್ಕು ಮಾತುಗಳನ್ನು ಇಲ್ಲಿ ಹೇಳುತ್ತೇವೆ.[53] ಇವರ ಸಿದ್ಧಾಂತವನ್ನು ದ್ವೈತಮತವೆಂದು ಕರೆಯುತ್ತಾರೆ. ಈ ಸಿದ್ಧಾಂತದ ಸಾರವನ್ನು ಹೇಳುವ ವ್ಯಾಸರಾಯರ ಕೆಳಗಿನ ಶ್ಲೋಕವು ಬಹು ಪ್ರಸಿದ್ಧವಾದುದು—

ಶ್ರೀಮನ್ಮಧ್ವಮತೇ ಹರಿಃ ಪರತರಸ್ಸತ್ಯಂ ಜಗತ್ತತ್ವತೋ
ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂ ಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಈ ಸಿದ್ಧಾಂತದ ಪ್ರಕಾರ ಹರಿಯೇ ಪರಮಸತ್ಯ. ಜಗತ್ತು ಮಿಥ್ಯವಲ್ಲ, ಸತ್ಯವೇ. ಜಗತ್ತಿನ ಜೀವರಾಶಿಯಲ್ಲಿ ನೀಚೋಚ್ಚಭಾವವಿದೆ; ಎಲ್ಲ ಜೀವಿಗಳೂ ಹರಿಯ ಅನುಚರರು. ಆತ್ಮದಲ್ಲಿ ಸುಪ್ತವಾಗಿದ್ದ ಸುಖಾನುಭೂತಿಯನ್ನು

---

[46] ಬಸವಣ್ಣನವರ ಷಟ್ಸ್ಥಲದ ವಚನಗಳು (1954), ಪು. 26.

[47] EC. V. Hn. 116, 1123 A. D.

[48] ಅದೇ.

[49] EC. II. 143, 1131 A. D.

[50] EC. II. 143, 1131 A. D.

[51] EC. V. Hn, 89, 1135 A. D. ಶಾಂತಲೆಯು ಶಿವಗಂಗೆಯ ಬೆಟ್ಟದ ಮೇಲಿಂದ ಬಿದ್ದು ಪ್ರಾಣವನ್ನು ತ್ಯಜಿಸಿದಳು ಎಂಬ ಇತ್ತೀಚಿನ ಕಾದಂಬರಿಕಾರರ ಕಲ್ಪನೆಗೆ ಶಾಸನಾಧಾರಗಳಿಲ್ಲ.

[52] EC. II. 143, 1131 A. D.

[53] ಈ ಭಾಗವನ್ನು ಬರೆಯುವಲ್ಲಿ ಕೆಳಗಿನ ಗ್ರಂಥಗಳಿಂದ ಉಪಕೃತರಾಗಿದ್ದೇವೆ—ಆರ್. ಎಸ್. ಪಂಚಮುಖಿ: ಕರ್ನಾಟಕದ ಹರಿದಾಸ ಸಾಹಿತ್ಯ; ಕೆ. ಎಂ. ಕೃಷ್ಣರಾವ್: ಜಗನ್ನಾಥದಾಸರು; A. P. Karmarkar and N. B. Kalamdani: Mystic Teachings of the Haridāsas of Karnāṭak; Encyclopaedia of Religion and Ethics, VIII, pp. 232–4.

ಪಡೆಯುವುದೇ ಮುಕ್ತಿ. ಭಕ್ತಿಯೇ ಮುಕ್ತಿಗೆ ಸಾಧನ. ಪ್ರತ್ಯಕ್ಷಾದಿ ಮೂರು ಪ್ರಮಾಣಗಳೂ ಜ್ಞಾನಕ್ಕೆ ಸಹಕಾರಿಗಳು. ಹರಿಯನ್ನು ವೇದಗಳಿಂದ ಮಾತ್ರವೇ ತಿಳಿಯಲು ಸಾಧ್ಯ. ಇದೇ ದ್ವೈತ ಸಿದ್ಧಾಂತದ ತಿರುಳು. ದ್ವೈತ ಸಿದ್ಧಾಂತವನ್ನು ಸ್ಥಾಪಿಸಿದ ಆಚಾರ್ಯ ಪುರುಷರಾದ ಶ್ರೀ ಮಧ್ವಾಚಾರ್ಯರು ಉಡುಪಿಗೆ ಏಳು ಮೈಲು ದೂರವಿರುವ ಕುಂಜಾರು ಎಂಬ ಊರಿನ ಪಾಜಕ ಕ್ಷೇತ್ರದಲ್ಲಿ ಕ್ರಿ. ಶ. 1197ರಲ್ಲಿ (ಕೆಲವರು ಕ್ರಿ. ಶ. 1238 ಎನ್ನುತ್ತಾರೆ) ಮಧ್ಯಗೇಹಭಟ್ಟರಿಗೆ ಮಗನಾಗಿ ಜನಿಸಿದರು. ಬಾಲ್ಯದಲ್ಲಿಯೇ ಅದ್ಭುತ ಪವಾಡಗಳನ್ನು ಮೆರೆದ ಮೇಧಾವಿಗಳಾದ ಇವರು ಉಡುಪಿಯ ಅನಂತೇಶ್ವರ ಮಠದಲ್ಲಿ ಅದ್ವೈತಿಗಳಾಗಿದ್ದ ಅಚ್ಯುತಪ್ರೇಕ್ಷರ ಬಳಿ ಶಿಷ್ಯತ್ವವನ್ನು ವಹಿಸಿ ಶಾಸ್ತ್ರಾಧ್ಯಯನವನ್ನು ಮಾಡಿದರು. ಅಚ್ಯುತಪ್ರೇಕ್ಷರೇ ಇವರಿಗೆ ಆನಂದ ತೀರ್ಥರೆಂಬ ಹೆಸರನ್ನು ಕೊಟ್ಟಿದ್ದು (ಇದು ಮುಂದೆ ಅವರ ಕಾವ್ಯನಾಮವಾಯಿತು). ವಿದ್ಯಾಭ್ಯಾಸವು ಮುಗಿದ ಮೇಲೆ ಮಧ್ವಾಚಾರ್ಯರು ದಕ್ಷಿಣಭಾರತ ಮತ್ತು ಉತ್ತರಭಾರತಗಳಲ್ಲಿ ದ್ವೈತಸಿದ್ಧಾಂತವನ್ನು ಪ್ರಚಾರಮಾಡುತ್ತಾ ವಿಶೇಷವಾಗಿ ಸಂಚರಿಸಿದರು. ಉತ್ತರಭಾರತದಲ್ಲಿರುವಾಗ ಹರಿದ್ವಾರದಿಂದ ಹೊರಟು ಅವರು ಹಿಮಾಲಯದ ಶ್ರೇಣಿಗಳಲ್ಲಿ ಏಕಾಂಗಿಯಾಗಿದ್ದರೆಂದೂ, ಅಲ್ಲಿ ಮಹಾಭಾರತದ ಕರ್ತೃ ವ್ಯಾಸರ ಸಾನ್ನಿಧ್ಯವು ದೊರಕಿತೆಂದೂ, ಅವರ ಸೂಚನೆಯಂತೆ ಹಿಂದಿರುಗಿ ಬಂದು ಹರಿದ್ವಾರದಲ್ಲಿ ದ್ವೈತಸಿದ್ಧಾಂತವನ್ನು ಉದ್ಘೋಷಿಸಿದರೆಂದೂ ಹೇಳುತ್ತಾರೆ. ಅವರು ಅನೇಕ ಶಿಷ್ಯರನ್ನು ಸಂಪಾದಿಸಿದರು. ಅವರ ಸಿದ್ಧಾಂತಕ್ಕೆ ಮನಸೋತು ಅವರ ಶಿಷ್ಯತ್ವವನ್ನು ವಹಿಸಿದವರಲ್ಲಿ ನರಹರಿತೀರ್ಥರೂ ಒಬ್ಬರು. ಕಳಿಂಗದೇಶದಲ್ಲಿ ಇವರು ರಾಜ್ಯವಾಳುತ್ತಿದ್ದು–(ಇದಕ್ಕೆ ಶಾಸನಾಧಾರಗಳಿವೆ)–ಮಧ್ವಾಚಾರ್ಯರ ತತ್ವಗಳಿಗೆ ಮನಸೋತು, ಅವರ ಶಿಷ್ಯರಾಗಿ ಸನ್ಯಾಸವನ್ನು ಸ್ವೀಕರಿಸಿ ಉಡುಪಿಗೆ ಬಂದು ನೆಲೆಯಾಗಿ ನಿಂತರು. ಆವರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ಹರಿದಾಸಸಾಹಿತ್ಯದ ಮೊತ್ತಮೊದಲಿಗರಾದರು. ಇವರ ಎರಡೇ ಎರಡು ಕೀರ್ತನೆಗಳು ದೊರಕಿವೆ. ಮಧ್ವಾಚಾರ್ಯರು ಕ್ರಿ. ಶ. 1276ರಲ್ಲಿ, ಎಂದರೆ ತಮ್ಮ ಎಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಶ್ರೀ ಹರಿಯ ಪದತಲವನ್ನು ಸೇರಿದರು.

ನರಹರಿತೀರ್ಥರಿಂದ ಆರಂಭವಾದ ಹರಿದಾಸಸಾಹಿತ್ಯದ ಪೀಳಿಗೆಯು ಮತ್ತೆ ಕಾಣಿಸಿಕೊಳ್ಳುವುದು ವಿಜಯನಗರ ಸಾಮ್ರಾಜ್ಯದ ಆಶ್ರಯದಲ್ಲಿ, ಹದಿನೈದನೆಯ ಶತಮಾನದ ಉತ್ತರಾರ್ಧದಲ್ಲಿ. ಸು. ಕ್ರಿ. ಶ. 1450ರಲ್ಲಿದ್ದ ಶ್ರೀಪಾದರಾಜರನ್ನು ಹರಿದಾಸಪರಂಪರೆಗೆ ಮೊತ್ತಮೊದಲಿಗರೆಂದು ಕೆಲವರು ಭಾವಿಸಿರುವುದುಂಟು. ಸಂಸ್ಕೃತದಲ್ಲಿ ಬಹು ದೊಡ್ಡ ವಿದ್ವಾಂಸರಾಗಿದ್ದ ಇವರು ಸಂಸ್ಕೃತವನ್ನರಿಯದ ಸಾಮಾನ್ಯ ಜನರ ಮೇಲಿನ ಕೃಪೆಯಿಂದ, ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡುವುದಕ್ಕೂ, ಜನರಲ್ಲಿ ಭಕ್ತಿ ಭಾವನೆಯನ್ನು ಬೇರೂರಿಸುವುದಕ್ಕೂ ಕನ್ನಡದಲ್ಲಿ ಕೀರ್ತನೆಗಳನ್ನು ಬರೆದರು. ಇವರ ಬಳಿಕ ಬಂದ ಶ್ರೀ ವ್ಯಾಸರಾಯರೂ ಇವರಷ್ಟೇ ಪ್ರಸಿದ್ಧರು. ಶ್ರೀಪಾದರಾಯರ ಬಳಿ ಮುಳುಬಾಗಿಲಿನಲ್ಲಿ ವಿದ್ಯಾಭ್ಯಾಸವನ್ನು ನಡೆಯಿಸಿದ ಇವರು ಬಹು ದೊಡ್ಡ ವಿದ್ವಾಂಸರಾಗಿದ್ದರು. ವಿಜಯನಗರದ ದೊರೆಗಳಿಗೆ ಕುಲಗುರುಗಳಾಗಿದ್ದರು. ಇವರ ಕೀರ್ತನೆಗಳು ಮೃದುಮಧುರವಾಗಿಯೂ ಭಕ್ತಿಭಾವ ಪ್ರಚೋದಕವಾಗಿಯೂ ಇವೆ. ಇವರು ಸಂಪ್ರದಾಯನಿಷ್ಠರ ವಿರೋಧವನ್ನೆದುರಿಸಿ, ಶೂದ್ರರಾಗಿದ್ದರೂ ಭಕ್ತಿವರೇಣ್ಯರಾಗಿದ್ದ ಕನಕದಾಸರನ್ನು ತಮ್ಮ ಶಿಷ್ಯರನ್ನಾಗಿ ಅಂಗೀಕರಿಸಿ ದೊಡ್ಡತನವನ್ನು ಮೆರೆದರು. ಇವರ ಶಿಷ್ಯರಲ್ಲಿ ಇಬ್ಬರಾದ ಪುರಂದರದಾಸ ಮತ್ತು ಕನಕದಾಸರು ಪ್ರಾಯಶಃ ಹರಿದಾಸಪರಂಪರೆಯಲ್ಲಿಯೇ ಅತಿ ಪ್ರಸಿದ್ಧರು. ಪರಿಶುದ್ಧವಾದ ಭಕ್ತಿ, ವಿಶಾಲವಾದ ಹೃದಯ, ಮತ್ತು ಲೋಕಾನುಭವ, ಕಾವ್ಯಶಕ್ತಿ–ಯಾವ ದೃಷ್ಟಿಯಿಂದ ನೋಡಿದರೂ ಇವರಿಬ್ಬರೂ ಹರಿದಾಸಪರಂಪರೆಯಲ್ಲಿ ಮಕುಟಪ್ರಾಯರೆನ್ನುವುದರಲ್ಲಿ ಸಂದೇಹವಿಲ್ಲ. ಹರಿದಾಸರ ಪರಂಪರೆಯು 18ನೇ ಶತಮಾನದವರೆಗೂ ಹರಿದುಕೊಂಡು ಬಂದು ಕರ್ನಾಟಕದಲ್ಲಿ ಜಗನ್ನಾಥದಾಸ, ವಿಜಯದಾಸರಂತಹ ಭಕ್ತಶ್ರೇಷ್ಠರನ್ನೂ, ಶ್ರೇಷ್ಠ ಕೀರ್ತನಕಾರರನ್ನೂ ದಯಪಾಲಿಸಿತು.

ಹೀಗೆ ಕರ್ನಾಟಕದ ವೈಷ್ಣವ ಧರ್ಮದ ಇತಿಹಾಸದಲ್ಲಿ ರಾಮಾನುಜರ ಪ್ರವೇಶಕ್ಕಿಂತ ಮುನ್ನ ಇದ್ದ ಭಾಗವತ ಸಂಪ್ರದಾಯದ ವೈಷ್ಣವ ಧರ್ಮ, ಶ್ರೀ ರಾಮಾನುಜರ ಶ್ರೀವೈಷ್ಣವಧರ್ಮ, ಮಧ್ವಾಚಾರ್ಯರ

ದ್ವೈತಸಿದ್ಧಾಂತ—ಇವುಗಳನ್ನು ಗುರುತಿಸಬಹುದು. ರಾಮಾನುಜರಿಗಿಂತ ಒಂದೇ ಕರ್ನಾಟಕದಲ್ಲಿ ವೈಷ್ಣವರಿದ್ದರೆಂಬುದಕ್ಕೆ ಶಾಸನಗಳೂ ದೇವಸ್ಥಾನಗಳೂ ಸಾಕ್ಷಿಗಳನ್ನೊದಗಿಸುತ್ತವೆಯಾದರೂ ನಮಗೆ ಹೆಚ್ಚು ವಿವರಗಳು ದೊರಕುವುದಿಲ್ಲ. ಶ್ರೀ ರಾಮಾನುಜರ ಶ್ರೀವೈಷ್ಣವ ಧರ್ಮವು ಹೆಚ್ಚು ಪ್ರಚಾರವಾದದ್ದು, ಹೆಚ್ಚು ಕಾರ್ಯನಿರತವಾದದ್ದು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ—ಎಂಬುದನ್ನು ಹಿಂದೆ ನೋಡಿದ್ದೇವೆ. ಮಧ್ವಾಚಾರ್ಯರ ಪರಂಪರೆಯು ಬೆಳೆದುಕೊಂಡು ಬಂದ ರೀತಿಯನ್ನು ವಿಸ್ತಾರವಾಗಿ ಚರ್ಚಿಸಲು ವಿಪುಲ ಸಾಮಗ್ರಿಯು ದೊರೆಯುತ್ತದೆ. ಆದರೆ ಇವೆರಡೂ ನಮ್ಮ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿಲ್ಲವಾದ್ದರಿಂದ ಅವುಗಳನ್ನು ಮೇಲೆ ಸಂಕ್ಷಿಪ್ತವಾಗಿ ಸೂಚಿಸಿ ಅಲ್ಲಿಗೇ ಬಿಟ್ಟಿದ್ದೇವೆ.

# VIII

## ದೇವಸ್ಥಾನ—ಒಂದು ಸಾಮಾಜಿಕ ಸಂಸ್ಥೆ

ಇಪ್ಪತ್ತನೆಯ ಶತಮಾನದಲ್ಲಿರುವ ನಾವು ಶಾಸನಗಳ ಸಹಾಯದಿಂದ ಪ್ರಾಚೀನ ಕರ್ನಾಟಕದ ದೇವಸ್ಥಾನಗಳನ್ನು ಕಲ್ಪಿಸಿಕೊಂಡಾಗ ಈಗಿನ ಚಿತ್ರಕ್ಕಿಂತ ಬಹು ಭಿನ್ನವಾದ ಚಿತ್ರವೊಂದು ಮೂಡುತ್ತದೆ. ಈಗಲೂ ದೇವಸ್ಥಾನಗಳು ಇವೆ, ನಿಜ. ಆದರೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಅವುಗಳ ಪ್ರಾಮುಖ್ಯ ಕಡಮೆಯಾಗಿದೆ, ದಿನೇ ದಿನೇ ಕಡಮೆಯಾಗುತ್ತಿದೆ. ಅವು ಈಗ ಅಂತಹ ಜೀವಂತ ಕೇಂದ್ರಗಳೆನ್ನಿಸುವುದಿಲ್ಲ. ಪ್ರಾಚೀನ ಕರ್ನಾಟಕದಲ್ಲಿಯಾದರೋ, ಅವು ಜೀವಂತ ಕೇಂದ್ರಗಳು ಮಾತ್ರವಲ್ಲ ; ಇಡೀ ನಾಡಿನ ನಾಡಿಯನ್ನು ಹಿಡಿದು ನಡೆಯಿಸುತ್ತಿದ್ದ ಸಾಂಸ್ಕೃತಿಕ ಕೇಂದ್ರಗಳೂ ಆಗಿದ್ದುವು. ಈಗ ಎಲ್ಲೋ ಕೆಲವು ದೇವಸ್ಥಾನಗಳನ್ನು ಬಿಟ್ಟರೆ, ಉಳಿದುವನ್ನು 'ಸಂಸ್ಥೆ'ಗಳೆಂದು ಕರೆಯಲು ಸಾಧ್ಯವಿಲ್ಲವೆಂದು ಕಾಣುತ್ತದೆ. ಪ್ರಾಚೀನ ಕರ್ನಾಟಕ ದಲ್ಲಾದರೋ ಒಂದೊಂದು ದೇವಸ್ಥಾನವೂ ಸುವ್ಯವಸ್ಥಿತವಾದ, ನಿಯಮಬದ್ಧವಾದ ಒಂದು 'ಸಂಸ್ಥೆ' ಯಾಗಿದ್ದಿತು. ಪ್ರಾಚೀನ ದೇವಸ್ಥಾನಗಳ ವಾಸ್ತುಶಿಲ್ಪವನ್ನು ಕುರಿತ ಅಧ್ಯಯನವು ನಮ್ಮಲ್ಲಿ ತಕ್ಕಮಟ್ಟಿಗೆ ನಡೆದಿದೆ. ಆದರೆ, ನಮಗೆ ತಿಳಿದಮಟ್ಟಿಗೆ, ದೇವಸ್ಥಾನವನ್ನು ಒಂದು ಸಾಮಾಜಿಕ–ಸಾಂಸ್ಕೃತಿಕ ಕೇಂದ್ರವಾಗಿ ಭಾವಿಸಿ ಅದರ ವ್ಯವಸ್ಥೆ, ಅದು ಜನತೆಯ ಮೇಲೆ ಬೀರಿದ ಪ್ರಭಾವ, ಜನತೆಯು ದೇವಸ್ಥಾನವನ್ನು ಕಂಡ ರೀತಿ–ಇವುಗಳನ್ನು ಕುರಿತು ಸಾಕಷ್ಟು ಕೆಲಸ ನಡೆದಿಲ್ಲವೆಂದೇ ಹೇಳಬೇಕಾಗಿದೆ. ಭಾರತದ ಉಳಿದ ಕಡೆ ಹೇಗಾದರೂ ಇರಲಿ, ಪ್ರಾಚೀನ ಕರ್ನಾಟಕದ ಜನಜೀವನದ ಅವಿಭಾಜ್ಯ ಅಂಗವಾಗಿ ಕಾಣಿಸಿಕೊಳ್ಳುತ್ತವೆ, ದೇವಸ್ಥಾನಗಳು.

ದೇವಸ್ಥಾನದ ಹುಟ್ಟು ಬೆಳವಣಿಗೆಗಳ ವಿಷಯದಲ್ಲಿ ಇನ್ನೂ ಖಚಿತವಾದ ಒಂದು ತೀರ್ಮಾನಕ್ಕೆ ಬಂದಿಲ್ಲ. ಈ ವಿಷಯವಾಗಿ ಡಾ|| ಅಲ್ಟೇಕರರು ಹೇಳಿರುವ ಮಾತುಗಳನ್ನು ಉದ್ಧರಿಸಬಹುದು–''ಮೂರ್ತಿ ಪೂಜೆಯ ಆರಂಭ ಮತ್ತು ಬೆಳವಣಿಗೆಗಳ ವಿಷಯವಾಗಿ ಇನ್ನೂ ಕೆಲಸ ನಡೆಯಬೇಕಾಗಿದೆ. ಮನೆಯಲ್ಲಾಗಲಿ, ದೇವಸ್ಥಾನಗಳಲ್ಲಾಗಲಿ ದೇವತಾ ಮೂರ್ತಿಗಳನ್ನು ಪೂಜಿಸುವ ವಿಷಯವನ್ನು ಧರ್ಮಸೂತ್ರಕಾರರು ಸಾಮಾನ್ಯವಾಗಿ ಹೇಳುವುದಿಲ್ಲ. ಮನುವೂ ಹೇಳಿಲ್ಲ. ದೇವಸ್ಥಾನಗಳನ್ನು ಸ್ಥಾಪಿಸುವ ಸಂಪ್ರದಾಯವು ಅಶೋಕನಿಗಿಂತ ಈಚಿನದೆಂದು ಕಾಣುತ್ತದೆ. ಬಹುಜನರು ನೆರೆಯುತ್ತಿದ್ದ ಶ್ರೌತಯಜ್ಞಗಳ ಸ್ಥಾನದಲ್ಲಿ ಇವು ಕಾಣಿಸಿಕೊಂಡುವು. ಬೌದ್ಧರ ಭವ್ಯ ದೇವಾಲಯಗಳನ್ನೂ, ವಿಹಾರಗಳನ್ನೂ ನೋಡಿದ ಹಿಂದೂಗಳ ಮನಸ್ಸಿನಲ್ಲಿ ಅಂತಹ ಸಾರ್ವಜನಿಕ ಆರಾಧನಾ ಕೇಂದ್ರಗಳನ್ನು ಸ್ಥಾಪಿಸಬೇಕೆಂಬ ಇಚ್ಛೆ ಉದಯಿಸಿದ್ದರೂ ಇರಬಹುದು. ಅಂತೂ ನಿಜವಾದ ಕಾರಣಗಳೇನೆ ಇರಲಿ, ದೇವಸ್ಥಾನಗಳು ಸಾರ್ವಜನಿಕ ಪೂಜಾ ಕೇಂದ್ರಗಳೆಂದು ಮುಂದೆ ಪರಿಗಣಿತವಾದುವು ..... ''[1]

ಕ್ರಿಸ್ತಶಕದ ಆರಂಭದ ಶತಕಗಳಲ್ಲಿ ಕಟ್ಟಿದ ದೇವಸ್ಥಾನಗಳು ಕರ್ನಾಟಕದಲ್ಲಿ ಉಳಿದಿಲ್ಲವಾದರೂ, ಆ ಕಾಲಕ್ಕೆ ದೇವಸ್ಥಾನಗಳಿದ್ದುವೆಂದೂ, ಅವುಗಳಿಗೆ ರಾಜರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರೆಂದೂ ಶಾಸನ ಗಳು ತಿಳಿಸುತ್ತವೆ. ಸುಮಾರು ಕ್ರಿ. ಶ. 150ರ ಕದಂಬರ ಪ್ರಾಕೃತ ಶಾಸನದಲ್ಲಿ ಶಾತವಾಹನ ರಾಜನೊಬ್ಬನು

[1] A.S. Altekar : The Rāṣṭrakūṭas and their Times, p. 289.

'ಮಟ್ಟಪಟ್ಟಿದೇವ'ರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯವಿದೆ. ಆ ದೇವಸ್ಥಾನವು ಮಹಾಮುನಿಗಳ ವಾಸ ಸ್ಥಾನವೂ ಆಗಿದ್ದಿತೆಂದು ಆ ಶಾಸನವು ತಿಳಿಸುತ್ತದೆ.[2] ಸುಮಾರು 450ರ ತಾಳಗುಂದದ ಶಾಸನದಿಂದ ತಾಳಗುಂದದಲ್ಲಿ ಮಹಾದೇವನ ದೇವಸ್ಥಾನವಿದ್ದ ವಿಷಯವು ತಿಳಿದುಬರುತ್ತದೆ.[3] ಕರ್ನಾಟಕದಲ್ಲಿ ದೇವಸ್ಥಾನಗಳ ಇತಿಹಾಸ ಕ್ರಿಸ್ತಶಕಕ್ಕಿಂತ ಹಿಂದೆ ಹೋದರೂ, ಈಗ ಉಳಿದುಬಂದಿರುವ ದೇವಸ್ಥಾನಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದೆಂದರೆ ತಾಳಗುಂದದ ದೇವಸ್ಥಾನ. ಈ ದೇವಸ್ಥಾನದ ಒಳಭಾಗವು ಹೋಮದೀಕ್ಷಾಪರರಾದ ಬ್ರಾಹ್ಮಣರ, ಸ್ನಾತಕರ ವೇದಘೋಷದಿಂದ ತುಂಬಿಹೋಗಿದ್ದಿತೆಂದು ಶಾಸನವು ಬಣ್ಣಿಸುತ್ತದೆ. ಆದರೂ ಕರ್ನಾಟಕದಲ್ಲಿ ದೇವಸ್ಥಾನ ನಿರ್ಮಾಣಕ್ಕೆ ಜನರಿಗೆ ಹೆಚ್ಚಿನ ಪ್ರಚೋದನೆ ಒದಗಿದ್ದು ಲಕುಲೀಶ–ಪಾಶುಪತ ಸಂಪ್ರದಾಯದ ಶೈವ ಗುರುಗಳಿಂದ.

## ದೇವಸ್ಥಾನ ನಿರ್ಮಾಣಕ್ಕೆ ಕಾರಣ

ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಆ ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕಗಳು. ಈ ಭಕ್ತಿ ಮತ್ತು ನಿಷ್ಠೆಗಳು ನೆಲೆಗೊಂಡಿದ್ದ ಹಲವರ ಹೆಸರುಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಧರ್ಮವೊಳಲಿನ ಅಜ್ಜಮಯ್ಯ ಅಥವಾ ಅಜ್ಜಮನಾಯಕ ಎಂಬಾತನು ಕನಸಿನಲ್ಲಿ ಮುಕ್ಕಣ್ಣನ ಪಾದಗಳನ್ನು ಕಂಡು 'ನಮಃ ಶಿವಾಯ' ಎಂದು ಕನವರಿಸುತ್ತಿದ್ದನಂತೆ. ಅವನು ತನ್ನ ತೋಳ್ಬಲದಿಂದ ಸಂಪಾದಿಸಿದ ಐಶ್ವರ್ಯವನ್ನು ಸಾರ್ಥಕಗೊಳಿಸಲು ಅಜ್ಜಮೇಶ್ವರ ಎಂಬ ಹೆಸರಿನ ಶಿವಭವನವನ್ನು ಕಟ್ಟಿಸುತ್ತಾನೆ.[4] ಆ ಕಾಲದ ಆದರ್ಶವೇ ಇದು-ನ್ಯಾಯವಾದ ರೀತಿಯಲ್ಲಿ ಧನಸಂಪಾದನೆ ಮಾಡಬೇಕು ; ಆ ಧನವನ್ನು ದಾನಮಾಡಬೇಕು ಅಥವಾ ಅದರ ಸಹಾಯದಿಂದ ದೇವಸ್ಥಾನವನ್ನು ನಿರ್ಮಿಸಬೇಕು. ಇವುಗಳಿಗೆ ಬಳಸದಿದ್ದರೆ ಸಂಪಾದಿಸಿದ ಹಣವನ್ನು ಅನ್ಯರು ಅಪಹರಿಸಿಬಿಡಬಹುದು.[5] ಆಯಿಕಜೀಯ ಎಂಬಾತನು ಮಹಾಸಂಸಾರಕ್ಕೆ ಹೆದರಿ, ಮೋಕ್ಷಾಪೇಕ್ಷಿಯಾಗಿ ದೇವಾಲಯವನ್ನು ಕಟ್ಟಿಸಿದನೆಂದು ಒಂದು ಶಾಸನವು ಹೇಳುತ್ತದೆ.[6] ಬಸವಾಚಾರಿ ಎಂಬಾತನು ಸಂಸಾರಭೀತನಾಗಿ ದೇವಸ್ಥಾನ ಮತ್ತು ಕೆರೆಗಳನ್ನು ಕಟ್ಟಿಸಿ ತಪಸ್ವಿಯಾಗಿ ಬಾಳಿದಂತೆ ಶಾಸನವೊಂದು ತಿಳಿಸುತ್ತದೆ.[7] ದೇವಸ್ಥಾನವನ್ನು ನಿರ್ಮಿಸಲು ಹಬ್ಬೆಯನಾಯಕನಿಗೆ ಒದಗಿಬಂದ ಪ್ರಚೋದನೆಯ ಸಂದರ್ಭವನ್ನು ಒಂದು ಶಾಸನವು ವಿವರಿಸುತ್ತದೆ.[8] ಅವನು ಯಾವುದೋ ಕಥಾಗೋಷ್ಠಿಯಲ್ಲಿ ಭಾಗವಹಿಸಿ ಧರ್ಮಶ್ರವಣವನ್ನು ಮಾಡುತ್ತಿದ್ದಾನೆ-"ಎಲ್ಲ ಸಂಪತ್ತುಗಳಿಗೂ ಪುಣ್ಯವೇ ಮೊದಲು ಎಲ್ಲ ಪುಣ್ಯಕ್ಕೂ ಈಶ್ವರ ಪ್ರತಿಷ್ಠೆಯೇ ಮೊತ್ತಮೊದಲು. ಆ ಪುಣ್ಯದ ಬಳಿವಿಡಿದು ಎಲ್ಲ ಪುಣ್ಯಗಳೂ ಬರುತ್ತವೆ. ವ್ಯಕ್ತಿ ಯಾವ ದೇವತೆಯ ಪ್ರತಿಷ್ಠೆಯನ್ನು ಮಾಡಿಸುವನೋ, ಆ ದೇವತೆಗೆ ಅವನ ಹೆಸರು ಬರುತ್ತದೆ. ಈಶ್ವರ ಪ್ರತಿಷ್ಠೆಯನ್ನು ಮಾಡಿಸಿದರೆ ಅವನು ಈಶ್ವರನೇ ಆಗುತ್ತಾನೆ ಎಂಬುದನ್ನು ದೇವರಿಗೆ ಅವನ ಹೆಸರೇ ರೂಢವಾಗುವುದರ

---

[2] EC. VII. Sk. 263, C. 150 A.D.

[3] EC. VII. SK. 176, C. 450 A.D.

[4] BKI. I. ii. 175, 1124 A.D.

[5] "ಪಡೆದರ್ಥಂ ಕಳ್ಳರಿಂ ದಾಯಿಗರಿನಳಿಪರಿಂ ಭೂಪರಿಂ ಕಿಚ್ಚಿನಿಂದಂ ಕಿಡುಗುಂ ತಾನಂತದೆ ಶಾಶ್ವತಮೆನಿ ... ಶಾಶ್ವತಂ ಮಾರ್ಪನೆಂದಾಗಡೆ ಪೂಜ್ಯೆ ಪೂರ್ಣಚಂದ್ರಾನನೆ ಜಿನಪತಿ ಸದ್ಗೇಹಮುಂ ನೆಂಬನೂರೊಳು ಕಡುರಯ್ಯಂ ತಾನೆನಲು ಮಾಡಿಸಿದಳಧಿಕ ಸದ್ಭಕ್ತಿಯಿಂ ಕಾಳಿಯಕ್ಕಂ." [EC. XI. Dg. 90, 1128 A.D.]

[6] EC. VI. Kd. 104, C. 1141 A.D.

[7] EC. II. 402, 1138 A.D.

[8] KI. I. 25, 1186 A.D.

ಮೂಲಕ ತಿಳಿದುಕೊಳ್ಳಬಹುದು. ಮರ, ಇಟ್ಟಿಗೆಗಳಲ್ಲಿ ಕಟ್ಟಿಸುವುದಕ್ಕಿಂತ ಶಿಲೆಯಲ್ಲಿ ದೇವಸ್ಥಾನವನ್ನು ಕಟ್ಟಿಸುವುದು ಹೆಚ್ಚು ಫಲವನ್ನು ಕೊಡುತ್ತದೆ.....”–ಇತ್ಯಾದಿ ಮಾತುಗಳನ್ನು ಕೇಳಿ ಹಬ್ಬೆಯನಾಯಕನು ಭಕ್ತಿಭಾವದಿಂದ ಪ್ರೇರಿತನಾಗಿ ಹಬ್ಬೇಶ್ವರನನ್ನು ಪ್ರತಿಷ್ಠಿಸಿ, ಅದಕ್ಕೆ ಶಿಲೆಯಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಾನೆ.

## ವ್ಯಕ್ತಿಯ ಹೆಸರಿನಲ್ಲಿ ದೇವಸ್ಥಾನ

ಮೇಲಿನ ಶಾಸನದ ವಿಷಯವು ಒಂದು ಸಂಗತಿಯನ್ನು ಸ್ಪಷ್ಟಪಡಿಸುತ್ತದೆ. ವ್ಯಕ್ತಿಗೆ ತಂದೆ ತಾಯಿಗಳು ಇಟ್ಟ ಹೆಸರು ಯಾವುದೇ ಆಗಿರಲಿ, ಆ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನೋ, ಭಟ್ಟಾರಕ ಎಂಬ ಪದವನ್ನೋ ಸೇರಿಸಿ ಆ ಹೆಸರಿನ ದೇವರನ್ನು ಪ್ರತಿಷ್ಠಿಸುವ ಸಂಗತಿಯು ಹಲವು ಶಾಸನಗಳಲ್ಲಿದೆ.[9] ಅದಕ್ಕೆ ಕಾರಣ, ಅಂತಹ ದೇವಸ್ಥಾನವನ್ನು ಕಟ್ಟಿಸಿದವನ ಹೆಸರು ದೇವರಿಗೆ ಬರುವುದೆಂದು, ಕಟ್ಟಿಸಿದವನು ಶಿವನೇ ಆಗಿಬಿಡುತ್ತಾನೆ ಎಂದು ಆ ಕಾಲದ ಜನರು ನಂಬಿದ್ದರು.* ವಿಜಯಾದಿತ್ಯ ಸತ್ಯಾಶ್ರಯನು ಪ್ರತಿಷ್ಠಿಸಿದ ದೇವರು ವಿಜಯಾದಿತ್ಯ ಭಟ್ಟಾರಕ.[10] ಲೋಕಮಹಾದೇವಿಯು ಕಟ್ಟಿಸಿದ ದೇವಸ್ಥಾನ ಲೋಕೇಶ್ವರ ಭಟ್ಟಾರಕ ದೇವಸ್ಥಾನ.[11] ಸಿಡಿಲಂಕರಾಮ ಎಂಬಾತನು ಪ್ರತಿಷ್ಠಿಸಿದ ದೇವತೆಯ ಹೆಸರು ಸಿಡಿಲೇಶ್ವರ.[12] ಕೋಬೆಗಾವುಂಡ ಮಾಡಿಸಿದ ದೇವರು ಕೋಬೇಶ್ವರ.[13] ಒದ್ದಿರಾಜನು ಮಾಡಿಸಿದ ದೇವರು ಒದ್ದೇಶ್ವರ.[14] ಈಗ ನಮಗೆ ಇವು ಬಹಳ ವಿಚಿತ್ರವಾಗಿ ಕಾಣಿಸುವಂತೆ ಆ ಕಾಲದ ಮುಂದಿನ ಜನಕ್ಕೂ ವಿಚಿತ್ರವಾಗಿ ಕಂಡಿರಬೇಕು ; ಅಷ್ಟೇ ಅಲ್ಲ, ದೇವರುಗಳಿಗೆ ವ್ಯಕ್ತಿಗಳ ಹೆಸರುಗಳನ್ನಿಡುವುದು ಅನುಚಿತವೆಂದು ಅನ್ನಿಸಿರಬೇಕು. ಬಹುಶಃ ಅದರ ಫಲವಾಗಿ ವ್ಯಕ್ತಿಯ ಹೆಸರುಗಳಲ್ಲಿ ಕಟ್ಟಿಸಿದ ದೇವಸ್ಥಾನಗಳು ಉಳಿದರೂ, ಆ ದೇವತೆಗಳ ಹೆಸರುಗಳು ಮಾತ್ರ ಮಾರ್ಪಾಟಾದುವು. ಆಗ ಒದ್ದೇಶ್ವರ, ಈಗ ಬರಿಯ ಈಶ್ವರ ; ಆಗ ಮಂಕೇಶ್ವರ, ಈಗ ಮಲ್ಲೇಶ್ವರ;[15] ಆಗ ಕೋಬೇಶ್ವರ, ಈಗ ಸೋಮೇಶ್ವರ ;[16] ಆಗ ಬಿಕ್ಕೇಶ್ವರ, ಈಗ ಕಲ್ಲೇಶ್ವರ.[17] ಎಂದರೆ ಪ್ರತಿಷ್ಠಿಸಿದ ವ್ಯಕ್ತಿಯ ಹೆಸರನ್ನು ಬಿಟ್ಟು ಅದರ ಮುಂದಿನ ‘ಈಶ್ವರ’ ಎಂಬಷ್ಟನ್ನು ಮಾತ್ರ ಈಗ ಉಳಿಸಿಕೊಂಡಿದ್ದಾರೆ. ಅಥವಾ ಮೂಲತಃ ಇದ್ದ ಹೆಸರನ್ನು ಹೋಲುವ ಮತ್ತೊಂದು ಹೆಸರನ್ನು ಅದಕ್ಕೆ ಇಟ್ಟಿದ್ದಾರೆ (ಕೋಬೇಶ್ವರ>ಸೋಮೇಶ್ವರ ; ರವಿಯಮೇಶ್ವರ>ರಾಮೇಶ್ವರ[18]). ವ್ಯಕ್ತಿಯ ಹೆಸರಲ್ಲಿ ದೇವಸ್ಥಾನವನ್ನು

---

[9] ಈ ಪದ್ಧತಿಯು ಬಹು ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ. ಶ್ರೀರಾಮನು ಪ್ರತಿಷ್ಠಿಸಿದನೆಂದು ನಂಬಿರುವ ‘ರಾಮೇಶ್ವರ’ವನ್ನು ಇಲ್ಲಿ ನೆನೆಯಬಹುದು.

* “....ಎಲ್ಲಾ ಸಂಪತ್ತುಗಳ್ಗೆ ಪುಣ್ಯಮೆ ಮೊದಲಾ ಪುಣ್ಯಕ್ಕೆಲ್ಲವೀಶ್ವರ ಪ್ರತಿಷ್ಠೆಯೆ ಮೊತ್ತಮೊದಲೆಂತೆನಲಾ ಪುಣ್ಯದ ಬಳಿವಿಡಿದೆಲ್ಲಾ ಪುಣ್ಯಂಗಳುಂ ದೊರೆಕೊಳ್ಗುಂ ಮತ್ತವೆಲ್ಲಾ ಪ್ರತಿಮೆಗಳಂ ಪ್ರತಿಷ್ಠೆಮಾಡಿದೊಡವಾ ದೇವರ್ಕಳ ಹೆಸರೆಯುಕ್ಕು ವೀಶ್ವರ ಪ್ರತಿಷ್ಠೆಯುಂ ಮಾಡಿದವನೀಶ್ವರನೆಯುಕ್ಕುವೆಂಬುದನಾ ದೇವರ ಪೆಸರಾತನ ಪೆಸರಕ್ಕುವೆಂದಱಿದು ಕೊಳ್ವುದು’’ (KI. I. p. 47).

[10] EI. III. p. 4, 754 A.D.

[11] ಅದೇ.

[12] EC. XI. Hk. 23, 967 A.D.

[13] EC. V. Bl. 200, 1073 A.D.

[14] EC. VI. Kd. 35, 1136 A.D.

[15] EC. IV. Kp. 74, C. 1140 A.D.

[16] EC. V. Bl. 200, 1073 A.D.

[17] EC. VI. Kd. 34, C. 1148 A.D.

[18] EC. IV. Hg. 56, 1079 A.D.

ಕಟ್ಟಿಸುವ ಸಂಪ್ರದಾಯವು ಸ್ವಲ್ಪಮಟ್ಟಿಗೆ ಇತ್ತೀಚಿನವರೆಗೂ ಉಳಿದುಕೊಂಡು ಬಂದಿದೆ. ಚಾಮರಾಜನಗರದಲ್ಲಿ ಚಾಮರಾಜಒಡೆಯರ ಹೆಸರಿನಲ್ಲಿ ನಿರ್ಮಾಣವಾದ 'ಚಾಮರಾಜೇಶ್ವರ'ವನ್ನು ಇಲ್ಲಿ ಹೆಸರಿಸಬಹುದು. ಆದರೆ ಇದು ಈಗ ಸಾರ್ವತ್ರಿಕವಾದ ಪದ್ಧತಿಯಲ್ಲವೆಂಬುದು ಗಮನಾರ್ಹವಾಗಿದೆ.

## ದೇವಸ್ಥಾನ ನಿರ್ಮಾಣ: ಶ್ರದ್ಧೆ, ನಿಷ್ಠೆ

ದೇವಸ್ಥಾನ ನಿರ್ಮಾಣದ ವಿಷಯದಲ್ಲಿ ಹೆಚ್ಚು ಹುರುಪು, ಉತ್ಸಾಹಗಳು ಗೋಚರವಾಗುವುದು ಎಂಟು ಅಥವಾ ಒಂಬತ್ತನೆಯ ಶತಮಾನಗಳ ಬಳಿಕ. ಈ ಉತ್ಸಾಹವು ಒಂದು ರೀತಿಯ ವೀರವ್ರತವಾಗಿಯೂ ಪರಿಣಮಿಸಿರುವುದುಂಟು. ಶ್ರೀಮಂತನಲ್ಲದ ಒಬ್ಬ ವ್ಯಕ್ತಿಗೆ ದೇವಸ್ಥಾನವನ್ನು ಕಟ್ಟಿಸಬೇಕೆಂಬ ಬಯಕೆ ಮೂಡಿದರೆ ಆಗ ಆತ ಬಹು ಸಹಜವಾಗಿಯೇ ವೀರಪ್ರತಿಜ್ಞೆಯನ್ನು ಕೈಗೊಂಡವನಂತೆ ಕಾರ್ಯಶೀಲನಾಗ ಬೇಕಾಗುತ್ತದೆ. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು. ಕುಂಬಾರ ಜಾತಿಯ ಬಮ್ಮಣ ಎಂಬಾತನು ತಲೆಯನ್ನು ತೊಳೆಯದ, ಅನ್ನವುಣ್ಣದ 'ವೀರವ್ರತ'ವನ್ನು ಕೈಗೊಂಡು ಕುಂಭೇಶ್ವರ ದೇವರನ್ನು ಪ್ರತಿಷ್ಠೆಮಾಡಿಸಿದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[19] ಲಿಂಗಶಿವಜೀಯ ಎಂಬುವರು ಭಿಕ್ಷಾವೃತ್ತಿ ಯಿಂದ ಹಣವನ್ನು ಸಂಪಾದಿಸಿ ಜಟಂಗ ರಾಮೇಶ್ವರದಲ್ಲಿದ್ದ ಇಟ್ಟಿಗೆಯ ರಾಮೇಶ್ವರ ದೇವಸ್ಥಾನವನ್ನು ಕೆಡವಿಸಿ, ಅದನ್ನು ಶಿಲೆಯಲ್ಲಿ ಕಟ್ಟಿಸಿ ಕಳಶವನ್ನು ಇಡಿಸುವುದಲ್ಲದೆ, ಇನ್ನೂ ಅನೇಕ ದೇವಸ್ಥಾನಗಳನ್ನೂ ಕೊಂಡಗಳನ್ನೂ ಕಟ್ಟಿಸಿದ ವಿಷಯವನ್ನು ಶಾಸನವೊಂದು ಹೇಳುತ್ತದೆ.[20] ಶ್ರೀಮಂತರ ಮನೆಗಳಲ್ಲಿದ್ದ ಅಡಿಗೆಯವರು[21], ದೇವಸ್ಥಾನಗಳಲ್ಲಿದ್ದ ಪೂಜಾರಿಗಳು[22] ದೇವಸ್ಥಾನಗಳನ್ನು ಕಟ್ಟಿಸಿದರೆಂದ ಮೇಲೆ ಪ್ರಾಚೀನ ಕನ್ನಡಿಗರಿಗೆ ದೇವಸ್ಥಾನ ನಿರ್ಮಾಣದ ವಿಷಯದಲ್ಲಿದ್ದ ಶ್ರದ್ಧೆ ನಿಷ್ಠೆಗಳಿಗೆ ಹೆಚ್ಚು ಪ್ರಮಾಣಗಳು ಬೇಕಿಲ್ಲ. ಒಬ್ಬ ವ್ಯಕ್ತಿ ತನ್ನ ಜೀವಮಾನದಲ್ಲಿ ಬೇರೆ ಬೇರೆ ಕಡೆ ಹತ್ತಾರು ದೇವಸ್ಥಾನಗಳನ್ನು ಕಟ್ಟಿಸಿ ಕೀರ್ತಿವಂತನಾದ ನಿದರ್ಶನಗಳು ಸಿಗುತ್ತವೆ. 'ಭಾವನ ಗಂಧವಾರಣ' ಎಂಬ ಬಿರುದಿನ ಸಾಮಂತನೊಬ್ಬನು[23] ಕಲ್ಯಾಣದಲ್ಲಿ ತುಂಬೇಶ್ವರ ದೇವಸ್ಥಾನ, ಮಠ, ದೀಪಮಾಲೆ ಮತ್ತು ಕೆರೆ; ಅಣ್ಣಿಗೆರೆಯಲ್ಲಿ ಚೋಳಂಗೊಂಡ ತ್ರೈಪುರುಷ ದೇವರ ಶಾಲೆ; ಮುಳ್ಗುಂದದಲ್ಲಿ ಶ್ರೀ ಪಾಳೇಶ್ವರದ ಮಠ; ಕೊಳ್ಪಿಗೆಯಲ್ಲಿ ಶಿವಾಲಯ ಮತ್ತು ವಿಷ್ಣುದೇವರ ತೀರ್ಥ; ನಂದಾಪುರದಲ್ಲಿ ಕೇತೇಶ್ವರ; ಕೋಹಳ್ಳಿಯಲ್ಲಿ ದಾನವಿನೋದ ತ್ರೈಪುರುಷದೇವರ ಶಾಲೆ; ಮಂಡಲಿಗೆಜ್ಜೆಯಲ್ಲಿ ಶಂಭುನಾರಾಯಣ ದೇವಸ್ಥಾನ; ಬೆಳ್ಗಲಿಯ ಕಪಿಲತೀರ್ಥದಲ್ಲಿ ಕೇತೇಶ್ವರ; ನವಿಲೆಯ ಜಟೆಯ ಶಂಕರದೇವಾಲಯ[24]; ನಂದವಾಡಿಗೆಯಲ್ಲಿ ಶ್ರೀ ನಾಗಲೇಶ್ವರ ಮತ್ತು ಮಠ; ಪೇರೂರಲ್ಲಿ ಕೇತೇಶ್ವರ —ಇವೇ ಮೊದಲಾದುವನ್ನು ಕಟ್ಟಿಸಿದ್ದಲ್ಲದೆ ಪೊನಗುಂದದ ತ್ರಿಭುವನ ತಿಳಕ ಜಿನಾಲಯ, ಮಹಾ ಶ್ರೀಮಂತ ಬಸದಿ, ಪುಜಿಗೂರಿನ ವೀರಜಿನಾಲಯ, ಕುಂದುರಗೆಯ ಜಿನಮಂದಿರಗಳನ್ನು ಹೊಸತುಮಾಡಿಸುತ್ತಾನೆ

---

[19] EC. XI. Hk. 68, 1126 A.D.

[20] EC. XI. Mk. 27, 962 A.D.

[21] EC. V. Ag. 97, C. 1095 A.D.

[22] EC. VII. Sk. 135, 1078 A.D.

[23] BKI. I. i. 103, 1070 A.D.

[24] ನವಿಲೆಯ ಜಡೆಯಶಂಕರ ದೇವಾಲಯವು ನಿರ್ಮಾಣವಾದದ್ದು ಈ ಶಾಸನದ ಪ್ರಕಾರ ಕ್ರಿ.ಶ. 1070ಕ್ಕಿಂತ ಸ್ವಲ್ಪ ಹಿಂದೆ. ಬಸವಣ್ಣನವರಿಗಿಂತ ಹಿಂದಿದ್ದ ಶಂಕರದಾಸಿಮಯ್ಯ ಎಂಬ ಶಿವಭಕ್ತನು ನವಿಲೆಯ ಜಡೆಯಶಂಕರ ದೇವರ ಪ್ರಸಾದದಿಂದ ಹುಟ್ಟಿದನೆಂದೂ, ಕೊನೆಗೆ ಶಂಕರದೇವರಲ್ಲಿ ಐಕ್ಯವಾದನೆಂದೂ ಹರಿಹರನು ತನ್ನ ಶಂಕರದಾಸಿಮಯ್ಯನ ರಗಳೆಯಲ್ಲಿ ಹೇಳುತ್ತಾನೆ (ಹರಿಹರನ ಮೂರು ರಗಳೆಗಳು, ಸಂ. ಎಸ್. ಎಸ್. ಮಾಳವಾಡ). ಶಂಕರದಾಸಿಮಯ್ಯನೂ, ಸು. 1050ರಲ್ಲಿದ್ದ ದೇವರದಾಸಿಮಯ್ಯನೂ ಸಮಕಾಲೀನರು.

(''ಪೊಸದಾಗೆ ಪಡಿಸಲಿಸಿ''). ಇಷ್ಟು ಸಾಲದೆಂಬಂತೆ ಸಂಗವದ,[25] ಎಂದರೆ ಬಹುಶಃ ಕೂಡಲಸಂಗಮದ ಸಂಗಮೇಶ್ವರ ದೇವರಿಗೆ ದತ್ತಿಗಳನ್ನು ಬಿಡುತ್ತಾನೆ. ಇದು ನಿಜವಾಗಿಯೂ ನಿರೀಕ್ಷೆಗೆ ಮೀರಿದ ಸಾಹಸ. ಕೋಲಾರ ಜಿಲ್ಲೆಯ ಆವಣಿಕ್ಷೇತ್ರದ ಸ್ಥಾನಾಚಾರ್ಯರಾದ ತ್ರಿಭುವನ ಕರ್ತಾರದೇವರು ನಾಲ್ವತ್ತು ವರ್ಷ ಸ್ಥಾನಪತಿಗಳಾಗಿ ಆಳಿ ಐವತ್ತು ದೇಗುಲಗಳನ್ನೂ ಎರಡು ದೊಡ್ಡ ಕೆರೆಗಳನ್ನೂ ಕಟ್ಟಿಸಿದಂತೆ ಶಾಸನವೊಂದು ತಿಳಿಸುತ್ತದೆ.[26] ನಮಗೆ ತಿಳಿದಮಟ್ಟಿಗೆ ಒಬ್ಬ ವ್ಯಕ್ತಿಯು ಕಟ್ಟಿಸಿದ ದೇವಸ್ಥಾನಗಳ ಸಂಖ್ಯೆಯಲ್ಲಿ ಇದೇ ದೊಡ್ಡದು.

ದೇವಸ್ಥಾನವನ್ನು ಕಟ್ಟಿಸಿದರೆ ಸಾಲದು, ಅದು ಸಾರೋದ್ಧಾರವಾಗಿ ನಡೆಯುತ್ತಾ ಊರ್ಜಿತವಾಗಬೇಕಾಗುತ್ತದೆ. ಅದು ಭಕ್ತಜನರಿಂದ ಆಗಾಗ್ಗೆ ಬರಬಹುದಾದ ಕಾಣಿಕೆಗಳನ್ನೇ ಅವಲಂಬಿಸಿ ಉಳಿತುಕೊಳ್ಳಲಾರದು. ಆದಕಾರಣ ದೇವಸ್ಥಾನವನ್ನು ಕಟ್ಟಿಸಿದ ವ್ಯಕ್ತಿಯೇ ಅದಕ್ಕೆ ಸಮೃದ್ಧವಾಗಿ ದತ್ತಿಗಳನ್ನು ಬಿಡುತ್ತಿದ್ದನು. ಅಷ್ಟೇ ಅಲ್ಲ. ಒಬ್ಬ ವ್ಯಕ್ತಿಯಿಂದ ದೇವಸ್ಥಾನವು ನಿರ್ಮಾಣವಾಯಿತೆಂದರೆ ಹತ್ತಾರು ಜನರು, ಹತ್ತಾರು ಶ್ರೇಣಿಗಳು, ಒಮ್ಮೊಮ್ಮೆ ಹತ್ತಾರು ಗ್ರಾಮಗಳು ಸೇರಿ ಅದಕ್ಕೆ ದತ್ತಿಯನ್ನು ಬಿಟ್ಟುಕೊಡುತ್ತಿದ್ದರು. ಈ ಸಾಂಘಿಕವಾದ ಚಟುವಟಿಕೆಗಳು ನಮಗೆ ಆಶ್ಚರ್ಯವನ್ನುಂಟುಮಾಡುತ್ತವೆ. ದೇವಸ್ಥಾನದ ಆಸ್ತಿಯೇ 'ದೇವಭೋಗ'.[27] ದೈವದ ಮೇಲಿನ ಭಕ್ತಿಯಿಂದಲೋ, ದೇವಸ್ಥಾನದ ವೈಭವವನ್ನು ನೋಡಿ ವಿಸ್ಮಿತರಾಗಿಯೋ ಭಕ್ತಜನರು ಆಗಾಗ್ಗೆ ತಮ್ಮ ಕೈಲಾದಷ್ಟು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ದೇವಸ್ಥಾನದ ಆಸ್ತಿಯು ಹೀಗೆಯೇ ಬೆಳೆದುಕೊಂಡು ಹೋಗುತ್ತಿದ್ದಿತು.

ಹೀಗೆ ದತ್ತಿಗಳನ್ನು ಬಿಟ್ಟುಕೊಡುವಾಗಲೇ ಅವು ಇಂತಿಂತಹ ಅಂಶಗಳಿಗೆ ವಿನಿಯೋಗವಾಗಬೇಕು ಎಂಬುದನ್ನು ಶಾಸನಗಳಲ್ಲಿ ಸೂಚಿಸುತ್ತಿದ್ದರು. ಪ್ರಭು ಮಾರಸಿಂಘ ಎಂಬಾತನು ಸಿದ್ಧೇಶ್ವರ ಎಂಬ ದೇವರಿಗೆ ಕೊಟ್ಟ ದತ್ತಿಯಲ್ಲಿ ಈ ವಿವರಗಳಿವೆ —''ಧೂಪ ದೀಪ ಗಂಧ ನೈವೇದ್ಯ ಗೀತ ನೃತ್ಯೋಪಹಾರ ಖಂಡ ಸ್ಫುಟಿತ ಜೀರ್ಣೋದ್ಧಾರಾದಿ ಯತೀನಾಂ ವಿದ್ಯಾರ್ಥಿನಾಂ ಚ ಸತ್ರ ನಿಮಿತ್ತಂ''.[28] ಇದರ ಜೊತೆಗೆ ದೇವಸ್ಥಾನದ ಬೇರೆ ಬೇರೆ ಅಧಿಕಾರಿಗಳಿಗೆ ಪ್ರತ್ಯೇಕವಾಗಿ ದತ್ತಿಗಳನ್ನು ಬಿಟ್ಟು ಅವರವರ ಕರ್ತವ್ಯಗಳನ್ನು ಸೂಚಿಸಿರುವುದೂ ಕಂಡುಬರುತ್ತದೆ (ಇದರ ವಿವರಗಳು ಮುಂದೆ ಬರುತ್ತವೆ). ಕೆಲವು ದತ್ತಿಯ ಶಾಸನಗಳಲ್ಲಿ 'ಪೊನ್ನಱ ಕೊಟ್ಟು ಮಣ್ಣಱ ಕೊಂಡು' ಎಂಬ ಉಕ್ತಿಯು ಬರುತ್ತದೆ.[29] ಇದೊಂದು ನಾಣ್ಣುಡಿ ಇದ್ದಂತೆ. ದಾನವಾಗಿ ಕೊಡಲು ತನ್ನಲ್ಲಿ ಸ್ವಂತ ಭೂಮಿ ಇಲ್ಲದ ವ್ಯಕ್ತಿ, ಯಾರದೋ ಭೂಮಿಯಲ್ಲಿ ಸ್ವಲ್ಪ ಭಾಗವನ್ನು ಹಣ ಕೊಟ್ಟು ಕೊಂಡದ್ದನ್ನು ಈ ಉಕ್ತಿಯು ಹೇಳುತ್ತದೆ. ಭೂದಾನವು ಒಂದು ರೀತಿಯಲ್ಲಿ ಸ್ಥಿರದಾನ. ಭೂಮಿ ಇಲ್ಲದವರು, ಬೇರೆ ಬೇರೆ ವೃತ್ತಿಗಳಲ್ಲಿದ್ದವರು ವರ್ಷಕ್ಕೆ ತಾವು ಒಟ್ಟಾಗಿ ಇಷ್ಟು ಹಣವನ್ನೋ, ಸಾಮಗ್ರಿಯನ್ನೋ ದೇವಸ್ಥಾನಕ್ಕೆ ಕೊಡುವುದಾಗಿ ಹರಕೆ ಹೊತ್ತು ಆದರಂತೆ ಸಲ್ಲಿಸುತ್ತಿದ್ದರು. ಆ ಹಣವನ್ನು ಎತ್ತಿ ತರುವ ಜವಾಬ್ದಾರಿಯನ್ನು ಒಮ್ಮೊಮ್ಮೆ ನಿಗದಿಮಾಡುತ್ತಿದ್ದರು. ಯಾವುದೋ ಊರಿನ ಕಂಚಗಾರರಲ್ಲಿ ಒಂದೊಂದು ಒಕ್ಕಲೂ, ವರ್ಷಕ್ಕೆ ಒಂದು ಹಾಗದಂತೆ ದೇವರ ನಂದಾದೀವಿಗೆಗಾಗಿ ಕೊಡಲು ಮಾತುಕೊಡುತ್ತಾರೆ. ಅದನ್ನು ಎತ್ತಿತಂದು ದೇವಕಾರ್ಯವನ್ನು ನಡೆಯಿಸುವ ಹೊಣೆ ಪೂಜಾರಿಯದೆಂದು ಶಾಸನವು ತಿಳಿಸುತ್ತದೆ.[30] ದತ್ತಿಗಳನ್ನು

---

25 BKI. I. i 103, 1070 A.D. ಬಸವಣ್ಣನವರ ಆರಾಧ್ಯದೈವ 'ಕೂಡಲಸಂಗಮದೇವ' ಎಂಬುದನ್ನು ಇಲ್ಲಿ ನೆನೆಯಬಹುದು. ಆದ್ದರಿಂದ ಈ ದೇವಸ್ಥಾನಕ್ಕೆ ಪ್ರಾಮುಖ್ಯವಿದೆ.

26 EC. X. Mb. 65, 931 A.D.

27 EC. IX. Nl. 60, 797 A.D.

28 BKI. I. i. 85, 1049 A.D.

29 EC. IX. Cp. 50, 1070 A.D. ; EC. IV. Gu. 93, 1049 A.D.

30 EC. IV. Kp. 68, 1116 A.D.

ಬಿಟ್ಟು ಕೊಡುತ್ತಿದ್ದ ಕ್ರಮಕ್ಕೆ ಅತ್ಯುತ್ತಮ ನಿದರ್ಶನ ಬಳ್ಳಿಗಾವೆಯ ಸೋಮೇಶ್ವರ ದೇವಸ್ಥಾನದ ಶಾಸನ.[31] ಬಳ್ಳಿಗಾವೆಯ ವಡ್ಡವ್ಯವಹಾರಿ ಸೋವಿಸೆಟ್ಟಿ ಎಂಬಾತನು ಸೋಮೇಶ್ವರ ದೇವರನ್ನು ಪ್ರತಿಷ್ಠಿಸಿ ಅದಕ್ಕೆ ಬೇಕಾದಷ್ಟು ಭೂಮಿ, ತೋಟ, ಅಂಗಡಿಗಳನ್ನು ಬಿಡುತ್ತಾನೆ. ಅದು ಕಾಲಕ್ರಮೇಣ ಜೀರ್ಣವಾಗುತ್ತದೆ. ಅದು ಜೀರ್ಣವಾದಾಗ ಅದರ ಜೀರ್ಣೋದ್ಧಾರದ ವಿಷಯದಲ್ಲಿ ನಗರಕ್ಕೆ ನಗರವೇ ಆಸಕ್ತಿಯನ್ನು ವಹಿಸುತ್ತದೆ. ಅದರಲ್ಲಿಯೂ ಮುಖ್ಯವಾಗಿ ಅಲ್ಲಿಯ ವರ್ತಕರು, ಅವರ ನಾಯಕರಾದ ಪಟ್ಟಣಸಾಮಿ ಮೇಚಿಸೆಟ್ಟಿ, ಕೀರ್ತಿಸೆಟ್ಟಿ ಮುಂತಾದವರೂ ಸಮಸ್ತ ನಗರವೂ ಸೇರಿ ಆ ಊರಿನ ಪಂಚಮಠ, ಹಿರಿಯಮಠ, ಭೇರುಂಡೇಶ್ವರದಾಚಾರ್ಯ ಮೂಲಿಗ ಮಧುಕೇಶ್ವರ ಪಂಡಿತದೇವರು ಮುಂತಾದ ಮಠಾಧಿಪತಿಗಳ ಮುಂದೆ, ಜೀರ್ಣೋದ್ಧಾರದ ಕಾರ್ಯವನ್ನು 'ತಮ್ಮ ಧರ್ಮವಾಗಿ ಕೊಂಡು', ಎಂದರೆ ಅದು ತಮ್ಮ ಧರ್ಮವೆಂಬಂತೆ ಭಾವಿಸಿ, ಜೀರ್ಣೋದ್ಧಾರದ ಬಳಿಕ ಅದಕ್ಕೆ ಗವರೇಶ್ವರ ದೇವರೆಂದು ಹೆಸರಿಡುತ್ತಾರೆ. ಈ ವಿಷಯವನ್ನು ಹೇಳಿಯಾದ ಮೇಲೆ ಆ ದೇವಸ್ಥಾನಕ್ಕೆ ಬೇರೆ ಬೇರೆ ವ್ಯಕ್ತಿಗಳೂ, ಶ್ರೇಣಿಗಳೂ, ಅಧಿಕಾರಿಗಳೂ ಬಿಟ್ಟುಕೊಟ್ಟ ದತ್ತಿಗಳ ದೊಡ್ಡ ಪಟ್ಟಿಯೇ ಬರುತ್ತದೆ ಶಾಸನದಲ್ಲಿ. ಆ ನಗರದ ಅಂಗಡಿಯವರು, ಚಿನ್ನಗೆಯಿಕದ ವ್ಯವಹಾರಿಗಳು, ಸ್ಥಳದ ಗವರೆಗಳು, ನಾನಾದೇಶಿ ಗವರೆಗಳು, ದೂಸಿಗ ವ್ಯವಹಾರಿಗಳು (=ವಸ್ತ್ರವ್ಯಾಪಾರಿಗಳು) ತಮ್ಮ ತಮ್ಮ ಆದಾಯಗಳಲ್ಲಿ ಒಂದು ಭಾಗವನ್ನು ಬಿಟ್ಟು ಕೊಡುತ್ತಾರೆ. ಹೆಜ್ಜುಂಕ ಮತ್ತು ವಡ್ಡರಾವುಳಗಳನ್ನು ನೋಡಿಕೊಳ್ಳುವ ದಂಡನಾಯಕರು ಹತ್ತರಲ್ಲಿ ಒಂದು ಹೇರಿನ ಸುಂಕವನ್ನು ಬಿಟ್ಟುಕೊಡುತ್ತಾರೆ. ಮಾಲೆಗಾರರು ಪ್ರತ್ಯೇಕವಾಗಿ ಒಂದು ಹೂವಿನ ಸರವನ್ನು, ತಂಬುಲಿಗರು ಚೈತ್ರಪವಿತ್ರದ ಹಬ್ಬಕ್ಕೆ ಒಕ್ಕಲಿಗೆ ಒಂದು ಸಾವಿರ ಎಲೆಯನ್ನು, ತೆಲ್ಲಿಗರು (=ತೈಲಿಗರು) ಒಕ್ಕಲಿಗೆ ಒಂದು ಸೊಂಟಿಗೆ ಎಣ್ಣೆಯನ್ನು ಬಿಡುತ್ತಾರೆ. ಜಿಡ್ಡುಳಿಗೆ ಎಪ್ಪತ್ತರ ಮನ್ನೆಯ ಎಕ್ಕಲರಸ, ನಾಡಪ್ರಭು ಚಿಟ್ಟಿಮಾರ ಕಾಳಗಾವುಂಡ, ಸಿಗ್ಗದ ಚಾವಗಾವುಂಡ, ಸಾಗವದ್ದೆಯ ಚೌಡಗಾವುಂಡ, ಅವಳಿಯ ಜಕ್ಕಗವುಡ, ಹಂಪಗವುಡ, ಹೊಸವಳ್ಳಿಯೂರೊಡೆಯ ಸೋವಿಯಮ್ಮ, ಶಂಕರಭಟ್ಟರು, ಕೂಡಲಿಯ ಶಾಂತಗವುಡ, ತೊತ್ತೂರ ಗೊಯ್ದಗವುಡ ಮುಂತಾದ 'ಸಮಸ್ತ ಪ್ರಭು ಗಾವುಂಡು'ಗಳು ತಮ್ಮ ತಮ್ಮ ಊರಲ್ಲಿ ವರ್ಷಂಪ್ರತಿ ದೇವರಿಗೆ ಐದು ಹಣವನ್ನು ಕೊಡಲು ತೀರ್ಮಾನಿಸುತ್ತಾರೆ. ನಾಗರಖಂಡ ಎಪ್ಪತ್ತರ ಮನ್ನೆಯ ಸೋವಿದೇವ, ಕೊಣವತ್ತಿಯ ಪೃಥ್ವೀಸೆಟ್ಟಿ, ಬೇಗೂರ ಕೇತಗವುಡ, ಮಾಗುಂಡಿಯ ಸಂಕಗವುಡ, ಮಳವಳ್ಳಿಯ ಕೇತಗಾವುಂಡ, ಎಲಂಬಳ್ಳಿಯ ಕೇತ ಗಾವುಂಡ, ಮಡಲೂರ ಕಾಳಗಾವುಂಡ ಮುಂತಾದ ಪ್ರಭುಗಾವುಂಡುಗಳು ತಮ್ಮ ತಮ್ಮ ಊರಲ್ಲಿ ಪ್ರತಿವರ್ಷ ಐದು ಪಣವನ್ನು ಕೊಡಲು ತೀರ್ಮಾನಿಸುತ್ತಾರೆ. ಇನ್ನೂ ಹಲವಾರು ಊರಿನ ಗಾವುಂಡುಗಳು ಹೀಗೆಯೇ ಹರಕೆ ಹೊರುತ್ತಾರೆ. ಗವರೆ ಬಣಜಿಗರಲ್ಲಿ ಅಪುತ್ರಿಕ ಧನವು ದೇವರಿಗೆ ಸಲ್ಲತಕ್ಕದ್ದು ಎಂದು ತೀರ್ಮಾನ ವಾಗುತ್ತದೆ. ಅಕ್ಕಸಾಲಿಗಳು ತಮ್ಮ ತಮ್ಮ ಕಮ್ಮಟಗಳಲ್ಲಿ ವರ್ಷವೊಂದಕ್ಕೆ ಒಂದು ಪಣವನ್ನು ಕೊಡಲು, ಅಗಸರಲ್ಲಿ ಮೇದರಲ್ಲಿ ಬೇಡರಲ್ಲಿ ಒಬ್ಬೊಬ್ಬರೂ ಹತ್ತು ವೀಸವನ್ನು ಕೊಡಲು ಒಪ್ಪುತ್ತಾರೆ.

ಈ ಶಾಸನದ[32] ವಿಷಯವನ್ನು ಬೇಕೆಂದೇ ಸ್ವಲ್ಪ ವಿಸ್ತಾರವಾಗಿ ನಿರೂಪಿಸಿದ್ದೇವೆ. ಒಂದು ದೇವಸ್ಥಾನವು ನಿರ್ಮಾಣವಾದಾಗ, ಉಳಿದ ಜನರು ತಮ್ಮ ಕೈಯಲ್ಲಿ ದೇವಸ್ಥಾನವನ್ನು ಕಟ್ಟಿಸುವ ಶಕ್ತಿಯಿಲ್ಲ ದಿದ್ದರೂ, ಆ ಅವಕಾಶವನ್ನು ಉಪಯೋಗಿಸಿಕೊಂಡು ದೇವಸ್ಥಾನಕ್ಕೆ ಸಣ್ಣ ದತ್ತಿಗಳನ್ನು ಕೊಟ್ಟು ತಮ್ಮ ಭಕ್ತಿಯನ್ನು ಸಲ್ಲಿಸುತ್ತಿದ್ದುದರ ಸ್ಪಷ್ಟ ಪರಿಚಯವು ಇಲ್ಲಿ ದೊರೆಯುತ್ತದೆ. ತಮ್ಮ ಸಮಾಜದ ಅಪುತ್ರಿಕ ಧನವು ದೇವರಿಗೆ ಸಲ್ಲಬೇಕೆಂದು ಆ ಸಮಾಜವು ನಿರ್ಧರಿಸಿದಾಗ ಆಡಳಿತವರ್ಗವು ಅದಕ್ಕೆ ಅಡ್ಡಿ ಬರಲಿಲ್ಲ. ಅಲ್ಲದೆ ಇಂತಹ ದತ್ತಿಗಳಿಗೆ ರಾಜನು ನೇರವಾಗಿ ಸಹಾಯಮಾಡಿರುವುದಲ್ಲದೆ, ದತ್ತಿಯ ಭೂಮಿಗಳ

31 EC. VII. Sk. 118. 1054 A.D.

32 EC. VII. Sk. 118, 1054 A.D.

ಕಂದಾಯ ಇತ್ಯಾದಿಗಳನ್ನು ರದ್ದುಮಾಡುತ್ತಿದ್ದನು. ಇದನ್ನೇ ಸರ್ವಬಾಧಾಪರಿಹಾರ[33]ವೆಂದು ಶಾಸನಗಳಲ್ಲಿ ಕರೆದಿರುವುದು.

ದೇವಸ್ಥಾನಕ್ಕೆ ಹೀಗೆ ಬಂದ ದತ್ತಿಗಳನ್ನು ರಕ್ಷಿಸಲು ನಾಲ್ಕಾರು ಜನರನ್ನು ಧರ್ಮದರ್ಶಿಗಳಾಗುವಂತೆ ಕೇಳಿಕೊಳ್ಳುತ್ತಿದ್ದರು, ಅಥವಾ ಒಬ್ಬ ವ್ಯಕ್ತಿಗೆ ಅದರ ಹೊಣೆಯನ್ನು ವಹಿಸುತ್ತಿದ್ದರು. ಶಾಸನವೊಂದರಲ್ಲಿ ದಾನವನ್ನು ಅರಸರು, ಅಧಿಕಾರಿಗಳು ಮತ್ತು ಆರು ಜನ ಗಾವುಂಡರು ರಕ್ಷಿಸುವರು ಎಂದಿದೆ.[34] ಮತ್ತೊಂದು ಶಾಸನದಲ್ಲಿ ದಾನವನ್ನು ಅರಸನೂ, ಊರಿನ ಗಾವುಂಡನೂ ಪ್ರತಿಪಾಲಿಸುವರು ಎಂದಿದೆ.[35] ಕೆಲವು ಸಾರಿ ಅದು ಇಡೀ ಊರಿನ ಸಾಮೂಹಿಕವಾದ ಜವಾಬ್ದಾರಿಯೂ ಆಗುತ್ತಿದ್ದಿತು.[36] ಈ ಜವಾಬ್ದಾರಿ ಹಲವು ರೀತಿಯದು. ದೇವರಿಗೆ ಸೇರಿದ ಭೂಮಿಗಳಿಂದ ಬರುವ ಆದಾಯಗಳನ್ನು ನೋಡಿಕೊಳ್ಳಬೇಕು. ಅದರ ಕೋಶದಲ್ಲಿ ಹಣವಿದ್ದರೆ ಅದನ್ನು ಬಡ್ಡಿಗೆ ಸಾಲವಾಗಿ ಕೊಟ್ಟು ಆ ಬಡ್ಡಿಯನ್ನು ಸರಿಯಾಗಿ ವಿನಿಯೋಗಿಸಬೇಕು. ಒಟ್ಟಿನಲ್ಲಿ ದೇವಸ್ಥಾನದ ಹಣವು ದೇವಸ್ಥಾನಕ್ಕೆ ಸರಿಯಾಗಿ ಸಲ್ಲಬೇಕು. "ಉಪೇಕ್ಷೆಗೆಯ್ಯದವರ್ ತಾವೆ ಮಾಡಿದ ದಾತಾರರಪ್ಪರ್"—ತಮ್ಮ ಹೊಣೆಯನ್ನು ಉಪೇಕ್ಷೆಮಾಡದವರೇ ನಿಜವಾದ ದಾನಿಗಳಾಗುತ್ತಾರೆ ಎಂಬ ಮಾತುಗಳೂ ಅಲ್ಲಲ್ಲಿ ಬರುತ್ತವೆ.[37] ಶಾಸನಗಳ ಕೊನೆಯಲ್ಲಿ ಬರುವ 'ಸ್ವದತ್ತಂ ಪರದತ್ತಂ ವಾ....' ಮುಂತಾದ ಫಲಶ್ರುತಿಯ ಶ್ಲೋಕಗಳನ್ನು ಹಿಂದೆಯೇ ನೋಡಿದ್ದೇವೆ.

## ಆಡಳಿತವರ್ಗ

ದೇವಸ್ಥಾನದ ಅಧಿಕಾರಿವರ್ಗದ ವಿಷಯದಲ್ಲಿ ಶಾಸನಗಳು ಹೆಚ್ಚು ವಿವರಗಳನ್ನು ಒದಗಿಸುತ್ತವೆ. ಇಲ್ಲಿ ಅಧಿಕಾರಿವರ್ಗವೆಂದರೆ ಕಾರ್ಯನಿರತರು, ಬೇರೆ ಬೇರೆ ಹೊಣೆಗಳನ್ನು ಹೊತ್ತಿದ್ದವರು ಎಂದರ್ಥ. ಮೊದಲನೆಯದಾಗಿ, ದೇವರ ಪೂಜೆಯನ್ನು ಮಾಡುವ ಅರ್ಚಕ ಅಥವಾ ಪೂಜಾರಿ.[38] ಇವನ ಕರ್ತವ್ಯ ಸ್ಪಷ್ಟವೇ. ತಿಥಿ ನಕ್ಷತ್ರಾದಿಗಳನ್ನು, ಪುಣ್ಯದಿನಗಳನ್ನು ಪಂಚಾಂಗದ ಸಹಾಯದಿಂದ ಗುಣಿಸಿ ಹೇಳುವವನು ಜ್ಯೋತಿಶ್ಶಾಸ್ತ್ರಜ್ಞ.[39] ಪೂಜೆಗೆ ಹೂಗಳನ್ನೂ ಹೂಮಾಲೆಗಳನ್ನೂ ಒದಗಿಸುವವನು ಮಾಲೆಕಾರ.[40] ಪೂಜೆಗೆ ಬಿಲ್ವ, ತುಳಸಿ ಮುಂತಾದ ಪತ್ರೆಗಳನ್ನು ಒದಗಿಸುವವನು 'ಪತ್ರೆಯನ್ನು ತರುವವನು.'[41] 'ನಂದನವನದಾತಂ'[42] ಎನ್ನುವವನು ದೇವಸ್ಥಾನದ ಪಕ್ಕದಲ್ಲಿ ದೇವಸ್ಥಾನಕ್ಕಾಗಿ ಮೀಸಲಾಗಿದ್ದ ಹೂದೋಟವನ್ನು ನೋಡಿಕೊಳ್ಳುವ ವ್ಯಕ್ತಿ. 'ತೋಟದ ತಳಱ'ನು[43] ಈ ಹೂದೋಟವನ್ನು ಕಾಯುತ್ತಿದ್ದ ವ್ಯಕ್ತಿ. ಪೂಜೆಯ ಸಮಯದಲ್ಲಿ ಅಥವಾ ಪೂಜೆಯ ನಂತರ ಹಾಡುವವರು, ಕೊಳಲನ್ನು ಬಾರಿಸುವವರು[44] (ವಂಶಕಾರ ಅಥವಾ ವಂಶಿಗ), ಹರೆ

---

[33] EC. III. Md. 29, 1131 A.D.
[34] KI. I. 24, 1148 A.D.
[35] BKI. I. i. 63, 1026 A.D.
[36] BKI. I. i. 63, 1028 A.D.
[37] ಅದೇ.
[38] SII. IX. i. 133, 1068 A.D.
[39] SII. IX. i 60, 931 A.D.
[40] SII. IX. i. 133, 1068 A·D.
[41] EC. VII. Hl. 14, 1076 A.D.
[42] EC. V. Hn. 102, 1123 A.D.
[43] EC. XI. Dg. 11, 1066 A.D.
[44] SII. IX. i. 133, 1068 A.D.

ಯನ್ನು ಬಾರಿಸುತ್ತಿದ್ದ ಪಜಿತಿಕಾಜ,[45] ಶಂಖವನ್ನು ಊದುವವನು,[46] ಮುಂತಾದವರಿರುತ್ತಿದ್ದರು. ದೇವಸ್ಥಾನವನ್ನು ಕಾಯುತ್ತಿದ್ದವನು 'ಅಂಗಜಾವದ ಕಾಹಿನವ'ನು.[47] ದೇವರ ಪಳವಿಗೆ ಅಥವಾ ಧ್ವಜವನ್ನು ಹೊರುವವನು 'ಪಾಳವಿಗ'[48] (ಪಳವಿಗೆ =ಧ್ವಜ). ಇದರ ಜೊತೆಗೆ ದೇವರ ಪೂಜೆಯ ಸಮಯದ ಪ್ರಸಾದಕ್ಕೆ, ದೇವಸ್ಥಾನದ ಅಂಗವಾಗಿದ್ದ ಸತ್ರಕ್ಕೆ ಸಂಬಂಧಿಸಿದಂತೆ ಇದ್ದ ಅಡಿಗೆಯವಳ, ದವಸವನ್ನು ಶುದ್ಧಿಗೊಳಿಸಿಕೊಡುವ ದವಸಗಿತಿಯ ಹೆಸರುಗಳೂ ಒಂದೆರಡು ಶಾಸನಗಳಲ್ಲಿವೆ.[49] ಆಗಾಗ್ಗೆ ದೇವಸ್ಥಾನವು ಶಿಥಿಲವಾದರೆ ಅದನ್ನು ನೋಡಿಕೊಳ್ಳಲು ಒಬ್ಬ ಶಿಲ್ಪಿಯನ್ನೇ ನೇಮಿಸಿಕೊಳ್ಳುತ್ತಿದ್ದುದೂ ಉಂಟು[50]. ಇವನನ್ನು 'ರೂವಾರಿ' ಎಂದು, 'ಕಲ್ಕುಟಿಗ'ನೆಂದು ಶಾಸನಗಳಲ್ಲಿ ಕರೆದಿದೆ. ಕೊನೆಯದಾಗಿ 'ಪಾತ್ರ'ದವರು ಅಥವಾ ದೇವದಾಸಿಯರು. ದೇವದಾಸಿ ಪದ್ಧತಿಯನ್ನು ಚರ್ಚಿಸುವ ಮೊದಲು ಒಂದೆರಡು ಅಂಶಗಳನ್ನು ಸ್ಪಷ್ಟಪಡಿಸಬಹುದು. ಮೇಲೆ ಹೇಳಿದ ಉದ್ಯೋಗಿಗಳಿಗೆ ಪ್ರತಿ ತಿಂಗಳು ಅಥವಾ ಪ್ರತಿ ವರ್ಷ ವೇತನವನ್ನು ಕೊಡುತ್ತಿರಲಿಲ್ಲ. ಅವರಿಗೆ ಶಾಶ್ವತವಾಗಿ ಭೂಮಿಯನ್ನು ಬಿಟ್ಟುಕೊಟ್ಟದ್ದರಿಂದ, ಬಹುಮಟ್ಟಿಗೆ ಆ ಭೂಮಿಯ ಆದಾಯದ ಮೇಲೆ ಅವರು ಬದುಕುತ್ತಿದ್ದರು (ಅಥವಾ ಅವರಿಗೆ ಇದರ ಜೊತೆಗೆ ಬೇರೆ ಆಸ್ತಿಯೂ ಇದ್ದಿರಬಹುದು). ಹೀಗಾಗಿ ಅವರೆಲ್ಲರೂ ನಾವು ದೇವರ ಸಂಸಾರಕ್ಕೆ ಸೇರಿದವರು ಎಂಬ ಭಾವನೆಯಿಂದ ಕೆಲಸಮಾಡುತ್ತಿದ್ದಿರಬೇಕು. ಒಂದೆರಡು ಶಾಸನಗಳಲ್ಲಿ ಮಾತ್ರ ಮೇಲಿನ ಉದ್ಯೋಗಿಗಳಿಗೆ ವರ್ಷಕ್ಕೊಮ್ಮೆ ವೇತನವನ್ನು ಹಣದ ರೂಪದಲ್ಲಿ ಸಲ್ಲಿಸುತ್ತಿದ್ದಂತೆ ನಿರೂಪಿತವಾಗಿದೆ. ಈ ಉದ್ಯೋಗಿಗಳಲ್ಲಿ ಎಲ್ಲರೂ ಎಲ್ಲ ದೇವಸ್ಥಾನಗಳಲ್ಲಿಯೂ ಇರುತ್ತಿರಲಿಲ್ಲ ಎನ್ನುವುದನ್ನು ಮತ್ತೆ ಹೇಳಬೇಕಿಲ್ಲ.

## ದೇವದಾಸಿಯರು

ದೇವದಾಸಿಯರು[51] ಎಂದರೆ ಭಗವಂತನ ದಾಸಿಯರು, ದೇವರ ಸೇವೆಗೆ ಮೀಸಲಾದವರು ಎಂದರ್ಥ. ದೇವಸ್ಥಾನಗಳಲ್ಲಿ ಗೀತನೃತ್ಯಗಳ ಮೂಲಕ ಭಗವಂತನ ಸೇವೆಯನ್ನು ಮಾಡಿಕೊಂಡು ಬದುಕುತ್ತಿದ್ದವರು. ಇದು ಭಾರತಕ್ಕೆ ಮಾತ್ರ ವಿಶಿಷ್ಟವಾದ ಸಂಪ್ರದಾಯವಲ್ಲ. ಪ್ರಾಚೀನ ಈಜಿಪ್ಟ್, ಸಿರಿಯ, ಅರೇಬಿಯ ಮುಂತಾದ ಮಧ್ಯಪ್ರಾಚ್ಯ ದೇಶಗಳಲ್ಲಿಯೂ ಈ ಸಂಪ್ರದಾಯವಿತ್ತಲ್ಲದೆ, ದೇವದಾಸಿಯರೊಂದಿಗೆ ಸಂಬಂಧವಿಟ್ಟುಕೊಳ್ಳುವುದು ಪುಣ್ಯಕಾರಿ ಎಂದು ಅಲ್ಲಿನ ಜನ ನಂಬಿದ್ದರು.[52] ಈಗಲೂ ಪಶ್ಚಿಮ ಆಫ್ರಿಕದ ಕೆಲವು ಜನಾಂಗ

---

[45] SII. IX. i. 60, 931 A.D.

[46] EC. VII. Hl. 14, 1076 A.D.

[47] EC. V. Hn. 102, 1123 A.D.

[48] SII. IX. i. 133, 1068 A.D.

[49] EC. XII. Gb. 14, 1140 A.D.

[50] SII. IX. i. 60, 931 A.D. ; EI. XV. p. 87, 1058 A.D. ; SII. IX. i. 101, 1045 A.D.

"ಖಂಡಸ್ಫುಟಿತಂ ಮೊದಲಾಗೆಲ್ಲ ಬೆಸನುಮಂ ನಡೆಯಿಸುವ ರೂವಾರಿ ಮುಚ್ಚೋಜಂಗೆ ಮತ್ತರ್ಪನ್ನೆರಡು."

[51] ಕನ್ನಡ ಶಾಸನಗಳಲ್ಲಿ ಎಲ್ಲಿಯೂ ದೇವದಾಸಿ ಎಂಬ ಪದ ಬಂದಿಲ್ಲ. ಅದರ ಬದಲು "ಸೂಳೆ" ಎಂಬ ಪದ ಬರುವುದೇ ಹೆಚ್ಚು. 'ಪಾತ್ರ' ಎಂಬುದೂ ದೇವದಾಸಿಯನ್ನೇ ಸೂಚಿಸುತ್ತದೆ. ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ (ಕ್ರಿ. ಶ. 1129–30) ದೇವಸ್ಥಾನಗಳಿಗೆ ಕೊಡಬೇಕಾದ ವಸ್ತುಗಳಲ್ಲಿ 'ದಾಸಿಕೆ'ಯರನ್ನೂ ಹೆಸರಿಸಿದೆ– "ಗೃಹಂ ಗ್ರಾಮಸ್ತಥಾ ಭೂಮಿರ್ದಾಸಿಕಾದ್ಯಾ ವಿಭೂಷಣಂ" (1.61). ಇಲ್ಲಿ 'ದಾಸಿಕಾ' ಎಂದರೆ 'ದೇವದಾಸಿ'ಎಂದರ್ಥ.

[52] Encyclopædia of the Social Sciences, XII, p. 533.

ಗಳಲ್ಲಿ ಈ ಸಂಪ್ರದಾಯವಿದೆಯೆಂದು ತಿಳಿದುಬರುತ್ತದೆ.[53] ಭಾರತದ ತಮಿಳುನಾಡಿನಂತಹ[53.1] ಕೆಲವು ಕಡೆಗಳಲ್ಲಿ ಕರ್ನಾಟಕದಲ್ಲಿ ಇಂದಿಗೂ ಈ ಸಂಪ್ರದಾಯ ಸ್ವಲ್ಪಮಟ್ಟಿಗೆ ಉಳಿದುಕೊಂಡು ಬಂದಿದೆ.

ಭಾರತದ ದೇವಸ್ಥಾನಗಳಲ್ಲಿ ಭಗವಂತನನ್ನು ಜೀವಂತ ವ್ಯಕ್ತಿಯೆಂಬಂತೆ ಭಾವಿಸಿ, ವೈಭವದಲ್ಲಿ ಬಾಳುವ ಒಬ್ಬ ವ್ಯಕ್ತಿಯ ಎಲ್ಲ ಭೋಗಗಳನ್ನೂ ಭಗವಂತನಿಗೆ ಅರ್ಪಿಸುವುದು ರೂಢಿಯಲ್ಲಿದೆ. ದೇವದಾಸಿ ಸಂಪ್ರದಾಯದ ಮೂಲ ಇಲ್ಲಿರಬಹುದು. ಕರ್ನಾಟಕದ ಶಾಸನಗಳಲ್ಲಿ ಅಂಗಭೋಗ[54] ಮತ್ತು ರಂಗಭೋಗ[55] ಎಂಬ ಮಾತುಗಳು ಬರುತ್ತವೆ. ವಿಗ್ರಹದ ದೇಹಕ್ಕೆ ಸಲ್ಲುವ ಭೋಗ, ಎಂದರೆ ಸ್ನಾನ, ಗಂಧಲೇಪನ, ಧೂಪ, ದೀಪ, ಪುಷ್ಪ ಇತ್ಯಾದಿಗಳು ಅಂಗಭೋಗಗಳು. ಗರ್ಭಗುಡಿಯ ಮುಂದಿನ ರಂಗದ ಮೇಲೆ, ಎಂದರೆ ದೇವತಾ ಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತ, ನೃತ್ಯಗಳೇ ರಂಗಭೋಗಗಳು. ದೇವದಾಸಿಯರು ರಂಗಭೋಗದ ಉಪಕರಣಗಳು.

ಭಾರತದಲ್ಲಿ ಈ ಸಂಪ್ರದಾಯವು ಅಷ್ಟು ಪ್ರಾಚೀನವಾದುದೇನೂ ಅಲ್ಲ. ಡಾ|| ಅಲ್ಟೇಕರರು ಅದರ ಇತಿಹಾಸವನ್ನು ಸಂಕ್ಷಿಪ್ತವಾಗಿ ಕೊಡುತ್ತಾರೆ–'' ಜಾತಕ ಸಾಹಿತ್ಯದಲ್ಲಿ ಈ ಸಂಪ್ರದಾಯದ ಉಲ್ಲೇಖವಿಲ್ಲ. ಗ್ರೀಕ್ ಲೇಖಕರು ಇದನ್ನು ಹೆಸರಿಸಿಲ್ಲ. ಅರ್ಥಶಾಸ್ತ್ರದಲ್ಲಿ ಗಣಿಕೆಯರ[56] ವಿಷಯವು ವಿಸ್ತಾರವಾಗಿ ಬಂದಿದ್ದರೂ ದೇವದಾಸಿಯರನ್ನು ಹೆಸರಿಸಿಲ್ಲ. ಈ ಸಂಪ್ರದಾಯವು ಬಹುಶಃ ಕ್ರಿ. ಶ. ಮೂರನೆಯ ಶತಮಾನದಲ್ಲಿ ಆರಂಭವಾಗಿರಬಹುದು. ಏಕೆಂದರೆ ಉಜ್ಜಯಿನಿಯ ಮಹಾಕಾಲ ದೇವಸ್ಥಾನದಲ್ಲಿ ನರ್ತಕಿಯರಿದ್ದ ವಿಷಯವನ್ನು ಕಾಳಿದಾಸನು ನಿರೂಪಿಸುತ್ತಾನೆ. (ಮೇಘದೂತ, 1·35). ದೇವಪೂಜೆಯ ಸಂದರ್ಭದಲ್ಲಿ ಸಂಗೀತಕ್ಕಾಗಿ ಸ್ತ್ರೀಯರನ್ನು ನೇಮಿಸಿಕೊಳ್ಳಬೇಕೆಂದು ಹಲವು ಪುರಾಣಗಳು ಹೇಳುತ್ತವೆ. ಈ ಸ್ತ್ರೀಯರು ಸಾಮಾನ್ಯವಾಗಿ ವೇಶ್ಯೆಯರು. ಇವರನ್ನು ದೇವಸ್ಥಾನಗಳಿಗಾಗಿ ಕೊಂಡುಕೊಳ್ಳಬೇಕೆಂದು ಕೆಲವು ಪುರಾಣಗಳು ಸೂಚಿಸುವುದು ವಿಷಾದನೀಯ. ಸೂರ್ಯಲೋಕವನ್ನು ಪಡೆಯಲು ಸೂರ್ಯದೇವಸ್ಥಾನಕ್ಕೆ ಹಲವು ವೇಶ್ಯೆಯರನ್ನು ದಾನವಾಗಿ ಕೊಡುವುದೇ ಉತ್ತಮ ಮಾರ್ಗವೆನ್ನುವಷ್ಟರ ದೂರ ಹೋಗಿದೆ ಭವಿಷ್ಯ ಪುರಾಣ....ಈ ಸಂಪ್ರದಾಯವು ಆರನೆಯ ಶತಮಾನದಲ್ಲಿ ಹೆಚ್ಚಾಗಿ ಹರಡಿರಬೇಕು. ಹ್ಯುಯೆನ್‌ತ್ಸಾಂಗನು (7ನೇ ಶ.) ಮುಲ್ತಾನ್ ಎಂಬಲ್ಲಿನ ಸೂರ್ಯದೇವಸ್ಥಾನದಲ್ಲಿ ಗಾಯಕಿಯರನ್ನು ಕಂಡಂತೆ ಹೇಳುತ್ತಾನೆ. ಕಾಶ್ಮೀರದಲ್ಲಿ ಕ್ರಿ. ಶ. ಏಳನೆಯ ಶತಮಾನದಲ್ಲಿ ಈ ಸಂಪ್ರದಾಯವಿತ್ತೆಂದು ರಾಜತರಂಗಿಣಿಯಿಂದ (IV. 31) ತಿಳಿದುಬರುತ್ತದೆ. ಗುಜರಾತಿನ ಬಹು ಪ್ರಸಿದ್ಧವಾದ ಸೋಮನಾಥ ದೇವಾಲಯದಲ್ಲಿ ಐನೂರ್ವರು ನರ್ತಕಿಯರಿದ್ದಂತೆ ತಿಳಿದುಬರುತ್ತದೆ. ....ರಾಜರಾಜನು ತಂಜಾವೂರಿನ ದೇವಸ್ಥಾನವನ್ನು ಕಟ್ಟಿಸಿದಾಗ (10ನೇ ಶ.) ದೇವಸ್ಥಾನದ ಸೇವೆಗಾಗಿ ನಾನೂರ್ವರು ನರ್ತಕಿಯರನ್ನು ಒದಗಿಸಿದನು."[57]

ಈ ಸಂಪ್ರದಾಯವನ್ನು ಮೊದಮೊದಲು ಬ್ರಾಹ್ಮಣರು ವಿರೋಧಿಸಿದರೂ, ರಾಜರು ಒತ್ತಾಯ ಪೂರ್ವಕವಾಗಿ ಇದನ್ನು ಜಾರಿಗೆ ತಂದದ್ದರ ಫಲವಾಗಿ ಅವರ ಪ್ರತಿಭಟನೆಯಿಂದ ಯಾವ ಪ್ರಯೋಜನವೂ ಆಗಲಿಲ್ಲವೆಂದು ಡಾ|| ಅಲ್ಟೇಕರರು ಅಭಿಪ್ರಾಯಪಡುತ್ತಾರೆ.[58]

---

53 ಅದೇ.

53.1 C. Shivaramamurthy : Indian Epigraphy and South Indian scripts, p. 5.

54 EC. XI. Dg. 11, 1066 A.D. ; SII. IX. i. 172, 1106 A.D.

55 EC. XI. Dg. 74, C 1054 A.D.

56 ಅರ್ಥಶಾಸ್ತ್ರದಲ್ಲಿ ಗಣಿಕೆಯರ ವಿಷಯವೂ, ಅವರ ಮೇಲ್ವಿಚಾರಣೆಗೆ ನಿಯುಕ್ತನಾದ ಗಣಿಕಾಧ್ಯಕ್ಷನ ವಿಷಯವೂ ವಿಸ್ತಾರವಾಗಿ ಒಂದು ಇಡೀ ಅಧ್ಯಾಯದಲ್ಲಿ ಬಂದಿದೆ.-ಕೌಟಿಲ್ಯನ ಅರ್ಥಶಾಸ್ತ್ರ (ಕನ್ನಡಾನುವಾದ: ಕೆ. ಕೃಷ್ಣಭಟ್ಟ), ಪು. 179-82.

57 A.S. Altekar : The Position of Women in Hindu Civilization, pp. 182-3.

58 ಅದೇ.

ಕರ್ನಾಟಕದಲ್ಲಿ ಈ ಸಂಪ್ರದಾಯವು ಏನಿಲ್ಲವೆಂದರೂ ಕ್ರಿ. ಶ. 778–9ರಿಂದ ಕಂಡುಬರುತ್ತದೆ.[58.1] ಪಟ್ಟದ ಕಲ್ಲಿನ ವಿರೂಪಾಕ್ಷದೇವಾಲಯದ ಶಾಸನದಲ್ಲಿ[59] 'ದೇಗುಲದ ಸೂಳೆ'ಯೊಬ್ಬಳು ದಾನ ಕೊಟ್ಟ ವಿಷಯವು ಬಂದಿದೆ—"ಲೋಕಮಹಾದೇವಿಯರ ದೇಗುಲದ ಸೂಳೆ ಗೋಯಿಂದಪೊಡ್ಡಿಯ ಮಗಳು ಬಾದಿ (ಳ) ಪೊಡ್ಡಿಯೆಂಬೊಳ್ ಉತ್ತಮ ಗೋಸಾಸವಿಟ್ಟೊಳ್....". ಇಲ್ಲಿಯ ನಾಮವಾಚಕಗಳ ಉತ್ತರ ಪದ 'ಪೊಡ್ಡಿ' ಎಂಬುದು ಹೊಸಗನ್ನಡದ 'ಬೊಡ್ಡಿ' (=ವೇಶ್ಯೆ)ಯಾಗಿರಬಹುದು. ಕ್ರಿ. ಶ. 802ರ ತಾಮ್ರಪಟವೊಂದರಲ್ಲಿ ಜಿನಭವನದಲ್ಲಿ ನಡೆಯುವ 'ವಾರವಿಲಾಸಿನೀ ವಿರಚಿತ ನೃತ್ತ ಗೀತ ಬಾದ್ಯ' ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ.[60] ಹಿಂದುಗಳ ಈ ಸಂಪ್ರದಾಯವು ಜೈನರ ದೇವಾಲಯಗಳನ್ನು ಪ್ರವೇಶಿಸಿರಬೇಕಾದರೆ, ಕರ್ನಾಟಕದಲ್ಲಿ ಆ ಕಾಲಕ್ಕೆ ದೇವದಾಸಿ ಸಂಪ್ರದಾಯವು ಸ್ಥಿರವಾಗಿ ನಿಂತಿರಬೇಕು, ಸಾಕಷ್ಟು ಪ್ರಚಲಿತವಾಗಿದ್ದಿರಬೇಕು. ಸು. 850ರ ಶಾಸನವೊಂದರಲ್ಲಿ ದೇವಸ್ಥಾನದಲ್ಲಿ ನರ್ತಿಸುತ್ತಿದ್ದ ನಟನೊಬ್ಬನ ಪ್ರಶಂಸೆ ಬಂದಿದೆ.[61] ಮೊದಮೊದಲು ದೇವಸ್ಥಾನಗಳಲ್ಲಿ ರಂಗಭೋಗದ ಅಂಗವಾಗಿ ಪುರುಷರೂ, ಸ್ತ್ರೀಯರೂ ನರ್ತಿಸುತ್ತಿದ್ದು, ಮುಂದೆ ಸ್ತ್ರೀಯರು ಮಾತ್ರ ಆ ಕೆಲಸಕ್ಕೆ ನಿಯುಕ್ತರಾದಂತೆ ಊಹಿಸಬಹುದು[61.1]. ಈ ಶಾಸನವನ್ನು ಬಿಟ್ಟರೆ ಇನ್ನೆಲ್ಲಿಯೂ ಪುರುಷನಟರ ಪ್ರಸ್ತಾಪ ಬಂದಿಲ್ಲ. ಸು. 800ರ ಶಾಸನದಲ್ಲಿ ವಿಜಯೇಶ್ವರ ದೇವಸ್ಥಾನದ ಸೂಳೆ ಚಲಬ್ಬೆಯ ಹೆಸರಿದೆ.[62] ಕ್ರಿ. ಶ. 974ರ ಶಾಸನದಲ್ಲಿ ದೇವರಿಗೆ ಇಬ್ಬರು ಕನ್ನೆಯರನ್ನೂ ಹನ್ನೆರಡು ಹಸುಗಳನ್ನೂ ದಾನವಾಗಿ ಕೊಟ್ಟಂತೆ ಹೇಳಿದೆ.[63] ಹತ್ತನೆಯ ಶತಮಾನದಿಂದೀಚೆಗೆ ಈ ಸಂಪ್ರದಾಯವು ಇನ್ನೂ ಪ್ರಬಲಿಸಿದಂತೆ ಕಾಣುತ್ತದೆ. ಹತ್ತನೆಯ ಶತಮಾನದಿಂದೀಚೆಗೆ ಶಾಸನಗಳಲ್ಲಿ ದೇವದಾಸಿಯರಲ್ಲಿ 'ಪಾತ್ರ' ಮತ್ತು 'ಸೂಳೆ' ಎಂದು ಎರಡು ವಿಭಾಗಮಾಡುವಂತೆ ತೋರುತ್ತದೆ. ಕ್ರಿ. ಶ. 975ರ ಶಾಸನವೊಂದರಲ್ಲಿ ಐವರು ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತ್ಯೇಕವಾಗಿ ದಾನಗಳನ್ನು ಕೊಟ್ಟಿದೆ.[64] ಮತ್ತೊಂದು ಶಾಸನದಲ್ಲಿ ಹನ್ನೆರಡು ಜನ ಸೂಳೆಯರಿಗೆ ಮತ್ತು ಒಂದು ಪಾತ್ರಕ್ಕೆ ಪ್ರತ್ಯೇಕ ದಾನಗಳನ್ನು ಕೊಟ್ಟಿದೆ.[65] 'ಪಾತ್ರ' ಎಂಬ ಪದಕ್ಕೆ ಸಂಸ್ಕೃತದಲ್ಲಿ ಹಲವು ಅರ್ಥಗಳ ಜೊತೆಯಲ್ಲಿ 'ನಟ' ಎಂಬ ಅರ್ಥವೂ ಇದೆ. ಉತ್ತರ ಭಾರತದಲ್ಲಿ ಪಾತರ್, ಪಾತುರ್, ಪಾತುರೀಯ ಎಂದರೆ ವೇಶ್ಯೆ ಎಂದೇ ಅರ್ಥ.[66] ನಟಿಯಂತೆ ಅಲ್ಲಿಂದ ಇಲ್ಲಿಗೆ ಹಾರುವ, ಚಂಚಲಸ್ವಭಾವದ, ಕ್ಷಣಿಕ ಸೌಂದರ್ಯದ ಚಿಟ್ಟೆಯನ್ನು ಪಾತರಗಿತ್ತಿ ಎಂದು ಕರೆಯುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಆದ್ದರಿಂದ ಪಾತ್ರ ಮತ್ತು ಸೂಳೆಯರಿಬ್ಬರೂ ವೇಶ್ಯೆಯರಾದರೂ,

---

58.1 ಸು. ಕ್ರಿ. ಶ. 450ರ ತಾಳಗುಂದದ ಶಾಸನದಲ್ಲಿ ಮಹಾದೇವನ ದೇವಸ್ಥಾನದಲ್ಲಿ ಬ್ರಾಹ್ಮಣರ, ಸ್ನಾತಕರ ವೇದಘೋಷವು ಕೇಳಿಬರುತ್ತಿದ್ದಿತೆಂದು ಶಾಸನವು ನಿರೂಪಿಸುತ್ತದೆ. ಆದರೆ ಅಲ್ಲಿ ದೇವದಾಸಿಯರ ನರ್ತನವು ನಡೆಯುತ್ತಿದ್ದಿತೆಂದು ಸೂಚಿಸಿಲ್ಲ. ಬಹುಶಃ ಆ ಕಾಲಕ್ಕೆ ಕರ್ನಾಟಕದಲ್ಲಿ ದೇವದಾಸೀ ಪದ್ಧತಿಯು ಇದ್ದಿರಲಾರದು.

59 IA. XI. p. 124, 778–9 A.D.

60 EC. IX Nl. 61, 802 A.D. ಕ್ರಿ. ಶ. 1007ರ ಅತ್ತಿಮಬ್ಬೆಯ ಶಾಸನದಲ್ಲಿ (BKI. I. i. 52, 1007 A.D.) ಅವಳು ಕಟ್ಟಿಸಿದ ಬಸದಿಯಲ್ಲಿ ಒಬ್ಬ ಸೂಳೆ ಇದ್ದ ವಿಷಯವು ಬರುತ್ತದೆ.

61 IA. X. P. 167, C. 850 A.D.

61.1 ದಕ್ಷಿಣ ಕನ್ನಡ ಜಿಲ್ಲೆಯ "ನಾಗಮಂಡಲ" ನೃತ್ಯದಲ್ಲಿ ನಾಗದೈವವನ್ನು ಆವಿರ್ಭವಿಸಿಕೊಂಡು ನಿಲ್ಲುವ ವ್ಯಕ್ತಿ 'ಪಾತ್ರಿ' ಎನ್ನಿಸಿಕೊಳ್ಳುತ್ತಾನೆ; ನರ್ತಿಸಿ ನಾಗನನ್ನು ಒಲಿಸುವ ವ್ಯಕ್ತಿಯೇ 'ವೈದ್ಯ'. ಇಬ್ಬರೂ ಪುರುಷರು ಮತ್ತು ಬ್ರಾಹ್ಮಣರು. (ನೋಡಿ–ಶಿವರಾಮಕಾರಂತ : ಯಕ್ಷಗಾನ ಬಯಲಾಟ, ಪು. 100–1).

62 IA. X.p. 170, C. 800 A.D.

63 EC. VII. Hl. 64, 974 A.D.

64 EI. IV. p. 35, 975 A.D.

65 SII. IX. i. 80, 1018 A. D.

66 Encyclopaedia of Religion and Ethics, X, p. 408.

ಇಬ್ಬರೂ ದೇವರ ಸೇವೆಗಾಗಿ ಮೀಸಲಾಗಿದ್ದರೂ, ಅವರಿಬ್ಬರಲ್ಲಿ 'ಪಾತ್ರ' ಶಬ್ದವು ನೃತ್ಯ, ಗೀತಾದಿಗಳಲ್ಲಿ ಪರಿಣತಳಾದವಳನ್ನೂ, 'ಸೂಳೆ' ಶಬ್ದವು ಉಳಿದ ಸೇವಾಕಾರ್ಯಗಳನ್ನು ಮಾಡುವವಳನ್ನೂ ಸೂಚಿಸುತ್ತದೆ ಎಂದಿಟ್ಟು ಕೊಳ್ಳಬಹುದು. ಹನ್ನೊಂದನೇ ಶತಮಾನದ ಶಾಸನಗಳಲ್ಲಿ ಬಳ್ಳಿಗಾವೆಯ 'ತ್ರಿಪುರಾಂತಕ ದೇವರ ಪಾತ್ರ ಪದಮಾವತಿ ಸೂಳೆ'ಯ ಹೆಸರಿದೆ.[67] ಇವಳು ದೇವದಾಸಿಯೂ ಹೌದು, ನರ್ತಕಿಯೂ ಹೌದು ಎಂದು ಭಾವಿಸಬೇಕಾಗುತ್ತದೆ. ದೇವದಾಸಿಯರು ಗೀತ ನೃತ್ಯಗಳಲ್ಲಿ ಪರಿಣತಿಯನ್ನು ಪಡೆದಿದ್ದರೆ ಸಾಲದು, ಸುಂದರಿಯರಾಗಿಯೂ ಇದ್ದಿರಬೇಕು. ದೇವಸ್ಥಾನವನ್ನು ಕಟ್ಟಿಯಾದಮೇಲೆ ಅಂತಹವರಿಗಾಗಿ ಶೋಧನೆ ನಡೆದಂತೆ, ಅವರನ್ನು ದೇಶದ ನಾನಾಭಾಗಗಳಿಂದ ಆರಿಸಿ ತಂದಂತೆ ತಿಳಿದುಬರುತ್ತದೆ. ತಂಜಾವೂರಿನಲ್ಲಿ ರಾಜರಾಜೇಶ್ವರ ದೇವಸ್ಥಾನವನ್ನು ಕಟ್ಟಿಸಿದಾಗ ರಾಜರಾಜನು ನಾನೂರು ನರ್ತಕಿಯರನ್ನು ಹಾಗೆ ಆರಿಸಿ ತರಿಸಿದಂತೆ ತಿಳಿದುಬರುತ್ತದೆ.[68] ಕರ್ನಾಟಕದಲ್ಲಿ ಮಹಾದೇವ ಚಮೂಪತಿಯು ಇಟ್ಟಗಿಯಲ್ಲಿ ತಾನು ಕಟ್ಟಿಸಿದ ಮಹಾದೇವ ದೇವಾಲಯಕ್ಕಾಗಿ ರತಿ ರಂಭೆಯರನ್ನು ಹೋಲುವ 'ಕಾಮಿನಿಯರನಾಯ್ದು ಪುರವರ್ಗದ ಸೂಳೆ'ಯರನ್ನಾಗಿ ಮಾಡಿದಂತೆ ಶಾಸನವೊಂದು ತಿಳಿಸುತ್ತದೆ.[69] ಈ ದೇವದಾಸಿಯರು ದೇವಸ್ಥಾನದ ಅಕ್ಕಪಕ್ಕಗಳಲ್ಲೇ ವಾಸಿಸುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ.[70] ಕೆಲವು ಶಾಸನಗಳಲ್ಲಿ 'ಸೂಳೆವಳ' ಎಂಬ ವ್ಯಕ್ತಿಗೂ ದಾನವನ್ನು ಕೊಟ್ಟಂತೆ ಉಕ್ತವಾಗಿದೆ.[71] ಪಡೆಯ ಮೇಲ್ವಿಚಾರಕ 'ಪಡೆವಳ'[72] ಇದ್ದಂತೆ, ದೇವಸ್ಥಾನದ ಸೂಳೆಯರ ಮೇಲ್ವಿಚಾರಕ ಸೂಳೆವಳ[72.1] ಇರಬಹುದು.

'ಕಂಭದ ನಾಲ್ವರ್ ಸೂಳೆಯರ' ವಿಷಯ ಒಂದು ಶಾಸನದಲ್ಲಿ ಬಂದಿದೆ.[73] 'ಕಂಭದ' ಎಂಬುದರ ವಿವರಣೆ ಸ್ವಲ್ಪ ಕಷ್ಟವೇ. ಇನ್ನೆರಡು ಶಾಸನಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಹೆಚ್ಚು ವಿವರಗಳಿವೆ. ಅವೆರಡೂ ಸೂಡಿಯ ಶಾಸನಗಳು. ಕಿಸುಕಾಡು ಎಪ್ಪತ್ತು ಮುಂತಾದುವನ್ನು ಆಳುತ್ತಿದ್ದ ಅಕ್ಕಾದೇವಿ ಎಂಬಾಕೆಯು ಸೂಡಿಯಲ್ಲಿ ಕ್ರಿ. ಶ. 1054ರಲ್ಲಿ ಅಕ್ಕೇಶ್ವರ ದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ದತ್ತಿಯನ್ನು ಬಿಟ್ಟುಕೊಟ್ಟಿದ್ದಾಳೆ.[74] ಆ ಭಾಗವನ್ನು ಇಲ್ಲಿ ಕೊಡುತ್ತೇವೆ—"........ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ....ಬ್ಬೆಗೆ ಮ 11 ಪೆರ್ಗ್ಗಡೆ ಬಾಳಮೂಕಯ್ಯಂಗೆ ಮ 15 ಬಲದ ದೆಸೆಯ ಮೊದಲ ಕಂಭದ ಸೂಳೆ....ಬ್ಬೆಗೆ ಮ 15 ಅಲ್ಲಿಯ ಕಂಭದ ಸೂಳೆ ಆಸಗಬ್ಬೆಗೆ ಮ 13 ಎಡದ ದೆಸೆಯ ಮೊದಲ ಕಂಭದ ಸೂಳೆ ರೇವಕಬ್ಬೆಗೆ ಮ 13 ಅಲ್ಲಿಯ ಕಂಭದ ಸೂಳೆ ಗುಬ್ಬಿಯ ಚಾವುಂಡಬ್ಬೆಗೆ ಮತ್ತರ್....ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ....ಬ್ಬೆಗೆ ಮ 12 ಅಲ್ಲಿಯ ಕೇರಿಯ ಚಾಮರದ ಸೂಳೆ ಚಿಟ್ಟಯಬ್ಬೆಗೆ ಮ 12 ಎಡದ ದೆಸೆಯ ಕೇರಿಯ ಚಾಮರದ ಸೂಳೆ ಗುಬ್ಬಿಯ ಕೇತಬ್ಬೆಗೆ ಮ 12 ಬಲದ ದೆ[ಸೆ]ಯ ಪಾತ್ರಂ ಸೂಳೆ....ವಕಬ್ಬೆಗೆ ಮ 12 ಎಡದ ದೆಸೆಯ ಪಾತ್ರಂ ಸೂಳೆ ಗಾರ್ಗಬ್ಬೆಗೆ ಮ 12 ಎಡಪಕ್ಕದ ಕೇರಿಯ ಸೂಳೆ ಮೈಲಬ್ಬೆಗೆ ಮ 1[2] ಬಲಪಕ್ಕದ ಕೇರಿಯ ಸೂಳೆ ಜಕ್ಕಬ್ಬೆಗೆ ಮತ್ತರುಂ 12 ಇಂತೀ ಮರ್ಯಾದೆಯಂ ತಪ್ಪದೆ ಪ್ರತಿಪಾಳಿ....". (ಮ=ಮತ್ತರ್). ಇಲ್ಲಿನ ಸೂಳೆಯರ ಪಟ್ಟಿಯನ್ನು ಒಂದು ಕ್ರಮದಲ್ಲಿ ಕೊಡುತ್ತೇವೆ—

---

67 MAR (1929). p. 130, C. 1070 A.D.

68 The Rāṣṭrakūṭas and their Times, p. 294.

69 EI. XIII. p. 41. 1112 AD.

70 EI. XV. p. 87, 1058 A.D.

71 SII. IX. i. 80, 1018 A.D. ; SII. IX. i. 101, 1045 A.D.

72 "ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ ವಳ್ಳಂ ಆಯ್ತು ಪ್ರತ್ಯಯಂಗಳಕ್ಕುಂ....ಪ್ರಯೋಗಂ- ಅಡಪವಳಂ, ಮಡಿವಳಂ, ಪಡೆವಳಂ,...." (ಶಬ್ದಮಣಿದರ್ಪಣ, ಪು. 166)

72.1 'ಸೂಳೆವಳ'ನು ಅರ್ಥಶಾಸ್ತ್ರದ 'ಗಣಿಕಾಧ್ಯಕ್ಷ'ನನ್ನು ಹೋಲುತ್ತಾನೆ.

73 SII. IX. i. 112, 1053 A.D.

74 EI. XV. p. 82, 1054 A.D.

| | | |
|---|---|---|
| ಎಡದ ಪಕ್ಕದ ಕೇರಿಯ ಮೊದಲ ದೆಸೆಯ ಬಿಟ್ಟಿಯ ಚಾಮರದ ಸೂಳೆ | — | ಬಲದ ದೆಸೆಯ ಬಿಟ್ಟಿಯ ಚಾಮರದ ಸೂಳೆ. |
| ಎಡದ ದೆಸೆಯ ಮೊದಲ ಕಂಭದ ಸೂಳೆ | — | ಬಲದ ದೆಸೆಯ ಮೊದಲ ಕಂಭದ ಸೂಳೆ. |
| ಕಂಭದ ಸೂಳೆ | — | ಕಂಭದ ಸೂಳೆ. |
| ಎಡದ ದೆಸೆಯ ಕೇರಿಯ ಚಾಮರದ ಸೂಳೆ | — | ಕೇರಿಯ ಚಾಮರದ ಸೂಳೆ, |
| ಎಡದ ದೆಸೆಯ ಪಾತ್ರಂ ಸೂಳೆ | — | ಬಲದ ದೆಸೆಯ ಪಾತ್ರಂ ಸೂಳೆ. |
| ಎಡವಕ್ಕದ ಕೇರಿಯ ಸೂಳೆ | — | ಬಲವಕ್ಕದ ಕೇರಿಯ ಸೂಳೆ. |
| ? | — | ಬಲದ ಮಾಡದ ಪಾತ್ರಂ ಸೂಳೆ. |

ಇಲ್ಲಿ ಬರುವ 'ಕೇರಿ' ಎಂಬ ಪದವನ್ನು ನೋಡಿದರೆ ದೇವದಾಸಿಯರು ವಾಸಿಸುವ ಬೀದಿಯನ್ನು ವರ್ಣಿಸುವಂತೆ ಭಾವಿಸಲು ಮನಸ್ಸಾಗುತ್ತದೆ. 'ಮಾಡ' (=ಮಹಡಿ) ಎಂಬುದೂ ಇದೇ ಸಂದೇಹವನ್ನು ದೃಢಪಡಿಸುತ್ತದೆ. ಆದರೆ ಚಾಮರ ಹಾಕುವ ವೃತ್ತಿಯನ್ನು, ನರ್ತಿಸುವ ವೃತ್ತಿಯನ್ನು ('ಪಾತ್ರಂ ಸೂಳೆ') ನೋಡಿದರೆ ಗರ್ಭಗುಡಿಯ ಮುಂಭಾಗದಲ್ಲಿ ಬೇರೆಬೇರೆ ಕರ್ತವ್ಯಗಳನ್ನು ಹೊತ್ತು ಬೇರೆಬೇರೆ ಕಂಬಗಳ ಹತ್ತಿರ ನಿಂತುಕೊಳ್ಳುವ, ಬಹುಶಃ ಹಾಡುವ, ನರ್ತಿಸುವ ಅಥವಾ ಅಲಂಕಾರಕ್ಕಾಗಿ ನಿಂತುಕೊಳ್ಳುವ ದೇವದಾಸಿಯರನ್ನು, ಅವರ ವೃತ್ತಿಗಳನ್ನು, ಸ್ಥಾನಗಳನ್ನು ಹೆಸರಿಸಿರುವಂತೆ ಕಾಣುತ್ತದೆ. ಈ ಎರಡು ರೀತಿಯ ವಿವರಣೆಗಳಲ್ಲಿ ಎರಡನೆಯ ವಿವರಣೆ ನಮಗೆ ಹೆಚ್ಚು ಸಮ್ಮತ.[75] ಸೂಳೆಗೂ 'ಪಾತ್ರಂ ಸೂಳೆ'ಗೂ ವ್ಯತ್ಯಾಸವನ್ನು ಊಹಿಸಬಹುದು. ಎರಡನೆಯವಳು ನೃತ್ಯಾದಿ ಅಭಿನಯಗಳನ್ನು ಮಾಡುವವಳು. 'ಪಾತ್ರ'ದವರನ್ನು ಮತ್ತು 'ಕಂಬದ ನಾಲ್ವರ'ನ್ನು ಬೇರೆಯಾಗಿ ಹೇಳುವುದನ್ನು ನೋಡಿದರೆ (SII. XX. No. 300) ಪಾತ್ರ ಮತ್ತು ಸೂಳೆ ಇಬ್ಬರೂ ಬೇರೆ ಎಂದು ಕಾಣುತ್ತದೆ. 'ಪಾತ್ರ'ದಾಕೆಗೆ ಎಂಟು ಮತ್ತರು, ಸೂಳೆಗೆ ಮೂರು ಮತ್ತರು ಜಮಿನು ದತ್ತಿ ಕೊಟ್ಟಿರುವುದನ್ನು ನೋಡಿದರೆ, ಸೂಳೆಗಿಂತ ಪಾತ್ರದವಳು ಮೇಲಿನವಳೆಂಬುದು ಸ್ಪಷ್ಟವಾಗುತ್ತದೆ. ಪಾತ್ರದವಳು ಬಹುಶಃ ನರ್ತನಾದಿಗಳನ್ನು ಮಾಡುವವಳು ಎಂಬುದು ಇದರಿಂದ ಸಮರ್ಥಿತವಾಗುತ್ತದೆ. ಆದರೆ ಚಾಮರದ ಸೂಳೆಗೂ, ಬಿಟ್ಟಿಯ ಚಾಮರದ ಸೂಳೆಗೂ ವ್ಯತ್ಯಾಸವೇನು? ಬಿಟ್ಟಿ (ಸಂ. ವಿಷ್ಟಿ) ಎಂದರೆ ಹಣವನ್ನು ತೆಗೆದುಕೊಳ್ಳದೆ ಕೆಲಸವನ್ನು ಮಾಡುವುದು. ಆದರೆ ಮೇಲಿನ ಶಾಸನದಲ್ಲಿ ಬಿಟ್ಟಿಯ ಚಾಮರದ ಸೂಳೆಗೂ ದತ್ತಿಯನ್ನು ಬಿಟ್ಟುಕೊಟ್ಟಿದೆ. ಹೀಗಾಗಿ ಅವರಿಬ್ಬರಿಗಿದ್ದ ವ್ಯತ್ಯಾಸವನ್ನು ಹೇಳುವುದು ಕಷ್ಟ.

ಅದೇ ಸೂಂಡಿಯ ನಾಗೇಶ್ವರ ದೇವಸ್ಥಾನದ ದೇವದಾಸಿಯರಿಗೆ ದತ್ತಿಗಳನ್ನು ಬಿಟ್ಟುಕೊಟ್ಟ ಶಾಸನದ[76] ಭಾಗ ಈ ರೀತಿ ಇದೆ–"ದೇವರ ಭೋಗಕ್ಕೆ ನಡೆವ ಪಿರಿಯರವಾಳ ಸೂಳೆಗೆ ಮತ್ತರ್ 20 ಪೆರ್ಗಡೆವಾಳ ಸೂಳೆಗೆ ಮತ್ತರ್ 15 ಬಲವಕ್ಕದೆಡವಕ್ಕದ ಕಂಬದ ಸೂಳೆಯರ್ ನಾಲ್ವರ್ಗ್ಗಂ ಮತ್ತರ್ 48 ಬಲವಕ್ಕದೆಡವಕ್ಕದ ಚಾಮರದ ಸೂಳೆಯರ್ ನಾಲ್ವರ್ಗ್ಗಂ ಮತ್ತರ್ 48 ಪಾತ್ರ ನಾಲ್ವರ್ಗ್ಗಂ ಮತ್ತರ್ 48 ಭೋಗದ ಸೂಳೆಯರಿಬ್ಬರ್ಗಂ ಮತ್ತರ್ 24....". 'ಕಂಬ' ಎನ್ನುವುದು ಗರ್ಭಗುಡಿಯ ಮುಂದಿನ ರಂಗಮಂಟಪದ ಕಂಬಗಳನ್ನು ಸೂಚಿಸುತ್ತದೆ. ಎಂಬ

[75] ಈ ಶಾಸನದಲ್ಲಿ ಬರುವ 'ಎಡ', 'ಬಲ'ಗಳು 'ಎಡಗೈ' 'ಬಲಗೈ'ಗಳೆಂಬ ಪಂಗಡಗಳನ್ನು ಸೂಚಿಸುತ್ತವೆಯೆಂದು ಡಾ|| ಸಾಲೆತ್ತೂರ್ ಅಭಿಪ್ರಾಯಪಡುತ್ತಾರೆ (Social and Political Life in Vijayanagara Empire, II, p.68). ಆದರೆ ಈ ಅಭಿಪ್ರಾಯವು ಸಾಧುವಾದುದಲ್ಲವೆಂಬುದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ನಮಗೆ ತಿಳಿದಮಟ್ಟಿಗೆ ಕ್ರಿ.ಶ. 1150ರವರೆಗಿನ ಕರ್ನಾಟಕದ ಶಾಸನಗಳಲ್ಲಿ ಎಲ್ಲಿಯೂ 'ಎಡಗೈ', 'ಬಲಗೈ' ಪಂಗಡಗಳ ಉಲ್ಲೇಖವಿಲ್ಲ.

[76] EI. XV. p. 87, 1058 A.D.

ಮೇಲಿನ ನಮ್ಮ ಊಹೆಯನ್ನೇ ಈ ಶಾಸನವೂ ದೃಢಪಡಿಸುತ್ತದೆ. ಈ ನಾಗೇಶ್ವರವನ್ನು ಕಟ್ಟಿಸಿದ ನಾಗದೇವಯ್ಯನು ದೇವಸ್ಥಾನದ ಪಕ್ಕದಲ್ಲೇ ಸೂಳೆಗೇರಿಯನ್ನು ಕಟ್ಟಿಸಿದನು ಎಂದು ಅದೇ ಶಾಸನ ತಿಳಿಸುತ್ತದೆ. ಅದೇ ರೀತಿ, ಕ್ರಿ. ಶ. 1112ರ ಶಾಸನದಲ್ಲಿ ದಂಡನಾಥ ಅನಂತಮಯ್ಯ ಪುಲಿಗೆರೆಯ ಸ್ವಯಂಭೂ ದೇವಾಲಯದ ಮುಂದೆ, ಅದಕ್ಕೆ ಸೇರಿದ 'ಸೂಳೆಕೇರಿ'ಯನ್ನು ಮಾಡಿಸಿದನೆಂದಿದೆ. ಅಲ್ಲಿಯ 'ಪಾತ್ರಪಾವುಳ'ಕ್ಕೆ ಮಾತ್ರವಲ್ಲದೆ, ಹೊರಗಿನಿಂದ ಬಂದ ಸೂಳೆಯರಿಗೂ ದತ್ತಿಗಳನ್ನು ಕೊಟ್ಟಂತೆ ಅಲ್ಲಿ ಹೇಳಿದೆ (SII. XX. No. 74).

ದೇವದಾಸಿಯರೆಲ್ಲರೂ ವೇಶ್ಯೆಯರೇ ಆಗಿದ್ದರೂ ವೇಶ್ಯೆಯರೆಲ್ಲರೂ ದೇವದಾಸಿಯರಲ್ಲ. ದೇವಸ್ಥಾನದ ದತ್ತಿಗಳಲ್ಲಿ 'ಸೂಳೆ' ಎಂಬ ಮಾತು ಬಂದರೆ ಅದು ದೇವದಾಸಿಯನ್ನು ಸೂಚಿಸುತ್ತದೆ. ಬೇರೆಯ ಕಡೆ ಬಂದಾಗ ಅದು ವೇಶ್ಯೆಯನ್ನು ಸೂಚಿಸುತ್ತದೆ. "ಮಯ್ದುಮರಸರ ಸೂಳೆ ಕಾಡಚ್ಚಿ ಕಾಡಚ್ಚಿಯ ಮಗಳ್ ಕಾಡಬ್ಬೆ".–[77] ಇಲ್ಲಿ ಕಾಡಚ್ಚಿ ಬರಿಯ ವೇಶ್ಯೆ ಎಂಬುದು ಸ್ಪಷ್ಟ. ದೇವದಾಸಿಯರ ವಿಷಯದಲ್ಲೂ, ವೇಶ್ಯೆಯರ ವಿಷಯದಲ್ಲೂ ಶಾಸನಗಳಲ್ಲಿ ಸಾಕಷ್ಟು ಗೌರವಭಾವನೆಯೇ ಇದೆ. ಈಗ ಅವರಿಬ್ಬರಿಗಿರುವ ನಿಕೃಷ್ಟಸ್ಥಾನ ಆಗ ಇದ್ದಿರಲಾರದು. ದೇವದಾಸಿಯರ ಕುಲ, ಅವರು ದೇವದಾಸಿಯರಾಗಿರಲು ನಿರ್ಧರಿಸಿದ್ದಕ್ಕೆ ಕಾರಣ, ದೇವದಾಸಿಯಾಗುವಾಗ ನಡೆಯುತ್ತಿದ್ದ ವಿಧಿಗಳು–ಇತ್ಯಾದಿ ವಿಷಯಗಳ ಮೇಲೆ ಶಾಸನಗಳು ಸಾಕಷ್ಟು ಬೆಳಕು ಚೆಲ್ಲುವುದಿಲ್ಲ.

ದಕ್ಷಿಣ ಭಾರತದಲ್ಲಿ ಈ ಸಂಪ್ರದಾಯವು ಈಗಲೂ ಇದೆ. ಆಂಧ್ರ[78], ತಮಿಳು ನಾಡು[79]ಗಳಲ್ಲಿ ಈಗಲೂ ದೇವದಾಸಿ ಕುಲಗಳಿವೆ. ತಮಿಳುನಾಡಿನ ರಾಮೇಶ್ವರದ ದೇವಸ್ಥಾನದಲ್ಲಿ ಪ್ರಾತಃಕಾಲ ಅರ್ಚಕರೊಡನೆ ಒಬ್ಬ ದೇವದಾಸಿಯು ಬ್ರಾಹ್ಮಣಿಯಂತೆ ವಸ್ತ್ರಗಳನ್ನುಟ್ಟು ರುದ್ರಾಕ್ಷಿಗಳನ್ನು ಧರಿಸಿ ದೇವಸ್ಥಾನಕ್ಕೆ ಬರುತ್ತಾಳೆ. ಅವಳನ್ನು ತಮಿಳಿನಲ್ಲಿ 'ಮುಜಕ್ಕೈಕಾರೀ' ಎನ್ನುತ್ತಾರೆ.[80] ಉತ್ತರ ಕರ್ನಾಟಕದ ಅಂಚಿನಲ್ಲಿರುವ ಗೋವಾದಲ್ಲಿನ ಮಂಗೇಶ ದೇವಸ್ಥಾನದಲ್ಲಿ ಆರು ಜನ ದೇವದಾಸಿಯರಿದ್ದಾರೆ. ಸೋಮವಾರದ ಪೂಜೆಯ ಸಮಯದಲ್ಲಿಯೂ, ಉಳಿದ ಹಬ್ಬಗಳ ಸಮಯದಲ್ಲಿಯೂ ಅವರು ದೇವಸ್ಥಾನಗಳಲ್ಲಿ ನರ್ತನ ಮಾಡುತ್ತಾರೆ.[81] ಗೋವಾದಲ್ಲಿ ಮಲ್ಯದ ವಿಷ್ಣು ದೇವಸ್ಥಾನದಲ್ಲಿಯೂ ದೇವದಾಸಿಯರಿದ್ದಾರೆ.[82] ಇವರನ್ನು 'ಭಾವಿನ್' ಎಂದು ಕರೆಯುತ್ತಾರೆ. ದೇವಸ್ಥಾನದಲ್ಲಿ ದೇವದಾಸಿಯಾಗಿ ಕೆಲಸಮಾಡಲು ಒಪ್ಪಿಕೊಂಡ ವ್ಯಕ್ತಿ ದೇವಸ್ಥಾನಕ್ಕೆ ಹೋಗಿ ದೇವರ ಪೂಜೆಯನಂತರ ದೀಪದಿಂದ ಎಣ್ಣೆಯನ್ನು ತೆಗೆದುಕೊಂಡು ತನ್ನ ತಲೆಗೆ ಹಚ್ಚಿಕೊಳ್ಳುತ್ತಾಳೆ.[83] ಕರ್ನಾಟಕದಲ್ಲಿ ಬನವಾಸಿಯ ಮಧುಕೇಶ್ವರ, ಸಿದ್ಧಾಪುರ ತಾಲೂಕಿನ ಇಟಗಿ, ಭುವನಗಿರಿ ದೇವಾಲಯಗಳಲ್ಲಿ ಈಗಲೂ ದೇವದಾಸಿಯರಿದ್ದಾರೆ. ದೇವದಾಸಿ ಸಂಪ್ರದಾಯವು ಕೆಳವರ್ಗದ ಜನರಲ್ಲಿ ಹಿಂದೆ ಅತ್ಯಂತ ಪ್ರಬಲವಾಗಿದ್ದು ಇತ್ತೀಚೆಗೆ ಕಡಮೆಯಾಗುತ್ತಿದೆ (ದೇವದಾಸಿಯರನ್ನು 'ಬಸವಿ' ಎಂದು ಕರೆಯುತ್ತಾರೆ. ಇಲ್ಲಿ ಬಸವಿಯಾಗಲಿರುವ ಸ್ತ್ರೀಗೂ ದೇವರಿಗೂ ವಿವಾಹವೇ ನಡೆಯುತ್ತದೆ. ವಿವರಗಳಿಗೆ ಶ್ರೀ ಎಚ್. ವಿ. ನಂಜುಂಡಯ್ಯನವರ ಗ್ರಂಥವನ್ನು ನೋಡಬಹುದು)[84]. ಈ ದೇವ

---

[77] EC. XI. Dg. 17, 889 A.D.

[78] M. K. Gandhi : Women and Social Injustice, p. 155.

[79] ಅದೇ, ಪುಟ. 158.

[80] IA. XII. p. 316.

[81] The Illustrated Weekly of India (25.2.1962), p. 33.

[82] ಅದೇ.

[83] K. Raghunathaji : 'Bombay dancing girls' (IA. XIII. p. 172).

[84] H. V. Nanjundayya : The Ethnographical Survey of Mysore, I. p. 17; II. p. 8; III. P. 12 *etc*.

ದೇವದಾಸಿಯರಿಗೂ 'ಬಸವಿ'ಯರಿಗೂ ಒಂದು ಪ್ರಧಾನ ವ್ಯತ್ಯಾಸವಿರುವುದನ್ನು ಗುರುತಿಸಬಹುದು. ಬಹುಶಃ ದೇವದಾಸಿಯರ ವೃತ್ತಿಯು ಒಂದು ರೀತಿಯಲ್ಲಿ ತಲೆಯಿಂದ ತಲೆಗೆ ಹರಿದುಕೊಂಡು ಬರುತ್ತದೆ. ಬಸವಿಯರದು ಬೇರೆ. ಒಬ್ಬ

ವಾಸಿ ಸಂಪ್ರದಾಯ ಯಾವ ಘನವಾದ ಉದ್ದೇಶದಿಂದಲೇ ಆರಂಭವಾಗಿರಬಹುದು, ಇದು ಹರಿಜನರ ಸಮಸ್ಯೆಯಂತೆ ನಮ್ಮ ದೇಶದ ಪ್ರಗತಿಗೆ ತಕ್ಕಮಟ್ಟಿಗೆ ಅಡ್ಡಿಯಾಯಿತು ಎಂಬುದರಲ್ಲಿ ಸಂದೇಹವಿಲ್ಲ. ಗಾಂಧೀಜಿ ಮುಂತಾದ ಸಾಮಾಜಿಕ ಕಾರ್ಯಕರ್ತರ ಪ್ರಯತ್ನಗಳಿಂದ ಜನರು ದಿನೇ ದಿನೇ ಈ ವಿಷಯದಲ್ಲಿ ಎಚ್ಚೆತ್ತುಕೊಳ್ಳುತ್ತಿದ್ದಾರೆ.

## ದೇವಸ್ಥಾನ-ಮಠ

ಪ್ರಾಚೀನ ಕರ್ನಾಟಕದ ದೇವಸ್ಥಾನಗಳಿಗೂ ಮಠಗಳಿಗೂ ಇದ್ದ ಸಂಬಂಧವು ವಿಚಾರಯೋಗ್ಯವಾದುದು. ಇಲ್ಲಿ ಮುಖ್ಯವಾಗಿ ಲಕುಲೀಶ–ಪಾಶುಪತರ ದೇವಸ್ಥಾನಗಳನ್ನೂ, ಮಠಗಳನ್ನೂ ಗಮನದಲ್ಲಿರಿಸಿಕೊಂಡಿದ್ದೇವೆ. ನಮ್ಮ ಮುಂದೆ ಮುಖ್ಯವಾಗಿ ಏಳುವ ಪ್ರಶ್ನೆ ಇದು–ಶಾಸನಗಳನ್ನು ಓದುತ್ತಿದ್ದರೆ ಸನ್ಯಾಸಿಗಳು ದೇವಸ್ಥಾನಗಳಲ್ಲೇ ವಾಸಿಸುತ್ತ, ತಮ್ಮ ತಪೋಕರ್ಮದ ಜೊತೆಗೆ ವಿದ್ಯಾದಾನವನ್ನೂ ಮಾಡುತ್ತಿದ್ದಂತೆ ಭಾವನೆ ಬರುತ್ತದೆಯಾದ್ದರಿಂದ ದೇವಸ್ಥಾನವೇ ಮಠವಾಗಿದ್ದಿತೆ? ಅಥವಾ ದೇವಸ್ಥಾನದಿಂದ ಭಿನ್ನವಾದ ಮಠವಿದ್ದಿತೆ? ದೇವಸ್ಥಾನಕ್ಕೂ ಮಠಕ್ಕೂ ಸಂಬಂಧವೇನು? ಈ ವಿಷಯದ ಮೇಲೆ ಬೆಳಕು ಬೀರುವ ಹಲವು ಶಾಸನಗಳನ್ನು ನೋಡೋಣ.

ಲಕುಲೀಶ–ಪಾಶುಪತ ಸನ್ಯಾಸಿಗಳಲ್ಲಿ ಹಲವರು ದೇವಸ್ಥಾನಗಳ ಸ್ಥಾನಪತಿಗಳಾಗಿದ್ದುದರಿಂದ ದೇವಸ್ಥಾನಗಳಿಗೆ ದತ್ತಿಗಳನ್ನು ಕೊಡುವಾಗ ಅವರ ಒಪ್ಪಿಗೆಯ ಅವಶ್ಯಕತೆ ಇದ್ದಿತು; ದತ್ತಿಗಳನ್ನು ಕೊಡುತ್ತಿದ್ದುದು ಅವರ ಸಾನ್ನಿಧ್ಯದಲ್ಲಿ, ಅವರ ಕಾಲು ತೊಳೆದು.[85] ಹಲವರನ್ನು ದೇವಸ್ಥಾನದ ಆಚಾರ್ಯರೆಂದು ಶಾಸನಗಳು ಕರೆದಿರುವುದುಂಟು. ಉದಾಹರಣೆಗೆ 'ಮೋರಕಂಡಿಯ ಡವಕೇಶ್ವರದಾಚಾರ್ಯ ಕಾಳಾಮುಖ ನಿರಂಜನ ಪಂಡಿತ'ರನ್ನು ನೋಡಬಹುದು.[86] ಸನ್ಯಾಸಿಗಳನ್ನು ಹೆಸರಿಸುವಾಗ ಅವರ ವಿಶೇಷಣವಾಗಿ ಅವರ ಮೇಲ್ವಿಚಾರಣೆಯಲ್ಲಿದ್ದ ದೇವಸ್ಥಾನಗಳನ್ನು ಹೆಸರಿಸುತ್ತಿದ್ದರು. ಉದಾಹರಣೆಗೆ, 'ಮೂಲಸ್ಥಾನದ ರೇವಬ್ಬೆಗೊರವಿ'[87]; 'ಶ್ರೀಮನ್ಮುಳುಗುಂದದ ಸೋಭನೇಶ್ವರದ ಶ್ರೀ ಭಾವಶಿವದೇವ.'[88] ದೇವಸ್ಥಾನಗಳಿಗೆ ದತ್ತಿಗಳನ್ನು ಬಿಟ್ಟುಕೊಡುವಾಗ ಧೂಪ, ದೀಪ ಇತ್ಯಾದಿಗಳ ಜೊತೆಯಲ್ಲಿ ಯತಿಗಳ ಆಹಾರದಾನ ಇತ್ಯಾದಿಗಳನ್ನೂ ಗಮನದಲ್ಲಿರಿಸಿಕೊಂಡಿರುವುದು ಕಂಡು ಬರುತ್ತದೆ.[89] ಹಲವು ಶಾಸನಗಳಲ್ಲಿ ದೇವಸ್ಥಾನವೇ ಯತಿಗಳ ವಾಸಸ್ಥಾನವಾಗಿದ್ದಿತೆಂಬ ಭಾವನೆ ಬರುವಂತೆ ನಿರೂಪಿತವಾಗಿದೆ. ಉದಾಹರಣೆಗೆ "ಅಗ್ರಹಾರಂ ಕರ್ದುಗಿನ ಸ್ವಯಂಬು ದೇವರ ದೇಗುಲದ ಪೂಲಿಯ ಪಂಡಿತರ ವಿದ್ಯಾ ಶಿಷ್ಯರ್."[90] ಇದರ ಅರ್ಥ ಆ ದೇವಸ್ಥಾನಕ್ಕೆ ಸಂಬಂಧಿಸಿದವರು ಎಂದಿರಬಹುದು. ಮಠಗಳ ಹೆಸರನ್ನು ಹೇಳುವಾಗ ಸಾಮಾನ್ಯವಾಗಿ ಅವು ಸಂಬಂಧವನ್ನು ಪಡೆದಿದ್ದ ದೇವಸ್ಥಾನಗಳ ಹೆಸರನ್ನು ಹೇಳುತ್ತವೆ, ಶಾಸನಗಳು. ಉದಾಹರಣೆಗೆ, ಮುಳುಗುಂದದ ನಗರೇಶ್ವರದ ಮಠ[91]; ವಿಕ್ರಮಪುರದ ಶ್ರೀ

---

ಹುಡುಗಿಯ ತಾಯಿ ತಂದೆಯರು ಯಾವುದೋ ಕಾರಣಕ್ಕಾಗಿ ತಮ್ಮ ಮಗಳನ್ನು ದೇವರಿಗೆ ಅರ್ಪಿಸುವುದಾಗಿ ಹರಕೆ ಹೊತ್ತುಕೊಳ್ಳುತ್ತಾರೆ. ಇದು ದೇವರಿಗೆ 'ಬಸವ' ಅಥವಾ ಗೂಳಿಯನ್ನು ಬಿಟ್ಟಂತೆ. ಆದ್ದರಿಂದಲೇ ಅವರನ್ನು 'ಬಸವಿ'ಯರೆಂದು ಕರೆದಿರಬಹುದು. 'ಬಸವಿ'ಯೂ ಕೂಡ ದೇವರ ಸೇವೆಯಲ್ಲಿರುವ ದೇವದಾಸಿಯೇ. ನಮಗೆ ತಿಳಿದಮಟ್ಟಿಗೆ ಕ್ರಿ.ಶ. 1150ರ ವರೆಗಿನ ಯಾವ ಶಾಸನದಲ್ಲಿಯೂ 'ಬಸವಿ' ಎಂಬ ಮಾತು ಬಂದಿಲ್ಲ.

85 BKI. I. i. 41; 46.
86 ಕಪಟರಾಳ ಕೃಷ್ಣರಾಯ: ಕರ್ನಾಟಕ ಲಾಕುಳಶೈವರ ಇತಿಹಾಸ, ಪು. 45.
87 BKI. I. i. 52.
88 BKI. I. i. 64.
89 BKI. I. i. 85; EC. VII. SK. 99.
90 BKI. I. i. 48.
91 BKI. I. i. 97.

ಸ್ವಯಂಭು ನಗರೇಶ್ವರ ದೇವರ ಮಠ[92]; ಶ್ರೀ ಪರ್ವತದಗಸ್ತ್ಯೇಶ್ವರದ ಸಂತತಿಯ ಮಠ[93] ಇತ್ಯಾದಿ. ಇದು ಸಾಮಾನ್ಯ ನಿಯಮ. ಇಲ್ಲೆಲ್ಲಾ ದೇವಸ್ಥಾನವೇ ಮುಖ್ಯ, ಮಠ ಅದರ ಅಂಗ. ಮಠವಿರುವುದು ದೇವಸ್ಥಾನಕ್ಕೆ ಸಂಬಂಧಿಸಿದ ಮುನಿಗಳ ವಾಸಸ್ಥಳವಾಗಿ. ಆದರೆ ಒಂದೆರಡು ಕಡೆ, ಬಹು ವಿರಳವಾಗಿ, ದೇವಸ್ಥಾನವು ಮಠದ ಅಂಗವಾಗಿ ಕಾಣಿಸಿಕೊಳ್ಳುವುದುಂಟು. ಉದಾಹರಣೆಗೆ 'ಬಾವಿಯ ಮಠದ ಶ್ರೀ ಕಲಿದೇವಸ್ವಾಮಿ ದೇವರು'[94]; 'ಪಟ್ಟಕೆಱೆಯ ಮಠದ ಪ್ರತಿಬದ್ಧ ಬೇಲೇಜ ಜೋಗೇಶ್ವರದ ಮೂಲಸ್ಥಾನ....'[95]—ಇಲ್ಲಿಯೂ ಕೂಡ ಆಯಾ ಮಠವು ಯಾವುದೋ ದೇವಸ್ಥಾನದ ಅಂಗವಾಗಿದ್ದು ಜನರ ಬಾಯಲ್ಲಿ ಮಾತ್ರ ಯಾವುದೋ ಕಾರಣದಿಂದ ಬೇರೊಂದು ಹೆಸರನ್ನು ಪಡೆದಿದ್ದಿರಬಹುದು. ಇದಕ್ಕೆ ಒಳ್ಳೆಯ ಉದಾಹರಣೆ ಬಳ್ಳಿಗಾವೆಯ ಕೋಡಿಯ ಮಠ. ಆದರ ನಿಜವಾದ ಹೆಸರು ಕೇದಾರೇಶ್ವರ ಮಠ. ಅದು ಕೇದಾರೇಶ್ವರ ದೇವಸ್ಥಾನದ ಅಂಗವಾಗಿದ್ದಿತು. ಆ ಮಠದ ಸಮೀಪದಲ್ಲಿ ಕೆರೆಯ ಕೋಡಿಯಿದ್ದುದರಿಂದ ಕೋಡಿಯ ಮಠವೆಂದು ಕರೆದಿದ್ದಿರಬಹುದು.

ಇಲ್ಲಿ ಬಹು ಸಂಕ್ಷಿಪ್ತವಾಗಿ ಕೇದಾರೇಶ್ವರ ದೇವಸ್ಥಾನ ಮತ್ತು ಮಠಗಳ ಪರಿಚಯವನ್ನು ಮಾಡಿಕೊಡ ಬಹುದು. ಪ್ರಾಚೀನ ಕರ್ನಾಟಕದ ಅತಿ ಪ್ರಸಿದ್ಧ ಶೈವಮಠವೆಂದರೆ ಇದೇ. ಕೇದಾರೇಶ್ವರ ದೇವಸ್ಥಾನವು ಕೇದಾರಪರ್ವತದಂತೆ ಇದ್ದಿತೆಂದೂ, ಅಲ್ಲಿ ತಪಸ್ಸುಮಾಡುತ್ತಿದ್ದ ದಿವ್ಯತಪೋಧನರು ಕೇದಾರಪರ್ವತದ ತಪಸ್ವಿಗಳಿಗೆ ಸಮಾನರೆಂದೂ, ಆ 'ಮಠ'ವನ್ನು ಹಲವು ಸ್ಥಾನಪತಿಗಳು ಬೆಳಗಿದರೆಂದೂ ಒಂದು ಶಾಸನವು ತಿಳಿಸುತ್ತದೆ.[96], ಆ ದೇವಸ್ಥಾನವು 'ಶಿವಲಿಂಗ ಪೂಜಾ ಪುಳಕ ಸಸ್ಯ ಸರಸ ಕೇದಾರ ಸ್ಥಾನ'ವಾಗಿದ್ದಿತಲ್ಲದೆ 'ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜನಾನುಷ್ಠಾನನಿಷ್ಠಿತ ಸ್ಥಾನ'ವೂ ಆಗಿದ್ದಿತು.[97] ಇಲ್ಲಿಯೂ, ದೇವಸ್ಥಾನವೂ ಮಠವೂ ಅಭಿನ್ನ ಎಂಬ ಭಾವನೆ ಬರಬಹುದು. ಆದರೆ ಶಾಸನಗಳಲ್ಲಿ ದೇವಸ್ಥಾನವನ್ನೂ ಮಠವನ್ನೂ ಸ್ಪಷ್ಟವಾಗಿ ಬೇರೆ ಬೇರೆ ಹೆಸರಿಸಿರುವ ನಿದರ್ಶನಗಳುಂಟು. ಉದಾಹರಣೆಗೆ 'ಭಾವನಗಂಧವಾರಣ'ನೆಂದು ಪ್ರಸಿದ್ಧನಾಗಿದ್ದ ಒಬ್ಬ ವ್ಯಕ್ತಿಯು ಕಲ್ಯಾಣದಲ್ಲಿ ತುಂಬೇಶ್ವರವನ್ನೂ (ಅದಕ್ಕೆ ಸಂಬಂಧಿಸಿದಂತೆ) ಮಠವನ್ನೂ, ನಂದವಾಡಿಗೆಯಲ್ಲಿ ಶ್ರೀ ನಾಗಲೇಶ್ವರವನ್ನೂ ಅಲ್ಲಿಯ ಮಠವನ್ನೂ ಕಟ್ಟಿಸಿದಂತೆ ಒಂದು ಶಾಸನವು ಹೇಳುತ್ತದೆ.[98] ಅವನು ಇನ್ನೂ ಹಲವೆಡೆ ಕೇವಲ ದೇವಸ್ಥಾನಗಳನ್ನು ಮಾತ್ರ ಕಟ್ಟಿಸಿದಂತೆ ಅದೇ ಶಾಸನವು ಹೇಳುತ್ತದೆ.[99] ಬಹುಶಃ ಅಲ್ಲಿ ತಪಸ್ವಿಗಳಿದ್ದಿಲ್ಲವಾದ್ದರಿಂದ ಆ ಸ್ಥಳಗಳಲ್ಲಿ ಮಠಗಳನ್ನು ಕಟ್ಟಿಸುವ ಅಗತ್ಯವಿರಲಿಲ್ಲ.

ಇಷ್ಟು ಸಾಮಗ್ರಿಯ ಆಧಾರದ ಮೇಲೆ ಕೆಲವು ತೀರ್ಮಾನಗಳಿಗೆ ಬರಬಹುದು. ದೇವಸ್ಥಾನಕ್ಕೆ ಹೊಂದಿಕೊಂಡಂತೆ, ಅವುಗಳ ಅಂಗವಾಗಿ ಮಠವಿದ್ದಿತು. ಮಠಕ್ಕೆ ಪ್ರತ್ಯೇಕ ಅಸ್ತಿತ್ವವಿದ್ದಿಲ್ಲ. ಆದ್ದರಿಂದ ಒಂದು ರೀತಿಯಲ್ಲಿ ಅವೆರಡೂ ಅಭಿನ್ನ. ಸನ್ಯಾಸಿಗಳು ವಾಸಿಸುತ್ತಿದ್ದುದು ಮಠದಲ್ಲಿ. ಮಠವು ದೇವಸ್ಥಾನಕ್ಕೆ ಹೊಂದಿಕೊಂಡಂತೆ, ಅಥವಾ ಒಂದೇ ಆವರಣದಲ್ಲಿ ಬಹು ಸಮೀಪದಲ್ಲಿರುತ್ತಿದ್ದಿತು. ದೇವಸ್ಥಾನದ ಆಸ್ತಿಯೂ ಮಠದ ಆಸ್ತಿಯೂ ಒಂದೇ; ಅಥವಾ ಮಠಕ್ಕೆ ಪ್ರತ್ಯೇಕ ಆಸ್ತಿಯೇ ಇದ್ದಿಲ್ಲ. ಒಂದು ದೇವಸ್ಥಾನದ ಅಥವಾ ಮಠದ ಅಧಿಪತಿಯ ಅಧೀನದಲ್ಲಿ ಹಲವಾರು ದೇವಸ್ಥಾನಗಳಿರುತ್ತಿದ್ದುವು.[100] ಸಂಸ್ಥೆಯ ದೃಷ್ಟಿಯಿಂದ ನೋಡಿದರೆ

---

92 BKI. I. i. 116.
93 SII. IX. i. 128.
94 BKI. I. ii. 149.
95 BKI. I. ii. 126.
96 EC. VII. Sk. 100.
97 EC. VII. Sk. 103.
98 BKI. I. i. 103.
99 ಅದೇ.
100 BKI. I. i. 64; BKI. I. ii. 156.

ದೇವಸ್ಥಾನವೂ ಮಠವೂ ಅಭಿನ್ನವಾಗಿರುವುದರಿಂದ ಈ ಪ್ರಬಂಧದಲ್ಲಿ ದೇವಸ್ಥಾನವನ್ನೂ ಮಠವನ್ನೂ ಒಂದೇ ಎಂದು ಭಾವಿಸಿ ವಿಚಾರಮಾಡಿದ್ದೇವೆ. ದೇವಸ್ಥಾನದ ಅಂಗವಾಗಿ ಮಠಗಳು ಕಾಣಿಸಿಕೊಳ್ಳಲಾರಂಭವಾದದ್ದು ಕ್ರಿ. ಶ. ಆರು ಅಥವಾ ಏಳನೇ ಶತಮಾನಗಳಿಂದೀಚೆಗೆ. ಎಂದರೆ ಕರ್ನಾಟಕದಲ್ಲಿ ಲಾಕುಳ ಶೈವಧರ್ಮವು ಪ್ರಚಾರವಾದ ಬಳಿಕ. ತಮಿಳುನಾಡಿನ ಮಠಗಳ ಇತಿಹಾಸವೂ ಇದನ್ನೇ ಪೋಷಿಸುತ್ತದೆ. ಅಲ್ಲಿನ ಅತ್ಯಂತ ಪ್ರಾಚೀನ ಮಠಗಳು ಕ್ರಿ. ಶ. 7ನೆಯ ಶತಕದ ಜ್ಞಾನಸಂಬಂಧರಿಗೆ ಸಂಬಂಧಿಸಿದುವು.[101] (ಜ್ಞಾನ ಸಂಬಂಧರು ತಮಿಳುನಾಡಿನ ಶೈವಧರ್ಮಕ್ಕೆ ಸೇರಿದವರು).

## ಸ್ಥಾನಪತಿ

ಸ್ಥಾನಪತಿ ಅಥವಾ ಸ್ಥಾನಿಕ ಎಂದರೆ ದೇವಸ್ಥಾನದ ಮುಖ್ಯಾಧಿಕಾರಿ. ತಮಿಳುನಾಡಿನ ರಾಮೇಶ್ವರದ ದೇವಸ್ಥಾನದಲ್ಲಿ ದೇವಸ್ಥಾನದ ಬೀಗದಕೈಗಳನ್ನು ತನ್ನ ವಶದಲ್ಲಿಟ್ಟುಕೊಂಡು ಆಭರಣಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ವ್ಯಕ್ತಿಯನ್ನು 'ಸ್ಥಾನಿಕಾರ್' ಎಂದು ಕರೆಯುತ್ತಾರೆ.[102] ಕನ್ನಡ ಶಾಸನಗಳಲ್ಲಿ 'ಸ್ಥಾನಿಕ' ಎಂಬ ಮಾತನ್ನು ಬರಿಯ ಮುಖ್ಯಸ್ಥ ಎಂಬ ಸಾಮಾನ್ಯಾರ್ಥದಲ್ಲಿ ಕೆಲವೆಡೆ ಬಳಸಿದೆ. ಸನ್ಯಾಸಿಯಲ್ಲದಿದ್ದರೂ ದೇವಸ್ಥಾನಕ್ಕೆ ಮುಖ್ಯಸ್ಥನಾದ ವ್ಯಕ್ತಿಯನ್ನು ಸ್ಥಾನಿಕ ಎಂದು ಕೆಲವು ಕಡೆ ಕರೆಯಲಾಗಿದ್ದರೂ[103] ಸನ್ಯಾಸಿಯಾಗಿ, ದೇವಸ್ಥಾನದಲ್ಲಿ ಅಥವಾ ಅದಕ್ಕೆ ಸಂಬಂಧಿಸಿದ ಮಠದಲ್ಲಿ ವಾಸಿಸುತ್ತ, ಅದರ ಆಡಳಿತದ ಮೇಲ್ವಿಚಾರಕನಾಗಿ, ತಪಸ್ವಿಯಾಗಿ ವಿದ್ಯಾದಾನಮಾಡುತ್ತಿದ್ದ ಶೈವ ಸನ್ಯಾಸಿಯನ್ನು ಸ್ಥಾನಿಕ ಎಂದು ಅನೇಕ ಕಡೆಗಳಲ್ಲಿ ಕರೆದಿದೆ. ಈ ಶೈವ ಸ್ಥಾನಿಕರ ವಿಷಯವನ್ನು 'ಶೈವಧರ್ಮ' ಎಂಬ ಅಧ್ಯಾಯದಲ್ಲಿ ಚರ್ಚಿಸಿದ್ದೇವೆ. ಒಂದು ದೇವಸ್ಥಾನದಲ್ಲಿ ಹಲವರು ಸನ್ಯಾಸಿಗಳಿದ್ದರೆ, ಅವರಲ್ಲಿ ಹಿರಿಯನಾದವನು ಸ್ಥಾನಿಕನಾಗುತ್ತಿದ್ದನು. ಈ ಸ್ಥಾನಿಕರು ಗ್ರಾಮ ಜೀವನದಲ್ಲಿ ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸುತ್ತಿದ್ದರು. ಊರಿನಲ್ಲಿ ಯಾವ ಪ್ರಮುಖ ಕಾರ್ಯವಾದರೂ ಅವರ ಸಾಕ್ಷಿಯಲ್ಲಿ ನಡೆಯುತ್ತಿದ್ದಿತು.[104] ತಮ್ಮ 'ಸ್ಥಾನ'ಕ್ಕೆ ಅನ್ಯರಿಂದ ಚ್ಯುತಿ ಒದಗಿದಾಗ ಆ ದೇಶದ ಚಕ್ರವರ್ತಿಯನ್ನು ಕಂಡು ನಷ್ಟವನ್ನು ಸರಿಪಡಿಸಿಕೊಳ್ಳುವಷ್ಟು ಪ್ರಭಾವಶಾಲಿಗಳಾಗಿದ್ದರು. ಉದಾಹರಣೆಗೆ, ಕುರುಗೋಡಿನ ದೇವಸ್ಥಾನದ ಆಸ್ತಿಯನ್ನು ಪುಟ್ಟಿಗಳ್ಳ ಎಂಬಾತನು ಆಕ್ರಮಿಸಿಕೊಂಡಾಗ, ಸ್ಥಾನಪತಿ ಗಡ್ಡದ ರುದ್ರರಾಶಿಭಟ್ಟಾರರು ರಾಷ್ಟ್ರವನ್ನು ಆಳುತ್ತಿದ್ದ ಚಕ್ರವರ್ತಿಯನ್ನು ಕಂಡು ಅರುವತ್ತೆರಡು ಮತ್ತರು ಭೂಮಿಯನ್ನು ಸರ್ವಬಾಧಾಪರಿಹಾರವಾಗಿ ಪಡೆಯುತ್ತಾರೆ.[105] ಶಾಸನವೊಂದರಲ್ಲಿ ದೇವಸ್ಥಾನದ ಬೇರೆ ಬೇರೆ ಉದ್ಯೋಗಿಗಳಿಗೆ ಕೊಟ್ಟಿರುವ ದಾನಗಳನ್ನು ಹೇಳಿದನಂತರ ಈ ಮಾತುಗಳು ಬರುತ್ತವೆ—"ಇಂತೀ ಪರಿಗ್ರಹವೆಲ್ಲಂ ದೇವರ್ಗಂ ತಪೋಧನರ್ಗಂ ಬೆಸಕೆಯ್ವುದಿಣ್ಬರ್ ಅಲ್ಲಿ ದುಷ್ಟರಂ ತಪೋಧನರ್ ದಂಡಿಸಿ ನಡೆಯಿಸುವರ್".[106] ಎಂದರೆ, ದೇವಸ್ಥಾನದ ಸಮಸ್ತ ಪರಿಚಾರಕವರ್ಗವೂ ಸ್ಥಾನಪತಿಗಳ ಅನುಜ್ಞೆಯಂತೆ ವರ್ತಿಸಬೇಕಾಗಿತ್ತು. ಇವರ 'ಸ್ಥಾನ'ವನ್ನು 'ನೈಷ್ಠಿಕಸ್ಥಾನ'ವೆಂದೂ, ಇವರನ್ನು 'ನೈಷ್ಠಿಕ ಬ್ರಹ್ಮಚಾರಿ'ಗಳೆಂದೂ ಶಾಸನಗಳಲ್ಲಿ ವರ್ಣಿಸಿದೆ. ಇವರಲ್ಲಿ ದುರ್ವ್ಯಸನಿಗಳಾಗಿ, ದೇವಸ್ಥಾನದ ಆಸ್ತಿಯನ್ನು ವ್ಯಯಿಸುತ್ತ ಲೋಕದ ಅಪವಾದವನ್ನು ಲೆಕ್ಕಿಸದ ಸನ್ಯಾಸಿಗಳನ್ನು ಶಾಸನಗಳು ಕಟುವಾಗಿ ಖಂಡಿಸಿವೆ.[107] ದೇವಸ್ಥಾನದ ದೇವದಾಸಿಯರಿಗೆ ಇವರು ಮನಸೋತು ಭ್ರಷ್ಟರಾದ

[101] S. V. Venkateshwara : Indian Culture through the Ages, p. 250.

[102] IA. XII. p. 316.

[103] EC. III. My. 38, C. 1100 A.D.

[104] EC. XI. Cd. 76, 937 A.D.

[105] SII. IX. i. 65, 947 A.D.

[106] SII. IX. i. 86, 1093 A.D.

[107] BKI. I. ii. 152, 1103 A.D.

ವಿಷಯವನ್ನು ಕೆಲವು ಶಾಸನಗಳು ಸೂಚಿಸಿವೆ. ಭಕ್ತರಿಂದ ಪಡೆದ ಹಣವನ್ನು ಸುಕ್ಕು ಜಡೆಗಳ ಸಂದುಗಳಲ್ಲಿ ಮುಚ್ಚಿಟ್ಟು ಮಿಂಡಿದೊತ್ತುಗಳಿಗೆ ಕೊಡುತ್ತಿದ್ದ 'ತುಡುಗುಣಿ ಗೊರವ'ರನ್ನು ಒಂದು ಶಾಸನವು ಹಾಸ್ಯಮಾಡಿದೆ.[108]

ಡಾ|| ಬಿ. ಎ. ಸಾಲೆತ್ತೂರ್ ಅವರು ಸ್ಥಾನಿಕರು ಮತ್ತು ಅವರ ಐತಿಹಾಸಿಕ ಪ್ರಾಮುಖ್ಯವನ್ನು ಕುರಿತು ವಿಸ್ತಾರವಾದ ಮತ್ತು ವಿಚಾರಪೂರಿತವಾದ ಲೇಖನವನ್ನು ಬರೆದಿದ್ದಾರೆ.[109] ಅವರ ಪ್ರಕಾರ ಕೌಟಿಲ್ಯನ ಅರ್ಥ ಶಾಸ್ತ್ರದಲ್ಲಿ ತೆರಿಗೆಗಳನ್ನೆತ್ತುವ ಕೆಲಸಕ್ಕೆ ಸಂಬಂಧಿಸಿದ ಅಧಿಕಾರಿಗೆ ಸ್ಥಾನಪತಿ ಎಂಬ ಹೆಸರಿದ್ದು ಮುಂದೆ, ದೇವಸ್ಥಾನದ ಭೂಮಿಗಳ ಆದಾಯವನ್ನು ನೋಡಿಕೊಳ್ಳುವ ಅಧಿಕಾರಿಗೂ ಸ್ಥಾನಪತಿ ಎಂಬ ಹೆಸರು ಬಂದಿತು.[110] ಈ ಸ್ಥಾನಪತಿಗಳೆಲ್ಲರೂ ಸಾಮಾನ್ಯವಾಗಿ ಬ್ರಾಹ್ಮಣ ಕುಲದವರು ಎಂಬ ಅವರ ತೀರ್ಮಾನವು[111] ಪ್ರಶ್ನಾರ್ಹ ವಾದುದು. ಜೈನ ಬಸದಿಗಳ ಮುಖ್ಯಸ್ಥರಿಗೂ ಸ್ಥಾನಪತಿ ಎಂಬ ಹೆಸರಿದ್ದುದನ್ನು ಅವರೇ ಗಮನಿಸಿದ್ದಾರೆ.[112] ಹಲವು ಸಂಖ್ಯೆಯ ಕಾಳಾಮುಖ ಗುರುಗಳು ಸ್ಥಾನಪತಿಗಳಾಗಿದ್ದರು. ಅವರನ್ನೂ, ತಪಸ್ವಿಗಳಲ್ಲದ ಲೌಕಿಕ ಬ್ರಾಹ್ಮಣರನ್ನೂ ಒಂದುಮಾಡುವುದು ಅಷ್ಟು ಉಚಿತವಲ್ಲ. (ಲಾಕುಳ ಶೈವರಲ್ಲಿಯೂ ವೈದಿಕ ಸಂಪ್ರದಾಯಗಳಿದ್ದ ಅಂಶವನ್ನು, ಬ್ರಾಹ್ಮಣರು ಅವರನ್ನು ಗೌರವಿಸುತ್ತಿದ್ದ ಅಂಶವನ್ನು ಹಿಂದಿನ ಅಧ್ಯಾಯವೊಂದರಲ್ಲಿ ನೋಡಿದ್ದೇವೆ.)[112.1] ಅವರು ದೇವಸ್ಥಾನದಲ್ಲಿ ಪೂಜೆಯ ಕೆಲಸಕ್ಕೆ ನಿಯುಕ್ತರಾಗಿರುವ ಪೂಜಾರಿ ಮುಂತಾದ ಉದ್ಯೋಗಿಗಳಿಂದ ಭಿನ್ನ ಎಂಬುದನ್ನು ಗಮನಿಸಿರುವುದು ಉಚಿತವಾಗಿದೆ. ದೇವಸ್ಥಾನದಲ್ಲಿ ತಪಸ್ವಿಗಳಿಲ್ಲದೆಡೆ ಸಂಸಾರಿಗಳಾಗಿರುತ್ತಿದ್ದ ಬ್ರಾಹ್ಮಣರು ಸ್ಥಾನಿಕರಾಗಿರುತ್ತಿದ್ದರು. ಹೊಯ್ಸಳ ಸಾಮ್ರಾಜ್ಯದಲ್ಲಿ ಸ್ಥಾನಿಕರಿಗೆ ರಾಜನೇ ನೇರವಾಗಿ ಪತ್ರವನ್ನು ಬರೆದು ತೆರಿಗೆಗಳನ್ನು ಹಾಕಿ, ದೇಶದ ಧಾರ್ಮಿಕ ಅಭಿವೃದ್ಧಿಗೆ ಕಾರಣವಾಗಲು ಮತ್ತು ತನ್ನ ಒಳಿತಿಗಾಗಿ ಪಾರ್ಥನೆಗಳನ್ನು ನಡೆಯಿಸಲು ಕೇಳಿಕೊಳ್ಳುತ್ತಿದ್ದನು.[113] ಸ್ಥಾನಿಕರ ಪದವಿ ಬಹು ಹೊಣೆಗಾರಿಕೆಯದೆಂಬುದು ಇದರಿಂದ ವ್ಯಕ್ತವಾಗುತ್ತದೆ. ಹದಿನಾರನೆಯ ಶತಮಾನದ ಶಾಸನಗಳಿಂದ ರಾಜನೇ ನೇರವಾಗಿ ಸ್ಥಾನಿಕರನ್ನು ನೇಮಿಸುತ್ತಿದ್ದನು ಎಂಬ ತೀರ್ಮಾನಕ್ಕೆ ಬರಬಹುದು ಎನ್ನುತ್ತಾರೆ.[114] ಆದರೆ ನಾವು ಆರಿಸಿಕೊಂಡಿರುವ ಕಾಲದಲ್ಲಿ (ಕ್ರಿ. ಶ. 450–1150) ಇದಕ್ಕೆ ಆಧಾರ ಸಾಲದು.

ಡಾ|| ಎನ್. ವೆಂಕಟರಮಣಯ್ಯನವರ ಪ್ರಕಾರ ವಿಜಯನಗರದ ಕಾಲದ ಸ್ಥಾನಿಕರ ಕರ್ತವ್ಯಗಳು ಇಷ್ಟು–"ದೇವಸ್ಥಾನಕ್ಕೆ ಸೇರಿದ್ದ ಭೂಮಿಗಳನ್ನು ನೋಡಿಕೊಳ್ಳುವುದು ; ದೇವಸ್ಥಾನದ ಪರವಾಗಿ ಧನರೂಪದ, ಭೂಮಿರೂಪದ ದತ್ತಿಗಳನ್ನು ಸ್ವೀಕರಿಸುವುದು ; ಭೂಮಿಯನ್ನು ಕೊಂಡುಕೊಂಡು ದೇವಸ್ಥಾನದ ಆಸ್ತಿಯನ್ನು ಹೆಚ್ಚಿಸುವುದು ; ಉತ್ಸವಗಳಿಗೆ ಹಣ ಬೇಕಾದಾಗ ಭೂಮಿಯನ್ನು ಮಾರುವುದು ; ಹೊಲದ ಆಧಾರದ ಮೇಲೆ ದೇವಸ್ಥಾನದ ಹಣವನ್ನು ಬಡ್ಡಿಗೆ ಸಾಲವಾಗಿ ಕೊಡುವುದು ; ಸಾಲ ತೀರಿಸಿದಾಗ ಅಡವಿಟ್ಟಿದ್ದ ಹೊಲವನ್ನು ವಶಪಡಿಸಿಕೊಳ್ಳುವುದು ; ದೇವಸ್ಥಾನದ ಭೂಮಿಯನ್ನು ರೈತರಿಗೆ ಗೇಣಿಯಾಗಿ ಕೊಡುವುದು ; ದೇವಸ್ಥಾನದ

[108] EC. XII. Ck. 30, 1149 A.D.

[109] B. A Saletore : The Sthānikas and their Historical Importance (Reprinted from the Journal of the Bombay University. VII. i, pp. 1–65).

[110] ಅದೇ, ಪು. 4.

[111] ಅದೇ, ಪು. 20.

[112] ಅದೇ, ಪು. 16–17.

[112.1] ಈ ಗ್ರಂಥದ 'ಶೈವಧರ್ಮ' ಅಧ್ಯಾಯದಲ್ಲಿ 'ಶೈವರು ಮತ್ತು ವೈದಿಕರು' ಎಂಬ ಉಪವಿಭಾಗವನ್ನು ನೋಡಿ.

[113] B. A. Saletore : The Sthānikas and their Historical Importance (Reprinted from the Journal of the Bombay University, VII. i. p. 43).

[114] ಅದೇ, ಪು. 51.

ಐಶ್ವರ್ಯದ ಮೇಲ್ವಿಚಾರಣೆ; ದೇವಸ್ಥಾನದಲ್ಲಿ ನಡೆಯುವ ಅಪರಾಧಗಳ ವಿಚಾರಣೆ."[115] ಇದು ನಮ್ಮ ಕಾಲದ ಸ್ಥಾನಿಕರಿಗೂ ಬಹುಮಟ್ಟಿಗೆ ಅನ್ವಯಿಸುತ್ತದೆ.

## ದೇವಸ್ಥಾನ-ವಿದ್ಯಾಕೇಂದ್ರ

ದೇವಸ್ಥಾನವು ಮುನಿಗಳ ವಾಸಸ್ಥಾನವಾಗಿದ್ದುದು ಮಾತ್ರವಲ್ಲ, ದೊಡ್ಡ ವಿದ್ಯಾಕೇಂದ್ರವೂ ಆಗಿದ್ದಿತು. 'ಮಠ' ಎಂಬ ಪದಕ್ಕೆ '(ಯತಿಗಳ) ವಾಸಸ್ಥಾನ' ಎಂಬುದು ಮೂಲಾರ್ಥ. ಅಂತಹ ವಾಸಸ್ಥಾನಗಳಲ್ಲಿ ವಿದ್ಯಾದಾನ ನಡೆಯುತ್ತಿದ್ದುದರಿಂದ 'ವಿದ್ಯಾಕೇಂದ್ರ, ಪಾಠಶಾಲೆ' ಎಂಬ ಅರ್ಥಗಳು ಬಂದಿರಬೇಕು. ಅಮರಕೋಶದಲ್ಲಿ[116] 'ಶಿಷ್ಯರಿರುವ ಸ್ಥಳ' ಎಂಬ ಅರ್ಥವನ್ನು ಕೊಟ್ಟಿದೆಯಾದರೂ ಈಗಲೂ ಹಳ್ಳಿಗಳಲ್ಲಿ ಪಾಠಶಾಲೆಗಳನ್ನು 'ಮಠ', 'ಸಾಲೆಮಠ' ಎಂದು ಕರೆಯಲು ಬಹುಮಟ್ಟಿಗೆ ಪ್ರಾಚೀನ ದೇವಸ್ಥಾನಗಳೇ ಕಾರಣ (ಇತ್ತೀಚಿನವರೆಗೂ ಹಳ್ಳಿಗಳಲ್ಲಿ ಪಾಠ ಪ್ರವಚನಗಳು ದೇವಸ್ಥಾನಗಳಲ್ಲಿ ನಡೆಯುತ್ತಿದ್ದವು ಎಂಬುದನ್ನು ಇಲ್ಲಿ ನೆನೆಯಬಹುದು). ಸಮಾಜದಲ್ಲಿ ವಿದ್ಯಾಭ್ಯಾಸದ ಕೇಂದ್ರವಾಗಿ ದೇವಸ್ಥಾನವು ವಹಿಸಿದ ಪಾತ್ರವನ್ನು ಇನ್ನೊಂದು ಅಧ್ಯಾಯದಲ್ಲಿ ವಿಸ್ತಾರವಾಗಿ ಚರ್ಚಿಸಲಾಗುತ್ತದೆ. ಆದರೂ ಬಹುಜನ ವಿದ್ವಾಂಸರ ಗಮನಕ್ಕೆ ಬಂದಿರುವ ಬಳ್ಳಿಗಾವೆಯ ಕೇದಾರೇಶ್ವರ ಸ್ಥಾನದ ಪರಿಚಯವನ್ನು ಇಲ್ಲಿ ಮಾಡಿಕೊಡುತ್ತೇವೆ. ಬಳ್ಳಿಗಾವೆಯಲ್ಲೆಲ್ಲ ಇದು ಅತ್ಯಂತ ಪ್ರಸಿದ್ಧವಾದ ದೇವಸ್ಥಾನವಾಗಿತ್ತು.[117] 'ಕೋಡಿಯಮಠ' ಎಂಬುದು ಇದರ ಇನ್ನೊಂದು ಹೆಸರು. ಕೋಡಿಯ ಮಠವು ಸು. 1073ರಲ್ಲಿ ಅಸ್ತಿತ್ವಕ್ಕೆ ಬಂದಿರಬೇಕು ಎಂದು ಡಾ|| ಎ. ವೆಂಕಟಸುಬ್ಬಯ್ಯನವರು ಊಹಿಸುತ್ತಾರೆ.[118] ಹನ್ನೆರಡನೆಯ ಶತಮಾನದಲ್ಲಿ ಇದು ತನ್ನ ಕೀರ್ತಿಯ ಶಿಖರವನ್ನು ಮುಟ್ಟಿತು. ಆ ಶತಮಾನದ ಶಾಸನವೊಂದು[119] ಅದನ್ನು ಈ ರೀತಿ ವರ್ಣಿಸಿದೆ—"ಶಿವಲಿಂಗ ಪೂಜೆಯಿಂದ ಎದ್ದಂತಹ ಪುಳಕಗಳೆಂಬ ಸಸ್ಯಗಳಿರುವ ಸುಂದರ ಕೇದಾರಸ್ಥಾನ (=ಹೊಲ)ವೇ ದಕ್ಷಿಣ ಕೇದಾರಸ್ಥಾನ. ಅದು ನೈಷ್ಠಿಕ ಬ್ರಹ್ಮಚಾರಿ ಮತ್ತು ಶಿವಮುನಿ ಜನಗಳ ತಪಸ್ಸಿನ ಸ್ಥಾನ. ವೇದ, ವ್ಯಾಕರಣ, ಪುರಾಣ, ದರ್ಶನಾದಿಗಳ ವಿದ್ಯಾಸ್ಥಾನ. ದೀನ, ಅನಾಥ, ಅಂಧ, ಬಧಿರ, ಗಾಯಕಾದಿ ನಾನಾ ಭಿಕ್ಷುಗಳಿಗೆ ದಾನಸ್ಥಾನ. ಅನಾಥ ರೋಗಿಗಳಿಗೆ ಭೈಷಜ್ಯಸ್ಥಾನ (=ವೈದ್ಯಶಾಲೆ).[120] ಸಕಲಪ್ರಾಣಿಗಳಿಗೆ ಅಭಯಸ್ಥಾನ. ಇಂತಹ ಪ್ರಸಿದ್ಧ ಮಠದ ಕೀರ್ತಿಯನ್ನು ಕೇಳಿ, ದಕ್ಷಿಣ ದಿಗ್ಭಾಗವನ್ನು ಸಾಧಿಸುವುದಕ್ಕೆಂದು ಬಂದಿದ್ದ ಬಿಜ್ಜಳನು ಆ ಮಠದಲ್ಲಿ ಏನಾದರೂ ಧರ್ಮಕಾರ್ಯವನ್ನು ಮಾಡಬೇಕೆಂದು ನಿಶ್ಚಯಿಸಿ, ಕೇದಾರೇಶ್ವರ ದೇವರ ಅಂಗಭೋಗಕ್ಕೆ, ತಪೋಧನರ ಆಹಾರದಾನಕ್ಕೆ, ವಿದ್ಯಾದಾನಕ್ಕೆ ದತ್ತಿಯನ್ನು ಬಿಟ್ಟುಕೊಡುತ್ತಾನೆ."

---

115 N. Venkataramanayya : Studies in the History of the Third Dynasty of Vijayanagar, p. 332.

116 ಅಮರಕೋಶ (ಸಂ. ಬಿ. ಎಲ್. ರೈಸ್), ಪು. 47.

117 ಇದರ ವರ್ಣನೆಗೆ ನೋಡಿ—MAR (1931), pp. 62-4.

118 A Twelfth Century University in Mysore, p. 28.

119 EC. VII. Sk. 102, 1162 A.D.

120 ದೇವಸ್ಥಾನಗಳಿಗೆ ಹೊಂದಿಕೊಂಡಂತೆ ವೈದ್ಯಶಾಲೆಗಳಿದ್ದುದಕ್ಕೆ ತಮಿಳುನಾಡಿನಿಂದ ಒಂದು ಉದಾಹರಣೆಯನ್ನು ಕೊಡಬಹುದು. ತಿರುಮುಕ್ಕೂಡಲ್ (ಚೆಂಗಲ್ ಪಟ್ ಜಿಲ್ಲೆ) ಎಂಬಲ್ಲಿ ರೋಗಿಗಳಿಗಾಗಿ ಹದಿನೈದು ಹಾಸುಗೆಗಳಿದ್ದ ವೈದ್ಯಶಾಲೆಯೊಂದಿತ್ತು. ಆ ವೈದ್ಯಶಾಲೆಯಲ್ಲಿ ಒಬ್ಬ ವೈದ್ಯ, ಒಬ್ಬ ಶಸ್ತ್ರವೈದ್ಯ, ಔಷಧಗಳನ್ನು ತರುವುದು ಇತ್ಯಾದಿ ಕೆಲಸಗಳಿಗೆ ಇಬ್ಬರು ಪರಿಚಾರಕರು, ರೋಗಿಗಳ ಉಪಚಾರಕ್ಕೆ ಇಬ್ಬರು ಪರಿಚಾರಿಕೆಯರು ಮತ್ತು ಒಬ್ಬ ಸೇವಕ-ಇಷ್ಟು ಜನ ಇದ್ದರು. ಅಲ್ಲಿ ಒಂದು ವರ್ಷಕ್ಕಾಗುವಷ್ಟು ಔಷಧದ ಸಂಗ್ರಹವಿತ್ತು. ಔಷಧಗಳಿಗೆ ತುಪ್ಪ, ದೇವಸ್ಥಾನದಲ್ಲಿ ದೀಪ ಉರಿಸಲು ಎಣ್ಣೆ-ಇವುಗಳಿಗಾಗಿ ದತ್ತಿಗಳನ್ನು ಬಿಟ್ಟುಕೊಟ್ಟಿದ್ದರು.

(A. Appadorai : Economic Conditions in Southern India, II, p. 743)

ಇಷ್ಟೊಂದು ಬಹುಮುಖವಾದ ಚಟುವಟಿಕೆಗಳ ಕೇಂದ್ರವಾಗಿದ್ದ ದೇವಸ್ಥಾನಗಳು ಬಹಳ ಕಡಿಮೆ. ಆದರೂ ಒಂದು ಗ್ರಾಮದ ಅಥವಾ ನಗರದ ಜೀವನ ಅಲ್ಲಿಯ ದೇವಸ್ಥಾನದ ಸುತ್ತ ಹೇಗೆ ವರ್ತಿಸುತ್ತಿತ್ತು ಎಂಬುದಕ್ಕೆ ಇದೊಂದು ಅತ್ಯುತ್ತಮ ನಿದರ್ಶನ.

## ದೇವಸ್ಥಾನ-ಹಬ್ಬಗಳು

ಈಗ ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ಪೂಜೋತ್ಸವಗಳ ಕಡೆ ತಿರುಗೋಣ. ದೈವಭಕ್ತಿ ಉಜ್ವಲವಾಗಿದ್ದ ಆ ಕಾಲದಲ್ಲಿ ಪೂಜಾದಿಗಳು ವೈಭವದಿಂದ ನಡೆಯುತ್ತಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಶಾಸನಗಳಲ್ಲಿ ಎರಡು ಹೊತ್ತಿನ ನೈವೇದ್ಯಕ್ಕೆ[121], 'ಸುವರ್ಣ ಸೇವೆ'ಗೆ, [122] ನಂದಾದೀವಿಗೆಗೆ[123], 'ಸೀತಾಳಗಡುಗೆ' ಮತ್ತು 'ವಸುಧಾರೆ'ಗಳಿಗೆ[124], ಪಂಚಮಹಾಶಬ್ದಗಳನ್ನು ಮೂರುಸಾರಿ ಬಾರಿಸುವುದಕ್ಕೆ ಮತ್ತು ಮೂರುಸಾರಿ ದೇವರ ಪೂಜೆ ಮಾಡುವುದಕ್ಕೆ[125] ದತ್ತಿಗಳನ್ನು ಬಿಟ್ಟುಕೊಟ್ಟಿರುವುದು ಕಂಡುಬರುತ್ತದೆ. ಮೇಲಿನ ಕೊನೆಯ ಶಾಸನದಲ್ಲಿ ತಿವರಿ, ದಟ್ಟ, ಖಂಡಿಕ್ಕೆ, ಜಯಘಂಟೆ, ಕಹಳೆಗಳೇ ಪಂಚಮಹಾಶಬ್ದಗಳೆಂದು ಕರೆದಿರುವಂತಿದೆ. ವಿವೇಕ ಚಿಂತಾಮಣಿಯ ಪ್ರಕಾರ ಶೃಂಗ, ತಮ್ಮಟ, ಶಂಖ, ಭೇರಿ ಮತ್ತು ಜಯಘಂಟೆಗಳು ಪಂಚಮಹಾವಾದ್ಯಗಳು.[126] ಕ್ರಿ. ಶ. 1124ರಲ್ಲಿ ರಚಿತವಾದ ಶಾಸನವೊಂದರಲ್ಲಿ ಶಿವಬ್ರಾಹ್ಮಣ ಕುಲದ ಕಾರಿಕಾಲಮ್ಮೆ ಎಂಬುವಳಿಗೆ ಬಿಟ್ಟುಕೊಟ್ಟ ದತ್ತಿಯ ವಿಷಯಗಳಿವೆ. ಇವಳು 'ತಿರುಕಾಳತಿ'ಯಲ್ಲಿ ಹುಟ್ಟಿದ 'ಸಮಸ್ತಗುಣಸಂಪನ್ನೆ' ಎಂದು ಶಾಸನವು ಪ್ರಶಂಸಿಸಿದೆ. ಅವಳ ಮಗ ಕುತ ಎಂಬಾತನು ಕಟ್ಟಿಸಿದ ದೇವಸ್ಥಾನದಲ್ಲಿ 'ತ್ರಿಸಂಜೆಯ ಕಟ್ಟಳೆ ಪೂಜೆ' ನಡೆಯುತ್ತಿದ್ದ ವಿಷಯವು ಬರುತ್ತದೆ.[127] ಇಲ್ಲಿಯ ತಿರುಕಾಳತಿ ಎಂಬುದು ಬಹುಶಃ ಶ್ರೀ ಕಾಳಹಸ್ತಿ ಎಂಬ ದಿವ್ಯಕ್ಷೇತ್ರ. ಹರಿಹರನು ತನ್ನ 'ಕಾರಿಕಾಲಮ್ಮೆಯ ರಗಳೆ' ಎಂಬ ತನ್ನ ಕೃತಿಯೊಂದರಲ್ಲಿ[128] ಕಾರಿಕಾಲಮ್ಮೆ ಎಂಬ ಶಿವಭಕ್ತೆಯ (ತಮಿಳು. ಕಾರೆಯ್ ಕಾಲಮ್ಮೈ) ಶಿವನಿಷ್ಠೆಯನ್ನು ವರ್ಣಿಸಿದ್ದಾನೆ. ಹರಿಹರನ ಪ್ರಕಾರ ಕಾರಿಕಾಲಮ್ಮೆಯದು ಚೋಳದೇಶದ ಕಾರಿಕಾಲ್ ಎಂಬ ಊರು. ಅವಳು ಆರಂಭದಲ್ಲಿ ಗುಪ್ತಮಾಹೇಶ್ವರಿಯಾಗಿದ್ದಳು. ಅವಳ ಭಕ್ತಿ ಅಕಸ್ಮಾತ್ ಬಹಿರಂಗವಾದಾಗ ಮನೆಯನ್ನು ಬಿಟ್ಟು ಹೊರಟು, ಹಿಂದಿನ ಶಿವಶರಣರ ಹೆಜ್ಜೆಗಳು ನೆಲದಮೇಲೆ ನಡೆದಿವೆ, ಆ ಹೆಜ್ಜೆಗಳು ತಲೆಯ ಮೇಲಿರಲಿ ಎಂದು ತಲೆಕೆಳಗಾಗಿ ನಡೆದು ಶಿವನನ್ನು ಮೆಚ್ಚಿಸಿ ಕೈಲಾಸಕ್ಕೆ ಹೋದಳು. ಶಾಸನೋಕ್ತ ಕಾರಿಕಾಲಮ್ಮೆ ಬೇರೆ, ತಮಿಳುನಾಡಿನ ಶಿವಭಕ್ತೆ ಕಾರಿಕಾಲಮ್ಮೆ ಬೇರೆ.[129]

---

[121] EC. III. Sn. 140, 1012 A.D.

[122] EC. XI. Dg. 20, 1045 A.D.

[123] EC. IV. Gu. 93, 1049 A.D.

[124] EC. XI. Dg. 74, C. 1054 A.D.

[125] EC. III Nj. 164, 1092 A.D.

[126] ಪಂಚಮಹಾಶಬ್ದದ ವಿಷಯದಲ್ಲಿ ನಡೆದಿರುವ ಚರ್ಚೆಗೆ—IA. V. pp. 354–5 ; IA. VI. p. 139 ; IA. XII. pp. 95–6 ಗಳನ್ನು ನೋಡಿ.

[127] EC. XI. Dg. 155, 1124 A.D.

[128] ಹರಿಹರನ ರಗಳೆಗಳು (ಸಂ. ಫ. ಗು. ಹಳಕಟ್ಟಿ), ಪು. 1–14.

[129] ತಮಿಳುನಾಡಿನ ಶಿವಭಕ್ತೆ ಕಾರಿಕಾಲಮ್ಮೆಯ ಹೆಸರು ಹನ್ನೊಂದನೆಯ ಶತಕದಲ್ಲಿ ಹುಟ್ಟಿರುವ ತಮಿಳು ಪೆರಿಯ ಪುರಾಣದಲ್ಲಿ ಕಂಡುಬರುತ್ತದೆ. ಅರವತ್ತುಮೂವರು ಪುರಾತನರ ಕಾಲ ಸು. ಕ್ರಿ.ಶ. 200-900 ಎಂದು ವಿದ್ವಾಂಸರ ಅಭಿಪ್ರಾಯ (S. Krishnaaswamy Iyengar : Contributions of South India to Indian Culture, p. 236). ಇತರ ಅರವತ್ತೆರಡು ಶೈವಭಕ್ತರ ಜೊತೆಯಲ್ಲಿ ಇವಳ ವಿಗ್ರಹವು ದಕ್ಷಿಣಭಾರತದ ಅನೇಕ ದೇವಸ್ಥಾನಗಳಲ್ಲಿ ಕಂಡುಬರುತ್ತದೆ. "ಕಠಿಣ ತಪಸ್ಸಿನಿಂದ ದೇಹವು ಎಲುಬಿನ ಗೂಡಾ"ಗಿರುವ ಕಾರಿಕಾಲಮ್ಮೆಯ ವಿಗ್ರಹದ ಚಿತ್ರಕ್ಕೆ, ನೋಡಿ—H. Krishna Shastry : South Indian Images of gods and goddesses, p. 265.

ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ವಿಶೇಷ ಪೂಜೆಗಳಲ್ಲಿ ಎರಡರ ಹೆಸರು ಪದೇ ಪದೇ ಉಕ್ತವಾಗಿದೆ. ಒಂದು ಚೈತ್ರ, ಮತ್ತೊಂದು ಪವಿತ್ರ.[130] ಶಾಸನಗಳಲ್ಲಿ 'ಚೈತ್ರಪವಿತ್ರಕ್ಕಂ' ಎಂದು ಬರುವುದರಿಂದ ಫ್ಲೀಟ್, ಹುಲ್ಷ್, ರೈಸ್ ಮುಂತಾದವರು ಅದನ್ನು ತತ್ಪುರುಷ ಸಮಾಸವೆಂದು ಭಾವಿಸಿ 'ಚೈತ್ರಮಾಸದಲ್ಲಿ ನಡೆಯುವ ಶುದ್ಧೀಕರಣದ ಉತ್ಸವ' ಎಂದು ಅರ್ಥೈಸಿದ್ದರು. ರಾ|| ಬ|| ಆರ್. ನರಸಿಂಹಾಚಾರ್ಯರು ತಮ್ಮ ಲೇಖನವೊಂದರಲ್ಲಿ[131] ಚೈತ್ರ ಪವಿತ್ರವೆಂಬುದು ದ್ವಂದ್ವ ಸಮಾಸವೆಂದೂ, ಅದು ದೇವಸ್ಥಾನಗಳಲ್ಲಿ ನಡೆಯುವ ಎರಡು ಉತ್ಸವಗಳನ್ನು ಸೂಚಿಸುವುದೆಂದೂ ಸ್ಪಷ್ಟಪಡಿಸಿದ್ದಾರೆ. ಚೈತ್ರವು ಚೈತ್ರಮಾಸದಲ್ಲಿ ನಡೆಯತಕ್ಕ ಉತ್ಸವ. ಡಾ|| ಕಾಣೆಯವರು 'ಚೈತ್ರೀ' ಎಂಬ ಹೆಸರಿನ ಕರ್ಮವನ್ನು ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ಇದು ಚೈತ್ರ ಮಾಸದ ಹುಣ್ಣಿಮೆಯ ದಿನ ಗೃಹಸ್ಥರು ತಮ್ಮ ಮನೆಗಳಲ್ಲಿ ಆಚರಿಸುವ ಹಬ್ಬವಾದರೂ, ದೇವಸ್ಥಾನಗಳಲ್ಲೂ ಅಂತಹುದೇ ಉತ್ಸವವನ್ನು ಆಚರಿಸುತ್ತಿದ್ದಿರಬಹುದು. ಹಾಗೆ ನೋಡಿದರೆ, ಭಾರತೀಯರಲ್ಲಿ, ಮನೆಗಳಲ್ಲಿ ಆಚರಿಸುವ ಹಬ್ಬಗಳು ದೇವಸ್ಥಾನಗಳಲ್ಲಿ ಆಚರಿಸುವ ಹಬ್ಬಗಳು ಎಂಬ ಭೇದವೇ ಇಲ್ಲವೆನ್ನಬಹುದು. ಪವಿತ್ರ ಎನ್ನುವುದು. ಯಜ್ಞೋಪವೀತವನ್ನು ಸೂಚಿಸುತ್ತದೆ ಎನ್ನುತ್ತಾರೆ ರಾ|| ಬ|| ನರಸಿಂಹಾಚಾರ್ಯರು. ದಕ್ಷಿಣ ಭಾರತದ ದೇವಾಲಯಗಳಲ್ಲಿ ಆಷಾಢ ಮತ್ತು ಕಾರ್ತಿಕ ಮಾಸಗಳ ಹುಣ್ಣಿಮೆಗಳ ಮಧ್ಯೆ ಈ ಪವಿತ್ರೋತ್ಸವವನ್ನು ಆಚರಿಸುತ್ತಾರೆ. ಹತ್ತಿಯ ಅಥವಾ ರೇಷ್ಮೆಯ ಹಾರಗಳನ್ನು ವಿಗ್ರಹಗಳ ಕೊರಳು ಮುಂತಾದ ಅಂಗಗಳಿಗೆ ಹಾಕುತ್ತಾರೆ. ಪಾಂಚರಾತ್ರಾಗಮಗಳು, ಈಶ್ವರಸಂಹಿತೆ ಮುಂತಾದ ಗ್ರಂಥಗಳಲ್ಲಿ ಪವಿತ್ರೋತ್ಸವದ ವಿವರಗಳು ಸಿಗುತ್ತವೆ.[133] ಇದನ್ನು ವೈಷ್ಣವದೇವಾಲಯಗಳಲ್ಲಿ[134] ಆಚರಿಸುವುದು ಸಾಮಾನ್ಯವಾದರೂ ಶೈವದೇವಾಲಯಗಳಲ್ಲಿಯೂ ವಿರಳವಾಗಿ ಆಚರಿಸುತ್ತಿದ್ದುದುಂಟು. ಉದಾಹರಣೆಗೆ, ಉದಯಾದಿತ್ಯ ಎಂಬ ಸಾಮಂತನು ಚೋಳೇಶ್ವರಲಿಂಗವನ್ನು ಪ್ರತಿಷ್ಠಿಸಿ ಅದರ ಅಂಗಭೋಗಾದಿಗಳಿಗೆ ಚೈತ್ರ ಪವಿತ್ರಕ್ಕೆ ಹಳ್ಳಿಯೊಂದನ್ನು ಬಿಟ್ಟು ಕೊಟ್ಟಿದ್ದಾನೆ.[135] ಅನಂತದೇವನು ತನ್ನ ಸ್ಮೃತಿಕೌಸ್ತುಭದಲ್ಲಿ ಪವಿತ್ರಾರೋಪಣವನ್ನು ಶ್ರಾವಣದಲ್ಲಿ ನಡೆಯಿಸಬೇಕೆಂದು ವಿಧಿಸಿದ್ದಾನೆ.[136] ಕೇಶವಾದಿತ್ಯ ದೇವರ ಪವಿತ್ರಾರೋಪಣವು ಶ್ರಾವಣ ಶುದ್ಧ ದ್ವಾದಶಿಯ ದಿನ ನಡೆಯಲೆಂದು ದತ್ತಿಯನ್ನು ಬಿಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[137] ದೇವಾಲಯದಲ್ಲಿ ನಡೆಯುತ್ತಿದ್ದ 'ಪಂಚಪರ್ವ'ಗಳಲ್ಲಿ ಮೇಲಿನ ಪವಿತ್ರಾರೋಪಣ ಒಂದು. ಉಳಿದ ಮೂರು ಹೀಗಿವೆ-ಮಂತ್ರಪುಷ್ಪದವನಾರೋಪಣ ಫಲ ಪೂಜೆ, ಕಾರ್ತಿಕ ಕೃತ್ತಿಕಾ ದೀಪಪೂಜೆ, ವಸಂತೋತ್ಸವ. (EC. V ii. p. 699). ಈ ಶಾಸನದಲ್ಲಿಲ್ಲದ 'ಚೈತ್ರ'ದ ಹೆಸರನ್ನು ಸೇರಿಸಿಕೊಂಡರೆ ಐದು ಹಬ್ಬಗಳಾಗುತ್ತವೆ. ಶಾಸನಗಳಲ್ಲಿ ಬರುವ 'ನೂಲಪರ್ವ'[138] ಎಂಬುದು 'ಪವಿತ್ರ'ವನ್ನೇ ಸೂಚಿಸುತ್ತದೆ. ಉತ್ತರ ಕನ್ನಡ ಜಿಲ್ಲೆಯ ಕೆಲವು ಶೈವದೇವಾಲಯಗಳಲ್ಲಿ "ನೂಲಹಬ್ಬ"ವೆಂಬ ಹೆಸರಿನ ಹಬ್ಬವನ್ನು ಆಚರಿಸುತ್ತಾರೆ. ಪಟಗಾರರು ರೇಷ್ಮೆಯಲ್ಲಿ ಏಳು ಅಥವಾ ಒಂಬತ್ತು ಮೆಣಸಿನ ಕಾಳು ಕಟ್ಟಿಕೊಡುತ್ತಾರೆ. ಹೋಮ, ಹವನ ಮಾಡಿ ಅದನ್ನು ದೇವರಿಗೆ ಏರಿಸಬೇಕು (ಇದನ್ನು ಕಕ್ಕೆ ಹುಣ್ಣಿಮೆ ಎಂದೂ ಕರೆಯುವುದುಂಟು.)

---

[130] EC IV. Cd. 34, 1123 A.D. ; IA. VIII. p. 10, 1078 A.D.
[131] IA. XXXVIII. p. 52.
[132] History of Dharmaśāstra, II. ii. p. 820.
[133] IA. XXXVIII. p. 52.
[134] BKI. I. ii. 189, 1106 A.D.
[135] EC. XI. Cd. 34, 1123 A.D.
[136] The Rāṣṭrakūṭas and their Times, p. 292.
[137] BKI. I. ii. 189, 1106 A.D.
[138] EC. VI. Cm. 61, C. 1058 A.D.

ಇವು ದೇವಸ್ಥಾನಗಳಲ್ಲಿ ನಡೆಯುವ ಕೆಲವು ವಿಶೇಷ ಪೂಜೆಗಳು. ಜನರೆಲ್ಲರೂ ಮನೆಮನೆಗಳಲ್ಲಿ ಆಚರಿಸುವ ಹಬ್ಬದ ದಿನಗಳಲ್ಲೂ ದೇವಸ್ಥಾನಗಳಲ್ಲಿ ವಿಶೇಷ ಪೂಜೆಗಳು ನಡೆಯುತ್ತಿದ್ದುವು. ಅಂತಹ ಹಬ್ಬಗಳಲ್ಲಿ ಮುಖ್ಯವಾಗಿ ಮೂರು ಹಬ್ಬಗಳನ್ನು ಶಾಸನಗಳು ಹೆಸರಿಸಿವೆ–ಬಾದುಬ್ಬೆ, ದೀಪಾವಳಿ, ಕಾರಹುಣ್ಣಿಮೆ.[139] ಈ ಮೂರು ಹಬ್ಬಗಳು ಇಂದಿಗೂ ಉಳಿದುಕೊಂಡಿವೆ. ಇವುಗಳಲ್ಲಿ ದೀಪಾವಳಿ ಹಬ್ಬವು ಅಖಿಲಭಾರತ ವ್ಯಾಪ್ತಿಯುಳ್ಳದು. ವೈಶಾಖ ಅಮಾವಾಸ್ಯೆಯಂದು ಬಾದುಬ್ಬೆಯ ಹಬ್ಬವನ್ನು ಇಂದಿಗೂ ಉತ್ತರ ಕರ್ನಾಟಕದಲ್ಲಿ ಆಚರಿಸುತ್ತಾರೆ. ಅದರ ವಿವರಗಳನ್ನು ಬೆಟಗೇರಿ ಕೃಷ್ಣಶರ್ಮರು ತಮ್ಮೊಂದು ಲೇಖನದಲ್ಲಿ ಕೊಟ್ಟಿದ್ದಾರೆ. "ದೇವರ ಮನೆಯಲ್ಲಿ ಅಥವಾ ಅನುಕೂಲ ಸ್ಥಳದಲ್ಲಿ ಗೋಡೆಗೆ ಒಂದು ಚಿಕ್ಕದಾದ ಹಂದರ (ಮಂಟಪ)ವನ್ನು ಕಟ್ಟುವರು. ಅದನ್ನು ಬೇವಿನ ಸೊಪ್ಪಿನಿಂದ ಹೊಚ್ಚಿ ಅಲಂಕರಿಸುವರು. ನದಿಯಿಂದಾಗಲಿ, ಹೊಲದಿಂದಾಗಲಿ ಐದು ಚಿಕ್ಕ ಕಲ್ಲುಗಳನ್ನು ಆಯ್ದು ತಂದು, ಅವುಗಳನ್ನು ತೊಳೆದು ಒರಸಿ, ಅವುಗಳಿಗೆ ಸುತ್ತಲೂ ಸುಣ್ಣದ ಪಟ್ಟಿಯನ್ನು ಹಚ್ಚಿ ಹಂದರದೊಳಕ್ಕೆ ಇರಿಸಿದ ಪೀಠದ ಮೇಲೆ ಸಾಲಾಗಿ ಇಡುವರು. ಯಥಾಕ್ರಮ, ಮನೆಯ ಯಜಮಾನ ಅವುಗಳನ್ನು ಪೂಜಿಸಿ ಹೂರಣದ ಹೋಳಿಗೆಯ ನೈವೇದ್ಯಮಾಡುವನು. ನೈವೇದ್ಯಮಾಡಿದ ಹೋಳಿಗೆಯನ್ನು ಆ ಹಂದರದ ಮೇಲೆ ಅಗಲವಾಗಿ ಬಿಚ್ಚಿ ಹೊದಿಸುವನು. ಪ್ರತ್ಯೇಕವಾದ ಎಡೆಯಲ್ಲಿ ಬಡಿಸುವ ಈ ನೈವೇದ್ಯವನ್ನು 'ಬಾದಮೀ ನೈವೇದ್ಯ' ಎಂದು ಹೇಳುವರು. ಪೂಜೆಯಾದ ಮೇಲೆ ಎಲ್ಲರಿಗೂ ಹಬ್ಬದ ಊಟವಾಗುವುದು. ಇದಿಷ್ಟೇ ಹಬ್ಬದ ಆಚರಣೆ. ಮತ್ತಾವ ವ್ರತವಿಲ್ಲ, ಕತೆಯಿಲ್ಲ."[140] ಆ ದಿನ ಬಾದಾಮಿಯ ಬನಶಂಕರಿಯಲ್ಲಿ ವಿಶೇಷ ಪೂಜೋತ್ಸವಗಳು ನಡೆಯುತ್ತವೆ. ಬಾದುಬ್ಬೆಯ ಹಬ್ಬದಂದು ಜನರು ವೇಷಗಳನ್ನು ಕಟ್ಟಿ ನಕ್ಕು ನಲಿಯುತ್ತಿದ್ದರೆಂದು ಕಾಣುತ್ತದೆ. ಇದಕ್ಕೆ ಆಧಾರ ವಡ್ಡಾರಾಧನೆ[141] (ವಡ್ಡಾರಾಧನೆಯ ಪ್ರಕಾರ ಬಾದುಬ್ಬೆಯ ಹಬ್ಬವು ಮೂಲತಃ ಜೈನರದು). ಕಾರಹುಣ್ಣಿಮೆ ಅಥವಾ ಕಾರ ಹಬ್ಬದ ಆಚರಣೆ ದಾವಣಗೆರೆಯ ಸುತ್ತಮುತ್ತಣ ಹಳ್ಳಿಗಳಲ್ಲಿ ಈ ರೀತಿ ಇದೆ (ತುಮಕೂರು ಜಿಲ್ಲೆಯಲ್ಲಿಯೂ ಇದರ ಆಚರಣೆಯಿದೆ)–ಹಬ್ಬದ ಸಂಜೆ ಊರ ಹೊರಗೆ ದೊಡ್ಡ ಬೆಂಕಿಯನ್ನು ಹೊತ್ತಿಸಿ ಅದರ ಮೇಲೆ ದನಗಳನ್ನು ಹಾಯಿಸುತ್ತಾರೆ. ಊರಿನ ಮುಂಬಾಗಿಲಿನ ಅಕ್ಕಪಕ್ಕದಲ್ಲಿರುವ ಎರಡು ಕಂಬಗಳಿಗೆ ಬೇವಿನಸೊಪ್ಪಿನ ತೋರಣವನ್ನು ಕೆಳಭಾಗದಲ್ಲಿ ಕಟ್ಟಿ ಎಲ್ಲರೂ ಕೀಳುತ್ತಾರೆ. ತಮ್ಮ ಕೈಗೆ ಸಿಕ್ಕಿದ ಭಾಗವನ್ನು ತೆಗೆದುಕೊಂಡು ಹೋಗಿ ಮನೆಯಲ್ಲಿಟ್ಟುಕೊಂಡು, ಬೀಜವನ್ನು ಬಿತ್ತುವ ಮೊದಲ ದಿನ ಅದನ್ನು ಹೊಲದಲ್ಲಿ ಚೆಲ್ಲುತ್ತಾರೆ. ಹೀಗೆ ಚೆಲ್ಲಿದರೆ ಸಮೃದ್ಧವಾದ ಪೈರು ಬರುತ್ತದೆ ಎಂದು ಜನ ನಂಬಿದ್ದಾರೆ. ಕಾರಹುಣ್ಣಿಮೆಯ ದಿನ ಎತ್ತುಗಳ ಪಂದ್ಯವು ನಡೆಯುತ್ತಿದ್ದ ವಿಷಯವನ್ನು ಶಾಸನವೊಂದು ನಿರೂಪಿಸುತ್ತದೆ.[142] ಯುಗಾದಿ ಹಬ್ಬದ ಹೆಸರು ಒಂದು ಶಾಸನದಲ್ಲಿದೆ.[143] 'ಪರ್ವ' ಎಂಬ ಹೆಸರಿನ ಒಂದು ಹಬ್ಬವನ್ನು ಒಂದು ಶಾಸನ ಸೂಚಿಸಿರುವಂತಿದೆ ("ಪರ್ವ ಪಬ್ಬದ ಸೌಪರ್ಣದ ತಾಂಬೂಳಕ್ಕೆ").[144] ಸಂಸ್ಕೃತದ ಪರ್ವ ಎಂಬುದು ಕನ್ನಡದಲ್ಲಿ ಹಬ್ಬವಾಗಿರುವಂತೆ, ಈಗ 'ಪರವ್ವ' (ಪರೇವು, ಪರ ಎಂದೂ ಕಾಣಿಸಿಕೊಳ್ಳುತ್ತದೆ) ಎಂಬ ಹೆಸರಿನ ಒಂದು ಸಾಮೂಹಿಕ ಹಬ್ಬದ ಹೆಸರಾಗಿಯೂ ನಿಂತಿದೆ. 'ಪರವ್ವ' ಎಂಬ ಹಬ್ಬಕ್ಕಾಗಿ ಊರಿನ ಜನರೆಲ್ಲರೂ ಸೇರಿ ಧನ ಧಾನ್ಯವನ್ನು ಜನರಿಂದ ಸಂಗ್ರಹಿಸುತ್ತಾರೆ. ಆ ಉತ್ಸವದ ಹಿಂದಿನ ದಿನ ಸಾವಿರಾರು ಕೊಡ ನೀರಿನಿಂದ

---

139 BKI. I. i. 52, 1007 A.D.

140 ಬಾದುಮೆ (ಕನ್ನಡ ನುಡಿ, ಮಾರ್ಚಿ–ಏಪ್ರಿಲ್, 1952), ಪು. 94–5.

141 ವಡ್ಡಾರಾಧನೆ (1949), ಪು. 113. ಬಾದುಬ್ಬೆದೇವತೆ ಮತ್ತು ಆ ದೇವತೆಯ ಹಬ್ಬ ಇತ್ಯಾದಿಗಳ ವಿವರಗಳಿಗೆ, ನೋಡಿ: ಎಂ. ಚಿದಾನಂದಮೂರ್ತಿ: 'ಅಮ್ಮ, ಅಬ್ಬೆ, ಅಲ್ಲಮ, ಬಾದುಬ್ಬೆ' (ಪ್ರಬುದ್ಧ ಕರ್ಣಾಟಕ, 45. 1).

142 SII. IX. i. 169, 1104 A.D.

143 SII. IX. i. 158, 1092 A.D.

144 EC. VII. Sk. 165, 1149 A.D.

ದೇವಸ್ಥಾನವನ್ನು ತೊಳೆದು ಶುಭ್ರಗೊಳಿಸಿ ಆ ದಿನ ಸಂಜೆ ಅಡುಗೆಗೆ ಪ್ರಾರಂಭಿಸುತ್ತಾರೆ. ಮಾರನೆಯ ದಿನ ದೇವರ ಉತ್ಸವಾದಿಗಳೆಲ್ಲ ಮುಗಿದ ಮೇಲೆ ಆ ಊರಿನ ಮತ್ತು ಬೇರೆ ಊರಿನ ಜನಗಳಿಗೆ ದೇವಸ್ಥಾನದ ಅಂಗಳದಲ್ಲಿ ಊಟಕ್ಕೆ ಹಾಕುತ್ತಾರೆ. 'ಪಂಚಕೇಶ್ವರ' ಎಂಬ ಹೆಸರಿನ ಧಾರ್ಮಿಕ ವಿಧಿಯೊಂದು ಶಾಸನಗಳಲ್ಲಿ ಕಂಡುಬರುತ್ತದೆ. ಒಂದು ಪಡಿ ಹೊನ್ನನ್ನು ಸಂಗ್ರಹಿಸಿ (?) 'ಪಂಚಕೇಶ್ವರ'ವನ್ನು ಮೆರವಣಿಗೆಮಾಡಿಸಿ ನಂತರ ಮಂತ್ರಗಳನ್ನು ಹೇಳಿಸಿ ಆ ಹೊನ್ನನ್ನು ಪೂಜಿಸುವ ಒಂದು ಸಂಪ್ರದಾಯವನ್ನು ಶಾಸನವೊಂದು ತಿಳಿಸುತ್ತದೆ.[145] ಪಂಚಕೇಶ್ವರ ಎಂಬುದು ಒಂದು ದೇವರ ಹೆಸರಾಗಿ ಕೆಲವು ಕಡೆ ಕಾಣಿಸಿಕೊಳ್ಳುತ್ತದೆ.[146]

ಜನರು ಸುಖವಾಗಿದ್ದಾಗ ಹಬ್ಬಗಳನ್ನು ಮಾಡಿ, ದೇವಸ್ಥಾನವನ್ನು ಶೃಂಗರಿಸಿ, ವಿಶೇಷೋತ್ಸವಗಳನ್ನು ನಡೆಯಿಸಿ ತಮ್ಮ ಆನಂದವನ್ನು ದೇವಸ್ಥಾನದ ಸುತ್ತ ಪ್ರಕಟಿಸುತ್ತಿದ್ದರು. ಕಷ್ಟಗಳು ಬಂದಾಗಲು ಅವರಿಗೆ ದೇವಸ್ಥಾನವೇ ಆಶ್ರಯಸ್ಥಾನ. ಈಗಲೂ ಹಳ್ಳಿಗಳ ಜನಜೀವನವನ್ನು ಗಮನಿಸಿದರೆ ಇದು ಅರ್ಥವಾಗುತ್ತದೆ. ಬಾವಿ ತೆಗೆಯಿಸಲು, ಮನೆ ಕಟ್ಟಲು, ಕೊನೆಗೆ ಮದುವೆಗಳಾಗಲು 'ದೇವರ ಅಪ್ಪಣೆ'ಯನ್ನು ಕೇಳುತ್ತಾರೆ. ಮನೆಯಲ್ಲಿ ಕಾಯಿಲೆ ಬಂದಾಗ, ಹಾವು ಕಚ್ಚಿದಾಗ, ಹಸು ಕಳೆದುಹೋದಾಗ ಮತ್ತೆ ದೇವರ ಬಳಿಗೆ ಬರುತ್ತಾರೆ. ಇದೇ ಪರಿಸ್ಥಿತಿ ಸಾವಿರ ವರ್ಷಗಳ ಹಿಂದೆಯೂ ಇತ್ತು ಎಂಬುದರಲ್ಲಿ ಸಂದೇಹವಿಲ್ಲ. ಏಹೂರಲ್ಲಿ ರವಿ ಚಮೂಪತಿ ಎಂಬಾತನು ಕಟ್ಟಿಸಿದ ಸ್ವಯಂಭೂ ದೇವಾಲಯದ ವರ್ಣನೆಯು ಶಾಸನವೊಂದರಲ್ಲಿ ಬಂದಿದೆ.[147] ಹಾವು ಚೇಳುಗಳು ಕಚ್ಚಿದವರು, ಬೆಂಕಿಯಲ್ಲಿ ಬೆಂದವರು ಬಂದು ಆ ದೇವಾಲಯವನ್ನು ಸುತ್ತುಹಾಕಿದರೆ ಸಾಕು, ಆ ನೋವೆಲ್ಲ ನಿಮಿಷ ಮಾತ್ರದಲ್ಲಿ ಶಾಂತವಾಗುತ್ತದೆ. ಜ್ವರಪೀಡಿತರು, ನೇತ್ರರೋಗಿಗಳು, ಶಿರೋವೇದನೆ, ಕಿವಿಬೇನೆ ಮುಂತಾದ ಬಾಧೆಗಳಿಂದ ಪೀಡಿತರಾದವರು ಆ ದೇವರ ಚರಣವನ್ನು ಸ್ಮರಿಸಿದರೆ ಸಾಕು ಆಯಾ ಬಾಧೆಗಳಿಂದ ಮುಕ್ತರಾಗುತ್ತಾರೆ ಎಂದು ಆ ಶಾಸನವು ಹೇಳುತ್ತದೆ. ದೇವಸ್ಥಾನವು ಜನರ ಕಣ್ಣಿನಲ್ಲಿ ಕಲ್ಲಿನ ವಿಗ್ರಹವನ್ನೊಳಗೊಂಡಿರುವ ಒಂದು ಮಂದಿರವಲ್ಲ. ಅವರಿಗೆ ಅದೊಂದು ಆಶ್ರಯಸ್ಥಾನ; ಭಗವಂತನ ವಿಗ್ರಹ ಒಂದು ಜೀವಂತ ವಸ್ತು ; ಭಗವಂತನು ಅವರ ಕಷ್ಟಸುಖಗಳನ್ನು ವಿಚಾರಿಸಲು ಇರತಕ್ಕವನು.

## ದೇವಸ್ಥಾನ-ನ್ಯಾಯಾಲಯ

ದೇವಸ್ಥಾನವು ಒಂದು ರೀತಿಯಲ್ಲಿ ನ್ಯಾಯಾಲಯವೂ ಹೌದು. ಇದನ್ನು ಎರಡು ದೃಷ್ಟಿಗಳಿಂದ ನೋಡಬಹುದು. ಒಂದು—ಅಲ್ಲಿ ಒಮ್ಮೆ ವಚನವನ್ನು ಕೊಟ್ಟುಬಿಟ್ಟರೆ ತೀರಿತು, ಅದನ್ನು ಪರಿಪಾಲಿಸಿಯೇ ತೀರಬೇಕು ಎಂಬ ನಿರ್ಬಂಧವಿರುತ್ತಿತ್ತು. ಮತ್ತೊಂದು, ಯಾವುದೋ ಸಂದರ್ಭದಲ್ಲಿ ಅಪರಾಧಿಯೆಂದು ಜನರು ಭಾವಿಸಿರುವ ವ್ಯಕ್ತಿಯ ಅಪರಾಧವು ಬಾಹ್ಯಕಾರಣಗಳಿಂದ ನಿರ್ಣೀತವಾಗದಿದ್ದರೆ ಅವನು ಅಪರಾಧಿಯೇ ನಿರಪರಾಧಿಯೇ ಎಂಬುದರ ತೀರ್ಮಾನವು ದೇವಸ್ಥಾನದಲ್ಲಿ ನಡೆಯುತ್ತಿದ್ದಿತು. ಮೊದಲನೆಯದಕ್ಕೆ ಅತ್ಯುತ್ತಮ ಉದಾಹರಣೆ ಕುರುವತ್ತಿಯ ಶಾಸನ.[148] ಬೊಪ್ಪಯ್ಯ ಎಂಬ ಮಾನ್ಯನು ದುಷ್ಟನಾಗಿ ಹೊಳಲು ಎಂಬ ಊರನ್ನು ಸೂರೆಗೊಂಡು ಅನೇಕ ಬ್ರಾಹ್ಮಣರನ್ನು ಕೊಲ್ಲುತ್ತಾನೆ. ಅಲ್ಲಿಯ ಮಹಾಜನಗಳು ಚಕ್ರವರ್ತಿಯ ತನಕ ದೂರನ್ನು ಒಯ್ಯುತ್ತಾರೆ. ಚಕ್ರವರ್ತಿಯು ಅವರ ಮಾತುಗಳನ್ನು ಸಾವಧಾನವಾಗಿ ಕೇಳಿ, ಆ ಅಗ್ರಹಾರಕ್ಕೆ ಯಾರೂ ಮಾನ್ಯರಿರಕೂಡದೆಂದು ನಿಯಾಮಿಸುತ್ತಾನೆ. ಪ್ರಧಾನಿ ಮುಂತಾದವರಿದ್ದು ಬೊಪ್ಪನನ್ನು ಕರೆದು, ನೀನಾಗಲಿ, ನಿನ್ನ ವಂಶದವರಾಗಲಿ ಹೊಳಲಿಗೆ ಮಾನ್ಯರಾಗಿರಲು ಸಾಧ್ಯವಿಲ್ಲವೆಂದು ತಿಳಿಸಿದಾಗ, ಆತನು ತಪ್ಪೊಪ್ಪಿಕೊಂಡು, ಆಣೆಪತ್ರವನ್ನು

[145] MAR (1927). p. 133, 870 A.D.
[146] EC. V. Bl. 102 and 103.
[147] EI. XII. p. 274, 1077 A.D.
[148] SII. IX. i. 169, 1104 A.D.

ಕೊಟ್ಟು, ತಾನು ನುಡಿದಂತೆ ನಡೆಯುವೆನೆಂಬುದನ್ನು ಸ್ಥಿರಪಡಿಸಲು ತ್ರಿಪುರಾಂತಕ ದೇವರ ಬಳಿ ನೀರನ್ನು ಕುಡಿಯುತ್ತಾನೆ. ಈ ವಿಷಯವನ್ನು ಸಾರುವ ಶಾಸನದ ಕಲ್ಲುಗಳನ್ನು ಹತ್ತಾರು ಊರುಗಳಲ್ಲಿ ಹಾಕಿಸುತ್ತಾರೆ.

ಅಪರಾಧವನ್ನು ನಿರ್ಣಯಿಸುವ ಪ್ರಾಚೀನ ವಿಧಾನಗಳಲ್ಲಿ 'ದಿವ್ಯ' ಎಂಬುದೂ ಒಂದು. ಅಪರಾಧ ನಿರ್ಣಯಕ್ಕೆ ಮಾನುಷವಾದ ಸಾಕ್ಷಿ ಯಾವುದೂ ಇಲ್ಲದಿರುವಾಗ ದೈವವನ್ನು ಆಶ್ರಯಿಸುತ್ತಿದ್ದರು. ಆದ್ದರಿಂದಲೇ ಅದನ್ನು 'ದಿವ್ಯ'ವೆಂದು ಕರೆದಿರುವುದು.[149] ಇದನ್ನು ಇಂಗ್ಲಿಷಿನಲ್ಲಿ 'Ordeal' ಎಂದು ಕರೆಯುತ್ತಾರೆ. 'Ordeal' ಪದಕ್ಕೆ '(ಭಗವಂತನ) ತೀರ್ಪು' ಎಂಬುದು ಮೂಲಾರ್ಥ. ಹೆಚ್ಚುಕಡಮೆ ಪ್ರಪಂಚದಾದ್ಯಂತ ಈ ಸಂಪ್ರದಾಯವು ಸಾವಿರಾರು ವರ್ಷಗಳಿಂದ ಬೆಳೆದುಕೊಂಡು ಬಂದಿದೆ. ಅಪರಾಧನಿರ್ಣಯದಲ್ಲಿ ದಿವ್ಯವು ಮೊದಲ ಹೆಜ್ಜೆಯಲ್ಲ, ಕೊನೆಯ ಪ್ರಯತ್ನ. ಇದು ವಿಶೇಷವಾಗಿ ಆಫ್ರಿಕನ್ ಜನಾಂಗಗಳಲ್ಲಿ, ಭಾರತದಲ್ಲಿ ಮತ್ತು ಟ್ಯುಟೋನಿಕ್ ಜನಾಂಗಗಳಲ್ಲಿ ಪ್ರಚಾರದಲ್ಲಿತ್ತು. ಈಗಲೂ ಅವಶೇಷರೂಪವಾಗಿ ಉಳಿದುಕೊಂಡು ಬಂದಿದೆ. ವಿವರಗಳಿಗೆ— Encyclopaedia of Religion and Ethics (Vol. IX) ಗ್ರಂಥದಲ್ಲಿ 'Ordeal' ಎಂಬ ಲೇಖನವನ್ನು ನೋಡಿ.

ಭರತಖಂಡದಲ್ಲಿ ದಿವ್ಯವನ್ನು ಸ್ಮೃತಿಗಳೂ, ನ್ಯಾಯಗ್ರಂಥಗಳೂ ಮಾನ್ಯಮಾಡಿವೆ ('ದಿವ್ಯ'ದ ಇತಿಹಾಸಕ್ಕೆ ಡಾ|| ಕಾಣೆಯವರ History of Dharmaśāstra, III, pp. 361–2 ನ್ನು ನೋಡಿ). ದಿವ್ಯವನ್ನು ನಡೆಯಿಸಲು ಬೇಕಾದಷ್ಟು ನಿಯಮಗಳನ್ನು ಹಾಕಿದ್ದಾರೆ. ಯಾರಿಗೆ ಯಾವ ರೀತಿಯ ದಿವ್ಯ, ಯಾವ ಕಾಲದಲ್ಲಿ ನಡೆಯಿಸಬೇಕು, ದಿವ್ಯವನ್ನು ನಡೆಯಿಸುವಾಗ ವಹಿಸಬೇಕಾದ ಎಚ್ಚರಿಕೆಗಳು—ಈ ವಿಷಯದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ದಿವ್ಯವನ್ನು ನಡೆಯಿಸುವ ನ್ಯಾಯಾಧಿಪತಿ ಮತ್ತು ದಿವ್ಯಕ್ಕೆ ಗುರಿಯಾಗಿರುವ 'ಶೋಧ್ಯ' ರಿಬ್ಬರೂ ಹಿಂದಿನ ದಿನ ಉಪವಾಸವಿದ್ದು ಮಾರನೆಯ ದಿನ ಪ್ರಾತಃಕಾಲ ಸ್ನಾನಮಾಡಬೇಕು. ಶೋಧ್ಯನು ಒದ್ದೆ ಬಟ್ಟೆಯಲ್ಲಿರಬೇಕು. ದೇವತಾ ಪೂಜೆಯ ನಂತರ ನ್ಯಾಯಾಧಿಪತಿಯು ದೈವದ ಆವಾಹನೆ ಮಾಡಬೇಕು. ಪೂಜೆಯ ವಿಧಾನಗಳು ಮತ್ತು ಆವಾಹನೆಗಳಲ್ಲಿಯೂ ಬೇಕಾದಷ್ಟು ವಿವರಗಳಿವೆ. ಇವೆಲ್ಲವೂ ಮುಗಿದ ಬಳಿಕ ದಿವ್ಯವು ನಡೆಯುತ್ತದೆ.

ದಿವ್ಯಗಳ ಸಂಖ್ಯೆಯ ವಿಷಯದಲ್ಲಿಯೂ ಸ್ಮೃತಿಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿದೆ. ಮನುವು ಎರಡು ದಿವ್ಯಗಳನ್ನೂ (ಅಗ್ನಿದಿವ್ಯ ಮತ್ತು ಜಲದಿವ್ಯ), ಯಾಜ್ಞವಲ್ಕ್ಯ ಮುಂತಾದವರು ಐದನ್ನೂ, ನಾರದನು ಏಳನ್ನೂ, ಬೃಹಸ್ಪತಿ ಮುಂತಾದವರು ಒಂಬತ್ತನ್ನೂ ಹೇಳುತ್ತಾರೆ. ಕನ್ನಡ ಶಾಸನಗಳಲ್ಲಿ[150] ಕೋಶ (ಶಾಸನದಲ್ಲಿ 'ಕೊಪ' ಎಂದು ತಪ್ಪಾಗಿ ಬಿದ್ದಿದೆ), ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ—ಎಂಬ ಏಳು ದಿವ್ಯಗಳನ್ನು ಹೇಳಿದೆ. ನಾರದನ ಪಟ್ಟಿಯಲ್ಲಿ ರವಿ ದಿವ್ಯದ ಬದಲು ತುಲಾ ಎಂಬ ದಿವ್ಯವಿದೆ. ರವಿ ದಿವ್ಯವನ್ನು ಪ್ರಾಚೀನ ಗ್ರಂಥಗಳಲ್ಲಿ ಹೆಸರಿಸಿದಂತೆ ಕಾಣುವುದಿಲ್ಲ. ಡಾ|| ಕಾಣೆಯವರ ಗ್ರಂಥದಲ್ಲಿ ಅದರ ಹೆಸರಿಲ್ಲ. ಇನ್ನು ಉಳಿದ ಆರು ದಿವ್ಯಗಳನ್ನು ಸಂಕ್ಷಿಪ್ತವಾಗಿ ವಿವರಿಸುತ್ತೇವೆ. ಇಲ್ಲಿಯ ವಿವರಗಳನ್ನು ಡಾ|| ಕಾಣೆಯವರ ಗ್ರಂಥದಿಂದ ಎತ್ತಿಕೊಂಡಿದ್ದೇವೆ.[151]

---

149 "ತತ್ರ ಮಾನುಷಪ್ರಮಾಣಾಸಿರ್ಣೇಯಸ್ಯಾಪಿ ನಿರ್ಣಾಯಕಂ ಯತ್ತದ್ದಿವ್ಯಮಿತಿ ಲೋಕ ಪ್ರಸಿದ್ಧಂ। ಅಪಿನಾ ಮಾನುಷ ಪ್ರಮಾಣ ಸತ್ತ್ವೇಪಿ ಯತ್ರಚ್ಛೈವ ಘಟಾದ್ಯಂಗೀಕಾರಸ್ತತ್ರಾಪ್ಯೇತದ್ಭವತೀತಿ ಸೂಚಿತಂ."

(ರಘುನಂದನನ 'ದಿವ್ಯತತ್ತ್ವ')

(Quoted in 'History of Dharmaśāstra, III, p. 363).

150 SII. IX. i. 143, 1079 A.D.

151 History of Dharmaśāstra, III, pp. 361–78.

ಕೋಶ: ಶೋಧ್ಯನು ರುದ್ರ, ದುರ್ಗೆ ಮುಂತಾದ ದೇವತೆಗಳನ್ನು ಅರ್ಚಿಸಿದ ಮೇಲೆ ವಿಗ್ರಹಗಳನ್ನು ನೀರಿನಲ್ಲಿ ತೊಳೆಯಬೇಕು. ನಂತರ ನ್ಯಾಯಾಧಿಪತಿಯ ಸೂಚನೆಯ ಪ್ರಕಾರ ಶೋಧ್ಯನು 'ಸತ್ಯೇನ ಮಾಭಿರಕ್ಷ' ಎಂಬ ಮಂತ್ರವನ್ನುಚ್ಚರಿಸಿ ಆ ನೀರಲ್ಲಿ ಮೂರು ಬೊಗಸೆ ಕುಡಿಯಬೇಕು. ಇದಾದನಂತರ ಹದಿನಾಲ್ಕು ದಿನಗಳಲ್ಲಿ ಶೋಧ್ಯನಿಗೆ ಯಾವುದೇ ರೀತಿಯ ಅನಾಹುತವಾಗದಿದ್ದರೆ ಅವನು ನಿರಪರಾಧಿ ಎಂದೂ, ಅನಾಹುತವಾದರೆ ಅಪರಾಧಿ ಎಂದೂ, ಶಿಕ್ಷಾರ್ಹನೆಂದೂ ತೀರ್ಮಾನಿಸಬೇಕು. ಇದು ಅತ್ಯಂತ ಸಾತ್ವಿಕವಾದ ದಿವ್ಯ.

ತಂಡುಲ: ಹಿಂದಿನ ದಿನ ಬತ್ತದಿಂದ ಅಕ್ಕಿಯನ್ನು ಬೇರ್ಪಡಿಸಬೇಕು. ಆ ಅಕ್ಕಿಯನ್ನು ಮಡಕೆಯಲ್ಲಿ ತುಂಬಿ ಸೂರ್ಯನ ವಿಗ್ರಹವನ್ನು ತೊಳೆದ ನೀರನ್ನು ಹಾಕಿ ಬಿಸಿಲಿನಲ್ಲಿಡಬೇಕು. ಮಾರನೆಯ ದಿನ ಬೆಳಗ್ಗೆ ಶೋಧ್ಯನು ಆ ಅಕ್ಕಿಯನ್ನು ನುಂಗಿ ಎಲೆಯಮೇಲೆ ಉಗುಳಬೇಕು. ಅದರ ಜೊತೆಯಲ್ಲಿ ರಕ್ತವು ಬಿದ್ದರೆ ಅಪರಾಧಿ, ಇಲ್ಲದಿದ್ದರೆ ನಿರಪರಾಧಿ.

ಅಗ್ನಿ : ಸಗಣಿಯಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಒಂಬತ್ತು ವರ್ತುಲಗಳನ್ನು ಮಾಡಬೇಕು. ಪೂರ್ವಕ್ಕೆ ತಿರುಗಿಕೊಂಡು ಮೊದಲನೆಯ ವರ್ತುಲದಲ್ಲಿ ಶೋಧ್ಯನು ನಿಂತುಕೊಳ್ಳಬೇಕು. ಅವನ ಕೈಗಳ ಮೇಲೆ ಅರಳಿ ಮರದ ಏಳು ಎಲೆಗಳನ್ನಿಟ್ಟು, ಆ ಎಲೆಗಳ ಮೇಲೆ ಚೆನ್ನಾಗಿ ಕಾಯಿಸಿರುವ ಕಬ್ಬಿಣದ ಗುಂಡನ್ನು ಇಡಬೇಕು. ನಂತರ ನಿಧಾನವಾಗಿ ಅವನು ಒಂದೊಂದೇ ವರ್ತುಲವನ್ನು ದಾಟಿಕೊಂಡು ಎಂಟನೇ ವರ್ತುಲಕ್ಕೆ ಬಂದು ಒಂಬತ್ತನೆಯ ವರ್ತುಲದಲ್ಲಿ ಗುಂಡನ್ನು ಹಾಕಬೇಕು. ಕೈಯಲ್ಲಿ ಸುಟ್ಟಿರುವ ಚಿಹ್ನೆಗಳು ಕಾಣಿಸದಿದ್ದರೆ ಮಾತ್ರ ಅವನು ನಿರಪರಾಧಿ. ಚೆನ್ನಾಗಿ ಕಾಯಿಸಿದ ಕುಳವನ್ನು ಶೋಧ್ಯನು ಮುಟ್ಟುವ ಒಂದು ದಿವ್ಯವುಂಟು. ಕಾಯಿಸಿದ ಕುಳವನ್ನು ನಾಲಗೆಯಲ್ಲಿ ಮುಟ್ಟುವಂತೆ ಮಾಡಿದರೆ ಆ ದಿವ್ಯವನ್ನು 'ಫಾಲದಿವ್ಯ'ವೆಂದು ಕರೆಯುತ್ತಾರೆ.

ತಪ್ತಮಾಷ: ಕುದಿಯುವ ತುಪ್ಪದಲ್ಲಿ ಚೆನ್ನಾಗಿ ತೊಳೆದ ಚಿನ್ನದ ಉಂಗುರವನ್ನು ಹಾಕಬೇಕು. ಶೋಧ್ಯನು ತುಪ್ಪವನ್ನು ಮಂತ್ರವೊಂದರಿಂದ ಪ್ರಾರ್ಥಿಸಿ ಆ ಉಂಗುರವನ್ನು ತೆಗೆಯಬೇಕು. ಸುಟ್ಟ ಚಿಹ್ನೆಗಳಿಲ್ಲದಿದ್ದರೆ ಅವನು ನಿರಪರಾಧಿ.

ಜಲ: ಈ ದಿವ್ಯವು ಸ್ವಲ್ಪ ಜಟಿಲವಾದುದು. ಒಂದು ಕೆರೆಯ ಅಂಚಿನಲ್ಲಿ ತೋರಣವೊಂದನ್ನು ಕಟ್ಟಬೇಕು. ಸೊಂಟದುದ್ದದ ನೀರಲ್ಲಿ ಕಂಬವೊಂದನ್ನು ನಟ್ಟು ಅಲ್ಲಿ ಬಲಿಷ್ಠನೊಬ್ಬನನ್ನು ನಿಲ್ಲಿಸಬೇಕು. ಅವನ ಪಕ್ಕದಲ್ಲಿಯೇ ಶೋಧ್ಯನು ನಿಂತಿರುತ್ತಾನೆ. ಪೂಜಾದಿಗಳೆಲ್ಲ ಮುಗಿದಮೇಲೆ ತೋರಣದ ಬಳಿ ನಿಂತುಕೊಂಡು ಬಿಲ್ಲುಗಾರನೊಬ್ಬ ಭೂಮಿಯ ಕಡೆ ಮೂರು ಬಾಣಗಳನ್ನು ಪ್ರಯೋಗಿಸುತ್ತಾನೆ. ವೇಗವಾಗಿ ಓಡುವ ತರುಣನೊಬ್ಬ ಓಡಿಹೋಗಿ ಎರಡನೆಯ ಬಾಣವು ಬಿದ್ದ ಸ್ಥಳದಲ್ಲಿ ನಿಲ್ಲುತ್ತಾನೆ. ನಂತರ ನ್ಯಾಯಾಧಿಪತಿ ಮೂರುಸಾರಿ ಚಪ್ಪಾಳೆ ತಟ್ಟುತ್ತಾನೆ. ಮೂರನೆಯ ಚಪ್ಪಾಳೆಯ ಹೊತ್ತಿಗೆ ಸರಿಯಾಗಿ ಶೋಧ್ಯನು ತನ್ನ ಪಕ್ಕದ ವ್ಯಕ್ತಿಯ ತೊಡೆಯನ್ನು ಹಿಡಿದುಕೊಂಡು ಮುಳುಗಬೇಕು. ಆ ಕ್ಷಣದಲ್ಲೇ ತೋರಣದಿಂದ ಎರಡನೆಯ ವೇಗಶಾಲಿ ವ್ಯಕ್ತಿಯೊಬ್ಬ ಎರಡನೆಯ ಬಾಣ ಬಿದ್ದ ಸ್ಥಳಕ್ಕೆ ಓಡುತ್ತಾನೆ. ಆ ಸ್ಥಳವನ್ನು ಅವನು ಸೇರಿದ ತಕ್ಷಣ, ಅಲ್ಲಿ ನಿಂತಿದ್ದ ಮೊದಲನೆಯ ವ್ಯಕ್ತಿಯು ತೋರಣದ ಕಡೆ ವೇಗವಾಗಿ ಓಡಿ ಬರುತ್ತಾನೆ. ಅವನು ತೋರಣವನ್ನು ಮುಟ್ಟುವ ಮೊದಲೇ ಶೋಧ್ಯನು ನೀರಿನಿಂದ ಮೇಲೆದ್ದರೆ ಅಪರಾಧಿ, ಇಲ್ಲದಿದ್ದರೆ ನಿರಪರಾಧಿ.

ವಿಷ: ಶಾರ್ಙ್ಗ, ವತ್ಸನಾಭ, ಹೈಮವತ ಎಂಬ ಹೆಸರಿನ ವಿಷಗಳಲ್ಲಿ ಯಾವುದಾದರೂ ವಿಷಕ್ಕೆ ಅದರ ಮೂವತ್ತರಷ್ಟು ಪ್ರಮಾಣದ ತುಪ್ಪವನ್ನು ಬೆರೆಯಿಸಿ ರಾತ್ರಿಯ ಕೊನೆಯ ಜಾವದಲ್ಲಿ ಶೋಧ್ಯನಿಗೆ ಕುಡಿಸಬೇಕು. ಮಾರನೆಯ ದಿನ ಅವನಲ್ಲಿ ವಿಷದ ಪರಿಣಾಮವು ಕಾಣಿಸಿಕೊಂಡರೆ ಅವನು ಅಪರಾಧಿ.[152]

152 ದಿವ್ಯಗಳು ಇಷ್ಟೇ ಅಲ್ಲ, ಇನ್ನೂ ಹತ್ತಾರಿವೆ. ಅವುಗಳಲ್ಲಿ ಒಂದು, ಉಂಗುರ ಮತ್ತು ಸರ್ಪಗಳನ್ನು ಮಡಕೆಯಲ್ಲಿ ಹಾಕಿಸಿ ಶೋಧ್ಯನ ಕೈಯಿಂದ ಉಂಗುರವನ್ನು ತೆಗೆಯಿಸುವುದು. ಒಂಬತ್ತು ಅಥವಾ ಹತ್ತನೇ ಶತಮಾನಕ್ಕೆ ಹಿಂದೆ ಇದ್ದ ಕುಲಶೇಖರಾಳ್ವಾರ್ ಎಂಬುವರು ತಮಗೆ ಪ್ರಿಯರಾದ ವೈಷ್ಣವರ ಮೇಲೆ ಬಂದ ಕಳ್ಳತನದ ಆಪಾದನೆಯನ್ನು ನಿವಾರಿಸಲು

ಪ್ರಾಚೀನ ಕರ್ನಾಟಕದಲ್ಲಿ ದಿವ್ಯಗಳನ್ನು ಸ್ಮೃತಿಗಳಲ್ಲಿ ಉಕ್ತವಾಗಿರುವಂತೆಯೇ ನಡಸುತ್ತಿದ್ದರೆಂದು ಹೇಳುವುದು ಕಷ್ಟ. ಅನುಕೂಲಕ್ಕೆ ತಕ್ಕಂತೆ ಮಾರ್ಪಾಟುಗಳನ್ನು ಮಾಡಿ ಸರಳಗೊಳಿಸಿಕೊಂಡಿರಬಹುದು. ಈ ಅನಾಗರಿಕವೆಂದು ಕರೆಯಿಸಿಕೊಳ್ಳಬಹುದಾದ ದಿವ್ಯಗಳು ಪ್ರಾಚೀನ ಕರ್ನಾಟಕದಲ್ಲಿ ತಕ್ಕ ಸಂಖ್ಯೆಯಲ್ಲಿ ನಡೆಯುತ್ತಿದ್ದುವೆಂಬುದಕ್ಕೆ ಗ್ರಂಥಾಧಾರಗಳೂ ಶಾಸನಾಧಾರಗಳೂ ಸಾಕಷ್ಟು ಇವೆ. ಪಂಪಭಾರತದಲ್ಲಿ (1.70) ಶಂತನು ಮಹಾರಾಜನು ಯೋಜನಗಂಧಿಯ ಕೈಯನ್ನು 'ನಲ್ಮೆಗೆ ದಿಬ್ಯಂಬಿಡಿವಂತೆ' ಹಿಡಿದನೆಂದು ಪಂಪನು ವರ್ಣಿಸಿದ್ದಾನೆ. ಶಾಂತಿಪುರಾಣದಲ್ಲಿಯೂ (4.30, ವ) ದಿವ್ಯದ ಹೆಸರಿದೆ. ಪಂಪರಾಮಾಯಣದಲ್ಲಿ (ಸಂಗ್ರಹ, 4.62) ರಾವಣನು ಸೀತೆಯನ್ನು ಮುಟ್ಟಿದ್ದನ್ನು 'ಪಾಪಿ ಪಿಡಿವಂತೆ ದಿವ್ಯದ ಕಾಸಿದ ಕುಱುವಂ' ಎಂದು ನಾಗಚಂದ್ರನು ವರ್ಣಿಸಿದ್ದಾನೆ. ಬಸವಣ್ಣನವರ ವಚನಗಳಲ್ಲಿ (ಸಂಖ್ಯೆ 236, 334, 647) ಹಲವೆಡೆ ದಿವ್ಯದ ಪ್ರಸ್ತಾಪವಿದೆ. ಸಿದ್ಧರಾಮ ಚಾರಿತ್ರದಲ್ಲಿ ವಿಷದಿವ್ಯ ಮತ್ತು ಅಗ್ನಿದಿವ್ಯಗಳು ನಡೆದ ಎರಡು ಘಟನೆಗಳು ಬರುತ್ತವೆ. ರಾಘವಾಂಕನು ಕಾವ್ಯಾರಂಭದಲ್ಲೇ (1.10) "ಉರಿಯ ಹಾಳಾಹಳದ ದಿವ್ಯಮಂ ಗೆಲಿದನ್" ಎಂದು ಸಿದ್ಧರಾಮನನ್ನು ಪ್ರಶಂಸೆಮಾಡಿದ್ದಾನೆ. ಸಿದ್ಧರಾಮನು ಹಾಲಾಹಲವನ್ನು ಪ್ರಸಾದವಾಗಿ ಶಿಷ್ಯರಿಗೆ ಹಂಚಿ ಮಹಿಮೆಯನ್ನು ಮೆರೆದನು (5.14-16) ಇದಾದ ಕೆಲವು ಕಾಲದ ಮೇಲೆ ಅವನ ಶಿಷ್ಯರು ಸೊನ್ನಲಿಗೆಯ ಮಹಿಮೆಯನ್ನು ಪ್ರತಿಷ್ಠಿಸಲು ಸಾಮರ್ಥ್ಯವೊಂದನ್ನು ತೋರಿಸಿ ಎಂದು ಕೇಳಿಕೊಂಡಾಗ ಚನ್ನಾಗಿ ಕಾಯಿಸಿದ ಗುಂಡನ್ನು ಕೈಯಲ್ಲಿ ಹಿಡಿದು ಗುಂಡಿನ ದಿವ್ಯವನ್ನು ಮಾಡಿ ತೋರಿಸಿದಂತೆ ರಾಘವಾಂಕನು ನಿರೂಪಿಸಿದ್ದಾನೆ. (7. 19-20).

ದಿವ್ಯಗಳ ವಿಷಯದಲ್ಲಿ ಕಾವ್ಯಾಧಾರಗಳಿಗಿಂತ ಶಾಸನಾಧಾರಗಳು ಹೆಚ್ಚು ನಂಬಲರ್ಹವಾದುವು. ಕಲಿದೇವರ ದೇವಸ್ಥಾನದಲ್ಲಿ ಸಪ್ತದಿವ್ಯಗಳು ವರ್ತಿಸುವುವೆಂದು ಹೇಳಿ, ಆ ದಿವ್ಯಗಳಿಂದ ಬರುವ ಹಣವನ್ನು ಧರ್ಮಕಾರ್ಯಗಳಿಗಾಗಿ ಬಳಸಬೇಕೆಂದು ಒಂದು ಶಾಸನವು ವಿಧಿಸುತ್ತದೆ.[153] ತಾಳಗುಂದದ ಪ್ರಣವೇಶ್ವರ ದೇವಸ್ಥಾನದಲ್ಲಿ ಸಪ್ತದಿವ್ಯಗಳು ನಡೆಯುತ್ತಿದ್ದುವೆಂದೂ, ಅದರಿಂದ ಬಂದ ಹಣವನ್ನು ಪೂಜಾದಿಗಳಿಗೆ ಬಳಸಬೇಕೆಂದೂ ಮತ್ತೊಂದು ಶಾಸನವು ಹೇಳುತ್ತದೆ.[154] ಸು. ಕ್ರಿ.ಶ. 1580ರ ಶಾಸನವೊಂದು[155] ಕುಂಬಾರರಿಗೂ ನಾಯಂದರು ಮತ್ತು ಆಗಸರಿಗೂ ನಡೆದ ವಿವಾದವೊಂದನ್ನು ಹೇಳುತ್ತದೆ. ಕುಂಬಾರರ ಮದುವೆಯ ಸಮಯಗಳಲ್ಲಿ ನಾಯಂದರು ಕುಂಬಾರರ ಕಾಲುಗುರನ್ನು ತೆಗೆಯುವುದಿಲ್ಲವೆಂದು, ಆಗಸರು ಚಪ್ಪರಕ್ಕೆ ಮೇಲುಕಟ್ಟನ್ನು ಕಟ್ಟುವುದಿಲ್ಲವೆಂದು ಹೇಳುತ್ತಾರೆ. ಈ ವಿಷಯದಲ್ಲಿ ತೀರ್ಪು ಅಸಾಧ್ಯವಾದಾಗ ಕುಂಬಾರರು ಹರದನಹಳ್ಳಿಯ ದಿವ್ಯಲಿಂಗೇಶ್ವರನ ಮುಂದೆ (ಕುದಿಯುವ) ತುಪ್ಪದಲ್ಲಿ ಕೈಯಿಕ್ಕಿ ಗೆಲ್ಲುತ್ತಾರೆ. ನಾಯಂದರು ಮತ್ತು ಆಗಸರು ಕುಂಬಾರರ ಇಷ್ಟಕ್ಕೆ ಬಾಗುತ್ತಾರೆ.[156]

---

ವಿಷಸರ್ಪವಿದ್ದ ಮಡಕೆಯೊಳಕ್ಕೆ ಕೈಹಾಕಿ ಗೆದ್ದಂತೆ ತಿಳಿದುಬರುತ್ತದೆ. ತಾನೇ ಸ್ವತಃ ರಾಜನಾಗಿದ್ದರೂ ಶೋಧ್ಯನಂತೆ ನಡೆದುಕೊಂಡನು ಎಂಬುದು ಗಮನಾರ್ಹ (S. Krishnaswami Iyengar: Early History of Vaiṣṇavism in South India, p. 24).

[153] SII. IX. i. 143, 1079 A.D.

[154] EC. VII. Sk. 185, 1158 A.D.

[155] EC. IV. YI. 2, C. 1580 A.D.

[156] ಮೈಸೂರು ಜಿಲ್ಲೆಯ ನಾನಾ ತಾಲ್ಲೂಕುಗಳಲ್ಲಿ ವಿಚಾರಿಸಿದಾಗ ಕೆಲವು ಸ್ವಾರಸ್ಯವಾದ ವಿಷಯಗಳು ತಿಳಿದು ಬಂದುವು. ಮದುವೆಯ ಸಮಯದಲ್ಲಿ 'ಉಗುರು ತೆಗೆಯುವ ಶಾಸ್ತ್ರ'ವೆಂಬ ಆಚರಣೆ ಇವೆ. ಆ ಸಮಯದಲ್ಲಿ ಗಂಡಿನ ಮತ್ತು ಹೆಣ್ಣಿನ ಪಾದಗಳನ್ನು ಹೊಸಲ ಮೇಲಿರಿಸಿ ನಾಯಂದ ಪಂಗಡದವನೊಬ್ಬನು ಉಗುರುಗಳನ್ನು ತೆಗೆಯುವ ಕತ್ತಿಯಿಂದ ಹೊಸಲ ಮೇಲೆ ನಾಲ್ಕೈದು ಗೆರೆಗಳನ್ನು ಎಳೆಯುತ್ತಾನೆ. ಚಿಕ್ಕವಯಸ್ಸಿನ ಹುಡುಗರು ತಾವೇ ಕಾಲುಗುರುಗಳನ್ನು ತೆಗೆದುಕೊಳ್ಳುವುದನ್ನು ಕಂಡ ಹಿರಿಯರು 'ನಿನಗೇನವಸರ, ತಾಳು, ಮದುವೆಯ ಸಮಯದಲ್ಲಿ ತೆಗೆಯಿಸಿಕೊಳ್ಳುವಂತೆ' ಎಂದು ಹಾಸ್ಯಮಾಡುತ್ತಾರೆ. ಎಂದರೆ, ಹಿಂದೊಮ್ಮೆ ಮದುವೆಯ ಸಮಯದಲ್ಲಿ ನಿಜವಾಗಿಯೂ ಉಗುರುಗಳನ್ನು ತೆಗೆಯುತ್ತಿದ್ದು, ಈಗ ಅದು 'ಶಾಸ್ತ್ರ'ವಾಗಿ ಉಳಿದಿದೆ. ಈಗ ಕ್ಷೌರಿಕರು ಕುಂಬಾರರ ಉಗುರುಗಳನ್ನು ತೆಗೆಯಲು ಒಪ್ಪುತ್ತಿಲ್ಲ. ಅಷ್ಟೇ ಅಲ್ಲ, ಕುಂಬಾರರ

ಮತ್ತೊಂದು ಶಾಸನದಲ್ಲಿ[157] ಸೀಮಾವಿವಾದವೊಂದು ದಿವ್ಯದ ಸಹಾಯದಿಂದ 'ತೀರ್ಮಾನವಾದ ವಿಷಯ ನಿರೂಪಿತವಾಗಿದೆ. ಶಾಸನವು ಬಹಳ ತ್ರುಟಿತವಾಗಿರುವುದರಿಂದ, ಭಾಷೆ ಬಹಳ ಅಶುದ್ಧವಾಗಿರುವುದರಿಂದ, ಅರ್ಥ ಬಹಳ ಅಸ್ಪಷ್ಟ. ಯಾವುದೋ ಭೂಮಿಯ ವಿಷಯದಲ್ಲಿ ಮೂರುಡಿಪುರದವರಿಗೂ ಗರುಡನ ಹಳ್ಳಿಯವರಿಗೂ 'ಸೀಮಾವಿವಾದ' ಉದ್ಭವಿಸುತ್ತದೆ. ಆ ಭೂಮಿಯ ವಿಷಯವು ನೇರವಾಗಿ ಕನ್ನಯ್ಯ ಎಂಬಾತನಿಗೆ ಸಂಬಂಧಿಸಿದಂತೆ ಕಾಣುತ್ತದೆ. ಅವನು ರಾಜಧಾನಿ ದೋರಸಮುದ್ರದ ಹೊಯ್ಸಳೇಶ್ವರನ ಸನ್ನಿಧಿಯಲ್ಲಿ ದಿವ್ಯವನ್ನು ಹಿಡಿದು ಗೆಲ್ಲುತ್ತಾನೆ. ಆ ದಿವ್ಯದ ಸ್ವರೂಪವೇನು ಎಂಬುದು ಸ್ಪಷ್ಟವಾಗುವುದಿಲ್ಲ.

ಈ ಸಂಪ್ರದಾಯವು ಭಾರತದಿಂದ ಇನ್ನೂ ಹೋಗಿಲ್ಲ. ಕ್ರಿ. ಶ. 1783ರಲ್ಲಿ ಕಾಶಿಯ ಮುಖ್ಯ ನ್ಯಾಯಾಧೀಶರು ಸ್ಮೃತಿಗಳಲ್ಲಿ ಹೇಳಿರುವಂತೆ ದಿವ್ಯಗಳನ್ನು ನಡೆಸುತ್ತಿದ್ದರು.[158] ಆಧುನಿಕ ಬಂಗಾಳದಲ್ಲಿ ಅಗ್ನಿದಿವ್ಯ ಈಗಲೂ ಉಂಟೆಂದು ಹೇಳುತ್ತಾರೆ.[159] ಇಂದಿಗೂ ಹಳ್ಳಿಗಳಲ್ಲಿ ಜಗಳ ಬಂದಾಗ ಕುದಿಯುವ ತುಪ್ಪದಲ್ಲಿ ಕೈ ಅದ್ದುವ, ದೇವರ ಗಂಟೆಯನ್ನು ಬಾರಿಸುವ, ದೇವರ ದೀಪವನ್ನು ಆರಿಸುವ ಅಥವಾ ಸೆರಗಿನಲ್ಲಿ ಕೆಂಡವನ್ನು ಹಾಕಿಸುವ ಮಾತುಗಳು ಬರುತ್ತವೆ. ಇವೆಲ್ಲಾ ಒಂದಾನೊಂದು ಕಾಲದಲ್ಲಿದ್ದ ದಿವ್ಯದ ಅವಶೇಷಗಳು. ನಮ್ಮ ಅಧ್ಯಯನದ ಅವಧಿಯಲ್ಲಿ (ಕ್ರಿ. ಶ. 450–1150) ಅದು ಅಷ್ಟು ಸಾರ್ವತ್ರಿಕವಾಗಿ ಹಬ್ಬಿದ್ದ ಸಂಪ್ರದಾಯ ಎಂಬ ಭಾವನೆ ಬರುವುದಿಲ್ಲ. ಆಧುನಿಕ ಕಾಲದಲ್ಲಿ ಈ ಸಂಪ್ರದಾಯವು ದೇಶದಿಂದ ಕಣ್ಮರೆಯಾಗುತ್ತಿರುವುದು ಒಂದು ಶುಭಸೂಚನೆ.

ಕರ್ನಾಟಕದಲ್ಲಿ ದಿವ್ಯಗಳು ನಡೆಯುತ್ತಿದ್ದುದು ಸಾಮಾನ್ಯವಾಗಿ ದೇವಸ್ಥಾನಗಳಲ್ಲಿ, ಬ್ರಾಹ್ಮಣರ ಸಮಕ್ಷದಲ್ಲಿ. ದಿವ್ಯಗಳಿಗೆ ಪ್ರಸಿದ್ಧವಾಗಿದ್ದ ದೇವಸ್ಥಾನಗಳು ಹಲವಿದ್ದುವು. ತಾಳಗುಂದದ ಪ್ರಣವೇಶ್ವರ ದೇವಸ್ಥಾನ, ಹರದನ ಹಳ್ಳಿಯ ದಿವ್ಯಲಿಂಗೇಶ್ವರನ (ಈ ಹೆಸರು ಗಮನಾರ್ಹ) ದೇವಸ್ಥಾನಗಳನ್ನು ಹೆಸರಿಸ ಬಹುದು. ವಿವಾದವು ದಿವ್ಯದಿಂದಲೇ ಪರಿಹಾರವಾಗಬೇಕಾದ ಸಂದರ್ಭವು ಬಂದಾಗ ದೂರದ ಊರುಗಳಿಂದ ಅಂತಹ ದೇವಸ್ಥಾನಗಳಿಗೆ ಬರುತ್ತಿದ್ದರು. ದಿವ್ಯಗಳನ್ನು ನಡೆಯಿಸುತ್ತಿದ್ದ ದೇವಸ್ಥಾನದ ಅಧಿಕಾರಿಗಳು ದಿವ್ಯಗಳಿಗೆ ಕಾರಣರಾದ ವ್ಯಕ್ತಿಗಳಿಂದ ಹಣವನ್ನು ವಸೂಲುಮಾಡಿ ಅದನ್ನು ದೇವಸ್ಥಾನದ ಆಸ್ತಿಗೆ ಸೇರಿಸುತ್ತಿದ್ದರು. ದಿವ್ಯಗಳು ದೇವಸ್ಥಾನದ ಆದಾಯವನ್ನು ಹೆಚ್ಚಿಸಲು ಕಾರಣವಾಗಿದ್ದುವು. ಹೀಗೆ ದೇವಸ್ಥಾನವು ಜನರ ಕಣ್ಣಲ್ಲಿ ಭಗವಂತನೇ ನ್ಯಾಯಾಧಿಪತಿಯಾಗಿರುವ ನ್ಯಾಯಾಲಯವಾಗಿದ್ದಿತು. ಆದ್ದರಿಂದ ದಿವ್ಯಗಳ ವಿಷಯವನ್ನು ಸ್ವಲ್ಪ ವಿಸ್ತಾರವಾಗಿಯೇ ಈ ಭಾಗದಲ್ಲಿ ಚರ್ಚಿಸಲಾಗಿದೆ.

## ದೇವಸ್ಥಾನದ ವೃಷಭ

ಆಕಳುಗಳನ್ನೂ ಮೇಕೆಗಳನ್ನೂ ದೇವಸ್ಥಾನಗಳಿಗೆ ದಾನವಾಗಿ ಕೊಡುತ್ತಿದ್ದ ಸಂಪ್ರದಾಯವು ತಮಿಳು ನಾಡಿನಲ್ಲಿದ್ದಂತೆ ಅಲ್ಲಿಯ ಶಾಸನಗಳಿಂದ ತಿಳಿದುಬರುತ್ತದೆ.[160] ನಮಗೆ ತಿಳಿದಮಟ್ಟಿಗೆ ಕರ್ನಾಟಕದಲ್ಲಿ ಈ

ಮದುವೆಗಳಿಗೆ ವಾದ್ಯಗಳನ್ನು ಬಾರಿಸಲೂ ಒಪ್ಪುತ್ತಿಲ್ಲ. ವಾದ್ಯಗಳಿಗೆ ಜೇರೆಯವರನ್ನು ಕರೆಯಿಸುತ್ತಾರೆ. ಹಾಗೆಯೇ ಅಗಸರು ಕುಂಬಾರರ ಮದುವೆಗಳ ಚಪ್ಪರಕ್ಕೆ ಮೇಲುಕಟ್ಟನ್ನು ಕಟ್ಟುತ್ತಿಲ್ಲ. ಇದರ ಅರ್ಥ ಇಷ್ಟೇ—ಕುಂಬಾರರು ದಿವ್ಯವನ್ನು ಹಿಡಿದು ಗೆದ್ದರೂ, ಆ ಊರಿನ ಜನ, ಆ ಕಾಲಕ್ಕೆ ಒಪ್ಪಿಕೊಂಡಿರಬೇಕು. ಮುಂದೆ ಏನಾಯಿತೋ ತಿಳಿಯದು. ಉಳಿದ ಕಡೆಗಳಲ್ಲಂತೂ ಹಿಂದಿನ ಪರಿಸ್ಥಿತಿಯೇ ಮುಂದುವರಿಯುತ್ತಿದೆ.

157 EC III. Md. 79, C. 1275 A.D.

158 Encyclopaedia of Religion and Ethics, IX. p. 522.

159 Saratchandra Mitra : 'Fire-ordeals' (Journal of the Mythic Society, XXIV, p. 232).

160 Appadorai : Economic Conditions in South India, I,p. 294.

ಪದ್ಧತಿಯು ಅಷ್ಟಾಗಿ ಇದ್ದಿಲ್ಲ.[161] ಆದರೆ ದೇವರ ಹೆಸರಿನಲ್ಲಿ ಗೂಳಿಯೊಂದನ್ನು ಬಿಡುವ ಸಂಪ್ರದಾಯವು ಹಿಂದೆಯೂ ಇದ್ದಿತು, ಈಗಲೂ ಇದೆ. ಆ ಗೂಳಿಯನ್ನು 'ದೇವರ ಗೂಳಿ', 'ದೇವರ ಎತ್ತು' ಎಂದು ಕರೆಯುವುದುಂಟು. ಊರಿನ ಆಕಳುಗಳಿಗೆ ಗರ್ಭವನ್ನು ಕಟ್ಟಿಸಲು ಅದನ್ನು ಉಪಯೋಗಿಸಿಕೊಳ್ಳುತ್ತಾರೆ. ಅದು ದೇವರ ಆಸ್ತಿಯೂ ಹೌದು, ಊರಿನ ಆಸ್ತಿಯೂ ಹೌದು. ಆದ್ದರಿಂದ ಅದು ಎಲ್ಲಿ ಬೇಕಾದರೂ ಏನನ್ನಾದರೂ ತಿನ್ನಬಹುದು. ಅದಕ್ಕೆ ಯಾವ ನಿರ್ಬಂಧವೂ ಇರುವುದಿಲ್ಲ. ಆದ್ದರಿಂದ ಗೂಳಿಗಳು ಸಾಮಾನ್ಯವಾಗಿ ಬಹು ಬಲಿಷ್ಠವಾಗಿರುತ್ತವೆ.

ದೇವರ ಗೂಳಿಗೆ ಸಂಬಂಧಿಸಿದ ಬಹು ಗಮನೀಯವಾದ ಶಾಸನವೊಂದಿದೆ.[162] ಕೂಜವಳ್ಳಿ ಎಂಬ ಗ್ರಾಮದ ಕೈಕೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದಂತೆ ಒಂದು ವೃಷಭವಿದ್ದಿತು. ಅದು ಒಂದು ದಿನ ವಾಮನಯ್ಯ ಎನ್ನುವನ ಹೊಲಕ್ಕೆ ನುಗ್ಗಿ ಮೇಯುತ್ತಿರುತ್ತದೆ. ಆಗ 'ಕಡುಮೂರ್ಖತೆ'ಯಿಂದ ವಾಮನಭಟ್ಟನು ದೊಡ್ಡ ಕೋಲಿನಿಂದ 'ಬಜಿಸಿಡಿಲ್ ಎಜಿಪಂತೆ' ವೃಷಭವನ್ನು ಹೊಡೆಯುತ್ತಾನೆ. ಆಗ ಅದು 'ಕಟಕಂಡ ಸರಣ್ಯ' (=ಕಾಲಕಂಠ ಶರಣು, ಶಿವನೇ ರಕ್ಷಕನು ?) ಎಂದು ಕೂಗಿ ಪ್ರಾಣವನ್ನು ಬಿಡುತ್ತದೆ. 'ಪರೀಕ್ಷಿಸದೆ ಮುಂಗುರಿಯನ್ನು ಬ್ರಾಹ್ಮಣಿಯೊಬ್ಬಳು ಕೊಂದಳು ಎಂಬ ನಾಣ್ಣುಡಿಯು ನಿಜವಾಯಿತು.'[163] ಆಗ ವಾಮನಭಟ್ಟನೇ ಊರಿನ ಮಹಾಜನರೆಲ್ಲರನ್ನೂ ಕರೆದುತಂದು ತನ್ನ ತಪ್ಪೊಪ್ಪಿಕೊಂಡು ಸ್ವಯಂಭೂ ದೇವರಿಗೆ ಭೂಮಿಯನ್ನು ದಾನವಾಗಿ ಕೊಡುತ್ತಾನೆ.

## ಉಪಸಂಹಾರ

ಪ್ರಾಚೀನ ದೇವಸ್ಥಾನವು ಧಾರ್ಮಿಕ ಸಂಸ್ಥೆಯೂ ಹೌದು, ಸಾಮಾಜಿಕ ಸಂಸ್ಥೆಯೂ ಹೌದು. ಧರ್ಮವು ಮುಖ್ಯವಾಗಿ ವ್ಯಕ್ತಿಯ ಉದ್ಧಾರಕ್ಕೆ ಅಥವಾ ಮೋಕ್ಷಕ್ಕೆ ದಾರಿಯನ್ನು ಹಾಕಿಕೊಡುತ್ತದೆ. ಏಕೆಂದರೆ ಮೋಕ್ಷವನ್ನು ಪಡೆಯುವವನು ವ್ಯಕ್ತಿಯೇ ಹೊರತು ಸಮಾಜವಲ್ಲ. ಆದರೆ ಧರ್ಮ ಉಳಿಯಬೇಕಾದರೆ ಅದು ಸಂಘ ಅಥವಾ ಸಂಸ್ಥೆಗಳನ್ನು ಕಟ್ಟಬೇಕು. ಅದರ ಅನುಯಾಯಿಗಳು ಆಗಾಗ್ಗೆ ಕಲೆಯಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು. ಧರ್ಮದ ಹೆಸರಲ್ಲಿ ಜನ ಪರಸ್ಪರ ಹತ್ತಿರವಾಗುತ್ತಾರೆ (ಹಾಗೆಯೇ, ದುರದೃಷ್ಟವಶಾತ್, ಉಳಿದ ಪಂಗಡಗಳಿಂದ ದೂರವಾಗುತ್ತಾರೆ). ಧರ್ಮದ ಹೆಸರಲ್ಲಿ ಕಲೆತಾಗ ಅವರ ಪರೋಪಕಾರ ಬುದ್ಧಿಯು ಜಾಗ್ರತವಾಗುತ್ತದೆ. ಶ್ರೀಮಂತನು ಮನೆಯಲ್ಲಿ ಕೃಪಣನಾಗಿರಬಹುದು. ಆದರೆ ಸಾವಿರಾರು ಜನರಿರುವ ಗೋಷ್ಠಿಯಲ್ಲಿ ಅವನ ಔದಾರ್ಯವು ಎಚ್ಚರಗೊಳ್ಳುವುದು ಎಲ್ಲರಿಗೂ ತಿಳಿದ ವಿಷಯವೇ. ವಿದ್ವಾಂಸರೊಬ್ಬರು ಹೇಳುವಂತೆ– "ಒಂದೊಂದು ಧಾರ್ಮಿಕ ಕ್ರಿಯೆಯೂ ಏಕಕಾಲದಲ್ಲಿ ವೈಯಕ್ತಿಕ ಕ್ರಿಯೆಯೂ ಹೌದು, ಸಾಮಾಜಿಕ ಕ್ರಿಯೆಯೂ ಹೌದು. 'ಒಬ್ಬ ಕ್ರಿಶ್ಚಿಯನ್ನನು ಕ್ರಿಶ್ಚಿಯನ್ನನೇ ಅಲ್ಲ' ಎಂಬ ಹೇಳಿಕೆಯು ಸಾಮಾನ್ಯವಾಗಿ ಎಲ್ಲ ಧರ್ಮಗಳಿಗೂ

---

[161] ಒಂದೇ ಒಂದು ಶಾಸನದಲ್ಲಿ ಮಾತ್ರ ದೇವಸ್ಥಾನಕ್ಕೆ ಹನ್ನೆರಡು ಹಸುಗಳನ್ನು ಬಿಟ್ಟುಕೊಟ್ಟ ವಿಷಯ ಬಂದಿದೆ. (EC. VII. Hl. 64, 974 A.D.). ಇನ್ನೊಂದು ಉದಾಹರಣೆ, ಹೆಗ್ಗಡದೇವನಕೋಟೆ ತಾಲೂಕಿನ ದೇಕಬ್ಬೆ ಶಾಸನದಲ್ಲಿದೆ. ದೇಕಬ್ಬೆ ಸಹಗಮನ ಮಾಡುವ ಮೊದಲು "ಪಶು, ಧನ, ದನ" ಇತ್ಯಾದಿಗಳನ್ನು ದೇವರಿಗೆ ನೀಡಿದಳೆಂದು ಅಲ್ಲಿದೆ (EC. IV. Hg. 18, 1057 A.D.). ಇಲ್ಲಿಯು ಪಶು, ದನಗಳಿಗೆ ಏನು ವ್ಯತ್ಯಾಸ ಮಾಡಬೇಕೋ ತಿಳಿಯದು.

[162] MAR (1927). p. 53, C. 1040 A.D.

[163] ಒಬ್ಬ ತಾಯಿಯು ತೊಟ್ಟಿಲಲ್ಲಿ ಮಲಗಿದ್ದ ತನ್ನ ಮಗುವನ್ನು ನೋಡಿಕೊಳ್ಳುವಂತೆ ಒಂದು ಮುಂಗುಸಿಯನ್ನು ಕಾವಲಿಟ್ಟು ಹೋಗುತ್ತಾಳೆ. ಸ್ವಲ್ಪ ಹೊತ್ತಿನಲ್ಲೇ ತೊಟ್ಟಿಲ ಹಗ್ಗದಿಂದ ಇಳಿದು ಬರುತ್ತಿದ್ದ ಹಾವನ್ನು ಮುಂಗುಸಿಯು ಕೊಂದುಹಾಕುತ್ತದೆ. ಹಿಂತಿರುಗಿ ಬಂದ ತಾಯಿಯು ನಿಜವಾಗಿ ಏನು ನಡೆಯಿತೆಂಬುದನ್ನು ಪರಿಶೀಲಿಸದೆ ರಕ್ತದಿಂದ ಕೆಂಪಾದ ಮುಂಗುಸಿಯ ಬಾಯನ್ನು ಕಂಡು, ತನ್ನ ಮಗುವನ್ನು ಕೊಂದಿದೆ ಎಂದು ತಪ್ಪು ತಿಳಿದು ಅದನ್ನು ಕೊಂದುಹಾಕಿ ಆಮೇಲೆ ಪಶ್ಚಾತ್ತಾಪ ಪಡುತ್ತಾಳೆ. ಇದು ಪಂಚತಂತ್ರದಲ್ಲಿ ಬರುವ ಕಥೆ.

ಅನ್ವಯಿಸುತ್ತದೆ."[164] ನಮ್ಮ ಪ್ರಾಚೀನ ದೇವಸ್ಥಾನಗಳು ಮೇಲಿನ ಮಾತುಗಳನ್ನು ಸಮರ್ಥಿಸುತ್ತವೆ. ಬೌದ್ಧ, ಜೈನ, ಶೈವಧರ್ಮಗಳು ಪ್ರಚಾರಗೊಂಡದ್ದು ದೇವಸ್ಥಾನಗಳಿಂದ. ಮುಂದೆ ಬಂದ ವೀರಶೈವ ಧರ್ಮದಿಂದ ದೇವಸ್ಥಾನದಂತಹ ಬಲಿಷ್ಠ ಸಂಸ್ಥೆಯನ್ನು ನಿರ್ಮೂಲಗೊಳಿಸುವುದು ಅಸಾಧ್ಯವಾದಾಗ, ವೀರಶೈವ ಧರ್ಮವು ತನಗೆ ಸಮ್ಮತವಲ್ಲದ ಸ್ಥಾವರಲಿಂಗಪೂಜೆಯನ್ನು ಕ್ರಮೇಣ ಒಪ್ಪಿಕೊಳ್ಳಬೇಕಾಯಿತು. ಇದು ಒಂದು ರೀತಿಯಲ್ಲಿ ಅನಿವಾರ್ಯವೇ. ಜನತೆಯಲ್ಲಿ ದೇವಸ್ಥಾನ, ದೇವರು ಎಂದರೆ ಯಾವುದೋ ಒಂದು ರೀತಿಯ ನಿಗೂಢ ಭಕ್ತಿಯು ರಕ್ತಗತವಾಗಿರುತ್ತದೆ. ಅದನ್ನು ತಪ್ಪಿಸುವುದು ಕಷ್ಟ. ಅಲ್ಲದೆ, ಧರ್ಮವು ಪ್ರತ್ಯಕ್ಷ ಸಾಕ್ಷಿಗಳಿಲ್ಲದ, ಜನತೆಯ ಶ್ರದ್ಧೆಯನ್ನವಲಂಬಿಸಿರುವ ಲೋಕವೊಂದನ್ನು ಜನತೆಯ ಮುಂದಿಡುತ್ತದೆ. ಅಂತಹ ಲೋಕದಲ್ಲಿ ನಂಬಿಕೆಯಿರುವ ಜನರು ಆಗಾಗ್ಗೆ ಒಟ್ಟಿಗೆ ಸೇರಿ ಶ್ರದ್ಧೆಯನ್ನು ಹೊಸತುಗೊಳಿಸಿಕೊಳ್ಳದಿದ್ದರೆ ಜನರಿಗೆ ಆ ಲೋಕದ ವಿಷಯದಲ್ಲಿ, ತತ್ಫಲವಾಗಿ ಆ ಧರ್ಮದ ವಿಷಯದಲ್ಲಿ ನಂಬಿಕೆಯೇ ಹೋಗಬಹುದು.[165]

ಶಾಸನಗಳಲ್ಲಿ ಬರುವ ಅಸಂಖ್ಯಾತ ದತ್ತಿಗಳನ್ನೂ ದಾನಿಗಳ ಔದಾರ್ಯವನ್ನೂ ಕಂಡಾಗ ಆ ದಾನಿಗಳೆಲ್ಲರೂ ಸ್ವಭಾವತಃ ಉದಾರಿಗಳೇ ಅಥವಾ ಸಾಂಘಿಕವಾದ ಆವರಣದ ಮಹಿಮೆಯಿಂದ ಪ್ರಚೋದಿತರೇ ಎಂಬ ಸಂದೇಹವೂ ಉದ್ಭವಿಸಬಹುದು. ಎರಡೂ ಸಾಧ್ಯ. ಜೋಕಿಮ್ ವಾಕ್ ಹೇಳುವಂತೆ-"ಪ್ರಾರ್ಥನೆ, ಯಜ್ಞ, ಧಾರ್ಮಿಕ ವಿಧಿಗಳು ಇವು ಅವುಗಳಲ್ಲಿ ಭಾಗವಹಿಸುವವರ ಅನುಭವಗಳ ಅಭಿವ್ಯಕ್ತಿಯನ್ನು ಮಾಡುವುದಲ್ಲದೆ ಆ ಸಮೂಹದ ಮನೋಭಾವ ಮತ್ತು ವ್ಯವಸ್ಥೆಗಳನ್ನು ರೂಪಿಸುವುದರಲ್ಲಿ ಮತ್ತು ನಿರ್ಣಯಿಸುವುದರಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತವೆ."[166] ದೊಡ್ಡ ದೇವಸ್ಥಾನವನ್ನು ಕಟ್ಟಿ ಮುಗಿಸಿದಾಗಲೋ, ಉತ್ಸವವೊಂದು ವೈಭವದಿಂದ ನೆರವೇರಿದಾಗಲೋ ಅಥವಾ ರಾಜನ ಆಗಮನದಿಂದ ವಿಶೇಷ ಪೂಜೆಗಳು ನಡೆದಾಗಲೋ ಅಲ್ಲಿ ಸೇರಿದ್ದ ಜನರ ದೊಡ್ಡ ಸಮೂಹದಲ್ಲಿ ದಾನಬುದ್ಧಿಯು ಸಾಂಕ್ರಾಮಿಕವಾಗಿ ಹರಡುತ್ತಿದ್ದುದನ್ನು ಊಹಿಸಿಕೊಳ್ಳಬಹುದು. ಶ್ರೀಮಂತರ ಐಶ್ವರ್ಯವು ಬಡವರ ಕಡೆಗೆ, ಕಲೆಯ ಕಡೆಗೆ, ವಿದ್ಯೆಯ ಕಡೆಗೆ ಹರಿಯುವಂತೆ ಮಾಡಿರುವುದರಲ್ಲಿ ದೇವಸ್ಥಾನದ ಪಾತ್ರವು ಅಗಾಧವಾದುದು.

ದೇವಸ್ಥಾನಗಳ ಆದಾಯವು ಇತರ ಆದಾಯಗಳೊಡನೆ ಮಿಶ್ರಗೊಂಡರೆ, ಆ ಆದಾಯವು ಸ್ವಾರ್ಥಕ್ಕಾಗಿ ಬಳಕೆಯಾಗಬಹುದೆಂದು ಹೆದರಿ ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನು ದೇವಸ್ಥಾನಗಳ ಆಡಳಿತವನ್ನು ಇತರ ವಿಭಾಗಗಳಿಂದ ಪ್ರತ್ಯೇಕವಾಗಿಟ್ಟಿದ್ದನು.[167] ಈ ಕಾರಣಕ್ಕಾಗಿ ಹೌದೋ ಅಲ್ಲವೋ, ಅಂತೂ,

---

[164] "Each religious act is always simaltaneously an individual and a social act, that the phrase 'Unus Christianus, nullus Christianus'–one Christian is no Christian–applies in a large sense to all religions."–Scheler.

(Quoted by Joachim Wach in his 'Sociology of Religion', p. 29).

[165] "The imaginary world, unsupported as it is by organic drives of factual knowledge, would be in danger of losing its grip on the mind if it were not constantly renewed by frequent contacts with others holding the same transcendent beliefs. Consequently, collective communication is the best method of renewing the other-worldly beliefs and the values that go with them"—Kingsley Davis : Human Society, p. 528.

[166] Joachim Wach : Sociology of Religion, p. 40.

[167] S. Krishnaswami Iyengar : Some Contributions of South India to Indian Culture, p. 420.

ಅವನಿಗಿಂತ ಹಿಂದಿನ ರಾಜರು ದೇವಸ್ಥಾನದ ಆದಾಯವನ್ನು ದೇವಸ್ಥಾನಕ್ಕೂ, ಅದರ ಅಂಗಗಳಾದ ಸತ್ರ ಮುಂತಾದುವುಗಳಿಗೂ ವಿನಿಯೋಗವಾಗುವಂತೆ ಏರ್ಪಾಟುಮಾಡಿದ್ದರು. ಒಂದು ಆಡಳಿತ ಹೋಗಿ ಮತ್ತೊಂದು ಆಡಳಿತ ಬಂದರೂ, ಆಡಳಿತದಲ್ಲಿ ಏನೇ ವ್ಯತ್ಯಾಸಗಳಾದರೂ ದೇವಸ್ಥಾನಗಳ ದತ್ತಿಗಳನ್ನು ಮಾನ್ಯಮಾಡುವುದು ಹೊಸ ಆಡಳಿತದ, ಹೊಸ ರಾಜಮನೆತನದ ಕರ್ತವ್ಯಗಳಲ್ಲೊಂದಾಗಿತ್ತು. ಇದಕ್ಕೆ ಅತ್ಯುತ್ತಮ ಉದಾಹರಣೆಯನ್ನು ಮಳವಳ್ಳಿಯ ಶಾಸನಗಳು ಒದಗಿಸುತ್ತವೆ. ಸು. ಕ್ರಿ. ಶ. 150ರಲ್ಲಿ ಶಾತವಾಹನರು ಮಳವಳ್ಳಿಯ ("ಮಟ್ಟಪಟ್ಟಿ") ದೇವರಿಗೆ ಕೊಟ್ಟ ದಾನವನ್ನು[168] ಸು. ಕ್ರಿ. ಶ. 250ರಲ್ಲಿ ಕದಂಬರ ದೊರೆ ಶಿವಸ್ಕಂದವರ್ಮನು ಊರ್ಜಿತಗೊಳಿಸುತ್ತಾನೆ.[169] ನಮಗೆ ತಿಳಿದಮಟ್ಟಿಗೆ ದೇವಸ್ಥಾನಗಳ ಆದಾಯವನ್ನು ತಮಗಾಗಲಿ, ಇತರ ಉದ್ದೇಶಗಳಿಗಾಗಲಿ ರಾಜರು ಬಳಸಿಕೊಂಡ ನಿದರ್ಶನಗಳಿಲ್ಲ.

ದೇಶದ ಆರ್ಥಿಕವ್ಯವಸ್ಥೆಯಲ್ಲಿ ದೇವಸ್ಥಾನವು ವಹಿಸಿದ ಪಾತ್ರವನ್ನು ವಿಸ್ತಾರವಾಗಿ ಚರ್ಚಿಸಿದ್ದಾರೆ ಶ್ರೀ ಎ. ಅಪ್ಪಾದೊರೈ ಅವರು. "ದೇವಸ್ಥಾನವು ಹಲವರಿಗೆ ಉದ್ಯೋಗವನ್ನು ಒದಗಿಸಿಕೊಟ್ಟ ಯಜಮಾನನಾಗಿದೆ (Employer). ಅದರ ಪರಿಚಾರಕರ ಉದ್ಯೋಗದ ಹಕ್ಕು ಅವರ ಮನೆತನಕ್ಕೆ ಸೇರಿದ್ದು. ಉದ್ಯೋಗಿಗಳಿಗೆ ಸಂಬಳವನ್ನು ಭೂಮಿಯ ರೂಪದಲ್ಲಿ, ಕೆಲವು ಸಾರಿ ಹಣದ ರೂಪದಲ್ಲಿ ಕೊಡಲಾಗುತ್ತಿತ್ತು. ತಾತ್ಕಾಲಿಕವಾಗಿ ಉದ್ಯೋಗಿಗಳನ್ನು ನೇಮಿಸಿಕೊಳ್ಳುತ್ತಿತ್ತು–ಉದಾಹರಣೆಗೆ, ರಿಪೇರಿ ಕೆಲಸ ಮುಂತಾದುವುಗಳಿಗೆ. ದೇವಸ್ಥಾನವು ದೊಡ್ಡ ಜಮೀನ್ದಾರನೂ ಹೌದು. ಈ ಭೂಮಿ ಬಹುಮಟ್ಟಿಗೆ ದಾನವಾಗಿ ಬಂದದ್ದು. ಈ ಭೂಮಿಯನ್ನು ಮಾರುವುದಕ್ಕಾಗಲಿ, ಅಡ ಇಡುವುದಕ್ಕಾಗಲಿ ಅವಕಾಶಗಳಿದ್ದಿಲ್ಲ. ಭೂಮಿಗಳನ್ನು ಗುತ್ತಿಗೆಗೆ ಕೊಟ್ಟು ಬಂದ ಧಾನ್ಯ ಅಥವಾ ಹಣವನ್ನು ತನ್ನ ನಿಧಿಗೆ ಸೇರಿಸಿಕೊಳ್ಳುತ್ತಿತ್ತು. ದೇವಸ್ಥಾನದ ಆಡತಳಿದಲ್ಲಿ ಅನೇಕ ನಿವೇಶನಗಳೂ, ಮನೆಗಳೂ ಇರುತ್ತಿದ್ದುವು. ದೇವಸ್ಥಾನವು ಬಳಕೆಗಾರನೂ (Consumer) ಕೂಡ ಹೌದು. ತೆಂಗು, ಗಂಧ, ಅಕ್ಕಿ, ಅರಿಶಿಣ, ಕರ್ಪೂರ, ತುಪ್ಪ, ಅಡಕೆ, ವೀಳೆ–ಮುಂತಾದುವುಗಳು ಅಲ್ಲಿ ಯಥೇಷ್ಟವಾಗಿ ವಿನಿಯೋಗವಾಗುತ್ತಿದ್ದುವು. ದೇವಸ್ಥಾನವು ತನ್ನ ಭಂಡಾರದಿಂದ ಸಾಲವನ್ನೂ ಕೊಡುತ್ತಿತ್ತು. ಊರಿನ ಕೆರೆಯ ಕಟ್ಟೆ ಒಡೆದಾಗ ಅದನ್ನು ಸರಿಪಡಿಸಲು ತಂಬುಗೈಯಿಂದ ಹಣವನ್ನು ಕೊಡುತ್ತಿತ್ತು. ಸತ್ರಗಳನ್ನು ನಡೆಯಿಸಿ ಬಡವರಿಗೆ, ಹಸಿದವರಿಗೆ ಅನ್ನದಾನವನ್ನು ಮಾಡುತ್ತಿತ್ತು. ವಾರಸುದಾರರಿಲ್ಲದ ಆಸ್ತಿ ಬಹುತೇಕ ದೇವಸ್ಥಾನಕ್ಕೆ ಸೇರುತ್ತಿದ್ದಿತು. ನಾನಾ ಕಡೆಗಳಿಂದ ನಾನಾ ರೂಪವಾಗಿ ಐಶ್ವರ್ಯವು ಹರಿದುಬಂದದ್ದರಿಂದ ದೇವಸ್ಥಾನಗಳು ಐಶ್ವರ್ಯದ ನೆಲೆಮನೆಗಳಾದುವು."[170] ಈ ಎಲ್ಲ ಅಂಶಗಳು ಬಹುಮಟ್ಟಿಗೆ ಕರ್ನಾಟಕದ ದೇವಸ್ಥಾನಗಳಿಗೂ ಅನ್ವಯವಾಗುತ್ತವೆ.

ಪ್ರಾಚೀನ ಕರ್ನಾಟಕದ ಊರಿಗೆ ದೇವಸ್ಥಾನವೇ ಕೇಂದ್ರಬಿಂದು. ಅದರ ಸುತ್ತ ಆ ಊರಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವು ರೂಪುಗೊಳ್ಳುತ್ತಿದ್ದಿತು. ದೇವಸ್ಥಾನವು ಜನರ ದೈವಭಕ್ತಿಯ ಕೇಂದ್ರವಾಗಿದ್ದಂತೆ ವಿದ್ಯಾಕೇಂದ್ರವೂ ಆಗಿದ್ದಿತು. ಶಿಲ್ಪ, ಚಿತ್ರ, ಸಂಗೀತ, ನರ್ತನಾದಿ ಕುಶಲ ಕಲೆಗಳು ದೇವಸ್ಥಾನದ ಆಶ್ರಯದಲ್ಲಿ ವರ್ಧಿಸಿದುವು. ದೇವಸ್ಥಾನವು ಜನರ ನ್ಯಾಯಾಲಯವೂ ಆಗಿದ್ದಿತು. ದುಃಖ ಬಂದಾಗ ಜನರು ದೇವಸ್ಥಾನಕ್ಕೆ ಹೋಗಿ ಅಲ್ಲಿ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ದೇವಸ್ಥಾನವನ್ನು ಅಲಂಕರಿಸಿ ಪೂಜೋತ್ಸವಗಳನ್ನು ನಡೆಯಿಸಿ ಸುಖಿಸುತ್ತಿದ್ದರು. ದೇವಸ್ಥಾನವು ಬಡವರಿಗೆ ಸತ್ರವಾಗಿದ್ದಿತು. ಶ್ರೀಮಂತರ ಐಶ್ವರ್ಯವು ಹರಿದು ಹೊರಗೆ ಬರಲು ಕಾರಣವಾಗಿದ್ದಿತು. ಹೀಗೆ ಬಹುಮುಖವಾದ ಚಟುವಟಿಕೆಗಳಿಗೆ ಆಗರವಾಗಿ

---

168 EC. VII. Sk. 263, C. 150 A.D.

169 EC. VII. Sk. 264, C. 250 A.D.

170 A. Appadorai : Economic Conditions in Southern India, I, pp. 274–301.

ಊರಿನ ಜೀವನವನ್ನು ನಿಯಂತ್ರಿಸುತ್ತಿದ್ದ ದೇವಸ್ಥಾನಕ್ಕೆ ಒಂದು ಸ್ವತಂತ್ರ ವ್ಯಕ್ತಿತ್ವವಿದೆಯೆಂಬ ಭಾವನೆ ಬರುತ್ತದೆ, ಕರ್ನಾಟಕದ ಶಾಸನಗಳನ್ನು ಓದುತ್ತಿದ್ದರೆ.

ಯಾವುದೇ ಸಂಸ್ಥೆಯಾಗಲಿ, ಅದು ಉಳಿಯಬೇಕಾದರೆ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಪರಿಸರಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಸಮಾಜವು ಬೇರೆಯಾದಂತೆ ಅದೂ ಕೂಡ ಬದಲಾಯಿಸಬೇಕಾಗುತ್ತದೆ. ಏಕೆಂದರೆ ಸಂಸ್ಥೆಯೆನ್ನುವುದು ಸಮಾಜದ ವ್ಯಕ್ತಿಗಳು ಸೇರಿ ರೂಪಿಸಿರುವಂತಹುದು ತಾನೇ? ಕರ್ನಾಟಕದ ದೇವಸ್ಥಾನದ ಇತಿಹಾಸದಲ್ಲೂ ಈ ಪರಿವರ್ತನಶೀಲತೆಯನ್ನು ಕಾಣುತ್ತೇವೆ. ಒಮ್ಮೆ ದೇವದಾಸಿ ಪದ್ಧತಿಯು ಪ್ರಬಲವಾಗಿದ್ದಿತು. ಆ ಪದ್ಧತಿಯನ್ನು ಸಮಾಜವು ಒಪ್ಪದ ಕಾಲ ಬಂದಾಗ, ದೇವಸ್ಥಾನವು ಹೊಸ ಪರಿಸ್ಥಿತಿಗೆ ಹೊಂದಿಕೊಂಡಿತು. ಒಮ್ಮೆ ದೇವಸ್ಥಾನವು ಸನ್ಯಾಸಿಗಳ ಮಠವೂ ಆಗಿದ್ದಿತು (ಹಿಂದೆ ಇದರ ವಿಸ್ತಾರವಾದ ಚರ್ಚೆ ಬಂದಿದೆ). ಹಲವು ಕಾರಣಗಳಿಂದಾಗಿ ಅದು ಮಠದಿಂದ ಪ್ರತ್ಯೇಕವಾಗಿ ಒಡೆದು ನಿಲ್ಲಬೇಕಾಯಿತು.[171] ಸಮಾಜದಲ್ಲಿ ಪ್ರಬಲವಾಗುತ್ತಿರುವ ಧರ್ಮಕ್ಕೆ ಜನ ಮತಾಂತರ ಹೊಂದಿದಂತೆ ದೇವಸ್ಥಾನಗಳೂ ಮತಾಂತರ ಹೊಂದಿವೆ. ಅನೇಕ ಬಸದಿಗಳು ಶೈವ ದೇವಸ್ಥಾನಗಳಾಗಿರುವುದು ಹೀಗೆ. ಈ ಪರಿವರ್ತನಶೀಲತೆಯಿಂದಾಗಿ, ಜನರಲ್ಲಿ ಉಳಿದಿರುವ ಅಲ್ಪ ಸ್ವಲ್ಪ ಭಕ್ತಿಯಿಂದಾಗಿ ದೇವಸ್ಥಾನವು ಇಂದಿಗೂ ಉಳಿದುಕೊಂಡು ಬಂದಿದೆ. ಆದರೆ ಆಧುನಿಕ ಕಾಲದಲ್ಲಿ ಎಲ್ಲೋ ಕೆಲವನ್ನು ಬಿಟ್ಟರೆ ಜನಜೀವನದ ಕೇಂದ್ರವಾಗಿ ಸಮಾಜದ ಮೇಲೆ ಪ್ರಭಾವವನ್ನು ಬೀರಬಲ್ಲ, ಜನಜೀವನವನ್ನು ರೂಪಿಸಬಲ್ಲ ಶಕ್ತಿಯಾಗಿರುವ ದೇವಸ್ಥಾನಗಳು ಬಹಳ ಕಡಮೆ. ಜನರಿಗೆ ದೇವಸ್ಥಾನದ ವಿಷಯದಲ್ಲಿ ಅನಾಸಕ್ತಿಯೂ ಬೆಳೆಯುತ್ತಿದೆ. ಆದರೆ ಪ್ರಾಚೀನ ಕಾಲದ ದೇವಸ್ಥಾನಗಳ ಮಾತು ಬೇರೆ. ದೇವಸ್ಥಾನದ ಸಾಮಾಜಿಕ ಇತಿಹಾಸವನ್ನು ಚಿತ್ರಿಸುವುದು ನಮ್ಮ ಉದ್ದೇಶವಲ್ಲವಾದ್ದರಿಂದ ಆ ಕಾರ್ಯಕ್ಕೆ ಇಲ್ಲಿ ಕೈಹಾಕುವುದಿಲ್ಲ.

ಮಧ್ಯಂದಿನ ಯುಗದ ಯೂರೋಪಿನ ಚರ್ಚಿಗೂ ದಕ್ಷಿಣಭಾರತದ ದೇವಾಲಯಕ್ಕೂ ಸಾಮ್ಯವನ್ನು ಕಂಡಿದ್ದಾರೆ ಡಾ॥ ಎ. ಅಪ್ಪಾದೊರೈ ಅವರು. "ಚರ್ಚುಗಳು ಬಡವರ ಬಡತನದ ಭಾರವನ್ನು ಕಡಮೆ ಮಾಡಲು ಪ್ರಯತ್ನಿಸಿದುವು. ಆ ವಿಹಾರಗಳು (Monasteries) ಕೈಗಾರಿಕೆಗಳ, ಅದರಲ್ಲೂ ವೈಜ್ಞಾನಿಕ ಅಧ್ಯಯನದ ಕೇಂದ್ರವಾಗಿದ್ದುವು. ವಿದ್ವಾಂಸರಿಗೆ ವಿದ್ಯಾಕೇಂದ್ರಗಳಾಗಿದ್ದುವು. ದೀನರಿಗೆ ಸತ್ರಗಳಾಗಿದ್ದುವು. ಅವುಗಳ ಅಧಿಕಾರದ ವ್ಯಾಪ್ತಿಯಲ್ಲಿ ಹಬ್ಬಗಳೂ ಜಾತ್ರೆಗಳೂ ನಡೆಯುತ್ತಿದ್ದು ವ್ಯಾಪಾರಕ್ಕೆ ಸ್ವಾತಂತ್ರ್ಯವನ್ನೂ ಭದ್ರತೆಯನ್ನೂ ಒದಗಿಸಿಕೊಟ್ಟುವು. ಅಲ್ಲಿಯ ಅಧಿಕಾರಿಗಳೂ ಸನ್ಯಾಸಿಗಳೂ ಜನತೆಯ ನೈತಿಕ ಮತ್ತು ದೈಹಿಕ ಆರೋಗ್ಯಕ್ಕಾಗಿ ಬಹುವಾಗಿ ಶ್ರಮಿಸಿದರು."[172] ಈ ಮಾತುಗಳನ್ನು ಕರ್ನಾಟಕದ ದೇವಾಲಯಕ್ಕೂ ಬಹುಮಟ್ಟಿಗೆ ಅನ್ವಯಿಸಬಹುದು.

[171] ಈ ಕಾರಣಗಳಲ್ಲಿ ಒಂದನ್ನು ಮಾತ್ರ ಇಲ್ಲಿ ಸೂಚಿಸಬಹುದು. ಕಾಳಾಮುಖ–ಪಾಶುಪತರ ದೇವಸ್ಥಾನಗಳೂ ಮಠಗಳೂ ಒಂದು ರೀತಿಯಲ್ಲಿ ಅಭಿನ್ನವಾಗಿದ್ದುವು. ಹನ್ನೆರಡನೆಯ ಶತಮಾನದಲ್ಲಿ ಈ ಶೈವಧರ್ಮದ ಪ್ರತಿಸ್ಪರ್ಧಿಯಾಗಿ ವೀರಶೈವ ಧರ್ಮವು ಪ್ರಬಲಗೊಂಡು ದೇವಸ್ಥಾನವನ್ನೂ, ಸ್ಥಾವರಲಿಂಗಪೂಜೆಯನ್ನೂ ವಿರೋಧಿಸಿತು. ಕಾಳಾಮುಖ ಶೈವರ ಪ್ರಭಾವವು ಕಡಿಮೆಯಾದಂತೆ ಅವರ ಮಠಗಳು ನುರಿಯಾದವು. ಆದರೆ ಅವರು ಕಟ್ಟಿಸಿದ ದೇವಸ್ಥಾನಗಳು ಮಾತ್ರ ಹಾಗೆಯೇ ಉಳಿದುಕೊಂಡವು. ವೀರಶೈವಧರ್ಮವು ಏನೇ ಹೇಳಲಿ, ಅದರ ಅನುಯಾಯಿಗಳಾದ ಸಾಮಾನ್ಯರು ಈ ದೇವಸ್ಥಾನಗಳನ್ನು ಪೂಜಿಸುವುದನ್ನು ಮಾತ್ರ ನಿಲ್ಲಿಸಲಿಲ್ಲ. ವೀರಶೈವಧರ್ಮವು ಕ್ರಮೇಣ ಸ್ಥಾವರಲಿಂಗಪೂಜೆಯ ತತ್ವವನ್ನು ಒಪ್ಪಿಕೊಂಡಿತು.

[172] Economic Conditions in Southern India, I, p. 300.

# IX

# ವಿದ್ಯಾಭ್ಯಾಸ

## ಮುನ್ನುಡಿ

ಪ್ರಾಚೀನ ಭರತಖಂಡದ ವಿದ್ಯಾಭ್ಯಾಸ ಪದ್ಧತಿಯು ಬಹುಪಾಲು ಧಾರ್ಮಿಕವಾದುದು. ಮನುಷ್ಯನ ಜೀವನದ ಗುರಿ ಆತ್ಮಜ್ಞಾನ ಅಥವಾ ಮೋಕ್ಷ. ವಿದ್ಯಾಭ್ಯಾಸವೆನ್ನುವುದು ಈ ಆತ್ಮಜ್ಞಾನವನ್ನು ಪಡೆಯಲು ಒಂದು ಮಾರ್ಗ. ವಿದ್ಯೆಯು ಎರಡು ತೆರನಾದುದು-ಪರಾವಿದ್ಯೆ ಮತ್ತು ಅಪರಾ ವಿದ್ಯೆ. ಮನುಷ್ಯನ ಆತ್ಮದ ವಿಕಾಸಕ್ಕೆ ಸಾಧಕವಾದುದು ಪರಾವಿದ್ಯೆ. ಇದೇ ಶ್ರೇಷ್ಠವಾದುದು. ಇನ್ನುಳಿದುದೇನಿದ್ದರೂ ಲೌಕಿಕ ಸುಖಕ್ಕೆ ಸಾಧಕವಾದುದು. "ಮನುಷ್ಯರು ಹುಟ್ಟುವ ಬಗೆ ಯಾವುದು? ಸಾವಿನ ಬಳಿಕ ಅವರೆಲ್ಲಿಗೆ ಹೋಗುತ್ತಾರೆ ಎಂಬುದು ನಿನಗೆ ತಿಳಿದಿರದಿದ್ದರೆ ನಿನ್ನ ವಿದ್ಯೆಯಿಂದ ಏನು ಪ್ರಯೋಜನ?" ಎಂದು ತಂದೆಯೊಬ್ಬ ತನ್ನ ಮಗನನ್ನು ಪ್ರಶ್ನಿಸುತ್ತಾನೆ, ಛಾಂದೋಗ್ಯ ಉಪನಿಷತ್ತಿನಲ್ಲಿ. ಕಠೋಪನಿಷತ್ತಿನಲ್ಲಿ ಯಮನು ಜ್ಞಾನಾರ್ಥಿಯಾಗಿ ತನ್ನ ಬಳಿಗೆ ಬಂದ ನಚಿಕೇತನಿಗೆ ಅನೇಕಾನೇಕ ಲೌಕಿಕವಾದ ಆಸೆಗಳನ್ನು ತೋರಿಸುತ್ತಾನೆ. ಆಗ ಯಮನು ಹೇಳುತ್ತಾನೆ— "ಎರಡು ಮಾರ್ಗಗಳಿವೆ-ಒಂದು ಶ್ರೇಯೋಮಾರ್ಗ, ಮತ್ತೊಂದು ಪ್ರೇಯೋಮಾರ್ಗ. ಶ್ರೇಯಸ್ಸನ್ನು ವಿವೇಕಿಗಳು ಬಯಸುವರು, ಮೂರ್ಖರು ಪ್ರೇಯಸ್ಸನ್ನು ಬಯಸುವರು." ಅಪರಾವಿದ್ಯೆಯ ಫಲ ಪ್ರೇಯಸ್ಸಾದರೆ ಪರಾ ವಿದ್ಯೆಯ ಫಲ ಶ್ರೇಯಸ್ಸು.

ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತವು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಹೀಗೆ ಸಂಗ್ರಹಿಸ ಬಹುದು. ವಿದ್ಯೆಗಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಸರ್ವದ್ರವ್ಯಗಳಲ್ಲಿ ವಿದ್ಯೆಯೇ ನಿಜವಾದ ಧನ. ಏಕೆಂದರೆ ಅದನ್ನು ಯಾರೂ ಅಪಹರಿಸಲಾರರು, ಅದು ಅನರ್ಘ್ಯವಾದುದು ಮತ್ತು ಅಕ್ಷಯವಾದುದು.[1] ವಿದ್ಯೆಯಿಂದ ಬರುವ ಸುಖವೇ ನಿಜವಾದ ಸುಖ. ಅದರ ಮೆಟ್ಟಲುಗಳನ್ನು ಹೀಗೆ ಗುರುತಿಸಬಹುದು. ವಿದ್ಯೆಯಿಂದ ವಿನಯ, ವಿನಯದಿಂದ ಪಾತ್ರತೆ, ಪಾತ್ರತೆಯಿಂದ ಧನ, ಧನದಿಂದ ಧರ್ಮ, ಧರ್ಮದಿಂದ ಸುಖ.[2] ವಿದ್ಯೆಯು ಕಲ್ಪಲತೆಯಂತೆ ಯಾವುದನ್ನು ತಾನೆ ಕೊಡುವುದಿಲ್ಲ? ಅದು ತಾಯಿಯಂತೆ ಕಾಪಾಡುತ್ತದೆ, ತಂದೆಯಂತೆ ಸರಿಯಾದ ಮಾರ್ಗದಲ್ಲಿ ನಿಯೋಜಿಸುತ್ತದೆ, ಪ್ರಿಯೆಯಂತೆ ಕಷ್ಟಗಳನ್ನು ಹೋಗಲಾಡಿಸಿ ಸಂತೋಷಗೊಳಿಸುತ್ತದೆ, ಐಶ್ವರ್ಯವನ್ನು ತರುತ್ತದೆ, ದಿಕ್ಕುಗಳಲ್ಲಿ ಕೀರ್ತಿಯನ್ನು ಹರಡುತ್ತದೆ.[3] ವಿದ್ಯಾಹೀನನಾದವನು ಪಶುವಿಗೆ

---

1 ಸರ್ವದ್ರವ್ಯೇಷು ವಿದ್ಯೈವ ಧನಮಾಹುರನುತ್ತಮಂ
ಅಹಾರ್ಯತ್ವಾದನರ್ಘ್ಯತ್ವಾದಕ್ಷಯತ್ವಾಚ್ಚ ಸರ್ವದಾ ॥

2 ವಿದ್ಯಾ ದದಾತಿ ವಿನಯಂ ವಿನಯಾದ್ಯಾತಿ ಪಾತ್ರತಾಂ
ಪಾತ್ರತ್ವಾದ್ಧನಮಾಪ್ನೋತಿ ಧನಾದ್ಧರ್ಮಃ ತತಃ ಸುಖಂ ॥

3 ಮಾತೇವ ರಕ್ಷತಿ ಪಿತೇವ ಹಿತೇ ನಿಯುಂಕ್ತೇ
ಕಾಂತೇವ ಚಾಪಿ ರಮಯತ್ಯಪನೀಯ ಖೇದಂ ।
ಲಕ್ಷ್ಮೀಂ ತನೋತಿ ವಿತನೋತಿ ಚ ದಿಕ್ಷು ಕೀರ್ತಿಂ
ಕಿಂ ಕಿಂ ನ ಸಾಧಯತಿ ಕಲ್ಪಲತೇವ ವಿದ್ಯಾ ॥

ಸಮಾನ.[4] ಇದು ವಿದ್ಯೆಯ ವಿಷಯದಲ್ಲಿ ಪ್ರಾಚೀನ ಭಾರತದ ಅಭಿಪ್ರಾಯ. ವಿದ್ಯೆಯ ವಿಷಯದಲ್ಲಿ ಇಷ್ಟೊಂದು ಆಸ್ಥೆ ವಹಿಸಿದ ದೇಶಗಳು ಬಹಳ ವಿರಳ.

ಪ್ರಾಚೀನ ಭಾರತದ ಸಾಮಾಜಿಕ ರಚನೆಯನ್ನು ನೋಡಿದರೆ ಅದು ವ್ಯಕ್ತಿಯನ್ನು ಕೇಂದ್ರವಾಗಿಟ್ಟು ಕೊಂಡು, ಅವನ ವಿಕಾಸವನ್ನೇ ಮುಖ್ಯ ಗುರಿಯಾಗಿಟ್ಟುಕೊಂಡು ರೂಪಿತವಾದಂತೆ ಕಾಣುತ್ತದೆ. ಇದರ ಪರಿಣಾಮವು ಪ್ರಾಚೀನ ವಿದ್ಯಾಭ್ಯಾಸದ ಪದ್ಧತಿಯ ಮೇಲೂ ಆಗದೆ ಹೋಗಿಲ್ಲ. ವಿದ್ಯಾಭ್ಯಾಸದ ಗುರಿ ವ್ಯಕ್ತಿಯ ವಿಕಾಸವಾದ್ದರಿಂದ ವಿದ್ಯಾಭ್ಯಾಸ ಪದ್ಧತಿಯೂ ಅದನ್ನು ಹೊಂದಿಕೊಂಡಿರುವಂತೆ ಕಾಣಿಸುತ್ತದೆ ವೈದಿಕ ಯುಗದಲ್ಲಿ. ವೈದಿಕ ಯುಗದಲ್ಲಿ 'ವಿದ್ಯಾಸಂಸ್ಥೆ'ಗಳೆಂದು ಕರೆಯಿಸಿಕೊಳ್ಳುವ ಕೇಂದ್ರಗಳಿದ್ದಿಲ್ಲ. ಗುರುವಿನ ಮನೆಯೇ ಪಾಠಶಾಲೆ. ವಿದ್ಯಾರ್ಥಿಯು ಗುರುವಿನ ಮನೆಯಲ್ಲಿ ಗುರುಸೇವೆ ಮಾಡುತ್ತ ಗುರುವಿನಿಂದ ವಿದ್ಯೆಯನ್ನು ಕಲಿಯುತ್ತಿದ್ದನು. ಇಂಥ ವಿದ್ಯಾರ್ಥಿಯನ್ನು 'ಅಂತೇವಾಸಿ'ಎಂದು ಕರೆಯುತ್ತಿದ್ದರು. ಗುರುವಿನೊಡನೆ ಒಂದೇ ಮನೆಯಲ್ಲಿ ವಾಸಿಸುತ್ತಿದ್ದುದರಿಂದ ಆ ಹೆಸರು ಬಂದಿದೆ. ಗುರುವಾದವನು ಸಂಭಾವನೆಯನ್ನು ನಿರೀಕ್ಷಿಸದೆ ಜ್ಞಾನದಾನವನ್ನು ಮಾಡುತ್ತಿದ್ದನು.[5] ಈ ಗುರು ಶಿಷ್ಯರ ಸಂಬಂಧವು ನೇರವಾದುದು. ಇಲ್ಲಿ ಯಾವ ಸಂಸ್ಥೆಯ ಮಧ್ಯಸ್ಥಿಕೆಯೂ ಇಲ್ಲ. ವಿದ್ಯಾರ್ಥಿಯು ಯಾವ ಸಂಸ್ಥೆಗೂ ಸೇರಿದವನಲ್ಲ, ತನ್ನ ಉಪಾಧ್ಯಾಯನಿಗೆ ಸೇರಿದವನು. ಇದರಿಂದ ಒಬ್ಬೊಬ್ಬ ವ್ಯಕ್ತಿಯ ಶೀಲಾದಿ ಗಳಿಗೂ ಗಮನವೀಯಲು ಸಾಧ್ಯವಾಯಿತು.[6] ಇಂತಹ ವಿದ್ಯಾಭ್ಯಾಸ ಪದ್ಧತಿಗೆ ಜೀವಂತ ನಿದರ್ಶನ ಗಳೆಂಬಂತಹ ಹಲವಾರು ಸುಂದರ ಕಥೆಗಳು ಉಪನಿಷತ್ತುಗಳಲ್ಲಿ ಬಂದಿವೆ.

ಕ್ರಿಸ್ತಪೂರ್ವ ಮೂರನೇ ಶತಮಾನದ ಅಶೋಕನ ಕಾಲದಲ್ಲಿ ಬೌದ್ಧವಿಹಾರಗಳು ದೊಡ್ಡ ಸಂಸ್ಥೆಗಳಾಗಿ ಬೆಳೆದು, ಕ್ರಮೇಣ ವಿದ್ಯಾಕೇಂದ್ರಗಳಾಗಿ ಪರಿಣಮಿಸಿದವು.[7] ಇವು ಆರಂಭದಲ್ಲಿ ಭಿಕ್ಷು ಭಿಕ್ಷುಣಿಯರ ಶಿಕ್ಷಣ ಕ್ಕಾಗಿ ಮೀಸಲಾಗಿದ್ದರೂ ಕ್ರಮೇಣ ಉಳಿದವರನ್ನೂ ಸೇರಿಸಿಕೊಂಡವು. ಹಿಂದೂಗಳ ಸುವ್ಯವಸ್ಥಿತವಾದ ವಿದ್ಯಾಸಂಸ್ಥೆಗಳು ಬಹುಶಃ ನಲಂದೆಗಿಂತ (ಕ್ರಿ. ಶ. ಐದನೇ ಶತಮಾನ) ಈಚಿನವು. ಬೌದ್ಧವಿಹಾರಗಳು ವಿದ್ಯಾಸಂಸ್ಥೆಗಳಾಗಿ ಮಾರ್ಪಾಟುಹೊಂದಿದ್ದನ್ನು ನೋಡಿ, ಅವುಗಳಿಂದ ಪ್ರೇರಣೆಯನ್ನು ಹೊಂದಿ ಹಿಂದೂ ಗಳೂ ತಮ್ಮ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ್ದರೂ ಇರಬಹುದು ಎನ್ನುತ್ತಾರೆ ಡಾ॥ಅಲ್ಟೇಕರ್ ಅವರು.[8] ಅದೇ ವಿದ್ವಾಂಸರು ಅಭಿಪ್ರಾಯಪಡುವಂತೆ ಹಿಂದೂಗಳಲ್ಲಿ ವ್ಯವಸ್ಥಿತ ವಿದ್ಯಾಕೇಂದ್ರಗಳು ಕ್ರಿ. ಶ. ಒಂಬತ್ತನೇ ಶತ

---

[4] ವಿದ್ಯಾವಿಹೀನಃ ಪಶುಭಿಃ ಸಮಾನಃ

[5] ವಿದ್ಯೆ ಮುಗಿಯುವ ತನಕ ವಿದ್ಯಾರ್ಥಿಯು ಗುರುವಿಗೆ ಯಾವ ರೀತಿಯ ಸಂಭಾವನೆಯನ್ನೂ ಕೊಡಕೂಡದು ಎನ್ನುತ್ತಾನೆ ಮನು (II.245). ಅರ್ಥೋಪಜೀವಿಯಾದ ಉಪಾಧ್ಯಾಯನು ಉಪಪಾತಕಿಯಾಗುತ್ತಾನೆ ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. (iii. 236). ತನ್ನ ವಿದ್ಯೆಯಿಂದ ಹಣವನ್ನು ಸಂಪಾದಿಸಬೇಕೆಂದು ಬಯಸುವ ವಿದ್ವಾಂಸನನ್ನು ಕಾಳಿದಾಸನು ಜ್ಞಾನವನ್ನು ಮಾರುವ ವ್ಯಾಪಾರಿ ಎಂದು ತನ್ನ ಮಾಲವಿಕಾಗ್ನಿಮಿತ್ರದಲ್ಲಿ (I. 17) ಹಾಸ್ಯಮಾಡಿದ್ದಾನೆ— "ಯಸ್ಯಾಗಮಃ ಕೇವಲ ಜೀವಿಕಾಯೈ ತಂ ಜ್ಞಾನಪಣ್ಯಂ ವಣಿಜಂ ವದಂತಿ."

[6] ಪ್ರಾಚೀನ ಭಾರತದ ಈ ಕ್ರಮವನ್ನು ಆಧುನಿಕ ಯುಗದಲ್ಲಿಯೂ ಅನುಸರಿಸಿದರೆ ಲಾಭವುಂಟು ಎಂದು ಹಲವರ ಅಭಿಪ್ರಾಯ. (B. G. Gokhale : Ancient India, p. 164).

[7] ಅಶೋಕನಿಗಿಂತ ಹಿಂದಿದ್ದ ಜಾತಕಕಥೆಗಳಲ್ಲಿ ಬರುವ ತಕ್ಷಶಿಲೆ ಎಂಬುದು ಆಧುನಿಕ ವಿಶ್ವವಿದ್ಯಾನಿಲಯದಂತಹ 'ಸಂಸ್ಥೆ'ಯಾಗಿದ್ದಿಲ್ಲ. ಅಲ್ಲಿ ಹಲವಾರು ದೊಡ್ಡ ವಿದ್ವಾಂಸರಿದ್ದರು. ಅವರ ಬಳಿಗೆ ಬಹು ದೂರದ ಪ್ರದೇಶಗಳಿಂದ ವಿದ್ಯೆಯನ್ನು ಕಲಿಯುವುದಕ್ಕಾಗಿ ವಿದ್ಯಾರ್ಥಿಗಳು ಬರುತ್ತಿದ್ದರು. ಆ ವಿದ್ವಾಂಸರು ಯಾವ ಸಂಸ್ಥೆಗೂ ಸೇರಿದವರಲ್ಲ (A. S. Altekar : Education in Ancient India, p. 251). ಈ ದೃಷ್ಟಿಯಿಂದ ನೋಡಿದರೆ ನಲಂದೆಯನ್ನು ಒಂದು ವಿಶ್ವವಿದ್ಯಾನಿಲಯವೆಂದು ಕರೆಯುವಂತೆ ತಕ್ಷಶಿಲೆಯನ್ನು ಕರೆಯಲಾಗುವುದಿಲ್ಲ.

[8] ಅದೇ, ಪು. 246.

ಮಾನದ ಆದಿಯವರೆಗೆ ಕಾಣಿಸಿಕೊಳ್ಳುವುದಿಲ್ಲ.[9] ಕನ್ನಡ ಶಾಸನಗಳೂ ಇದನ್ನೇ ಪೋಷಿಸುತ್ತವೆ. ಕರ್ನಾಟಕದಲ್ಲಿ ವ್ಯವಸ್ಥಿತ ವಿದ್ಯಾಸಂಸ್ಥೆಯೆಂದರೆ ದೇವಸ್ಥಾನ. ಲಕುಲೀಶ ಪಾಶುಪತ ಶೈವರು ಕರ್ನಾಟಕಕ್ಕೆ ಯಾವಾಗ ಬಂದರು ಎನ್ನುವುದು ಗೊತ್ತಿಲ್ಲ. ಆದರೆ ಸ್ಥಾನಪತಿಗಳಾಗಿದ್ದ ಅವರಿಂದ ದೇವಸ್ಥಾನಗಳು ವಿದ್ಯಾಕೇಂದ್ರಗಳಾಗಿ ಪರಿಣಮಿಸಿದ್ದು ಬಹುಶಃ ಎಂಟು ಅಥವಾ ಒಂಬತ್ತನೆ ಶತಮಾನದ ನಂತರ. ಅವರ ಧರ್ಮವು ಉತ್ಕರ್ಷವನ್ನು ಪಡೆದದ್ದೂ ಆ ಕಾಲದ ನಂತರವೇ. ಕ್ರಿಸ್ತಶಕ ಏಳನೇ ಶತಮಾನದ ಚೀನೀ ಪ್ರವಾಸಿ ಹ್ಯುಯನ್‌ತ್ಸಾಂಗನ ಹೇಳಿಕೆಯೂ ಇದನ್ನೇ ಸಮರ್ಥಿಸುತ್ತದೆ. ಅವನ ಕಾಲದಲ್ಲಿ ವಿದ್ಯಾರ್ಥಿಗಳು ತಮ್ಮ ಗುರುಗಳ ಮನೆಯಲ್ಲಿದ್ದುಕೊಂಡು ಅಭ್ಯಸಿಸುತ್ತಿದ್ದರು. ಅವರು ತಮ್ಮ ವಿದ್ಯೆಯು ಮುಗಿದನಂತರ ಯಾವುದಾದರೂ ವೃತ್ತಿಯನ್ನು ಅವಲಂಬಿಸುತ್ತಾರೆ ಎಂದೂ, ಅನಂತರ ಅವರು ಮಾಡುವ ಮೊದಲ ಕೆಲಸವೆಂದರೆ ತಮ್ಮ ಗುರುಗಳಿಗೆ ಸಂಭಾವನೆಯನ್ನು ಅಥವಾ ಗುರುದಕ್ಷಿಣೆಯನ್ನು ನೀಡುವುದು[10] ಎಂದೂ ಹೇಳುತ್ತಾನೆ. ಒಂಬತ್ತನೆಯ ಶತಮಾನಕ್ಕಿಂತ ಹಿಂದಿನ ಸಮಾಜದ ಚಿತ್ರಣವನ್ನು ಕೊಡುವ ವಡ್ಡಾರಾಧನೆಯ ಸುಕುಮಾರ ಸ್ವಾಮಿಯ ಕಥೆ ಎಂಬ ಮೊದಲನೆಯ ಕಥೆಯಲ್ಲಿ ಕಾಶ್ಯಪಿ ಎಂಬಾಕೆಯು ತನ್ನ ಮಕ್ಕಳಾದ ಅಗ್ನಿಭೂತಿ ವಾಯುಭೂತಿಯರನ್ನು ತನ್ನ ಅಣ್ಣ ಸೂರ್ಯಮಿತ್ರನ ಬಳಿಗೆ ಕಳುಹಿಸಿಕೊಡುತ್ತಾಳೆ. ಸೂರ್ಯಮಿತ್ರನು ಅವರಿಂದ ಯಾವ ಪ್ರತಿಫಲವನ್ನೂ ಬಯಸದೆ ಮನೆಯಲ್ಲಿಯೇ ಇಟ್ಟುಕೊಂಡು ಪಾಠ ಹೇಳಿಕೊಡುತ್ತಾನೆ. ಅಗ್ನಿಭೂತಿ ವಾಯುಭೂತಿಗಳು ಭಿಕ್ಷೆಯಿಂದ ಆಹಾರವನ್ನು ಸಂಪಾದಿಸಿಕೊಂಡು ಜೀವಿಸುತ್ತಿದ್ದರು.[11] ಸೂರ್ಯಮಿತ್ರನು ವಾಯುಭೂತಿಯ ಮನೆಗೆ ಹೋದಾಗ, ವಾಯುಭೂತಿಯು ದೊಡ್ಡ ಲೋಹಾಸನದ ಮೇಲೆ ಕುಳಿತು ಹಲವರು ಬ್ರಾಹ್ಮಣರಿಗೆ ಪ್ರವಚನವನ್ನು ಮಾಡುತ್ತಿದ್ದ ವಿಷಯವು ಅಲ್ಲಿ ಬಂದಿದೆ.[12] ಎಂದರೆ, ಕ್ರಿಸ್ತಶಕ ಒಂಬತ್ತನೇ ಶತಕಕ್ಕಿಂತ ಹಿಂದೆ ವಿದ್ಯಾಭ್ಯಾಸವು ಗುರುವಿನ ಮನೆಯಲ್ಲಿಯೇ ನಡೆಯುತ್ತಿದ್ದಿತೆಂಬುದನ್ನು ಇದು ಪೋಷಿಸುತ್ತದೆ. ವಿದ್ಯಾರ್ಥಿಯಾದವನು ಭಿಕ್ಷೆ ಬೇಡಿ ಜೀವಿಸುವುದು ಹೀನವಲ್ಲವೆಂದು ಸ್ಮೃತಿಗಳು ಹೇಳುತ್ತವೆ. ವಿದ್ಯಾರ್ಥಿಯು ತನ್ನ ಗುರು, ಗುರುವಿನ ಬಾಂಧವರು ಮತ್ತು ತನ್ನ ಸಹೋದ್ಯೋಗಿಗಳ ಮನೆಗಳನ್ನು ಬಿಟ್ಟು ಇತರ ಯಾವ ಮನೆಗಳಿಗಾದರೂ ಭಿಕ್ಷೆಗೆ ಹೋಗಬಹುದೆಂದೂ ಭಿಕ್ಷೆಯನ್ನು ತಂದನಂತರ ಗುರುವಿನ ಅಥವಾ ಗುರುವಿನ ಪತ್ನಿಯ ಅಥವಾ ಗುರುವಿನ ಮಗನ ಅಪ್ಪಣೆಯನ್ನು ಪಡೆದು ಊಟಮಾಡಬೇಕೆಂದೂ ಗೌತಮ ಸಂಹಿತೆಯು ವಿಧಿಸುತ್ತದೆ.[13] ಯಾಜ್ಞವಲ್ಕ್ಯಸ್ಮೃತಿಯೂ ಇದನ್ನೇ ಹೇಳುತ್ತದೆ.[14] ಹಿಂದೆ ಹೇಳಿದ ವಡ್ಡಾರಾಧನೆಯಲ್ಲಿ ಅಗ್ನಿಭೂತಿ ವಾಯುಭೂತಿಗಳು ಭಿಕ್ಷಾನ್ನವನ್ನು ಮನೆಗೆ ತಂದಾಗ ಗುರುಪತ್ನಿಯು ತುಪ್ಪವನ್ನಾಗಲಿ, ಉಪ್ಪನ್ನಾಗಲಿ ಕೊಡುತ್ತಿರಲಿಲ್ಲವೆಂದು ವಾಯುಭೂತಿಯು ಆಕ್ಷೇಪಿಸುತ್ತಾನೆ. ಎಂದರೆ ವಿದ್ಯಾರ್ಥಿಯ ವಾಸವು ಗುರುವಿನ ಮನೆಯಲ್ಲೇ ಆದರೂ, ಅವನು ಭಿಕ್ಷಾನ್ನದಿಂದ ಜೀವಿಸಬೇಕಿತ್ತು ಎಂಬುದು ಇದರಿಂದ ಸುವಿದಿತವಾಗುತ್ತದೆ. ಭಾರತದಲ್ಲಿ ವಿದ್ಯಾರ್ಥಿಗಳು ತಮ್ಮ ಅಶನ, ವಸತಿ, ಆರೋಗ್ಯಾದಿಗಳ ವಿಷಯದಲ್ಲಿ ನಿಶ್ಚಿಂತರಾಗಿರುವುದರಿಂದ ಅವರು ತಮ್ಮ ಜ್ಞಾನವನ್ನು ಅಗಾಧವಾಗಿ ಬೆಳೆಯಿಸಿಕೊಳ್ಳಲು ಸಾಧ್ಯವಾಗಿದೆ ಎನ್ನುತ್ತಾನೆ ಹ್ಯುಯನ್‌ತ್ಸಾಂಗ್.[15] ಮಧ್ಯಾಹ್ನ ಭಿಕ್ಷೆಗಾಗಿ ಬಂದ ವಿದ್ಯಾರ್ಥಿಯನ್ನು ಹಾಗೆಯೇ ಹಿಂದಕ್ಕೆ

[9] ಅದೇ, ಪು. 79.

[10] Watters : On Yuan Chwang's travels in India, I, pp. 160–1.

[11] ವಡ್ಡಾರಾಧನೆ (1949), ಪು. 3–4.

[12] ಅದೇ, ಪು. 7.

[13] The Dharmaśāstra, II, (Tr. M. N. Dutt), pp. 660–1.

[14] ಯಾಜ್ಞವಲ್ಕ್ಯಸ್ಮೃತಿ, 1. 29–31.

[15] Altekar : Education in Ancient India, p. 87.

ಕಳುಹಿಸಿದರೆ ಆ ಗೃಹಸ್ಥನ ಸಕಲ ಪುಣ್ಯರಾಶಿಯೂ ನಾಶವಾಗುವುದಲ್ಲದೆ ಮನೆಯ ಮಕ್ಕಳಿಗೆ ಮತ್ತು ಪಶುಗಳಿಗೆ ಮಹಾ ಹಾನಿಯು ಒದಗುತ್ತದೆ ಎಂದು ಆಪಸ್ತಂಬ ಗೃಹ್ಯಸೂತ್ರವು ಹೇಳುತ್ತದೆ.[16]

ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ವೈದಿಕ ಯುಗದ ಗುರುಕುಲ ಪದ್ಧತಿಯು ಯಾವ ಕುರುಹೂ ಕಾಣಿಸುವುದಿಲ್ಲ. 'ಅಂತೇವಾಸಿ' ಎಂಬ ಪದವೇನೋ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆ. ಈ ಪದವು ಜೈನೇತರ ಶಾಸನಗಳಿಗಿಂತ ಜೈನ ಶಾಸನಗಳಲ್ಲಿ ಕಾಣಿಸಿಕೊಳ್ಳುವುದೇ ಹೆಚ್ಚು.[17] ಇಲ್ಲೆಲ್ಲ ಆ ಪದಕ್ಕೆ 'ಶಿಷ್ಯ' ಎಂಬ ಅರ್ಥವನ್ನಿಟ್ಟುಕೊಳ್ಳಬಹುದು. ಎಂದರೆ ಗುರುವಿನ ಜೊತೆಯಲ್ಲಿ, ಬಸದಿಯ ಒಂದೇ ಚಾವಣಿಯ ಕೆಳಗೆ ವಾಸಿಸುತ್ತಿರುವ ವಿದ್ಯಾರ್ಥಿ ಅಥವಾ ಶಿಷ್ಯ ಎಂದೂ ಇಟ್ಟುಕೊಳ್ಳಬಹುದು. ಶಿಷ್ಯನಾದವನು ಗುರುವಿನ ಮನೆಯಲ್ಲಿ ಗುರುಸೇವೆ[18] ಮಾಡಿಕೊಂಡು ವಿದ್ಯೆಯನ್ನು ಕಲಿಯುತ್ತಿದ್ದ ಸಂಪ್ರದಾಯಕ್ಕೆ ಕನ್ನಡ ಶಾಸನಗಳಲ್ಲಿ ಆಧಾರಗಳಿಲ್ಲವಾದರೂ[19] ಈ ಪದ್ಧತಿ ಬಹು ಇತ್ತೀಚಿನವರೆಗೂ ಇದ್ದಿತಾದ್ದರಿಂದ[20] ಪ್ರಾಚೀನ ಕರ್ನಾಟಕದಲ್ಲೂ ಅಲ್ಪಪ್ರಮಾಣದಲ್ಲಿ ಯಾದರೂ ಇದ್ದಿರಬೇಕು. ವಿದ್ಯಾರ್ಥಿಗಳು ಗುರುವಿನ ಮನೆಯಲ್ಲಿಯೇ ವಾಸವಾಗಿದ್ದುಕೊಂಡು ಭಿಕ್ಷಾನ್ನದ ಮೂಲಕ ಜೀವಿಸುತ್ತಿದ್ದರು ಎಂಬುದಕ್ಕೂ ಶಾಸನಾಧಾರಗಳಿಲ್ಲ. ವಿದ್ಯಾರ್ಥಿಗಳ ಊಟಕ್ಕೆ, ಬಟ್ಟೆಗೆ ಸಾರ್ವಜನಿಕರು ದತ್ತಿಗಳನ್ನು ಬಿಟ್ಟುಕೊಟ್ಟಿರುವುದು ನೂರಾರು ಶಾಸನಗಳಲ್ಲಿ ಕಂಡುಬಂದರೂ ಎಲ್ಲ ವಿದ್ಯಾರ್ಥಿಗಳೂ ಈ ದತ್ತಿಗಳಿಂದಲೇ ಬದುಕುತ್ತಿದ್ದರು ಎಂದು ನಂಬುವುದೂ ಕಷ್ಟವೇ. 'ಹತ್ತು, ಹನ್ನೊಂದನೇ ಶತಮಾನಗಳಲ್ಲಂತೂ ವಿದ್ಯಾರ್ಥಿಗಳು ಭಿಕ್ಷೆಯನ್ನು ಮಾಡಿಕೊಂಡಿರಲಿಲ್ಲ' ಎಂಬ ಡಾ|| ಅಲ್ಟೇಕರರ ಅಭಿಪ್ರಾಯವನ್ನು ಒಪ್ಪುವುದು ಕಷ್ಟ. ವಿದ್ಯಾರ್ಥಿಗಳು ಭಿಕ್ಷಾನ್ನದಿಂದ ಜೀವಿಸುವ ಪದ್ಧತಿ ಈಗಲೂ ಇದೆ. ಪ್ರಾಚೀನ ಅಗ್ರಹಾರಗಳಲ್ಲೂ ಸ್ವಲ್ಪ ಮಟ್ಟಿಗಾದರೂ ಈ ಸಂಪ್ರದಾಯವು ಇದ್ದಿರಬೇಕು.

ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸ ಕೇಂದ್ರಗಳನ್ನು ಕುರಿತು ಚರ್ಚಿಸುವ ಮೊದಲು ವಿದ್ಯಾಭ್ಯಾಸದ ವಿಷಯದಲ್ಲಿ ಅದು ವಹಿಸಿದ ಆಸಕ್ತಿಯನ್ನು ಕುರಿತು ಒಂದೆರಡು ಮಾತುಗಳನ್ನು ಆಡಬಹುದು. ಪಂಪನ ಈ ಮಾತುಗಳು ಪ್ರಾಚೀನ ಕರ್ನಾಟಕದ ಹೃದಯವನ್ನು ಧ್ವನಿಸುತ್ತವೆ[21] —"ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್". ಎಂದರೆ ತ್ಯಾಗಿಯೂ ಭೋಗಿಯೂ ಆಗಿರುವುದರ ಜೊತೆಯಲ್ಲಿ ಮನುಷ್ಯನು ವಿದ್ಯಾವಂತ[22]ನಾಗಿಯೂ ಇರಬೇಕು, ಕಲಾಪ್ರೇಮಿಯೂ ಆಗಿರಬೇಕು. ವಿದ್ಯಾವಂತರಿಗಿದ್ದ ಗೌರವವು ಹೆಜ್ಜೆ ಹೆಜ್ಜೆಗೆ ಶಾಸನಗಳಲ್ಲಿ ಕಂಡುಬರುತ್ತದೆ. ಎಷ್ಟೋ ಶ್ರೀಮಂತರು 'ಪಂಡಿತಾಶ್ರಯ'[23]ರಾಗಿದ್ದರು. ತಮ್ಮ ಊರು ವಿದ್ವಾಂಸರ ನೆಲೆವೀಡಾಗಬೇಕೆಂದು ಆ ಊರಿನ ಜನರು

---

16 ಅದೇ, ಪು. 312.

17 "ಶ್ರೀ ವಾದಿರಾಜಾಪರನಾಮಧೇಯ ಶ್ರೀಮತ್ಕನಕಸೇನಪಂಡಿತದೇವರಶಿಷ್ಯರೊಡೆಯ ದೇವರೆನಿಸಿದ ಶ್ರೀ ವಿಜಯ ಪಂಡಿತರಂತೇವಾಸಿಗಳಪ್ಪ ಶ್ರೀಮತ್ಕಮಳಭದ್ರಪಂಡಿತದೇವರ ಕಾಲಂ ಕರ್ಚಿ" (Ec. VIII. Nr. 40, 1077 & 1087).

18 ವಿನಯಪಿಟಕದಲ್ಲಿ 'ಅಂತೇವಾಸಿ' ಎಂಬ ಪದವು ಸೇವಕ ಅಥವಾ ದಾಸ ಎಂಬರ್ಥದಲ್ಲಿ ಬಂದಿದೆ (Devaraj Chanana : Slavery in Ancient India, p. 136). ವಿದ್ಯಾರ್ಥಿ ಎಂಬ ಅರ್ಥದ ಜೊತೆಗೆ ಈ ಅರ್ಥವು ಬಂದಿರುವುದು ಸಹಜವೇ.

19 ಉತ್ತರಭಾರತದ ಎರಡು ಪ್ರಾಚೀನ ವಿಗ್ರಹಗಳ ಮೇಲಿರುವ ಶಾಸನಗಳಲ್ಲಿ ಕುಣಿಕ ಎಂಬ ಮಹಾಶಿಲ್ಪಿಯ ಇಬ್ಬರು 'ಅಂತೇವಾಸಿ'ಗಳ ಹೆಸರುಗಳಿವೆ (R. K. Mookherji : Ancient Indian Education, p. 352).

20 ಎಂ. ಎಸ್. ಪುಟ್ಟಣ್ಣನವರ 'ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ'ಯನ್ನು ನೋಡಿ.

21 ಪಂಪಭಾರತ, 4.29.

22 'ಅಕ್ಕರ' ( < ಸಂ. ಅಕ್ಷರ ) ಎನ್ನುವ ಪದ ಲಿಪಿಯನ್ನೂ ಸೂಚಿಸುತ್ತದೆ, ವಿದ್ಯೆಯನ್ನೂ ಸೂಚಿಸುತ್ತದೆ. 'ಸಾಕ್ಷರಿಕ ಜನ' (EC. VIII. Sa. 103, 1089 A.D.) ಎಂದರೆ ವಿದ್ಯಾವಂತರು ಎಂದರ್ಥ.

23 EC. II. 143, 1131 A.D.

ಸೇರಿ ವಿದ್ವಾಂಸನಾದವನಿಗೆ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ.[24] ವಿದ್ಯೆಯನ್ನು ಗೌರವಿಸಿದರೂ ವಿದ್ಯೆಗಿಂತ ಹೆಚ್ಚಾಗಿಯೇ ವಿನಯವನ್ನು ಗೌರವಿಸಿದ್ದಾರೆ. ವಿದ್ವಾಂಸನೊಬ್ಬನನ್ನು ಹೊಗಳುವಾಗ ಅವನಲ್ಲಿ 'ವಿದ್ಯೋದಯೋಽಸ್ತಿ ನ ಮದೋಽಸ್ತಿ,' (=ವಿದ್ಯೋದಯವಿದೆ, ಆದರೆ ಅಹಂಕಾರವಿಲ್ಲ) ಎಂದು ಒಂದು ಶಾಸನವು ಹೇಳುತ್ತದೆ.[25]

## ಪ್ರಾಚೀನ ವಿದ್ಯಾಭ್ಯಾಸ ಕೇಂದ್ರಗಳು :

ವಿದ್ಯಾದಾನವು ನಡೆಯುತ್ತಿದ್ದುದು ಮುಖ್ಯವಾಗಿ ನಾಲ್ಕು ಕೇಂದ್ರಗಳಲ್ಲಿ. ಪ್ರಾಮುಖ್ಯದ ದೃಷ್ಟಿಯಿಂದ ಹೇಳುವುದಾದರೆ (i) ಅಗ್ರಹಾರ, (ii) ದೇವಸ್ಥಾನ ಅಥವಾ ಮಠ, (iii) ಬ್ರಹ್ಮಪುರಿ ಮತ್ತು (iv) ಘಟಿಕಾಸ್ಥಾನ— ಇವೇ ಆ ಕೇಂದ್ರಗಳು. ಇವುಗಳಲ್ಲಿ ಬ್ರಹ್ಮಪುರಿಯು ಅಗ್ರಹಾರವನ್ನು ಹೋಲುವುದರಿಂದ ಅಗ್ರಹಾರದ ಬಳಿಕ ಬ್ರಹ್ಮಪುರಿಯ ವಿವೇಚನೆಯನ್ನು ಎತ್ತಿಕೊಳ್ಳುತ್ತೇವೆ.

i) ಅಗ್ರಹಾರ[26] : ಇದರ ಮೂಲರೂಪ "ಅಗ್ರಾಹಾರ" ಎಂದಿರಬೇಕೆಂದೂ, ಅದು ಅಗ್ರ+ಆಹಾರ ಎಂಬ ಎರಡು ಪದಗಳ ಸಮಾಸವೆಂದೂ ಪ್ರೊ|| ಡಿ. ಎಲ್. ನರಸಿಂಹಾಚಾರ್ಯರ ಅಭಿಪ್ರಾಯ. 'ಅಗ್ರ' ಎಂದರೆ ಶ್ರೇಷ್ಠ. ಆಹಾರ ಎಂದರೆ ದೇಶ ಅಥವಾ ಸ್ಥಳ. ಅಗ್ರಹಾರವೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಅಥವಾ ಊರು ಎಂದರ್ಥ[27]. ಅಗ್ರಹಾರದಲ್ಲಿ ಬ್ರಾಹ್ಮಣರೇ ಇರಬೇಕಿಲ್ಲ. ಬೇರೆ ಜಾತಿಯ ಜನಾಂಗಗಳೂ ಇರಬಹುದು. ಆದರೆ ಊರಿನ ಉತ್ಪತ್ತಿಯೆಲ್ಲವೂ ಬ್ರಾಹ್ಮಣರಿಗೆ ಸಲ್ಲುತ್ತದೆ. ಎಂದರೆ, ಆ ಊರಿನಿಂದ ರಾಜಾದಾಯಕ್ಕೆ ಸಲ್ಲಬೇಕಾಗಿದ್ದ ಐಶ್ವರ್ಯವನ್ನು ಬ್ರಾಹ್ಮಣರು ಅನುಭವಿಸುತ್ತಿದ್ದರು.

ಸುಮಾರು ಕ್ರಿ. ಶ. 420 ರಿಂದ 445ರವರೆಗೆ ಆಳಿದ ಶಾಲಂಕಾಯನ ದೊರೆ ಎರಡನೆಯ ನಂದಿವರ್ಮನ ತಾಮ್ರಪಟವೊಂದರಲ್ಲಿ ಕುರವಕ ಶ್ರೀವರ ಎಂಬ ಹೆಸರಿನ ಅಗ್ರಹಾರದ ಹೆಸರಿರುವುದರಿಂದ[28] ಬ್ರಾಹ್ಮಣರಿಗೆ ಊರುಗಳನ್ನು ದತ್ತಿಯಾಗಿ ಬಿಟ್ಟುಕೊಡುವ ಸಂಪ್ರದಾಯವು ಸಾಕಷ್ಟು ಪ್ರಾಚೀನವೆಂದೇ ಹೇಳಬೇಕು. ಕರ್ನಾಟಕದ ಇನ್ನೂ ಈಚಿನ ಶಾಸನಗಳಲ್ಲಿ ಅಗ್ರಹಾರಗಳ ವಿಷಯ ಬಂದಿದ್ದರೂ ಕ್ರಿಸ್ತಶಕ ಐದನೇ ಶತಮಾನದಲ್ಲಿಯೇ ಅಗ್ರಹಾರಗಳು ಕಾಣಿಸಿಕೊಂಡಿದ್ದುವು ಎಂದು ನಂಬಲು ಆಧಾರಗಳಿವೆ. ಕದಂಬರ ಅನೇಕ ತಾಮ್ರಪಟಗಳು ವೈದಿಕರಿಗೆ ಕೊಟ್ಟ ದತ್ತಿಗಳನ್ನು ಹೇಳುತ್ತವೆ.[29]

"ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಗುರುಕುಲದಿಂದ ಹಿಂದಿರುಗಿದ ಬ್ರಾಹ್ಮಣರು ಗೃಹಸ್ಥರಾಗಿ ನೆಲೆಗೊಳ್ಳಲು ಸಹಾಯಕವಾಗಿ ಅಗ್ರಹಾರಗಳನ್ನು ದಾನವಾಗಿ ಕೊಡುತ್ತಿದ್ದರು" ಎಂದು ಡಾ|| ಡಿ. ಸಿ. ಸರ್ಕಾರ್ ಅವರು ವಾಚಸ್ಪತ್ಯದ ಆಧಾರದ ಮೇಲೆ ಹೇಳುತ್ತಾರೆ.[30] ಈ ಹೇಳಿಕೆಯನ್ನು ಕನ್ನಡ ಶಾಸನಗಳು ಸಮರ್ಥಿಸುವುದಿಲ್ಲ. ಒಂದು ಊರನ್ನು ಬಹು ಹಿಂದೆಯೇ ಒಬ್ಬ ರಾಜನು ಕೆಲವು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟಿರುವನೆಂದು ಭಾವಿಸೋಣ. ಬಹಳ ಕಾಲವಾದ ಮೇಲೆ ದಾನವನ್ನು ಕೊಟ್ಟ ರಾಜನ ಹೆಸರು ಮರೆತು

---

[24] BKI. I. i. 45, 980 A.D.

[25] EC. II. 67, 1129 A.D.

[26] 'ಶ್ರೋತ್ರಿಯ ಗ್ರಾಮ' (EC. III. NJ. 164, 1092 A.D.) ಎಂಬುದು ಬಹುಶಃ ಅಗ್ರಹಾರದ ಮತ್ತೊಂದು ಹೆಸರು.

[27] ಶಬ್ದವಿಹಾರ, ಪು. 55-61.

[28] D. C. Sircar : Successors of the Śātavāhanas, p. 93.

[29] ಉದಾಹರಣೆಗೆ–EC. V. Bl. 245, C. 420 A.D.

[30] D. C. Sircar : Successors of the Śātavāhanas, p. 108.

ಹೋಗುವುದು ಸಹಜವೇ. ಅಂತಹ ಸಮಯಗಳಲ್ಲಿ, ಆ ಊರನ್ನು, "ಶ್ರೀಮದನಾದಿ ಅಗ್ರಹಾರ"[31] ಎಂದೋ, ಜನಮೇಜಯ ಮುಂತಾದ ಪೌರಾಣಿಕ ವ್ಯಕ್ತಿಗಳು ಮಾಡಿದ ಅಗ್ರಹಾರ ಎಂದೋ ("ಶ್ರೀಮಜ್ಜನಮೇಜಯ ದತ್ತಿಯ ಮಹಾಗ್ರಹಾರಂ ಮಾಳವಾಲೂರ್")[32], ಶ್ರೀರಾಮ ನಿರ್ಮಿಸಿದ ಅಗ್ರಹಾರ ಎಂದೋ (ಉದಾಹರಣೆಗೆ ಲೊಕ್ಕಿಗುಂಡಿ)[33] ಕರೆಯುತ್ತಿದ್ದರು. ಸಾಮಾನ್ಯವಾದ ಊರುಗಳನ್ನು ಅಗ್ರಹಾರಗಳಾಗಿ ಪರಿವರ್ತಿಸಿದ ಹಲವು ನಿದರ್ಶನಗಳೂ ನಮಗೆ ದೊರಕುತ್ತವೆ. ಬೀರವೂರು ಮತ್ತು ಬಿದಿರ್ವಳ್ಳಿಗಳನ್ನು "ಒಂದೊ(ದು) ಅಗ್ರಹಾರ ಮಾಡಿ"ದ ವಿಷಯ ಶಾಸನವೊಂದರಲ್ಲಿದೆ.[34] ಕ್ರಿ. ಶ. 1087ರಲ್ಲಿ ತಮಿಳು ನಾಡಿನಿಂದ ("ದ್ರವಿಡದೇಶ") ನಾನಾ ಗೋತ್ರಗಳಿಗೆ ಸೇರಿದ, ನಾನಾ ವೇದಗಳಲ್ಲಿ, ವೇದಶಾಖೆಗಳಲ್ಲಿ ಮತ್ತು ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದ ಮುನ್ನೂರ್ವರು ಬ್ರಾಹ್ಮಣರು ಕರ್ನಾಟಕಕ್ಕೆ ವಲಸೆ ಬರುತ್ತಾರೆ (ಅವರ ವಲಸೆಗೆ ಕಾರಣವನ್ನು ಶಾಸನವು ತಿಳಿಸಿಲ್ಲ), ಅಲ್ಲಿಯ ರಾಜ ಪಲತ ಪಾಂಡ್ಯನ ವಿಜ್ಞಾಪನೆಯ ಮೇರೆಗೆ ತ್ರಿಭುವನ ಮಲ್ಲದೇವನು ಕೋಗಳಿ 500ರಲ್ಲಿದ್ದ ನೀರುಗುಂದ ಎಂಬ ಗ್ರಾಮವನ್ನು ಅಗ್ರಹಾರವಾಗಿ ಮಾಡಿ ('ಅಗ್ರಹಾರೀ ಕೃತ್ಯ') ದಾನವಾಗಿ ಕೊಡುತ್ತಾನೆ.[35] ಒಂದು ಊರನ್ನು ಅಗ್ರಹಾರವಾಗಿ ಮಾಡಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರೆ ಬಹಳ ಪುಣ್ಯ ಬರುತ್ತದೆಂದು ರಾಜರು ನಂಬಿದ್ದರು. ಅದರಂತೆ ಕದಂಬರಾಜ ಶ್ರೀ ವೀರಸೋಮ ಭೂಮಿಪತಿಯು ಮೂರು ಹಳ್ಳಿಗಳೊಡಗೂಡಿದ ಕೆಲ್ಲಿಗುಂಡ ಎಂಬ ಗ್ರಾಮದ ಸರ್ವಸ್ವಾಮ್ಯವನ್ನು ಎಪ್ಪತ್ತಾರು ಬ್ರಾಹ್ಮಣರಿಗೆ ಬಿಟ್ಟುಕೊಡುತ್ತಾನೆ.[36] ಆ ಅಗ್ರಹಾರದ ಭೂಮಿಯನ್ನು ಬೇರೆ ಬೇರೆ ವ್ಯಕ್ತಿಗಳಿಗೆ ಹಂಚಿದ ವಿವರಗಳು ತಾಮ್ರಪಟದಲ್ಲಿ ಬಂದಿವೆ. ವಿಷ್ಣುವರ್ಧನ ಹೊಯ್ಸಳನು ತನ್ನ ತಮ್ಮ ಉದಯಾದಿತ್ಯದೇವನ 'ಪರೋಕ್ಷವಿನಯ'ಕ್ಕಾಗಿ[37] ಕೆಲ್ಲವತ್ತಿ ಎಂಬ ಊರನ್ನು ಅಗ್ರಹಾರವಾಗಿ ಮಾಡಿ, ಅದನ್ನು ಹದಿನೆಂಟು ವೃತ್ತಿಗಳಾಗಿ ವಿಂಗಡಿಸಿ ಬ್ರಾಹ್ಮಣರಿಗೆ ಧಾರಾಪೂರ್ವಕವಾಗಿ ಕೊಡುತ್ತಾನೆ.[38] ರಾಯಣ ದಂಡನಾಥ ಎಂಬುವನು ಬಹುಶಃ ತನ್ನ ಮಾನ್ಯ ಗ್ರಾಮವಾಗಿದ್ದ ಮೊರಲೆಯನ್ನು ಅಗ್ರಹಾರವಾಗಿ ಮಾಡಿ 'ಬಂಧುಗಳ್ಗಂ ಬ್ರಾಹ್ಮಣರ್ಗಂ ವೃತ್ತಿವಿಭಾಗವಂ ಮಾಡಿ' ಆ ಊರಲ್ಲಿ ಕೇಶವದೇವರನ್ನು ಪ್ರತಿಷ್ಠಿಸುತ್ತಾನೆ.[39] ಹೀಗೆ ಒಂದು ಊರನ್ನು ಅಗ್ರಹಾರವಾಗಿ ಪರಿವರ್ತಿಸುವುದರಲ್ಲಿ ಮುಖ್ಯವಾದ ಉದ್ದೇಶ ಅದರಿಂದ ತನಗೋ, ಇತರರಿಗೋ ಪುಣ್ಯವು ಲಭಿಸುತ್ತದೆ ಎಂಬುದೇ ಆಗಿದೆ.

ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ "ಮಹಾಜನ"ಗಳು. ಅವರೇ ಆ ಅಗ್ರಹಾರದ ಪ್ರಭುಗಳು. ಮಹಾಜನಗಳು ಬ್ರಾಹ್ಮಣರೇ ಆಗಬೇಕಿಲ್ಲವೆಂದೂ, ಮಹಾಜನಗಳಲ್ಲಿ ಬ್ರಾಹ್ಮಣೇತರರು ಕಡಮೆ ಸಂಖ್ಯೆಯಲ್ಲಾದರೂ ಇದ್ದಿರಬಹುದೆಂದೂ ಡಾ॥ ಅಲ್ಟೇಕರರು ಅಭಿಪ್ರಾಯಪಟ್ಟು ಕೆಲವು ಶಾಸನಗಳನ್ನು

---

31 EC. VII. Sk. 177, C. 1029 A.D. ಸ್ಥಾನಕುಂದೂರು (ಈಗಿನ ತಾಳಗುಂದ) ಈ ಶಾಸನದ ಪ್ರಕಾರ 'ಅನಾದಿ ಅಗ್ರಹಾರ'. ಇನ್ನೊಂದು 'ಅನಾದಿ ಅಗ್ರಹಾರ'ವಾದ ಕೊಡಗನೂರನ್ನು (ಚಿತ್ರದುರ್ಗ ಜಿಲ್ಲೆ) ದಕ್ಷಿಣದ ಐಹೊಳೆ ಎಂದು ಕರೆದಿವೆ (EC. XI. Dg. 149, 1113 A.D.)

32 BKI. I. ii 173, 1124 A.D.

33 BKI. I. i. 52, 1007 A.D.

34 EC. XI. Cd. 50, 968 A.D.

35 EI. XII. p. 150, 1087 A.D.

36 EC. VII. Sk. 117, 1118 A.D.

37 ವ್ಯಕ್ತಿಯು ಸಾವಿನ ನಂತರ, ಅವನಿಗೆ ಸದ್ಗತಿ ದೊರೆಯಲಿ ಎಂಬ ಉದ್ದೇಶದಿಂದ ಮಾಡುವ ದಾನ 'ಪರೋಕ್ಷ ವಿನಯದಾನ'. ವಿನಯ = (ಮುಕ್ತಿಗೆ) ಕೊಂಡೊಯ್ಯುವಿಕೆ.

38 EC. V. Hn. 102, 1123 A.D.

39 EC. VI. Cm. 137, 1130 A.D.

ಉದಾಹರಿಸುತ್ತಾರೆ.[40] ಆದರೆ ಆ ಶಾಸನಗಳನ್ನು ಅವರು ಸರಿಯಾಗಿ ಅರ್ಥಮಾಡಿಕೊಂಡಿಲ್ಲವೆಂಬುದು ಸ್ಪಷ್ಟ. ಮಹಾಜನಗಳನ್ನು ಹೆಸರಿಸುವಾಗಲೆಲ್ಲ ಅವರಿಗೆ ಕೊಟ್ಟಿರುವ ವಿಶೇಷಣಗಳನ್ನು ನೋಡಿದರೆ ಅವರು ಬ್ರಾಹ್ಮಣರೇ ಹೊರತು ಬೇರೆ ಯಾರೂ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ("ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾಣ ಪರಾಯಣ ಜಪ ಸಮಾಧಿ ಶೀಳ ಸಂಪನ್ನರ್....ವಿದಿತ ವೇದಾರ್ಥ ಪಾರಗರ್ ಷಟ್ಕರ್ಮ ನಿರತರ್ ಸಪ್ತಸೋಮ ಸಂಸ್ಥಾವಭೃತಾವಗಾಹನ ಪವಿತ್ರೀಕೃತ ಶರೀರರ್ ಶ್ರೀ ದಾಶರಥಿ ನಿರ್ಮಿತ ಮಹಾಗ್ರಾಮಂ ಶ್ರೀಲೊಕ್ಕಿಗುಂಡಿಯೂರೊಡೆಯ ಪ್ರಮುಖ ಮಹಾಜನ ಸಾಸಿರ್ವರ್" ). ಉಳಿದ ಸಾಮಾನ್ಯ ಊರುಗಳಿಗೆ 'ಪ್ರಭುಗಾವುಂಡು'ಗಳಿದ್ದಂತೆ ಅಗ್ರಹಾರಗಳಿಗೆ ಮಹಾಜನಗಳು ಎಂದರೂ ತಪ್ಪಾಗುತ್ತದೆ. ಪ್ರಭುಗಾವುಂಡುಗಳು ಊರಿನ ಮೇಲ್ವಿಚಾರಕರೇ ಹೊರತು, ಊರಿನ 'ಒಡೆಯ'ರಲ್ಲ. ಮಹಾಜನಗಳು ಅಗ್ರಹಾರದ 'ಒಡೆಯ' ರಾಗಿದ್ದರು. ಕನ್ನಡನಾಡಿನ 'ಮಹಾಜನ'ರಿಗೂ ತಮಿಳುನಾಡಿನ 'ಪೆರುಮಕ್ಕಳು'ಗಳಿಗೂ ಇರುವ ಸಾದೃಶ್ಯ ಗಮನಾರ್ಹವಾದುದು. ಒಂದು ಇನ್ನೊಂದರ ಅನುವಾದವೆಂಬುದರಲ್ಲಿ ಸಂದೇಹವಿಲ್ಲ. ತಮಿಳು ನಾಡಿನ 'ಚತುರ್ವೇದಿಮಂಗಲ' ಅಥವಾ ಅಗ್ರಹಾರಗಳ 'ಸಭೆ'ಯ ಸದಸ್ಯರೇ ಪೆರುಮಕ್ಕಳು. ಊರಿನ ಎಲ್ಲ ಬ್ರಾಹ್ಮಣರೂ —ಯುವಕರೂ ವೃದ್ಧರೂ ಕೂಡಿ—ಸಭೆಯ ಸದಸ್ಯರು. ಸಭೆಯು ಚನ್ನಾಗಿ, ಪರಿಣಾಮಕಾರಿಯಾಗಿ ಕೆಲಸ ಮಾಡಲು 'ಸಂವತ್ಸರ ವಾರಿಯಂ' (Annual-committee), 'ತೋಟ್ಟವಾರಿಯಂ' (Garden-committee), 'ಏರಿವಾರಿಯಂ' (Tank-committee) ಮುಂತಾದ ಸಮಿತಿಗಳನ್ನು ರಚಿಸಿ ಆ ಸಮಿತಿಗಳಿಗೆ ಸದಸ್ಯರನ್ನು ಆರಿಸಲು ಚುನಾವಣೆಗಳನ್ನು ನಡೆಸುತ್ತಿತ್ತು. ಎಂದರೆ ಸಭೆಯು ಸಮಿತಿಗಳ ಮೂಲಕ ಊರಿನ ಒಳ ಆಡಳಿತವನ್ನು ನಡೆಸುತ್ತಿತ್ತು. ಉದಾಹರಣೆಗೆ ಉತ್ತರಮೇರೂರಿನ ಹತ್ತನೇ ಶತಮಾನದ ಎರಡು ಶಾಸನಗಳನ್ನು ಇಲ್ಲಿ ಹೆಸರಿಸಬಹುದು. ಆದರೆ ಕನ್ನಡನಾಡಿನ ಅಗ್ರಹಾರಗಳಲ್ಲಿ ಮಹಾಜನರು ಹೀಗೆ ಸಮಿತಿಗಳನ್ನು ರಚಿಸುತ್ತಿರಲಿಲ್ಲ. ಬಹುಶಃ ತಾವೇ ಸಾಮೂಹಿಕವಾಗಿ ಊರಿನ ಒಳ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರು. ಅಗ್ರಹಾರಗಳಲ್ಲಿದ್ದ ಮಹಾಜನಗಳ ಸಂಖ್ಯೆಯನ್ನು ನೋಡಿದರೂ ಇದೇ ಭಾವನೆ ಹುಟ್ಟುತ್ತದೆ. ಕೆಲವು ಅಗ್ರಹಾರಗಳಲ್ಲಿ ಇನ್ನೂರು, ನಾನೂರು, ಐನೂರು, ಮೂವತ್ತೆರಡು ಸಾವಿರ, ಮುಂತಾದ ಸಂಖ್ಯೆಯಷ್ಟು ಮಹಾಜನರಿರುತ್ತಿದ್ದರೆಂದು ಶಾಸನಗಳು ಹೇಳುತ್ತವೆ. ಇವರನ್ನೆಲ್ಲ ಆರಿಸುತ್ತಿದ್ದರು ಅಥವಾ ಚುನಾಯಿಸುತ್ತಿದ್ದರು

---

[40] The Rāṣṭrakūṭas and their Times, pp. 200–1.

"ಅಗ್ರಹಾರಗಳಲ್ಲಿ ಬಹುಮಟ್ಟಿಗೆ ಬ್ರಾಹ್ಮಣರೇ ಇದ್ದುದ್ದರಿಂದ ಆ ಅಗ್ರಹಾರದ ಗೃಹಸ್ಥರೆಲ್ಲರೂ 'ಮಹಾಜನ'ರಲ್ಲಿ ಸೇರಿರುತ್ತಿದ್ದರು. ಆ ಅಗ್ರಹಾರದಲ್ಲಿ ಇತರ ಜಾತಿಯವರೂ ಇದ್ದರೆ ಅವರಲ್ಲಿಯೂ ಕೆಲವರು 'ಮಹಾಜನ'ರಲ್ಲಿ ಸೇರಿದ್ದಿರಬೇಕು. ಅಂತಹ ಕಡೆ ಬ್ರಾಹ್ಮಣರೇ ಪ್ರಬಲರಾಗಿದ್ದಿರಬೇಕು." 'ಮಹಾಜನ'ರಲ್ಲಿ ಬ್ರಾಹ್ಮಣರಲ್ಲದೆ ಬೇರೆ ಜಾತಿಗಳವರೂ ಇದ್ದರೆಂಬುದಕ್ಕೆ ಯಾವ ಆಧಾರಗಳೂ ಇಲ್ಲ. ಹರಿಹರನ ನಂಬಿಯಣ್ಣನ ರಗಳೆಯಲ್ಲಿ ನಂಬಿಯಣ್ಣನು ತಿರುವೆಣ್ಣೆನೆಲ್ಲೂರಿನ 'ಮಹಜನಂಗಳ'ನ್ನು ಕರೆಯಿರಿ ಎಂದು ಆಜ್ಞಾಪಿಸಿದಾಗ ಆ ಊರಿನ ಬ್ರಾಹ್ಮಣರು ಮಾತ್ರ ಬಂದು ಕಾಣಿಸಿಕೊಳ್ಳುತ್ತಾರೆ.

(ನಂಬಿಯಣ್ಣನ ರಗಳೆ, ಪು. 47.)

[41] BKI. I. i. 52, 1007 A.D.

[42] ವಿವರಗಳಿಗೆ ನೋಡಿ—K. A. Nilakantha Shastri : Studies in Cōla History and Administration, p. 97, 109, 110, 163–175. R. K. Mookerjeeಯವರ Local Government in Ancient India ಎಂಬ ಗ್ರಂಥವನ್ನೂ ನೋಡಿ.

[43] BKI. I. ii. 133, 1087 A.D.

[44] BKI. I. ii. 191, 1112 A.D.

[45] BKI. I. i. 83, 1049 A.D.

[46] EC. VII. SK. 185, 1158 A.D.

ಎನ್ನುವುದು ಊಹೆಯನ್ನೂ ಮೀರಿದ್ದು. ಆದ್ದರಿಂದ ಮಹಾಜನಗಳ ಸಂಖ್ಯೆಯು ಅಗ್ರಹಾರದ ವಯಸ್ಕ ಬ್ರಾಹ್ಮಣರ (Adults) ಒಟ್ಟು ಸಂಖ್ಯೆಯನ್ನೋ ಅಥವಾ ಬ್ರಾಹ್ಮಣ ಗೃಹಸ್ಥರನ್ನೋ (Heads of Brahmin families) ಸೂಚಿಸುತ್ತದೆ ಎಂದಿಟ್ಟುಕೊಳ್ಳಬಹುದು. "ಸುಸಂಸ್ಕೃತವಾಗಿದ್ದ ಪ್ರಜಾವರ್ಗವು ಗ್ರಾಮ ಗ್ರಾಮಗಳಲ್ಲಿ ತಪ್ಪದೇ ಆದ ಒಂದೊಂದು ಸ್ವತಂತ್ರ ಸಂಸ್ಥೆಯನ್ನು ನೆಲೆಗೊಳಿಸುತ್ತಿದ್ದುದು ಶಾಸನಗಳಿಂದ ಗೊತ್ತಾಗುತ್ತದೆ. ಆ ಸಂಸ್ಥೆಗೆ 'ಮಹಾಜನ' ಎಂದು ಹೆಸರು"[47] ಎಂಬ ಅಭಿಪ್ರಾಯವೂ ಸಾಧುವಾದುದಲ್ಲ.

ಮಹಾಜನಗಳು ಅಗ್ರಹಾರಗಳ ಒಡೆಯರಾದುದರಿಂದ ಅವರಿಗೆ ಅಗ್ರಹಾರಗಳ ಮೇಲೆ ಒಂದು ರೀತಿಯ ಪ್ರಭುತ್ವವಿರುತ್ತಿತ್ತು. ಅತ್ತಿಮಬ್ಬೆಯು ತಾನು ಲೊಕ್ಕಿಗುಂಡಿಯಲ್ಲಿ ಕಟ್ಟಿಸಿದ ಬಸದಿಯ ಪೂಜಾನಿಮಿತ್ತವಾಗಿ ಆ ಅಗ್ರಹಾರದ ಮಹಾಜನರನ್ನು ಬೇಡಿ ಭೂಮಿಯನ್ನು ಪಡೆದು ದಾನಮಾಡುತ್ತಾಳೆ.[48] ಬಾಗೆವಾಡಿ ಎಂಬ ಅಗ್ರಹಾರದಲ್ಲಿ[49] ರಾಣಿ ಮೈಳಲದೇವಿಯು ಚಂದ್ರಗ್ರಹಣ ನಿಮಿತ್ತವಾಗಿ ಲಕ್ಷಹೋಮವನ್ನು ಮಾಡಿಸಿದ ಸಂದರ್ಭದಲ್ಲಿ ಆ ಊರಿನ ಹಲವರು ಚಂದ್ರಯಭಟ್ಟ ಎಂಬ ಉಪಾಧ್ಯಾಯನಿಗೆ ಭೂಮಿಯನ್ನು ಬಿಡುತ್ತಾರೆ. ಅದನ್ನು ಆ ಅಗ್ರಹಾರದ ಐನೂರ್ವರು ಮಹಾಜನರು ಪ್ರತಿಪಾಲಿಸುತ್ತಾರೆ ಎಂದು ಶಾಸನವು ಹೇಳುತ್ತದೆ.[50] ಕುಱಿತಕೊಂಟೆಯ (ಈಗಿನ ಕುರ್ತುಕೋಟೆ) ಇನ್ನೂರ್ವರು ಮಹಾಜನರನ್ನು ಒಂದು ಶಾಸನವು ಹೀಗೆ ಹೊಗಳುತ್ತದೆ : "ಸ್ವಸ್ತ್ಯನೇಕ ಗುಣಗಣಾಳಂಕೃತ ಮುಖಕಮಳ ವಿನಿರ್ಗತ ವೇದ ವೇದಾಂಗೋಪಾಂಗಾನೇಕ ಶಾಸ್ತ್ರಾಷ್ಟಾದಶಸ್ಮೃತಿ ಪುರಾಣ ವಾಗ್ಭೂಷಣರ್ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಪರಾಯಣರ್ ವಿದಿತ ವೇದಾರ್ಥವಿದ್ಯಾಪಾರಗರ್ ಷಟ್ಕರ್ಮ ನಿರತರ್ ಸಪ್ತಸೋಮ ಸಂಸ್ಥಾವಭೃತಾವಗಾಹನ ಪವಿತ್ರೀಕೃತಶರೀರರ್ ಪರಮಪರೋಪಕಾರಿಗಳಾಶ್ರಿತ ಜನ ಕಲ್ಪವೃಕ್ಷರೇಕವಾಕ್ಯದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳಕರಪ್ಪ ಶ್ರೀಮತ್ಕುಱಿತಕೊಂಟೆಯೂರೊಡೆಯ ವಾಸುದೇವ ಭಟ್ಟ ಸೋಮಯಾಜಿಯ ಪ್ರಮುಖವಶೇಷ ಮಹಾಜನವಿನ್ನೂರ್ವರು॥ ಆದಿಬ್ರಹ್ಮ ಸಮಾನದ ವೇದವಿದರ್ ಸಪ್ತಸೋಮ ಸಂಸ್ಥಾವಭೃತಾಹ್ಲಾದನ ಕೃತರಮಳ ಯಶರ್ ಮೇದಿನಿಯೊಳ್ಕುಱಿತಕೊಂಟೆಯ ದ್ವಿಜನಿಚಯ॥ ವಿದಿತರ್ ನೀತಿವಿದರ್ ವಿನೂತ ವಿನಯಾಳಂಕಾರರತ್ಯೂರ್ಜಿತರ್ ಮದಮಾತ್ಸರ್ಯ ವಿದೂರರಾದಿ ಪುರುಷ ಪ್ರಖ್ಯಾತಿಯನ್ತಾಳಿಯಭ್ಯುದಯಕ್ಕಾಶ್ರಯಮಾದರಾವುದಱೊಳಂ ಧರ್ಮಜ್ಞರಾಹಾರದಾನದ ಪೆಂಪಿಟ್ಟಳವೆಂದುಮೀ ಕುಱಿತಕೊಂಟೆ ಗ್ರಾಮದೊಳು ದ್ವಿಜರ್"[51].

ಈ ವಿಶೇಷಣಗಳನ್ನು ನೋಡಿದರೆ ಮಹಾಜನರು ದೊಡ್ಡ ವಿದ್ವಾಂಸರಾಗಿದ್ದಿರಬೇಕು. ಅವರಿಗೆ ಊರಿನಲ್ಲಿ ತುಂಬಾ ಗೌರವವಿದ್ದಿತೆಂದು ಆ ಶಾಸನವೇ ತಿಳಿಸುತ್ತದೆ. ಆ ಊರಲ್ಲಿ ನಾವಿದ ಜಾತಿಯ ದಾಸ ಎಂಬಾತನು ಕಟ್ಟಿಸಿದ ದೇವಸ್ಥಾನಕ್ಕೆ ಮಹಾಜನರು ಐದು ಮತ್ತರು ಭೂಮಿಯನ್ನು ಬಿಡುತ್ತಾರೆ. ಶಾಸನದ ಕೊನೆಯಲ್ಲಿ ಇನ್ನೂರ್ವರ ಪಾದಾರಾಧಕನೂ ಶಿವಭಕ್ತನೂ ಆದ 'ಕುಳಕರಣಿ' ಮಾಬಲಾರ್ಯನು ಶಾಸನವನ್ನು ಬರೆದನು ಎಂದಿದೆ. ಈ 'ಕುಳಕರಣಿ'ಯು (ಈಗಿನ ಕುಲಕರ್ಣಿ) ಮಹಾಜನರ ಗುಮಾಸ್ತನಿದ್ದಂತೆ. ಅವರ ಅಧೀನನಾಗಿದ್ದು, ಊರಿನ ಲೆಕ್ಕಪತ್ರಗಳನ್ನಿಟ್ಟು, ಮಹಾಜನರ ಪತ್ರವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ವ್ಯಕ್ತಿ. ಮಾಳದಾಲೂರು ಎಂಬ ಅಗ್ರಹಾರವನ್ನು 'ಊರೊಡೆಯ'ರಾದ ಪ್ರಮುಖ ಮಹಾಜನರಿನ್ನೂರ್ವರು 'ಧರ್ಮಂಗಳಂ ಸ್ವಧರ್ಮದಿಂ ಸುರಕ್ಷಿತಮಾಗೆ' ರಕ್ಷಿಸುತ್ತಿದ್ದರು ಎಂದು ಶಾಸನವೊಂದು ತಿಳಿಸುತ್ತದೆ.[52]

---

[47] ಮುಳಿಯ ತಿಮ್ಮಪ್ಪಯ್ಯ : ಕವಿರಾಜಮಾರ್ಗ ವಿವೇಕ, ಪು. 59.

[48] BKI. I. i. 52, 1007 A.D.

[49] ಈ ಅಗ್ರಹಾರದಲ್ಲೇ ಬಸವಣ್ಣನವರು ಹನ್ನೆರಡನೇ ಶತಮಾನದ ಪೂರ್ವಾರ್ಧದಲ್ಲಿ ಹುಟ್ಟಿದ್ದು.

[50] BKI. I. i. 83, 1049 A.D.

[51] BKI. I. ii. 133. 1087 A.D.

[52] BKI. I. ii. 174, 1124 A.D.

ಜೈನಧರ್ಮ ಮುಂತಾದ ಅವೈದಿಕ ಧರ್ಮಗಳನ್ನು ಬಿಟ್ಟರೆ ಉಳಿದ ಜಾತಿಗಳ ಮೇಲೆ ಬ್ರಾಹ್ಮಣರಿಗೆ ಒಂದು ರೀತಿಯ ಧಾರ್ಮಿಕ ಪ್ರಭುತ್ವವಿತ್ತೆಂದು ಮೇಲಿನದು ಸೂಚಿಸುತ್ತದೆ. ಮೊದಲು ಬ್ರಾಹ್ಮಣರಾಗಿದ್ದು ಅನಂತರ ಜೈನರಾದವರ ಕುಲಕ್ಕೆ ಸೇರಿದ ಪಂಪನು ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂದು ಒಂದು ಕಡೆ ಹೇಳುತ್ತಾನೆ.[53] ಇದು ಆ ಕಾಲದ ಬಹುಜನರ ಅಭಿಪ್ರಾಯವಾಗಿತ್ತು.

ಮಹಾಜನರ ಸಾಮಾಜಿಕ ಕಾರ್ಯಗಳನ್ನೂ, ಧಾರ್ಮಿಕ ಸಹನೆಯನ್ನೂ ಕುರಿತು ಒಂದೆರಡು ಮಾತು ಗಳನ್ನು ಹೇಳಬಹುದು. ಊರಿನಲ್ಲಿ ಯಾವ ಕಾರ್ಯ ನಡೆದರೂ ಅದು ಮಹಾಜನರ ಸನ್ನಿಧಿಯಲ್ಲಿ ನಡೆಯುತ್ತಿತ್ತು. ಅವರು ಹೋರಾಟದಲ್ಲಿ ಸತ್ತ ವೀರನ ಸ್ಮಾರಕವಾಗಿ ವೀರಗಲ್ಲನ್ನು ಇಕ್ಕಿಸುತ್ತಿದ್ದರು.[54] 'ಗ್ರಾಮಕಾರ್ಯ ನಿಮಿತ್ತ' ವಾಗಿ ಯಾರಾದರೂ ಹಣವನ್ನೋ ಭೂಮಿಯನ್ನೋ ದಾನಮಾಡಿದರೆ ಅದನ್ನು ಸ್ವೀಕರಿಸುತ್ತಿದ್ದವರು, ಅದನ್ನು ರಕ್ಷಿಸುತ್ತಿದ್ದವರು, ವಿನಿಯೋಗಮಾಡುತ್ತಿದ್ದವರು ಇವರೇ.[55] ಹಣವನ್ನು ಬಡ್ಡಿಗೆ ಸಾಲವಾಗಿ ಕೊಟ್ಟು ಅದನ್ನು ಧಾರ್ಮಿಕ ಕಾರ್ಯಗಳಿಗಾಗಿ ಬಳಸುತ್ತಿದ್ದರು. ಭೂಮಿಯನ್ನು ದತ್ತಿಯಾಗಿ ಕೊಟ್ಟಿದ್ದರೆ, ಅದನ್ನು ಉಳುಮೆಗೆ ಕೊಡುವುದು, ಅದರಿಂದ ಬರುವ ಆದಾಯವನ್ನು ನಿರ್ದಿಷ್ಟ ಧಾರ್ಮಿಕ ಕಾರ್ಯಕ್ಕಾಗಿ ಬಳಸುವುದು ಮಹಾಜನರ ಕರ್ತವ್ಯವಾಗಿದ್ದಿತು. ಅಗ್ರಹಾರಗಳ ಮೇಲೆ ಯಾವ ತೆರಿಗೆಗಳನ್ನೂ ಹಾಕುವಂತಿರಲಿಲ್ಲ. ಅಂತಹ ಅಗ್ರಹಾರ ವೊಂದು ಯಾವುದೋ ತೆರಿಗೆಯನ್ನು ಕೊಡಬೇಕೆಂದು ಮಹಾಮಂಡಲಿಕ ಬೂತಾರ್ಯನು ಪೀಡಿಸಿದಾಗ ತಾನು ಒಂದು ಅಕ್ಷತೆಯನ್ನೂ ಕೊಡುವುದಿಲ್ಲವೆಂದು ಪಂಪಯ್ಯ ಎಂಬಾತನು ಪ್ರತಿಜ್ಞೆಮಾಡಿ, ಮಹಾಜನರ ಆಶೀರ್ವಾದ ವನ್ನು ಪಡೆದು ಬೂತಾರ್ಯನ ವಿರುದ್ಧ ಹೋರಾಡಿ ಮಡಿಯುತ್ತಾನೆ.[56] ಇಂಥದೇ ವಿಷಯವು ಇನ್ನೊಂದು ಶಾಸನ ದಲ್ಲಿದೆ. ಅಲ್ಲಿ ನಾಲ್ವರು ಹೋರಾಡಿ ಮಡಿಯುತ್ತಾರೆ.[57]

ಮಹಾಜನರು ಶಾಸ್ತ್ರಗಳಲ್ಲಿ ಮಾತ್ರವಲ್ಲ, ಶಸ್ತ್ರಗಳಲ್ಲಿಯೂ ಪರಿಣತರಾಗಿದ್ದರು. ಅವರ ಅನೇಕ ವಿಶೇಷಣ ಗಳಲ್ಲಿ 'ಸಿಂಹಪರಾಕ್ರಮರ್', 'ದುಷ್ಟವಿಧ್ವಂಸಕರ್', 'ಶಿಷ್ಟಜನಾಶ್ರಯರ್' ಎಂಬುವೂ ಕೆಲವು.[58] ಇವರು ಬಹುಶಃ ಊರಿನ ದೇವಸ್ಥಾನಗಳಲ್ಲಿ ಸಭೆ ಸೇರುತ್ತಿದ್ದರೆಂದು ಕಾಣುತ್ತದೆ. ಕೆಲವು ಅಗ್ರಹಾರಗಳಲ್ಲಿ ಮಹಾ ಜನರು ಸೇರಲು ಪ್ರತ್ಯೇಕ 'ಸಭೆ'ಗಳೂ ಇದ್ದುವು. ಉದಾಹರಣೆಗೆ ಪೊಸವಡಂಗಿಲೆ ಎಂಬ ಅಗ್ರಹಾರದಲ್ಲಿ ಅನೇಕ ದೇವಸ್ಥಾನಗಳೂ, ಮಠ, ಸತ್ರ, 'ಸಭೆ'ಗಳೂ ಇದ್ದುವು ಎಂದು ಶಾಸನವೊಂದು ಬಣ್ಣಿಸುತ್ತದೆ.[59] ಕುಕ್ಕನೂರಿನಲ್ಲಿ 'ಬ್ರಾಹ್ಮಣಶಾಲೆ'ಯೊಂದಿದ್ದಿತೆಂದು ಒಂದು ಶಾಸನವು ಹೇಳುತ್ತದೆ.[60] ತಮಿಳುನಾಡಿನ ತಿರುವೆಣ್ಣೆನೆಲ್ಲೂರೆಂಬ ಅಗ್ರಹಾರದ ಮುಂಭಾಗದಲ್ಲಿ ಒಂದು 'ಮಂಟಪ' ವಿದ್ದಿತೆಂದೂ, ಅಲ್ಲಿ ಕುಳಿತು ನಂಬಿಯಣ್ಣನು ಆ ಊರಿನ ಬ್ರಾಹ್ಮಣರನ್ನು ಕರೆಯಿಸಿದನೆಂದೂ ನಂಬಿಯಣ್ಣನ ರಗಳೆಯು (ಪು.47) ಹೇಳುತ್ತದೆ.

---

[53] ಪಂಪಭಾರತ, 14.48—"ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ........"

[54] EC. IX. Ht. 9, C. 870 A.D.

[55] BKI. I. ii. 136, 1091 A.D.

[56] BKI. I. i. 36, 942 A.D.

[57] MAR (1944). p. 46, C. 850 A.D.

[58] BKI. I. i. 52, 1007 A.D.

[59] SII. IX. i. 118, 1057 A.D. ತಮಿಳುನಾಡಿನ ಉತ್ತರಮೇರೂರಿನ ಬ್ರಾಹ್ಮಣರ ಒಟ್ಟು ಸಮೂಹಕ್ಕೆ 'ಸಭಾ' ಎಂದು ಹೆಸರಿತ್ತು (K. A. Nilakanthashastri: Studies in Cōla History and Administration, pp. 109–10).

'ಅಶೇಷ ಬ್ರಹ್ಮಸಭೆ' ಎಂಬ ಮಾತು ಶಾಸನವೊಂದರಲ್ಲಿ ಬರುತ್ತದೆ (BKI. I. i. 84, 1049 A.D.) ಆ ಊರಿನ 'ಸಮಸ್ತ ಬ್ರಾಹ್ಮಣರ ಸಭೆ' ಎಂಬುದು ಅದಕ್ಕೆ ಅರ್ಥ.

[60] SII. IX. i. 162, 1093 A.D.

ಅಗ್ರಹಾರಗಳಲ್ಲಿ ಬ್ರಾಹ್ಮಣರಲ್ಲದೆ ಇತರ ಜಾತಿಯ ಜನರೂ ಇದ್ದರು. ಮಹಾಜನರು ಆ ಇತರ ಜನರ ವಿಷಯದಲ್ಲಿ ಔದಾರ್ಯದಿಂದಲೇ ನಡೆದುಕೊಂಡಿದ್ದಾರೆ. ಅವರು ಕಟ್ಟಿಸಿದ ದೇವಸ್ಥಾನಗಳಿಗೆ ದತ್ತಿಗಳನ್ನು ಕೊಟ್ಟಿದ್ದಾರೆ. ಮಹಾಪ್ರಧಾನಿ ಬಲದೇವಯ್ಯನು ಸರಟಪುರದಲ್ಲಿ ಕಟ್ಟಿಸಿದ ಬಲದೇವ ಜಿನಾಲಯಕ್ಕೆ ಮಹಾಜನರು ತೋಟ ನಿವೇಶನಾದಿಗಳನ್ನು ಬಿಟ್ಟುಕೊಟ್ಟಿದ್ದಾರೆ.[61] ಪಟ್ಟಮಹಾದೇವಿ ಮಾಳಲದೇವಿಯು ಕುಪ್ಪಟೂರು ಎಂಬ ಅಗ್ರಹಾರದಲ್ಲಿ ಪಾರ್ಶ್ವದೇವ ಚೈತ್ಯಾಲಯವನ್ನು ಮಾಡಿಸಿಯಾದ ಮೇಲೆ ಆ ಊರಿನ ಮಹಾಜನಗಳನ್ನು 'ಪೂಜಿಸಿ', ಅವರ ಇಷ್ಟದ ಪ್ರಕಾರ ಆ ಬಸದಿಗೆ 'ಬ್ರಹ್ಮಜಿನಾಲಯ'ವೆಂದು ಹೆಸರಿಡುತ್ತಾಳೆ. ಆ ಸಮಯದಲ್ಲಿ ಅವಳು ಅಲ್ಲಿಯ ಹದಿನೆಂಟು ಸ್ಥಾನಪಾಚಾರ್ಯರನ್ನೂ ಬನವಸೆಯ ಮಧುಕೇಶ್ವರಾಚಾರ್ಯರನ್ನೂ ಬರಮಾಡಿಕೊಂಡು ಅವರನ್ನೂ ಗೌರವಿಸುತ್ತಾಳೆ.[62] ಸೇಡಿಂಬದ ಮುನ್ನೂರ್ವರು ಮಹಾಜನರು ಸೇಡಿಂಬದಲ್ಲಿ ಶಾಂತಿನಾಥದೇವರಿಗೆ ಬಸದಿಯೊಂದನ್ನು ಕಟ್ಟಿಸಿ ಅದಕ್ಕೆ 'ಬ್ರಹ್ಮಜಿನಾಲಯ'ವೆಂದು ಹೆಸರಿಡುತ್ತಾರೆ.[63] ಅಗ್ರಹಾರದ ಇತರ ಜನರ ಧಾರ್ಮಿಕ ಭಾವನೆಗಳನ್ನು ಗೌರವಿಸುವ ಪ್ರಜ್ಞೆ ಇಲ್ಲಿದೆ. ಹಾಗೆ ಗೌರವಿಸುವುದು ಮಹಾಜನರ ಕರ್ತವ್ಯವೂ ಆಗಿತ್ತು.

ಅಗ್ರಹಾರಗಳು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳು. ಮಹಾಜನರು ಮಹಾ ವಿದ್ವಾಂಸರಾಗಿದ್ದರೆಂಬುದನ್ನು ಹಿಂದೆಯೇ ನೋಡಿದ್ದೇವೆ. ಅವರು 'ಷಟ್ಕರ್ಮನಿರತ'ರು ಎಂದು ಶಾಸನಗಳು ಬಣ್ಣಿಸುತ್ತವೆ. ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ–ಇವೇ ಆ ಆರು ಕರ್ಮಗಳು.[64] ಇವು ಪ್ರತಿಯೊಬ್ಬ ಬ್ರಾಹ್ಮಣನೂ ಮಾಡಲೇಬೇಕಾದ ವಿಧಿಗಳು. ಇವುಗಳಲ್ಲಿ ಅಧ್ಯಯನ ಎನ್ನುವುದು ಜ್ಞಾನಾರ್ಜನೆಯನ್ನೂ, ಅಧ್ಯಾಪನ ಎನ್ನುವುದು ಜ್ಞಾನದಾನವನ್ನೂ ಸೂಚಿಸುತ್ತದೆ. ವೈದಿಕರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಕಲಿತಷ್ಟಕ್ಕೇ ತೃಪ್ತರಾಗದೆ, ಗೃಹಸ್ಥರಾದಮೇಲೂ ತಮ್ಮ ಅಭ್ಯಾಸವನ್ನು ಮುಂದುವರಿಸಬೇಕಿತ್ತು.[65] ಇದೇ ಅಧ್ಯಯನ. ಅಧ್ಯಾಪನ ಎಂದರೆ ಪಾಠವನ್ನು ಬೋಧಿಸುವುದು ಎಂದರ್ಥ. ಕಿಱಿಯಪಂದಿಗೊಳ ಎಂಬ ಅಗ್ರಹಾರವೊಂದನ್ನು ವರ್ಣಿಸುತ್ತಾ, ಅದು ವಿದ್ವಾಂಸರಿಂದಲೂ, ಅಧ್ಯಯನದಲ್ಲಿ ತೊಡಗಿರುವ ವಿದ್ಯಾರ್ಥಿಗಳ ಉದ್ಘೋಷದಿಂದಲೂ ಕೂಡಿತ್ತು ಎಂದು ಒಂದು ಶಾಸನವು ಹೇಳುತ್ತದೆ.[66] ಅಗ್ರಹಾರ ಪೊಸವಡಂಗಿಲೆಯು 'ವೇದನಾದ'ದಿಂದ ತುಂಬಿಹೋಗಿತ್ತು ಎಂದು ಒಂದು ಶಾಸನವು ಬಣ್ಣಿಸುತ್ತದೆ.[67] ಅಲ್ಲಿ ಅಧ್ಯಯನ ಮತ್ತು ಅಧ್ಯಾಪನಗಳು ನಡೆಯಲು ಬೇಕಾದಷ್ಟು ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. ವ್ಯಾಖ್ಯಾನದ ಉಪಾಧ್ಯಾಯರಿಗೆ ಎಂಟು ಗದ್ಯಾಣ, ಪುರಾಣ ಹೇಳುವ ಭಟ್ಟರಿಗೆ ಎಂಟು ಗದ್ಯಾಣ, ಋಗ್ವೇದ ಮತ್ತು ಯಜುರ್ವೇದಗಳನ್ನು

---

61 BKI. I. i. 111, 1071 A.D.

62 EC. VIII. Sb. 262, 1077 A.D.

63 JISI. No. 3, 1124 A D.

64 BKI. I. i. 84, 1049 A.D.

65 ಪಾಠಗಳನ್ನು ಆರಂಭಿಸುವ ಮೊದಲು ಉಪಾಧ್ಯಾಯರು ಮತ್ತು ವಿದ್ಯಾರ್ಥಿಗಳು 'ಉಪಾಕರ್ಮ'ವನ್ನು ಮಾಡುತ್ತಿದ್ದರು. ಉಪಾಕರ್ಮವು ಅಧ್ಯಯನದ ಆರಂಭವನ್ನು ಸೂಚಿಸುತ್ತಿತ್ತು. ವಿದ್ಯಾರ್ಥಿಯು ಗೃಹಸ್ಥನಾದ ಬಳಿಕ ವರ್ಷದಲ್ಲಿ ಎರಡು ತಿಂಗಳನ್ನಾದರೂ ಶಾಸ್ತ್ರಾಧ್ಯಯನಕ್ಕೆ ಮೀಸಲಿಡಬೇಕಾಗಿತ್ತು. ಆ ಎರಡು ತಿಂಗಳಲ್ಲಿ ಹಿಂದೆ ಕಲಿತಿರುವುದರಮೇಲೆ ಕುಳಿತಿರುವ ಮರವಿನ ಧೂಳನ್ನು ಒರಸುವ ಕಾರ್ಯ ನಡೆಯಬಹುದು ಅಥವಾ ಹೊಸ ಶಾಖೆಗಳ ಪರಿಚಯ ಮಾಡಿಕೊಳ್ಳಬಹುದು. ಉಪಾಕರ್ಮ ವಿಧಿಯು ಎಲ್ಲರೂ ಪ್ರತಿವರ್ಷವೂ ಆಚರಿಸಬೇಕಾದ ವಿಧಿಯಾಗಿ ಪರಿಣಮಿಸಿದ್ದು ಹೀಗೆ. ಹೊಸ ಯಜ್ಞೋಪವೀತವನ್ನು ಧರಿಸುವುದು ಉಪಾಕರ್ಮದ ಅತಿ ಅಮುಖ್ಯ ಅಂಗವಾಗಿದ್ದು ಈಗ ಅದೇ ಪ್ರಧಾನವಾಗಿ ಬಿಟ್ಟಿದೆ (Altekar: Education in Ancient India, p. 30). ವಾಸ್ತವವಾಗಿ 'ಉಪಾಕರ್ಮ' ಎನ್ನುವ ಪದದ ಮೂಲರೂಪ 'ಉಪಕ್ರಮ' (= ಆರಂಭಿಸು). ಉಪಕ್ರಮವು ಒಂದು ಬಗೆಯ 'ಕರ್ಮ'ವೇ ಆದ್ದರಿಂದ, ಅದರ ಮೂಲಾರ್ಥ ತಿಳಿಯದೆ ಅದನ್ನು 'ಉಪಾಕರ್ಮ' ಎಂದು ಮಾರ್ಪಡಿಸಿಕೊಂಡರು.

66 BKI. I. ii. 147, 1099 A.D.

67 SII. IX. i. 118, 1057 A.D.

ಬೋಧಿಸುವ ಉಪಾಧ್ಯಾಯರಿಗೆ ತಲಾ ಆರು ಗದ್ಯಾಣಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಶಾಸನವೊಂದು ಹೇಳುತ್ತದೆ.[68] ಅಗ್ರಹಾರ ತಾಳಗುಂದದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದ, ವ್ಯಾಕರಣ, ಪ್ರಭಾಕರ, ವೇದಾಂತ ಮುಂತಾದುವುಗಳ ಅಧ್ಯಾಪನಕ್ಕಾಗಿ ಕೇಶವದಂಡನಾಯಕನು ತಾಳಗುಂದದ ಬಳಿಯ ಬಯಲನ್ನು ದಾನವಾಗಿ ಕೊಡುತ್ತಾನೆ. ಮೇಲಿನ ಶಾಸ್ತ್ರಗಳನ್ನು ಅಭ್ಯಸಿಸುವ ನಲವತ್ತೆಂಟು ಛಾತ್ರರ (ಛಾತ್ರ > ಕನ್ನಡ. ಚಟ್ಟ= ವಿದ್ಯಾರ್ಥಿ)ವಸ್ತ್ರಾದಿಗಳಿಗೆ, ವಡ್ಡವಾರದ ದಿನ (ಗುರುವಾರ ಅಥವಾ ಶನಿವಾರ ?)[69] ಅಭ್ಯಂಜನಕ್ಕೆ, ಕನ್ನಡವನ್ನು ಹೇಳಿಕೊಡುವ ಉಪಾಧ್ಯಾಯನಿಗೆ, ಬಾಲಶಿಕ್ಷೆಯ ಶಾಸ್ತ್ರದವರಿಗೆ ದತ್ತಿಗಳನ್ನು ಬಿಟ್ಟುಕೊಡುತ್ತಾನೆ.[69.1] ವಿದ್ಯಾರ್ಥಿಗಳ ಊಟವು ಊರಿನ ಸತ್ರದಲ್ಲಿ ಎನ್ನುವುದು ಇದರಿಂದ ಸ್ಪಷ್ಟವಾಗುತ್ತದೆ. ಸತ್ರಗಳಿಲ್ಲದ ಅಗ್ರಹಾರಗಳಲ್ಲಿ ಬೇರೆ ಯಾವ ಏರ್ಪಾಡೂ ಇಲ್ಲದಿದ್ದಾಗ ವಿದ್ಯಾರ್ಥಿಗಳು ಭಿಕ್ಷೆಯನ್ನು ಬೇಡಿ ಜೀವಿಸುತ್ತಿದ್ದಿರಬಹುದು. ಪ್ರೌಢವಿದ್ಯಾಭ್ಯಾಸಕ್ಕಾಗಿ 'ಭಟ್ಟ ವೃತ್ತಿ' ಗಳನ್ನು ಬಿಟ್ಟುಕೊಡುತ್ತಿದ್ದುದು ಸಾಮಾನ್ಯವಾಗಿ ಅಗ್ರಹಾರಗಳಲ್ಲಿ (ಭಟ್ಟವೃತ್ತಿಯ ವಿವರಗಳು ಮುಂದೆ ಬರುತ್ತವೆ). ಅಗ್ರಹಾರವೊಂದರಲ್ಲಿ ವಾಸಿಸುತ್ತಿದ್ದ ಜನರ ಹೆಸರುಗಳನ್ನು ನೋಡಿದರೆ, ಅಗ್ರಹಾರಗಳು ಎಂತಹ ದೊಡ್ಡ ವಿದ್ಯಾಕೇಂದ್ರಗಳಾಗಿದ್ದುವು ಎಂಬುದು ಮನವರಿಕೆಯಾಗುತ್ತದೆ—ಮಂತ್ರವಾದಿ ಲಖಣ್ಣ, ಸೋಮೇಶ್ವರ ವೈದ್ಯ, ನರಸಿಂಹ ಭಟ್ಟೋಪಾಧ್ಯಾಯ, ಸಾಮವೇದಿ ಮಲ್ಲಿಭಟ್ಟ, ಕವಿತಿಲಕ ವಿಶ್ವೈಯ, ಸರ್ವಶಾಸ್ತ್ರದ ಆದಿತ್ಯಭಟ್ಟ, ಚಂಗದೇವ ಕ್ರಮಿತ[70], ಶ್ರೀಕರಣದ ಸಾಂಯಿದೇವ, ಕಟ್ಟಿಗೆಯ ಮಧುವಯ್ಯ, ಭಾಸ್ಕರಘಳಿಸ,[71] ಭಾಗವತ ಶ್ರೀರಂಗಭಟ್ಟ, ಪಟ್ಟವರ್ಧನ ಪ್ರಧಾನಿ ನಾರಾಯಣದೇವ, ಭಂಡಾರಿ ನಾಗಯ್ಯ ಇತ್ಯಾದಿ.[72] ಇವರಲ್ಲಿ ಹಲವರು ವಿದ್ವಾಂಸರೂ ಇದ್ದಾರೆ, ರಾಜ್ಯದ ಆಡಳಿತದಲ್ಲಿ ಅಧಿಕಾರಿಗಳಾಗಿದ್ದವರೂ ಇದ್ದಾರೆ.

ಪ್ರಾಚೀನಕಾಲದಲ್ಲಿ ರಾಜ್ಯವು ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯಕ್ಷವಾಗಿ ವಹಿಸದಿದ್ದರೂ, ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ಪರೋಕ್ಷವಾಗಿ ಸಹಾಯಮಾಡಿದೆ ಎನ್ನಬಹುದು. ಹೊಟ್ಟೆ ಬಟ್ಟೆಗಳ ಚಿಂತೆ

---

[68] SII. IX. i. 175, 1107 A.D.

[69] 'ವಡ್ಡವಾರ' ಎನ್ನುವುದು ಯಾವ ದಿನವನ್ನು ಸೂಚಿಸುತ್ತದೆ ಎಂಬ ವಿಷಯದಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಫ್ಲೀಟ್ ಅವರು ವಡ್ಡವಾರ ಎಂದರೆ ಬಹುಶಃ ಶನಿವಾರವಿರಬೇಕು ಎನ್ನುತ್ತಾರೆ (IA. XXII. p. 252). ಡಾ॥ ಎ. ವೆಂಕಟಸುಬ್ಬಯ್ಯನವರು ವಡ್ಡವಾರವೆಂದರೆ ಗುರುವಾರವೂ ಆಗಬಹುದು ಶನಿವಾರವೂ ಆಗಬಹುದು ಎನ್ನುತ್ತಾರೆ (Some Śaka dates in Inscriptions, p. 58). ವಡ್ಡವಾರವೆಂದರೆ ಶನಿವಾರವೆಂಬ ಫ್ಲೀಟರ ಅಭಿಪ್ರಾಯವನ್ನೇ ರೈಸ್ ಅವರೂ ಅನುಮೋದಿಸಿದ್ದಾರೆ (IA. XXIII. p. 167.). ಈ ಅಭಿಪ್ರಾಯವು ಅನೇಕ ವಿದ್ವಾಂಸರಿಗೆ ಒಪ್ಪಿಗೆಯಾಗಿದೆ. ಗದಾಯುದ್ಧದ (3.28) ಈ ಪದ್ಯವೂ ಇದನ್ನೇ ಪೋಷಿಸುತ್ತದೆ—"ಕಳಶಜನನಿಂತು ಕೊಲಿಸಿದ। ಖಳನೆ ಗಡಂ ಧರ್ಮನಂದನಂ ಕ್ರೂರದಿನಂ।ಗಳ ಪೆಸಱಿಂ ಮಱೆಯಿಸಿ ಮಂ।ಗಳವಾರಂ ವಡ್ಡವಾರಮೆಂಬಂತೆ ವಲಂ॥". ಕಳಚೂರಿ ಬಿಜ್ಜಳ, ಹೊಯ್ಸಳ ಬಲ್ಲಾಳ ಮುಂತಾದ ದೊರೆಗಳಿಗೆ 'ಶನಿವಾರಸಿದ್ಧಿ' ಎಂಬ ಬಿರುದಿದ್ದಿತು. ಶನಿವಾರ ಕೆಟ್ಟ ದಿನವಾದ್ದರಿಂದ ಯಾರೂ ಆ ದಿನ ಯುದ್ಧಾರಂಭವನ್ನು ಮಾಡುತ್ತಿರಲಿಲ್ಲವೆಂದು ಕಾಣುತ್ತದೆ. ಆದರೆ ಮೇಲಿನ ಬಿರುದುಳ್ಳ ರಾಜರು ಶನಿವಾರವೇ ಯುದ್ಧಮಾಡಿ ಜಯಗಳಿಸಿದರು ಎಂಬ ಕಾರಣದಿಂದ ಆ ಬಿರುದನ್ನು ಪಡೆದರೆಂದು ಊಹಿಸಲು ಒಂದು ಶಾಸನಾಧಾರವಿದೆ. "ಶನಿವಾರದಂದೆ ಪಾಂಡ್ಯಾ।ವನಿಪನ ಸಪ್ತಾಂಗಮೆಯ್ದೆ ಸಿದ್ಧಿಸಿದುದಱಿಂ। ಶನಿವಾರಸಿದ್ಧಿವೆಸರಂ।ಜನಪತಿ ಬಲ್ಲಾಳದೇವನೆಸೆದಿರೆ ತಳೆದಂ॥ (EC. V. BL. 137).

[69.1] EC. VII. Sk. 185, 1158 A.D.

[70] ಕ್ರಮಿತ ಎನ್ನುವುದು ಸಂಸ್ಕೃತದ 'ಕ್ರಮವಿತ್' ಎಂಬುದರ ತದ್ಭವವಿರಬಹುದು. 'ಕ್ರಮವಿದ್' ಎಂಬುದು ಶಾಸನಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ (Mookherji: Ancient Indian Education, p. 371). ವೇದಗಳ ಕ್ರಮಪಾಠವನ್ನು ಬಲ್ಲವನು 'ಕ್ರಮವಿತ್'. ಕ್ರಮಪಾಠ, ಘನಪಾಠಾದಿಗಳ ವಿವರಣೆ ಮುಂದೆ ಬರುತ್ತದೆ.

[71] 'ಘಳಿಸ' ಎಂಬುದು 'ಘಟಿಕಾಸಾಹಸಿ' ಎಂಬುದರ ತದ್ಭವ.

[72] EC. VII. Sk. 117, 1118 A.D.

ಯನ್ನು ರಾಜ್ಯವು ಹೋಗಲಾಡಿಸಿದ್ದರಿಂದ ಅಗ್ರಹಾರಗಳ ಬ್ರಾಹ್ಮಣರು ತಮ್ಮ ಸಂಪೂರ್ಣ ಗಮನವನ್ನು ವಿದ್ಯಾವ್ಯಾಸಂಗದ ಕಡೆಗೆ, ವಿದ್ಯಾದಾನದ ಕಡೆಗೆ ಕೊಡಲು ಸಾಧ್ಯವಾಯಿತು.[73]

(ii) ಬ್ರಹ್ಮಪುರಿ: "ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ".[74] ಅಗ್ರಹಾರಗಳು ಊರುಗಳಾದರೆ, ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳು. ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಮೆ. ಏಕೆಂದರೆ ಪ್ರಾಚೀನ ಕರ್ನಾಟಕದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು, ನಗರಗಳ ಸಂಖ್ಯೆ ಕಡಮೆ. ಅಗ್ರಹಾರಗಳಲ್ಲಿದ್ದ ಬ್ರಾಹ್ಮಣರು ಆ ಊರುಗಳ ಒಡೆಯರು. ಆದರೆ ಬ್ರಹ್ಮಪುರಿಗಳಲ್ಲಿದ್ದ ಬ್ರಾಹ್ಮಣರು ಆ ಊರಿನ ಇತರ ಪಂಗಡಗಳ ಜನರಿದ್ದಂತೆ ಅಷ್ಟೆ. ಅಗ್ರಹಾರದ ಬ್ರಾಹ್ಮಣರಿಗಿದ್ದ ಅಧಿಕಾರ ಇವರಿಗಿರಲಿಲ್ಲ.

ಅನೇಕ ರಾಜರೂ, ದಂಡನಾಯಕರೂ ಬ್ರಹ್ಮಪುರಿಗಳನ್ನು ಸ್ಥಾಪಿಸಿದ ವಿಷಯ ಅನೇಕ ಶಾಸನಗಳಲ್ಲಿ ಬಂದಿದೆ. ಪುಲಿಗೆರೆಯಲ್ಲಿ 'ಬದ್ದಿಗ ಬ್ರಹ್ಮಪುರಿ' ಎಂಬ ಹೆಸರಿನ ಬ್ರಹ್ಮಪುರಿಯನ್ನು ಸ್ಥಾಪಿಸಿದ ವಿಷಯ ಶಾಸನವೊಂದರಲ್ಲಿದೆ.[75] ಮುಳುಗುಂದದ ಬ್ರಹ್ಮಪುರಿಗೆ ಮುಖ್ಯನಾದ ನಾಗಸ್ವಾಮಿಯ ವಿಷಯ ಹಿಂದಿನ ಅಧ್ಯಾಯಗಳಲ್ಲಿ ಬಂದಿದೆ. ಅವನು ಆ ಊರಿನ 'ಬ್ರಾಹ್ಮಣ ಸರ್ವಧರ್ಮಾಧಿಕಾರಿ'ಯೂ ಆಗಿದ್ದಂತೆ ಶಾಸನವು ತಿಳಿಸುತ್ತದೆ.[76] ರಾಜಧಾನಿ ವಿಕ್ರಮಪುರದಲ್ಲಿ ಬ್ರಹ್ಮಪುರಿಯಿದ್ದು ಅಲ್ಲಿಯ ನಂದಿಯಣ್ಣ ಷಡಂಗಿ[77] ಭಟ್ಟೋಪಾಧ್ಯಾಯ ಮುಂತಾದ ನಲವತ್ತೆರಡು ವಿದ್ವಾಂಸ 'ಮಹಾಜನ'ರಿಗೆ ಅಕ್ಕಾದೇವಿಯು ತೋಟ ಹೊಲಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[78] ಇನ್ನೊಂದು ಶಾಸನದಲ್ಲಿ ಅದೇ ವಿಕ್ರಮಪುರದ 'ಬ್ರಹ್ಮಪುರಿಗೇರಿ'ಯ ವಿಷ್ಣುಗೃಹದ ಸತ್ರವನ್ನು ಹೆಸರಿಸಿದೆ.[79] ಅಗ್ರಹಾರದಲ್ಲಿ ಬ್ರಾಹ್ಮಣರು ವಾಸಿಸುತ್ತಿದ್ದ ಭಾಗಗಳನ್ನೂ 'ಬ್ರಹ್ಮಪುರಿ'ಯೆಂದೇ ಕೆಲವು ಶಾಸನಗಳಲ್ಲಿ ಕರೆದಿದೆ.[80] ವಿಷ್ಣುವರ್ಧನನ ರಾಣಿ ಬಮ್ಮಲೆಯು ಬೆನಚಟಗೆಱೆ ಎಂಬ ಊರಿಗೆ 'ಬ್ರಹ್ಮಪುರ'ವೆಂದು ಹೆಸರುಕೊಟ್ಟು, ಆ ಊರಿನಲ್ಲಿ ತಾನು ಕಟ್ಟಿಸಿದ ಬಮ್ಮಲೇಶ್ವರ ದೇವರಿಗೂ ಮತ್ತು ಬ್ರಾಹ್ಮಣರಿಗೂ ಆ ಊರಿನ ಆದಾಯವನ್ನು ಸಮಭಾಗವಾಗಿ ಹಂಚಿ ಸರ್ವಬಾಧಾಪರಿಹಾರಪೂರ್ವಕವಾಗಿ ದಾನಮಾಡುತ್ತಾಳೆ.[81] ಕೊಂಕಣಾಧಿಪತಿಯಾದ ಜಯಕೇಶಿದೇವನ ವಿವಾಹೋತ್ಸವಕಾಲದಲ್ಲಿ ತ್ರಿಭುವನಮಲ್ಲನು ಕನಕಾಪುರ ಎಂಬ ಅಗ್ರಹಾರವನ್ನು ಸೌರಾಷ್ಟ್ರದ ಸೋಮೇಶ್ವರದೇವರ ಧೂಪಕ್ಕಾಗಿ ಬಿಟ್ಟುಕೊಟ್ಟು, ಆ ಅಗ್ರಹಾರವು 'ದೇವರ ಬ್ರಹ್ಮಪುರಿಯಾಗಿ' (?) ನಡೆಯುವಂತೆ ಅಳಿಯ ಜಯಕೇಶಿದೇವನ ಕೈಯಲ್ಲಿ ಕೊಡಿಸುತ್ತಾನೆ.[82] ಒಂದು ಊರನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಅಗ್ರಹಾರವಾಗಿ ಪರಿವರ್ತಿಸಿಯಾದ ಮೇಲೆ ಅದನ್ನು ಮತ್ತೆ ಇತರ ಉದ್ದೇಶಗಳಿಗಾಗಿ ದಾನಮಾಡುವ ವಿರಳ ನಿದರ್ಶನಗಳಲ್ಲಿ ಇದೂ ಒಂದು. ಪಂಪಭಾರತವನ್ನು ರಚಿಸಿದ್ದಕ್ಕೆ ಪಂಪನು ಅರಿಕೇಸರಿಯಿಂದ ಬಜ್ಜೆ (ಸಬ್ಬಿ)

---

[73] Altekar: The Rāṣṭrakūṭas and their Times, p. 404.

[74] Moraes: The Kadamba Kula, p. 299.

[75] EI. XV. p. 75, C. 920 A.D.

[76] BKI. I. i. 64, 1028 A.D.

[77] ಷಡಂಗಿ ಎಂಬುದು 'ಷಡಂಗವಿತ್' ಎಂಬುದರ ಸಮಾನ. ವೇದದ ಆರು ಅಂಗಗಳನ್ನು ಶಿಕ್ಷಾ, ವ್ಯಾಕರಣ, ಛಂದಸ್, ನಿರುಕ್ತ, ಜ್ಯೋತಿಷ ಮತ್ತು ಕಲ್ಪ) ಬಲ್ಲವನು ಷಡಂಗಿ ಅಥವಾ 'ಷಡಂಗವಿತ್'.

[78] BKI. I. i. 88, 1053 A.D.

[79] BKI. I. ii. 180, 1106 A.D.

[80] BKI. I. ii. 163, 1113 A.D.

[81] EC. XII. Gb. 13, 1140 A.D.

[82] BKI. I. ii. 154, 1104 A.D.

ಸಾವಿರದೊಳಗಿದ್ದ ಧರ್ಮಪುರ ಎಂಬ 'ಅಗ್ರಹಾರ'ವನ್ನು ಸಂಭಾವನಾರೂಪವಾಗಿ ಪಡೆಯುತ್ತಾನೆ.[82.1] ಇದೂ ಕೂಡ ಹಿಂದಿನ ವಿರಳನಿದರ್ಶನಗಳ ಮಾಲಿಕೆಗೆ ಸೇರುತ್ತದೆ.

ವಿದ್ಯಾಭ್ಯಾಸದ ವಿಷಯದಲ್ಲಿ ಬ್ರಹ್ಮಪುರಿಗಳು ಯಾವ ವೈಶಿಷ್ಟ್ಯವನ್ನೂ ತೋರುವುದಿಲ್ಲ. ಅವು ಬಹು ಮಟ್ಟಿಗೆ ಅಗ್ರಹಾರಗಳನ್ನು ಹೋಲುತ್ತವೆ. ಕೇಶವದೇವ ಎಂಬಾತನು ಬಳ್ಳಿಗಾವೆಯಲ್ಲಿ ಕೇಶವದೇವಾಲಯವನ್ನು ಕಟ್ಟಿಸಿ ಆ ದೇವಸ್ಥಾನದ ಮುಂದೆ ಸಣ್ಣ ಊರೊಂದನ್ನು ಕಟ್ಟಿ, ಅದಕ್ಕೆ ವೀರಕೇಶವಪುರವೆಂದು ಹೆಸರಿಡುತ್ತಾನೆ. ಅಲ್ಲಿಯ ವಿಶಾಲವಾದ ಮನೆಗಳಿಗೆ ಮಂಚ, ಪಾತ್ರೆ ಇತ್ಯಾದಿಗಳನ್ನು ಒದಗಿಸಿ ಕೆಲವು ವಿದ್ವಾಂಸರಾದ ಬ್ರಾಹ್ಮಣರಿಗೆ ದಾನವಾಗಿ ಕೊಡುತ್ತಾನೆ. ಆ ಊರನ್ನು ಶಾಸನವು ಬ್ರಹ್ಮಪುರಿಯೆಂದು ಕರೆದು, ಅಲ್ಲಿಯ ಬ್ರಾಹ್ಮಣರು ಅಗ್ರಹಾರದ ಬ್ರಾಹ್ಮಣರಂತೆ ಮಹಾವಿದ್ವಾಂಸರಾಗಿದ್ದರೆಂದು ಬಣ್ಣಿಸುತ್ತದೆ.[83]

(iii) **ದೇವಸ್ಥಾನ:** ಪ್ರಾಚೀನ ಕರ್ನಾಟಕದಲ್ಲಿ ದೇವಸ್ಥಾನವು ಶೈವಯತಿಗಳ ವಾಸಸ್ಥಾನವೂ ಆಗಿತ್ತು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಇವರು ಒಂದು ರೀತಿಯಲ್ಲಿ ನೆಲೆಯಾಗಿ ನಿಂತ ಯತಿಗಳು. ಇವರು ಮಹಾವಿದ್ವಾಂಸರೂ ಆಗಿದ್ದುದರಿಂದ ವೈಯಕ್ತಿಕವಾದ ತಪಃಕರ್ಮದ ಜೊತೆಯಲ್ಲಿ ವಿದ್ಯಾದಾನವನ್ನೂ ಕೈಕೊಂಡರು. ಭಕ್ತರು ದೇವಸ್ಥಾನಗಳ ಪೂಜಾದಿಗಳಿಗೆ ದತ್ತಿಗಳನ್ನು ಬಿಟ್ಟುಕೊಡುವಾಗ ವಿದ್ಯಾಭ್ಯಾಸಕ್ಕಾಗಿಯೂ ದತ್ತಿಗಳನ್ನು ಕೊಡಲು ಆರಂಭಿಸಿದರು. ಹೀಗೆ ದೇವಸ್ಥಾನವು ವಿದ್ಯಾಕೇಂದ್ರವಾಗಿ ಪರಿಣಮಿಸಿದ್ದು ಬಹುಶಃ ಎಂಟು ಅಥವಾ ಒಂಬತ್ತನೇ ಶತಮಾನಗಳ ಬಳಿಕ. ಜೈನರ ಬಸದಿಗಳನ್ನೂ, ಬೌದ್ಧರ ವಿಹಾರಗಳನ್ನೂ ಗಮನಕ್ಕೆ ತೆಗೆದುಕೊಂಡರೆ ಇನ್ನೂ ಬಹು ಹಿಂದಕ್ಕೆ ಹೋಗುತ್ತದೆ. ಏಕೆಂದರೆ ಆರಂಭದಿಂದಲೂ ಜೈನರ ಬಸದಿಗಳು (ಬಸದಿ < ಸಂ. ವಸತಿ) ದೇವಸ್ಥಾನಗಳೂ ಹೌದು, ಯತಿಗಳ ವಾಸಸ್ಥಾನಗಳೂ ಹೌದು. ಕರ್ನಾಟಕದಲ್ಲಿ ಅಲ್ಪಸಂಖ್ಯೆಯಲ್ಲಾದರೂ ಕೆಲವು ಬೌದ್ಧ ವಿಹಾರಗಳಿದ್ದುದು ನಿಜ. ಈ ಬಸದಿಗಳಲ್ಲಿಯೂ ಬೌದ್ಧ ವಿಹಾರಗಳಲ್ಲಿಯೂ ಯತಿಗಳಲ್ಲದವರಿಗೆ ವಿದ್ಯಾಭ್ಯಾಸಕ್ಕೆ ಅವಕಾಶವಿದ್ದಿರಲಾರದು.

ದೇವಸ್ಥಾನಗಳಲ್ಲಿ ಅಧ್ಯಯನಮಾಡುತ್ತಿದ್ದ ವಿದ್ಯಾರ್ಥಿಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. (1) ವಿದ್ಯಾರ್ಥಿ ತಪೋಧನರು, (2) ವಿದ್ಯಾರ್ಥಿ ಮಾಣಿಯರು.[84] (ಮಾಣಿ < ಸಂ. ಮಾಣವ. ಪಾಣಿನಿಯ ಪ್ರಕಾರ ಮಾಣವ ಎಂದರೆ ವಿದ್ಯಾಭ್ಯಾಸವನ್ನು ಆರಂಭಿಸಿರುವ ಬಾಲಕ ಎಂದರ್ಥ[85]). ಇವರಲ್ಲಿ ವಿದ್ಯಾರ್ಥಿ ತಪೋಧನರನ್ನು ನೈಷ್ಠಿಕ ತಪೋಧನ ಅಥವಾ ನೈಷ್ಠಿಕ ಬ್ರಹ್ಮಚಾರಿಗಳೆಂದೂ ಕರೆಯುತ್ತಿದ್ದಂತೆ ಕಾಣುತ್ತದೆ ("ನೈಷ್ಠಿಕ ತಪೋಧನರ್ಗೆ")[86]. ವಿದ್ಯಾರ್ಥಿ ತಪೋಧನರು ಅಥವಾ ನೈಷ್ಠಿಕ ಬ್ರಹ್ಮಚಾರಿಗಳು ಆ ದೇವಸ್ಥಾನದ ಯತಿಗಳ ಸಂಪ್ರದಾಯಕ್ಕೆ (monastic order) ಸೇರಿದವರು. ಅವರು ಆಜೀವಪರ್ಯಂತ ಬ್ರಹ್ಮಚಾರಿಗಳಾಗಿ[87] ಉಳಿದು, ತಮ್ಮ ಅಧ್ಯಯನ ಮುಗಿದ ಮೇಲೆ ಬೇರೆ ಬೇರೆ ಮಠಗಳಲ್ಲಿ ಸ್ಥಾನಪತಿಗಳಾಗುತ್ತಿದ್ದರು. ಈ ನೈಷ್ಠಿಕ ಬ್ರಹ್ಮಚಾರಿಗಳ ಏಕೈಕ ಗುರಿ ಜ್ಞಾನಾರ್ಜನೆ. ಸ್ಥಾನಪತಿಗಳು ನೈಷ್ಠಿಕ ಬ್ರಹ್ಮಚಾರಿಗಳಾಗಿರದಿದ್ದರೆ, ಆ ಸ್ಥಾನದಿಂದ ಅವರನ್ನು ಅಟ್ಟಬೇಕು ಎಂದು ಅನೇಕ ಶಾಸನಗಳು ವಿಧಿಸುತ್ತವೆ–"ಗೊರವರ್ ಕಾಳಾಮುಖರ್ ನೈಷ್ಠಿಕರ್

82.1 **ಪಂಪಭಾರತ, 14.56.**

83 Moraes: The Kadamba Kula, p. 299

84 EC. XI. Cd. 77, 940 A.D.

85 Agarwala: India as Known to Pāṇini, p. 82.

86 EC. XI. Dg. 133, 1071 A.D.

87 ನೈಷ್ಠಿಕ ಬ್ರಹ್ಮಚಾರಿಗಳು ಉಪನಿಷತ್ತುಗಳ ಯುಗದಲ್ಲಿ ಕಾಣಿಸಿಕೊಳ್ಳುತ್ತಾರೆ. ಹ್ಯುಯೆನ್‌ತ್ಸಾಂಗನು ಇವರನ್ನು ಹೋಲುವ ಸನ್ಯಾಸಿಗಳ ವಿಷಯವನ್ನು ಪ್ರಸ್ತಾಪಿಸುತ್ತಾನೆ–"ಸಮಾಜ ಇವರನ್ನು ಬಹುವಾಗಿ ಗೌರವಿಸುತ್ತದೆ. ಇವರ ಏಕೈಕ ಗುರಿ ಜ್ಞಾನ....ಜ್ಞಾನವನ್ನು ಪಡೆಯಲು ಎಷ್ಟು ದೂರ ಬೇಕಾದರೂ ಹೋಗಲು ಸಿದ್ಧ....ಭಿಕ್ಷುಕರಾಗಿದ್ದರೂ ಅವರಿಗೆ ಸಂಕೋಚವೆಂಬುದಿಲ್ಲ...." -Watters: On Yuan Chwang's Travels, I, pp. 160–1.

ಎನಿಸಮೊಡಂ ಭೋಗದೊಳ್ ಮೂಱು ಸ್ರೊತ್ತುಂ ವರಕಾಂತಾಸಂಕುಲಂ ಬಂದಿರಪ ತಡೆವಡಂ ವಿಪ್ರವಿದ್ಯಾರ್ಥಿಗಳ್ ಬಿಟ್ಟರದಿಂಪಾಸ್ರೊತ್ತುಂ ಓದುತ್ತಿರಪೊಡಂ ಇರಿಸಲ್ವಾಗದೆಂದುಂ ವರಾಧೀಶ್ವರೆಂದೀ ಧರ್ಮಮಂ ನಿರ್ಮಿಸಿ ನಿಯಮಿಸಿದಂ ಸೂಂಡಿಯೊಳ್ ನಾಗದೇವಂ".[88] ವಿಪ್ರಾರ್ಥಿ ಮಾಣಿಯರೆಂದರೆ ಬಹುಶಃ ಆ ಮಠದಲ್ಲಿ ಓದಿ, ಅಧ್ಯಯನ ಮುಗಿದ ನಂತರ ಗೃಹಸ್ಥರಾಗತಕ್ಕವರು.

ವಿದ್ಯಾಭ್ಯಾಸಕ್ಕಾಗಿ ದೇವಸ್ಥಾನಗಳಿಗೆ ಬಿಟ್ಟುಕೊಟ್ಟಿರುವ ಕೆಲವು ದತ್ತಿಗಳನ್ನು ನೋಡಬಹುದು. ಮಠದಲ್ಲಿ ಓದುವ ವಿದ್ಯಾರ್ಥಿಗಳ ಎಲ್ಲ ಆವಶ್ಯಕತೆಗಳನ್ನೂ ಗಮನದಲ್ಲಿರಿಸಿಕೊಂಡು ದತ್ತಿಗಳನ್ನು ಬಿಟ್ಟುಕೊಟ್ಟಿರುವಂತಿದೆ. ಅಗ್ರಹಾರ ಜಂಬೂರಿನ ಮಠದ[89] ಉಪಾಧ್ಯಾಯರು ಕೇಶವೋಜರು. ಅಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ ಬಹುಶಃ ಹದಿನಾರು. ಆ ದಾನದ ವಿವರಗಳು ಈ ರೀತಿ ಇವೆ:

| | | | |
|---|---|---|---|
| ಉಪ್ಪು ಎಣ್ಣೆಗಳಿಗೆ | .... | 16 | ಗದ್ಯಾಣ |
| ಹದಿನಾರು ಬಟ್ಟೆಗಳಿಗೆ | .... | 12 | ಗದ್ಯಾಣ |
| "ಎಂದಿರಿಂಗೆ"[89.1] | .... | 4 | ಗದ್ಯಾಣ |
| "ಅಪರ ಪಕ್ಷದ ಪಂಚಮಿಯ ಭೋಜನಕ್ಕೆ" | .... | 2 | ಗದ್ಯಾಣ |
| ಶಟ್ಟಿಗಳಿಗೆ | .... | 2 | ಗದ್ಯಾಣ |
| ಉಪ್ಪಿನಕಾಯಿಗೆ | .... | 2 | ಗದ್ಯಾಣ[90] |

ನಮಗೆ ತಿಳಿದಮಟ್ಟಿಗೆ ಕೇವಲ ವಿದ್ಯಾಭ್ಯಾಸಕ್ಕಾಗಿ ಕೊಟ್ಟ ಇಂತಹ ದತ್ತಿಗಳು ಬಹಳ ಅಪೂರ್ವ. ಬಹುಮಟ್ಟಿನ ಶಾಸನಗಳು ದೇವಸ್ಥಾನಕ್ಕೆ ಧೂಪ ದೀಪ ಮುಂತಾದುವುಗಳಿಗಾಗಿ ಕೊಟ್ಟ ದಾನಗಳ ಸಾಲಲ್ಲಿ ವಿದ್ಯೆಗೋಸ್ಕರ ಕೊಟ್ಟ ದಾನವನ್ನೂ ಹೇಳುತ್ತವೆ. ಬಾಗಲಕೋಟೆ ತಾಲ್ಲೂಕಿನ ಶಿರೂರಿನ ಶಾಸನದಲ್ಲಿ ಈ ರೀತಿ ಇದೆ: "ಧೂಪ ದೀಪ ಗಂಧ ನೈವೇದ್ಯಾಗೀತ ನೃತ್ಯೋಪಹಾರ ಖಂಡಸ್ಫುಟಿತಜೀರ್ಣೋದ್ಧಾರಾದಿ ಯತೀನಾಂ ವಿದ್ಯಾರ್ಥಿನಾಂ ಚ ಸತ್ರ ನಿಮಿತ್ತಂ"[91]. ಇನ್ನೊಂದು ಶಾಸನದಲ್ಲಿ ಈ ರೀತಿ ಇದೆ–"ಇದು ವಿದ್ಯಾದಾನಂ, ದೇವಾರಂಗೆಯ್ವ ಬ್ರತಿಗಳುಣ್ಬಾನ್"[92]. ಇನ್ನೊಂದು ಶಾಸನದ[93] ದಾನದ ವಿವರಗಳು ಇಂತಿವೆ—

[88] EI. XV. p. 87, 1058 A.D.

[89] ಈ ಮಠವು ಯಾವ ದೇವಸ್ಥಾನಕ್ಕೂ ಸೇರಿದ್ದಲ್ಲ. ಇಲ್ಲಿ 'ಮಠ' ಎಂದರೆ 'ಪಾಠಶಾಲೆ' ಎಂದರ್ಥ. ಆದ್ದರಿಂದ ನ್ಯಾಯವಾಗಿ ಜಂಬೂರಿನ ಮಠವನ್ನು ಕುರಿತ ಸಂಗತಿಗಳು 'ಅಗ್ರಹಾರ' ಎಂಬ ಶೀರ್ಷಿಕೆಯ ಕೆಳಗೆ ಬರಬೇಕು.

[89.1] ಎಂದಿರು = "ಅಕ್ಕಿ, ತುಪ್ಪದಂತಹ ಆಹಾರ ಪದಾರ್ಥಗಳು (?)"—ಕನ್ನಡ ನಿಘಂಟು, ಸಂಪುಟ 1, ಪು. 1040.

[90] EC. VII. Sk. 74, 1010 A.D.

[91] BKI. I. i. 85, 1049 A.D.

[92] EC. III. Nj. 155, C. 970 A.D.

[93] EI. XV. p. 87, 1058 A.D.

| | | | |
|---|---|---|---|
| ದೇವರ ಧೂಪ ನಿವೇದ್ಯ ಇತ್ಯಾದಿಗಳಿಗೆ | .... | 150 | ಮತ್ತರು ಭೂಮಿ |
| ತಪೋಧನರ ಆಹಾರ ದಾನಕ್ಕೆ | .... | 300 | ,, |
| ತಪೋಧನರಿಗೆ ಪಾಠ ಹೇಳುವ ಭಟ್ಟರಿಗೆ[94] | .... | 30 | ,, |
| ಮಠದ ಮಾಣಿಯರಿಗೆ ಪಾಠ ಹೇಳುವ ಓಜರಿಗೆ[95] | .... | 8 | ,, |
| ಹೋಮವನ್ನು ಮಾಡುವ ಇಬ್ಬರು ಬ್ರಾಹ್ಮಣರಿಗೆ | .... | 8 | ,, |
| ಘಳಿಗೆಯ ಮಾಣಿಯರು ನಾಲ್ವರಿಗೆ | .... | 20 | ,, |

ಈ ಎಲ್ಲ ದಾನಶಾಸನಗಳನ್ನು ನೋಡಿದರೆ ತರಗತಿಗಳು ನಡೆಯುತ್ತಿದ್ದುದು ಬಹುಮಟ್ಟಿಗೆ ದೇವಸ್ಥಾನಗಳಲ್ಲೇ ಎಂದು ಕಾಣುತ್ತದೆ. ಈ ಶತಮಾನದ ಆರಂಭದವರೆಗೂ ದೇವಸ್ಥಾನಗಳಲ್ಲಿಯೇ ಪಾಠಪ್ರವಚನಗಳು ನಡೆಯುತ್ತಿದ್ದುವು ಎಂಬುದನ್ನು ಇಲ್ಲಿ ನೆನೆಯಬಹುದು.

ಇಲ್ಲಿ ಎರಡು ಪ್ರಸಿದ್ಧ 'ಮಠ'ಗಳ ಪರಿಚಯವನ್ನು ಮಾಡಿಕೊಡಬಹುದು. ಮೊದಲನೆಯದು ಈಗಿನ ಬಿಜಾಪುರ ಜಿಲ್ಲೆಯ ಸಾಲೊಟಗಿ[96]ಯಲ್ಲಿದ್ದ ವಿದ್ಯಾಶಾಲೆ. ಇಲ್ಲಿ ಹತ್ತನೇ ಶತಮಾನದಲ್ಲಿದ್ದ ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಕೃಷ್ಣನ ಪ್ರಧಾನಿಯೂ, ಮಂತ್ರಿಯೂ, ಸಂಧಿವಿಗ್ರಹಿಯೂ ಆಗಿದ್ದ ನಾರಾಯಣ ಎಂಬಾತನು ಒಂದು 'ಶಾಲೆ'ಯನ್ನು ಕಟ್ಟಿಸಿ ತ್ರಿಮೂರ್ತಿಗಳನ್ನು ಪ್ರತಿಷ್ಠಿಸುತ್ತಾನೆ. ಇಲ್ಲಿಯ ಸಂಸ್ಕೃತ ಶಾಲೆಯಲ್ಲಿ ಅಧ್ಯಯನಮಾಡಲು ದೇಶದ ಎಲ್ಲೆಡೆಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು (''ಅತ್ರ ವಿದ್ಯಾರ್ಥಿನಃ ಸಂತಿ ನಾನಾಜನಪದೋದ್ಭವಾಃ"). ಅಲ್ಲಿ ಅಧ್ಯಯನಮಾಡುವ ವಿದ್ಯಾರ್ಥಿಗಳ ವಾಸಕ್ಕೆ ಇಪ್ಪತ್ತೇಳು ವಾಸಗೃಹಗಳಿದ್ದುವು. ಅಲ್ಲಿ ದೀಪಗಳನ್ನುರಿಸಲು ಹನ್ನೆರಡು ನಿವರ್ತನಗಳಷ್ಟು (ಸುಮಾರು ಅರವತ್ತು ಎಕರೆ?) ಭೂಮಿಯನ್ನು ಬಿಟ್ಟುಕೊಟ್ಟಿದ್ದರು. ಈ ಶಾಲೆಯ ವಿಷಯದಲ್ಲಿ ಊರಿನ ಜನರು ಅಪಾರವಾದ ಆಸಕ್ತಿಯನ್ನು ವಹಿಸಿದ್ದರು. ವಿವಾಹದ ಸಮಯದಲ್ಲಿ ಐದು ನಾಣ್ಯಗಳನ್ನೂ, ಉಪನಯನದ ಸಮಯದಲ್ಲಿ ಅದರಲ್ಲಿ ಅರ್ಧದಷ್ಟನ್ನೂ ($=2\frac{1}{2}$ ನಾಣ್ಯ) ಚೂಡಾಕರ್ಮದ ಸಮಯದಲ್ಲಿ ಅದರಲ್ಲಿ ಅರ್ಧದಷ್ಟನ್ನೂ ($=1\frac{1}{4}$ ನಾಣ್ಯ) ಶಾಲೆಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕೊಡಲು ಊರಿನ ಜನರು ಒಪ್ಪಿಕೊಂಡಿದ್ದರು. ಊರಿನ ಬ್ರಾಹ್ಮಣರಿಗೆ ಭೋಜನವನ್ನು ಕೊಟ್ಟಾಗ ಶಾಲೆಯ ಉಪಾಧ್ಯಾಯರನ್ನೂ, ವಿದ್ಯಾರ್ಥಿಗಳನ್ನೂ ಯಥಾಶಕ್ತಿ ಆಹ್ವಾನಿಸಬೇಕಾಗಿತ್ತು. ಆ ಶಾಲೆಯ ವ್ಯಾಖ್ಯಾತೃವಿಗೆ ಐವತ್ತು ನಿವರ್ತನಗಳಷ್ಟು ಭೂಮಿಯನ್ನೂ ಒಂದು ಮನೆಯನ್ನೂ ಕೊಟ್ಟ ವಿಷಯವು ಶಾಸನದಲ್ಲಿ ಬಂದಿದೆ.[97] ಆದರೆ ಉಳಿದ ಉಪಾಧ್ಯಾಯರ ಸಂಭಾವನೆ, ಶಾಲೆಯಲ್ಲಿ ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ಸಂಖ್ಯೆ, ಪಠ್ಯ ವಿಷಯಗಳು–ಇತ್ಯಾದಿ ಅಂಶಗಳ ವಿಷಯದಲ್ಲಿ ಶಾಸನವು ಏನನ್ನೂ ಹೇಳುವುದಿಲ್ಲ. 'ಬಹುಶಃ ಅದೊಂದು ವೈದಿಕ ಪಾಠಶಾಲೆ' ಎನ್ನುತ್ತಾರೆ ಡಾ|| ಅಲ್ಟೇಕರ್ ಅವರು.[98] ಈ ಶಾಲೆಯ ಕಟ್ಟಡವು ಮುಂದಿನ ಶತಮಾನದಲ್ಲಿ ಕುಸಿದು ಬಿದ್ದಾಗ ಕುಂಚಿಗ ಎಂಬಾತನು ಮತ್ತೆ ಅದನ್ನು ಕಟ್ಟಿಸುತ್ತಾನೆ. ಅದರ ಕಂಬಗಳನ್ನು

---

[94-95] ಇಲ್ಲಿ ಭಟ್ಟ ಎಂದರೆ ಪ್ರೌಢರಿಗೆ ಪಾಠ ಹೇಳುವ ವಿದ್ವಾಂಸ ಎಂದೂ, ಉಪಾಧ್ಯಾಯ (> ಓಜ) ಎಂದರೆ ಚಿಕ್ಕ ಮಕ್ಕಳಿಗೆ ಪಾಠ ಹೇಳುವವನು ಎಂದೂ ಅರ್ಥಮಾಡಬಹುದೆ? (ಮುಂದೆ ನೋಡಿ-'ಭಟ್ಟವೃತ್ತಿ').

[96] ಈ ಊರಿನ ನಿಜವಾದ ಹೆಸರು 'ಪಾವಿಟ್ಟಗೆ'. ಅಲ್ಲಿಯ ಶಾಲೆಯಿಂದಾಗಿ ಅದರ ಹೆಸರು 'ಶಾಲಾ-ಪಾವಿಟ್ಟಗೆ' ಯಾಗಿ, ಇದೇ ಮುಂದೆ 'ಸಾಲೊಟಗಿ' ಎಂದಾಯಿತು.

[97] EI. IV. p. 60.

[98] Education in Ancient India, p. 284.

ಕೆಲಸಗಾರರು ಎತ್ತಿ ನಿಲ್ಲಿಸುವಾಗ, ಧರ್ಮವನ್ನು ಎತ್ತಿ ನಿಲ್ಲಿಸುವಂತೆ ಕುಂಚಿಗನೇ ಕೈಯಾರ ಒಂದೆರಡು ಕಂಬಗಳನ್ನು ಎತ್ತಿ ನಿಲ್ಲಿಸಿದನು ಎಂದು ಇನ್ನೊಂದು ಶಾಸನವು ಹೇಳುತ್ತದೆ.[99]

ಸಾಲೊಟಗಿಯಲ್ಲಿದ್ದ ಶಾಲೆಯನ್ನು 'ಮಠ'ವೆಂದೂ ಕರೆದಿಲ್ಲ. ಅಲ್ಲಿನ ತ್ರಿಮೂರ್ತಿಗಳ ದೇವಸ್ಥಾನದಲ್ಲಿ ಮುನಿಗಳೂ ಇದ್ದಿಲ್ಲ. ಆದ್ದರಿಂದ ಅದನ್ನು 'ಮಠ'ನೆಂದು ಕರೆಯುವುದು ಕಷ್ಟವೇ.[100] ಅದಕ್ಕಿಂತ ಪ್ರಸಿದ್ಧವಾದ ವಿದ್ಯಾಕೇಂದ್ರವೆಂದರೆ ಬಳ್ಳಿಗಾವೆಯ ಕೇದಾರೇಶ್ವರಮಠ ಅಥವಾ ಕೋಡಿಯಮಠ.[101] ಈ ಮಠವು ಹನ್ನೊಂದನೇ ಶತಮಾನದ ಉತ್ತರಾರ್ಧದಲ್ಲಿ ಅಸ್ತಿತ್ವಕ್ಕೆ ಬಂದಂತೆ ಕಾಣುತ್ತದೆ. ಅದಕ್ಕೆ ಮುನ್ನ ಬಳ್ಳಿಗಾವೆಯಲ್ಲಿ ಕೊನೆಯ ಪಕ್ಷ ಐದು ಮಠಗಳಿದ್ದುವು. ಕ್ರಿ. ಶ. 1054ರ ಶಾಸನವೊಂದರಲ್ಲಿ ಪಂಚಮಠ, ಹಿರಿಯಮಠ, ಭೇರುಂಡೇಶ್ವರ ಮಠ, ಪಂಚಲಿಂಗಮಠ, ತ್ರಿಪುರಾಂತಕಮಠಗಳೆಂಬ ಐದು ಮಠಗಳ ಹೆಸರಿವೆ.[102] ಆದರೆ ಕೇದಾರೇಶ್ವರಮಠದ ಹೆಸರಿಲ್ಲದಿರುವುದು ಗಮನಾರ್ಹ. ಮುಂದಿನ ಶಾಸನಗಳಲ್ಲಿ[103] ಆ ಮಠಗಳ ಸಾಲಲ್ಲಿ ಕೋಡಿಯಮಠವನ್ನೂ ಹೇಳುವುದರಿಂದ ಕ್ರಿ.ಶ. 1054ರ ಹೊತ್ತಿಗೆ ಇನ್ನೂ ಕೇದಾರೇಶ್ವರ ಮಠವು ಪ್ರಾರಂಭವಾಗಿರಲಿಲ್ಲ ಎಂದು ಹೇಳಬಹುದು. ಕೇದಾರೇಶ್ವರ ದೇವಸ್ಥಾನದ ಹೆಸರಿರುವ ಅತ್ಯಂತ ಪ್ರಾಚೀನ ಶಾಸನವು ನಮಗೆ ತಿಳಿದಮಟ್ಟಿಗೆ ಕ್ರಿ. ಶ. 1094 ರ ಶಾಸನ.[104] ಆದ್ದರಿಂದ ಆ ಮಠವು ಕ್ರಿ. ಶ. 1094ಕ್ಕಿಂತ ಹಿಂದಿನದು, ಕ್ರಿ. ಶ. 1054 ಕ್ಕಿಂತ ಈಚಿನದು. ಕ್ರಿ. ಶ. 1094 ರ ಶಾಸನದಲ್ಲಿ ದಾನವನ್ನು ಸ್ವೀಕರಿಸಿರುವ ಸೋಮೇಶ್ವರ ಪಂಡಿತದೇವನ ಗುರುಪರಂಪರೆ ಈ ರೀತಿ ಇದೆ—

ಕೇದಾರಶಕ್ತಿ ಮುನಿಪತಿ
|
ಶ್ರೀಕಂಠಪತಿ
|
ಸೋಮೇಶ್ವರ ಪಂಡಿತ.

ಕೇದಾರಶಕ್ತಿ ಮುನಿಪತಿಯು ಸೋಮೇಶ್ವರ ಪಂಡಿತನಿಗಿಂತ ಮೂವತ್ತು ಅಥವಾ ಮೂವತ್ತೈದು ವರ್ಷ ಹಿಂದಿನವನೆಂದಿಟ್ಟುಕೊಂಡರೆ ಸು. 1060ರಲ್ಲಿ ಕೇದಾರೇಶ್ವರ ಮಠವು ಸ್ಥಾಪಿತವಾಗಿರಬೇಕು.[105] ಈ ಮಠವನ್ನು ಕೋಡಿಯಮಠವೆಂದು ಮೊದಲು ಕರೆದ ಶಾಸನ ಬಹುಶಃ ಕ್ರಿ. ಶ. 1139ರ ಶಾಸನ.[106] ಈ ಹೆಸರು ಜನತೆಯು ತಮ್ಮ ಸೌಕರ್ಯಕ್ಕಾಗಿ ಇಟ್ಟದ್ದು ಎಂಬುದನ್ನು ಮತ್ತೆ ಹೇಳಬೇಕಾಗಿಲ್ಲ.

---

99 EI. IV. p. 63.

100 ಅಮರಕೋಶದ ಪ್ರಕಾರ ಅದು ಮಠವೇ.—'ಮಠಶ್ಛಾತ್ರಾದಿನಿಲಯಂ'

101 ಕೇದಾರಶಕ್ತಿ ಎಂಬ ಕಾಳಾಮುಖಗುರುವಿನಿಂದ ಆರಂಭವಾದ ಗುರುಪರಂಪರೆಯವರು ಆ ದೇವಸ್ಥಾನದ ಸ್ಥಾನಪತಿಗಳಾದ್ದರಿಂದ ಆ ಮಠಕ್ಕೆ 'ಕೇದಾರೇಶ್ವರ ಮಠ' ಎಂಬ ಹೆಸರು ಬಂದಿರುವಂತೆ ಕಾಣುತ್ತದೆ. ಕೇದಾರಶಕ್ತಿಯು ಇದ್ದಾಗಲೇ ಕೇದಾರೇಶ್ವರ ದೇವಸ್ಥಾನವನ್ನು ಕಟ್ಟಿಸಿದಂತೆ ಕಾಣುತ್ತದೆ. ಮುಂದೆ ಅದಕ್ಕೆ 'ದಕ್ಷಿಣ ಕೇದಾರ' ಎಂಬ ಹೆಸರು ಬಂದಿತು. ಆ ಮಠದ ಸಮೀಪದಲ್ಲಿ ಕೆರೆಯ ಕೋಡಿಯೊಂದು ಇದ್ದದ್ದರಿಂದ 'ಕೋಡಿಯ ಮಠ' ಎಂದೂ ಅದನ್ನು ಕರೆಯುತ್ತಿದ್ದರು.

102 EC. VII. SK. 118, 1054 A.D.

103 EC. VII. SK. 123, 1159 A.D.

104 EC. VII. SK. 94, 1094 A.D.

105 ಡಾ॥ ಎ. ವೆಂಕಟಸುಬ್ಬಯ್ಯನವರು ಸು. 1073 ರಲ್ಲಿ ಕೇದಾರೇಶ್ವರ ಮಠವು ಆರಂಭವಾಗಿರಬೇಕು ಎಂದು ಭಾವಿಸುತ್ತಾರೆ. (A Twelftb Century University in Mysore, p. 28). ಕಾಲವನ್ನು ಅದಕ್ಕಿಂತ ಸ್ವಲ್ಪ ಹಿಂದಕ್ಕೊಯ್ಯಬಹುದು ಎಂದು ನಮಗನ್ನಿಸುತ್ತದೆ.

106 EC. VII. SK. 112, 1139 A.D.

ಆ ಮಠದ ಮೂಲಸ್ಥಾಪಕನಾದ ಕೇದಾರೇಶ್ವರನು ಬಹುಶಃ ಶ್ರೀಶೈಲದಿಂದ ಬಂದು ಬಳ್ಳಿಗಾವೆಯಲ್ಲಿ ನೆಲಸಿರಬೇಕು. ಅವನನ್ನು 'ಪರ್ವತಾವಳಿಯೊಳ್ಮೂವರ ಕೋಣೆಯ ಸಂತತಿಗಾಭರಣಂ'[107] ಎಂದು ಕರೆದಿರುವುದು ಮೇಲಿನ ಊಹೆಗೆ ಆಧಾರ. ಅವನ ಶಿಷ್ಯ ಶ್ರೀಕಂಠಪಂಡಿತನು ಲಕುಲೀಶನಂತೆ ಸರ್ವಜ್ಞಕಲ್ಪನಾಗಿದ್ದನು.[108] ಅವನ ಶಿಷ್ಯ ಸೋಮೇಶ್ವರನು ಕೇದಾರೇಶ್ವರ ದೇವಸ್ಥಾನದ ಯಶಸ್ಸಿಗೆ ಬಹು ಕಾರಣನಾದನು. ಆ ಮಠದ ಆರಂಭದ ಶಾಸನಗಳೆಲ್ಲವೂ ಈ ಸೋಮೇಶ್ವರನು ಸ್ವೀಕರಿಸಿದ ದತ್ತಿಗಳೇ ಆಗಿವೆ. ಇವನನ್ನು 'ವಿದ್ಯಾಬ್ಧಿ', ಎಂದರೆ ವಿದ್ಯಾಸಾಗರ ಎಂದು ಶಾಸನವೊಂದು ಕರೆಯುತ್ತದೆ. ಇವನ ವಿದ್ವತ್ತಿನ ಜೊತೆಗೆ ದೇವನದಿಯ ಪ್ರವಾಹವನ್ನು ಹೋಲುವ ಉಪನ್ಯಾಸದ ವಾಗ್ವೈಖರಿಯನ್ನು ಶಾಸನವೊಂದು ಎತ್ತಿ ಆಡುತ್ತದೆ. ಅವನ ಮಂತ್ರಪ್ರಭಾವದಿಂದ ಕೇದಾರೇಶ್ವರನ ಶಿಷ್ಯಸಮೂಹವು ವರ್ಧಿಸಿತು ಎಂದು ಅದೇ ಶಾಸನವು ಹೇಳುತ್ತದೆ.[109] ಕೇದಾರಸ್ಥಾನಲಕ್ಷ್ಮಿ ಎಂಬ ಕಲ್ಪವಲ್ಲಿಯನ್ನು ಹುಟ್ಟಿಹಾಕಿದವನೇ ಸೋಮೇಶ್ವರ ಎಂದು ಮತ್ತೊಂದು ಶಾಸನವು ಸ್ಪಷ್ಟೋಕ್ತಿಗಳಿಂದ ಹೇಳುತ್ತದೆ.[110]

ಸೋಮೇಶ್ವರನ ಬಳಿಕ ಅವನ ತಮ್ಮ ವಿದ್ಯಾಭರಣನು ಸ್ವಲ್ಪಕಾಲ ಸ್ಥಾನಪತಿಯಾದನು. ವಿದ್ಯಾಭರಣ ಎಂಬುದು ಅವನಿಗೆ ಅನ್ವರ್ಥನಾಮವಾಗಿ ಪರಿಣಮಿಸಿತು. ವಿದ್ಯಾವ್ಯಾಸಂಗದಲ್ಲಿ ಆಸಕ್ತನಾದ ಅವನಿಗೆ ಮಠದ ವ್ಯಾಸಂಗವು ಹಿಡಿಸದಿದ್ದುದರಿಂದ ತನ್ನ ಹಿರಿಯ ಶಿಷ್ಯ ಮೊದಲನೆಯ ವಾಮಶಕ್ತಿಯ ಮೇಲೆ ಮಠದ ಆಡಳಿತವನ್ನು ಹೊರಿಸಿ ನಿಶ್ಚಿಂತನಾಗುತ್ತಾನೆ.[111] ಅದೇ ಶಾಸನದಲ್ಲಿ ಮತ್ತೊಂದೆಡೆ ವಿದ್ಯಾಭರಣನು ಮಠಾಧಿಪತ್ಯವು ತನ್ನ 'ವಿದ್ಯಾ ವಿವಿಧ ವಿನೋದ ಯೋಗ ಸೌಖ್ಯಸ್ಥಿತಿ'ಗೆ ಭಂಗವನ್ನು ತರುವುದೆಂದು ತನ್ನ ಹಿರಿಯ ಶಿಷ್ಯ ಗೌತಮಮುನಿಗೆ ಅದರ ಹೊರೆಯನ್ನು ಹೊರಿಸಿದನು ಎಂದು ಬಂದಿದೆ. ಆ ಶಾಸದ ಹೊತ್ತಿಗೆ ವಾಮಶಕ್ತಿಯು ಎಲ್ಲಿಗೋ ಹೋದದ್ದರಿಂದಲೋ ಅಥವಾ ಮಡಿದದ್ದರಿಂದಲೋ[112] ವಿದ್ಯಾಭರಣನು

---

[107] EC. VII. Sk. 94, 1094 A.D.

[108] ಅದೇ.

[109] EC. VII. Sk. 98, 1103 A.D.

[110] EC. VII. Sk. 100, 1129 A.D.

[111] EC. VII. Sk. 100, 1129 A.D.

[112] ಕೇದಾರದೇವರ ಪಾದಾರಾಧಕನಾದ ವಾಮಶಕ್ತಿದೇವನನ್ನು ಸೆರೆಹಿಡಿದಾಗ ಬಾಚೆಯನಾಯಕನೆಂಬಾತನು ಕಾದಿ ಸ್ವರ್ಗಸ್ಥನಾದಂತೆ ಶಾಸನವೊಂದು ತಿಳಿಸುತ್ತದೆ (EC. VII. Sk. 139). ಏಕೆ ಸೆರೆಹಿಡಿದರು, ಅನಂತರ ಏನಾಯಿತು ಎಂಬ ಪ್ರಶ್ನೆಗಳಿಗೆ ಉತ್ತರ ಸಿಕ್ಕುವುದಿಲ್ಲ. ಬಹುಶಃ ಯಾವುದೋ ಅಪ್ರಿಯ ವ್ಯವಹಾರಕ್ಕೆ ವಾಮಶಕ್ತಿಮುನಿ ಕೈಹಾಕಿರಬೇಕು. ಈ ವಾಮಶಕ್ತಿ ಬಹುಶಃ ಮೊದಲನೆಯ ವಾಮಶಕ್ತಿ. ಅವನನ್ನು ಸೆರೆಹಿಡಿದು ಹೊರಹಾಕಿದರೋ, ಅವನೇ ಬಳ್ಳಿಗಾವೆಯನ್ನು ಬಿಟ್ಟುಹೋದನೋ ತಿಳಿಯದು. ಅವನ ಹೆಸರನ್ನು ಎತ್ತುವುದು ಅವಮಾನವೆಂದು ಮುಂದಿನ ಕೆಲವು ಶಾಸನಗಳು ಭಾವಿಸುವಂತೆ ಕಾಣುತ್ತದೆ.

ಈ ವಾಮಶಕ್ತಿ ಬಹುಶಃ ಎರಡನೆಯ ವಾಮಶಕ್ತಿಯೆಂದೂ, ಬಿಜ್ಜಳ ಕಸಪಯ್ಯರನ್ನು ಕೆಳಗಿಳಿಸಲು ಪ್ರಯತ್ನಿಸಿದ ಬಿಜ್ಜಳ ವಿರೋಧಿಗಳು (ವೀರಶೈವರು) ಅವನನ್ನು ಬಂಧಿಸಲು ಪ್ರಯತ್ನಿಸಿರಬಹುದೆಂದೂ ಒಂದು ಊಹೆ ಮಾಡಿದ್ದಾರೆ ದೇವರ ಕೊಂಡಾರೆಡ್ಡಿಯವರು ('ಬಳ್ಳಿಗಾವೆಯ ಕೋಡಿಮಠ', ಸಾಧನೆ, 2.2. ಪು. 81). ಅವರು ಆ ಶಾಸನದ ಕಾಲ ಸು. 1160 ಎಂಬುದನ್ನು ಬಲವಾಗಿ ನಂಬಿದ್ದಾರೆ. ಆದರೆ ಶಾಸನದ ಕಾಲ 'ಸುಮಾರು' 1160 ಎಂಬುದನ್ನು ಗಮನಿಸಬೇಕು. ಪ್ರಭಾವಶಾಲಿಯಾಗಿ ಮಠದ ಆಗುಹೋಗುಗಳನ್ನು ನೋಡಿಕೊಂಡಿದ್ದ ಇಮ್ಮಡಿ ವಾಮಶಕ್ತಿ ರಾಜಕೀಯದಲ್ಲಿ ಭಾಗವಹಿಸಿದ್ದನೆನ್ನಲು ಆಧಾರಗಳಿಲ್ಲ. ಆದರೆ, ವಿದ್ಯಾಭರಣ ಮೊದಲು ವಾಮಶಕ್ತಿಗೆ ಮಠಾಧಿಪತ್ಯ ಕೊಟ್ಟು, ನಂತರ ಇನ್ನೊಬ್ಬ ಶಿಷ್ಯ ಗೌತಮುನಿಗೆ ಬಿಟ್ಟುಕೊಟ್ಟದ್ದನ್ನು ನೋಡಿದರೆ, ಮೊದಲ ವಾಮಶಕ್ತಿ ಯಾವುದೋ ಕಾರಣದಿಂದ ಗುರುವಿನ ವಿಶ್ವಾಸ ಕಳೆದುಕೊಂಡಿರಬಹುದು—ಅವನನ್ನು ಸೆರೆಹಿಡಿಯಲು ಯಾವುದೋ ಸನ್ನಿವೇಶ ಬಂದಿರಬೇಕು. ಇದನ್ನು ನೋಡಿದರೆ, ಇವನು ಮೊದಲನೆಯ ವಾಮಶಕ್ತಿಯಿರಬೇಕು ಎಂಬ ಊಹೆಯೇ

ಗೌತಮಮುನಿಗೆ ಆಡಳಿತವನ್ನು ವಹಿಸಿಕೊಟ್ಟಿರಬೇಕು ಎಂದು ಡಾ || ಎ. ವೆಂಕಟಸುಬ್ಬಯ್ಯನವರು ಊಹಿಸುತ್ತಾರೆ.[113] ಕೇದಾರೇಶ್ವರ ಲಕ್ಷ್ಮಿ ಎಂಬ ಕಲ್ಪವಲ್ಲಿಯನ್ನು ಹುಟ್ಟುಹಾಕಿದವನು ಸೋಮೇಶ್ವರ, ಅದು ಶಾಖೆಗಳಾಗಿ ಒಡೆದು ಚಿಗುರು ಹೂಗಳನ್ನು ಬಿಟ್ಟದ್ದು (ಮೊದಲನೆಯ) ವಾಮಶಕ್ತಿಯ ಕಾಲದಲ್ಲಿ, ಹಣ್ಣುಗಳನ್ನು ಬಿಟ್ಟದ್ದು ಗೌತಮನ ಕಾಲದಲ್ಲಿ ಎಂದು ಒಂದು ಶಾಸನ ಹೇಳುತ್ತದೆ[114] (ಮೊದಲನೆಯ ವಾಮಶಕ್ತಿ ಮತ್ತು ಗೌತಮರಿಬ್ಬರೂ ವಿದ್ಯಾಭರಣನ ಶಿಷ್ಯರಾಗಿದ್ದಂತೆ ಊಹಿಸಬಹುದು. ವಾಮಶಕ್ತಿಯ ಸಾವಿನ ತರುವಾಯ ಗೌತಮನೇ ವಿದ್ಯಾಭರಣನ 'ಅಗ್ರಶಿಷ್ಯ'ನೆಂದು ಕರೆಯಿಸಿಕೊಂಡನೆಂದು ಕಾಣುತ್ತದೆ). ಗೌತಮನ ಶಿಷ್ಯ ಎರಡನೆಯ ವಾಮಶಕ್ತಿ. ಇವನೇ ಆ ಗುರುಪರಂಪರೆಯಲ್ಲಿ ಅತ್ಯಂತ ಪ್ರಸಿದ್ಧನಾದವನು. ಒಂದು ಶಾಸನದಲ್ಲಿ[115] ಗುರುಪರಂಪರೆಯನ್ನು ಹೇಳುವಾಗ ಮೊದಲನೆಯ ವಾಮಶಕ್ತಿಯ ಹೆಸರು ಹೇಳದೆ ಇರುವುದರಿಂದ ಅವನು ಬಹಳ ಕಾಲ ಸ್ಥಾನಪತಿಯಾಗಿರಲಿಲ್ಲವೆಂದು ಕಾಣುತ್ತದೆ. (ಎರಡನೆಯ) ವಾಮಶಕ್ತಿಯಿಂದ ಕೇದಾರಸ್ಥಾನದ ಹೆಸರು ಲೋಕವಿಖ್ಯಾತವಾಯಿತೆಂದು ಅದೇ ಶಾಸನವು ಹೇಳುತ್ತದೆ. ಇವನನ್ನು ರಾಜಗುರು ಎಂದು ಅನೇಕ ಶಾಸನಗಳು ಕರೆದಿವೆ.[116] ಈತನು ಅದ್ಭುತ ವಿದ್ವಾಂಸನಾಗಿದ್ದುದು ಮಾತ್ರವಲ್ಲದೆ, 'ವಿಶಿಷ್ಟ ನಾನಾ ಮಂತ್ರಸಾಧಕ'ನೂ ಆಗಿದ್ದನು.[117] ಈತನು ಅತ್ಯಂತ ಪ್ರಭಾವಶಾಲಿಯೂ, ಅತ್ಯಂತ ಮೇಧಾವಿಯೂ ಆಗಿದ್ದು ಬಹುಮುಖವಾದ ವ್ಯಕ್ತಿತ್ವವನ್ನು ಬೆಳೆಯಿಸಿಕೊಂಡಿದ್ದನು. ಇವನು ಏನಿಲ್ಲವೆಂದರೂ ನಲವತ್ತಾರು ವರ್ಷ ಸ್ಥಾನಪತಿಯಾಗಿದ್ದು ಕೇದಾರೇಶ್ವರ ಮಠವನ್ನು ಅದರ ಕೀರ್ತಿಯ ಶೃಂಗಕ್ಕೆ ಏರಿಸಿದನು. ಅವನ ಬಳಿಕ ಬಂದ ಸ್ಥಾನಪತಿಗಳು (ಜ್ಞಾನಶಕ್ತಿ→ಶ್ರೀಕಂಠಪಂಡಿತ→ಮೂರನೇ ವಾಮಶಕ್ತಿ) ದುರ್ಬಲರಾಗಿದ್ದರಿಂದಲೋ ಏನೋ, ಅವರೂ ಅಷ್ಟು ಪ್ರಸಿದ್ಧರಾಗಲಿಲ್ಲವಷ್ಟೇ ಅಲ್ಲ, ಕ್ರಿ. ಶ. 1211ರ ಬಳಿಕ ಮಠದ ಹೆಸರೂ ಮಾಯವಾಯಿತು.

ಕೇದಾರೇಶ್ವರ ಮಠದ ಗುರುಗಳೆಲ್ಲರೂ ಬಹುದೊಡ್ಡ ವಿದ್ವಾಂಸರಾಗಿದ್ದುದರಿಂದ ಆ ಮಠವು ಆ ಕಾಲಕ್ಕೆ ಅತ್ಯಂತ ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಆ ಮಠವು 'ಭವಾನೀ ಭವನದಂತೆ ಬ್ರಹ್ಮಚಾರಿ ಸದಾಚಾರ ಸಂಭಾವಿತಮುಂ ಕುರುಕ್ಷೇತ್ರದಂತೆ ಸರಸ್ವತೀ ವಿಳಸಿತಮುಂ ಖಚರ ಲೋಕದಂತೆ ವಿದ್ಯಾಧರಾಧೀಶ್ವರ ಪರಿವೃತ'ವೂ ಆಗಿತ್ತು ಎಂದು ಶಾಸನಗಳು ಬಣ್ಣಿಸುತ್ತವೆ. ಅಲ್ಲಿಯ ಗುರುಗಳ ಪಾಂಡಿತ್ಯ ಮತ್ತು ಪಾಠಕ್ರಮಗಳು ನಾನಾಭಾಗಗಳಿಂದ ವಿದ್ಯಾರ್ಥಿಗಳನ್ನು ಸೆಳೆಯುತ್ತಿದ್ದುವು. ಋಗ್ವೇದ ಯಜುರ್ವೇದ ಮುಂತಾದ ವೇದಗಳ, ಕೌಮಾರ ಪಾಣಿನೀಯ ಮುಂತಾದ ವ್ಯಾಕರಣಗಳ, ಷಡ್ದರ್ಶನಗಳ, ಲಾಕುಳ ಸಿದ್ಧಾಂತ, ಪಾತಂಜಳ ಯೋಗಶಾಸ್ತ್ರ ಮುಂತಾದ ಯೋಗಶಾಸ್ತ್ರಗಳ ಮತ್ತು ಪುರಾಣ, ಕಾವ್ಯ, ನಾಟಕ ಮುಂತಾದುವುಗಳ ಅಧ್ಯಯನವು ಅಲ್ಲಿ ನಡೆಯುತ್ತಿತ್ತು. ಅದು ದೇಶದ ಎಲ್ಲೆಡೆಗಳಿಂದ ಬಂದ ಸನ್ಯಾಸಿಗಳ, ಭಿಕ್ಷುಕರ, ರೋಗಿಗಳ, ಕಲಾವಿದರ ಆಶ್ರಯಸ್ಥಾನವಾಗಿತ್ತು.[118] ಅದರ

---

ಹೆಚ್ಚು ಪ್ರಬಲವಾದುದು ಎಂದು ಅನ್ನಿಸುತ್ತದೆ. ಶಾಸನದ ಕಾಲವನ್ನು 20-30 ವರ್ಷ ಹಿಂದಕ್ಕೆ ಹಾಕುವುದರಿಂದ ಯಾವ ತೊಂದರೆಯೂ ಇಲ್ಲ. ಅವನ ಹೆಸರನ್ನು ಮುಂದಿನ ಶಾಸನಗಳು ಕೆಲವು ಸಾರಿ ಕೈ ಬಿಡುವುದನ್ನು ಇಲ್ಲಿ ಗಮನಿಸಬೇಕು.

113 A Twelfth Century University in Mysore, p. 30

114 EC. VII. Sk. 100, 1129 A.D.

115 EC. VII. Sk. 104, 1156 A.D.

116 EC. VII. Sk. 92, 1168 A.D.; Sk. 105, 1192 A.D.

117 EC. VII. Sk. 105, 1192 A.D.

118 EC. VII. Sk. 102, 1162 A.D.

ಹತ್ತಿರ ಹರಿಯುತ್ತಿದ್ದ ನೀರು ಗಂಗಾಜಲಕ್ಕೆ ಸಮಾನವಾಯಿತು, ಶಿವಭವನವು ಕೇದಾರ ಪರ್ವತಕ್ಕೆ ಸಮಾನವಾಯಿತು, ಅಲ್ಲಿಯ ತಪೋಧನರು ಕೇದಾರದ ಮುನಿಗಳಿಗೆ ಸಮಾನರಾದರು.[119] ಅದು 'ದಕ್ಷಿಣ ಕೇದಾರ'ವೆಂದು ಪ್ರಸಿದ್ಧವಾಯಿತು.[120]

ಮಠಗಳು ಮಧ್ಯಯುಗದ ಯೂರೋಪಿನ ಕ್ರೈಸ್ತ ವಿಹಾರಗಳನ್ನು ಹೋಲುತ್ತವೆ ಎಂದು ಡಾ|| ಬಿ. ಪಿ. ಮಜುಂದಾರ್ ಅವರು ಅಭಿಪ್ರಾಯಪಡುತ್ತಾರೆ.[121] ಈ ಮಾತು ಕರ್ನಾಟಕದ ಮಠಗಳಿಗೂ ಬಹು ಮಟ್ಟಿಗೆ ಅನ್ವಯವಾಗುತ್ತದೆ.

## ಘಟಿಕಾಸ್ಥಾನ

ಅಗ್ರಹಾರ, ಬ್ರಹ್ಮಪುರಿ, ದೇವಸ್ಥಾನಗಳಂತೆ ಘಟಿಕಾಸ್ಥಾನಗಳೂ ವಿದ್ಯಾಕೇಂದ್ರಗಳಾಗಿರುವುವು. ಕರ್ನಾಟಕದ ಕುಂತಳ ದೇಶದಲ್ಲಿ (ಶಿವಮೊಗ್ಗ ಜಿಲ್ಲೆಯ ಉತ್ತರಭಾಗ) "ಧರ್ಮಕ್ಕೆ ನೆರ್ಮಮುಂ ಭೋಗಕ್ಕಾಗರಮುಮಾದ ಘಟಿಕಾಸ್ಥಾನ"ಗಳಿದ್ದಂತೆ ಶಾಸನವೊಂದು ತಿಳಿಸುತ್ತದೆ.[122] ಅಗ್ರಹಾರವಾದ ಹೂವಿನ ಬಾಗೆಯೊಂದು 'ಮಹಾಘಟಿಕಾಸ್ಥಾನ'ವಾಗಿತ್ತು.[123] ಗುಲ್ಬರ್ಗ ಜಿಲ್ಲೆಯ ನಾಗಾವಿಯೊಂದು ಘಟಿಕಾಸ್ಥಾನವಾಗಿದ್ದಿತು.[123.1] ಹೆಂಜೇರುವಿನಲ್ಲಿದ್ದ ನೊಳಂಬೇಶ್ವರ ದೇವಸ್ಥಾನವು ಆ ಪಟ್ಟಣದ ಘಟಿಕಾಸ್ಥಾನವಾಗಿದ್ದಿತೆಂದು ಶಾಸನವೊಂದು ತಿಳಿಸುತ್ತದೆ.[124] ಧಾರವಾಡ ಜಿಲ್ಲೆಯ ಹೊಟ್ಟೂರು ಹನ್ನೊಂದನೇ ಶತಮಾನದಲ್ಲಿ ಒಂದು ಘಟಿಕಾಸ್ಥಾನವಾಗಿತ್ತು.[125] 12ನೇ ಶತಮಾನದಲ್ಲಿ ಸಿಂದಗಿ ತಾಲೂಕಿನ ಕಡಲೆವಾಡದಲ್ಲಿ 'ಲೋಕವಿಖ್ಯಾತ'ವಾಗಿದ್ದ ಘಟಿಕಾಸ್ಥಾನವಿದ್ದ ಸ್ವಯಂಭೂ ದೇವಾಲಯವಿದ್ದಿತು (SII. XX. No. 154) ಕದಂಬರ ಮಯೂರಶರ್ಮನು 'ಪ್ರವಚನ'ದಲ್ಲಿ ಪಾರಂಗತನಾಗಬೇಕೆಂದು ತನ್ನ 'ಗುರು'* ವೀರ ಶರ್ಮನೊಡ

---

[119] EC. VII. Sk. 100, 1129 A.D.

[120] ಕೇದಾರೇಶ್ವರ ಮಠದ ಮೂಲಪ್ರವರ್ತಕನಾದ ಕೇದಾರಶಕ್ತಿಯಿಂದ ಆರಂಭವಾದ ಮಠೊಂದು ಗುರು ಪರಂಪರೆಯೂ ಇದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಕೇದಾರಶಕ್ತಿ→ರುದ್ರಾಭರಣ→ವಾಲ್ಮೀಕಿಮುನಿ (EC. VII. Sk. 107, C. 1078 A.D.) ಇವರದೇ ಪ್ರತ್ಯೇಕ ಸ್ಥಾನವಿತ್ತೇ, ಅಥವಾ ಇವರು ಕೇದಾರೇಶ್ವರ ದೇವಸ್ಥಾನದಲ್ಲೇ ಇದ್ದರೇ ಎಂಬುದು ಸ್ಪಷ್ಟವಾಗುವುದಿಲ್ಲ. ಕೇದಾರೇಶ್ವರದಲ್ಲಿ ಇದ್ದರೂ ರುದ್ರಾಭರಣನಾಗಲಿ ವಾಲ್ಮೀಕಿ ಮುನಿಯಾಗಲಿ ಅದರ ಸ್ಥಾನಪತಿಯಾಗಲಿಲ್ಲ.

[121] B. P. Majumdar : Socio-economic History of Northern India, p. 156.

[122] EC. VII. Sk. 197. C. 118. A.D.

[123] Inscriptions in Northern Karnatak and Kolhapur State, p. 16, 1127 A.D.

[123.1] ಶಾಸನಸಾಹಿತ್ಯ ಸಂಚಯ, ಪು. 43; KI. V. No. 25, 1139 A.D. ಚಾಮರಸನ ಪ್ರಭುಲಿಂಗಲೀಲೆಯ ಪ್ರಕಾರ (3.45) ಬನವಾಸಿಗೆ ಅಲ್ಲಿಯ ಮಧುಕೇಶ್ವರ ದೇವಾಲಯವು ಘಟಿಕಾಸ್ಥಾನವಾಗಿದ್ದಿತು. ("ಪುರಕೆ ಘಟಿಕಾಸ್ಥಾನವೆನಿಸುವ ಪರಮಸಿದ್ಧಿಯನೀವ ಮಧುಕೇಶ್ವರನ...").

[124] Mysore and Coorg from Inscriptions, p. 77.

[125] EI. XVI. p. 80, 1067 A.D.—"ಆ ನಾಡೊಳಖಿಳ ಘಟಿಕಾಸ್ಥಾನವಿದೆನಿಸಿತ್ತು ಪೊಟ್ಟಿಯೂರ್."

*ಇಲ್ಲಿಯ 'ಗುರು' ಎನ್ನುವ ಮಾತಿಗೆ ಉಪಾಧ್ಯಾಯ ಎನ್ನುವ ಸಾಮಾನ್ಯಾರ್ಥವೇ ಇಲ್ಲಿಯವರೆಗೆ ಗೃಹೀತವಾಗಿದ್ದಿತು. ಆದರೆ ಈಚೆಗೆ ಬನವಾಸಿ ಸಮೀಪದ ಗುದ್ನಾಪುರದಲ್ಲಿ ಕದಂಬ ರವಿವರ್ಮನ ಶಾಸನ ದೊರಕಿದ್ದು, ಅದರಲ್ಲಿ ವೀರಶರ್ಮ→ಬಂಧುಷೇಣ→ಮಯೂರ ಶರ್ಮ ಈ ರೀತಿಯ ವಂಶವೃಕ್ಷ ಬಂದಿರುವುದರಿಂದ, ವೀರಶರ್ಮನು ಮಯೂರ ಶರ್ಮನಿಗೆ ಅಜ್ಜನಾಗಿದ್ದನೆಂಬ ಸಂಗತಿ ಸ್ಪಷ್ಟವಾಗುತ್ತದೆ. (Gudnapur Inscription of Kadamba Ravivarman. Ed. B. R. Gopal. Śrīkanṭhikā, p. 64–5)

ಗೂಡಿ ಕಂಚಿಗೆ ಹೋಗಿ–ಅಲ್ಲಿಯ ಎಲ್ಲ ಘಟಿಕಾಸ್ಥಾನಗಳನ್ನೂ ಪ್ರವೇಶಿಸಿ ಆಶುತಾರ್ಕಿಕನಾದನೆಂದು ತಾಳಗುಂದ ಶಾಸನವು ತಿಳಿಸುತ್ತದೆ.[126] ("ನಿಖಿಲಘಟಿಕಾಂ ವಿವೇಶಾಶುತರ್ಕಕಃ".) ಇದರಿಂದ ಘಟಿಕಾಸ್ಥಾನಗಳು ವಿದ್ಯಾಕೇಂದ್ರಗಳು ಎಂಬುದು ಯಾರಿಗಾದರೂ ಹೊಳೆಯದಿರದು. ಆದರೆ ಅವು ಎಂತಹ ವಿದ್ಯಾಕೇಂದ್ರಗಳು? ಅಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸವು ಯಾವ ಮಟ್ಟದ್ದು? ಈ ವಿಷಯದಲ್ಲಿ ಸದ್ಯಕ್ಕೆ ಏನನ್ನೂ ಹೇಳಲು ಸಾಧ್ಯವಾಗಿಲ್ಲ. ಶ್ರೀ ಕೆ. ಬಿ. ಪಾಠಕರು ಘಟಿಕಾಸ್ಥಾನ ಎಂದರೆ 'ಧಾರ್ಮಿಕ ಕೇಂದ್ರ' ("Religious Centre") ಎಂದು ಅನುವಾದಿಸಿದ್ದಾರೆ.[127] ರೈಸ್ ಅವರು ಇವರನ್ನೇ ಅನುಸರಿಸಿದ್ದಾರೆ.[128] ಅದೇ ರೈಸ್ ಅವರು ಇನ್ನೊಂದು ಕಡೆ "ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರವಿರಬಹುದು" ಎಂದು ಘಟಿಕಾಸ್ಥಾನವನ್ನು ವಿವರಿಸುತ್ತಾರೆ.[129] ಕೀಲ್‌ಹಾರ್ನ್ ಅವರು ಅದು ಬ್ರಹ್ಮಪುರಿಯನ್ನು ಹೋಲುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.[130] ಪ್ರೊ॥ ಎಸ್. ವಿ. ವೆಂಕಟೇಶ್ವರ ಅವರು ಘಟಿಕಾಸ್ಥಾನವನ್ನು ಹೀಗೆ ವಿವರಿಸುತ್ತಾರೆ—"ಉಪಾಧ್ಯಾಯರೂ ವಿದ್ಯಾರ್ಥಿಗಳೂ ಕೂಡಿ ಚರ್ಚೆ ನಡೆಯಿಸುತ್ತಿದ್ದ ಮತ್ತು ಮಹಾ ವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮ ಜ್ಞಾನವನ್ನು ('ಪ್ರವಚನಂ ನಿಖಿಲಂ') ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠತಮ ಸಂಸ್ಥೆಯೇ ಘಟಿಕಾಸ್ಥಾನ. ಅಲ್ಲಿಯ ವಿದ್ಯಾಭ್ಯಾಸದಮಟ್ಟ ಎಷ್ಟು ದೊಡ್ಡದಾಗಿತ್ತೆಂದರೆ, ಅಧ್ಯಯನವನ್ನೆಲ್ಲ ಮುಗಿಸಿದ ವಿದ್ಯಾಂಸರು ಕೂಡ ವಿನಯದಿಂದ ಆ ಸಂಸ್ಥೆಯನ್ನು ಸಮೀಪಿಸಿ ಜ್ಞಾನದ ತುಣುಕುಗಳನ್ನು ಆರಿಸಿಕೊಳ್ಳಬೇಕಾಗಿತ್ತು (ತರ್ಕಕಾಃ)"[131]. ಡಾ॥ ಎ. ವೆಂಕಟ ಸುಬ್ಬಯ್ಯನವರು ಆ ಪದವನ್ನು ವಿವರಿಸಲು ಸದ್ಯದಲ್ಲಿ ಸಾಧ್ಯವಿಲ್ಲವೆಂದು ಹೇಳಿ ಘಟಿಕಾಸ್ಥಾನಗಳ ವಿವೇಚನೆಯನ್ನು ಕೈಬಿಟ್ಟಿದ್ದಾರೆ.[132] ಕಂಚಿಯ ವೈಕುಂಠ ಪೆರುಮಾಳ್ ದೇವಸ್ಥಾನದ ಗೋಡೆಯ ಮೇಲಿನ ಬರಹವೊಂದರಲ್ಲಿ[138] ಘಟಿಕಾ ಎಂದರೆ ಬ್ರಾಹ್ಮಣರ ನಿವಾಸಸ್ಥಾನವೆಂದು ಹೇಳಿ ತೊಡಕನ್ನು ಹೆಚ್ಚಿಸಿದೆ.[134]

ಕರ್ನಾಟಕದ ಘಟಿಕಾಸ್ಥಾನಗಳಲ್ಲೆಲ್ಲ ಅತ್ಯಂತ ಮುಖ್ಯವಾದುದು ಗುಲ್ಬರ್ಗ ಜಿಲ್ಲೆಯ ನಾಗಾವಿಯದು.[134.1] ಅಲ್ಲಿದ್ದ ತ್ರೈಪುರುಷ ದೇವಾಲಯದಲ್ಲಿ ಆ ಘಟಿಕಾಸ್ಥಾನವಿದ್ದಿತು. ಅಲ್ಲಿ ಆರು ಜನ ಉಪಾಧ್ಯಾಯರು, ಒಬ್ಬ 'ಸರಸ್ವತೀ ಭಂಡಾರಿ' (Librarian) ಮತ್ತು 250 ವಿದ್ಯಾರ್ಥಿಗಳು ಇದ್ದರು. ಉಪಾಧ್ಯಾಯರಲ್ಲಿ ಮೂವರು 'ವೇದಮನೋದಿಸು'ವವರು (ಪ್ರಾಯಶಃ ಋಗ್ವೇದ, ಯಜುರ್ವೇದ, ಸಾಮವೇದಗಳಿಗೆ ಒಬ್ಬೊಬ್ಬರು). ಇನ್ನೂ ಮೂವರಲ್ಲಿ ಒಬ್ಬೊಬ್ಬರು, 'ಭಟ್ಟದರ್ಶನ' (ಕುಮಾರಿಲಭಟ್ಟನದು), ನ್ಯಾಸ (ವ್ಯಾಕರಣಕ್ಕೆ ಸಂಬಂಧಿಸಿದ ವ್ಯಾಖ್ಯಾನ), ಮತ್ತು 'ಪ್ರಾಭಾಕರ' (ಪ್ರಭಾಕರ ಎಂಬ ಮೀಮಾಂಸಕನದು)–ಈ ಮೂರು ವಿಷಯಗಳಿಗೆ 'ವ್ಯಾಖ್ಯಾತೃ'ಗಳು. ವಿದ್ಯಾರ್ಥಿಗಳಲ್ಲಿ 200 ಜನ ವೇದಗಳನ್ನು, 50 ಜನ ಉಳಿದ ಮೂರು

[126] EC. VII. Sk. 176, C. 450 A.D.

[127] IA. XIV. p. 24.

[128] EC. VII. p. 113.

[129] Mysore and Coorg from Inscriptions, p. 77, 210.

[130] EC. VII. p. 8.

[131] Indian Culture through the Ages, I, pp. 243-4.

[132] A Twelfth Century University in Mysore, p. 6.

[133] S. Krishnaswamy Iyengar : Evolution of the Hindu Administrative Institutions in South India, p. 105.

[134] ಅನಂತನಾಥಪುರಾಣದಲ್ಲಿ (12.31) ಘಟಿಕಾಸ್ಥಾನವು ಒಂದು ರೀತಿಯ ದೇವಸ್ಥಾನ ಎಂಬರ್ಥ ಬರುವಂತೆ ಉಕ್ತವಾಗಿದೆ. "ಇವು ಘಟಿಕಾಸ್ಥಾನಂ ಮಾತ್ತಿವು ತೀರ್ಥಸ್ಥಾನಮೆಂಬ ರೂಢಿಯು ಭಗವತ್ಪ್ರವನಕ್ಕಲಂಘ್ಯಮಾಟಲುಂತವೆ ಮುಕ್ಕೊಡೆಯನೆತ್ತಿ ಬಿಟ್ಟನಾ ವಸುಷೇಣಂ ॥"

[134.1] Inscriptions of Andhra Pradesh, No. 2, 1058 A.D.

ವಿಷಯಗಳನ್ನು ಅಧ್ಯಯನಮಾಡುತ್ತಿದ್ದರು. ಶಾಲೆಯಲ್ಲಿ ಒಂದು 'ಸರಸ್ವತೀ ಭಂಡಾರ'ವೂ ಇದ್ದಿತೆಂದೂ, ಅದನ್ನು ನೋಡಿಕೊಳ್ಳಲು 'ಸರಸ್ವತೀ ಭಂಡಾರಿ' ಇದ್ದನೆಂದೂ ಶಾಸನ ತಿಳಿಸುತ್ತದೆ. ಅಲ್ಲಿ ಒಬ್ಬ "ಘಟಿಕಾ ಪ್ರಹಾರಿ" (announcer of time) ಇದ್ದನು. ಇದೊಂದು ಸುವ್ಯವಸ್ಥಿತವಾದ ಉನ್ನತ ವಿದ್ಯಾಕೇಂದ್ರವೆಂಬುದು ಇದರಿಂದ ಗೋಚರವಾಗುತ್ತದೆ.

ಮೇಲಿನ ವಿವರಣೆಗಳಿಂದ ಘಟಿಕಾಸ್ಥಾನವೆಂಬುದು ಇನ್ನೂ ತೊಡಕಿನ ಪ್ರಶ್ನೆಯಾಗಿಯೇ ಉಳಿದಿದೆ ಯೆಂಬುದು ಸ್ಪಷ್ಟವಾಗುತ್ತದೆ. ಪ್ರೊ|| ಎಸ್. ವಿ. ವೆಂಕಟೇಶ್ವರ ಅವರು ಗಮನಿಸಿರುವಂತೆ ಕದಂಬರ ಶಾಸನದಿಂದ ಘಟಿಕಾಸ್ಥಾನಗಳು ಉಚ್ಚವಿದ್ಯಾಭ್ಯಾಸದ ಕೇಂದ್ರವಾಗಿದ್ದವು ಎಂಬುದು ಸೂಚಿತವಾಗುತ್ತದೆ. ಅವು ಅಗ್ರಹಾರ ಗಳಲ್ಲಿಯೂ ದೇವಸ್ಥಾನಗಳಲ್ಲಿಯೂ ಇದ್ದುವು ಎಂಬುದೂ ಸ್ಪಷ್ಟ. ಮೇಲಿನ ವಿದ್ವಾಂಸರ ವಿವರಣೆಗಳಲ್ಲಿ ಪ್ರೊ|| ವೆಂಕಟೇಶ್ವರ ಅವರ ವಿವರಣೆ ಹೆಚ್ಚು ಸಾಧುವಾದುದು (ಆದರೆ ಅವರು 'ಆಶುತರ್ಕಕಾಃ' ಎಂಬುದನ್ನು 'ಆಶುತರ್ಕುಕಾಃ' ಎಂದು ಓದಿಕೊಂಡು ವಿವರಿಸಿರುವುದು ಎಷ್ಟು ಉಚಿತವೋ ತಿಳಿಯದು). ಅವರ ವಿವರಣೆಯನ್ನು ಪೋಷಿಸುವ ಒಂದು ಅಂಶವನ್ನು ಇಲ್ಲಿ ಸೂಚಿಸುತ್ತೇವೆ. ಕೆಲವು ವಿದ್ವಾಂಸರ ಹೆಸರುಗಳ ಹಿಂದೆ 'ಘಟಿಕಾ ಸಾಹಸಿ' ಎಂಬ ವಿಶೇಷಣವು ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ ಘಟಿಕಾ ಸಾಹಸಿಯಾಗಿದ್ದ ಮಾಧವಶರ್ಮನ ಹೆಸರು ಕ್ರಿ. ಶ. 713ರ ಶಾಸನದಲ್ಲಿದೆ.[135] 'ಘಟಿಕಾಸ್ಥಾನಗಳಲ್ಲಿ ಜ್ಞಾನದ ಸಾಹಸವನ್ನು ಪ್ರದರ್ಶಿಸಿದವನು' ಎಂದು ಆ ವಿಶೇಷಣಕ್ಕೆ ಅರ್ಥಮಾಡಬೇಕಾಗುತ್ತದೆ. ಎಂದರೆ ಘಟಿಕಾಸ್ಥಾನಗಳಲ್ಲಿ ವಿದ್ವಾಂಸರ ಚರ್ಚೆಗಳು, ವಾದವಿವಾದ ನಡೆಯುತ್ತಿದ್ದುವು. ವಿದ್ವಾಂಸರು ವಿದ್ವಾಂಸರನ್ನು ಶಾಸ್ತ್ರಾರ್ಥಕ್ಕೆ ಕರೆದಾಗ, ಆ ಶಾಸ್ತ್ರಾರ್ಥಗಳು ಘಟಿಕಾಸ್ಥಾನ ಗಳಲ್ಲಿ ನಡೆಯುತ್ತಿದ್ದಿರಬೇಕು (ಘಟಿಕವಾದಿ ವಿಷ್ಣುದೇವ ಎಂಬ ಹೆಸರನ್ನು ನೋಡಿ.[136] ಆ ಕಾಲದ ವಿದ್ವಾಂಸರ ವಿಶೇಷಣಗಳಲ್ಲಿ 'ಪರವಾದಿಭಯಂಕರ' ಇತ್ಯಾದಿಗಳು ಬಹು ಸಾಮಾನ್ಯ). ಘಟಿಕಾಸ್ಥಾನದಲ್ಲಿ ಮನ್ನಣೆ ಪಡೆದವನು ವಿದ್ವತ್ತಿನ ಶಿಖರವನ್ನು ಮುಟ್ಟಿದವನು ಎಂದು ಜನರು ಭಾವಿಸುತ್ತಿದ್ದಿರಬೇಕು. 'ಘಟಿಕಾಸಾಹಸಿ' ಎಂಬುದು ಮುಂದೆ 'ಘಳಿಸಾಸ' ಎಂದಾಗಿ 'ಘೈಸಾಸ' ಆಗಿ, 'ಘೈಸ' ಆಗಿರಬೇಕು. ಮಾಧವ ಘೈಸಾಸರು "ಘಟಿಸಾಸಿ" ಎಂದು ಪ್ರಖ್ಯಾತರಾಗಿದ್ದರೆಂಬ ಸಂಗತಿಯೂ (SII. XX. No. 119) ಈ ಊಹೆಯನ್ನು ಸಮರ್ಥಿಸುತ್ತದೆ. 'ಈಶ್ವರ ಘಳಿಸಾಸ' ಎಂಬುವನ ಹೆಸರು ಮನಗೋಲಿ ಶಾಸನದಲ್ಲಿದೆ.[137] ವಾಸುದೇವ ಘೈಸಾಸ ಎಂಬ ವಿದ್ವಾಂಸರು ಕುಕ್ಕನೂರು ಎಂಬ ಅಗ್ರಹಾರದಲ್ಲಿದ್ದಂತೆ ಶಾಸನವೊಂದು[138] ತಿಳಿಸುತ್ತದೆ. ಹರಿಹರನ ಬಸವರಾಜದೇವರ ರಗಳೆ ಯಲ್ಲಿ ವಾಸುದೇವ ಘೈಸರ, ಕೇಶವ ಘೈಸರ ಹೆಸರಿದೆ.[139]

ಈ ವಿದ್ಯಾಕೇಂದ್ರಗಳಿಗೆ 'ಘಟಿಕಾಸ್ಥಾನ'ಗಳೆಂಬ ಹೆಸರು ಏಕೆ ಬಂದಿರಬಹುದೆಂಬುದನ್ನು ಕೇವಲ ಊಹೆ ಯಿಂದ ನಿರ್ಧರಿಸಬೇಕಾಗಿದೆ. 'ಘಟಿಕಾ' ಎಂಬ ಪದಕ್ಕೆ ಮಣ್ಣಿನ ಪಾತ್ರೆ, ಕಾಲವನ್ನು ಅಳೆಯಲು ಉಪಯೋಗಿ ಸುತ್ತಿದ್ದ ಮಣ್ಣಿನ ಪಾತ್ರೆ ಎಂಬ ಅರ್ಥಗಳಲ್ಲದೆ ಇನ್ನಾವ ಅರ್ಥವೂ ಸಂಸ್ಕೃತದಲ್ಲಿಲ್ಲ. (ಇಪ್ಪತ್ತನಾಲ್ಕು ನಿಮಿಷಗಳ ಕಾಲದ ಅವಧಿಗೂ 'ಘಟಿಕಾ' ಎಂದೇ ಹೆಸರು). ಹಿಂದಿನ ಕಾಲದಲ್ಲಿ ಕಾಲವನ್ನು ನಿರ್ಧರಿಸಲು ರಂಧ್ರವಿರುವ

---

135 EC. III. Md. 113, 713 A.D. 'ಘಟಿಕಾಸಾಮಂತ' ಎಂದು ಒಂದು ಕಡೆ ಬರುತ್ತದೆ. (MAR. 1935. p. 117, C. 951). ಹೀಗೆಂದರೇನೋ ತಿಳಿಯದು.

136 EC. VII. Sk. 235, 1207 A.D.

137 Altekar : The Rāṣṭrakūṭas and their Times, p. 281.

138 SII. IX. i. 162, 1093 A.D.

139 ಬಸವರಾಜದೇವರ ರಗಳೆ (ಸಂ. ಟಿ. ಎಸ್. ವೆಂಕಣ್ಣಯ್ಯ), ಪು. 67.

ಮಣ್ಣಿನ ಪಾತ್ರೆಯಲ್ಲಿ ನೀರನ್ನೋ ಮರಳನ್ನೋ ತುಂಬಿಡುತ್ತಿದ್ದರು ಎಂಬುದು ಪ್ರಸಿದ್ಧ ವಿಷಯವಾಗಿದೆ.[140] ಇಂತಹ ಕಾಲಮಾಪನ ಯಂತ್ರಗಳು ಪ್ರಾಚೀನ ಕರ್ನಾಟಕದ ದೇವಸ್ಥಾನಗಳಲ್ಲಿ ಮಠಗಳಲ್ಲಿ ಇದ್ದುವೆಂಬುದಕ್ಕೆ ಶಾಸನಾಧಾರಗಳಿವೆ. ಕಾಡಿಯೂರೆಂಬ ಅಗ್ರಹಾರದಲ್ಲಿ ದೇವಸ್ಥಾನವೂ, 'ಘಳಿಗೆ'ಯೂ, ಸತ್ರವೂ, ಪ್ರಪೆಯೂ ಇದ್ದುವೆಂದು ಶಾಸನವೊಂದು ತಿಳಿಸುತ್ತದೆ.[141] ಬಹುಶಃ 'ಘಳಿಗೆ' (<ಸಂ. ಘಟಿಕಾ)ಗಳನ್ನು ದೇವಸ್ಥಾನಗಳಂತಹ ಸಾರ್ವಜನಿಕ ಸ್ಥಳಗಳಲ್ಲಿ ಇಡುತ್ತಿದ್ದರು. ಅವುಗಳನ್ನು ನೋಡಿಕೊಳ್ಳಲು ಬಹುಶಃ ಆ ದೇವಸ್ಥಾನಗಳಲ್ಲಿಯೇ ಅಭ್ಯಾಸ ಮಾಡುತ್ತಿದ್ದ ವಿದ್ಯಾರ್ಥಿಗಳನ್ನು ನೇಮಿಸಿ ಅವರಿಗೂ ದತ್ತಿಗಳನ್ನು ಕೊಡುತ್ತಿದ್ದರು. ಉದಾಹರಣೆಗೆ, ವಿದ್ಯಾದಾನವು ನಡೆಯುತ್ತಿದ್ದ ಮೋರಿಂಗೆರೆಯ ಮಠದಲ್ಲಿ ನಾಲ್ವರು 'ಘಳಿಗೆಯ ಮಾಣಿ'ಗಳಿಗೆ ಎಂಟು ಮತ್ತರು ಭೂಮಿಯನ್ನು ಬಿಟ್ಟುಕೊಟ್ಟಂತೆ ಶಾಸನವೊಂದು ತಿಳಿಸುತ್ತದೆ.[142] ಗೊಜ್ಜಿದೇವ ಎಂಬಾತನು ರೇವದಾಸ ವೀಸೋತ್ತರ ದೀಕ್ಷಿತ ಎಂಬ ವೈದಿಕನಿಗೆ ದಂಡನಾಥ ಪದವಿಯ ಜೊತೆಯಲ್ಲಿ ಗುಡಿ, ಶಂಖ, ಚಾಮರ, ಬೆಳ್ಗೊಡೆ ಮುಂತಾದುವುಗಳಲ್ಲದೆ 'ಘಳಿಗೆ'ಯನ್ನೂ ಕೊಟ್ಟಂತೆ ಶಾಸನವೊಂದು ಹೇಳುತ್ತದೆ.[143] ಕೇಶವದಂಡನಾಯಕನು ವೇದಾಧ್ಯಯನ ಮುಂತಾದುವಕ್ಕೆ ದತ್ತಿಯನ್ನು ಬಿಟ್ಟುಕೊಟ್ಟಂತೆ, "ಘಳಿಯಾರ"ಕ್ಕೂ (ಹೋಲಿಸಿ : ಹೊಸಗನ್ನಡ, ಗಡಿಯಾರ) ದತ್ತಿಯನ್ನು ಕೊಟ್ಟಂತೆ ಶಾಸನವೊಂದು ಹೇಳುತ್ತದೆ.[144] ಸೌಂದರನಂಬಿಯ ವಿವಾಹದ ಸಮಯದಲ್ಲಿ ಮದುವೆಯ ಮಂಟಪವನ್ನು ಹೊಕ್ಕ ವೃದ್ಧ ಬ್ರಾಹ್ಮಣವೇಷಧಾರಿ ಶಿವನು "ಘಳಿಗೆ ವಟ್ಟಲ" (=ಘಳಿಗೆಯ ಬಟ್ಟಲು) ಮೇಲೆ ಬಿದ್ದಂತೆಯೂ, "ಆ ಘಳಿಗೆವಟ್ಟಲು" ಮುರಿದು ಅಲ್ಲಿದ್ದ ಅಕ್ಕಿಯೆಲ್ಲ ಚೆಲ್ಲಿ ಜೋಯಿಸರೆಲ್ಲ ಕೆದರಿಹೋದಂತೆಯೂ ಹರಿಹರ ಚಿತ್ರಿಸುತ್ತಾನೆ.[145] ಆ "ಘಳಿಗೆವಟ್ಟಲ"ಸುತ್ತಮುತ್ತ "ನಕ್ಷತ್ರಪಾಠಕ"ರಿದ್ದರೆಂದೂ ಅಲ್ಲಿ ಬರುತ್ತದೆ.[146] ಈ ಘಳಿಗೆ ಬಟ್ಟಲುಗಳು ವೈದಿಕ ಬ್ರಾಹ್ಮಣರಿಗೆ, ವಿದ್ಯಾಕೇಂದ್ರಗಳಾಗಿದ್ದ ದೇವಸ್ಥಾನಗಳಿಗೆ ಮತ್ತು ಜ್ಯೋತಿಷ್ಕರಿಗೆ ಬೇಕಾಗಿದ್ದ ಅತ್ಯಾವಶ್ಯಕ ವಸ್ತುಗಳಾಗಿದ್ದುವು. ಈ ಘಟಿಕಾಯಂತ್ರಗಳು ಇದ್ದುದರಿಂದ "ಘಟಿಕಾಸ್ಥಾನ"ಗಳೆಂದು ಹೆಸರು ಬಂದಿರಬಹುದೆ? ಘಟಿಕಾಸ್ಥಾನಗಳು ವಿದ್ವತ್ತಿನ ಅತ್ಯುನ್ನತ ಕೇಂದ್ರಗಳಾಗಿದ್ದುದರಿಂದ ಮೊದಮೊದಲು ಘಟಿಕಾಯಂತ್ರಗಳನ್ನು ಅಲ್ಲಿ ಸ್ಥಾಪಿಸಿದರು. ಮುಂದೆ ಅವು ಹೆಚ್ಚು ಪ್ರಚಾರಕ್ಕೆ ಬಂದಂತೆ ಬೇರೆಡೆಗಳಲ್ಲಿಯೂ

---

[140] ಘಟಿಕಾ ಜಲಧಾರೇವ ಗಲತ್ಯಾಯುಃ ಸ್ಥಿತಿರ್ದ್ರುತಂ ।
ಶರೀರಮಿದಮತ್ಯಂತ ಪೂತಿ ಗಂಧ ಜುಗುಪ್ಸಿತಂ ॥

(ಪೂರ್ವಪುರಾಣ, ಸಂಧಿ 17, ಪದ್ಯ 16.)

("ಗಳಿಗೆ ಬಟ್ಟಲಲ್ಲಿ ಹಾಕಿದ ಜಲಧಾರೆಯಂತೆ ಆಯುಷ್ಯಸ್ಥಿತಿಯು ಶೀಘ್ರವಾಗಿ ಕಳೆದುಹೋಗುತ್ತದೆ. ಈ ಶರೀರವು ಅತ್ಯಂತ ದುರ್ಗಂಧದಿಂದ ನಿಂದ್ಯವಾದುದು.")

ಸೌಂದರ ನಂಬಿ ಮತ್ತು ಪರವೆನಾಚಿಯರ ವಿವಾಹದ ಸಂದರ್ಭದಲ್ಲಿ ಚಂದನ ರಸವನ್ನು ತುಂಬಿದ್ದ ಕಮಲಪತ್ರದ ಘಳಿಗೆವಟ್ಟಲ ಮುಂದೆ ವಸಂತನು ಕುಳಿತಿದ್ದನು ಎಂದು ಹರಿಹರ ತನ್ನ ನಂಬಿಯಣ್ಣನ ರಗಳೆಯಲ್ಲಿ ವರ್ಣಿಸುತ್ತಾನೆ (ಪು. 74.)

ಸೋಮರಾಜನ ಉದ್ಭಟ ಕಾವ್ಯದಲ್ಲಿ ಇನ್ನೊಂದು ರೀತಿಯ ಗಳಿಗೆ ಬಟ್ಟಲಿನ ವರ್ಣನೆಯಿದೆ. ಆ ಗಳಿಗೆ ಬಟ್ಟಲು ಒಂದು ನಿರ್ದಿಷ್ಟ ಕಾಲದನಂತರ ಬರಿದಾಗುವುದಿಲ್ಲ, ನೀರಿನಲ್ಲಿ ಮುಳುಗಿಹೋಗುತ್ತದೆ—"ಗಳಿಗೆವಟ್ಟಲನಿಕ್ಕಿದ ಬಟ್ಟಲ್ಪೆದೆ ಕಾಲಂಬಡೆದೆಂದು ನೀರೊಳಿರದಾಟ್ವಿವೊಲ್..." (ಕರ್ನಾಟಕ ಕವಿಚರಿತೆ, I, 1961, ಪು. 397). ಇಂತಹ ಬಟ್ಟಲನ್ನು ತಾವು ನೋಡಿರುವುದಾಗಿ ಬನವಾಸಿಯ ವೈದಿಕರೊಬ್ಬರು ತಿಳಿಸುತ್ತಾರೆ.

[141] EI. XIII. p. 329, 927 A D.

[142] SII. IX. i. 101, 1045 A.D.

[143] EI. XIII. p. 329, 929 A.D.

[144] EC. VII. Sk. 185, 1158 A.D.

[145] ನಂಬಿಯಣ್ಣನ ರಗಳೆ (ಸಂ. ತೀ. ನಂ. ಶ್ರೀಕಂಠಯ್ಯ), ಪು. 37.

[146] ಅದೇ, ಪು. 36. 'ನಕ್ಷತ್ರಪಾಠಕ' ಎಂದರೆ 'ನಕ್ಷತ್ರಗಳನ್ನು ಓದುವವನು, ಜೋಯಿಸ' ಎಂದರ್ಥ. ಅದೇ ರಗಳೆಯಲ್ಲಿ ನಕ್ಷತ್ರಪಾಠಕನ ವರ್ಣನೆಯಿದೆ (ಪು. 25). ಅವನು ಮದುವೆಗೆ ಮುನ್ನ ಲಗ್ನಗಳನ್ನು ಕಟ್ಟಿಕೊಡುವವನು.

ಸ್ಥಾಪಿಸಿದರು ಎಂದು ಊಹಿಸಬಹುದೆ? 'ಶಾಸ್ತ್ರಾರ್ಥ'ದ ಸಮಯದಲ್ಲಿ ವಾದಿ ಪ್ರತಿವಾದಿಗಳಿಗೆ ಕಾಲದ ಮಿತಿಯನ್ನು ಹಾಕಲು ಘಟಿಕಾಯಂತ್ರಗಳ ಆವಶ್ಯಕತೆಯಿದ್ದಿತು ಎಂದು ಭಾವಿಸಬಹುದೆ? ಇವು ಕೆಲವಾರು ವಿಚಾರಮಾಡ ಬೇಕಾದ ಊಹೆಗಳು. ಮತ್ತು ಕೇವಲ ಊಹೆಗಳು.

ಯಾವ ಸಂಸ್ಕೃತ ಕೋಶದಲ್ಲಿಯೂ ಘಟಿಕಾಸ್ಥಾನದ ಹೆಸರಿಲ್ಲ. ನಾಂದೇಡ್ ಜಿಲ್ಲೆಯ (ಈಗಿನ ಮಹಾರಾಷ್ಟ್ರ) ಯೆರಗಿ ಗ್ರಾಮದ ಶಾಸನದಲ್ಲಿ "ಸಾ[ಲೊಯ]ಘಟಿ" ಎಂಬ ರೂಪವುಂಟು.[146.1] ಇದು "ಶಾಲೆಯ ಘಟಿ" ಎಂಬುದರ ಇನ್ನೊಂದು ರೂಪವೇ ಆಗಿದೆ. ತಮಿಳು ಕೋಶದಲ್ಲಿ ಕಟಿಕೈ ('ಕಡಿಗೈ' ಎಂಬುದು ಉಚ್ಚಾರಣೆ) ಎಂಬುದನ್ನು ಸಂಸ್ಕೃತದ ಘಟಿಕಾ ಎಂಬುದಕ್ಕೆ ಸಮಾನವೆಂದು ಹೇಳಿ ಇಪ್ಪತ್ತನಾಲ್ಕು ನಿಮಿಷಗಳ ಕಾಲ, ಮಂಗಳ ಮುಹೂರ್ತಗಳನ್ನು ನಿಶ್ಚಿತಪಡಿಸುವ ಜೋಯಿಸ ಇತ್ಯಾದಿ ಅರ್ಥಗಳನ್ನು ಹೇಳಿದ್ದಾರೆ. 'ಕಟಿಕೈ' ಎಂದರೆ ಊರಿನ ಸಭೆ ('Village assembly') ಎಂಬ ಅರ್ಥವನ್ನೂ ಕೊಟ್ಟಿದ್ದಾರೆ.[147] ಕೊನೆಯ ಅರ್ಥ ಗಮನಾರ್ಹವಾದುದು. ಮದ್ರಾಸ್ ಪ್ರಾಂತದ ಶೊಲಿಂಗೂರನ್ನು 'ಕಟಿಕೈ' ಎಂದು ಹಿಂದೆ ಕರೆಯುತ್ತಿದ್ದರೆಂದು ಅದೇ ಕೋಶವು ಹೇಳುತ್ತದೆ.[148] ಬಹುಶಃ ಅದೊಂದು ಘಟಿಕಾಸ್ಥಾನವಾಗಿದ್ದಿರಬೇಕು. ಆಧುನಿಕ ಕಾಲದಲ್ಲಿ ವಿಶ್ವವಿದ್ಯಾನಿಲಯಗಳ ಪದವೀದಾನ ಸಮಾರಂಭಗಳನ್ನು (Convocations) 'ಘಟಿಕೋತ್ಸವ'ಗಳೆಂದು ಕರೆಯುತ್ತಾರೆ. ಘಟಿಕಾಸ್ಥಾನಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಕರ್ನಾಟಕದ ವಿದ್ವಾಂಸರೊಬ್ಬರು (ಶ್ರೀ ತಿ. ತಾ. ಶರ್ಮ ಅವರು) 'ಘಟಿಕೋತ್ಸವ' ಎಂಬ ಉಕ್ತಿಯನ್ನು ಪ್ರಚಾರಕ್ಕೆ ತಂದಂತೆ ವಿಶ್ವಸನೀಯವಾಗಿ ತಿಳಿದುಬಂದಿದೆ.

## ಪ್ರಾಥಮಿಕ ವಿದ್ಯಾಭ್ಯಾಸ

ಪ್ರಾಥಮಿಕ ವಿದ್ಯಾಭ್ಯಾಸದ ವಿವರಗಳನ್ನು ಶಾಸನಗಳು ಅಷ್ಟಾಗಿ ಒದಗಿಸುವುದಿಲ್ಲ. ಬಾಲಕರು ಬಹುಶಃ ತಮ್ಮ ಐದನೇ ವಯಸ್ಸಿನಲ್ಲಿ ವಿದ್ಯಾಭ್ಯಾಸವನ್ನು ಆರಂಭಿಸುತ್ತಿದ್ದರೆಂದು ಕಾಣುತ್ತದೆ.[149] ವಿದ್ಯಾರಂಭ ಸಂಸ್ಕಾರ ಅಥವಾ ಅಕ್ಷರ ಸ್ವೀಕರಣ ಎಂಬ ವಿಧಿಯನ್ನು ಸ್ಮೃತಿಗಳು ಹೇಳುತ್ತವೆ. ಅದರ ಹೆಸರೇ ಹೇಳುವಂತೆ ಆರಂಭದಲ್ಲಿ ಬಾಲಕನಿಗೆ ಅಕ್ಷರಾಭ್ಯಾಸವನ್ನು ಮಾಡಿಸುತ್ತಿದ್ದರು. ಒಳ್ಳೆಯ ಮುಹೂರ್ತದಲ್ಲಿ ಬಾಲಕನಿಂದ "ಓಂ ನಮಃ ಸಿದ್ಧಂ" ಎಂದು ಹೇಳಿಸಿ ಅಕ್ಷರಾಭ್ಯಾಸಕ್ಕೆ ತೊಡಗಿಸುತ್ತಿದ್ದರು[150](ಈ ಅಭ್ಯಾಸ ಈಗಲೂ ಇದೆ). ಆದರೆ ವಿದ್ಯಾರ್ಥಿಯ ನಿಜವಾದ ವಿದ್ಯಾಭ್ಯಾಸವು ಆರಂಭವಾಗುತ್ತಿದ್ದುದು ಅವನ ಉಪನಯನದ ತರುವಾಯವೇ. ಉಪನಯನ ಎಂದರೆ (ಗುರುವಿನ) ಹತ್ತಿರಕ್ಕೆ ಕರೆದುಕೊಂಡು ಹೋಗುವುದು ಎಂದರ್ಥ. ಶರದ್ವತನು ಕೃಪನಿಗೆ ಚೌಲೋಪನಯನಾದಿಕ್ರಿಯೆಗಳನ್ನು ಮಾಡಿ

---

146.1 Inscriptions from Nanded District, p. 59. ನಾಂದೇಡ್ ಜಿಲ್ಲೆ ಈಗ ಮಹಾರಾಷ್ಟ್ರದಲ್ಲಿದ್ದರೂ, ಅದನ್ನು ಇಬ್ಭಾಗ ಮಾಡಿ ಹರಿಯುವ ಗೋದಾವರೀ ನದಿಯಿಂದ ದಕ್ಷಿಣಕ್ಕೆ ಬೀದರ್ ಜಿಲ್ಲೆಯವರೆಗೆ ಬರೀ ಕನ್ನಡ ಶಾಸನಗಳೇ ದೊರಕುವುದರಿಂದ ಆ ಭಾಗ ಒಂದು ಕಾಲಕ್ಕೆ ಅಚ್ಚಗನ್ನಡ ಪ್ರದೇಶವಾಗಿದ್ದಿತೆಂಬುದು ನಿಸ್ಸಂಶಯವಾದ ಸಂಗತಿ.

147 Tamil Lexicon, ii.

148 ಅದೇ.

149 ಇತ್ಸಿಂಗನ ಪ್ರಕಾರ ವಿದ್ಯಾಭ್ಯಾಸದ ಆರಂಭ ಆರನೆಯ ವಯಸ್ಸಿನಲ್ಲಿ. ಬಾಲಕರು ಕಲೆ ಮತ್ತು ಶಾಸ್ತ್ರಗಳನ್ನು ತಮ್ಮ ಏಳನೇ ವಯಸ್ಸಿನಲ್ಲಿ ಕಲಿಯಲಾರಂಭಿಸುತ್ತಿದ್ದರೆಂದು ಹ್ಯುಯೆನ್‌ತ್ಸಾಂಗನ ಹೇಳಿಕೆ (Indian Culture through the Ages, I, p. 185).

150 "ವಿಲಸದ್ವ್ಯಾಪರವಾರಯೋಗ ಗುಣಮುಂ ಸಲ್ಲಗ್ನಮುಂ ತಾರಕಾ ।
ಬಲಮುಂ ಕೂಡೆ ನವಗ್ರಹೋತ್ತಮ ಬಳಂ ಕೈಗಣ್ಮೆ ಧಾತ್ರೀಹಿತಂ ।
ಗಳನವ್ಯಾಕುಲ ಮೋಕ್ಷಸಾಧನೆಗಳಂ ಸಿದ್ಧಂ ನಮಾದ್ಯಕ್ಷರಂ ।
ಗಳನಿಷ್ಟಾರ್ಥಕರಂಗಳಂ ಸಕಲ ವಿದ್ಯಾಬೀಜಪುಂಜಂಗಳಂ ॥
ಮೊದಲ್ ತೊಡಗಿಸಿ..." (ಸುಕುಮಾರ ಚರಿತೆ, 2.57)

ಧನುರ್ವಿದ್ಯೆಯನ್ನು ಉಪದೇಶ ಮಾಡಿದಂತೆ ಪಂಪನು ವರ್ಣಿಸುತ್ತಾನೆ.[151] ವಿಷ್ಣುವರ್ಧನನು ಬಿಟ್ಟಿಯಣ್ಣ ಎಂಬ ಮಗುವನ್ನು ತಾನೇ ಸಾಕಿ ಉಪನಯನವನ್ನು ಮಾಡಿಸಿದ ಮೇಲೆ ಬಿಟ್ಟಿಯಣ್ಣನು ಏಳೆಂಟು ವರ್ಷಗಳಲ್ಲಿ ಸಮಸ್ತ ಶಸ್ತ್ರಶಾಸ್ತ್ರಪರಿಣತನಾದನೆಂದು ಶಾಸನವೊಂದು ತಿಳಿಸುತ್ತದೆ.[152] ಉಪನಯನ ಕರ್ಮವು ಕೆಲವು ಸ್ವಾರಸ್ಯವಾದ ಅಂಶಗಳನ್ನೊಳಗೊಂಡಿರುವುದರಿಂದ ಅದನ್ನು ಸಂಗ್ರಹವಾಗಿ ವಿವರಿಸಬಹುದು—"ಉಪನಯನದ ದಿನ ಪ್ರಾತಃಕಾಲ ವಿದ್ಯಾರ್ಥಿಯು ಸ್ನಾನಕ್ಕಿಂತ ಮೊದಲೇ ಊಟಮಾಡಬೇಕು. ಎಂದರೆ ಅಶಿಸ್ತಿನ ಅಭ್ಯಾಸಕ್ಕೆ ಅದೇ ಕೊನೆ. ಅದಾದ ಮೇಲೆ ಕ್ಷೌರ, ಸ್ನಾನ, ಕೌಪೀನಧಾರಣೆಗಳು ನಡೆಯುತ್ತಿದ್ದುವು. ಇವು ಹೊಸ ಜೀವನದ ಸಂಕೇತಗಳು. ಮೂರು ಹುರಿಗಳಿಂದ ಮಾಡಿದ ಮೇಖಲೆಯನ್ನು ಧರಿಸಬೇಕು (ಮೂರು ಹುರಿಗಳು ಮೂರು ವೇದಗಳನ್ನು ಸೂಚಿಸುತ್ತವೆ). ಮೇಲೊಂದು ಜಿಂಕೆಯ ಚರ್ಮವನ್ನು ಹೊದೆಯಬೇಕು (ಮುಂದೆ ಇದರ ಸ್ಥಾನದಲ್ಲಿ ಹತ್ತಿಯ ಬಟ್ಟೆ ಬಂದಿತು. ಅದಾದ ಬಳಿಕ ಹತ್ತಿಯ ಬಟ್ಟೆಯ ಸ್ಥಾನದಲ್ಲಿ ದಾರವು ಬಂದಿತು. ಆ ದಾರಕ್ಕೆ ಹಿಂದಿನ ಸಂಪ್ರದಾಯದ ಕುರುಹಾಗಿ ಜಿಂಕೆಯ ಚರ್ಮದ ಚೂರನ್ನು ಕಟ್ಟುತ್ತಾರೆ). ಅದಾದ ಮೇಲೆ ವಿದ್ಯಾರ್ಥಿಯು ಅಗ್ನಿಯಲ್ಲಿ ಒಂದು ಸಮಿತ್ತನ್ನು ಅರ್ಪಿಸಿ ಒಂದು ಕಲ್ಲಿನ ಮೇಲೆ ನಿಲ್ಲಬೇಕು. ಹೀಗೆ ನಿಲ್ಲುವುದು ಅವನ ದೃಢಸಂಕಲ್ಪದ ಸಂಕೇತ. ಇದಾದ ಮೇಲೆ ಗುರುವು ವಿದ್ಯಾರ್ಥಿಯ ಬಲಗೈ ಹಿಡಿದು ಶಿಷ್ಯನನ್ನಾಗಿ ಅಂಗೀಕರಿಸಬೇಕು. ಗುರುವು ಶಿಷ್ಯನ ಹೃದಯಭಾಗವನ್ನು ಮುಟ್ಟಿ ಹಿಡಿದು, ತನ್ನ ಹೃದಯಕ್ಕೂ ಅವನ ಹೃದಯಕ್ಕೂ ಸಾಮರಸ್ಯವಿರಲಿ ಎಂದು ಪ್ರಾರ್ಥಿಸಬೇಕು. ಗುರುವು ಶಿಷ್ಯನಿಗೆ ಕಲಿಸುತ್ತಿದ್ದ ಮೊದಲ ಮಂತ್ರವೆಂದರೆ ಸಾವಿತ್ರೀ ಮಂತ್ರ (ಛಂದಸ್ಸಿನ ದೃಷ್ಟಿಯಿಂದ ಅದನ್ನು ಗಾಯತ್ರೀ ಮಂತ್ರವೆಂದೂ ಕರೆಯುತ್ತಾರೆ). ಇವೆಲ್ಲಾ ಆದಮೇಲೆ ಶಿಷ್ಯನು ಕೈಯಲ್ಲೊಂದು ದಂಡವನ್ನು ಹಿಡಿದು ಭಿಕ್ಷಾಚರಣೆಯನ್ನು ಮಾಡಬೇಕು. ಜ್ಞಾನಕ್ಷೇತ್ರದಲ್ಲಿ ಅವನೊಬ್ಬ ಯಾತ್ರಿಕ ಎಂಬುದನ್ನು ದಂಡವು ಸೂಚಿಸುತ್ತದೆ."[153] ಉಪನಯನೋತ್ಸವದ ಸಮಯದಲ್ಲಿ ಗುರುವಿಗೆ ದಾನಗಳನ್ನು ಕೊಡುತ್ತಿದ್ದರು. ಚಾಳುಕ್ಯಚಕ್ರವರ್ತಿ ಸತ್ಯಾಶ್ರಯದೇವನು ವಿಕ್ರಮಾಂಕನ ಉಪನಯನದ ಸಮಯದಲ್ಲಿ ತನ್ನ ಕುಲಗುರು ವಿಷ್ಣುಭಟ್ಟನಿಗೆ ಮುತ್ತಗೆ ಎಂಬ ಊರನ್ನೇ ದಕ್ಷಿಣೆಯಾಗಿ ಕೊಟ್ಟಂತೆ ಶಾಸನವೊಂದು ತಿಳಿಸುತ್ತದೆ.[154]

ಬಾಲಕರಿಗೆ ಪಾಠವನ್ನು ಹೇಗೆ ಆರಂಭಿಸುತ್ತಿದ್ದರು, ಯಾವ ಪುಸ್ತಕದಿಂದ ಆರಂಭಿಸುತ್ತಿದ್ದರು ಎಂಬುದರ ಪರಿಚಯ ಶಾಸನಗಳಿಂದಾಗಲಿ ಕಾವ್ಯಗಳಿಂದಾಗಲಿ ನಮಗಾಗುವುದಿಲ್ಲ.[155] ದತ್ತಿಗಳನ್ನು ಕೊಟ್ಟಿರುವುದೆಲ್ಲ ಪ್ರೌಢ ವಿದ್ಯಾಭ್ಯಾಸಕ್ಕೆ. ಆದರೂ ಒಂದೆರಡು ಶಾಸನಗಳಲ್ಲಿ ದೊರಕುವ ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟ ವಿವರಗಳಿಂದ ನಾವು ತೃಪ್ತಿಪಟ್ಟುಕೊಳ್ಳಬೇಕಾಗಿದೆ. ತಾಳಗುಂದದ ಶಾಸನವೊಂದರಲ್ಲಿ ವೇದಾಧ್ಯಯನ ಮುಂತಾದುವುಗಳಿಗೆ ಕೊಟ್ಟ ದತ್ತಿಗಳ ಜೊತೆಯಲ್ಲಿ "ಕನ್ನಡಕ್ಷರ ಸಿ (ಶಿ)ಕ್ಷೆ"ಗೂ ದತ್ತಿಯನ್ನು ಬಿಟ್ಟುಕೊಟ್ಟಂತೆ ಹೇಳಿದೆ.

---

151 ಪಂಪಭಾರತ. 2.32, ವ.

152 EC. V. Bl. 17, 1136 A.D.

153 Altekar : Education in Ancient India, p. 17.
ಉಪನಯನ ಸಂಸ್ಕಾರದ ಈ ವಿಧಿಗಳೆಲ್ಲವೂ ಈಗಲೂ ಆಚರಣೆಯಲ್ಲಿವೆ.

154 EI. XV. p. 27, 1110 A.D.

155 ಇತ್ಸಿಂಗನು ತನ್ನ ಗ್ರಂಥದಲ್ಲಿ ಸಿ-ತನ್-ಚಂಗ್ (Si-t'an-Chang) ಎಂಬ ಗ್ರಂಥದ ಹೆಸರನ್ನು ಹೇಳಿ ವಿದ್ಯಾರಂಭದಲ್ಲಿ ಬಾಲಕರು ಅದನ್ನು ಕಲಿಯುವರೆಂದೂ, ಆರು ತಿಂಗಳಲ್ಲಿ ಅದನ್ನು ಮುಗಿಸುವರೆಂದೂ ಹೇಳುತ್ತಾನೆ. ಅದು ಮಾತೃಕಾವಿವೇಕ (ಅಥವಾ ಸಂಸ್ಕೃತ ಬಾಲಬೋಧೆ)ಯಾಗಿದ್ದಿರಬಹುದೆಂದು ಹಲವು ವಿದ್ವಾಂಸರು ಭಾವಿಸಿದ್ದರು. ಆದರೆ ಅದು ಪಾಣಿನಿಯ ವ್ಯಾಕರಣದ ಸಂಗ್ರಹರೂಪವಾದ ಕಾತಂತ್ರ ಅಥವಾ ಕೌಮಾರ ವ್ಯಾಕರಣವೆಂದು ಡಾ|| ಎ. ವೆಂಕಟಸುಬ್ಬಯ್ಯನವರು ಅಭಿಪ್ರಾಯಪಡುತ್ತಾರೆ.

("On the Grammatical work Si-t'an-Chang" -Journal of Oriental Research, Madras.-X. i. pp. 11-26).

ಬಹುಶಃ ಆ ಕಾಲದಲ್ಲಿ ಬಾಲಕರಿಗೆ ಮೊದಲು ಕನ್ನಡ ಅಕ್ಷರಗಳನ್ನು ಕಲಿಸುತ್ತಿದ್ದಂತೆ ಕಾಣುತ್ತದೆ. ಅದೇ ಶಾಸನದಲ್ಲಿ ಮತ್ತೊಂದೆಡೆ 'ಕನ್ನಡದುಪಾಧ್ಯ'ನಿಗೆ, 'ಬಾಲಶಿಕ್ಷೆಶಾಸ್ತ್ರ'ದವರಿಗೆ ದತ್ತಿಯನ್ನು ಬಿಟ್ಟುಕೊಟ್ಟ ವಿಷಯ ಬಂದಿದೆ.[156] ಇಲ್ಲಿ ಕನ್ನಡದ ಅಕ್ಷರಗಳನ್ನು ಹೇಳಿಕೊಡುತ್ತಿದ್ದ ಉಪಾಧ್ಯಾಯನನ್ನು ಕನ್ನಡದುಪಾಧ್ಯನೆಂದೂ, ಬಾಲಕರಿಗೆ ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುತ್ತಿದ್ದ ಉಪಾಧ್ಯಾಯನನ್ನು 'ಬಾಲಶಿಕ್ಷೆ ಶಾಸ್ತ್ರ' ದವನೆಂದೂ ಕರೆದಿದೆ. ನೋಡಿ: "ಋಗ್ವೇದದ ಬಾಲಶಿಕ್ಷೆಯ ಖಂಡಿಕದಲ್ಲಿ ಸ್ವಾಧ್ಯಾಯಂ ಗೆಯ್ವ ಮಾಣಿಯರ ಗ್ರಾಸಕ್ಕೆ"[157] ಕೆಲವು ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. 'ಭಟ್ಟವೃತ್ತಿ' (ಇದರ ವಿವರಣೆ ಮುಂದೆ ಬರುತ್ತದೆ) ಇದ್ದ ಹಾಗೆ 'ಚಟ್ಟವೃತ್ತಿ' (ಸಂ. ಛಾತ್ರವೃತ್ತಿ)ಗೂ, 'ಬಾಲಶಿಕ್ಷೆ'ಗೂ ದತ್ತಿಗಳನ್ನು ಬಿಟ್ಟುಕೊಟ್ಟಿರುವುದು ಕಂಡು ಬರುತ್ತದೆ.[158] ಇಲ್ಲೆಲ್ಲಾ ಬಾಲಶಿಕ್ಷೆ ಎಂದರೆ ಪ್ರಾಥಮಿಕ ವಿದ್ಯಾಭ್ಯಾಸ ಎಂದು ಅರ್ಥಮಾಡಬೇಕೆಂದು ಕಾಣುತ್ತದೆ. ಬಾಲ್ಯದಲ್ಲಿಯೇ ಋಗ್ವೇದದ ಮಂತ್ರಗಳನ್ನು ಬಾಯಿಪಾಠ ಮಾಡಿಸುವುದಕ್ಕೆ 'ಋಗ್ವೇದದ ಬಾಲಶಿಕ್ಷೆ' ಎಂದು ಕರೆದಿರುವಂತಿದೆ. ಸ್ಮೃತಿ ಚಂದ್ರಿಕೆಯು ಯಾವುದೋ ಸ್ಮೃತಿಯಿಂದ ಆರಿಸಿಕೊಟ್ಟಿರುವ ವಾಕ್ಯಗಳಲ್ಲಿ 'ಮಾತೃಕಾನ್ಯಾಸ' (=Primer) ದ ಹೆಸರಿದೆ.[159] ಕರ್ನಾಟಕದಲ್ಲಿ ಯಾವ 'ಮಾತೃಕಾನ್ಯಾಸ'ವನ್ನು ಬಳಸುತ್ತಿದ್ದರೋ ತಿಳಿಯದು.

## ಪ್ರೌಢ ವಿದ್ಯಾಭ್ಯಾಸ

ಭಟ್ಟವೃತ್ತಿ : ಪ್ರೌಢ ವಿದ್ಯಾರ್ಥಿಗಳಿಗೆ ವಿದ್ಯಾದಾನವನ್ನು ಮಾಡಲು ಅನೇಕ 'ಭಟ್ಟವೃತ್ತಿ'ಗಳನ್ನು ಬಿಟ್ಟುಕೊಟ್ಟ ವಿಷಯವನ್ನು ಶಾಸನಗಳು ತಿಳಿಸುತ್ತವೆ. ಕಾಡಿಯೂರಿನ ಮಹಾಜನರು ಭಟ್ಟವೃತ್ತಿಗೆ ದತ್ತಿಯನ್ನು ಕೊಟ್ಟ ವಿಷಯವು ಶಾಸನವೊಂದರಲ್ಲಿ ಬಂದಿದೆ.[160] ಮಹಾದೇವ ಚಮೂಪತಿಯು ಇಟ್ಟಗಿಯಲ್ಲಿ ಮಹಾದೇವನ ದೇವಾಲಯವನ್ನು ಮಾಡಿಸಿ, ಇತರ ದತ್ತಿಗಳೊಡನೆ 'ಭಟ್ಟವೃತ್ತಿ'ಗೂ ದತ್ತಿಯನ್ನು ಬಿಡುತ್ತಾನೆ.[161] ಆ 'ಭಟ್ಟವೃತ್ತಿ'ಯು ಋಗ್ವೇದ ಯಜುರ್ವೇದಗಳನ್ನು ಬೋಧಿಸುವ ಉಪಾಧ್ಯಾಯರಿಗೆ ಎಂಬುದು ಆ ಶಾಸನದಿಂದಲೇ ತಿಳಿದು ಬರುತ್ತದೆ. ಉತ್ತಮ ವಿದ್ವಾಂಸರು ಅತ್ಯುತ್ತಮ ರೀತಿಯಲ್ಲಿ ಬೋಧಿಸಲು ಅನುಕೂಲವಾಗುವುದಕ್ಕಾಗಿ ಅವರಿಗೆ ಭಟ್ಟವೃತ್ತಿಯನ್ನು ನಾಗವಿಷ್ಣುಮಯ್ಯ ಎಂಬಾತನು ರೋಣವೆಂಬ ಅಗ್ರಹಾರದಲ್ಲಿ ಬಿಟ್ಟುಕೊಡುತ್ತಾನೆ.[162] ಭಟ್ಟವೃತ್ತಿಯನ್ನು ಪ್ರೌಢರಾದ ವಿದ್ವಾಂಸರ ಜೀವನೋಪಾಯಕ್ಕಾಗಿ ಬಿಟ್ಟುಕೊಡುತ್ತಿದ್ದರು ಎಂಬುದು ಮೇಲಿನ ಶಾಸನದಿಂದ ಸೂಚಿತವಾಗುತ್ತದೆ. ಕಂಚಗಾರ ಬೆಳ್ಗಲಿ ಎಂಬ ಅಗ್ರಹಾರದಲ್ಲಿ ಕೊಟ್ಟ ದತ್ತಿಯೊಂದರಲ್ಲಿ 'ಭಟ್ಟಗೆಯಿ ಮತ್ತರು ಆರು' ಎಂದಿದೆ.[163] ಎಂದರೆ ಭಟ್ಟವೃತ್ತಿಯಾಗಿ ಆರು ಮತ್ತರು ಭೂಮಿಯನ್ನು ('ಕೆಯಿ') ಬಿಟ್ಟಿದೆ

156 EC. VII. Sk. 185, 1158 A.D.

157 BKI. I. ii. 173, 1124 A.D.

158 BKI. I. ii, 171, 1121 A.D.

159 B. P. Mazumdar : Socio-Economic History of Northern India, p. 149.

160 EI. XIII. p. 129, 929 A.D.

161 EI. XIII. p. 41, 1112 A.D.

162 BKI. I. ii. 159, 1111 A.D.

163 SII. IX. i. 74, 981 A.D. ಈ ಶಾಸನದಲ್ಲಿ 'ಪೆರ್ಗಡೆಗೆಯಿ' 'ಅಂಬಿಗಗೆಯಿ' ಮತ್ತು 'ತಳಾಱಗೆಯಿ'ಗಳ ಜೊತೆಯಲ್ಲಿ 'ಭಟ್ಟಗೆಯಿ' ಮತ್ತು 'ಚಟ್ಟಗೆಯಿ'ಗಳನ್ನು ಹೆಸರಿಸಿದೆ. ಊರಿನ ಹೆಗ್ಗಡೆ, ಅಂಬಿಗ, ತಳವಾರರಿಗೆ ಅವರ ವೃತ್ತಿಗಾಗಿ ಭೂಮಿಯನ್ನು ಬಿಟ್ಟುಕೊಟ್ಟಿರುವಂತೆ ಉಪಾಧ್ಯಾಯರಿಗೂ ಬಿಟ್ಟುಕೊಟ್ಟಿದೆ. ಈ ದತ್ತಿಗಳು ಬಹುಪೂರ್ವದಿಂದ ನಡೆದುಕೊಂಡು ಬಂದಿವೆ ಎಂದು ಶಾಸನವು ಹೇಳುತ್ತದೆ. "ಅಗ್ರಹಾರಂ ಕಂಚಿಗಾರ ಬೆಳ್ಗಲಿಯ ಪೂರ್ವದ ಸ್ಥಾನಮಾನಂ... ಭಟ್ಟಗೆಯಿ ಮತ್ತ 6 ಚಟ್ಟಗೆಯಿ ಮತ್ತ 6........" (ಮತ್ತ=ಮತ್ತರು)

164 BKI. I. ii. 171, 1121 A.D

ಎಂದರ್ಥ. ಭಟ್ಟವೃತ್ತಿ ಇದ್ದಹಾಗೆ ಚಟ್ಟವೃತ್ತಿ ("ಛಾತ್ರವೃತ್ತಿ") ಎಂಬ ಹೆಸರಿನ ದತ್ತಿಗಳ ಹೆಸರುಗಳು ಕಾಣಿಸಿಕೊಳ್ಳುತ್ತವೆ.[164] ಪ್ರೌಢ ಉಪಾಧ್ಯಾಯರ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಭಟ್ಟವೃತ್ತಿ ಎಂದು ಕರೆದರೆ, ಪ್ರೌಢ ವಿದ್ಯಾರ್ಥಿಗಳ ಜೀವನೋಪಾಯಕ್ಕಾಗಿ ಕೊಟ್ಟ ದಾನವನ್ನು ಚಟ್ಟವೃತ್ತಿ ಎಂದು ಕರೆದಿದ್ದಾರೆ. "ಚಟ್ಟಗೆಯಿ"[165] ಎಂದರೂ ಚಟ್ಟವೃತ್ತಿ ಎಂದೇ ಅರ್ಥ.

ಭಟ್ಟವೃತ್ತಿಗೆ ಸಂಬಂಧಿಸಿದಂತೆ ಹೆಚ್ಚು ವಿವರಗಳು ನಮಗೆ ಕನ್ನಡ ಶಾಸನಗಳಲ್ಲಿ ದೊರಕುವುದಿಲ್ಲ. ಆ ವೃತ್ತಿಯನ್ನು ಸ್ವೀಕರಿಸುವವನು ಬಹುದೊಡ್ಡ ವಿದ್ವಾಂಸನಾಗಿರಬೇಕಾಗಿತ್ತು ಎಂಬ ಒಂದು ಅಂಶ ಮಾತ್ರ ಕನ್ನಡ ಶಾಸನಗಳಿಂದ ಗೊತ್ತಾಗುತ್ತದೆ. ಉದಾಹರಣೆಗೆ 'ಭಟ್ಟವೃತ್ತಿ'ಯಲ್ಲಿ 'ನ್ಯಾಸ' ('ಕಾಶಿಕ' ಎಂಬ ಅಷ್ಟಾಧ್ಯಾಯೀ ವಾಖ್ಯಾನಕ್ಕೆ ಬರೆದ ವ್ಯಾಖ್ಯಾನ), ಪ್ರಾಭಾಕರ (ಪ್ರಭಾಕರನೆಂಬ ಮೀಮಾಂಸಕನ ಗ್ರಂಥ), ವೇದಾಂತ, ಋಗ್ವೇದ, ಪುರಾಣಗಳ ಅಧ್ಯಯನ, ಅಧ್ಯಾಪನಗಳು ಸೇರಿದ್ದಂತೆ ಒಂದು ಶಾಸನದಿಂದ ತಿಳಿಯಬಹುದು (SII. XX. No.300. 12ನೆ. ಶ.)ತಮಿಳುನಾಡಿನ ಚಿಂಗಲಪೇಟೆ ಜಿಲ್ಲೆಯ ಕ್ರಿ. ಶ. 999ರ ಶಾಸನವೊಂದರಲ್ಲಿ[166] ಭಟ್ಟವೃತ್ತಿಯನ್ನು ಸ್ವೀಕರಿಸುವವನ ಅರ್ಹತೆಗಳ ಪಟ್ಟಿಯನ್ನೇ ಕೊಡಲಾಗಿದೆ– (1) ಅವನು ಸಾಮವೇದಿಯ ಮಗನಾಗಿರಬೇಕು. (2) ಅದೇ ಊರಿನವನಾಗಿರಕೂಡದು ; ಬೇರೆ ಊರಿನಿಂದ ಬಂದು ನೆಲಸಿದವನಾಗಿರಬೇಕು. (3) ಎರಡು ವೇದಗಳನ್ನೂ ಸರಾಗವಾಗಿ ಬೋಧಿಸಲು ಶಕ್ತನಾಗಿರಬೇಕು. (4) ಅಷ್ಟಾಧ್ಯಾಯಿಯನ್ನೂ, ಅಲಂಕಾರಶಾಸ್ತ್ರವನ್ನೂ ಬೋಧಿಸಲು ಸಮರ್ಥನಿರಬೇಕು. (5) ಇಪ್ಪತ್ತುಅಧ್ಯಾಯಗಳ ಮೀಮಾಂಸ ಶಾಸ್ತ್ರವನ್ನು ಬೋಧಿಸುವ ಸಾಮರ್ಥ್ಯವಿರಬೇಕು. (6) ನಾಲ್ವರು ವಿದ್ಯಾರ್ಥಿಗಳನ್ನು ಆರಿಸಿಕೊಂಡು, ಅವರಿಗೆ ದಿನಕ್ಕೆ ಒಂದು ಹೊತ್ತು ಊಟವನ್ನು ಕೊಟ್ಟು ಮೇಲಿನ ವಿಷಯಗಳನ್ನು ಬೋಧಿಸಿ ಅವುಗಳಲ್ಲಿ ಪರಿಣತರನ್ನಾಗಿ ಮಾಡಿ ಕಳುಹಬೇಕು. ಸು. ಕ್ರಿ. ಶ. 1050ರ ಶಾಸನವೊಂದರಲ್ಲಿ ಭಟ್ಟವೃತ್ತಿಯನ್ನು ಸ್ವೀಕರಿಸುವವನು ವೇದ, ವ್ಯಾಕರಣ, ಮೀಮಾಂಸೆ, ಎರಡು ದರ್ಶನಗಳಲ್ಲಿ ಪರಿಣತನಾಗಿರಬೇಕೆಂದು ಹೇಳಿ ಅವನು ಆ ಊರಿನ ಮಠದಲ್ಲಿ ಕೊನೆಯಪಕ್ಷ ಮೂರು ವರ್ಷವಾದರೂ ಇದ್ದು ವಿದ್ಯಾದಾನವನ್ನು ಮಾಡಬೇಕೆಂದು ಹೇಳಿದೆ. ಅವನಿಗೆ ಆ ಊರಿನಲ್ಲಿ ಜಮೀನುಗಳಿರಕೂಡದು. ವಿದ್ಯಾದಾನಕ್ಕೆ ವಿದ್ಯಾರ್ಥಿಗಳನ್ನು ಆರಿಸಿಕೊಳ್ಳುವ ಮುನ್ನ ಅವರನ್ನು ಪರೀಕ್ಷಿಸಬೇಕು.[167] ಮೇಲಿನ ಎರಡು ಭಟ್ಟವೃತ್ತಿಗಳನ್ನೂ ಆ ಅಗ್ರಹಾರಗಳ ಮಹಾಜನ ಸಭೆಗಳು ನೋಡಿಕೊಳ್ಳುತ್ತಿದ್ದುವು. ಬಹುಶಃ ಮೇಲಿನ ಮಾತುಗಳು ಕರ್ನಾಟಕ ಶಾಸನಗಳ ಭಟ್ಟವೃತ್ತಿಯ ದತ್ತಿಗಳಿಗೂ ಅನ್ವಯಿಸುತ್ತವೆ.

ಭಟ್ಟ, ಭಟ್ಟಾಚಾರ್ಯ, ಭಟ್ಟೋಪಾಧ್ಯಾಯ ಎಂಬ ಪದಗಳು ಪಾಂಡಿತ್ಯದ್ಯೋತಕಗಳು. ಈ ಮೂಲಾರ್ಥವನ್ನು ಬಂಗಾಳದ ಹಲವು ಹೆಸರುಗಳಲ್ಲಿ ಈಗಲೂ ಕಾಣಬಹುದು. ಭಟ್ಟ ಎಂಬ ಮಾತಿಗೆ ಎಂತಹ ಗೌರವದ ಸ್ಥಾನವಿತ್ತೆಂಬುದು ಶಾಸನವೊಂದರಿಂದ ಗೊತ್ತಾಗುತ್ತದೆ. ಚಂದ್ರವಂಶ ಎಂದು ಪ್ರಸಿದ್ಧವಾದ ಅತ್ರಿಗೋತ್ರದ ವಿದ್ವಾಂಸರ ಕುಲದಲ್ಲಿ ರುದ್ರಭಟ್ಟ ಎಂಬ ದೊಡ್ಡ ವಿದ್ವಾಂಸನು ಹುಟ್ಟಿದನು. ಅವನು 'ಸುಕವಿ'ಯೂ ಆಗಿದ್ದನು. ಒಮ್ಮೆ ಅವನಿಗೆ ಹಣದ ಕೊರತೆ ಬಿದ್ದು ಸಾಲವನ್ನು ಎತ್ತಬೇಕಾಗಿ ಬಂದಾಗ ಒತ್ತೆಯಿಡಲು ಹತ್ತಿರ ಏನೂ ಇಲ್ಲದುದನ್ನು ಕಂಡು ತನ್ನ ಹೆಸರಿನ ಉತ್ತರಭಾಗದ ("ಭಟ್ಟ") ಒಂದಕ್ಷರವನ್ನೇ ("ಭ") ಒತ್ತೆಯಾಗಿಟ್ಟು, ಸಾವಿರ ಹೊನ್ನುಗಳನ್ನು

---

165 SII. IX. i. 74, 981 A.D.

166 S. Krishnaswami Iyengar : Ancient India and South Indian History and Culture, II. p. 825.

167 K. A. Nilakantha Shastri : Studies in Cōla History and Administration, pp. 116–117.

ಸಾಲವಾಗಿ ಪಡೆಯುತ್ತಾನೆ. ಸಾಲವನ್ನು ತೀರಿಸುವವರೆಗೆ ಅವನನ್ನು ಜನ ರುದ್ರಟ ಎಂದು ಕರೆಯುತ್ತಿದ್ದರು.[168] ಸಾಲವನ್ನು ತೀರಿಸಿ ಭಟ್ಟ ಎಂಬ ತನ್ನ ಹಿಂದಿನ ಹೆಸರನ್ನು ಮತ್ತೆ ಪಡೆದ ಎಂದು ಕಾಣುತ್ತದೆ. ಈ ಒತ್ತೆಯಿಡುವ ರೀತಿ ಅತ್ಯಪೂರ್ವ ಮತ್ತು ಅತಿ ವಿಚಿತ್ರ.

## ಅಧ್ಯಯನ ವಿಷಯಗಳು (Subjects of Study)

ಅಧ್ಯಯನ ವಿಷಯಗಳಲ್ಲಿ ವೇದಗಳಿಗೆ ಮೊದಲ ಸ್ಥಾನವನ್ನು ಕೊಡಬೇಕು. ವೇದಗಳು, ವೇದಾಂಗಗಳು, ವೇದದ ಉಪಾಂಗಗಳು ಇಷ್ಟನ್ನು ವೇದಾಧ್ಯಯನವು ಒಳಕೊಂಡಿತ್ತು.

ವೈದಿಕ ವಿದ್ಯಾಭ್ಯಾಸದಲ್ಲಿ ವೇದಗಳ ಶುದ್ಧವಾದ ಸಾಂಪ್ರದಾಯಿಕವಾದ ಉಚ್ಚಾರಣೆಗೆ ಅತಿ ಪ್ರಮುಖ ಸ್ಥಾನವಿದೆ. ವೇದಾಂಗಗಳಲ್ಲಿ ಒಂದಾದ 'ಶಿಕ್ಷಾ' ಎಂಬುದು ಈ ಉಚ್ಚಾರಣೆಯನ್ನು ಬೋಧಿಸುತ್ತದೆ. ಅನೇಕ ಶಾಸನಗಳ ದತ್ತಿಗಳಲ್ಲಿ 'ಋಗ್ವೇದ ಬಾಲಶಿಕ್ಷೆ' 'ಯಜುರ್ವೇದ ಬಾಲಶಿಕ್ಷೆ'[169] ಮುಂತಾದುವುಗಳಿಗೂ ಸ್ಥಾನವನ್ನು ಕಲ್ಪಿಸಿರುವುದು ಕಾಣುತ್ತದೆ. ಬನವಾಸಿ ದೇಶದ ಬ್ರಾಹ್ಮಣರನ್ನು ಶಾಸನವೊಂದು ವರ್ಣಿಸುತ್ತ ಅವರು ವ್ಯಾಖ್ಯಾನ, ಚಿಂತನ, ವಿಚಾರಣ, ವಾದ, ಶಿಕ್ಷೆಗಳಲ್ಲಿ ಚತುರರಾಗಿದ್ದರೆಂದೂ, ವೇದಗಳಲ್ಲಿ ಮಹಾ ವಿದ್ವಾಂಸರಾಗಿದ್ದ ಅವರು ಗ್ರಸ್ತ, ನಿರಸ್ತ[170] ಮುಂತಾದ ಉಚ್ಚಾರಣಾ ದೋಷಗಳನ್ನು ವರ್ಜಿಸಿ ಪದ, ಕ್ರಮ[171] ಮುಂತಾದ ರೀತಿಗಳಲ್ಲಿ ವೇದಗಳನ್ನು ವಾಚಿಸುತ್ತಿದ್ದರೆಂದೂ ಹೇಳುತ್ತದೆ.[172] ವೇದಗಳ ಮಂತ್ರಗಳನ್ನು ಉಚ್ಚರಿಸಿದರೆ ಸಾಲದು (ಇದನ್ನು 'ಪಾರಾಯಣ' ಎಂದು ಕರೆಯುತ್ತಾರೆ), ಅವುಗಳ ಅರ್ಥವನ್ನು ತಿಳಿಯಲು ಕೆಲವರಾದರೂ ಪ್ರಯತ್ನಪಡುತ್ತಿದ್ದರು. ವೇದಗಳನ್ನು ಕಂಠಪಾಠಮಾಡಿ ಅವುಗಳ ಅರ್ಥವನ್ನು ತಿಳಿಯದವರನ್ನು ಕಂಬಗಳೆಂದೂ ("ಸ್ಥಾಣು"), ಭಾರವನ್ನು ಹೊರುವವರೆಂದೂ ("ಭಾರ ಹಾರ") ಪ್ರಾಚೀನರು ಹಾಸ್ಯಮಾಡಿದ್ದಾರೆ.[173] ಕನ್ನಡ ಶಾಸನಗಳು ವೇದಾರ್ಥ ತತ್ವವಿದರಾದ ಹಲವರನ್ನು ಕೊಂಡಾಡಿವೆ. ಮಹಾಪ್ರಧಾನಿಯಾಗಿದ್ದ ಶ್ರೀಮದಯ್ಯ ಎಂಬುವನನ್ನು 'ವಿದಿತ ವೇದಾರ್ಥ

---

168 JBBRAS.X. p. 260, 1229 A.D.

"ಧರೆಗಿಂದು ವಂಶವೆನೆ ವಿಸ್ತರವಂ ತಳೆದತ್ರಿಗೋತ್ರದೊಳ್ ವರವಿದ್ಯಾಪರಿಣತರಿಳಾಮರರಪ್ಪ‍ಲಬರೊಗೆದವರವರೊಳಗೆ ರುದ್ರಭಟ್ಟ ಕವೀಂದ್ರಂ...

ಆ ಸುಕವಿ ರುದ್ರಭಟ್ಟನಿನಾ ಸೋಮಕುಲಾಖ್ಯವೆನಿಸುವತ್ರಿಕುಲಂ ಸಾಮಾಸಿಗಕುಲವೆನಿಸಿದುದಂತಾ ಸತ್ಕುಲದೊಳಗೆ ಪುಟ್ಟಿತಮಳ ಚರಿತ್ರಂ ‖ ಅದಱೊಳ್ ನಿಜನಾಮಾಕ್ಷರವಿಡೆ ಸಾಸಿರಪೊಂಗೆ ಕೊಟ್ಟದಂ ಬಿಡಿಪನಿತುದಿನಂ ಪಡೆದಂ ರುದ್ರಟನೆಂಬೀ ಪಡೆಮಾತಂ ರುದ್ರಭಟ್ಟನುರ್ವೀಜನದಿಂ ‖"

169 EI. XIII. p. 41, 1112 A.D.

170 ಅಕ್ಷರಗಳನ್ನು ನುಂಗುವುದು 'ಗ್ರಸ್ತ', ಅಕ್ಷರಗಳನ್ನು ಸೇರಿಸುವುದು 'ನಿರಸ್ತ'.

171 ಪದಪಾಠ, ಕ್ರಮಪಾಠ, ಜಟಾಪಾಠ, ಘನಪಾಠಗಳ ವಿವರಣೆಗಳಿಗೆ, ನೋಡಿ — R K. Mookerji : Ancient Indian Education, p. 213 ; ಡಿ. ಎಲ್. ನರಸಿಂಹಾಚಾರ್ : ಕನ್ನಡ ಗ್ರಂಥ ಸಂಪಾದನೆ, ಪು. 3. ವೇದಗಳ ಉಚ್ಚಾರಣಾಕ್ರಮದಲ್ಲಿ ಯಾವ ದೋಷವಾಗಲಿ ವ್ಯತ್ಯಾಸವಾಗಲಿ ಬಾರದಂತೆ, ವೇದಗಳ ಪಾಠವು ಶುದ್ಧವಾಗಿ ಉಳಿಯುವಂತೆ ಮಾಡಿದ ಏರ್ಪಾಟುಗಳೇ ಪದಪಾಠ ಮುಂತಾದ ವಾಚನವಿಧಾನಗಳು. ವೇದವನ್ನು 'ಓದು'ವ ವಿಧಾನದ ಒಂದು ಚಿತ್ರ ವಡ್ಡಾರಾಧನೆಯಲ್ಲಿ (ಪು. 23) ದೊರಕುತ್ತದೆ– "ಪ್ರಣವಮವನುಚ್ಚರಿಸಿ ಸ್ವರವರ್ಣಭೇದದಿಂದಂ ಪ್ರಥಮಂ ಚತುಃಷಷ್ಟಿ ಸಂಹಿತೆಗಳಂ ಪದಕ್ರಮ ಭೇದದಿಂ ಬ್ರಾಹ್ಮಣ ಆರಣ ಸೂತ್ರಂ ಮೊದಲಾಗೊಡೆಯುವನೋದಿ ಋಗ್ಯಜುಸ್ಸಾಮಾಥರ್ವಣ ವೇದಂಗಳಂ ಸ್ವರವರ್ಣಭೇದದಿಂದಂ ಮಂತ್ರಸಹಿತ ಪಾಳಿ ಪದ ಕ್ರಮ ಜಟೆ ಭೇದದಿಂದಂ ಶತಸೂತ್ರಂ ಮೊದಲಾಗೆಲ್ಲಮಂ ಯಥಾಕ್ರಮದಿಂದುಚ್ಚರಿಸಿ..."

172 MAR (1928). p. 74.

173 S. V. Venkateswara : Indian Culture through the Ages, I, p. 88.

ತತ್ಪರ್ ಅಭಿನವ ಶಾಖ (ಕ)ಲ್ಯರಿಗ್ವೇದ ರತ್ನಾಕರರ್' ಎಂದು ಒಂದು ಶಾಸನವು ಕರೆಯುತ್ತದೆ.[174] ಆ ಕಾಲದಲ್ಲಿ ವೇದಗಳ ಅರ್ಥವು ಎಲ್ಲೋ ಕೆಲವರಿಗೆ ತಿಳಿದಿದ್ದಿರಬೇಕು. ಅಲ್ಬೆರೂನಿಯೂ ಇದನ್ನೇ ಪುಷ್ಟೀಕರಿಸುತ್ತಾನೆ.[175] ವೇದಗಳನ್ನು ಭಾಗ ಭಾಗವಾಗಿ ಅಧ್ಯಯನಮಾಡುವುದನ್ನು ವೇದ ಖಂಡಿಕವೆಂದೂ,[176] ಪಾಠ ಹೇಳುವ ಉಪಾಧ್ಯಾಯನನ್ನು ಖಂಡಿಕೋಪಾಧ್ಯಾಯನೆಂದೂ,[177] ವಿದ್ಯಾರ್ಥಿಯನ್ನು ಖಂಡಿಕ ವಿದ್ಯಾರ್ಥಿಯೆಂದೂ,[178] ಶಾಸನಗಳು ಕರೆದಿರುವಂತಿದೆ. ಖಂಡಿಕ ಎಂದರೆ ಒಂದು ಗ್ರಂಥವನ್ನು ಭಾಗಭಾಗವಾಗಿ ಅಧ್ಯಯನಮಾಡುವ ವಿದ್ಯಾರ್ಥಿ ಎಂದು ಮೋನಿಯರ್ ವಿಲಿಯಂಸರ ಸಂಸ್ಕೃತಕೋಶದಲ್ಲಿ ಅರ್ಥವನ್ನು ಹೇಳಿದೆ. ಖಂಡಿಕ ಎನ್ನುವುದು ವಿದ್ಯೆಗಾಗಿ ಬಿಟ್ಟುಕೊಟ್ಟ ದತ್ತಿ ಎಂಬ ಅರ್ಥದಲ್ಲಿಯೂ ಒಂದು ಶಾಸನದಲ್ಲಿ ಬಂದಿದೆ.[179]

ಶಾಸನಗಳನ್ನು ನೋಡಿದರೆ ಬ್ರಾಹ್ಮಣರು ಮತ್ತು ಸ್ವಲ್ಪಮಟ್ಟಿಗೆ ಕ್ಷತ್ರಿಯರು ವೇದಗಳನ್ನು ಅಭ್ಯಸಿಸುತ್ತಿದ್ದರೆಂದು ಕಾಣುತ್ತದೆ.[180] ವೈಶ್ಯರಿಗೆ ವೇದಾಧ್ಯಯನದ ಹಕ್ಕು ಇದ್ದರೂ ಅವರ ಆಸಕ್ತಿ ಬೇರೆ ಕಡೆ ಇದ್ದದ್ದು ಸ್ವಾಭಾವಿಕವೇ.

ಉಳಿದ ವಿದ್ಯೆಗಳಲ್ಲಿ ಕೆಲವನ್ನು ಹೆಸರಿಸಬಹುದು. ಅವುಗಳಲ್ಲಿ ಅತ್ಯಂತ ಪ್ರಮುಖವಾದುದು ವ್ಯಾಕರಣ.[181] ಕೌಮಾರ, ರೂಪಾವತಾರ, ಪಾಣಿನಿಯ ಅಷ್ಟಾಧ್ಯಾಯೀ ಮುಂತಾದ ವ್ಯಾಕರಣಗಳ ಹೆಸರುಗಳು ಕಂಡುಬರುತ್ತವೆ. ಜೈನರಲ್ಲಿ ಪೂಜ್ಯಪಾದನ ಮತ್ತು ಶಾಕಟಾಯನನ ವ್ಯಾಕರಣಗಳು ಬಳಕೆಯಲ್ಲಿದ್ದುವು.[182] ವಿದ್ವಾಂಸರು ತರ್ಕದಲ್ಲಿ ವಿಶೇಷವಾದ ಪಾಂಡಿತ್ಯವನ್ನು ಸಂಪಾದಿಸಿಕೊಳ್ಳಲಿ ಎಂದು ನಾಗವಿಷ್ಣುಮಯ್ಯನು ತರ್ಕದ ಅಭ್ಯಾಸಕ್ಕಾಗಿಯೇ ಒಂದು ವ್ಯಾಖ್ಯಾನ ಶಾಲೆಯನ್ನು ರೋಣದಲ್ಲಿ ಕಟ್ಟಿಸಿದಂತೆ ಶಾಸನವೊಂದು ತಿಳಿಸುತ್ತದೆ.[183] ಜ್ಯೋತಿಷ, ಪುರಾಣ, ಕಾವ್ಯ,[184] ನಾಟಕ, ಅರ್ಥಶಾಸ್ತ್ರ, ಭರತಶಾಸ್ತ್ರ, ವಾತ್ಸ್ಯಾಯನ ಕಾಮಸೂತ್ರ, ಹದಿನೆಂಟು ಸ್ಮೃತಿಗಳು, ಹದಿನೆಂಟು ಪುರಾಣಗಳು, ಷಡ್ದರ್ಶನಗಳು—ಇವುಗಳನ್ನು ಅಧ್ಯಯನಮಾಡಿದ್ದವರ ಹೆಸರುಗಳೂ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಶೈವರು ಶಿವಾಗಮಗಳನ್ನು, ಅದರಲ್ಲೂ ವಿಶೇಷವಾಗಿ ಲಕುಲೀಶನಿಂದ ಉಕ್ತವಾದುದೆಂದು ಹೇಳುವ ಲಾಕುಳಾಗಮವನ್ನು ಅಭ್ಯಸಿಸುತ್ತಿದ್ದರು.

ಕಷ್ಟವಾಗಿರುವ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆಯುತ್ತಿದ್ದರು. ವೈದಿಕರು ಬರೆದ ವ್ಯಾಖ್ಯಾನಗಳು

---

174 ಶಾಕಲ್ಯನು ಋಗ್ವೇದದ ಪದಪಾಠದ ಕರ್ತೃವೆಂದು ಹೇಳುತ್ತಾರೆ. (Winternitz : History of Indian Literature, I, p. 283).

175 Altekar : Education in Ancient India, p. 133.

176 ಈ ಸಂಪ್ರದಾಯ ಈಗಲೂ ಇದೆ. ವೇದವನ್ನು ಹೇಳಿಕೊಡುವ ಅಷ್ಟಕವಿಧಾನವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

177 EC. VII. Sk. 185, 1158 A.D.

178 ಅದೇ.

179 BKI. I. ii. 173, 1124 A.D.

180 EC. III. Sr. 49, C. 1120 A.D.

181 "The importance of the grammarians in the history of Sanskrit is unequalled anywhere in the world. Also the accuracy of their linguistic analysis is unequalled until comparitively modern times." (T. Burrow : The Sanskrit Language, p. 47).

182 BKI. I. ii. 140, 1097 A.D. ; EC. VII. Sk. 124, 1077 A.D.

183 BKI. I. ii. 159, 1111 A.D.

184 ಶ್ರೀಹರ್ಷ, ಕಾಳಿದಾಸ, ಭಾರವಿ ಮುಂತಾದವರ ಹೆಸರುಗಳು ಶಾಸನಗಳಲ್ಲಿವೆ. ಸುಬಂಧುವಿನ ಹೆಸರು ಕ್ರಿ.ಶ. 1068ರ ಶಾಸನವೊಂದರಲ್ಲಿದೆ. (EC. VII. Sk. 92, 1068 A.D.). ಅಲ್ಲಿಯೇ ಅರ್ಥಶಾಸ್ತ್ರವನ್ನು ಬರೆದ ಭೂಷಣಾಚಾರ್ಯನ ಹೆಸರಿದೆ. ಇವನು ಯಾರೋ ಗೊತ್ತಿಲ್ಲ.

ಬಹುಮಟ್ಟಿಗೆ ಸಂಸ್ಕೃತದಲ್ಲಿದ್ದವು. ಕಾಡಿಯೂರಿನ ವೈದಿಕರು ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯಕೃತಿಗಳು, ಇತಿಹಾಸ ಮುಂತಾದ ಗ್ರಂಥಗಳಿಗೆ ವ್ಯಾಖ್ಯಾನವನ್ನು ಬರೆಯುತ್ತಿದ್ದರು. ಅವುಗಳ ಒಂದೊಂದು ಅಕ್ಷರಕ್ಕೆ ವ್ಯಾಖ್ಯಾನವನ್ನು ಬರೆಯಲು ಸಾಕಷ್ಟು ಅಭ್ಯಾಸವನ್ನು ಮಾಡುತ್ತಿದ್ದರು.[185] ಸಂಸ್ಕೃತ ಗ್ರಂಥಗಳಿಗೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆಯುವ ಸಂಪ್ರದಾಯವನ್ನು ಆರಂಭಿಸಿದವರು ಬಹುಶಃ ಜೈನರು. ಜಡರೂ, ಬಾಲಕರೂ, ವಿದ್ವಾಂಸರೂ ತತ್ವಾರ್ಥವನ್ನು ಕಲಿತು ಮುಕ್ತರಾಗಲಿ ಎಂದು ತತ್ವಾರ್ಥಸೂತ್ರಕ್ಕೆ ದಿವಾಕರಣಂದಿ ಮುನಿಗಳು ಕನ್ನಡದಲ್ಲಿ ವೃತ್ತಿ ಬರೆದ ವಿಷಯವನ್ನು ಶಾಸನವೊಂದು ತಿಳಿಸುತ್ತದೆ.[186] ಭಾರವಿಯ 'ಕಿರಾತಾರ್ಜುನೀಯ'ದ ಹದಿನೈದನೆಯ ಸರ್ಗಕ್ಕೆ ದುರ್ವಿನೀತ ಎಂಬ ಗಂಗರ ದೊರೆಯು ಟೀಕೆಯನ್ನು ಬರೆದನೆಂದು ಗಂಗರ ಅನೇಕ ತಾಮ್ರಪಟಗಳು ಹೇಳುತ್ತವೆ. ಆದರೆ ಅದು ಕನ್ನಡದಲ್ಲಿತ್ತೇ ಸಂಸ್ಕೃತದಲ್ಲಿತ್ತೇ ತಿಳಿಯದು. (ಬಹುಶಃ ಸಂಸ್ಕೃತದಲ್ಲಿದ್ದಿತೆಂದು ಊಹೆಮಾಡಲು ಅವಕಾಶಗಳಿವೆ*.) ನೃಪತುಂಗನು ಹೇಳುವ ಕನ್ನಡ ಕವಿಗಳಲ್ಲಿ ದುರ್ವಿನೀತನೂ ಒಬ್ಬ. ಈ ದುರ್ವಿನೀತನು ಗಂಗರ ದೊರೆ ದುರ್ವಿನೀತನೇ ಎಂದು ಕೆಲವರ ಭಾವನೆ. ಆದರೆ ಇದು ಪ್ರಶ್ನಾರ್ಹವಾದುದು.

ವೈದಿಕ ಪದ್ಧತಿಯ ವಿದ್ಯಾಭ್ಯಾಸದ ಚಿತ್ರವೊಂದು ವಡ್ಡಾರಾಧನೆಯಲ್ಲಿ ಕಂಡುಬರುತ್ತದೆ. ಬ್ರಾಹ್ಮಣ ಗುರುವಾದ ಸೂರ್ಯಮಿತ್ರನು ಅಗ್ನಿಭೂತಿ ವಾಯುಭೂತಿಯರಿಗೆ ಕಲಿಸಿದ ವಿದ್ಯೆಗಳಿವು—"ನಾಲ್ಕು ವೇದಮುಂ ಅಂಗಮುಂ ಪದಿನೆಂಟು ಧರ್ಮಶಾಸ್ತ್ರಂಗಳುಂ ಮೀಮಾಂಸಾ ನ್ಯಾಯ ವಿಸ್ತರಂ ವ್ಯಾಕರಣಂ ಪ್ರಮಾಣಂ ಛಂದಂ ಅಲಂಕಾರಂ ನಿಘಂಟು ಕಾವ್ಯನಾಟಕಂಗಳುಂ ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ (=ಅಶ್ವವೈದ್ಯ) ಪಾಳಕಾಪ್ಯಂ (=ಗಜವೈದ್ಯ) ಹಾನಿತಂ ಚರಕಂ ಅಶ್ವಿನೀಮತಂ ಬಾಹಲಂ ಸುಸ್ರುತಂ (=ವೈದ್ಯ ಗ್ರಂಥ) ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಮಂ......."

ರಾಜಕುಮಾರರ ವಿದ್ಯಾಭ್ಯಾಸದ ಒಂದೆರಡು ಅಂಶಗಳು ಶಾಸನಗಳಲ್ಲಿ ದೊರಕುತ್ತವೆ. ಕ್ಷತ್ರಿಯರು ಮುಖ್ಯವಾಗಿ ಯುದ್ಧಕ್ಕೆ ಮತ್ತು ಆಡಳಿತಕ್ಕೆ ಸಂಬಂಧಿಸಿದ ವಿದ್ಯೆಗಳಿಗೆ ಹೆಚ್ಚು ಗಮನಕೊಡುತ್ತಿದ್ದರು. ಆದರೂ ಅವರಲ್ಲಿ ಶ್ರೇಷ್ಠ ವಿದ್ವಾಂಸರೆನ್ನಿಸಿಕೊಳ್ಳುವ ಹಲವರು ಕಾಣಿಸಿಕೊಳ್ಳುತ್ತಾರೆ. ಗಂಗರ ದೊರೆ ಮಾಧವನನ್ನು ವಿದ್ವಾಂಸರು ಮತ್ತು ಕವಿಗಳೆಂಬ ಚಿನ್ನಕ್ಕೆ ಒರೆಗಲ್ಲು ಇದ್ದಂತೆ ಎಂದು ಒಂದು ತಾಮ್ರಪಟವು ಕರೆಯುತ್ತದೆ.[187] ಕಿರಾತಾರ್ಜುನೀಯದ ಹದಿನೈದನೆಯ ಸರ್ಗಕ್ಕೆ ದುರ್ವಿನೀತನು ಟೀಕೆ ಬರೆದ ವಿಷಯವು ಹಲವೆಡೆ ಬಂದಿದೆ.[188] ಗಂಗವಂಶದ ಮಾಧವ ಮಹಾರಾಜನು ನೀತಿಶಾಸ್ತ್ರದಲ್ಲಿ ಪರಿಣತನಾಗಿದ್ದನಲ್ಲದೆ 'ದತ್ತಕ ಸೂತ್ರ'ಕ್ಕೆ ಒಂದು ವೃತ್ತಿಯನ್ನು ಬರೆದಿದ್ದನು.[189] ಗಂಗರ ಶಿವಮಾರನು ಬಹುಮುಖ ವಿದ್ವತ್ತನ್ನು ಪಡೆದ ಅಪೂರ್ವ ವ್ಯಕ್ತಿ. ಕಲಾಭಿ

---

185 EI. XIII. p. 329, 929 A.D.

"ವ್ಯಾಕರಣಮರ್ಥಶಾಸ್ತ್ರಾನೀಕಂ ಸಾಹಿತ್ಯವಿದ್ಯೆಯಿತಿಹಾಸಂ ಮಿಕ್ಕೇಕಾಕ್ಷರಮಿನಿತರ್ಕಂ ಟೀಕಂ ಬರೆಯಲ್ ಸಮಗ್ರರಾಭ್ಯಾಸಿಸುವರ್."

186 EC. VIII. Nr. 57, C. 1077 A.D. ದಿವಾಕರಣಂದಿಯ ವೃತ್ತಿಗೆ 'ತತ್ವಾರ್ಥಸೂತ್ರಾನುಗತ ಕರ್ಣಾಟಕ ಲಘುವೃತ್ತಿ' ಎಂದು ಹೆಸರು. ಮೂಲಗ್ರಂಥವು ಗೃಧ್ರಪಿಂಛಾಚಾರ್ಯನಿಂದ ರಚಿತವಾದುದು.

(ಕರ್ಣಾಟಕ ಕವಿಚರಿತೆ, I, 1961, ಪು. 96)

* ಎಂ. ಚಿದಾನಂದಮೂರ್ತಿ : 'ಕವಿರಾಜಮಾರ್ಗ ಪೂರ್ವ ಕನ್ನಡ ಸಾಹಿತ್ಯ' (ಕವಿರಾಜಮಾರ್ಗ. ಸಂಪಾದಕ: ವಿ. ಸೀತಾರಾಮಯ್ಯ, ಪು. 12)

187 EC. VI. Mg. 36, 749 A.D.

188 ಅದೇ.

189 EC. IX. NL. 60, 797 A.D. ದತ್ತಕ ಎಂಬುವನು ಕಾಮಸೂತ್ರದ ಒಂದು ಅಧ್ಯಾಯದ ಮೇಲೆ ಕೃತಿಯೊಂದನ್ನು ರಚಿಸಿದ್ದಾನೆ (EC. II. P. 51.)

ಮಾನಿಯೂ ಬುಧಜನಹಿತನೂ ಆಗಿದ್ದ ಅವನು ಕಾವ್ಯಕುಶಲನೂ ಆಗಿದ್ದನು. ಗಜಶಾಸ್ತ್ರ, ಹಯಶಾಸ್ತ್ರ, ಧನುರ್ವಿದ್ಯೆ ಮುಂತಾದ ಕ್ಷತ್ರಿಯ ವಿದ್ಯೆಗಳಲ್ಲಿ ಪರಿಣತನಾಗಿದ್ದನು.[190] ಅವನು ಬರೆದ ಗಜಶಾಸ್ತ್ರವು ಜನಪ್ರಿಯವಾಯಿತು. ಬಹುಶಃ ಕನ್ನಡದಲ್ಲಿದ್ದ ಆ ಅಷ್ಟಕವು ("ಗಜಾಷ್ಟಕ") ಒನಕೆವಾಡಾಗಿ ಪರಿಣಮಿಸಿತು.[191] ಸಿಂದಕುಳದ ಆಚಗಿ ದೇವನು ಅಶ್ವಗಳನ್ನೇರುವುದರಲ್ಲಿ, ಅಶ್ವಗಳನ್ನು ಶಿಕ್ಷಿಸುವುದರಲ್ಲಿ ವಿಚಕ್ಷಣನಾಗಿದ್ದುದು ಮಾತ್ರವಲ್ಲದೆ 'ಭೂಸುತ ಶಸ್ತ್ರಕಳಾವಿಜ್ಞಾನ'ದಲ್ಲಿಯೂ ಪರಿಣತನೆನಿಸಿಕೊಂಡಿದ್ದನು.[192] ಶಾಂತರ ಎಂಬ ಒಬ್ಬ ದೊರೆಯು ಮತ್ತೊಬ್ಬ ಪ್ರತಿಭಾಶಾಲಿ ವ್ಯಕ್ತಿ. ಅವನು ಅರ್ಥಶಾಸ್ತ್ರ, ಹಯಶಾಸ್ತ್ರ, ಗಜಶಾಸ್ತ್ರ ಮುಂತಾದ ಕ್ಷತ್ರಿಯ ವಿದ್ಯೆಗಳಲ್ಲದೆ ರತ್ನ ಪರೀಕ್ಷೆಯಂತಹ ಕುಶಲವಿದ್ಯೆಯಲ್ಲಿಯೂ ಪರಿಣತನಾಗಿದ್ದನು. ಅವನು ಹಲವಾರು ವಾದನಗಳಲ್ಲಿಯೂ ಸಂಗೀತ ದಲ್ಲಿಯೂ ಚತುರನಾಗಿದ್ದನು.[193] ಚಾಲುಕ್ಯವಂಶದ ರಾಜಕುಮಾರ ಕೀರ್ತಿವರ್ಮನು (ಸು. 1100) 'ಗೋವೈದ್ಯ' ಎಂಬ ಗ್ರಂಥವನ್ನು ಬರೆದಿರುವುದು ಆಶ್ಚರ್ಯದ ಸಂಗತಿಯೇನಲ್ಲ. ಶ್ರೀಮತ್ ರಾಜಗುರುದೇವ ಎಂಬ ಶೈವಮುನಿ ಯನ್ನು ಹೀಗೆ ಒಂದು ಶಾಸನದಲ್ಲಿ ಹೊಗಳಿದೆ—"ಸಾಹಸೋತ್ತುಂಗನ್ ವೀರಾವತಾರಂ ವೀರಚೂಡಾಮಣಿ ಶೈವ ಪ್ರಾಕಾರಂ ಬಾಣಶಿಕ್ಷಾಗುರು ಕಲಿಯುಗದ್ರೋಣಾಚಾರ್ಯ ಸರ್ವಸಸ್ತ್ರಸಾಸ್ತ್ರವಿಶಾರದಂ ನಾರಾಚಪರಶುರಾಮ ಗಿರಿದುರ್ಗಭಂಜನಾಂಜನೇಯ ಕೊಂಕಣ ರಕ್ಷಾಳಂ ಕದಂಬಾನ್ವಯ ಸಮುದ್ಧರಣ ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ....".[194] ಈ ಶಾಸನವು ಸೂಚಿಸುವಂತೆ ಧನುರ್ವಿದ್ಯೆಯಂತಹ ಕ್ಷತ್ರಿಯ ವಿದ್ಯೆಯನ್ನು ಕ್ಷತ್ರಿಯರು ಮಾತ್ರವೇ ಅಲ್ಲ, ಉಳಿದವರೂ ಅಭ್ಯಸಿಸುತ್ತಿದ್ದರು. ಅಷ್ಟೇ ಅಲ್ಲ, ಅನೇಕರು ಕ್ಷತ್ರಿಯರಿಗೆ ಗುರುಗಳೂ ಆಗುತ್ತಿದ್ದರು. ಹತ್ತನೇ ಶತಮಾನದ ರಾಜಕುಮಾರನೊಬ್ಬನು ಅಭ್ಯಸಿಸುತ್ತಿದ್ದ ವಿದ್ಯೆಗಳ ಪಟ್ಟಿಯೊಂದನ್ನು ಪಂಪ ಕೊಡುತ್ತಾನೆ—"ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋವೃತ್ತಿಯೊಳಂ ಶಬ್ದಾಲಂಕಾರ ನಿಷ್ಪಿತಮಪ್ಪಲಂಕಾರದೊಳಂ ವ್ಯಾಸ ವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಂಗಳಪ್ಪ ಮಹಾ ಕಾವ್ಯಂಗಳೊಳಂ ನಾಂದೀ ಪ್ರರೋಚನಾ ಪ್ರಸ್ತಾವನೇತಿ ವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಮಾಱಂಗದೊಳಮಯ್ದುತೆಱದ ಮಂತ್ರಂಗಳೊಳಮಾಱುಂ ದರ್ಶನ ದೊಳಂ ನಾರದಾದಿ ಪ್ರಣೀತ ಗಾಂಧರ್ವ ವಿದ್ಯಾ ವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ವಾಕಿ ಪಾಳಕಶ್ಯಪ (ಪಾ. ಪಾಳಕಾಪ್ಯ) ಸುಪತಿ ಶ್ರೀ ಹರ್ಷಾದಿ ಪುರಾಣಪುರುಷ ವಿರಚಿತಂಗಳಪ್ಪ ಹಸ್ತಿ ಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗ್ರಹಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರಪ್ರಯೋಗ ವಿಷಾಪಹರಣ ಸರಭೇದ ರತಿತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಣ ಶಕ್ತಿ ತೋಮರ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿಪ್ರವೀಣನು ಮಾರೂಢ ಸರ್ವಜ್ಞ ಮಹೇಂದ್ರ ಜಾಣನುಮಾಗಿ...."[195]. ಇದು ನಿಜವಾದ ಚಿತ್ರವಾದರೆ ಕ್ಷತ್ರಿಯ ಬಾಲಕನ ವಿದ್ಯಾರ್ಥಿ ಜೀವನವು ಶ್ರಮಸಾಧ್ಯವಾದುದೆಂಬುದರಲ್ಲಿ ಸಂದೇಹವಿಲ್ಲ.

ಬೇರೆಬೇರೆ ವೃತ್ತಿಗಳನ್ನವಲಂಬಿಸಿದ್ದವರ ವಿದ್ಯಾಭ್ಯಾಸದ ಚಿತ್ರವು ಪ್ರಾಯಶಃ ನಮಗೆ ದೊರಕುವುದಿಲ್ಲ. ಈ ವೃತ್ತಿಗಳನ್ನು ಔಪಯೋಗಿಕ ಕಲೆಗಳು ಎಂದು ಕರೆಯಬಹುದು. ಕುಂಬಗಳನ್ನು ಮಾಡುವುದು, ನೆಯ್ಗೆ,

---

[190] EC. IX. NL. 60, 797 A.D.

[191] EC. VIII. Nr. 35, 1077 A.D.

"ಏವೇಳ್ವುದೊ ಶಿವಮಾರಮ । ಹೀವಳಯಾಧಿಪನ ಸುಭಗಕವಿತಾಗುಣಮಂ । ಭೂವಳಯದೊಳ್ ಗಜಾಷ್ಟಕ । ಮೋವನಿಗೆಯುಮೊನಕೆವಾಡುಮಾದುವೆ ಪೇೞ್ಗಂ."

[192] BKI. I. ii. 119, 948 A.D.

[193] EC. VIII. Nr. 48, C. 1060 A.D.

[194] EI. XIX. p. 180, 1045 A.D.

[195] ಪಂಪಭಾರತ, 2. 34, ವ.

ವ್ಯಾಪಾರ, ವೈದ್ಯ ಮುಂತಾದ ವಿದ್ಯೆಗಳು ತಂದೆಯಿಂದ ಮಗನಿಗೆ ಹರಿದುಬರುತ್ತಿದ್ದುವು. ಇಂತಹ ವಿದ್ಯೆಗಳನ್ನು ಶೂದ್ರರು ಕಲಿಯಲು ಸಮಾಜದ ಅಭ್ಯಂತರವೇನೂ ಇರಲಿಲ್ಲ.[196] ತಂದೆ ಕೈಗೊಂಡಿರುವ ವೃತ್ತಿಯನ್ನು ಬಾಲ್ಯದಿಂದಲೂ ನೋಡುತ್ತ ಬಂದಿರುವ ಮಗನು ತಾನೇ ತಾನಾಗಿ ಆ ವೃತ್ತಿಯನ್ನು ಕಲಿತುಕೊಳ್ಳುತ್ತಾನೆ. ಇದನ್ನು ಶಾಸನಗಳೂ ಪೋಷಿಸುತ್ತವೆ. ಚನ್ನೋಜ ಎಂಬ ಒಬ್ಬ ಶಾಸನ ಶಿಲ್ಪಿ ತನ್ನ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ :[196.1] 'ಶ್ರೀಮತೆಬ್ಬರಗಂಡ'→ (ಇವನ ಮಗ) ಮರುಳೋಜ→ (ಮಗ) ಜಕೋಜ→ (ಮಗ) 'ರೂವಾರಿ ವೈರಿ ಭೇರುಂಡ' ಚಾವುಡ→ (ಮೊಮ್ಮಗ) ಚನ್ನೋಜ. ಚನ್ನೋಜ ತನ್ನ ಹಿರಿಯರ ಹೆಸರುಗಳನ್ನು ಹೀಗೆ ಹಿಡಿದಿಟ್ಟಿರುವುದು ಗಮನಾರ್ಹ ಸಂಗತಿ. ಬಿಬ್ಬಣ್ಣ ಎಂಬುವನು ವೈದ್ಯರ ಕುಲದಲ್ಲಿ ಹುಟ್ಟಿದವನು ಎಂದು ಶಾಸನವೊಂದು ಹೇಳುತ್ತದೆ.[197] ಬೇರೆ ಬೇರೆ ವೃತ್ತಿಗಳನ್ನವಲಂಬಿಸಿದ್ದವರ ಮಕ್ಕಳು ದೊಡ್ಡವರಾದ ಮೇಲೆ ಆಯಾ ವೃತ್ತಿಗಳನ್ನೇ ಅವಲಂಬಿಸಿದ ವೃತ್ತಾಂತವು ನೂರಾರು ಶಾಸನಗಳಲ್ಲಿ ಬರುತ್ತದೆ. ತಾಂತ್ರಿಕ ವಿದ್ಯೆಯನ್ನು (technical education) ಕಲಿಯಲು ಬೇರೆಡೆ ಹೋಗಿ, ನಿಷ್ಣಾತರ ಬಳಿ ಶಿಷ್ಯತ್ವವನ್ನು (apprenticeship) ವಹಿಸಿದ ನಿದರ್ಶನಗಳು ಶಾಸನಗಳಲ್ಲಿ ಇಲ್ಲವೇ ಇಲ್ಲ. ಒಂದು ಶಾಸನದಲ್ಲಿ ಪಱಿಕಾರ[189]ನಾಗಿದ್ದ ಮಾರುಗಬಲ ಎಂಬುವನ ಶಿಷ್ಯ ಸುಟಿ ಎಂಬುವನ ಹೆಸರಿದೆ. ಈ ಸುಟಿ ಎಂಬುವನನ್ನು ಬಂಟರಶೂಲ ಎಂದು ಕರೆದಿರುವುದರಿಂದ ಅವನು ಶೂರನಾಗಿದ್ದಿರಬೇಕು. ಇವನು ಪಱಿಕಾರನಾಗಿದ್ದ ಮಾರುಗಬಲನ ಬಳಿ ಶಿಷ್ಯತ್ವ ವಹಿಸಿ ಕಲಿತದ್ದೇನು ಎಂಬುದು ಮಾತ್ರ ಗೊತ್ತಾಗುವುದಿಲ್ಲ. ಉತ್ತರ ಭಾರತದ ಎರಡು ಪ್ರಾಚೀನ ವಿಗ್ರಹಗಳ ಮೇಲಿನ ಶಾಸನಗಳಿಂದ ಕುಣಿಕ ಎಂಬ ಮಹಾಶಿಲ್ಪಿಯ ಶಿಲ್ಪ ಶಾಲೆಯು ಬಹಳ ಪ್ರಸಿದ್ಧವಾಗಿತ್ತೆಂದೂ, ಅವನ ಶಾಲೆಯಲ್ಲಿ 'ಅಂತೇವಾಸಿ'ಗಳಾಗಿದ್ದವರು ಶಿಲ್ಪಶಾಸ್ತ್ರದಲ್ಲಿ ನಿಷ್ಣಾತರಾಗುತ್ತಿದ್ದರೆಂದೂ ಊಹಿಸಬಹುದಾಗಿದೆ.[199]

## ಭಾಷೆ ಮತ್ತು ಬರವಣಿಗೆ

ಕನ್ನಡವು ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಭಾಷೆ. ದ್ರಾವಿಡ ಭಾಷಾವರ್ಗವು ಇಂಡೋ ಆರ್ಯನ್ ಭಾಷಾವರ್ಗಕ್ಕಿಂತ ಭಿನ್ನವಾದುದು. ಆದರೆ ದ್ರಾವಿಡ ಭಾಷಾವರ್ಗ ಎಂಬ ಕಲ್ಪನೆ ಬಂದದ್ದೇ ಹೋದ ಶತಮಾನದಲ್ಲಿ. ಅದಕ್ಕಿಂತ ಮುನ್ನ ಕನ್ನಡ, ತೆಲುಗು, ತಮಿಳು ಮುಂತಾದ ಭಾಷೆಗಳು ಸಂಸ್ಕೃತಜನ್ಯವೆಂದು ಭಾವಿಸಿ ಅವುಗಳನ್ನು ಪ್ರಾಕೃತವೆಂದು ಕರೆಯುತ್ತಿದ್ದರು. ಕೆಲವು ಶಾಸನಗಳಲ್ಲಿ ಕನ್ನಡವನ್ನು ಪ್ರಾಕೃತವೆಂದೇ ಸ್ಪಷ್ಟವಾಗಿ ಕರೆದಿದೆ. ಬಾದಾಮಿಯ ಶಾಸನವೊಂದರಲ್ಲಿ ಮೊದಲ ಹತ್ತು ಸಾಲುಗಳಲ್ಲಿ ಬಾದಾಮಿಯ ದೊರೆ, ತ್ರಿಮೂರ್ತಿಗಳ ಪ್ರತಿಷ್ಠಾಪನೆ ಇತ್ಯಾದಿ ವಿಷಯಗಳನ್ನು ಸಂಸ್ಕೃತದಲ್ಲಿ ಹೇಳಿ, ಮುಂದಿನ ದಾನಭಾಗವನ್ನು 'ಪ್ರಾಕೃತ ಭಾಷೆ'ಯಲ್ಲಿ ವಿವರಿಸುವುದಾಗಿ ಹೇಳುತ್ತದೆ ("ಅತಃಪರಂ ಪ್ರಾಕೃತ ಭಾಷಯಾ ವರ್ಣಾಸ್ಯೇತಾನಿ ದತ್ತಾನಿ ಸಂಕಾನಿ").[200] ಇನ್ನೊಂದು ಶಾಸನದಲ್ಲಿ ನಾವು ಈಗ ಪ್ರಾಕೃತವೆಂದು ಕರೆಯುವ ಭಾಷೆಯನ್ನೇ 'ಪ್ರಾಕೃತ'ವೆಂದು ಕರೆದಿದೆ.[201]

---

[196] ವೇದಗಳನ್ನು ಬಿಟ್ಟು ಸ್ಮೃತಿ, ಪುರಾಣ, ಮಹಾಕಾವ್ಯಾದಿಗಳನ್ನು ಶೂದ್ರರೂ ಅಧ್ಯಯನಮಾಡಬಹುದಿತ್ತು.

[196.1] KI. V. No. 13, 1095-6 A.D.

[197] BKI. I. ii. 122, 1072 A.D. ಇನ್ನೊಂದು ಶಾಸನದಲ್ಲಿ ಗಜವೈದ್ಯ ಇತ್ಯಾದಿ ವೈದ್ಯಗಳಲ್ಲಿ ನಿಷ್ಣಾತನಾಗಿದ್ದ ಜೈಯೂ ಎಂಬುವನ ಹೆಸರಿದೆ (EC. V. Ak. 17, 1139 A.D.) ಈ ಗಜವೈದ್ಯ ವಿದ್ವಾಂಸನು ರಾಜನ ಆನೆಗಳನ್ನು ನೋಡಿಕೊಳ್ಳುತ್ತಿದ್ದ ವೈದ್ಯನಾಗಿದ್ದಿರಬೇಕು.

[198] ಪಱಿ ಎಂದರೆ ಹರೆ ಎಂದು ಈಗ ಕರೆಯುವ ವಾದ್ಯವಿಶೇಷ.

[199] R. K. Mookerji : Ancient Indian Eduction, p. 352.

[200] KI. I. 2, 669 A.D.

[201] EC. XI. Dg. 41, 1148 A.D.

ಭಾರತೀಯ ಲಿಪಿಗಳೆಲ್ಲ ಬಹುಮಟ್ಟಿಗೆ ಒಂದೇ ಮೂಲದಿಂದ ಬಂದಿವೆ. ಅಶೋಕನ ಕಾಲದಲ್ಲಿ ಭಾರತದ ವಾಯುವ್ಯ ಮೂಲೆಯಲ್ಲಿ ಖರೋಷ್ಠಿ[202] ಎಂಬ ಲಿಪಿಯೂ, ಉಳಿದೆಡೆಗಳಲ್ಲೆಲ್ಲ ಬ್ರಾಹ್ಮೀ ಲಿಪಿಯೂ ಪ್ರಚಾರದಲ್ಲಿದ್ದುವು. ಖರೋಷ್ಠೀ ಲಿಪಿಯು ಅಲ್ಲಿಯೂ ಮಧ್ಯ ಏಷ್ಯದಲ್ಲಿಯೂ ಮುಂದೆ ಏನಿಲ್ಲವೆಂದರೂ ಆರು ಶತಮಾನಗಳ ಕಾಲ ಬದುಕಿ ಕಣ್ಮರೆಯಾಗಿಹೋಯಿತು. ಆದರೆ ಬ್ರಾಹ್ಮಿಯು[203] ಮಾತ್ರ ವಿಕಾಸವಾಗುತ್ತ ಬಂದು ಇಂದಿನ ಭರತಖಂಡದ ಎಲ್ಲ ಲಿಪಿಗಳಿಗೂ ಮೂಲವಾಯಿತು. (ಬ್ರಾಹ್ಮೀ ಖರೋಷ್ಠೀ ಮುಂತಾದ ಲಿಪಿಗಳ ಮೂಲದ ವಿಷಯದಲ್ಲಿ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ.)[204] ಬ್ರಾಹ್ಮಿಯಲ್ಲಿ ಉತ್ತರಲಿಪಿಯೆಂದೂ ದಕ್ಷಿಣಲಿಪಿಯೆಂದೂ ಎರಡು ಬಹು ಸ್ಥೂಲವಾದ ಭೇದಗಳಿವೆ. ಉತ್ತರಲಿಪಿಯಿಂದ ದೇವನಾಗರಿ, ಬಂಗಾಳಿ, ಶಾರದಾ ಮುಂತಾದ ಲಿಪಿಗಳೂ, ದಕ್ಷಿಣಲಿಪಿಯಿಂದ ತೆಲುಗು–ಕನ್ನಡ, ಗ್ರಂಥಲಿಪಿ, ತಮಿಳು ಮುಂತಾದ ಲಿಪಿಗಳೂ ಬಂದಿವೆ. ಲಿಪಿಗಳ ವಿಕಾಸಕ್ರಮಕ್ಕೆ ಬೂಲರ್ ಎಂಬ ವಿದ್ವಾಂಸರ 'Indian Palaeography' ಎಂಬ ಗ್ರಂಥದ ಜೊತೆಯಲ್ಲಿ ಅಚ್ಚಾಗಿರುವ ಪಟಗಳನ್ನು ನೋಡಬಹುದು.

ಪ್ರಾಚೀನ ಕನ್ನಡಿಗರಿಗೆ ಕೊನೆಯ ಪಕ್ಷ ನಾಲ್ಕು ಲಿಪಿಗಳು ಗೊತ್ತಿದ್ದುವು. ಸಂಧಿವಿಗ್ರಹಿಯೊಬ್ಬನನ್ನು 'ಚತುರ್ಭಾಷಾಲಿಖಿತ್ಥಕ ವಿದ್ಯಾಧರ' ಎಂದು ಶಾಸನವೊಂದು ಕರೆಯುತ್ತದೆ.[205] ತಿಲು, ತಿವುಳ, ಕನ್ನಡ, ನಾಗರ[206]–ಇವೇ ಬಹುಶಃ ಆ ನಾಲ್ಕು ಲಿಪಿಗಳು. ನಾಗರವು ಬಹುಶಃ ನಂದಿನಾಗರಿ ಇರಬಹುದು. ತಿವುಳವು ಬಹುಶಃ ತಮಿಳು ಲಿಪಿ ಇರಬೇಕು. ಇದನ್ನು 'ದ್ರಾವಿಳ' ಎಂದೂ ಶಾಸನವೊಂದರಲ್ಲಿ ಕರೆದಿದೆ.[207] ತಿಲು ಎಂಬುದು ತೆಲುಗು ಲಿಪಿಯಿದ್ದರೂ ಇರಬಹುದು. ಕನ್ನಡ ಮತ್ತು ತೆಲುಗು ಲಿಪಿಗಳು ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಬೇರೆಯಾದುವೆಂದು ಡಾ|| ಎಸ್. ಶ್ರೀಕಂಠಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ.[208] ಕನ್ನಡ–ತೆಲುಗು ಲಿಪಿಯ ಇತಿಹಾಸದಲ್ಲಿ ಮೂರನೇ ಮತ್ತು ಕೊನೆಯ ಪ್ರಭೇದವನ್ನು ಬೂಲರ್ ಎಂಬ ವಿದ್ವಾಂಸರು ಗುರುತಿಸಿದ್ದಾರೆ.[209] ಆ ಪ್ರಭೇದವನ್ನು ಬರ್ನೆಲ್ ಅವರು 'ಸಂಕ್ರಮಣ ಸ್ಥಿತಿಯ ಪ್ರಭೇದ' ಎಂದು ಕರೆಯುತ್ತಾರೆ.[210] ಈ ಕೊನೆಯ ಪ್ರಭೇದವು ಪೂರ್ವದಲ್ಲಿ ಹನ್ನೊಂದನೇ ಶತಮಾನದ ವೆಂಗಿ ಶಾಸನಗಳಲ್ಲೂ, ಪಶ್ಚಿಮದಲ್ಲಿ ಅದಕ್ಕಿಂತ ಸ್ವಲ್ಪ ಮುಂಚೆ, ಎಂದರೆ ಹತ್ತನೇ ಶತಮಾನದ ಗಂಗರ ಶಾಸನಗಳಲ್ಲೂ ದೊರಕುತ್ತದೆ.[211] ಬಹುಶಃ ಈ ಪೂರ್ವದ ಪ್ರಭೇದವು ತೆಲುಗು ಲಿಪಿಗೂ, ಪಶ್ಚಿಮದ ಪ್ರಭೇದವು ಕನ್ನಡ ಲಿಪಿಗೂ ಮೂಲವಾಗಿದ್ದಿರಬೇಕು. ಅಂತೂ ಕ್ರಿ. ಶ. 1057ರ

---

202 ಇದರ ಮೂಲರೂಪ ಖರಪೊಸ್ತ (>ಖರವೊಸ್ತ=ಕತ್ತೆಯ ಚರ್ಮ) ಎಂದೂ, ಚರ್ಮವು ಒಂದು ಕಾಲದಲ್ಲಿ ಬರಹದ ಸಾಮುಗ್ರಿಯಾಗಿದ್ದುದರಿಂದ 'ಖರಪೊಸ್ತ' ಎಂಬುದು ಲಿಪಿಯನ್ನೂ ಸೂಚಿಸಲಾರಂಭವಾಯಿತೆಂದೂ ವಿದ್ವಾಂಸರ ಅಭಿಪ್ರಾಯ. ಖರಪೊಸ್ತ ಅಥವಾ ಖರವೊಸ್ತ ಎಂಬುದು ಅರ್ಥವಾಗದೆ ಒಸ್ತ ಬದಲು ಓಷ್ಠವನ್ನು (=ತುಟಿ) ಸೇರಿಸಿ 'ಖರೋಷ್ಠ' ಎಂದು ಭಾರತೀಯರು ಮಾಡಿಕೊಂಡಿರಬಹುದು ಎಂದು ಪ್ರಜಿಲುಸ್ಕಿ (Przylusky) ಎಂಬ ವಿದ್ವಾಂಸರು ಅಭಿಪ್ರಾಯಪಡುತ್ತಾರೆ (C. C. Dasgupta : The development of the Kharoṣṭhi script, p. 278).

203 ಹಿಂದೂಗಳು ಬ್ರಾಹ್ಮೀ ಲಿಪಿಗೆ ಬ್ರಹ್ಮನೇ ಮೂಲನೆಂದೂ, ಜೈನರು ಆದಿವೃಷಭನೇ ಮೂಲನೆಂದೂ ಹೇಳುತ್ತಾರೆ. ಆದಿವೃಷಭನು ಈ ಲಿಪಿಯನ್ನು ತನ್ನ ಮಗಳು ಬ್ರಹ್ಮಿಗೆ ಹೇಳಿಕೊಟ್ಟನು ಎಂದು ಜೈನರು ನಂಬುತ್ತಾರೆ.

204 ವಿವರಗಳಿಗೆ ನೋಡಿ, R. B. Pandey : Indian Palaeography, pp. 29–57.

205 EC. V. Ag. 99, 1079 A.D.

206 SII. IX. i. 118, 1057 A.D.

207 EC. VI. Mg. 22, 1129 A.D.

208 ಭಾರತೀಯ ಸಂಸ್ಕೃತಿ, ಪು. 277.

209 Bühler : Indian Palaeography, p. 87.

210 ಅದೇ.

211 ಅದೇ.

ಹೊತ್ತಿಗೆ ಕನ್ನಡ ಮತ್ತು ತೆಲುಗು ಲಿಪಿಗಳು ಬೇರೆಬೇರೆ ಎಂಬ ಭಾವನೆ ಜನರಿಗೆ ಬರುವಷ್ಟು ಕನ್ನಡ–ತೆಲುಗು ಲಿಪಿಯು ಎರಡಾಗಿ ಒಡೆದಿತ್ತು ಎಂದು ಭಾವಿಸಬಹುದು.

ರಾಜನ ಸಂಧಿವಿಗ್ರಹಿಯಾಗುವ ಅಧಿಕಾರಿಯು ಅನೇಕ ಭಾಷೆಗಳನ್ನೂ ಲಿಪಿಗಳನ್ನೂ ಅರಿತಿರಬೇಕಿತ್ತು. ರವಿಚಮೂಪತಿ ಎಂಬ ಬ್ರಾಹ್ಮಣ ವಿದ್ವಾಂಸನು ವಾಚನ ಕಲೆಯಲ್ಲಿ ನಿಷ್ಣಾತನೂ, ಅನೇಕ ಲಿಪಿಗಳನ್ನು ತಿಳಿದವನೂ ಆಗಿದ್ದನು. ಅವನು ತನ್ನ 'ವಿದ್ಯಾವಿಭವ'ದಿಂದ ಲಾಳಸಂಧಿವಿಗ್ರಹಿ ಪದವಿಯನ್ನು ಪಡೆದಂತೆ ಶಾಸನವೊಂದು ತಿಳಿಸುತ್ತದೆ.[212]

ಶಾಸನದ ವಿಷಯವನ್ನು ಕಲ್ಲಿನಮೇಲೆ ಕೊರೆಯುವಾಗ ಒಬ್ಬನು ಬಳಪದಿಂದ ಬರೆದುಕೊಡುತ್ತಿದ್ದನೆಂದೂ, ಶಿಲ್ಪಿಯು ಅದರಂತೆ ಕೆತ್ತುತ್ತಿದ್ದನೆಂದೂ ಮೊದಮೊದಲ ಅಧ್ಯಾಯಗಳಲ್ಲಿ ನೋಡಿದ್ದೇವೆ (ಈ ಎರಡು ಕೆಲಸಗಳನ್ನೂ ಶಿಲ್ಪಿಯೊಬ್ಬನೇ ಮಾಡಿರುವುದೂ ಉಂಟು). ಇವರು ಶಾಸನಗಳ ಕೊನೆಯಲ್ಲಿ ತಮ್ಮ ಲಿಪಿಗಳ ಚೆಲುವನ್ನು ಹೊಗಳಿಕೊಂಡಿರುವುದುಂಟು. ಬರಹವು ಮುದ್ದಾಗಿದ್ದಷ್ಟು, ಸ್ಪಷ್ಟವಾಗಿದ್ದಷ್ಟು ಅದರ ಬೆಲೆ ಹೆಚ್ಚು. ಮುದ್ದಾಗಿ ಬರೆಯುವುದೂ ಒಂದು ಕಲೆಯೇ, ಬರೆದಂತೆ ಕೆತ್ತುವುದೂ ಒಂದು ಕಲೆಯೇ (ಈ ಎರಡು ಕಲೆಗಳನ್ನೂ ಸಂಬಂಧಿಸಿದವರು ಚೆನ್ನಾಗಿ ಕರಗತಮಾಡಿಕೊಳ್ಳದುದರ ಫಲವಾಗಿ ನಮಗೆ ದೊರಕುವ ಬಹುಪಾಲು ಶಾಸನಗಳಲ್ಲಿ ಸಾವಿರಾರು ಅಕ್ಷರದೋಷಗಳು ಕಾಣಿಸಿಕೊಳ್ಳುತ್ತವೆ). ಮುದ್ದಣಾಂಕ ಎನ್ನುವವನು ತಾನು ಅಕ್ಷರಗಳನ್ನು ಬಹಳ ವಿರಳವಾಗಿಯೂ ಬರೆಯದೆ, ಬಹಳ ದಟ್ಟವಾಗಿಯೂ ಬರೆಯದೆ, ಯಾರಿಗೂ ಸಂದೇಹಬಾರದಂತೆ ಬರೆಯುವ ಸಾಮರ್ಥ್ಯವುಳ್ಳವನು ಎಂದು ಹೇಳಿಕೊಂಡಿದ್ದಾನೆ. ಅವನ ಬರಹವನ್ನು ಕೆತ್ತಿದ ಇಕ್ಕುಡ ಎಂಬ ಶಿಲ್ಪಿಯು ತಾನು ಹೊಕ್ಕುಳು ತಲೆಕಟ್ಟು ಮುಂತಾದ ಅಕ್ಷರಗಳ ಭಾಗಗಳನ್ನು ನೋಡಿ ಕೆತ್ತಬಲ್ಲವನು ಎಂದು ಹೇಳಿಕೊಂಡಿದ್ದಾನೆ.[213] ತಾವು 'ಶೀಘ್ರಲಿಖಿತ'ದಲ್ಲಿ ನಿಷ್ಣಾತರೆಂದು ಹಲವು ಶಿಲ್ಪಿಗಳ ಹೇಳಿಕೆ.[214] ಇವರಲ್ಲಿ ಹಲವರು ಸಾಕಷ್ಟು ವಿದ್ಯಾವಂತರೂ ಆಗಿದ್ದರೆಂಬುದಕ್ಕೆ ಆಧಾರಗಳಿವೆ.[215]

ಲಿಪಿಗಳನ್ನು ಕೆತ್ತುವವರು ತಾವು ಕೆತ್ತುವ ಅಕ್ಷರಗಳಲ್ಲೇ ನಾನಾ ಪ್ರಾಣಿಗಳ ಚಿತ್ರಗಳನ್ನು ಬಿಡಿಸಿರುವುದಾಗಿ ಹೇಳಿಕೊಂಡಿದ್ದಾರೆ. ಉದಾಹರಣೆಗೆ, ತಾನು ಆನೆ, ಸಿಂಹ, ಗಿಳಿ ಮುಂತಾದ ಪ್ರಾಣಿಗಳ ರೂಪಗಳನ್ನು ಅಕ್ಷರಗಳಲ್ಲಿ ಅಳವಡಿಸಿರುವುದಾಗಿ ಒಬ್ಬ ಶಿಲ್ಪಿ ಹೇಳಿಕೊಂಡಿದ್ದಾನೆ.[216] ಮತ್ತೊಬ್ಬ ಶಿಲ್ಪಿಯೂ ಇದೇ ಸಾಮರ್ಥ್ಯವನ್ನು ಹೇಳಿಕೊಂಡಿದ್ದಾನೆ.[217] ಈ ಅಕ್ಷರಶಿಲ್ಪವು (Calligraphy) ಭಾರತದ ಪ್ರಾಚೀನ ಕಲೆಗಳಲ್ಲೊಂದು. ಸೋಮದೇವನ ಯಶಸ್ತಿಲಕ ಚಂಪುವಿನ ಪ್ರತಿಯನ್ನು ಮಾಡಿದ ರಚ್ಚುಕ ಎಂಬುವನು ತನ್ನ ಸುಂದರ ಅಕ್ಷರಗಳನ್ನು ಸುಂದರಿಯರು ತಮ್ಮ ಪ್ರೇಮಪತ್ರಗಳಲ್ಲಿ ("ಮದನಶಾಸನ ಲೇಖನೇಷು") ಬಳಸಲು ಬಯಸಿದುದಾಗಿ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.[218] ಈ ಕಲೆಯು ಇತ್ತೀಚಿನವರೆಗೂ ಉಳಿದುಕೊಂಡು ಬಂದಿದೆ. ಹದಿನೆಂಟನೆಯ ಶತಮಾನದಲ್ಲಿ ಅಕ್ಷರಶಿಲ್ಪವನ್ನೊಳಗೊಂಡ ಗೀತಗೋವಿಂದದ ಪ್ರತಿಯೊಂದು ರಚಿತವಾಗಿದೆ.[219]

ಅಚ್ಚಿನಮನೆಗಳಿಲ್ಲದಿದ್ದ ಆ ಕಾಲದಲ್ಲಿ ಪುಸ್ತಕಗಳನ್ನು ಪ್ರತಿಮಾಡುವವರ ಅಗತ್ಯ ಬಹುವಾಗಿದ್ದಿರಬೇಕು. ಬಹಳ ಮುದ್ದಾಗಿ ಬರೆಯುವೆವೆಂದು ಹೇಳಿಕೊಂಡ ಕೆಲವರು ತಾವು ಪುಸ್ತಕಗಳನ್ನು ಪ್ರತಿಮಾಡಿಕೊಟ್ಟುದ್ದಾಗಿಯೂ ಹೇಳಿಕೊಂಡಿದ್ದಾರೆ. ಅವುಗಳಲ್ಲಿ ಬಹಳ ಸ್ವಾರಸ್ಯವಾದುದು ಗೂಳಿಗವೆಜ಼ಿನಾಗ ಎಂಬುವನ ಹೇಳಿಕೆ. ಮಹಾಜನರು,

---

212 EI. XII. p. 274, 1077 A.D.

213 EC. XI. Dg. 149, 1113 A.D.

214 EC. V. Bl. 200, 1073 A.D. ; EC. III. Nj. 183, 977 A.D.

215 EC. VII. Sk. 293, 1080 A.D.

216 EC. XI. Cd. 47, 1067 A.D.

217 SII. IX. i. 132, 1068 A.D.

218 YAIC. p. l.

219 IA. I. p. 378. ಅಕ್ಷರ ಶಿಲ್ಪಕ್ಕೆ ಕೆಲವು ನಿದರ್ಶನಗಳು ಇಲ್ಲಿ ದೊರಕುತ್ತವೆ.

ಎಂದರೆ ಬ್ರಾಹ್ಮಣರು, ವೇದವನ್ನು ವಾಚನಮಾಡಲು ಅನುಕೂಲವಾಗುವಂತೆ ಬರೆದುಕೊಟ್ಟಂತೆ ಶಾಸನದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ.[220] ಅನೇಕ ಶತಮಾನಗಳವರೆಗೆ ವೇದಗಳನ್ನು ಗುರುವಿನ ಬಾಯಿಂದ ಕೇಳಿ ತಿಳಿದುಕೊಳ್ಳಬೇಕೇ ಹೊರತು ಪುಸ್ತಕಗಳಿಂದ ತಿಳಿದುಕೊಳ್ಳಕೂಡದು ಎಂಬ ಕಠಿಣ ನಿರ್ಬಂಧವಿತ್ತು. ವೇದಗಳನ್ನು ಬರೆದಿಡುವವರು ("ವೇದಾನಾಂ ಲೇಖಕಾಃ") ನರಕಕ್ಕೆ ಹೋಗುವರೆಂದು ಮಹಾಭಾರತವು ಹೇಳುತ್ತದೆ.[221] ವೇದಗಳನ್ನು ಮೊದಲು ಬರಹಕ್ಕೆ ಇಳಿಸಿದವನು ಕ್ರಿ. ಶ. ಎಂಟು ಅಥವಾ ಒಂಬತ್ತನೆಯ ಶತಮಾನದಲ್ಲಿದ್ದ ವಸುಕ್ರ ಎಂಬ ಕಾಶ್ಮೀರದ ವಿದ್ವಾಂಸ. ವೇದಗಳನ್ನು ಬರೆದಿಡದಿದ್ದರೆ ಅವು ಸಂಪೂರ್ಣವಾಗಿ ನಾಶವಾಗಬಹುದೆಂದು ವಸುಕ್ರನು ಹೆದರಿದನೆಂದು ಅಲ್ಬೆರೂನಿಯು ಹೇಳುತ್ತಾನೆ.[222] ಕನ್ನಡನಾಡಿನಲ್ಲಿ ಕ್ರಿ. ಶ. 951–2ರ ಶಾಸನದಲ್ಲಿ ವೇದಗಳನ್ನು ಬರಹಕ್ಕೆ ಇಳಿಸಿದ ವಿಷಯವು ದೊರಕುವುದು ಬಹು ಗಮನೀಯವಾದ ಅಂಶ.

ಪುಸ್ತಕಗಳನ್ನು ಪ್ರತಿಮಾಡಿಸಿ ದಾನಮಾಡುವ ಒಂದು ಸಂಪ್ರದಾಯವು ಜೈನರಲ್ಲಿ ಬೆಳೆದುಕೊಂಡು ಬಂದಂತೆ ಬೇರೆಯವರಲ್ಲಿ ಬಂದಹಾಗೆ ಕಾಣಿಸಲಿಲ್ಲ. ಜೈನರ ಚತುರ್ವಿಧ ದಾನಗಳಲ್ಲಿ ಶಾಸ್ತ್ರದಾನವೂ[223] ಒಂದು. ಈ ಶಾಸ್ತ್ರದಾನಕ್ಕೆ ಅತ್ಯುತ್ತಮ ಉದಾಹರಣೆ ರನ್ನನ ಅಜಿತಪುರಾಣದಲ್ಲಿ ದೊರಕುತ್ತದೆ. ಅತ್ತಿಮಬ್ಬೆಯ ತಂದೆ ನಾಗಮಯ್ಯನು ಪೊನ್ನನಿಂದ ಶಾಂತಿಪುರಾಣವನ್ನು ಬರೆಯಿಸುತ್ತಾನೆ. ಅತ್ತಿಮಬ್ಬೆಯ ಕಾಲಕ್ಕೆ ಶಾಂತಿಪುರಾಣದ ಪ್ರತಿಗಳು ದುರ್ಲಭವಾಗಿ ಅದು ನಾಶವಾಗಿಹೋಗುವ ಪರಿಸ್ಥಿತಿ ಬಂದಾಗ ಅತ್ತಿಮಬ್ಬೆಯು ಶಾಂತಿಪುರಾಣದ ಸಾವಿರ ಪ್ರತಿಗಳನ್ನು ಮಾಡಿಸಿ ಹಂಚುತ್ತಾಳೆ. ಈ ವಿಷಯವನ್ನು ಹೇಳುವ ಕೆಲವು ಪದ್ಯಗಳು ಶಾಂತಿಪುರಾಣದ ಒಂದು ಹಸ್ತಪ್ರತಿಯ ಕೊನೆಯಲ್ಲಿ ದೊರಕುತ್ತವೆ.[224] ಈ ಸಂಪ್ರದಾಯವು ಹಿಂದೂಗಳಲ್ಲಿಯೂ ಬೌದ್ಧರಲ್ಲಿಯೂ ಸ್ವಲ್ಪಮಟ್ಟಿಗೆ ಇತ್ತು ಎಂಬುದಕ್ಕೆ ಅನ್ಯಾಧಾರಗಳನ್ನು ಕೊಡಬಹುದು. ಪ್ರಪಂಚದ ಹಿತಾಹಿತಗಳು ಜ್ಞಾನವನ್ನು ಅವಲಂಬಿಸಿರುವುದರಿಂದ ಶಾಸ್ತ್ರದಾನವನ್ನು ಶ್ರದ್ಧಾವಂತನಾದವನು ಮಾಡಬೇಕೆಂದು ನಂದಿಪುರಾಣಾದಿಗಳು ಹೇಳುತ್ತವೆ. ನಲಂದಾ ವಿಶ್ವವಿದ್ಯಾನಿಲಯದ 'ರತ್ನಸಾಗರ' ಎಂಬ ಪುಸ್ತಕಭಂಡಾರಕ್ಕೆ ಪುಸ್ತಕಗಳನ್ನು ಕೊಳ್ಳಲು ದೇವಪಾಲ ಎನ್ನುವವನು ಐದು ಹಳ್ಳಿಗಳನ್ನು ಬಿಟ್ಟುಕೊಟ್ಟಿದ್ದಾನೆ.[225] ಕನ್ಹೇರಿಯ ಬೌದ್ಧವಿಹಾರಕ್ಕೆ ಪುಸ್ತಕಗಳನ್ನು ಕೊಳ್ಳಲು ಭದ್ರವಿಷ್ಣು ಎಂಬಾತನು ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾನೆ.[226] ವಾಚನಮಾಡುವಾಗ ಪುಸ್ತಕಗಳನ್ನು ಇಟ್ಟುಕೊಳ್ಳುತ್ತಿದ್ದ ವ್ಯಾಸಪೀಠವನ್ನು 'ಅಟ್ಟವಣೆಕೋಲ್' ಎಂದು ಕರೆಯುತ್ತಿದ್ದರು. ಅದರ ಒಂದು ಚಿತ್ರ ಪಂಪಭಾರತದಲ್ಲಿ ದೊರಕುತ್ತದೆ. ರಥದಿಂದ ಕೆಳಗೆಬಿದ್ದ ಭೀಷ್ಮನು ಮೈತುಂಬ ಬಾಣಗಳು ನಟ್ಟುದರಿಂದ ನೆಲವನ್ನು ಮುಟ್ಟದೆ ಆ ಕಣೆಗಳ ಮೇಲೆ ಮಲಗಿದುದನ್ನು ವ್ಯಾಸಪೀಠದ ಮೇಲಿನ ವೀರಶಿದ್ಧಾಂತದ ಪುಸ್ತಕಕ್ಕೆ[227] ಕವಿ

---

[220] IA. XII. p 257, 951–2 A.D.

[221] Mookherji : Ancient Indian Education, p. 27.

[222] Altekar : Education in Ancient India, p. 147.

[223] "ಧರೆಯೊಳನಂತ ದಿವ್ಯಯತಿಸಂತತಿಗೆ ಅನ್ನಮುನ್ ಆದ ಭೀತಿಯಿಂ ಬರೆ ಪಲರಂಜದಿರೆಂಬಭಯವಾಕ್ಯಮುನ್ ಆತುರರಾಗಿ ಬೇರ್ಪರ್ವರ್ಗಿರದೆ ಶರೀರರಕ್ಷಣಮುನ್ ಓದಲು ಶಾಸ್ತ್ರಮನೀವ ಪೆಂಪಿನಿಂ ಹರಿಯುವೆ ತಾಳ್ದಿದಳು ಪರಹಿತ್ರೋಕ್ತ ಚತುರ್ವಿಧ ದಾನ ಶಕ್ತಿಯಂ." (EC V. Mg. 22, 1129 A.D.)

[224] ಶಾಂತಿಪುರಾಣ, ಪು. 302.

[225] Altekar : Education in Ancient India, p. 310.

[226] The Rāṣṭrakūṭas and their Times, p. 402.

[227] "ತಿಂತಿಣಿಯಾಗೆ ನಟ್ಟ ಕಣೆಯೊಳ್ ನೆಲನುಟ್ಟದೆ ಮೆಯ್ಯೊಳತ್ತಮಿ |
ತ್ತಂ ತೆಱೆದಿರ್ದ ಪುಣ್ಗಳಿಸೆವಕ್ಕರದಂತಿರೆ ನೋಡಿ ಕಲ್ಲಿಮೆಂ |
ಬಂತೆವೊಲಿರ್ದನಟ್ಟವಣೆ ಕೋಲ್ಗಳ ಮೇಲೆಸೆದಿರ್ದ ವೀರಸಿ |
ದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ ||"

(ಪಂಪಭಾರತ, 11. 46).

ಹೋಲಿಸುತ್ತಾನೆ. ಶಾಸನ ಕವಿಯೊಬ್ಬನು, ಪಂಪನನ್ನು ಅನುಕರಿಸಿ, ದೇಕರಸ ಎಂಬಾತನು ತುರುಗೋಳಲ್ಲಿ ಮಡಿದುದನ್ನು ವರ್ಣಿಸುವಾಗ ಬಾಣಗಳಿಂದ ತುಂಬಿದ ದೇಹವು 'ಟವಣೆಯಕೋಲು'ಗಳ ಮೇಲೆ ಎತ್ತಿಟ್ಟ ಪುಸ್ತಕದಂತೆ ಇತ್ತು ಎಂದು ಹೇಳುತ್ತಾನೆ.[228] ಆಸ್ಥಾಪನಿಕ> ಅಟ್ಟವಣೆ> ಟವಣೆ + ಕೋಲ್ —ಇದು ಟವಣೆಯಕೋಲಿನ ನಿಷ್ಪತ್ತಿ.[229]

## ಸ್ತ್ರೀಯರ ವಿದ್ಯಾಭ್ಯಾಸ

ವೈದಿಕಯುಗದಲ್ಲಿ ಹಲವರು ಸ್ತ್ರೀಯರು ಬಹು ದೊಡ್ಡ ವಿದ್ಯಾವತಿಯರಾಗಿ, ಸಾಧಕರಾಗಿ ಪುರುಷರಿಗೆ ಸಮಾನವಾದ ಸ್ಥಾನವನ್ನು ದೊರಕಿಸಿಕೊಂಡಿದ್ದರು. ಹಲವಾರು ಸ್ತ್ರೀಯರು ವೈದಿಕ ಮಂತ್ರಗಳನ್ನು ರಚಿಸಿದಂತೆ ತಿಳಿದುಬರುತ್ತದೆ. ಉದಾಹರಣೆಗೆ ಋಗ್ವೇದ V. 28ನೆಯ ಮಂತ್ರವು ವಿಶ್ವವಾರಾ ಎಂಬುವಳಿಂದಲೂ, ಋಗ್ವೇದ VIII. 91ನೆಯ ಮಂತ್ರವು ಅಪಾಲಾ ಎಂಬುವಳಿಂದಲೂ, ಋಗ್ವೇದ X. 39 ನೆಯ ಮಂತ್ರವು ಘೋಷಾಕಾಕ್ಷೀವತೀ ಎಂಬುವಳಿಂದಲೂ ರಚಿತವಾಗಿವೆ.[230] ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯನಿಗೂ ಗಾರ್ಗಿಗೂ ನಡೆದ ಚರ್ಚೆ ಪ್ರಸಿದ್ಧವಾದುದು. ಅವಳು ಯಾಜ್ಞವಲ್ಕ್ಯನಿಗೆ ಅತ್ಯಂತ ಗಹನವಾದ ಪ್ರಶ್ನೆಗಳನ್ನು ಹಾಕುತ್ತಾಳೆ.[231] ಅದೇ ಯಾಜ್ಞವಲ್ಕ್ಯನ ಇಬ್ಬರು ಪತ್ನಿಯರಲ್ಲಿ ಒಬ್ಬಳಾದ ಮೈತ್ರೇಯಿಯೂ ಆಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದಳು.[232] ಅದೇ ಉಪನಿಷತ್ತಿನಲ್ಲಿ ಪಂಡಿತೆಯಾದ ಮಗಳನ್ನು ಬಯಸುವ ಪ್ರಾರ್ಥನೆಯನ್ನೊಳಗೊಂಡ ಒಂದು ವಿಧಿ ಕರ್ಮದ ಹೆಸರಿದೆ.[233] ಸೂತ್ರಗಳ ಕಾಲದಲ್ಲೂ ವೈದಿಕಯುಗದ ಇದೇ ಪರಂಪರೆ ಬೆಳೆದುಕೊಂಡು ಬಂದಿತು. ಪತ್ನಿಯಾದವಳು ಯಜ್ಞಗಳಲ್ಲಿ ಭಾಗವಹಿಸಲು ಶಕ್ತಳಾಗಬೇಕಾದರೆ ಅವಳನ್ನು ವಿದ್ಯಾವಂತಳನ್ನಾಗಿ ಮಾಡಿರಬೇಕು ಎಂದು ಗೋಭಿಲ ಗೃಹ್ಯಸೂತ್ರವು ಹೇಳುತ್ತದೆ.[234] ಇತಿಹಾಸಗಳ ಯುಗದಲ್ಲಿಯೂ ಸ್ತ್ರೀಯರು ವೇದಾಧ್ಯಾಯಿಗಳಾಗಿದ್ದರೆಂದು ತಿಳಿದು ಬರುತ್ತದೆ. ರಾಮಾಯಣದ ಕೌಸಲ್ಯೆ ಮತ್ತು ತಾರೆಯರಿಗೆ 'ಮಂತ್ರವಿತ್' ಎಂಬ ವಿಶೇಷಣವಿರುವುದು ಗಮನಾರ್ಹ. ಧರ್ಮಶಾಸ್ತ್ರಗಳ ಕಾಲಕ್ಕೆ ಬಂದರೆ ಇಡೀ ಚಿತ್ರ ಬದಲಾಯಿಸುತ್ತದೆ. ಸ್ತ್ರೀಯರು ಅಧ್ಯಯನವನ್ನು ನಡೆಸಿದ ಯಾವ ಗುರುಕುಲದ ಹೆಸರೂ ಧರ್ಮಶಾಸ್ತ್ರಗಳಲ್ಲಿಲ್ಲ. ಹುಡುಗಿಯ ಎಂಟು ಅಥವಾ ಹನ್ನೆರಡನೆಯ ವಯಸ್ಸಿನಲ್ಲಿ ಅವಳನ್ನು ಮದುವೆಮಾಡಿಕೊಡಬೇಕೆಂದು ಸ್ಮೃತಿಗಳು ವಿಧಿಸಿರುವಾಗ ಅವಳ ವಿದ್ಯಾಭ್ಯಾಸಕ್ಕೆ ಸಮಯವೆಲ್ಲಿದೆ? ಮನುವಿನ ಪ್ರಕಾರ ಸ್ತ್ರೀಯು ಉತ್ತಮ ಗೃಹಿಣಿಯೂ, ಆದರ್ಶಮಾತೆಯೂ ಆಗಿದ್ದರೆ ಸಾಕು. ಅವಳು ತನ್ನ ಪತಿಯೊಡನೆ ವಾಸಿಸುವುದು ಶಿಷ್ಯನು ಗುರುವಿನ ಮನೆಯಲ್ಲಿರುವುದಕ್ಕೆ ಸಮಾನ. ಮನೆಯ ಕೆಲಸಕಾರ್ಯಗಳೇ ಸಂಧ್ಯಾವಂದನ ಇತ್ಯಾದಿ ಕರ್ಮಗಳಿಗೆ ಸಮಾನ.[235] ಉತ್ತಮ ವಧುವಿನ ಅರ್ಹತೆಗಳಲ್ಲಿ ವಿದ್ಯೆಯೂ ಒಂದು ಎಂದು ಮನು ಭಾವಿಸಿಲ್ಲ. ಇತಿಹಾಸಗಳ ಕಾಲದ ನಂತರ ಸ್ತ್ರೀಯರ ವಿದ್ಯಾಭ್ಯಾಸವನ್ನು

---

228 "ಹೊತ್ತಗೆಯ ಟವಣೆ ಕೋಲ್ಗಳಲೆತ್ತಿದ ತೆಱದಂತೆ ಸರದ ತಂದಲು ತನುವಂ ತೆತ್ತಿಸಲ್ಕಮರ ಕಾಂತಾ ಜತ್ತಕಿಯರುಯ್ದು ದೇಕಂ ನಾಕಕ್ಕೋದಂ" (EC. XII. ĊK. 18, 1149 A.D.).

229 ಡಿ. ಎಲ್. ನರಸಿಂಹಾಚಾರ್ : ಶಬ್ದವಿಹಾರ, ಪು 46–47.

230 History of Dharmaśāstra, II. i, p. 365.

231 ಬೃಹದಾರಣ್ಯಕೋಪನಿಷತ್ (ಅನು : ಸ್ವಾಮಿ ಆದಿದೇವಾನಂದ), ಗಾರ್ಗೀ ಯಾಜ್ಞವಲ್ಕ್ಯರ ಸಂಭಾಷಣೆ— ಪು. 199–201 ; 217–227. ಯಾಜ್ಞವಲ್ಕ್ಯ ಮೈತ್ರೇಯಿಯರ ಸಂಭಾಷಣೆ, ಮೈತ್ರೇಯಿಗೆ ಆತ್ಮತತ್ವದ ಉಪದೇಶ, ಪು.131–146.

232 ಅದೇ.

233 ಅದೇ, Vi, 4. 17.

234 Mookherji : Ancient Indian Education, p. 208.

235 Kewal Motwani : Manudharma Śāstra, pp. 111–12.

ಜನರು ಸಂಪೂರ್ಣವಾಗಿ ಉಪೇಕ್ಷಿಸಿದ್ದರು ಎಂದು ಸ್ಪಷ್ಟವಾಗುತ್ತದೆ.[236] ಸ್ಮೃತಿಗಳ ಹೇಳಿಕೆಗಳ ಫಲವಾಗಿಯೇ ಇರಬಹುದು, ಪ್ರಾಚೀನ ಭಾರತದ ವಿಶ್ವವಿದ್ಯಾನಿಲಯಗಳಲ್ಲಿ ಯಾವ ವಿದ್ಯಾರ್ಥಿನಿಯೂ ಅಧ್ಯಯನಮಾಡಿದಂತೆ ಕಂಡುಬರುವುದಿಲ್ಲ.[237]

ಪ್ರಾಚೀನ ಕರ್ನಾಟಕದ ಸ್ತ್ರೀವಿದ್ಯಾಭ್ಯಾಸದ ಚಿತ್ರವು ಶೋಚನೀಯವಾದುದು. ನಮ್ಮ ಅಧ್ಯಯನದ ಕಾಲವು ಆರಂಭವಾಗುವುದೇ ಕ್ರಿ. ಶ. 450ರಿಂದ. ವಿದ್ಯಾಭ್ಯಾಸದ ಆರಂಭದ ಸಂಕೇತವಾದ ಉಪನಯನ ಸಂಸ್ಕಾರವನ್ನು ಸ್ತ್ರೀಯರಿಗೆ ಕ್ರಿ. ಶ. ಮೂರು ಅಥವಾ ನಾಲ್ಕನೆಯ ಶತಮಾನದಲ್ಲಿಯೇ ತಪ್ಪಿಸಿದರು.[238] ಅವರು ಉತ್ತಮವಾದ ವಿದ್ಯಾಭ್ಯಾಸಕ್ಕೆ ಅನರ್ಹರು ಎಂಬ ಭಾವನೆ ಬಲಿಯಿತು. ಆದ್ದರಿಂದಲೇ ಕನ್ನಡ ಶಾಸನಗಳಲ್ಲಿ ಯಾವ ವಿದ್ಯಾರ್ಥಿನಿಯ ಹೆಸರೂ, ಪಂಡಿತೆಯ ಹೆಸರೂ ಕಂಡುಬರುವುದಿಲ್ಲ. ವಿದ್ಯಾಭ್ಯಾಸಕ್ಕಾಗಿ ಕೊಟ್ಟ ದತ್ತಿಗಳೆಲ್ಲ ಪುರುಷರ ವಿದ್ಯಾಭ್ಯಾಸಕ್ಕಾಗಿ ಮೀಸಲು. ಆದರೂ ರಾಜಮನೆತನದ ಸ್ತ್ರೀಯರು, ಪ್ರಧಾನಮಂತ್ರಿ, ದಂಡನಾಯಕ ಮುಂತಾದ ದೊಡ್ಡ ಅಧಿಕಾರಿಗಳ ಮನೆಯ ಹೆಣ್ಣುಮಕ್ಕಳು ತಕ್ಕಮಟ್ಟಿಗೆ ವಿದ್ಯಾವತಿಯರಾಗಿರುತ್ತಿದ್ದರು. ಇಂತಹ ಶ್ರೀಮಂತ ಮನೆತನಗಳಲ್ಲೂ ಓದುಬರಹದ ವಿದ್ಯಾಭ್ಯಾಸಕ್ಕಿಂತ ನರ್ತನ, ಸಂಗೀತಗಳಂತಹ ಕಲೆಗಳ ಅಭ್ಯಾಸಕ್ಕೆ ಹೆಚ್ಚು ಮಾನ್ಯತೆ ಇದ್ದಂತೆ ಊಹಿಸಬಹುದು. ಅಂತಹ ಕೆಲವು ವಿದ್ಯಾವತಿಯರ, ಕಲಾವಿದೆಯರ ಹೆಸರುಗಳನ್ನು ಕೆಳಗೆ ಕೊಡುತ್ತೇವೆ.

ಸುಮಾರು 900ರ ಶಾಸನವೊಂದರಲ್ಲಿ[239] ನಾಗಾರ್ಜುನಯ್ಯ ಮತ್ತು ನಂದಿಂಗೆಯಬ್ಬೆಯ ಮಗಳು 'ಸಾಮಿನಿರ್ಮಡಿ'[240] ಎಂಬಾಕೆಯು 'ಸರ್ವಶಾಸ್ತ್ರ ಪ್ರಸಿದ್ಧಿ'ಯಾಗಿದ್ದಳು ಎಂದಿದೆ. ನಮಗೆ ತಿಳಿದಮಟ್ಟಿಗೆ ಸ್ತ್ರೀಯರಲ್ಲಿ ಕೆಲವರಾದರೂ ಎಲ್ಲ ಶಾಸ್ತ್ರಗಳಲ್ಲಿ ಪರಿಣತಿಯನ್ನು ಹೊಂದಿರುವಷ್ಟು ಪಾಂಡಿತ್ಯವನ್ನು ಪಡೆದವರಿದ್ದರು ಎಂಬುದಕ್ಕೆ ಈ ಶಾಸನವೊಂದೇ ಆಧಾರ. ಮಹಾ ಸಾಮಂತ ಶೂದ್ರಕಾಂಕನ ಹೆಂಡತಿ ಜಕ್ಕಿ ಸುಂದರಿಯನ್ನು 'ಸಹಜಸರಸ್ವತಿ' ಎಂದು ಶಾಸನವೊಂದು ಕರೆಯುತ್ತದೆ.[241] ಈ ವಿಶೇಷಣವು ಅವಳ ಕಲಾಪ್ರೌಢಿಮೆಯನ್ನು ಸೂಚಿಸಬಹುದು. ತ್ರಿಭುವನಮಲ್ಲದೇವನ ಪಟ್ಟದ ರಾಣಿಯಾದ ಹಿರಿಯ ಕೇತಲದೇವಿಯು 'ಅನೇಕ ದೇಶಭಾ.... ಸಂಗೀತ ವಿದ್ಯಾಧರಿ'ಯಾಗಿದ್ದಳು.[242] ಎಂದರೆ, ಅವಳು ಅನೇಕ ದೇಶಭಾಷೆಗಳ ಸಂಗೀತದಲ್ಲಿ ಪರಿಣತಿಯನ್ನು ಪಡೆದಿದ್ದಳು.[242.1] ಅವಳನ್ನು ಸಕಳಕಳಾಧರಿಯೆಂದೂ, ಅಭಿನವಸರಸ್ವತಿಯೆಂದೂ ಮೇಲಿನ ಶಾಸನವು ಪ್ರಶಂಸಿಸುತ್ತದೆ. ರವಿದೇವ ದಂಡಾಧಿಪನ ಪತ್ನಿ ರೆಬ್ಬಲದೇವಿ 'ಪ್ರತಿಭಾಸರಸ್ವತಿ' ಎನ್ನಿಸಿಕೊಂಡಿದ್ದಳು.[243] ತ್ರಿಭುವನಮಲ್ಲನ

---

[236] Indra : The Status of Women in Ancient India, p. 143.

[237] ಅದೇ, ಪು 144.

[238] Altekar : Education in Ancient India, p. 233.

[239] EC. X. Bp. 65, C. 900 A.D. "...ಸಾಮಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ" ಎಂದು ಶಾಸನದಲ್ಲಿದೆ. ಇದರ ಅರ್ಥ ಸ್ವಲ್ಪ ಅಸ್ಪಷ್ಟವಾಗಿದೆ.

[240] ಇರ್ಮಡಿ ಎಂದು ಕೊನೆಯಾಗುವ ಸ್ತ್ರೀಯರ ಹಲವು ಹೆಸರುಗಳು ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಕಂಡುಬರುತ್ತವೆ. ಲೋಕೇತಿ ನಿಮ್ಮಡಿ ಎಂಬ ಹೆಸರು ಶಾಸನವೊಂದರಲ್ಲಿದೆ (BKI. I. i. 2.).

[241] EC. XI. Cd. 74, 968 A.D.

[242] SII. IX. i. 159, C. 1090 A.D.

[242.1] ಬೇರೆ ಬೇರೆ ದೇಶೀಯ ಭಾಷೆಗಳಲ್ಲಿ ರಚಿತವಾಗಿದ್ದ ಸಂಗೀತಕೃತಿ ಅಥವಾ ಕೀರ್ತನೆಗಳನ್ನು ಅವಳು ಬಲ್ಲವಳಾಗಿದ್ದಳು ಎಂಬುದು ಈ ಉಕ್ತಿಯ ಅಭಿಪ್ರಾಯವಿದ್ದಿರಬಹುದು. ಆದರೆ ಪ್ರಾಚೀನ ಕನ್ನಡ ಕೀರ್ತನೆಗಳಲ್ಲಿ ಯಾವೂ ಇಲ್ಲಿಯವರೆಗೆ ಉಳಿದುಕೊಂಡು ಬಂದಿಲ್ಲ.

[243] SII. IX. i. 158, 1090 A.D.

ಮತ್ತೊಬ್ಬ ಪತ್ನಿ ಅಭಿನವಸರಸ್ವತಿ ಚಂದಲದೇವಿಯು ಋಗ್ವೇದ ಖಂಡಿಕ ಮತ್ತು ಶಾಸ್ತ್ರ ಖಂಡಿಕಗಳಿಗೆ ದತ್ತಿಯನ್ನು ಬಿಟ್ಟುಕೊಟ್ಟಿದ್ದಾಳೆ.[244] ವಿದ್ಯೆಯ ವಿಷಯದಲ್ಲಿ ಅವಳಿಗೆ ಇದ್ದ ಆಸಕ್ತಿಗೆ ಇದು ಗುರುತು. ಕದಂಬ ವಂಶದ ಸಾಮಂತರಾಜ ದಯಾಸಿಂಹನ ರಾಣಿ ಮೇಚಲದೇವಿಯು 'ಅತಿ ಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲ್' ಎನ್ನಿಸಿಕೊಂಡಿದ್ದಳು.[245] ಗಂಗರಾಜನ ಹೆಂಡತಿ ಲಕ್ಷ್ಮಲೆಯು ಒಬ್ಬ ದೊಡ್ಡ ಪಂಡಿತೆ ಎನ್ನಿಸಿಕೊಂಡಿದ್ದಳು.[246] ವಿಷ್ಣುವರ್ಧನನ ಹೆಂಡತಿ ಶಾಂತಲೆ ಒಬ್ಬ ಅತ್ಯಪೂರ್ವ ವ್ಯಕ್ತಿ. ಅವಳಿಗೆ ಸಕಳಕಳಾಗಮಗಳಲ್ಲಿಯೂ ಪರಿಣತಿಯಿತ್ತು. ಅವಳು ವಿವೇಕದಲ್ಲಿ ಬೃಹಸ್ಪತಿಗೆ ಸಮಾನೆ, ಗೀತ ವಾದ್ಯ ನೃತ್ಯಾದಿಗಳಿಗೆ ಸೂತ್ರಧಾರೆ ಎಂದು ಮುಂತಾಗಿ ಶಾಸನಗಳು ಹೊಗಳುತ್ತವೆ.[247] ಭವ್ಯರಾಜನ ಪತ್ನಿ ಗಂಗಾದೇವಿಯು ವಿದ್ಯಾಪರಿಣತಿಯಲ್ಲಿ ಸರಸ್ವತಿಯ ಸಹಚರಿಯಾಗಿದ್ದಳು.[248]

ಹೀಗೆ ರಾಜಮನೆತನಗಳ ಮತ್ತು ಶ್ರೀಮಂತರ ಮನೆಗಳ ಸ್ತ್ರೀಯರು ತಕ್ಕಮಟ್ಟಿಗೆ ವಿದ್ಯಾವತಿಯರಾಗಿರುತ್ತಿದ್ದರು. ಕಲೆಗಳಲ್ಲಿ ವಿಶೇಷ ಪರಿಣತಿಯನ್ನು ಪಡೆದಿರುತ್ತಿದ್ದರು(ದೇವದಾಸಿಯರು ಕಲಾಪರಿಣತರಾಗಿದ್ದರೆಂಬ ವಿಷಯವು ಹಿಂದಿನ ಅಧ್ಯಾಯವೊಂದರಲ್ಲಿ ಬಂದಿದೆ). ಉಳಿದ ಸಾಮಾನ್ಯ ಸ್ತ್ರೀಯರು ವಿದ್ಯಾವತಿಯರಾಗುವ ವಿಷಯದಲ್ಲಿ ಸಮಾಜವು ಬಹುಮಟ್ಟಿಗೆ ಔದಾಸೀನ್ಯವನ್ನು ತೋರಿದೆ. ಇದೇ ಮಾತನ್ನು ಜೈನ ಸಮಾಜಕ್ಕೂ ಅನ್ವಯಿಸಬಹುದು. ಅವರಲ್ಲಿ ಕಂತಿಯರೆಂಬ ಹೆಸರಿನ ಸನ್ಯಾಸಿನಿಯರ ತಪಸ್ಸನ್ನು ಸಂಯಮವನ್ನು ಶಾಸನಗಳು ಪ್ರಶಂಸಿಸುವಂತೆ ವಿದ್ವತ್ತನ್ನು ಪ್ರಶಂಸಿಸಿಲ್ಲ. ಎಂದರೆ ಅವರು ಸಂಪೂರ್ಣವಾಗಿ ಅವಿದ್ಯಾವತಿಯರಾಗಿದ್ದರೆಂದಲ್ಲ. ಆದರೆ ದೊಡ್ಡ ವಿದ್ಯಾವತಿಯರಂತೂ ಆಗಿದ್ದಿಲ್ಲವೆಂದು ಬಹುಮಟ್ಟಿಗೆ ಹೇಳಬಹುದು. ನಮಗೆ ತಿಳಿದಮಟ್ಟಿಗೆ ಯಾವ ಸ್ತ್ರೀ ಲೇಖಕಿಯೂ ಶಾಸನವನ್ನು ರಚಿಸಿಲ್ಲ.

ಕನ್ನಡ ಸಾಹಿತ್ಯ ಚರಿತ್ರೆಯೂ ಇದನ್ನೇ ಪೋಷಿಸುತ್ತದೆ. ಕವಿಚರಿತೆಯ ಪ್ರಕಾರ ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ನಾಗಚಂದ್ರನ ಸಮಕಾಲೀನಳಾದ ಕಂತಿಯೇ ಕನ್ನಡದ ಮೊದಲ ಕವಯತ್ರಿ. ಕಂತಿಯ ಕಾಲವು ಖಚಿತವಾಗಿ ಗೊತ್ತಿಲ್ಲ. ಬಹುಶಃ ಅವಳು ಇನ್ನೂ ಈಚಿನವಳು ಅಥವಾ ಬಹುತೇಕ ಕಲ್ಪಿತ ವ್ಯಕ್ತಿ. ಕನ್ನಡದಲ್ಲಿ ಕೃಷಿಮಾಡಿದ ಮೊತ್ತಮೊದಲ ಸ್ತ್ರೀಯರೆಂದರೆ ವೀರಶೈವ ಶರಣೆಯರು. (12ನೇ ಶ.). ವರ್ಣಾಶ್ರಮದ ಕಟ್ಟುಗಳನ್ನು ಕತ್ತರಿಸಿ ಹಾಕಿದ ವೀರಶೈವ ಧರ್ಮವು ಸ್ಮೃತ್ಯಾದಿಗಳನ್ನು ವಿರೋಧಿಸಿ ನಿಂತು ಸ್ತ್ರೀಯರ ವಿಷಯದಲ್ಲಿ ಉದಾರವಾಗಿ ನಡೆದುಕೊಂಡಿತು. ಈ ಔದಾರ್ಯದ ಫಲವಾಗಿ ಸ್ತ್ರೀಯರು ಧರ್ಮಗ್ರಂಥಗಳನ್ನು ಅಭ್ಯಸಿಸಿ ಪುರುಷರಂತೆ ತಾವೂ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು. ಇದೊಂದು ಅತ್ಯಪೂರ್ವ ಘಟನೆ.

## ದೇಶಭಾಷೆಗಳು

ಉಳಿದ ಕಡೆಗಳಲ್ಲಿ ಹೇಗೋ ಹಾಗೆ ಪ್ರಾಚೀನ ಕರ್ನಾಟಕದಲ್ಲೂ ಸಂಸ್ಕೃತ ಭಾಷೆ ಮತ್ತು ಸಾಹಿತ್ಯಗಳೇ ಅಧ್ಯಯನದ ಮುಖ್ಯ ವಿಷಯಗಳಾಗಿದ್ದುವು. ಜೈನರು ಇವುಗಳ ಜೊತೆಯಲ್ಲಿ ಪ್ರಾಕೃತವನ್ನು ಅಭ್ಯಸಿಸುತ್ತಿದ್ದರು. ಎಲ್ಲಿಯೂ ಕನ್ನಡ ಭಾಷೆ, ಸಾಹಿತ್ಯಗಳ ಅಧ್ಯಯನಕ್ಕಾಗಿ ದತ್ತಿಯನ್ನು ಬಿಟ್ಟುಕೊಟ್ಟಿಲ್ಲ. ಸಂಸ್ಕೃತ ಭಾಷೆಯನ್ನು ಬರೆಯಲು ಕನ್ನಡ ಅಕ್ಷರಗಳನ್ನು ಬಳಸುತ್ತಿದ್ದರು (ಇತ್ತೀಚಿನವರೆಗೆ ದೇವನಾಗರಿ ಲಿಪಿಯನ್ನೇ ಅರಿಯದಿದ್ದ ದೊಡ್ಡ ಸಂಸ್ಕೃತ ವಿದ್ವಾಂಸರಿದ್ದರು). ಸಂಸ್ಕೃತ ಶಾಸನಗಳನ್ನೂ ಕನ್ನಡ ಲಿಪಿಯಲ್ಲೇ ಬರೆದಿರುವುದು

---

244 BKI. I. ii. 142, 1096 A.D.

245 EC. V. Mj. 18, 1095 A.D.

246 EC. II. 128, 1121 A.D.

247 EC. II. 132, 1123 A.D. ; 143, 1131 A.D.

248 EI. XIII. p. 301, 1125 A.D.

ಇದನ್ನು ಪ್ರೋಷಿಸುತ್ತದೆ. ವೇದ, ವೇದಾಂತ, ವ್ಯಾಕರಣಾದಿಗಳನ್ನು ಬೋಧಿಸಲು ದತ್ತಿಯನ್ನು ಬಿಟ್ಟು ಕೊಟ್ಟಿರುವ ಒಂದು ಶಾಸನದಲ್ಲಿ 'ಕನ್ನಡಕ್ಷರಸಿಕ್ಷೆ'ಗೂ ಸ್ಥಾನವನ್ನು ಕೊಡಲಾಗಿದೆ.[249] ಅದೇ ಶಾಸನದಲ್ಲಿ ಬ್ರಾಹ್ಮಣರ ಉಗುರುಗಳನ್ನು ತೆಗೆಯುವ ನಾವಿದನಿಗೆ ನಾಲ್ಕು ಗದ್ಯಾಣಗಳನ್ನೂ, ಕನ್ನಡದ ಉಪಾಧ್ಯಾಯ ನಿಗೆ ಐದು ಗದ್ಯಾಣಗಳನ್ನೂ ಬಿಟ್ಟುಕೊಟ್ಟಂತೆ ಹೇಳಿದೆ. ಕನ್ನಡದುಪಾಧ್ಯಾಯನ ಕರ್ತವ್ಯಗಳೇನೆಂಬುದು ಸ್ಪಷ್ಟವಾಗಿಲ್ಲ. ಕನ್ನಡ ಅಕ್ಷರಗಳನ್ನು ಹೇಳಿಕೊಡುತ್ತಿದ್ದವನು ಅವನೋ ಅಥವಾ ಅದಕ್ಕಾಗಿ ಬೇರೊಬ್ಬರಿದ್ದರೋ ತಿಳಿಯದು. ಅವನು ಕನ್ನಡ ಸಾಹಿತ್ಯವನ್ನು ಬೋಧಿಸುತ್ತಿದ್ದನೇ ಎಂಬ ವಿಷಯವೂ ತಿಳಿಯದು. ಬಹುಶಃ ಕನ್ನಡ ಅಕ್ಷರಗಳನ್ನು ಬಾಲಕರಿಗೆ ಕಲಿಸುವುದು ಮಾತ್ರ ಅವನ ಕರ್ತವ್ಯವಾಗಿತ್ತು. ಕ್ರಿ. ಶ. 1290ರ ಶಾಸನವೊಂದರ ಹೇಳಿಕೆಯೂ ಇದನ್ನೇ ಸಮರ್ಥಿಸುತ್ತದೆ. ಮೈಸೂರು ಜಿಲ್ಲೆಯ ಮಾಲಿಂಗೆ ಎಂಬ ಅಗ್ರಹಾರದಲ್ಲಿನ ಶಾಸನದಲ್ಲಿ ಋಗ್ವೇದವನ್ನು ಓದಿಸುವ ಉಪಾಧ್ಯಾಯರಿಗೆ ಮತ್ತು 'ನಾಗರ ಕನ್ನಡ ತಿಗುಳಾರ್ಯಮನೋದಿಸುವ ಬಾಲಶಿಕ್ಷೆ'ಯ ಉಪಾಧ್ಯಾಯರಿಗೆ ದತ್ತಿಗಳನ್ನು ಕೊಟ್ಟ ವಿಷಯವನ್ನು ಹೇಳಿದೆ.[250] ಇಲ್ಲಿನ ತಿಗುಳಾರ್ಯ ಎಂಬುದು ಬಹುಶಃ ಗ್ರಂಥಲಿಪಿ[251]ಯನ್ನು ಸೂಚಿಸುತ್ತದೆಯೆಂದು ಸಂಪಾದಕರೇ ಸೂಚಿಸುತ್ತಾರೆ. ನಂದಿನಾಗರಿ, ಕನ್ನಡ ಮತ್ತು ಗ್ರಂಥಲಿಪಿಗಳನ್ನು ಉಪಾಧ್ಯಾಯರು ಬಾಲಕರಿಗೆ ಹೇಳಿಕೊಡುತ್ತಿದ್ದಿರಬೇಕು. ಆ ಕಾಲದ ಶಾಸನಗಳೂ ಕೂಡ ಕನ್ನಡ, ಗ್ರಂಥ ಮತ್ತು ನಂದಿನಾಗರಿ ಲಿಪಿಗಳಲ್ಲಿರುವುದು ಗಮನಾರ್ಹ.

ಹೀಗೆ ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸ ಪದ್ಧತಿಯು ಕನ್ನಡ ಸಾಹಿತ್ಯವನ್ನೂ, ಕನ್ನಡ ಭಾಷೆಯನ್ನೂ ಬಹುಮಟ್ಟಿಗೆ ಉಪೇಕ್ಷಿಸಿದೆ. ಕನ್ನಡ ಭಾಷೆ, ಸಾಹಿತ್ಯಗಳು ಅಧ್ಯಯನದ ಮುಖ್ಯ ವಿಷಯಗಳಾಗಿರದಿದ್ದರೂ ಪ್ರಾಸಂಗಿಕವಾಗಿ ಅವುಗಳನ್ನು ಸಂಸ್ಕೃತ ವಿದ್ವಾಂಸರು ಅಭ್ಯಸಿಸುತ್ತಿದ್ದಿರಬೇಕು.[252] ಕನ್ನಡದ ವಿಷಯವಲ್ಲಿ ಉತ್ಸಾಹಿಗಳಾಗಿದ್ದ ಹಲವರು ಗ್ರಂಥರಚನೆ ಮಾಡಿದರು. ಕನ್ನಡದ ವಿಷಯದಲ್ಲಿ ಮೊದಲು ಉತ್ಸಾಹವನ್ನು ತಾಳಿದವರು ಜೈನರು, ಅನಂತರ ಬ್ರಾಹ್ಮಣರು. ಕನ್ನಡಸಾಹಿತ್ಯ ಚರಿತ್ರೆಯನ್ನವಲೋಕಿಸಿ-ದವರಿಗೆ ಇದು ಸುಪ್ರಸಿದ್ಧ ವಿಷಯವಾಗಿದೆ.

---

[249] EC. VII. SK. 185, 1158 A.D. ಇದನ್ನೂ ನೋಡಿ-"ನೈಷ್ಠಿಕ ಮಠಪಾಚಾರ್ಯರ್ ಪಂನೆನಳಿಯಾಗಿ ಕಾಳಾಮುಖ ನೈಷ್ಠಿಕ ತಪೋಧನರಾಗವೇಳ್ಕುಂ| ದೇವರಂಗ ಭೋಗಕ್ಕಂ ಪೂಜೆಗಂ ತಪೋಧನರಾಹಾರ ದಾನಕ್ಕಂ.ಕಂನಡಕ್ಕರವೋದುವ ವಿದ್ಯಾರ್ಥಿಮಾಣಿಗಳಿಗ ವೋದಿಸುಪಾಧ್ಯಾಯರ್ಗಂ ಜೀರ್ಣೋದ್ಧಾರಕ್ಕಂ ಪಾತ್ರಪಾವುಳಕ್ಕಂ ಕಂಬದ ಸೂಳೆಯರ್ಗಂ ಮಠದಾಚಾರ್ಯರಿನಿತುಮಂ ನಡೆಯಿಸುವರು" (Select Stone Inscriptions of Andhra Pradesh, p. 59)

[250] EC. III. Tn, 27, 1290 A.D.

[251] ತಮಿಳುನಾಡಿನಲ್ಲಿ ಸಂಸ್ಕೃತವನ್ನು ಬರೆಯಲು ಬಳಸುತ್ತಿದ್ದ ಲಿಪಿಯೇ ಗ್ರಂಥಲಿಪಿ. ಕನ್ನಡನಾಡಿನ ತುಳು ಪ್ರದೇಶದಲ್ಲಿ 'ತಿಗುಳಾರಿ' ಎಂಬ ಹೆಸರೂ ಅದರಲ್ಲಿ ಲಿಖಿತವಾಗಿರುವ ಪುಸ್ತಕಗಳೂ ದೊರಕುತ್ತವೆ. ಅದು ಒಂದು ರೀತಿಯಲ್ಲಿ ಮಲೆಯಾಳಿ ಲಿಪಿಗೆ ಸಮೀಪವಾಗಿದೆ ಎಂದು ತಿಳಿದುಬಂದಿದೆ. 'ತಿಗುಳಾರ್ಯ'ಕ್ಕೂ ಈ 'ತಿಗುಳಾರಿ'ಗೂ ಸಂಬಂಧವಿರುವಂತೆ ಕಾಣುತ್ತದೆ.

[252] ದಂಡಿಯು ದಶಕುಮಾರಚರಿತೆಯಲ್ಲಿ ರಾಜವಾಹನ ಎಂಬ ರಾಜಕುಮಾರನ ವಿದ್ಯಾಭ್ಯಾಸವನ್ನು ಹೀಗೆ ವರ್ಣಿಸಿದೆ: "ರಾಜವಾಹನಃ........ಸಕಲಲಿಪಿಜ್ಞಾನಂ ನಿಖಿಲದೇಶೀಯಭಾಷಾಪಾಂಡಿತ್ಯಂ........ಷಡಂಗಸಹಿತ ವೇದಸಮುದಾಯ ಕೋವಿದತ್ವಂ ...... ತತ್ತದಾಚಾರೇಭ್ಯಃ ಸಮ್ಯಗ್‌ಲಬ್ಧ್ವಾ". ದಂಡಿಯು ದಕ್ಷಿಣದವನೆಂಬುದಕ್ಕೆ ಸೂಚನೆಗಳಿವೆಯೆಂಬುದನ್ನು (Dasgupta and De : History of Sanskrit Literature, I, p. 208) ನೆನೆದರೆ ಅವನ ಕಾಲಕ್ಕೆ ದೇಶೀಯ ಭಾಷೆಗಳನ್ನು ಬೋಧಿಸುವ ಉಪಾಧ್ಯಾಯರು ದಕ್ಷಿಣಭಾರತದಲ್ಲಿದ್ದಿರಬೇಕು. ಈ ದೇಶೀಯ ಭಾಷಾ ಪಂಡಿತರ ಯಾವ ಹೆಸರುಗಳೂ ಶಾಸನಗಳಲ್ಲಿ ಬಂದಿಲ್ಲ.

## ಪರೀಕ್ಷೆಗಳು ಮತ್ತು ಪದವಿಗಳು

ಈಗಿನಂತೆ ಪ್ರಾಚೀನ ಕಾಲದಲ್ಲಿ ಬಹುಸಂಖ್ಯೆಯ ವಿದ್ಯಾರ್ಥಿಗಳಿಗೆ ಉಪನ್ಯಾಸಮಾಡುವ ಪದ್ಧತಿಯಿರಲಿಲ್ಲ. ಒಬ್ಬೊಬ್ಬ ಉಪಾಧ್ಯಾಯನಿಗೂ ಮಿತಸಂಖ್ಯೆಯ ವಿದ್ಯಾರ್ಥಿಗಳಿರುತ್ತಿದ್ದುದರಿಂದ ವಿದ್ಯಾರ್ಥಿಯ ವ್ಯಾಸಂಗಕ್ಕೆ, ಚಾರಿತ್ರಕ್ಕೆ ಗಮನವೀಯಲು ಸಾಧ್ಯವಾಗುತ್ತಿತ್ತು. ದಕ್ಷಿಣ ಆರ್ಕಾಟ್ ಜಿಲ್ಲೆಯ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಒಬ್ಬೊಬ್ಬ ಅಧ್ಯಾಪಕನಿಗೂ ಸರಾಸರಿ ಇಪ್ಪತ್ತೆರಡು ವಿದ್ಯಾರ್ಥಿಗಳಿದ್ದರು.[253] ಬಹುಶಃ ಇದು ಆ ಕಾಲಕ್ಕೆ ದೊಡ್ಡ ಸಂಖ್ಯೆಯೇ ಸರಿ. ಶಿವಮೊಗ್ಗ ಜಿಲ್ಲೆಯ ತಾಳಗುಂದ ಅಗ್ರಹಾರದ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಆರು ಖಂಡಿಕಕ್ಕೆ ಆರು ಉಪಾಧ್ಯಾಯರೂ, ನಲವತ್ತೆಂಟು ವಿದ್ಯಾರ್ಥಿಗಳೂ ಇದ್ದರು.[254] ಎಂದರೆ ಒಬ್ಬ ಉಪಾಧ್ಯಾಯನಿಗೆ ಎಂಟು ಜನ ವಿದ್ಯಾರ್ಥಿಗಳು. ಹೀಗಿದ್ದುದರಿಂದ ಉಪಾಧ್ಯಾಯರ ಮತ್ತು ವಿದ್ಯಾರ್ಥಿಗಳ ಸಂಬಂಧವು ಅತ್ಯಂತ ನಿಕಟವಾಗಿದ್ದಿರಬೇಕು. ದೇವಸ್ಥಾನಗಳಲ್ಲಿ ಅಭ್ಯಸಿಸುವ ನೈಷ್ಠಿಕ ಬ್ರಹ್ಮಚಾರಿಗಳು ಒಮ್ಮೊಮ್ಮೆ ದೈಹಿಕ ಸುಖಕ್ಕೆ ಬಲಿಬಿದ್ದ ವಿಷಯವನ್ನೂ, ವ್ಯಾಸಂಗದಲ್ಲಿ ಔದಾಸೀನ್ಯವನ್ನು ತೋರಿಸಿದ ವಿಷಯವನ್ನೂ ಶಾಸನಗಳು ಖಂಡಿಸಿವೆ. ಆದರೆ ಎಲ್ಲಿಯೂ ವಿದ್ಯಾರ್ಥಿಗಳು ಉಪಾಧ್ಯಾಯರ ವಿಷಯದಲ್ಲಿ ಅಗೌರವದಿಂದ ನಡೆದುಕೊಂಡ ವಿಷಯವನ್ನು ಎತ್ತಿ ಆಡಿಲ್ಲ. ವಾರದಲ್ಲಿ ಯಾವ ದಿನ ರಜೆಯಿರುತ್ತಿತ್ತು (' ಅನಧ್ಯಯನ ') ಎಂಬುದೂ ಶಾಸನಗಳಿಂದ ಗೊತ್ತಾಗುವುದಿಲ್ಲ. ಬಹುಶಃ ಈಗಿನಂತೆಯೇ ಅಮಾವಾಸ್ಯೆ, ಪೌರ್ಣಮಿ ಮುಂತಾದ ದಿನಗಳು ' ಅನಧ್ಯಯನ'ದ ದಿನಗಳಾಗಿದ್ದಿರಬಹುದೆಂದು ಊಹಿಸಬಹುದು.

ಅಧ್ಯಯನವು ಮುಗಿದನಂತರ ಈಗಿನಂತೆ ವರ್ಷದ ಕೊನೆಯಲ್ಲಿ ಪರೀಕ್ಷೆಗಳನ್ನು ನಡೆಯಿಸುವ ಸಂಪ್ರದಾಯವು ಆ ಕಾಲದಲ್ಲಿದ್ದಿಲ್ಲ. ವಿದ್ಯಾರ್ಥಿಯು ಹಿಂದಿನ ಪಾಠವನ್ನೊಪ್ಪಿಸಿದ ಮೇಲೆಯೇ ಮುಂದಿನ ಪಾಠಕ್ಕೆ ಹೋಗುತ್ತಿದ್ದುದರಿಂದ ವಿದ್ಯಾರ್ಥಿಗೆ ದಿನನಿತ್ಯವೂ ಪರೀಕ್ಷೆಯೇ ಆಗಿತ್ತು. ಮುಂದೆಯೂ ಗೃಹಸ್ಥನಾದ ಮೇಲೆ ಅವನ ವಿದ್ವತ್ತನ್ನು ಪ್ರಶ್ನಿಸಿಯೋ ಅಥವಾ ಅವನ ಧರ್ಮದ ಶ್ರೇಷ್ಠತೆಯನ್ನು ಅಲ್ಲಗಳೆದೋ 'ಶಾಸ್ತ್ರಾರ್ಥ'ಕ್ಕೆ ಯಾರಾದರೂ ಕರೆಯಬಹುದಿತ್ತು. ಇಂತಹ ವಾದಗಳು ನಡೆಯುತ್ತಿದ್ದ ಗೋಷ್ಠಿಗಳ ಚಿತ್ರವನ್ನು ಶಾಸನಗಳು ಕೊಟ್ಟಿಲ್ಲ.[254.1] ಘಟಿಕಾಸ್ಥಾನಗಳಲ್ಲಿ ಇಂತಹ ಚರ್ಚೆಗಳು, ವಾದವಿವಾದಗಳು ನಡೆಯುತ್ತಿದ್ದಿರಬೇಕೆಂಬುದನ್ನು ಹಿಂದೆಯೇ ಸೂಚಿಸಿದ್ದೇವೆ. ಇತ್ಸಿಂಗನು ಇವುಗಳ ಒಂದು ಚಿತ್ರವನ್ನು ಕೊಟ್ಟಿದ್ದಾನೆ– ''ಅವರು (ಬೌದ್ಧರು) ಅನ್ಯಧರ್ಮಗಳ ತತ್ವಗಳನ್ನು ಖಂಡಿಸುವಾಗ ಅವರ ವಿರೋಧಿಗಳ ನಾಲಗೆಯು ಕಟ್ಟಿ ಹೋಗುತ್ತದೆ. ವಿರೋಧಿಗಳು ತಮ್ಮ ಸೋಲನ್ನು ಒಪ್ಪಿಕೊಳ್ಳುತ್ತಾರೆ. ಅವರು ವಿರೋಧಿಗಳನ್ನು ಬಯಲಲ್ಲಿ ಜಿಂಕೆಗಳನ್ನು ಅಟ್ಟುವಂತೆ ಅಟ್ಟುತ್ತಾರೆ. ಹೀಗೆ ಅವರು ಜಂಬೂದ್ವೀಪದ ತುಂಬ ಕೀರ್ತಿಶಾಲಿಗಳಾಗಿ, ದೇವತೆಗಳಿಂದ ಮನುಷ್ಯರಿಂದ ಸನ್ಮಾನಿತರಾಗಿ, ಬುದ್ಧನನ್ನು ಸೇವಿಸುತ್ತ, ಅವನ ಧರ್ಮವನ್ನು ಹರಡುತ್ತ ಎಲ್ಲರನ್ನೂ (ನಿರ್ವಾಣದತ್ತ) ಕೊಂಡೊಯ್ಯುತ್ತಾರೆ."[255] ಶಾಸ್ತ್ರಾರ್ಥಗಳಲ್ಲಿ ವಿದ್ವಾಂಸನ ವಿದ್ವತ್ತಿನ 'ಪರೀಕ್ಷೆ'ಯಾಗುತ್ತಿತ್ತು.

ವಿದ್ಯಾಭ್ಯಾಸವನ್ನು ಮುಗಿಸಿದ ವಿದ್ಯಾರ್ಥಿಯನ್ನು 'ಸ್ನಾತಕ' ಎಂದು ಕರೆಯುತ್ತಿದ್ದರು. ಕರ್ನಾಟಕದ ಶಾಸನಗಳಲ್ಲಿ 'ಸ್ನಾತಕ'ರ (graduates) ವಿಷಯವೂ 'ಸಮಾವರ್ತನ' ಸಮಾರಂಭದ

---

253 Altekar : Education in Ancient India, p. 286.

254 EC. VII. SK. 185, 1158 A.D.

254.1 ಹಿಂದಿನಕಾಲದ ವಾದಗೋಷ್ಠಿಗಳ ಒಂದು ವಿಸ್ತೃತ ಚಿತ್ರವನ್ನು ಪದ್ಮಣಾಂಕನ ಪದ್ಮರಾಜಪುರಾಣದಲ್ಲಿ ನೋಡಬಹುದು. ಅಲ್ಲಿ ಕೆರೆಯ ಪದ್ಮರಸನಿಗೂ ತ್ರಿಭುವನ ತಾತ ಎಂಬ ವಿದ್ವಾಂಸನಿಗೂ ನಡೆದ ವಾದದ ಚಿತ್ರಣವಿದೆ.

255 YAIC. p. 11.

(convocation) ವಿಷಯವೂ ಒಂದೆರಡು ಕಡೆ ಬಂದಿದೆ. ತಾಳಗುಂದದ ಕಾಕುಸ್ಥವರ್ಮನ ಶಾಸನದಲ್ಲಿ[256] 'ಸ್ನಾತಕ'ರ ಹೆಸರು ಬಂದಿದೆ ("ಸಯಿಹ ಭಗವತೋ ದೇವಸ್ಯಾದಿ ದೇವಸ್ಯ ಸಿದ್ಧಾಲಯೇ ಸಿದ್ಧಗಾಂಧರ್ವರಕ್ಷೋಗಣೈಸ್ಸೇವಿತೇ ವಿವಿಧ ನಿಯಮ ಹೋಮದೀಕ್ಷಾಪರೈಃ ಬ್ರಾಹ್ಮಣೈಃ ಸ್ನಾತಕೈಃ ಸ್ತೂಯಮಾನೇ ಸದಾ ಮಂತ್ರವಾದ್ಯೈಃ ಶುಭೈಃ"). ಎಷ್ಟೋ 'ಸ್ನಾತಕ'ರು ತಮ್ಮ ವಿದ್ಯೆ ಮುಗಿದ ಮೇಲೆ, ಉನ್ನತ ವಿದ್ಯಾಭ್ಯಾಸಕ್ಕಾಗಿ ದೇಶಸಂಚಾರ ಮಾಡುತ್ತಿದ್ದರೆಂದು ಕಾಣುತ್ತದೆ. ನಾಗಾವಿಯ ಶಾಸನದಲ್ಲಿ ಅವರ ಹೆಸರು ಏಕದಂಡಿ, ತ್ರಿದಂಡಿ, ಬ್ರಹ್ಮಚಾರಿ, ಹಂಸ, ಪರಮಹಂಸ ಮೊದಲಾದ ಸನ್ಯಾಸಿಗಳ ಜೊತೆ ಬಂದಿರುವುದು ಅದನ್ನು ಪೋಷಿಸುತ್ತದೆ. (Kannada Insciiptions of Andhra Pradesh, p.7). ತಾಳಗುಂದದಿಂದ ಕಂಚಿಗೆ ಉನ್ನತವಿದ್ಯೆಗಾಗಿ ಹೊರಟ ಮಯೂರಶರ್ಮನನ್ನು ಒಬ್ಬ ಸ್ನಾತಕನೆಂದು ಭಾವಿಸಬೇಕಾಗುತ್ತದೆ.[256.1] ಸಮಾವರ್ತನ ಸಮಾರಂಭಕ್ಕಾಗಿ ಒಂದು ಶಾಸನದಲ್ಲಿ ದತ್ತಿಯನ್ನು ಬಿಟ್ಟುಕೊಡಲಾಗಿದೆ.[257] ವಿದ್ಯಾರ್ಥಿಯು ಸಮಾವರ್ತನದ ದಿನ ಕ್ಷೌರಮಾಡಿಸಿಕೊಂಡು, ಸುಗಂಧಜಲದಲ್ಲಿ ಸ್ನಾನಮಾಡಿ, ಹೊಸ ವಸ್ತ್ರಗಳನ್ನುಟ್ಟು, ಅಲಂಕಾರಗಳನ್ನು ಧರಿಸಿ, ಹೋಮಾದಿಗಳು ಮುಗಿದ ಮೇಲೆ, ವಿದ್ವಾಂಸರ ಸಭೆಗೆ ಹೋಗುತ್ತಿದ್ದನು. ಅಲ್ಲಿ ಆವನ ಗುರುವು ಆವನೊಬ್ಬ ವಿದ್ವಾಂಸನೆಂದು ಸಭೆಗೆ ಪರಿಚಯಮಾಡಿಕೊಡುತ್ತಿದ್ದನು. ಕಠಿಣ ನಿಯಮಗಳ ವಿದ್ಯಾರ್ಥಿಜೀವನ ಮುಗಿದು ಧರ್ಮಾವಿರುದ್ಧ ಭೋಗದ ಗೃಹಸ್ಥಜೀವನಕ್ಕೆ ಅಂದಿನಿಂದ ಅರ್ಹನಾಗುತ್ತಿದ್ದನು.[258] ಅವನು ಗೃಹಸ್ಥನಾಗುವ ಮುನ್ನ ಗುರುದಕ್ಷಿಣೆಯನ್ನು ಸಲ್ಲಿಸಬೇಕೆಂದು ಧರ್ಮಗ್ರಂಥಗಳು ವಿಧಿಸುತ್ತವೆ ಗುರುವು ಶಿಷ್ಯನಿಂದ ಯಾವ ಪ್ರತಿಫಲವನ್ನೂ ಮೊದಲೇ ತೆಗೆದುಕೊಳ್ಳದೆ ಪಾಠವನ್ನು ಹೇಳಿದ್ದರೆ ಇದು ಅನ್ವಯಿಸುತ್ತಿತ್ತು. ಪ್ರಾಚೀನ ಕರ್ನಾಟಕದಲ್ಲಿ ಉಪಾಧ್ಯಾಯನಿಗೆ ವ್ಯಕ್ತಿಯೋ ಸಮಾಜವೋ ವಿದ್ಯಾದಾನಕ್ಕಾಗಿ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದುದರಿಂದ ವಿದ್ಯಾರ್ಥಿಗಳು ಗುರುದಕ್ಷಿಣೆಯನ್ನು ಸಲ್ಲಿಸಲೇಬೇಕಾದ ಪ್ರಮೇಯಗಳು ಬಹುಶಃ ಇರುತ್ತಿರಲಿಲ್ಲ. ಹಣವುಳ್ಳವರು ಗುರುದಕ್ಷಿಣೆಯನ್ನು ಸಲ್ಲಿಸಲು ಯಾವ ಪ್ರತಿಬಂಧಕವೂ ಇರಲಿಲ್ಲ. ಆದ್ದರಿಂದ ಹಣವುಳ್ಳವರು ಗುರುದಕ್ಷಿಣೆಯನ್ನು ಸಲ್ಲಿಸುತ್ತಿದ್ದಿರಬಹುದು.

ಆ ಕಾಲದಲ್ಲಿ ಅಧ್ಯಯನವನ್ನು ಮುಗಿಸಿದ ವಿದ್ವಾಂಸರಿಗೆ ಈಗಿನ ಎಂ, ಎ., ಪಿಎಚ್. ಡಿ., ಮುಂತಾದ ಪದವಿಗಳಂತಹ ಪದವಿಗಳನ್ನು (degrees) ಕೊಡುತ್ತಿದ್ದರೇ ಎಂಬುದು ವಿಚಾರಾರ್ಹ ವಿಷಯ. ಕೊಡುತ್ತಿದ್ದರು ಎಂದು ಹೇಳಲು ನಮಗೆ ಶಾಸನಾಧಾರಗಳು ಇಲ್ಲ. ಆದರೂ ಬ್ರಾಹ್ಮಣರ ಹೆಸರುಗಳ ಮುಂದೆ ಬರುವ ಕ್ರಮಿತ (<ಕ್ರಮವಿತ್), ಷಡಂಗಿ (<ಷಡಂಗವಿತ್), ಘೈಸ (<ಘಳಿಸಾಸ—ಘಟಿಕಾಸಾಹಸ), ಭಟ್ಟೋಪಾಧ್ಯಾಯ. ಸಾಮವೇದಿ, ಸರ್ವಜ್ಞ—ಇವುಗಳಲ್ಲಿ ಕೆಲವಾದರೂ ಪದವಿಸೂಚಕಗಳೆಂದು ಹೇಳಬಹುದೆ? ಆರಂಭದಲ್ಲಾದರೂ ಇವು ಪದವಿಸೂಚಕಗಳಾಗಿದ್ದಿರಬೇಕು. ಇವು ಕ್ರಮೇಣ ಹೆಸರುಗಳ ಉತ್ತರ ಪದಗಳಾಗಿ ಪರಿಣಮಿಸಿ ಪದವಿಸೂಚಕತ್ವವನ್ನು ಕಳೆದುಕೊಂಡಿರಬಹುದು. ಮುಂದೆ ಮನೆತನದ ಹೆಸರುಗಳಾಗಿರಬಹುದು. ಭಟ್ಟೋಪಾಧ್ಯಾಯ ಎಂಬುದು ಉಪಾಧ್ಯಾಯವೃತ್ತಿಯನ್ನು ಸೂಚಿಸುವಂತೆ ಕಾಣುತ್ತದೆ. 'ಘೈಸ' ಎಂಬುದು ಪದವಿಯನ್ನು ಸೂಚಿಸುವುದು ಖಚಿತ. ಉಳಿದ ಪದಗಳು ಏನನ್ನು ಸೂಚಿಸುತ್ತವೆ ಎಂಬುದನ್ನು ಹೇಳುವುದು ಕಷ್ಟವಾಗಿದೆ.

---

[256] EC. VII. SK. 176, C. 450 A.D.

[256.1] ಉನ್ನತವಿದ್ಯೆಗಾಗಿ ಕಾಶಿಗೆ ಹೋಗುತ್ತಿದ್ದ ಸ್ನಾತಕನನ್ನು ಗೃಹಸ್ಥಾಶ್ರಮದ ಕಡೆ ತಿರುಗಿಸುತ್ತಿದ್ದುದರ ಅಣಕು ನಾಟಕ ಈಗಿನ 'ಕಾಶೀಯಾತ್ರೆ'ಯಲ್ಲಿದೆ.

[257] "ಅನ್ನಪ್ರಾಶನಕ್ಕಂ ಪೂಸವಣಕ್ಕಂ (= ಪುಂಸವನಕ್ಕಂ) ಚೌಲಕ್ಕಂ ಧರಣಂ ಉಪನಯ [ನಕ್ಕಂ] ಸಮಾವರ್ತನಕ್ಕಂ ಗದ್ಯಾಣಂ ಮದುವೆಗಂ ಆಧಾನಕ್ಕಂ ಪಶು [ವಿ] ಧಿಗಂ ಎರಡು ಗದ್ಯಾಣಂ" (IA. VIII. p. 287, C. 800 A.D.).

[258] ವಿವರಗಳಿಗೆ ನೋಡಿ, Altekar : Education in Ancient India, p. 40.

# X

# ಯುದ್ಧಕಲೆ

## ಮುನ್ನುಡಿ

ಪ್ರಾಚೀನ ಕರ್ನಾಟಕದ ಸಾಮಾಜಿಕ ಮೌಲ್ಯಗಳಲ್ಲಿ 'ಚಾಗ' (=ತ್ಯಾಗ)ದಷ್ಟೇ ಮುಖ್ಯವಾದುದು 'ಬೀರ' (=ವೀರ). ಸಂಪಾದಿಸಿದ ಹಣವನ್ನು ಉದಾರವಾಗಿ ದಾನಮಾಡಬೇಕು, ಯುದ್ಧದಲ್ಲಿ ಧೈರ್ಯದಿಂದ ಹೋರಾಡಬೇಕು—ಇವೆರಡೂ ಆ ಕಾಲದ ಆದರ್ಶಗಳು.[1] 'ಲೋಭಿ' ಎನ್ನಿಸಿಕೊಳ್ಳುವುದು, 'ಪಂದೆ' (=ಹಂದೆ, ಹೇಡಿ)[2] ಯೆನ್ನಿಸಿಕೊಳ್ಳುವುದು ಸಾವಿಗಿಂತ ಕಡೆ ಎಂಬ ಭಾವನೆ ಆ ಕಾಲದಲ್ಲಿತ್ತು.

ಮೊದಲಿನಿಂದಲೂ ಕರ್ನಾಟಕವು ಶೌರ್ಯಧೈರ್ಯಾದಿಗಳಿಗೆ ಪ್ರಖ್ಯಾತವಾಗಿದೆ. ಕ್ಷತ್ರಿಯರಿಂದ ಅಪಮಾನಿತನಾದಾಗ ಮಯೂರಶರ್ಮನು ತನ್ನ ಬ್ರಾಹ್ಮಣ ವೃತ್ತಿಯನ್ನು ತ್ಯಜಿಸಿ ಕದಂಬ ಕುಲವನ್ನು ಸ್ಥಾಪಿಸಿದನೆಂದು ತಾಳಗುಂದ ಶಾಸನವು ಹೇಳುತ್ತದೆ. ಬಾದಾಮಿ ಶಾಸನದಲ್ಲಿ ಬರುವ ಕಪ್ಪೆ ಅರಭಟ್ಟನ ಶೌರ್ಯ, ಸ್ವಾಭಿಮಾನಗಳು ಸುಪ್ರಸಿದ್ಧವಾಗಿವೆ. ಹ್ಯುಯೆನ್‌ತ್ಸಾಂಗನು ಕನ್ನಡಿಗರನ್ನು ಹೊಗಳುತ್ತ ಅವರಿಗೆ ಅಪಮಾನವಾದರೆ ಪ್ರಾಣಹೋದರೂ ಸರಿಯೇ ಸೇಡನ್ನು ತೀರಿಸಿಕೊಳ್ಳದೆ ಬಿಡರೆಂದೂ, ಶತ್ರುವಿಗೆ ಎಚ್ಚರಕೊಟ್ಟು ಇರಿಯುವರೆಂದೂ, ಸೋತುಬಂದ ದಳಪತಿಗೆ ಸ್ತ್ರೀಯರ ವೇಷಭೂಷಣಗಳನ್ನು ಕೊಟ್ಟು ಅವನು ಅಪಮಾನದಿಂದ ಸಾಯುವಂತೆ ಮಾಡುವರೆಂದೂ ಹೇಳುತ್ತಾನೆ. ಬಂಗಾಳದ ದೊರೆಗಳು ಕರ್ನಾಟಕದಿಂದ ಸೈನಿಕರನ್ನು ಕರೆಸಿಕೊಳ್ಳುತ್ತಿದ್ದರು.[3] ರಾಜಶೇಖರನು 'ವಿದ್ಧಶಾಲಭಂಜಿಕಾ'ದಲ್ಲಿ ಯುದ್ಧದಲ್ಲಿ ಕನ್ನಡಿಗರು ಸ್ವಭಾವತಃ ಶೂರರು ಎಂದು ಮುಕ್ತಕಂಠದಿಂದ ಪ್ರಶಂಸಿಸಿದ್ದಾನೆ ("ಸಮರಕರ್ಮಣಿ ನಿಸರ್ಗೋದ್ಭಟಾಃ ಏವ ಕರ್ಣಾಟಾಃ").[4]

ಆ ಕನ್ನಡಿಗರ ಔದಾರ್ಯವು ಎಲ್ಲೆಲ್ಲಿ ಹೇಗೆ ಹೇಗೆ ವ್ಯಕ್ತವಾಗಿದೆಯೆಂಬುದನ್ನು ಹಿಂದೆ ನೋಡಿದ್ದೇವೆ. ಅವರ ಶೌರ್ಯವು ವ್ಯಕ್ತಗೊಂಡಿರುವ ಬಗೆಯನ್ನು ಈ ಅಧ್ಯಾಯದಲ್ಲಿ ಪರಿಶೀಲಿಸುತ್ತಿದ್ದೇವೆ.

ಪ್ರಾಚೀನ ಕನ್ನಡ ಶಾಸನಗಳಲ್ಲಿ ದಾನ ಶಾಸನಗಳನ್ನು ಬಿಟ್ಟರೆ ವೀರ ಶಾಸನಗಳ ಸಂಖ್ಯೆಯೇ ಹೆಚ್ಚು. ಇಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸುತ್ತೇವೆ. ವೀರ ಶಾಸನಗಳಿಂದ ಯುದ್ಧಕಲೆಯ ಸಮಗ್ರ

---

1 ಎರೆವರ್ಗೀವಂ ಭಯದಿಂ। ಶರಣ್ಗೆವರೆ ಕಾವನೀವ ಕಾವಗುಣಕ್ಕಾರ್ । ದೊರೆ ಪೆಱರಿಱಿವ ಬೆಡಂಗನ।
ಕೊರಲೊಳ್ ಕೊಂಕುಂಟೆ ನುಡಿಯೊಳೇಂ ತೊದಳುಂಟೇ॥ (—ಗದಾಯುದ್ಧ, 2.6)
"ಎರೆದರ್ ಸಂತುಷ್ಟರಾದರ್ ಕದನದೊಳಿದಿರಂ ಮೀಱಿ
ಮಾಱಾಂತು ನಿಂದಾಂತರಿಭೂಪರ್ ಭಸ್ಮಮಾದರ್" (ಶೂದ್ರಕಂ, ಕಾವ್ಯಸಾರಂ, ಪು. 45)

2 ಸ್ತ್ರೀಯರ ಮುಂದೆ ಶೌರ್ಯವನ್ನು ತೋರಿಸುವವರ ವಿಡಂಬನೆಯು ಶಾಸನವೊಂದರಲ್ಲಿ ಹೀಗೆ ಬಂದಿದೆ-"ವನಿತಾನೀಕದ ಮುಂದೆ ಪೊಟ್ಟಳಿಸಿ ಗೇಣಂ ಕಿರ್ತು ತೂರ್ದಟ್ಟಿ ಗೀಱಿನಲೀಡಾಡಿ ಕುರುಳ್ಚಿ ಕುಪ್ಪಳ್ಚಿ ಪಿಂತಾಮುಂತುಮಂ ನೋಡಿ ಛೋಂಕನೆ ಸಿಂಘಧ್ವನಿಮಾಡಿ...." (BKI. I. ii. 178, 1128 A.D.) ಇಂತಹ ಹೇಡಿಗಳಾಗದೆ ಶೌರ್ಯವನ್ನು ತೋರಿಸುವವರನ್ನು ಶಾಸನಗಳು "ಮೊನೆ ಮುಟ್ಟೆ ಗಂಡರ್" ಎಂದು ಹೊಗಳುತ್ತವೆ. (ಮೊನೆ= ಯುದ್ಧಭೂಮಿ, ಆಯುಧದ ತುದಿ.)

3 IA. XV. p. 305.

4 The Rāṣṭrakūṭas and their Times, p. 247

ಪರಿಚಯವಾಗುತ್ತದೆಯೆಂದು ಭಾವಿಸುವುದು ತಪ್ಪಾಗುತ್ತದೆ. ಶಾಸನಗಳು ಏನಿದ್ದರೂ ತುಂಡು ತುಂಡು ವಿಷಯಗಳನ್ನು ಒದಗಿಸುತ್ತವೆ. ಅವುಗಳನ್ನೇ ಜೋಡಿಸಿಕೊಂಡು ಒಂದು ಚಿತ್ರವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ಇಂತಹ ಕಡೆ ಪಂಪಭಾರತದಂತಹ ಹಲವಾರು ಕಾವ್ಯಗಳ ಸಹಾಯವು ಅತ್ಯಮೂಲ್ಯವಾಗುತ್ತದೆ. ಅದರಲ್ಲಿಯೂ ಪಂಪಭಾರತದಲ್ಲಿ ಪೌರಾಣಿಕವೆನ್ನಿಸಿಕೊಳ್ಳುವ ಕೆಲವು ಭಾಗಗಳನ್ನು ಪ್ರತ್ಯೇಕಿಸಿದರೆ ಆ ಕಾಲದ ಯುದ್ಧದ ಸ್ಥೂಲ ಚಿತ್ರವು ನಮಗೆ ದೊರಕುತ್ತದೆ.

ಪ್ರಾಚೀನಭಾರತದ ಯುದ್ಧಕಲೆಯನ್ನು ಕುರಿತು ದಾತೆ, ದೀಕ್ಷಿತರ್ ಮುಂತಾದ ವಿದ್ವಾಂಸರು ಇಂಗ್ಲಿಷಿನಲ್ಲಿ ಗ್ರಂಥಗಳನ್ನು ಬರೆದಿದ್ದಾರೆ.[4.1] ಅವುಗಳನ್ನು ಓದಿ ಮುಗಿಸಿದ ಮೇಲೆ ಒಂದು ರೀತಿಯ ಅತೃಪ್ತಿ ಮನಸ್ಸಿನಲ್ಲಿ ಉಳಿಯುತ್ತದೆ. ಅವರು ವಿವೇಚಿಸಿರುವುದು ನೆಲದಮೇಲೆ ನಡೆದ ಯುದ್ಧವನ್ನಲ್ಲ, ಕವಿಗಳ ಕಲ್ಪನೆಯಲ್ಲಿ ನಡೆದ ಯುದ್ಧವನ್ನು ಎಂಬ ಭಾವನೆ ಬರುತ್ತದೆ. ಅದಕ್ಕೆ ಕಾರಣವೂ ಉಂಟು. ಅವರು ತಮ್ಮ ವಿಷಯಪ್ರತಿಪಾದನೆಗೆ ಮಹಾಭಾರತ ರಾಮಾಯಣಗಳಂತಹ ಪುರಾಣಕಾವ್ಯಗಳನ್ನು, ಅರ್ಥಶಾಸ್ತ್ರ, ಶುಕ್ರನೀತಿಸಾರ[5] ಮುಂತಾದ ನೀತಿಗ್ರಂಥಗಳನ್ನು ಬಹುಮಟ್ಟಿಗೆ ಅವಲಂಬಿಸುತ್ತಾರೆ. ಅವುಗಳಲ್ಲಿ ನಿರೂಪಿತವಾಗಿರುವ ಯುದ್ಧಗಳಲ್ಲಿ ಎಷ್ಟು ಭಾಗ ವಾಸ್ತವವೆಂಬುದನ್ನು ಹೇಳುವುದು ಕಷ್ಟ. ಹಿಂದೆ ಹೇಳಿದ ಲೇಖಕರು ಶಾಸನಗಳಿಂದ ವಿಷಯಗಳನ್ನು ಆರಿಸಿಕೊಳ್ಳದಿರುವುದು ಒಂದು ದೊಡ್ಡ ಕೊರತೆಯಾಗಿ ಎದ್ದು ಕಾಣುತ್ತದೆ. ಈ ಅಧ್ಯಾಯದಲ್ಲಿ ಪ್ರಾಚೀನ ಕರ್ನಾಟಕದ ಯುದ್ಧಕಲೆಯ ನಿರೂಪಣೆಗಾಗಿ ವಿಶೇಷವಾಗಿ ಶಾಸನಗಳನ್ನೂ, ಶಾಸನಗಳಿಗೆ ಪೋಷಕವಾಗಿ ಕಾವ್ಯಗಳನ್ನೂ ಬಳಸಿಕೊಳ್ಳಲಾಗಿದೆ. ಈ ಅಧ್ಯಾಯದಿಂದ ಯುದ್ಧಕಲೆಯ ಸಮಗ್ರ ಪರಿಚಯವಾಗದಿದ್ದರೂ, ಇಲ್ಲಿ ಬಂದಿರುವ ವಿಷಯಗಳನ್ನು ಮನಸ್ಸಿನಲ್ಲಿ ಮೂಡಿಸಿಕೊಂಡರೆ ಯುದ್ಧದ ಒಂದು ಸ್ಥೂಲಚಿತ್ರವನ್ನು ಕಟ್ಟಿಕೊಳ್ಳುವುದು ಸಾಧ್ಯವಾಗುತ್ತದೆ.

ಪ್ರಾಚೀನ ಕರ್ನಾಟಕದಲ್ಲಿ ಅಸಂಖ್ಯಾತ ಯುದ್ಧಗಳು ನಡೆದಿವೆ. ಇವುಗಳಲ್ಲಿ ಸಾಕಷ್ಟು ಸಂಖ್ಯೆಯವು 'ಯುದ್ಧ' ಎಂದು ಅನ್ನಿಸಿಕೊಳ್ಳಲಾರವು. ಕೆಲವನ್ನು ದೊಡ್ಡ ಜಗಳಗಳೆಂದು ಕರೆದರೂ ಕರೆಯಬಹುದು. ಆದರೂ ಅವನ್ನು ಸೌಕರ್ಯದ ದೃಷ್ಟಿಯಿಂದ ಯುದ್ಧಗಳೆಂದೇ ಕರೆದಿದ್ದೇವೆ. ಈ ಯುದ್ಧಗಳು ಏಕೆ ನಡೆಯುತ್ತಿದ್ದುವು ಎಂಬುದರ ವಿಸ್ತಾರವಾದ ಚರ್ಚೆ ಇಲ್ಲಿ ಅಪ್ರಸ್ತುತವಾದರೂ, ಕೆಲವು ಕಾರಣಗಳನ್ನು ಇಲ್ಲಿ ಸೂಚಿಸಬಹುದು. ಮೊದಲನೆಯದಾಗಿ ಚಕ್ರವರ್ತಿಗಳ ಮತ್ತು ರಾಜರ ಮಹತ್ವಾಕಾಂಕ್ಷೆ ಮತ್ತು ಅಸೂಯೆ. ಇವೇ ದೊಡ್ಡ ಯುದ್ಧಗಳಿಗೆ ಬಹುಮಟ್ಟಿಗೆ ಕಾರಣ. ಕ್ಷತ್ರಿಯರಿಗೆ ಯುದ್ಧವೆನ್ನುವುದು ನಿಯಮವಾಗಿ ಶಾಂತಿಯೆನ್ನುವುದು ಅಪವಾದವಾಗಿದ್ದ ಕಾಲವದು. "ಸೈನ್ಯಾತ್ ವಿನಾ ನೈವ ರಾಜ್ಯಂ ನ ಧನಂ ನ ಪರಾಕ್ರಮಃ" —ಸೈನ್ಯವಿಲ್ಲದೆ ರಾಜ್ಯವಿಲ್ಲ, ಧನವಿಲ್ಲ, ಪರಾಕ್ರಮವಿಲ್ಲ ಎಂದು ಅವರು ನಂಬಿದ್ದರು. ರಾಜನೊಬ್ಬನು ಯುದ್ಧಕ್ಕೆ ಸಿದ್ಧವಾದರೆ ಸಾಕು, ಅವನ ಉಪ್ಪನ್ನುಂಡು ಬದುಕಿದ ಸೈನಿಕರು ಯುದ್ಧಕ್ಕೆ ಸಿದ್ಧರಾಗುತ್ತಿದ್ದರು. ಯುದ್ಧದಲ್ಲಿ ಹೋರಾಡಿ ರಾಜನ ಉಪಕಾರವನ್ನು ತೀರಿಸುವುದು ತಮ್ಮ ಕರ್ತವ್ಯವೆಂದು ಅವರು ಭಾವಿಸು

---

[4.1] ಇವುಗಳ ಜೊತೆ, ಈ ವಿಸ್ತಾರವಾದ ಲೇಖನವನ್ನು ಗಮನಿಸಬಹುದು — B. P. Sinha : 'Art of war in Ancient India, (600 B. C.-300 A.D.)' Studies in the Cultural History of India (pp. 115-63)

[5] ಬಂದೂಕ ಮತ್ತು ಸಿಡಿಮದ್ದಿನ ಪ್ರಸ್ತಾಪವಿರುವುದರಿಂದ ಶುಕ್ರನೀತಿಸಾರವು ಹದಿನಾರನೆಯ ಶತಕಕ್ಕಿಂತ ಈಚಿನ ಗ್ರಂಥವೆಂದು ಹಲವರು ವಿದ್ವಾಂಸರು ಭಾವಿಸುತ್ತಾರೆ.

(B. K. Majumdar : The Military System in Ancient India, p. 4.)

ತ್ತಿದ್ದರು. ಇದನ್ನೇ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ 'ಜೋಳದ ಪಾಟಿ'[6] ಎಂದು ಕರೆದಿರುವುದು. ಸೈನಿಕರು ರಾಜನಿಗೆ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುವುದರ ಒಂದು ಸೊಗಸಾದ ಚಿತ್ರ ಪಂಪಭಾರತದಲ್ಲಿ ಬರುತ್ತದೆ. ಒಬ್ಬ ಸೈನಿಕನು ರಾಜನಿಗೆ ಹೇಳುತ್ತಾನೆ—"ನೀನು ನನಗೆ ತೋರಿದ ದಯೆ ದೊಡ್ಡದೋ, ಅಥವಾ ನನ್ನ ಶೌರ್ಯ ದೊಡ್ಡದೋ ಎಂಬ ವಿಷಯದಲ್ಲಿ ನನಗೆ ಸಂದೇಹ ಬಂದಿದೆ. ಅದನ್ನು ತೂಗಿನೋಡಿ ತೀರ್ಮಾನಿಸುವುದು ಕಷ್ಟವಾಗಿದೆ. ಆದ್ದರಿಂದ ನಾಳೆ ಯುದ್ಧಭೂಮಿಯಲ್ಲಿ ಶತ್ರುರಾಜರ ಆನೆಯ ದಂತಗಳೆಂಬ ತಕ್ಕಡಿಯಲ್ಲಿ ಪರಾಕ್ರಮದಿಂದ ನನ್ನನ್ನೇ ತೂಕಮಾಡಿ ತೋರಿಸುತ್ತೇನೆ."[7] ಯುದ್ಧದ ಸಮಯದಲ್ಲಿ ರಾಜನು ಮಾಡಿದ ಉಪಕಾರವನ್ನು ಸ್ಮರಿಸಿಕೊಳ್ಳದೆ ಪ್ರಾಣಭಯದಿಂದ ಓಡಿಹೋಗುವವರನ್ನು ಶಾಸನಗಳು 'ಜೋಳಗಳ್ಳ'ರೆಂದು ಕರೆದು ಹಾಸ್ಯಮಾಡುತ್ತವೆ.[8] ಈ ಉಪಕಾರಸ್ಮರಣೆಯು ಎಷ್ಟು ದೂರ ಹೋಗಬಹುದೆಂಬುದಕ್ಕೆ ಒಂದು ಅತ್ಯಪೂರ್ವ ನಿದರ್ಶನವನ್ನು ಕೊಡಬಹುದು. ಪೆರ್ಗಡೆ ಗುಂಡಯ್ಯ ಎಂಬಾತನು ಅಯ್ಯಪಮಂಗಲ ಎಂಬ ಅಗ್ರಹಾರವನ್ನು ('ಬ್ರಹ್ಮದೇಯಂ') ಅಕ್ರಮವಾಗಿ ಸೂರೆಮಾಡುತ್ತಾನೆ. ಆ ಗುಂಡಯ್ಯನನ್ನು ರಾಜನು ಕಠಿಣ ಶಿಕ್ಷೆಗೆ ಗುರಿಪಡಿಸಬೇಕಾಗಿದ್ದಿತು. ಆದರೆ ಬಹುಶಃ ಗುಂಡಯ್ಯನಿಂದ ಉಪಕೃತನಾಗಿದ್ದ ಏಚಯ್ಯ ಎನ್ನುವವನು ತಾನೇ ಇರಿದುಕೊಂಡು ತನ್ನ ಒಡೆಯನ ಶಿಕ್ಷೆಯನ್ನು ತಾನೇ ಹೊತ್ತು, ಗುಂಡಯ್ಯನಿಗೆ ಕ್ಷಮಾದಾನವನ್ನು ಮಾಡಿಸುತ್ತಾನೆ.[9]

ಒಂದು ರಾಜ್ಯದ ಪಕ್ಕದ ರಾಜನು ದಂಡೆತ್ತಿಬಂದು ಆ ರಾಜ್ಯದ ಗಡಿಯನ್ನು ಆಕ್ರಮಿಸಿದಾಗ, ರಾಜ್ಯದಲ್ಲೇ ಸಣ್ಣಪುಟ್ಟ ಕ್ಷೋಭೆಗಳಾದಾಗ ರಾಜನ ಸೇನೆಯು ರಾಜ್ಯದ ರಕ್ಷಣೆಗಾಗಿ ಹೊರಡುತ್ತಿತ್ತು. ಒಬ್ಬ ರಾಜನು ಸತ್ತಮೇಲೆ ಪಟ್ಟಕ್ಕೆ ಬಂದ ರಾಜಕುಮಾರನು ಬಾಲಕನಾಗಿದ್ದರಂತೂ ರಾಜ್ಯವನ್ನು ಅಪಹರಿಸಬೇಕು ಎನ್ನುವವರಿಗೆ ಸುವರ್ಣಸಮಯ. ಪುಲಿಕೇಶಿ II ನೆಯ ತಂದೆ ಮಡಿದಾಗ ಅವನು ಇನ್ನೂ ಚಿಕ್ಕವನಾಗಿದ್ದರಿಂದ ಚಿಕ್ಕಪ್ಪ ಮಂಗಲೇಶ ಪಟ್ಟಕ್ಕೆ ಬಂದನು. ಮುಂದೆ ಪುಲಿಕೇಶಿ ಬಲಾತ್ಕಾರದಿಂದ ತನ್ನ ರಾಜ್ಯವನ್ನು ಹಿಂದಕ್ಕೆ ಕಿತ್ತುಕೊಂಡಾಗ, ಅದೇ ಸಮಯವೆಂದು ಅಕ್ಕಪಕ್ಕದ ಶತ್ರುಗಳು ಚಾಲುಕ್ಯ ರಾಜ್ಯದ ಮೇಲೆ ಬಿದ್ದರು ಎಂದು ಐಹೊಳೆ ಶಾಸನವು ಹೇಳುತ್ತದೆ. ಎಱೆಯಪ್ಪನು ಸತ್ತಾಗ ಅವನ ತಮ್ಮ ರಾಚಮಲ್ಲನು ಪಟ್ಟಕ್ಕೆ ಬರುತ್ತಾನೆ. ಭುವನಾದಿತ್ಯನು ಇದೇ ಸಮಯವೆಂದರಿತು ಅರ್ಧ ರಾಜ್ಯವನ್ನೂ ಭಂಡಾರವನ್ನೂ ಬೇಡುತ್ತಾನೆ. ಆಗ ಯುದ್ಧವು ನಡೆದು ಹಲವಾರು ಜನ ಮಡಿಯುತ್ತಾರೆ.[10] ಪೆರ್ಮಾನಡಿ ಎಂಬಾತನು ಹೊಸದಾಗಿ ಪಟ್ಟಕ್ಕೆ ಬಂದಾಗಲೂ ಶತ್ರುರಾಜನೊಬ್ಬನು ದಂಡೆತ್ತಿಬಂದಂತೆ ಶಾಸನವೊಂದು ತಿಳಿಸುತ್ತದೆ.[11] ಹೊರಗಿನಿಂದ ದಂಡೆತ್ತಿಬಂದ ಶತ್ರುರಾಜನಿಗೆ ಸಹಾಯಕರಾಗಿ 'ಅಂತಃಕಂಟಕ'ರು, 'ದುಷ್ಟಸಾಮಂತದ್ರೋಹ'ರು ಇರುತ್ತಿದ್ದರು.[12] ಅದೇ ತಾನೇ ಪಟ್ಟವನ್ನೇರಿದ ರಾಜನು ಇವರನ್ನೂ ನಿಗ್ರಹಿಸಬೇಕಾಗಿತ್ತು.

---

[6] ಪಂಪಭಾರತ, 10.43. ಜೋೞ ಎಂದರೆ ಆಹಾರ: ಪಾೞಿ ಎಂದರೆ ಕ್ರಮ, ಧರ್ಮ. 'ಜೋೞದ ಪಾೞಿ' ಎಂದರೆ ಅನ್ನದ ಋಣ ಅಥವಾ ಆದಕ್ಕಾಗಿ ಸಲ್ಲಿಸುವ ಸೇವೆ ಎಂದೂ ಅರ್ಥ. 'ಜೋೞದ ಪಾೞಿ' ಯನ್ನು ಈಗಿನ ಉಪ್ಪಿನ ಹಂಗಿಗೆ ಹೋಲಿಸಬಹುದು.

[7] ಪಂಪಭಾರತ, 10.40. "ಒದವಿದ ನಿನ್ನದೊಂದು ದಯೆ ಮೇಣ್ ಪಿರಿದೋ ನೆಗೞ್ದೆನ್ನ ಗಂಡುಮಾ। ದದಟು ಮುಳುರ್ಕೆಯುಂ ಪಿರಿದೊ ಸಂದೆಯ ಮಾದಪುದಂತಿದಿಲ್ಲಿತೂ। ಗಿದೊಡಱಿಯಲ್ಕೆ ಬಾರದುದು ಕಾರಣದಿಂ ರಿಪುಭೂಪದಂತ ದಂ। ತದ ತೊಲೆಯೊಳ್ ಪರಾಕ್ರಮದಿನೆನ್ನನೆ ಭೂಪತಿ ತೂಗಿ ತೋಱಿನೇ॥"

[8] EC. II. 134, C. 982 A.D.

[9] EC. XI. Hr. 1, 975 A.D.

[10] EC. IV. Hg. 116, C. 930 A.D.

[11] EC. XI. Cl. 8, C. 810 A.D.

[12] EC. VII. Sk. 136, 1068 A.D.

ಅ ಕಾಲದಲ್ಲಿ ಈಗಿನಂತೆ ದೇಶದ ನಾನಾ ಭಾಗಗಳಲ್ಲಿ ಆಡಳಿತವರ್ಗದಿಂದ ನೇಮಿತವಾದ ರಕ್ಷಣಾ ವ್ಯವಸ್ಥೆಯಿರಲಿಲ್ಲ (Department of Police). ಒಂದೊಂದು ಗ್ರಾಮದಲ್ಲೂ ಅದರ ರಕ್ಷಣೆಗಾಗಿ ಆ ಊರಿನ ಒಂದು ವೀರರ ತಂಡವೇ ಸಿದ್ಧವಾಗಿರುತ್ತಿತ್ತು. ಕಳ್ಳರು ಬಂದು ತುರುಗಳನ್ನು ಅಪಹರಿಸಿದಾಗ, ಸ್ತ್ರೀಯರ ಮಾನಭಂಗವಾದಾಗ ಊರಿಗೆ ಊರೇ ಒಗ್ಗಟ್ಟಾಗಿ ನಿಂತು ಹೋರಾಡುತ್ತಿತ್ತು.[13] ಆ ಉತ್ಕಟ ಪರಿಸ್ಥಿತಿಯಲ್ಲಿ ಶೌರ್ಯಪ್ರದರ್ಶನವನ್ನು ಮಾಡದವನಿಗೆ 'ಬ್ರಹ್ಮಪೂತಪಾತಕ'ವು ಬರುತ್ತದೆ ಎಂದು ಶಾಸನವೊಂದು ಹೇಳುತ್ತದೆ.[14] ಇಂತಹ ಸಂದರ್ಭಗಳಲ್ಲಿ ಒಂದು ಕಡೆ ಕರ್ತವ್ಯದೃಷ್ಟಿ, ಮತ್ತೊಂದು ಕಡೆ ಧರ್ಮದೃಷ್ಟಿ— ಎರಡೂ ಕೆಲಸಮಾಡುತ್ತಿದ್ದವು. ಹಾಗೆ ಹೋರಾಡುತ್ತಿದ್ದವರ ಧೈರ್ಯವು ಅನುಪಮವಾದುದು. ಯುದ್ಧಗಳಲ್ಲಿ ಆದ ಗಾಯಗಳು ಪುರುಷರಿಗೆ ಭೂಷಣಪ್ರಾಯಗಳು[15] ಎಂದು ಜನರು ಭಾವಿಸಿದ್ದರು. ಪುರುಷರು ತಮಗೆ ಕೊಡುವ ಮಣಿಕನಕಾದಿಗಳನ್ನು ಸ್ತ್ರೀಯರು ಅಪೇಕ್ಷಿಸುವುದಿಲ್ಲ, ಅವರು ಮೆಚ್ಚುವುದು ಗುಣವನ್ನು ಮತ್ತು 'ಶಸ್ತ್ರವ್ರಣ'ವನ್ನು ಎಂದು ರನ್ನನ ದ್ರೌಪದಿ ಹೇಳುತ್ತಾಳೆ.[16] ಹ್ಯುಯೆನ್‌ತ್ಸಾಂಗನು ಪುಲಿಕೇಶಿಯ ಪ್ರಜೆಗಳ ಶೌರ್ಯವನ್ನು ಪ್ರಾಮಾಣಿಕತೆಯನ್ನು ಕೊಂಡಾಡಿದ್ದಾನೆ. ಬಂಗಾಳದ ದೊರೆಗಳು ತಮ್ಮ ಸೈನ್ಯಕ್ಕಾಗಿ ಕರ್ನಾಟಕ ಮತ್ತು ಲಾಟ ದೇಶಗಳಿಂದ ಸೈನಿಕರನ್ನು ಬರಮಾಡಿಕೊಳ್ಳುತ್ತಿದ್ದರು.[17] ಈ ಯುದ್ಧೋತ್ಸಾಹವು ಕ್ಷತ್ರಿಯರಿಗೆ ಮಾತ್ರ ಮೀಸಲೆಂದು ತಿಳಿಯಬಾರದು. ಅದು ಒಂದು ರೀತಿಯಲ್ಲಿ ಸಾಂಕ್ರಾಮಿಕವಾಗಿ ಹರಡಿ ಇಡೀ ವಾತಾವರಣವೇ ಕ್ಷಾತ್ರತೇಜಸ್ಸಿನಿಂದ ತುಂಬಿ ತುಳುಕುತ್ತಿತ್ತು. ಬ್ರಾಹ್ಮಣರೂ ಕೈಯಲ್ಲಿ ಕತ್ತಿಗಳನ್ನು ಹಿಡಿಯುತ್ತಿದ್ದರು.[18] ದಾನಕ್ಕೆ ಯುದ್ಧಕ್ಕೆ ಕ್ಷತ್ರಿಯರೇ ಸಮರ್ಥರು, 'ಅಬ್ರಹ್ಮಣ್ಯಂ ಭೋಃ' ಎನ್ನಲು 'ಅವಿಧಾ' ಎಂದು ಕೂಗಿಕೊಳ್ಳಲು ಮಾತ್ರ ಬ್ರಾಹ್ಮಣರು ಸಮರ್ಥರು ಎಂಬ ರನ್ನನ ದುರ್ಯೋಧನನ ಹೇಳಿಕೆ[19] ಆ ಕಾಲಕ್ಕೆ ಅನ್ವಯಿಸುವುದಿಲ್ಲ.

ಯುದ್ಧೋತ್ಸಾಹಕ್ಕೆ ಮೂಲಶಕ್ತಿಯಾಗಿದ್ದ ಇನ್ನೂ ಒಂದೆರಡು ಕಾರಣಗಳನ್ನು ಹೆಸರಿಸಬಹುದು. ದೇಹವೆನ್ನುವುದು ಅಶಾಶ್ವತವಾದುದು, ಕೀರ್ತಿಯು ಚಿರಸ್ಥಾಯಿಯಾದುದು. ಅಶಾಶ್ವತವಾದ ದೇಹವು ಹೋದರೂ ಹೋಗಲಿ, ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಬೇಕೆಂಬುದು ಅವರ ಬಯಕೆಯಾಗಿತ್ತು.[20] ಆ ಕಾಲದಲ್ಲಿ ಒಬ್ಬ ದೊಡ್ಡ ವಿದ್ವಾಂಸರ ಹೆಸರೂ, ಅಥವಾ ಒಬ್ಬ ಮಹಾ ದಾನಿಯ ಹೆಸರೂ ನಾಡಿನಲ್ಲಿ ಬಹುವಾಗಿ ಪ್ರಸಾರವಾಗುತ್ತಿತ್ತೋ ಇಲ್ಲವೋ ಗೊತ್ತಿಲ್ಲ. ಆದರೆ ಯುದ್ಧದಲ್ಲಿ ಪ್ರಾಣತ್ಯಾಗವನ್ನು ಮಾಡಿದ ವೀರನ ಹೆಸರು

---

13 ರನ್ನನ ಈ ಕೆಳಗಿನ ಮಾತುಗಳು ಆ ಕಾಲದ ಸಾಮಾಜಿಕ ಪರಿಸ್ಥಿತಿಯನ್ನೂ ಜನರ ವೀರಮನೋಭಾವವನ್ನೂ ಸೊಗಸಾಗಿ ಧ್ವನಿಸುತ್ತವೆ—"ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱೆವೆಸದೊಳ್ನಂಟನೆಡಱೊಳೂರಱುವಿನೊಳಂ। ತಱಿಸಂದು ಗಂಡುತನಮನೆ ನೆಱಪದವಂ ಗಂಡನಲ್ಲನೆಂತುಂ ಷಂಡಂ ॥" (ಗದಾಯುದ್ಧ, 2.31)

14 EC. VII. Sk. 58, C. 1124 A.D.

15 EC. VI. Mg. 36, 749 A.D.

16 ಗದಾಯುದ್ಧ, 2.7. "ಮಣಿಕನಕಂ ವಸ್ತು ವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ಗುಣಮನೆ ಮೆಱೆವುದು ಶಸ್ತ್ರವ್ರಣವಂ ನಿನ್ನಂತೆ ಮೆಱೆವುದಿಱುವಬೆಡಂಗಾ ॥"

17 Altekar: The Rāṣṭrakūṭas and their Times, p. 247.

18 EC. VI. Ng. 28, C. 1125 A D."—ಬೀರಂ ಬಿಂಕಮದೇವುದೊ ಹಾರುವ ನಿನಗೆಂದು ನುಡಿವ ಗಳಹನ ಬಾಯೊಳು ಕೂರಲಗನೆಯ್ದೆ ಕುತ್ತುವ ವೀರಾಗ್ರಣಿ ಮಂತ್ರಿ ಬೋಕಣಂ ವಸುಮತಿಯೊಳು."

19 ಗದಾಯುದ್ಧ, 2.16.

20 ಒಡಲೊಡವೆಯೆಂಬಿವೆರಡುಂ। ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ।
ಕೆಡುವೊಡವೆಯಾನೆಂದುಂ। ಕೆಡದೊಡವೆಗೆ ಮಾಱುಗುಡುವುದಿಱುವಬೆಡಂಗಾ ॥ (ಅದೇ, 2.4).

ಈ ಲೋಕದಲ್ಲಿ ಮಾತ್ರವಲ್ಲ, ಪರಲೋಕದಲ್ಲಿಯೂ 'ಪಡೆಮಾತಾ'ಗುತ್ತಿತ್ತು.[21] ಅವನನ್ನು ಎಲ್ಲರೂ ಪ್ರಶಂಸಿಸುವರೇ. ಅವನ ಮೇಲೆ ಕತೆಗಳು ಹುಟ್ಟಿಕೊಳ್ಳುತ್ತಿದ್ದವು.[22] ಜನಗಳ ಕಣ್ಣಲ್ಲಿ ಅವನೊಬ್ಬ ಅದ್ಭುತ ವ್ಯಕ್ತಿಯಾಗುತ್ತಿದ್ದ. ಅವನ ಕೀರ್ತಿಯೂ, ಅವನು ಮಾಡಿದ ತ್ಯಾಗಗಳೂ ಇಪ್ಪತ್ತು ತಲೆಗಳವರೆಗೆ ಇರುತ್ತವೆ ಎಂದು ಶಾಸನವೊಂದು ಹೇಳುತ್ತದೆ.[23] ಸತ್ತಮೇಲೆ ಮಾತ್ರವಲ್ಲ, ಬದುಕಿರುವಾಗಲೇ ಅನೇಕ ಶೂರರ ಹೆಸರುಗಳು ಜನರ ನಾಲಗೆಯ ಮೇಲೆ ನಲಿಯುತ್ತಿದ್ದುವು.[24]

ಯುದ್ಧೋತ್ಸಾಹವನ್ನು ಜನರಲ್ಲಿ ತುಂಬುತ್ತಿದ್ದ ಮತ್ತೊಂದು ಮೂಲಪ್ರಚೋದನೆಯಿದೆ. ಅದನ್ನು ಜನರು ಅಕ್ಷರಶಃ ನಂಬಿದ್ದರೋ ಇಲ್ಲವೋ ತಿಳಿಯದು. ಬಹುಶಃ ನಂಬಿದ್ದರು. ಯುದ್ಧದಲ್ಲಿ ಗೆದ್ದರೆ ಇಹಲೋಕದಲ್ಲಿ, ಸತ್ತರೆ ಪರಲೋಕದಲ್ಲಿ ಸುಖಿಸಬಹುದು ಎಂಬುದೇ ಆ ನಂಬಿಕೆ. ಆ ನಂಬಿಕೆಯ ಪ್ರಕಾರ ರಣರಂಗದಲ್ಲಿ ಸತ್ತ ವೀರನಿಗಾಗಿ ದೇವಲೋಕದ ಕನ್ನೆಯರು ಕಾದುಕೊಂಡಿರುತ್ತಿದ್ದರಷ್ಟೇ ಅಲ್ಲ, ಅವನನ್ನು ಪಡೆಯಲು ಅವರಲ್ಲಿ ಪೈಪೋಟಿಯು ನಡೆಯುತ್ತಿತ್ತು. ಅವನನ್ನು ದೇವಾಂಗನೆಯರು ಸ್ವರ್ಗಕ್ಕೋ ಶಿವ ನೋಲಗಕ್ಕೋ ಕೊಂಡೊಯ್ಯುತ್ತಾರೆ[25] ಎಂದು ಜನರು ನಂಬಿದ್ದರು. ವೀರನ ಶೌರ್ಯ ಪರಾಕ್ರಮಾದಿಗಳನ್ನು ಉಲ್ಲೇಖಿಸುವ ವೀರಗಲ್ಲು[26]ಗಳಲ್ಲಿ ಸಾಮಾನ್ಯವಾಗಿ ಮೂರು ಹಂತಗಳನ್ನು ಕೆತ್ತಿರುತ್ತಾರೆ. ಕೆಳಗಿನ ಹಂತದಲ್ಲಿ ಅವನ ಹೋರಾಟದ ಚಿತ್ರವಿರುತ್ತದೆ. ಮಧ್ಯದ ಹಂತದಲ್ಲಿ ಅವನನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ದೇವತಾಸ್ತ್ರೀಯರೂ, ಮೇಲಿನ ಹಂತದಲ್ಲಿ ಅವನು ಶಿವನ ಸಾನ್ನಿಧ್ಯದಲ್ಲಿರುವುದೂ ಚಿತ್ರಿತವಾಗಿರುತ್ತದೆ. ಈ ವಿಷಯವನ್ನು ಹೇಳುವ ಸಂಸ್ಕೃತ ಶ್ಲೋಕವೊಂದು ಅನೇಕ ವೀರಶಾಸನಗಳ ಅಂತ್ಯದಲ್ಲಿ ಕಾಣಿಸಿಕೊಳ್ಳುತ್ತದೆ—

ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ ||[27]

ದುರ್ಗಸಿಂಹನ ಪಂಚತಂತ್ರ[28]ದಲ್ಲಿ ಈ ಶ್ಲೋಕ ಕಾಣಿಸಿಕೊಂಡಿದೆಯೆಂದ ಮೇಲೆ ಅದು ಬಹು ಪ್ರಸಿದ್ಧ ಶ್ಲೋಕವಾಗಿರಬೇಕು.

ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವುದು ಅಥವಾ ಸೋತು ಪ್ರಾಣ ಬಿಡುವುದು — ಎರಡಕ್ಕೂ ಸಮಾನವಾದ ಗೌರವವಿದೆ. ಸೋತು ಹಿಂದಕ್ಕೆ ಬರುವುದು ಸಾವಿಗಿಂತ ಕಡೆಯಾದುದು. ಮೃತ್ಯುವು ಕ್ಷಣಿಕ

---

21 EC. XI. Cl. 6, C. 925 A.D.

22 " ವೀರನ ಸಾವು ಕತೆಯಾಗಿ ಪರಿದುದು ಮೂಱುಮೀ ಲೋಕದೊಳಗೆಲ್ಲ," (SII. IX. i. 31, 966-7 A.D.)

23 EC. VII. Sk. 220, 1015 A.D.

24 EC. XII. Tp. 63, C. 1138 A.D. "ಹೆಸರೊಳು ವಿಶೇಷನಾಗಿರ್ದ್ದ ನಾಯಕರಂ ಪಲಂಬರ ಕೊಂದು."

25 EC. V. Hn. 4, 1117 A.D. ಒಂದು ಶಾಸನದಲ್ಲಿ ಬರುವ ಈ ಉಕ್ತಿಯನ್ನು ಗಮನಿಸಿ— "ದ್ವಾವಿಮೌ ಪುರುಷೌ ಲೋಕೇ ಸೂರ್ಯಮಂಡಲ ಭೇದಿನೌ । ಪರಿವ್ರಾಡ್ಯೋಗ ಯುಕ್ತಶ್ಚ ರಣೇ ಚಾಭಿಮುಖೇ ಹತಃ" (EC. VII. Sk. 307, 1015 A.D.)—ಸೂರ್ಯಮಂಡಲವನ್ನು ಭೇದಿಸಿ ಮೇಲೆ ಹೋಗಬಲ್ಲವರು ಇಬ್ಬರೇ—ಪರಿವ್ರಾಟನಾದ ಯೋಗಿ, ಹೋರಾಡುತ್ತ ಸತ್ತ ವೀರ. ವೀರನನ್ನು ಯೋಗಿಗೆ ಸಮನಾದ ವ್ಯಕ್ತಿಯೆಂದು ಗೌರವಿಸುವುದನ್ನು ಇಲ್ಲಿ ನೋಡಬೇಕು. (ಬ್ರಹ್ಮಲೋಕಕ್ಕೆ ಪ್ರವೇಶ ಮಾಡುವ ಮೊದಲು ಸೂರ್ಯ ಮಂಡಲವನ್ನು ದಾಟಿಹೋಗಬೇಕೆಂಬ ನಂಬಿಕೆ ಪ್ರಾಚೀನರಲ್ಲಿದ್ದಿತು). ಈ ಶ್ಲೋಕ ಅಲ್ಪವ್ಯತ್ಯಾಸದೊಡನೆ ಬೇರೆ ಶಾಸನಗಳಲ್ಲೂ ಉಂಟು. ಉದಾ.ಗೆ-KI. IV. No.17,1166 A.D.

26 ವೀರಗಲ್ಲುಗಳನ್ನು ಕುರಿತ ಎನ್. ಕಸ್ತೂರಿಯವರ ಲೇಖನವನ್ನು ನೋಡಿ. ("Hero-stones in Mysore."–Prof. K. V. Rangaswami Iyengar's Commemoration Volume, p. 204).

27 EC. VII. Sk. 60, 1115 A.D. ; EC. VI. Cm. 122, 1140 A.D. ಇತ್ಯಾದಿ.

28 ಪಂಚತಂತ್ರ, ಪು. 206.

ದುಃಖವನ್ನು ತಂದರೆ, ಮಾನಭಂಗವೋ ದಿನ ದಿನವೂ ದುಃಖವನ್ನು ತರುತ್ತದೆ.[29] ಮಾನಭಂಗವನ್ನು ತಾಳಲಾರದೆ ಆತ್ಮಹತ್ಯೆಯನ್ನು ಮಾಡಿಕೊಂಡ ರಾಜನೊಬ್ಬನ ಹೃದಯ ವಿದ್ರಾವಕ ಚಿತ್ರವು ಶಾಸನವೊಂದರಲ್ಲಿ ಕಂಡುಬರುತ್ತದೆ. ಪಲ್ಲವರೊಡನೆ ನಡೆದ ಘೋರ ಯುದ್ಧದಲ್ಲಿ ಕದಂಬರು ಸಂಪೂರ್ಣವಾಗಿ ಸೋತರು. ಕದಂಬರ ರಾಜ್ಯವು ನಾಶವಾಯಿತು. ತನ್ನ ರಾಜ್ಯದ ನಾಶವನ್ನು ('ಸ್ವದೇಶಸ್ಯ ಕ್ಷಯೇ') ನೋಡಲಾರದೆ ಶಿವಾನಂದವರ್ಮನು ದರ್ಭೆಯ ಹಾಸಿಗೆಯ ಮೇಲೆ ಮಲಗಿ, ಶಾಶ್ವತವಾದ ಕೀರ್ತಿಯನ್ನು ಬಯಸಿ ('ಚಿರಕಾಲಾವಸ್ಥಾಯಿನೀಂ ಕೀರ್ತಿಮಭಿಲಷನ್'), ಮನುಷ್ಯ ಭೋಗದಲ್ಲಿ ವಿರಕ್ತನಾಗಿ ಸ್ವರ್ಗಸ್ಥನಾಗುತ್ತಾನೆ. ಅವನು ಯುದ್ಧದಲ್ಲಿ ಸೋತಿದ್ದರೂ ಶಾಸನವು ಅವನ ಶೌರ್ಯಗುಣಾದಿಗಳನ್ನು ಹೊಗಳುತ್ತದೆ. ಅವನ ಕೀರ್ತಿ ಶಾಶ್ವತವಾಗಿರುತ್ತದೆ ಎಂದು ಹೇಳುತ್ತದೆ.[30] ಶಾಸನದ ವಸ್ತು ಮತ್ತು ರೀತಿಗಳು ಓದುಗರ ಹೃದಯವನ್ನು ಕರಗಿಸುತ್ತವೆ.

ಉದಾತ್ತವಾದ ಉದ್ದೇಶದಿಂದ ಯುದ್ಧದಲ್ಲಿ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳೇ ವೀರಗಲ್ಲುಗಳು. ವೀರಗಲ್ಲುಗಳ ಮೇಲೆ ಸಾಮಾನ್ಯವಾಗಿ ಕಂಡುಬರುವ ಚಿತ್ರಗಳನ್ನು ಕುರಿತು ಆಗಲೇ ಪರಿಶೀಲಿಸಿದ್ದೇವೆ.[31] ಯುದ್ಧದಲ್ಲಿ ಮಡಿದವರಲ್ಲಿ ಎಷ್ಟೋ ಜನರು ಯುವಕರೂ, ದೊಡ್ಡ ದೊಡ್ಡ ಸ್ಥಾನಗಳನ್ನು ಅಲಂಕರಿಸಬೇಕಾಗಿದ್ದವರೂ[32] ಆಗಿದ್ದರು. ಅವರಲ್ಲಿ ಹಲವರು ರಾಜರಿಗೆ 'ಬಲದ ಕೈ' ಇದ್ದಂತೆ ಇದ್ದವರು.[33] ಮಕ್ಕಳನ್ನು ಕಳೆದುಕೊಂಡ ತಾಯಂದಿರು ವೀರಗಲ್ಲುಗಳನ್ನು ನಿಲ್ಲಿಸಿದ್ದಾರೆ.[34] ಇಂತಹ ಕಡೆಗಳಲ್ಲಿ ಮಗನ ವಿಷಯವಾಗಿ ಇದ್ದ ತಾಯಿಯ ಹೆಮ್ಮೆ ಎದ್ದು ಕಾಣುತ್ತದೆ. ತಮ್ಮನ್ನು 'ವೀರಜನನಿ'ಯರೆಂದು ಜನರು ಕರೆದಾಗ ಅವರು ಹೆಮ್ಮೆಪಟ್ಟುಕೊಳ್ಳುತ್ತಿದ್ದಿರಬೇಕು.[35] ಇನ್ನು ಕೆಲವು ಕಡೆ ಮಕ್ಕಳ ಸಾವನ್ನು ಕೇಳಿ ಶೋಕಾರ್ತರಾಗಿ ಪ್ರಾಣವನ್ನು ತ್ಯಜಿಸಿದ ತಾಯಂದಿರ, ಅಕ್ಕಂದಿರ ವಿಷಯವನ್ನು ಶಾಸನಗಳು ಹೇಳುತ್ತವೆ.[36] ಪತಿಯ ಸಾವನ್ನು ಕೇಳಿ ಹಲವರು ಸ್ತ್ರೀಯರು 'ಸಹಗಮನ' ಮಾಡುತ್ತಿದ್ದರು (ಇದರ ವಿವೇಚನೆ ಮುಂದೆ ಬರುತ್ತದೆ). ರಾಷ್ಟ್ರಕೂಟರ ಕಾಲದ ಶಾಸನವೊಂದರಲ್ಲಿ ಯುದ್ಧದಲ್ಲಿ ಮಡಿದ ಇಬ್ಬರು ಶೂರರ ಸ್ಮಾರಕವಾಗಿ ನಟ್ಟ ವೀರಗಲ್ಲನ್ನು ನೊಳಂಬರು ಸುಟ್ಟರು ಎಂಬ ವಿಷಯ ಬರುತ್ತದೆ[37] (ಊರಿನ ಜನರು ಸೇರಿ ಆ ವೀರಗಲ್ಲನ್ನು ಮತ್ತೆ ಪ್ರತಿಷ್ಠಿಸುತ್ತಾರೆ). ಇದರಿಂದ ಒಂದು ವಿಷಯವು ಸೂಚಿತವಾಗುತ್ತದೆ. ವೀರನ ಸಾವನ್ನು ಹೇಳುವ ವೀರಗಲ್ಲು ಅವನ ಹೆಸರನ್ನು ಶಾಶ್ವತವಾಗಿ ಮಾಡುತ್ತಿತ್ತಲ್ಲದೆ

---

[29] KI. I. 8, C. 750 A.D.
ವರನ್ತೇಜಸ್ವಿನೋ ಮೃತ್ಯುರ್ನತು ಮಾನಾವಖಂಡನಂ
ಮೃತ್ಯುಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇದಿನೇ ॥

[30] EC. XI. Dg. 161, C. 450 A.D.

[31] ಆ ಕಾಲದ ವೇಷಭೂಷಣಗಳನ್ನೂ, ಯುದ್ಧಾಯುಧಗಳನ್ನೂ ಕುರಿತು ಅಧ್ಯಯನಮಾಡುವವರಿಗೆ ಈ ಚಿತ್ರಗಳು ಅಮೂಲ್ಯ ತವನಿಧಿಗಳಿದ್ದಂತೆ.

[32] EC. IV. Hg. 110, C. 900 A.D. ಮಾಚಿಗ ಎನ್ನುವವನು 'ಗಂಗರ ವಂಶಾಧಿಪತಿ'ಯಾಗಿದ್ದ ಮಾದಿವರ್ಮನ ಪಟ್ಟಕ್ಕೆ ಅರ್ಹನಾಗಿದ್ದನು. ಅವನು ನೊಳಂಬರೊಡನೆ ಕಾದಿ ಮಡಿಯುತ್ತಾನೆ.

[33] SII. IX. i. 16, C. 900 A.D.

[34] EI. XV. p. 75, C. 920 A.D. –"ಆತಂಗಳಬ್ಬೆ ಲಚ್ಚಕ್ಕನೆಂಬೊಳಾಕೆ ನಿಱಿಸಿದಳೀ ಕಲ್ಲಂ."

[35] ಹೋಲಿಸಿ ನೋಡಿ : ದುರ್ಯೋಧನನು ಅಭಿಮನ್ಯುವಿನ ಶವನನ್ನು ಕಂಡು ಆಡುವ ಮಾತು—"ನಿನ್ನಂ ಪೆತ್ತಳ್ ಮೊಲೆವೆತ್ತಳೆ ! ವೀರಜನನಿವೆಸರಂ ಪೆತ್ತಳ್". (ಗದಾಯುದ್ಧ, 4.56)

[36] EC. II. 139, C. 950 A.D. ; EC. VIII. Sb. 46, C. 1018 A.D.

[37] EC. XI. Jl. 19, 907 A.D.

ಅವನ ಕಡೆಯವರಿಗೆ ಧೈರ್ಯ, ಶಕ್ತಿ, ಉತ್ಸಾಹಗಳನ್ನು ತುಂಬುತ್ತಿತ್ತು. ಇದನ್ನು ತಪ್ಪಿಸುವ ಸಲುವಾಗಿ ನೊಳಂಬರು ಆ ವೀರಗಲ್ಲನ್ನು ಸುಟ್ಟಿರಬಹುದೇ ಎಂಬ ಶಂಕೆಯೂ ಮೂಡುತ್ತದೆ. ವೀರನು ದೇವಲೋಕವನ್ನು ಸೇರಿದ ಪುರುಷನಾದುದರಿಂದ ಅವನ ವೀರಗಲ್ಲಿಗೆ ಕಳಸ, ಕನ್ನಡಿ, ಹೂವು, ತಾಂಬೂಲ, ಕೊಡೆಯ ಮರ್ಯಾದೆಗಳನ್ನು ಊರಿನ ಜನ ಸಲ್ಲಿಸುತ್ತಿದ್ದರು.[38] ವೀರಗಲ್ಲಿಗೆ ಪೂಜೆ ಸಲ್ಲಲು ಅನ್ನ ಹೂಗಳಿಗಾಗಿ ದತ್ತಿಗಳನ್ನು ಬಿಟ್ಟು ಕೊಟ್ಟಿರುವುದೂ ಉಂಟು.[39] ಸತ್ತ ವೀರನ ಸ್ಮಾರಕವಾಗಿ ವೀರಗಲ್ಲನ್ನು ನಿಲ್ಲಿಸುತ್ತಿದ್ದುದು ಮಾತ್ರವಲ್ಲದೆ ಅವನ ಸ್ಮಾರಕವಾಗಿ ಕೆಲವು ಸಲ ದೇವಾಲಯಗಳನ್ನು ಎತ್ತಿಸುತ್ತಿದ್ದರು.[40] ತಾನು ಪ್ರೀತಿಸುತ್ತಿದ್ದ ನಾಯಿಯ ಸ್ಮಾರಕವಾಗಿ ವೀರಗಲ್ಲನ್ನು ಎತ್ತಿಸಿದ ಅತ್ಯಪೂರ್ವ ನಿದರ್ಶನವೊಂದಿದೆ. ರಾಷ್ಟ್ರಕೂಟರಿಗೂ ಚೋಳರಿಗೂ ನಡೆದ ಘನಘೋರ ಯುದ್ಧದಲ್ಲಿ ಬೂತುಗನ ಅಂಕಕಾರನಾದ ಮನಾಲರನು ಅದ್ಭುತ ಸಾಹಸವನ್ನು ತೋರಿಸುತ್ತಾನೆ. ಅವನನ್ನು ಮೆಚ್ಚಿದ ಬೂತುಗನು ಏನುಬೇಕಾದರೂ ಕೇಳಿಕೋ ಕೊಡುತ್ತೇನೆ ಎಂದಾಗ ಮನಾಲರನು ಬೂತುಗನ ಹತ್ತಿರವಿದ್ದ ಕಾಳಿ ಎಂಬ ಹೆಸರಿನ ನಾಯಿಯನ್ನು ಬೇಡಿ ಪಡೆಯುತ್ತಾನೆ. ಮುಂದೆ ಅವನು ಒಮ್ಮೆ ಬೇಟೆಯಾಡುತ್ತಿರುವಾಗ ಅವನ ಕಾಳಿಯು ಹಂದಿಯೊಂದನ್ನು ಕೆಣಕಿ ಅದನ್ನು ಕೊಂದು ತಾನೂ ಸಾಯುತ್ತದೆ. ಆಗ ಮನಾರಲನು ಆ ನಾಯಿಯನ್ನು ವೀರನ ಮಟ್ಟಕ್ಕೇರಿಸಿ ಅದರ ಸ್ಮಾರಕವಾಗಿ ಒಂದು ವೀರಗಲ್ಲನ್ನು ಸ್ಥಾಪಿಸುತ್ತಾನೆ. ಆ ವೀರಗಲ್ಲನ್ನು ಪ್ರತಿನಿತ್ಯವೂ ಪೂಜಿಸಲು ಒಬ್ಬ ಗೊರವನನ್ನು ನೇಮಿಸಿ ಒಂದು ಹೊಲವನ್ನು ದಾನಮಾಡುತ್ತಾನೆ. "ಆ ಸ್ಥಾನಮನಾಳ್ವ ಗೊರವನಾ ಕಲ್ಲಂ ಪೂಜಿಸದುಂಡರಪ್ಪೊಡೆ ನಾಯಂ ಗೈದ ಪಾಪಮಂ ಕೊಂಡ" ಎಂದು ಶಾಸನವು ಕೊನೆಯಾಗುತ್ತದೆ.[41] ಮನುಷ್ಯನು ಪ್ರಾಣಿಗಳ ವಿಷಯದಲ್ಲಿ ತೋರಬಹುದಾದ ವಾತ್ಸಲ್ಯದ ಪರಾಕಾಷ್ಠೆಯನ್ನು ಈ ಶಾಸನದಲ್ಲಿ ನೋಡುತ್ತೇವೆ. ಶಾಸನದ ಮೇಲ್ಭಾಗದಲ್ಲಿ ಹಂದಿಯೊಡನೆ ಹೋರಾಡುತ್ತಿರುವ ನಾಯಿಯ ಚಿತ್ರವಿದೆ.[41.1]

ಕಾನಕಾನಹಳ್ಳಿ ತಾಲ್ಲೂಕಿನಲ್ಲಿ ಈಗಲೂ ವೀರರ ಗುಡಿಗಳಿವೆ. ಮಂಡ್ಯ ಜಿಲ್ಲೆಯಲ್ಲಿ ವೀರರಗುಡಿ, ಮಾಸ್ತಿ ಗುಡಿಗಳಿವೆ. ಉಡುಪಿ, ಭಟ್ಕಲ್ ಮುಂತಾದ ಕಡೆ ಮಾಸ್ತಿಮನೆ, ವೀರಮನೆ, ಜಟಿಗ ಮನೆಗಳಿವೆ.[42] (ಜಟಿಗ ಎಂಬುದು ಊರಿನ ರಕ್ಷಣಾಧಿದೇವತೆ). ಹೀಗೆ ಮಡಿದ ವೀರರು ಪೂಜನೀಯ ದೇವತೆಗಳೂ ಆಗಿದ್ದಾರೆ, ಕೆಲವು ಕಡೆ ಭೂತಗಳೂ ಆಗಿದ್ದಾರೆ.

## ರಾಯಭಾರ :

ರಾಜನು ತನ್ನ ಉದ್ದೇಶವು ಸಫಲವಾಗಲು ಉಪಯೋಗಿಸುವ ಸಾಧನಗಳಲ್ಲಿ ದಂಡೋಪಾಯವು ಕೊನೆಯದಾಗಿರಬೇಕೆಂದು ಪ್ರಾಚೀನ ಭಾರತೀಯರು ಭಾವಿಸಿದ್ದರು. ಯುದ್ಧವು ದಂಡೋಪಾಯದ ವ್ಯಕ್ತರೂಪ. ಅದಕ್ಕೆ ಮುನ್ನ ಸಾಮ, ದಾನ, ಭೇದಗಳೆಂಬ ಉಪಾಯಗಳನ್ನು ಕೈಕೊಂಡು ಅವು ಸಫಲವಾಗದಿದ್ದಾಗ ಮಾತ್ರ ದಂಡೋಪಾಯವನ್ನು ಅನುಸರಿಸಬೇಕೆಂದು ನೀತಿಗ್ರಂಥಗಳು ಹೇಳುತ್ತವೆ. ಪಂಪ

---

38 EC. XI. Dg. 115, C. 1148 A.D.

39 MAR (1926). p. 58, 1198 A.D.

40 EC. V. Hn. 107, C. 1140 A.D.

41 EC. III. Md. 41, 950 A.D.

41.1 ಆತಕೂರಿನ ಶಾಸನದ ಮೇಲ್ಭಾಗದ ಶಿಲ್ಪವನ್ನು ಹೋಲುವ ಚಿತ್ರವೊಂದನ್ನು ಬೆಂಗಳೂರಿಗೆ ಸಮೀಪದ ಯಲಹಂಕದಲ್ಲಿರುವ ಶಾಸನವೊಂದರಲ್ಲಿ ಕಾಣಬಹುದು. ಇದರಲ್ಲಿಯೂ ನಾಯಿಯೊಂದು ಹಂದಿಯ ಜೊತೆ ಹೋರಾಡಿ ಸತ್ತ ವಿಷಯವಿದೆ.

42 Annual Report on Kannada Research in Bombay Province (1939-40), pp. 28-9

ಭಾರತವ ಶ್ರೀ ಕೃಷ್ಣನು ತಾನು ರಾಯಭಾರಿಯಾಗಿ ದುರ್ಯೋಧನನ ಬಳಿಗೆ ಹೋಗುವ ಮುನ್ನ ಧರ್ಮರಾಜನಿಗೆ ಈ ಮಾತುಗಳನ್ನಾಡುತ್ತಾನೆ.

ಬೆಸವೂರ್ ಕೊಂಡವೊಲಕ್ಕುಮೊಂದೆ ನಯಮುಂ ಕೇಳ್ ನಿನ್ನ ಮುಂದೀಗಳಾ ।
ನುಸಿರ್ದಪ್ಪಂ ಸಲೆ ಮೆಲ್ಪು ಬಲ್ಪನಱಿಗುಂ ಕೈವಾರಮುಂ ಕೂಡೆ ಕೂ ।
ರಿಸುಗುಂ ನಿಕ್ಕುವಮುಪ್ಪಕಾರಣದಿನಿಂತೀ ಸಾಮಮುಂ ಮುಂ ಪ್ರಯೋ ।
ಗಿಸದೇಕೆಟ್ಟಪುದೆಂದು ದಂಡಮನೆ ಮುಂ ಮುಂತಿಕ್ಕುವಂ ಮಂತ್ರಿಯೋ ॥[43]

ಸಾಮಕ್ಕಿಂತ ಮುಂಚೆ ದಂಡವನ್ನು ಬಳಸಬಾರದೆಂಬ ಕೃಷ್ಣನ ಮಾತುಗಳು, ಪಂಪನ ಮಾತಿನಲ್ಲಿ ಹೇಳುವುದಾದರೆ, 'ಲೋಕಕ್ಕಿದರ್ಥಶಾಸ್ತ್ರದ ಟೀಕು'.

ಚತುರುಪಾಯಗಳಲ್ಲಿ ಮೊದಲ ಮೂರು ಉಪಾಯಗಳಾದ ಸಾಮ, ದಾನ, ಭೇದಗಳು 'ನಯ'ದ (=diplomacy) ಗುಂಪಿಗೆ ಸೇರುತ್ತವೆ.[44] ಮೇಲೆ ಉದ್ಧರಿಸಿರುವ ಕೃಷ್ಣನ ಮಾತುಗಳಲ್ಲೂ ಈ ಪದವಿರುವುದನ್ನು ಗಮನಿಸಬಹುದು. ನಯವನ್ನರಿತವನು ಲೋಕವನ್ನು ಜಯಿಸುತ್ತಾನೆ ಎಂದು ಕೌಟಿಲ್ಯನು ಹೇಳುತ್ತಾನೆ ('ನಯಜ್ಞಃ ಪೃಥಿವೀಂ ಜಯತಿ').

ಯುದ್ಧಾರಂಭದಲ್ಲಿ ರಾಜನು ಮಂತ್ರಾಲೋಚನೆಗಾಗಿ ಮಂತ್ರಿಗಳ ಸಭೆಯನ್ನು ಕರೆಯುತ್ತಾನೆ. ಆ ಸಭೆ ನಡೆಯುವ ಮಂದಿರವೇ 'ಮಂತ್ರಶಾಲೆ'. ಅಲ್ಲಿ ಅತ್ಯಂತ ಗಹನವಾದ ಮತ್ತು ರಹಸ್ಯವಾದ ವಿಷಯಗಳು ಚರ್ಚಿತವಾಗುವುದರಿಂದ ಅಲ್ಲಿಗೆ ಅನ್ಯರ ಪ್ರವೇಶವಿರಕೂಡದು. ಉಳಿದವರಿಗೆ ಕಾಣಿಸದಂತೆ ರಹಸ್ಯವಾಗಿ ನಿಂತುಕೊಂಡು ಆಲಿಸಲು ಅಲ್ಲಿ ಅವಕಾಶವಿರಕೂಡದು. ಆದ್ದರಿಂದ ಆ ಮಂದಿರದ ರಚನೆಯೇ ವಿಶಿಷ್ಟವಾಗಿರುತ್ತಿತ್ತು. ಅದಕ್ಕೆ ಕಂಬಗಳು ಕಿಟಕಿಗಳು ಇರಕೂಡದು. ಗೋಡೆಗಳಲ್ಲಿ ಬಿರುಕು ಇರಕೂಡದು. ಶುಕ, ಶಾರಿಕೆ ಮುಂತಾದ ಪಕ್ಷಿಗಳನ್ನು ಅಲ್ಲಿ ಇಟ್ಟಿರಬಾರದು.[45] ಆ ಮಂದಿರದಲ್ಲಿ ರಾಜನು ಮಂತ್ರಿಗಳೊಡನೆ ಪರ್ಯಾಲೋಚಿಸುತ್ತಾನೆ. ಮಂತ್ರಿಮಂಡಲದಲ್ಲಿ 'ಸಂಧಿವಿಗ್ರಹಿ' ಎಂಬ ಹೆಸರಿನ ಮಂತ್ರಿಯೂ ಒಬ್ಬ. ಇವನು ಈಗಿನ ವಿದೇಶಾಂಗಮಂತ್ರಿಯಿದ್ದಂತೆ. ಶತ್ರುವಿನೊಡನೆ ಸಂಧಾನ ಮತ್ತು ಯುದ್ಧ—ಇವುಗಳ ವಿಷಯದಲ್ಲಿ ಇವನ ಮಾತಿಗೆ ಬಹು ಬೆಲೆಯಿದ್ದಿತೆಂದು ಕಾಣುತ್ತದೆ. ಕನ್ನಡ ಶಾಸನಗಳಲ್ಲಿ ಈ ಹೆಸರಿನ ಮಂತ್ರಿಗಳು ಹಲವರು ಕಾಣಿಸಿಕೊಳ್ಳುತ್ತಾರೆ. ಆ ಪದವಿಗೆ ಅರ್ಹನಾಗಬೇಕಾದರೆ ಬಹು ದೊಡ್ಡ ವಿದ್ವಾಂಸನಾಗಿರಬೇಕಿತ್ತು. ಅನೇಕ ದೇಶಭಾಷೆಗಳನ್ನು ಅನೇಕ ಲಿಪಿಗಳನ್ನು ಬಲ್ಲವನಾಗಿರಬೇಕಿತ್ತು. ಅವನ ಯೋಗ್ಯತೆಗಳಲ್ಲಿ ಶುದ್ಧವಾಗಿ ಸ್ಪಷ್ಟವಾಗಿ ಬರೆಯುವುದೂ ಓದುವುದೂ ಬಹು ಮುಖ್ಯವಾದುವು. ಸೂಕ್ತಿ ಸುಧಾರ್ಣವದ ಒಂದು ಪದ್ಯವು ಅವನ ಗುಣಗಳನ್ನು ಹೀಗೆ ಪಟ್ಟಿಮಾಡುತ್ತದೆ — "ಚದುರಂ ಭಾವುಕನ್ ಇಂಗಿತಜ್ಞನ್ ಅಱಿವುಳ್ಳಂ ದೇಶಭಾಷಾನ್ವಿತಂ ಪದವಾಕ್ಯಾರ್ಥವಿವಕ್ಷಿತಂ ಬಹುಕಳಾಸಂಪನ್ನನ್ ಆಸ್ಥಾನ ಸಮ್ಮದ ವಾಗ್ಮಿತ್ತನ್"[46]. ಶಾಸನಗಳಲ್ಲಿ ಕಂಡುಬರುವ ಸಂಧಿವಿಗ್ರಹಿಗಳು ಮೇಲ್ಕಂಡ ಯೋಗ್ಯತೆಗಳನ್ನು ಪಡೆದಿದ್ದರು. ಸಂಧಿವಿಗ್ರಹಿ ಪದ್ಮ ಎಂಬಾತನು 'ಸಕಳಕಳಾಬ್ರಹ್ಮ'ನೂ, 'ಶಾಬ್ದಿಕ ತಿಳಕ'ನೂ,

---

[43] ಪಂಪಭಾರತ, 9.19.

[44] ದುರ್ಗಸಿಂಹನ ಪಂಚತಂತ್ರದಲ್ಲಿ ಉದ್ಧೃತವಾಗಿರುವ ಶ್ಲೋಕವೊಂದರಲ್ಲಿ 'ನಯ' ವನ್ನು ಉಪಾಯ ಎಂಬರ್ಥದಲ್ಲಿ ಬಳಸಿ, ದಂಡವು ಪಾಪವನ್ನು ತರುವುದಾದ್ದರಿಂದ ಅದನ್ನು ತ್ಯಜಿಸಬೇಕೆಂದು ಹೇಳಿದೆ—

ಸಾಮಾದಿದಂಡಪರ್ಯಂತಂ ನಯಃ ಪ್ರೋಕ್ತಶ್ಚತುರ್ವಿಧಃ ।
ತೇಷಾಂ ದಂಡಸ್ತು ಪಾಪೀಯಾನ್ ತಸ್ಮಾದ್ದಂಡಂ ವಿವರ್ಜಯೇತ್ ॥ (ಕನ್ನಡ ಪಂಚತಂತ್ರ, ಪು. 168)

[45] ಪಂಚತಂತ್ರ, ಪು. 204. "ಶುಕಬಾಲಾತ್ಯಂತದೂರಂ ಜನಕುಲನಯನಾಗೋಚರಂ ಸ್ತಂಭಜಾಲಾನೀಕ ಶೂನ್ಯಂ ಮಂತ್ರಗೇಹಂ."—ಸೂಕ್ತಿ ಸುಧಾರ್ಣವಂ, ಪು. 355.

[46] ಸೂಕ್ತಿಸುಧಾರ್ಣವಂ, ಪು. 361, 373.

‘ಬ್ರಹ್ಮಕವಿಚೂಡಾಮಣಿ’ಯೂ ಆಗಿದ್ದನು.[47] ರವಿದೇವ ಚಮೂಪತಿಯು ಕವಿಯೂ ತಾರ್ಕಿಕನೂ, ಶಬ್ದವಿದ್ಯಾಪರಿಣತನೂ, ಆಗಮಜ್ಞನೂ ಆಗಿದ್ದನು. ಅವನು ಹಲವು ಲಿಪಿಗಳಲ್ಲಿ ಪರಿಣತನಾಗಿದ್ದನು. ಶುದ್ಧವಾಗಿ ಸಂಶಯಕ್ಕಾಸ್ಪದವಿಲ್ಲದಂತೆ ಬರೆಯಬಲ್ಲವನಾಗಿದ್ದನು. ಮಧುರವಾಗಿ ಓದಬಲ್ಲವನಾಗಿದ್ದನು. ಅವನು ತನ್ನ ‘ವಿದ್ಯಾವಿಭವ’ ದಿಂದ ಚಾಳುಕ್ಯನೃಪನನ್ನು ಮೆಚ್ಚಿಸಿ ‘ಲಾಳ ಸಂಧಿವಿಗ್ರಹ’ ಪದವಿಯನ್ನು ಪಡೆಯುತ್ತಾನೆ.[48] ಇವನು ಚಾಳುಕ್ಯನೃಪರಿಗೆ ‘ಕಯ್ಗನ್ನಡಿ’ ಯಾಗಿದ್ದನು.[49] ತ್ರಿಭುವನಮಲ್ಲದೇವನ ಸಂಧಿ ವಿಗ್ರಹಿಯು ‘ಶಸ್ತ್ರಶಾಸ್ತ್ರಸಾಹಿತ್ಯಕಳಾ ಜ್ಞಾನನಿಧಿ’ ಯಾಗಿದ್ದನು.[50] ಪಂಚತಂತ್ರದ ಕರ್ತೃ ದುರ್ಗಸಿಂಹನೂ ಚಾಳುಕ್ಯರಲ್ಲಿ ಸಂಧಿವಿಗ್ರಹಿಯಾಗಿದ್ದುದನ್ನು ಇಲ್ಲಿ ನೆನೆಯಬಹುದು.[51] ರಾಜ್ಯದ ಹಿತಾಹಿತಗಳನ್ನು, ಶಾಂತಿ, ಸಂಧಾನ, ಯುದ್ಧಗಳನ್ನು ನಿಯಂತ್ರಿಸುತ್ತಿದ್ದವನು ಸಂಧಿವಿಗ್ರಹಿ. ಅನೇಕ ಶಾಸನಗಳ ಅಂತ್ಯದಲ್ಲಿ ಸಂಧಿವಿಗ್ರಹಿಗಳ ಹೆಸರುಗಳು ಕಂಡುಬರುತ್ತವೆ. ಕ್ರಿ. ಶ. 1079ರಲ್ಲಿ ಹುಟ್ಟಿದ ಶಾಸನವೊಂದನ್ನು ‘ಚತುರ್ಭಾಷಾ ಲಿಖಿತ್ಥಕ ವಿದ್ಯಾಧರ’ ಎನ್ನಿಸಿಕೊಂಡ ಸಂಧಿವಿಗ್ರಹಿ ನಕುಳಾರ್ಯನು ಬರೆದನು.[52] ಕ್ರಿ. ಶ. 1074ರಲ್ಲಿ ಹುಟ್ಟಿದ ಶಾಸನವನ್ನು ಬಮ್ಮಯ್ಯ ಎಂಬ ಸಂಧಿವಿಗ್ರಹಿಯು ಬರೆದನು.[53] ಬೃಹಸ್ಪತಿ ಸ್ಮೃತಿಯು ಹೇಳುವಂತೆ ಪ್ರತಿಯೊಂದು ದಾನಪತ್ರವೂ ಸಂಧಿವಿಗ್ರಹಿಯ ಒಪ್ಪಿಗೆಯನ್ನು ಪಡೆಯಬೇಕಿದ್ದಿತು.[54] ಇದು ಬಹು ಮುಖ್ಯವಾದುದು. ಏಕೆಂದರೆ, ಜಯಸ್ವಾಲರು ಹೇಳುವಂತೆ, ದಾನವನ್ನು ಕೊಟ್ಟಿರುವ ದಾನಿಯು ರಾಜ್ಯದ ಹೊರಗಿನಿಂದ ಬಂದವನಾಗಿರಬಹುದು. ಅವನು ಶತ್ರುರಾಜರ ಗೂಢಚಾರನಿರಬಹುದು. ಅದನ್ನು ಪರಿಶೀಲಿಸುವುದು ಸಂಧಿವಿಗ್ರಹಿಯ ಕರ್ತವ್ಯ.[55] ಸಂಧಿವಿಗ್ರಹಿಯು ಕೆಲವು ವೇಳೆ ಸೇನಾಧಿಪತಿಯೂ ಆಗಿದ್ದುದುಂಟು.[56]

ಯುದ್ಧಕ್ಕೆ ಮೊದಲು ಶತ್ರುರಾಜನೊಡನೆ ಸಂಧಾನವನ್ನು ನಡೆಯಿಸಬೇಕೆಂದು ಮಂತ್ರಾಲೋಚನೆಯ ಸಭೆಯಲ್ಲಿ ತೀರ್ಮಾನವಾದಾಗ ಸಂಧಾನವನ್ನು ನಡೆಯಿಸಲು ಶತ್ರುರಾಜನ ಬಳಿಗೆ ‘ದೂತ’ನಾಗಿ ಸಂಧಿ ವಿಗ್ರಹಿಯೇ ಹೋಗಿಬರುತ್ತಿದ್ದಂತೆ ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಸಂಧಿ ವಿಗ್ರಹಿಯಾಗಿದ್ದ ರವಿದೇವನು ರಾಜನ ಪರವಾಗಿ ನಿಯೋಗಿಯಾಗಿ ಹೋಗಿಬರುತ್ತಿದ್ದನು.[57] ತನ್ನ ‘ಮಂತ್ರಕ್ರಮ’ದಿಂದ ಎಷ್ಟೋ ರಾಜ್ಯಗಳನ್ನು ತನ್ನ ಚಕ್ರವರ್ತಿಗೆ ತಂದುಕೊಟ್ಟಿದ್ದನು. ಸಂಧಿವಿಗ್ರಹಿಗಳಲ್ಲದ ಇತರರೂ ನಿಯೋಗಿಗಳಾಗಿ ಕೆಲಸಮಾಡುತ್ತಿದ್ದರು.[58] ಈ ನಿಯೋಗಿಗಳನ್ನು ಮಹತ್ತರರೆಂದು ಕರೆಯುತ್ತಿದ್ದರು.[59]

---

47 BKI. I. i. 50, 1005 A.D.

48 EI. XII. p. 274, 1077 A.D

49 ಅದೇ.

50 SII. IX. i. 158, 1090 A.D.

51 ಪಂಚತಂತ್ರ, ಪು. 8.

52 EC. V. Ag. 99, 1079 A.D.

53 EC. XI. Cd. 82, 1074 A.D.

54 K. P. Jayaswal : Hindu Polity (1943), p. 321.

55 ಅದೇ.

56 EI. XII. p. 274, 1077 A.D.

57 SII. IX. i. 158, 1090 A.D.

58 BKI. I. ii. 141, 1009 A.D.

59 ಒಬ್ಬ ರಾಜನು ಇನ್ನೊಬ್ಬ ರಾಜನಿಗೆ ಸಂದೇಶವನ್ನು ಕಳುಹಿಸುವಾಗ ತನ್ನ ರಾಜನ ಅಭಿಪ್ರಾಯಗಳನ್ನು ಸರಿಯಾಗಿ ಗ್ರಹಿಸಿ, ಉಚಿತವಾದ ಭಾಷೆಯಲ್ಲಿ ಪತ್ರವನ್ನು ಸಿದ್ಧಪಡಿಸುತ್ತಿದ್ದವನು ‘ಮಹಾ ಸಂಧಿವಿಗ್ರಹಿ’. ಆ ಪತ್ರವನ್ನು

ನಿಯೋಗಿ ಅಥವಾ ದೂತನನ್ನು ಆರಿಸುವಾಗ ರಾಜನು ಬಹು ಎಚ್ಚರಿಕೆಯಿಂದಿರಬೇಕೆಂದು ನೀತಿ ಗ್ರಂಥಗಳು ಹೇಳುತ್ತವೆ. ಅವನು ವಿವೇಕಿಯೂ, ಸತ್ಕುಲ ಪ್ರಸೂತನೂ, ಪ್ರಾಮಾಣಿಕನೂ, ಇಂಗಿತಜ್ಞನೂ, ಸಕಲಶಾಸ್ತ್ರಜ್ಞನೂ, ಧೈರ್ಯಶಾಲಿಯೂ ಆಗಿರಬೇಕು. ದೇಶಕಾಲೋಚಿತವಾಗಿ ವಿಷಯಗಳನ್ನು ತೀರ್ಮಾನಿಸಲು ಶಕ್ತನಾಗಿರಬೇಕು. ಆವನಿಗೆ ವಾಕ್ಚಾತುರ್ಯವಿರುವುದು ಅತಿಮುಖ್ಯವಾದುದು ಎಂದು ಮನುಧರ್ಮ ಶಾಸ್ತ್ರವು ಹೇಳುತ್ತದೆ.[60] ಕುಜಿಳ್ ಗ್ರಂಥವೂ ಮೇಲಿನ ಗುಣಗಳನ್ನೇ ಒತ್ತಿಹೇಳಿ ತನ್ನ ಪ್ರಾಣಕ್ಕೆ ಅಪಾಯ ವಿದೆಯೆಂದು ತಿಳಿದುಕೂಡ ಶತ್ರುರಾಜನ ಮುಂದೆ ಮಾತನಾಡುವಾಗ ಮಾತಿನಲ್ಲಿ ಅಳುಕದವನೇ ರಾಜನ ಸಂದೇಶವನ್ನೊಯ್ಯಲು ಸಮರ್ಥನು ಎಂದು ಹೇಳುತ್ತದೆ.[61] ಒಂದು ರಾಜ್ಯದ ಹಿತಾಹಿತಗಳು ಬಹುಮಟ್ಟಿಗೆ ದೂತನನ್ನು ಅವಲಂಬಿಸಿದ್ದುವು.

ಪಾಂಡವರ ದೂತನಾಗಿ ಕೌರವರ ಬಳಿಗೆ ಹೋದ ಕೃಷ್ಣನನ್ನು ಚಿತ್ರಿಸುವ ನೆಪದಲ್ಲಿ ಪಂಪಕವಿಯು ತನ್ನ ಕಾಲದ ಒಬ್ಬ ನಿಯೋಗಿಯನ್ನು ಚಿತ್ರಿಸಿದ್ದಾನೆ.[62] ರಾಜರಿಗೆ ಪರಸ್ಪರ ಎಷ್ಟೇ ದ್ವೇಷವಿದ್ದರೂ ನಿಯೋಗಿ ಗಳನ್ನು ಗೌರವಿಸುತ್ತಿದ್ದರು ಎಂಬುದು ಇಲ್ಲಿ ವ್ಯಕ್ತವಾಗುತ್ತದೆ. ಆಸ್ಥಾನದಲ್ಲಿ ಕುಳಿತಿದ್ದ ದುರ್ಯೋಧನನು ಕೃಷ್ಣನನ್ನು ಗೌರವದಿಂದ ಬರಮಾಡಿಕೊಂಡು, ಅವನು ಬಂದಾಗ 'ಮೆಯ್ಯಲಸಿದಂತೆಂತಾನುಮೆೞ್ದಿರ್ದು' ಅವನಿಗೆ ಕುಳಿತುಕೊಳ್ಳುವಂತೆ ಹೇಳಿ, ಅನಂತರ ತಾನೂ ಕುಳಿತುಕೊಳ್ಳುತ್ತಾನೆ. ಪರಸ್ಪರ ಕುಶಲಪ್ರಶ್ನೆಗಳ ನಂತರ ಅವನು ಬಂದ ಉದ್ದೇಶವನ್ನು ಕೇಳುತ್ತಾನೆ. ಕೃಷ್ಣನೂ ಅಷ್ಟೇ. ದುರ್ಯೋಧನನನ್ನು ಬಹುವಾಗಿ ಗೌರವಿಸಿ ತಾನು ಬಂದ ಉದ್ದೇಶವನ್ನು ನಿರ್ಭಯವಾಗಿ, ಸ್ಪಷ್ಟಮಾತುಗಳಲ್ಲಿ ಅರುಹುತ್ತಾನೆ. ಅವನ ಮಾತುಗಳಲ್ಲಿ ಸಾಮ, ದಾನ, ಭೇದೋಪಾಯಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಅವನ ರಾಯಭಾರವು ವಿಫಲವಾದ ಮೇಲೆ ಯುದ್ಧವು ಖಚಿತವಾಗುತ್ತದೆ.

ಸಂಧಿವಿಗ್ರಹಿಯ ಶಾಖೆಗೆ ಸಂಬಂಧಿಸಿದ ಮತ್ತೊಂದು ಶಾಖೆಯೆಂದರೆ ಗೂಢಚಾರರದು. ಇವರನ್ನು ಕುರಿತ ಸ್ಪಷ್ಟೋಕ್ತಿ ಶಾಸನಗಳಲ್ಲಿಲ್ಲದಿರುವುದು ದುರದೃಷ್ಟ. ಗೂಢವಾಗಿರುವುದೇ ಅವರ ಕೆಲಸದ ರೀತಿಯಾದು ದರಿಂದ ಶಾಸನಗಳಲ್ಲಿ ಅವರ ವಿಷಯವಿಲ್ಲದಿರುವುದು ಸಹಜವೇ ಎಂದು ಸಮಾಧಾನಪಟ್ಟುಕೊಳ್ಳಬಹುದು. ದಾಸರಸ ಎಂಬುವನ 'ತಂತ್ರಪಾಳ'ನಾಗಿದ್ದ ಬೊಪ್ಪಣನ ವಿಷಯವು ಶಾಸನವೊಂದರಲ್ಲಿದೆ.[63] ತಂತ್ರಪಾಳ

---

ಕೊಂಡೊಯ್ಯುತ್ತಿದ್ದವನು 'ಮಹತ್ತರ' ಎಂಬ ಹೆಸರಿನ ಅಧಿಕಾರಿ. ಇನೊಬ್ಬ ರಾಜನಿಂದ ಬಂದ ಪತ್ರವನ್ನು ಒಡೆದು ರಾಜನ ಮುಂದೆ ಓದುತ್ತಿದ್ದವನೂ ಸಂಧಿವಿಗ್ರಹಿಯೇ. ಪತ್ರವನ್ನು ತಂದ ಮಹತ್ತರನನ್ನು ಉಚಿತವಾದ ಆಸನದಲ್ಲಿ ಕುಳ್ಳಿರಿಸಿ ಗೌರವಿಸಬೇಕಿತ್ತು. ಇಷ್ಟೂ ಪಂಪನ ಆದಿಪುರಾಣದಿಂದ (14. 43–46) ತಿಳಿದುಬರುವ ವಿಷಯಗಳು.

ಮಹತ್ತರ ಎಂಬುದು ಅಧಿಕಾರಸೂಚಕವಾದ ಸಾಮಾನ್ಯ ಪದ (general term). ಬಹುಶಃ 'ಪೆರ್ಗಡೆ' ಎಂಬುದು ಅದಕ್ಕೆ ಸಮಾನವಾದ ಕನ್ನಡ ಪದ. ನಿಯೋಗಿಯು ಒಬ್ಬ ಅಧಿಕಾರಿಯಾಗಿದ್ದುದರಿಂದಲೇ ಅವನನ್ನು ಆದಿಪುರಾಣ ದಲ್ಲಿ 'ಮಹತ್ತರ'ನೆಂದೂ ಪಂಪಭಾರತದಲ್ಲಿ 'ಪೆರ್ಗಡೆ' ಎಂದೂ ಕರೆದಿರುವುದು. ಮಹತ್ತರ ಮತ್ತು ಪೆರ್ಗಡೆ ಎಂಬ ಎರಡು ಪದಗಳ ಪೂರ್ವಾರ್ಥಗಳನ್ನು ಗಮನಿಸಿದರೆ ಪೆರ್ಗಡೆ ಎಂಬುದು ಮಹತ್ತರ ಎಂಬ ಸಂಸ್ಕೃತ ಪದದ ಕನ್ನಡಾನು- ವಾದವಾಗಿರಲೂ ಸಾಧ್ಯ.

[60] V. R. R. Dixitar : War in Ancient India, p. 339.

[61] B. A. Saletore : India's Diplomatic Relations with the West, p. 69.

[62] ಪಂಪಭಾರತ (9ನೆಯ ಆಶ್ವಾಸ). ಅವನ ಆದಿಪುರಾಣದಲ್ಲಿ ನಿಯೋಗಿ ಅಥವಾ ದೂತನ ಒಂದು ಚಿತ್ರವು ಬರುತ್ತದೆ. "ಜನಪದ ಸಮುಭಿಜಾತನುಂ ಅನ್ವಯಾಗತನುಂ ಅಭಿರೂಪನುಂ ಪ್ರತ್ಯುತ್ಪನ್ನ ಪ್ರತಿಭನುಂ ವಕ್ರೋಕ್ತಿ ನಿಪುಣನುಂ ಆಥೇಯ ವಚನನುಂ ಅನುದ್ಧತ ವೇಷನುಂ ಪರಿಚಿತಾಶೇಷ ದೇಶಭಾಷನುಂ ವಯೋವೃದ್ಧನುಂ ಬುದ್ಧಿವೃದ್ಧನುಂ ಪ್ರಸಿದ್ಧನುಮಪ್ಪ ಮಹತ್ತರನ ಕೈಯೊಳ್...." (ಆದಿಪುರಾಣ, 14.43, ವ).

[63] EC. VII. Hl. 47, 1130 A.D.

ಎಂಬ ಪದವನ್ನು ಸಂಪಾದಕರು "secretary or guardian of secrets" ಎಂದು ಅನುವಾದಿಸುತ್ತಾರೆ. ಎಂದರೆ, ರಹಸ್ಯಗಳ ಪಾಲಕ ಎಂದು ಅವರ ಅಭಿಪ್ರಾಯವಾಗಿರುವಂತೆ ಕಾಣುತ್ತದೆ. ಆದರೆ ಇದು ಖಚಿತವಾಗಿ ಸರಿಯೆಂದು ಒಪ್ಪಿಕೊಳ್ಳುವುದು ಕಷ್ಟ. 'ತಂತ್ರಪಾಳರಧಿಷ್ಠಾಯಕ'ನಾಗಿದ್ದ ಪೆರ್ಮ್ಮಾಡಿ ದೇವನ ಹೆಸರು ಶಾಸನವೊಂದರಲ್ಲಿದೆ.[64] ಮಂಗಳೇಶನ ಶಾಸನದಲ್ಲಿ 'ಚಾರ'ನ ಹೆಸರು, ದೂತ ಸಂಧಿವಿಗ್ರಹಿ ಮುಂತಾದವರ ಹೆಸರುಗಳ ಜೊತೆಯಲ್ಲಿ ಕಾಣಿಸಿಕೊಳ್ಳುತ್ತದೆ.[65] 'ಚಾರ'ಎಂದರೆ 'ಗೂಢಚಾರ' ಎಂದೇ ಅರ್ಥಮಾಡಬೇಕು.[66]

## ಯುದ್ಧಕ್ಕೆ ಸಿದ್ಧತೆ

ಸಾಮ, ದಾನ, ಭೇದಗಳು ವಿಫಲವಾದಮೇಲೆ ರಾಜನು ಅನಿವಾರ್ಯವಾಗಿ ದಂಡವನ್ನು ಪ್ರಯೋಗಿಸ ಬೇಕಾಗುತ್ತದೆ. ಎಂದರೆ, ಶತ್ರುವಿನೊಡನೆ ಯುದ್ಧವನ್ನು ಹೂಡಬೇಕಾಗುತ್ತದೆ. ಯುದ್ಧಕ್ಕೆ ಪೂರ್ವಭಾವಿಯಾಗಿ ಬಹುವಾದ ಸಿದ್ಧತೆ ನಡೆಯುತ್ತಿತ್ತು. ರಾಜನ ಬೊಕ್ಕಸದಲ್ಲಿರುವ ಐಶ್ವರ್ಯವು ಮಾತ್ರವಲ್ಲದೆ, ಜನಗಳಿಂದ ತೆರಿಗೆಯ ರೂಪದಲ್ಲಿ ಬಂದ ಹಣವೂ ಸಿದ್ಧತೆಗಾಗಿ ವಿನಿಯೋಗವಾಗುತ್ತಿತ್ತು. ಯುದ್ಧಶಿಕ್ಷಣವನ್ನು ಪಡೆದು ರಾಜಧಾನಿ ಯಲ್ಲಿ ಯಾವಾಗಲೂ ಸಿದ್ಧವಾಗಿ ನಿಂತಿರುತ್ತಿದ್ದ ಸೇನೆಯನ್ನು[67] ಮಿತ್ರರಾಜರ ಸೇನೆಗಳೂ ಸಾಮಂತರ ಸೇನೆಗಳೂ ಬಂದು ಕೂಡಿಕೊಳ್ಳುತ್ತಿದ್ದುವು. ಒಬ್ಬ ರಾಜನ ಬಳಿಗೆ ಯಾವ ಯಾವ ಕಾರಣಗಳಿಗಾಗಿ ಮಿತ್ರರಾಜರು ತಮ್ಮ ತಮ್ಮ ಸೈನ್ಯಗಳನ್ನು ಕಳುಹಿಸುತ್ತಿದ್ದರೆಂಬುದರ ಪಟ್ಟಿ ಪಂಪನಲ್ಲಿ ದೊರಕುತ್ತದೆ–(1) ಈ ರಾಜನ ಶತ್ರುವು ಅವರಿಗೆ ಶತ್ರುವಾಗಿರುವುದರಿಂದ ; (2) ಕರ್ತವ್ಯದೃಷ್ಟಿಯಿಂದ ; (3) ಶತ್ರುವಿಗೆ ಹಿಂದೆ ತಾವು ಸೋತದ್ದರಿಂದ ; (4) ರಾಜನೊಡನೆ ಇರುವ ಹಳೆಯ ಸಂಬಂಧದಿಂದ ; (5) ಕಪ್ಪಕಾಣಿಕೆಯ ಬದಲು ; (6) ರಾಜನೊಡನೆ ವಿವಾಹ ಸಂಬಂಧವನ್ನು ಬೆಳೆಸಿರುವುದರಿಂದ ; (7) ಸ್ನೇಹದಿಂದ ; (8) ರಾಜನ ಗಡಿಯಲ್ಲಿರುವುದರಿಂದ ; (9) ರಾಜನು ದೂತನನ್ನು ಕಳುಹಿಸಿದ್ದರಿಂದ ; (10) ಸ್ವಾಮಿಭೃತ್ಯ ಸಂಬಂಧದಿಂದ ; (11) ರಾಜನನ್ನು ಕುರಿತ ಭಯದಿಂದ ; (12) ರಾಜನ ಮಹಿಮೆಗೆ ಹೆದರಿ[68]–ಇತ್ಯಾದಿ. ಹಳ್ಳಿ ಹಳ್ಳಿಗಳಿಂದಲೂ ಸೈನಿಕರು ಬಂದು ನೆರೆಯುತ್ತಿದ್ದರು. ಒಂದೊಂದು ಊರಿನಲ್ಲೂ ಯುದ್ಧಶಿಕ್ಷಣವನ್ನು ಪಡೆದ ಸೈನಿಕರಿರುತ್ತಿದ್ದರೆಂಬುದಕ್ಕೆ ನಮಗೆ ಆಧಾರಗಳಿವೆ. ಇಷ್ಟಲ್ಲದೆ, ವರ್ತಕಶ್ರೇಣಿಗಳವರೂ ಚಿಕ್ಕ ಚಿಕ್ಕ ಸೈನ್ಯಗಳನ್ನು ತಮ್ಮ ವ್ಯಾಪಾರದ ರಕ್ಷಣೆಗಾಗಿ ಇಟ್ಟು ಕೊಂಡಿರುತ್ತಿದ್ದರು.[69] ಎಷ್ಟೋ ವ್ಯಾಪಾರಿಗಳು ಮಹಾ ಶೂರರೂ ಆಗಿದ್ದರು.[70] ಇವರನ್ನು "ವೀರಬಣಂಜು" ಗಳೆಂದು ಶಾಸನಗಳು ಕರೆಯುತ್ತವೆ. ಯುದ್ಧವಾದಾಗ ವರ್ತಕಶ್ರೇಣಿಗಳವರು ತಮ್ಮ ಸೈನಿಕರನ್ನು ಕಳುಹಿಸಿ ಕೊಡುತ್ತಿದ್ದರು. ಈ ಸೈನ್ಯವನ್ನು ಅರ್ಥಶಾಸ್ತ್ರವು "ಶ್ರೇಣೀಬಲ"ವೆಂದು ಕರೆಯುತ್ತದೆ. (ಶ್ರೇಣಿ = ವರ್ತಕರ

---

64 BKI. I. ii. 174, 1124 A.D.

65 IA. XIX. p. 16, 602 A.D.

66 G. T. Date : The Art of war in Ancient India, p. 65.

67 ಸಂಬಳವನ್ನು ಕೊಟ್ಟು ಇಟ್ಟುಕೊಂಡಿರುತ್ತಿದ್ದ ಸೇನೆ. ನೋಡಿ : "ಸಂಬಳವಿಲ್ಲದ ದಂಡಿನಾಳಂತೆ ಬೆರ್ಚಿ" (ಧರ್ಮಾಮೃತ, 2.68, ವ.). ಸಂಬಳ ಎಂದರೆ ಬುತ್ತಿ ಎಂದೂ ಅರ್ಥವಾಗುತ್ತದೆ. (ಸಂ. ಶಂಬಲ = ಬುತ್ತಿ)

68 ಪಂಪಭಾರತ, 9.95 ವ.

69 ಧರ್ಮಾಮೃತದಲ್ಲಿ ಬರುವ ಕತೆಯೊಂದರಲ್ಲಿ ದಯಾಮಿತ್ರ ಸೆಟ್ಟಿ ಎಂಬ ವರ್ತಕನನ್ನು ವನಚರರು ಬಂದು ತಾಗಿದಾಗ, ಸೆಟ್ಟಿಯು ತನ್ನ ದೊಡ್ಡ ಸೇನೆಯ ಸಹಾಯದಿಂದ ಅವರನ್ನು ಎದುರಿಸಿದಂತೆ ನಿರೂಪಿತವಾಗಿದೆ (1.207).

70 EC. VII. Sk. 118, 1054 A.D.

ಸಂಘ). ಬೆಟ್ಟಗುಡ್ಡಗಳಲ್ಲಿ ಯುದ್ಧಮಾಡಲು (Guerilla Warfare) ಮಲೆಪರು ಅಥವಾ ಆಟವಿಕರು ತಮ್ಮ ಸೈನ್ಯವನ್ನು ಕಳುಹಿಸಿಕೊಡುತ್ತಿದ್ದರು.[71]

ಯುದ್ಧಕ್ಕೆ ಹೊರಡಲು ಶರತ್ಕಾಲವೇ ಅತ್ಯುತ್ತಮವೆಂದು ನೀತಿಗ್ರಂಥಗಳು ಹೇಳುತ್ತವೆ.[72] ದೇವತಾ ಪೂಜೆಯಾದಮೇಲೆ ಶುಭಮುಹೂರ್ತದಲ್ಲಿ ರಾಜನು ಪುರವನ್ನು ಬಿಟ್ಟು ಹೊರಟಾಗ 'ಪ್ರಸ್ಥಾನ ಭೇರಿ' ಯನ್ನು ಹೊಡೆಯಿಸುತ್ತಿದ್ದರು.[73] ಮಂಗಳ ಪಾಠಕರು ಮಂಗಳ ವೃತ್ತೋಚ್ಚಾರಣೆಯನ್ನು ಮಾಡಿ ಹರಸುತ್ತಿದ್ದರು.[74] ಯುದ್ಧಕ್ಕೆ ಸಿದ್ಧರಾಗಿ ಹೊರಟ ಸೈನಿಕರು ದೇವಸ್ಥಾನಕ್ಕೆ ಹೋಗಿ ದೇವರ ದರ್ಶನವನ್ನು ಮಾಡುತ್ತಿದ್ದರು.[75] ಸೈನ್ಯವು ಹೊರಟುನಿಂತಾಗ ತನ್ನ ಪಕ್ಷಕ್ಕೆ ಜಯವು ದೊರೆಯಲೆಂಬ ಉದ್ದೇಶದಿಂದಲೂ, ತನ್ನ ಆತ್ಮ ಬಲಿಯಿಂದ ಸೈನಿಕರಲ್ಲಿ ವೀರೋತ್ಸಾಹವು ತುಂಬಿಬರಲೆಂಬ ಉದ್ದೇಶದಿಂದಲೂ ಸೈನಿಕನೊಬ್ಬನು ತನ್ನ ತಲೆ ಯನ್ನು ತಾನೇ ಕತ್ತರಿಸಿಕೊಳ್ಳುವ ಪದ್ಧತಿಯ ಸೂಚನೆಯು ಶಾಸನವೊಂದರಲ್ಲಿದೆ.[76] ಇನ್ನೊಂದು ಶಾಸನವು ಈ ಸೂಚನೆಯನ್ನು ಪೋಷಿಸುತ್ತದೆ. ದಂಡನಾಯಕ ಮುಂತಾದವರು ಯುದ್ಧಕ್ಕೆ ಹೊರಟುನಿಂತಾಗ ಪೋಚಿಯ ಕೇರಿಯ ನಾಯಕ ಎಂಬಾತನು ತನ್ನ ತಲೆಯನ್ನು ಬಲಿಕೊಡುತ್ತಾನೆ.[77] ಇದು ಒಂದು ರೀತಿಯ ರಕ್ತಬಲಿ ಯನ್ನು ಬಯಸುವ ಯುದ್ಧದೇವತೆಗಳನ್ನು ತೃಪ್ತಿಪಡಿಸುವ ರೀತಿಯೂ ಹೌದು. ದಾರಿಯುದ್ದಕ್ಕೂ ರಾಜನು ಧರ್ಮಕಾರ್ಯಗಳನ್ನು ಮಾಡುತ್ತಿದ್ದನು.[78] ಸೈನ್ಯದ ಚಲನೆಯು ಸುಗಮವಾಗಿರುವುದಕ್ಕಾಗಿ ದಾರಿಯನ್ನು ಸಿದ್ಧ ಪಡಿಸಲು ಸೈನ್ಯಕ್ಕಿಂತ ಮುಂಚೆಯೇ ಪಥಶಿಲ್ಪಿಗಳು ತಮ್ಮ ಸಿಬ್ಬಂದಿಯೊಡನೆ ಹೋಗಿ ಆಯಾ ಗ್ರಾಮದ ಜನಗಳಿಂದ 'ಬಿಟ್ಟಿ' (ಸಂ. ವಿಷ್ಟಿ) ಕೆಲಸವನ್ನು ಮಾಡಿಸುತ್ತಿದ್ದರು. ಬಿಟ್ಟಿಯು ಮೂರು ತೆರನಾದುದು (ಇದೇ ಶಾಸನಗಳಲ್ಲಿ ಬರುವ 'ಮೂವಿಟ್ಟಿ'). [79] (1). ಶೋಧನ ಕರ್ಮ – ಮಾರ್ಗಮಧ್ಯದ ರಸ್ತೆಯನ್ನು ಸರಿಪಡಿಸುವುದು ; ಸೇತುವೆ, ನದಿ, ಬಾವಿ ಇತ್ಯಾದಿಗಳನ್ನು ಪರೀಕ್ಷಿಸುವುದು. (2). ವಹನ ಕರ್ಮ–ಆಯುಧ, ಕವಚ, ಧಾನ್ಯ ಮುಂತಾದುವನ್ನು ಹೊರುವುದು. (3). ಅಪನಯನ ಕರ್ಮ–ಪೆಟ್ಟುತಿಂದು ಕೆಳಕ್ಕೆ ಬಿದ್ದ ಸೈನಿಕ ರನ್ನು ಅವರ ಆಯುಧಗಳ ಸಮೇತ ಹೊರುವುದು.[80] ಇವುಗಳಲ್ಲಿ ಮೊದಲನೆಯ ಕರ್ಮವು ಸೇನೆ ಬರುವುದಕ್ಕಿಂತ ಮೊದಲೂ, ಎರಡನೆಯ ಕರ್ಮವು ಸೇನೆಯ ಜೊತೆಯಲ್ಲೂ, ಮೂರನೆಯ ಕರ್ಮವು ಯುದ್ಧರಂಗದಲ್ಲೂ ನಡೆಯ ಬೇಕಾದುವು. ಸೋತುಹೋದ ರಾಜ್ಯದ ಪ್ರಜೆಗಳಿಂದಲೂ ಬಲವಂತವಾಗಿ ಈ ಕೆಲಸಗಳನ್ನು ಮಾಡಿಸುತ್ತಿದ್ದರು.

---

[71] Arthaśāstra (Tr. Shamashastry), p. 370.

[72] ಶರತ್, ಹೇಮಂತ, ಶಿಶಿರಗಳು ಯುದ್ಧಕ್ಕೆ ಅತ್ಯುತ್ತಮವೆಂದೂ, ವಸಂತವು ಮಧ್ಯಮವೆಂದೂ, ಗ್ರೀಷ್ಮವು ಅಧಮವೆಂದೂ, ಮಳೆಗಾಲದಲ್ಲಿ ಯುದ್ಧವೇ ಕೂಡದೆಂದೂ ಶುಕ್ರನೀತಿಸಾರವು ಹೇಳುತ್ತದೆ (Gustav Oppert : Weapons, Army organisation *etc.*, p. 110). ಇದರೊಡನೆ ಈ ವಾಕ್ಯವನ್ನು ಹೋಲಿಸಿ : "ಶರದಂ ಯಾತ್ರೆಗೆ ಲೇಸು." (ಸೂಕ್ತಿಸುಧಾರ್ಣವ, ಪು. 380).

[73] ಸೂಕ್ತಿಸುಧಾರ್ಣವ, ಪು. 384-5.

[74] ಪಂಪಭಾರತ, 10.27, ವ.

[75] BKI. I. i. 21, 893 A.D.

[76] EC. XV. Bl. 308, 971 A.D.

[77] EC. X. Gd. 41, 1180 A.D.

[78] El. XIII. p. 187, C. 880 A.D.

[79] SII. IX. I. 160, 1071-2 A.D. ; EC. XI. Dg. 85, 1143 A.D.

[80] ಅರ್ಥಶಾಸ್ತ್ರ III (ಸಂ. ಗಣಪತಿಶಾಸ್ತ್ರಿ), ಪು. 125.

ಜನರು ಈ ಕೆಲಸಗಳನ್ನು ಪ್ರತಿಫಲವಿಲ್ಲದೆ ಮಾಡಬೇಕಿದ್ದಿತು.[81] ಬಿಟ್ಟಿಯು ಒಂದು ರೀತಿಯಲ್ಲಿ ಹಂಗಿನ ಕೆಲಸವೂ ಹೌದು. ಅನೇಕ ಅಗ್ರಹಾರಗಳಿಗೆ ಅನೇಕ ತೆರಿಗೆಗಳ ಜೊತೆಯಲ್ಲಿ "ವಿಷ್ಟಿ"ಯನ್ನೂ ತೆಗೆದು ಹಾಕಿರುವುದನ್ನು ನೋಡಿದರೆ, ಬಿಟ್ಟಿ ಎಂದರೆ ಜನರು ಬಹು ಭಯಪಡುತ್ತಿದ್ದರೆಂದು ಕಾಣುತ್ತದೆ. ತಾವು ಮಾಡುವ ಬಿಟ್ಟಿ ಕೆಲಸವು ರಾಜನಿಗೆ ತಿಳಿಯಬೇಕು, ಅವನಿಂದ ಮಾನ್ಯತೆ ಪಡೆಯಬೇಕೆಂಬ ಭಾವನೆ ಹಲವರಿಗೆ ಬಂದಿರಲೂ ಸಾಧ್ಯ.[82]

ಯುದ್ಧಕ್ಕಾಗಿ ನಡೆಯುತ್ತಿದ್ದ ಸೇನೆಯು ತನ್ನೊಡನೆ ಕೊಂಡೊಯ್ಯುತ್ತಿದ್ದ ಪರಿಕರಗಳ ಒಂದು ಚಿತ್ರವು ಸೂಕ್ತಿಸುಧಾರ್ಣವದಲ್ಲಿ ದೊರೆಯುತ್ತದೆ. ಗುಡಿ (=ಧ್ವಜ), ಹಗ್ಗ, ಕಾಂಡಪಟ (=ತೆರೆ), ವೊರ, ಗಳಗೆ (=ಧಾನ್ಯದ ಕಣಜ), ತೊತ್ತು, ಎತ್ತು, ಬಂಡಿ, ಸಂಗುಡಿ (=?), ಕಂಟಣೆ (=ಪ್ರಾಣಿಗಳ ಮೇಲೆ ಹೇರುವ ಇಬ್ಭಾಗದ ಚೀಲ), ದಂಡಿಗೆ (=ಪಲ್ಲಕ್ಕಿ), ಸವಂಗ (=ಕವಚ), ವೊಜ್ಜೆ (=ಪಾದರಕ್ಷೆ), ಹಲ್ಲಣ (=ಜೀನು), ಕುಡುಗೋಲು, ಕತ್ತಿ, ದಬ್ಬಳ, ಕೊಡಲಿ, ಗೂಟ, ಹಾರೆ, ಹಾರಂಗಿ[82.1], ತಾಮ್ರದ ಪಾತ್ರೆಗಳು — ಇವಿಷ್ಟೂ "ದಂಡಿಂಗೆ ಸಾಮಗ್ರಿಗಳ್"[83]. ಈ ಸಾಮಾನುಗಳ ಜೊತೆಯಲ್ಲಿ ಬಿಲ್ಲು, ಸರಳು, ಈಟಿ, ತೋಮರ, ಖಡ್ಗ—ಮುಂತಾದ ಆಯುಧಗಳನ್ನು ಹೇರಿಕೊಂಡು ಬಂಡಿಗಳು ಬರುತ್ತಿದ್ದವು.[84] ಅರಮನೆಯ ಖಜಾನೆಯೂ ('ಕೊಟ್ಟಗೆ' <ಕೋಷ್ಠಾಗಾರ) ರಾಜನ ಜೊತೆಯಲ್ಲಿ ಬರುತ್ತಿತ್ತು.[85] ಆಯುಧಗಳಿಗೆ ಸಾಣೆ ಹಿಡಿದು ಹರಿತ ಮಾಡುವವರು ಬರುತ್ತಿದ್ದರು.[86] ರಾಣಿವಾಸದ ಕೆಲವರು ಸ್ತ್ರೀಯರೂ, ಹಿರಿಯ ಅಧಿಕಾರಿಗಳ ಸ್ತ್ರೀಯರೂ ಸೇನೆಯ ಜೊತೆಗೆ ಬರುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ. ಯುದ್ಧದ ಹಿಂದಿನ ದಿನ ಶಿಬಿರದಲ್ಲಿ ಪ್ರಿಯ ಪ್ರೇಯಸಿಯರಿಗೆ ನಡೆವ ಸಂಭಾಷಣೆಯನ್ನೂ, ಅವರ ಮನೋಭಾವವನ್ನೂ ಪಂಪನು ಸೊಗಸಾಗಿ ಚಿತ್ರಿಸಿದ್ದಾನೆ.[87] ಕ್ರಿ. ಶ. 1056ರ ಒಂದು ಶಾಸನವಲ್ಲಿ ಕೇಸರಿವರ್ಮರಾಜೇಂದ್ರನು ಯುದ್ಧದಲ್ಲಿ ಆಹವಮಲ್ಲನನ್ನು ಅಟ್ಟಿಕೊಂಡು ಹೋಗಿ ಅವನ ಆನೆ, ಕುದುರೆ, ಹೆಂಡಿರು, ಭಂಡಾರವನ್ನು ವಶಪಡಿಸಿಕೊಂಡಂತೆ ಹೇಳಿದೆ.[88] ಕೊಂಗುಣಿ ಮಹಾರಾಜನು ಯುದ್ಧದಲ್ಲಿ ಪಲ್ಲವರನ್ನು ಓಡಿಸಿ ಅವರ ಅಂತಃಪುರ ಸುಂದರಿಯರನ್ನು ಸೆರೆಹಿಡಿದಂತೆ ಶಾಸನವೊಂದು ತಿಳಿಸುತ್ತದೆ.[89] ಮೊದಲನೆಯ ಅಮೋಘವರ್ಷನು ವಿಂಧ್ಯಾಚಲದ ಬಳಿ ತನ್ನ ತಂದೆ ಸ್ಥಾಪಿಸಿದ ಯುದ್ಧಶಿಬಿರದಲ್ಲಿ ಹುಟ್ಟಿದನು.[90] ಸ್ತ್ರೀಯರನ್ನು ಸೇನೆಯ ಜೊತೆ ಕರೆದೊಯ್ಯುವುದು ಕಾಮಂದಕನಿಗೆ ಇಷ್ಟವಿಲ್ಲ. ಸೇನೆಯ ದೌರ್ಬಲ್ಯಕ್ಕೆ ಸ್ತ್ರೀಯರೂ ಕಾರಣವೆಂದು ಅವನ ಅಭಿಪ್ರಾಯ.[91]

---

81 ಈಗಲೂ 'ಬಿಟ್ಟಿ' ಎನ್ನುವ ಮಾತಿಗೆ 'ಪ್ರತಿಫಲವಿಲ್ಲದೆ' ಎಂಬ ಅರ್ಥ ಇರುವುದನ್ನು ಗಮನಿಸಬಹುದು. ನೋಡಿ→''ಬಿಟ್ಟಿ ಚಾಕರಿ''.

82 ನೋಡಿ—''ಅರಸಜಿಯದ ಬಿಟ್ಟಯೆ" (ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 29).

82.1 ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಪಾರಂಗಿ' ಎಂಬ ಉಪಕರಣ ಈಗಲೂ ಉಪಯೋಗದಲ್ಲಿವೆ. ಚಿಕ್ಕದಾಗಿ ಗುಂಡಿ ತೆಗೆಯಲು ಇದನ್ನು ಬಳಸುತ್ತಾರೆ.

83 ಸೂಕ್ತಿಸುಧಾರ್ಣವ, ಪು. 385.

84 ಅದೇ.

85 ಅದೇ. ರಾಜನೊಬ್ಬನು ಯುದ್ಧದಲ್ಲಿ ಶತ್ರುರಾಜನ ಭಂಡಾರವನ್ನು ವಶಪಡಿಸಿಕೊಂಡಂತೆ ಶಾಸನವೊಂದು ತಿಳಿಸುತ್ತದೆ. (MAR. 1928. p. 44).

86 ಅದೇ.

87 ಪಂಪಭಾರತ, 10. 45–46.

88 MAR (1928). p. 44, 1056 A D; EC. IV. Hg. 115, 1062 A.D.

89 EC. III. Md. 113, 713 A.D.

90 A. S. Altekar : The Rāṣṭrakūṭas and their Times, pp. 254–5.

91 ಅದೇ.

17

ದಾರಿಯಲ್ಲಿ ಬಣ್ಣ ಬಣ್ಣದ ಅನೇಕ ಧ್ವಜಗಳನ್ನು ಎತ್ತಿಕೊಂಡು, ಹೊಳೆಹೊಳೆಯುವ ಆಯುಧಗಳನ್ನು ಹಿಡಿದುಕೊಂಡು ಆನೆ ಕುದುರೆಗಳೊಡನೆ ಹೋಗುತ್ತಿದ್ದ ಸೈನ್ಯವನ್ನು ನೋಡಲು ಕುತೂಹಲದಿಂದ ಬರುತ್ತಿದ್ದ ಜನರಿಂದ ಬಲವಂತವಾಗಿ ಧ್ವಜಗಳನ್ನು ಹೊರಿಸುತ್ತಿದ್ದರು.[92] (ಇದು 'ಬಿಟ್ಟಿ' ಕೆಲಸಗಳಲ್ಲಿ ಒಂದು). ಮಧ್ಯೆ ಅಲ್ಲಲ್ಲಿ ಬೀಡುಗಳನ್ನು ಬಿಡುತ್ತಿದ್ದರು. ಇಂತಹ ಬೀಡುಗಳಲ್ಲಿ ರಾಜನು ತನ್ನ ಪರಿಜನರೊಡನೆ ಒಡ್ಡೋಲಗಗಳನ್ನು ನಡೆಯಿಸುತ್ತಿದ್ದನು. ಅಲ್ಲಿ ದೇವತಾ ಪ್ರಸಂಗಗಳಾಗಿ ರಾಜನು ಅಲ್ಲಿಗೆ ಸಮೀಪದ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದನು. ಇದಕ್ಕೆ ಬಹಳ ಒಳ್ಳೆಯ ನಿದರ್ಶನವು ಕ್ರಿ. ಶ. 1065ರ ಶಾಸನದಲ್ಲಿದೆ.[93] ಆಹವಮಲ್ಲನ ಅಪ್ಪಣೆಯ ಪ್ರಕಾರ ವಿಜಯಾದಿತ್ಯನು ದಕ್ಷಿಣದೇಶವನ್ನು ಗೆಲ್ಲಬೇಕೆಂದೂ 'ಯಾನೋ[94]ದ್ಯುಕ್ತನಾಗಿ ಸಮಸ್ತ ಸಾಮಗ್ರಿವೆರಸಿ' ಬರುತ್ತಾ ಅರಸೀಕೆರೆಯಲ್ಲಿ ಬೀಡುಬಿಟ್ಟು, ಅಲ್ಲಿಯ ನೊಳಂಬೇಶ್ವರ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಡುತ್ತಾನೆ. ಚೋಳರ ಮೇಲೆ ದಂಡೆತ್ತಿ ಹೋಗುತ್ತಾ ನಡುವೆ ಬಿಟ್ಟಿದ್ದ ಹೊಯ್ಸಳರ ಬೀಡೊಂದನ್ನು ಕಾಡಾನೆ ಪ್ರವೇಶಿಸಿದಾಗ ಅದನ್ನು ಒಂದೇ ಬಾಣದಿಂದ ಕರಿಯಯ್ಯಣನು ಕೊಂದ ವಿಷಯವು ಶಾಸನವೊಂದರಲ್ಲಿದೆ.[95] ಬೀಡುಗಳನ್ನು ಸಾಮಾನ್ಯವಾಗಿ ಜಲಸಮೃದ್ಧವಾದ ಸ್ಥಳಗಳಲ್ಲಿ ಬಿಡುತ್ತಿದ್ದರು.

ಬೀಡನ್ನು ಕಿತ್ತು ಮುಂದೆ ಹೊರಡುವುದರ ಚಿತ್ರ ಸೂಕ್ತಿಸುಧಾರ್ಣವದ ಪದ್ಯವೊಂದರಲ್ಲಿದೆ.[96] ಸೈನ್ಯದ ಪ್ರಯಾಣ ಬಹುಶಃ ಮಧ್ಯರಾತ್ರಿಯಿಂದ ಆರಂಭವಾಗುತ್ತಿತ್ತು.[97] ಮಳೆಗಾಲದಲ್ಲಿ ದಂಡೆತ್ತಿಹೋದರೆ ಸೈನಿಕರು ಅನುಭವಿಸುವ ಕಷ್ಟಗಳ ಚಿತ್ರವೂ ಅಲ್ಲಿ ದೊರೆಯುತ್ತದೆ.[98]

ಯುದ್ಧದ ಹಿಂದಿನ ದಿನದ ಶಿಬಿರದ ಚಿತ್ರವನ್ನು ಪಂಪಭಾರತವು ಅತ್ಯಂತ ಸಹಜವಾಗಿ ಚಿತ್ರಿಸುತ್ತದೆ. ಯುದ್ಧದ ಹಿಂದಿನ ದಿನ ಒಂದು ಪಕ್ಷದ ದೊರೆಯ ಕಡೆಯಿಂದ ದೂತನೊಬ್ಬನು ಇನ್ನೊಂದು ಶಿಬಿರಕ್ಕೆ ಬಂದು ನಾಳೆ ಯುದ್ಧವು ನಡೆಯಬೇಕೆಂಬ ತಮ್ಮ ಪಕ್ಷದ ನಿಶ್ಚಯವನ್ನು ತಿಳಿಸುತ್ತಾನೆ.[99] ಈ ಪಕ್ಷದವರು ತಮ್ಮ ಒಪ್ಪಿಗೆಯನ್ನು ಸೂಚಿಸುತ್ತಾರೆ. ಎರಡು ಸೇನೆಗಳಲ್ಲೂ ಸೇನಾನಿಗೆ 'ಬೀರವಟ್ಟ' (=ವೀರಪಟ್ಟ)ವನ್ನು ಕಟ್ಟುತ್ತಾರೆ.[100] ಈ ವೀರಪಟ್ಟವೆಂಬುದು ಒಂದು ಸಣ್ಣ ಪಟ್ಟಿಯ ಆಕಾರದಲ್ಲಿದ್ದಿತೆಂದು ಕಾಣುತ್ತದೆ. (ಭೀಷ್ಮರಿಗೆ ಕಟ್ಟಿದ ವೀರಪಟ್ಟವು ಹುಲ್ಲಿನ ಹಗ್ಗಕ್ಕೆ ಸಮಾನ ಎಂದು ಕರ್ಣನು ಹಾಸ್ಯಮಾಡುವುದನ್ನು ಗಮನಿಸಬಹುದು). ಇದನ್ನು ಹಣೆಗೆ ಕಟ್ಟುತ್ತಿದ್ದರು. (ಭೀಷ್ಮರಿಗೆ ಕಟ್ಟುವಾಗ ಅವರ ಕಣ್ಣುಗಳ ಮೇಲೆ

---

92 "ಪಡೆನೋಡಲ್ ಬಂದವರಂ ಗುಡಿವೊಱಿಸಿದರ್" (ಪಂಪಭಾರತ, 3.15)

93 SII. IX. i. 128, 1065 A.D.

94 ಯಾನವು ಷಾಡ್ಗುಣ್ಯಗಳಲ್ಲಿ ಒಂದು. ಸಂಧಿ (ಒಪ್ಪಂದ ಮಾಡಿಕೊಳ್ಳುವುದು), ವಿಗ್ರಹ (ಯುದ್ಧ), ಆಸನ (ಯಾವ ಪಕ್ಷವನ್ನೂ ವಹಿಸದಿರುವುದು), ಯಾನ (ಯುದ್ಧಕ್ಕೆ ಹೊರಡುವುದು), ಸಂಶ್ರಯ (ಇನ್ನೊಬ್ಬ ರಾಜನ ಸಹಾಯ ಕೋರುವುದು), ದ್ವೈಧೀಭಾವ (ಒಬ್ಬನೊಡನೆ ಸಂಧಿಮಾಡಿಕೊಂಡು ಇನ್ನೊಬ್ಬನೊಡನೆ ಯುದ್ಧ ಮಾಡುವುದು).

—Arthaśāstra (Tr. Shamashastry), p. 293.

95 EC. IV. Ng. 94, 1142 A.D.

96 ಸೂಕ್ತಿಸುಧಾರ್ಣವ, ಪು. 386. "ನಡುವಿರುಳೆೞ್ವ ಕಂಟಣೆಯನೆತ್ತುವ ಕಲ್ಸೆಳೆಗೊಂಬ ಬಂಡಿಯಂ। ಪೊಡೆವ ಪಗಲ್ವರಂ ನಡೆವ ಪಲ್ಲಣವಿಲ್ಲದೆ ನೀಳ್ದ ಮಾಳದೊಳ್। ಬಿಡುವ ತಗುಳ್ದು ತಾ ನಡವ ಬೇಯದ ಹುಗ್ಗಿಯನುಂಬ ಕಾದನೀ। ಗುರ್ಡಿವ ಬಯಲ್ಗಳೊಳ್ ಪಡುವ ಬೇವಸಮೋಲಗಿಪಂಗೆ ದಂಡಿನೊಳ್॥"

97, 98 ಅದೇ.

99 ಪಂಪಭಾರತ, 10. 32.

100 ಪಂಪಭಾರತ, 10. 34.

ನೇಲಾಡುತ್ತಿದ್ದ ಹುಬ್ಬುಗಳನ್ನೆತ್ತಿ ಪಟ್ಟವನ್ನು ಅವುಗಳ ಮೇಲೆ ಕಟ್ಟಿದರು). ಈ ವೀರಪಟ್ಟವನ್ನು ಕಟ್ಟುವ ಸಂಪ್ರದಾಯವು ಕನ್ನಡ ನಾಡಿನಲ್ಲಿ ಇದ್ದಿತೇ ಎಂಬ ಸಂದೇಹ ಸಹಜವಾಗಿಯೇ ಸುಳಿಯುತ್ತದೆ. ಸು. 1141ರ ಒಂದು ಶಾಸನದಲ್ಲಿ ' ವೀರಪಟ್ಟ 'ದ ಹೆಸರಿದೆ.[101] ಆ ಶಾಸನದ ಆರಂಭದಲ್ಲಿ ಮಾಯಿನಾಡಾಳುವ ಎಂಬುವನು ತನ್ನ ತಂದೆ ಪದ್ಮನಾಭನಿಗಾಗಿ ವೀರಗಲ್ಲೊಂದನ್ನು ನಿಲ್ಲಿಸಿದ ವಿಷಯವು ಬರುತ್ತದೆ. ಅದರ ತರುವಾಯ " ವೀರ ಶ್ರೀ ನಾರಸಿಂಹಭೂಪತಿಯ ವೀರಪಟ್ಟಬದ್ಧ ಶುಭಾಭಿಷೇಕೋತ್ಸಾಹ "ದ ವಿಷಯವು ಬರುತ್ತದೆ. ಇಲ್ಲಿ ವೀರಪಟ್ಟ ಎಂಬ ಮಾತೇನೋ ಕುತೂಹಲಕಾರಿಯಾಗಿದೆ. ಅದು ಕಿರೀಟಧಾರಣೆಯ ಉತ್ಸವವನ್ನು ಸೂಚಿಸುತ್ತದೆಯೆಂದು ಸಂಪಾದಕರು ಅಭಿಪ್ರಾಯಪಡುತ್ತಾರೆ. ಅವರ ಅಭಿಪ್ರಾಯವೇ ಸಾಧುವೆಂದು ಕಾಣುತ್ತದೆ. ಏಕೆಂದರೆ, ಇನ್ನೊಂದು ಶಾಸನದಲ್ಲಿ ಕೋವಿರಾಜ ಕೇಸರಿವರ್ಮನು ಆಹವಮಲ್ಲನ ಆನೆ, ಕುದುರೆ, ಸ್ತ್ರೀಯರು, ಭಂಡಾರ ಮುಂತಾದುವನ್ನು ಸೆರೆಹಿಡಿದು ವಿಜಯಾಭಿಷೇಕವನ್ನು ಮಾಡಿಸಿಕೊಂಡು ' ವೀರ ಸಿಂಹಾಸನ 'ವನ್ನೇರಿದ ವಿಷಯವಿದೆ.[102] ಯುದ್ಧದ ಹಿಂದಿನ ದಿನ ಸೇನಾನಾಯಕನಿಗೆ ವೀರಪಟ್ಟವನ್ನು ಕಟ್ಟುವ ಸಂಪ್ರದಾಯದ ಸೂಚನೆ ಯಾವ ಶಾಸನದಲ್ಲಿಯೂ ಇಲ್ಲ. ಆದರೆ ವೀರರಿಗೆ 'ವೀರಪಟ್ಟ'ವನ್ನು ಕಟ್ಟುವ ಪದ್ಧತಿ ಐತಿಹಾಸಿಕವಾದುದು. ಏಕೆಂದರೆ, ಕ್ರಿ.ಶ. 1142ರ ಒಂದು ಶಾಸನದಲ್ಲಿ (EC. iv. Ng.94), ಅಯ್ಯಣ ಎಂಬಾತ ಒಂದೇ ಒಂದು ಬಾಣದಿಂದ ಆನೆಯನ್ನು ಕೊಂದದ್ದಕ್ಕೆ ಅವನಿಗೆ 'ಕರಿಯಯ್ಯಣ' ಎಂದು ನಾಮಕರಣ ಮಾಡಿ ರಾಜ ಅವನಿಗೆ 'ವೀರಪಟ್ಟ'ವನ್ನು ಕಟ್ಟಿದ ಸಂಗತಿ ಬಂದಿದೆ. ಬೇರೆ ಶಾಸನಗಳಲ್ಲೂ ವೀರಪಟ್ಟದ ವಿಷಯವಿದೆ. (ನೋಡಿ–Indian Epigraphical Glosssary, P. 376. ವೀರಪಟ್ಟ = an ornament : a front plate, probably a plate worn on the forehead by distinguished warriors). ಸೇನಾಧಿಪತಿ ಪಟ್ಟವನ್ನು ಕಟ್ಟುವ ವಿಷಯವು ಮೂಲ ಮಹಾಭಾರತದಲ್ಲಿಯೇ ಇದ್ದರೂ, ಪಂಪನು ಹೇಳುವ ರೀತಿಯು ಮಾತ್ರ ದೇಶೀಯವಾಗಿರುವಂತಿದೆ. ಹೀಗೆ ಕರ್ನಾಟಕದ ಸೈನಿಕರು ಹಣೆಯಮೇಲೆ ಪಟ್ಟಿಯನ್ನು ಕಟ್ಟಿಕೊಳ್ಳುತ್ತಿದ್ದ ಈ ಸಮಕಾಲೀನ ಸಂಪ್ರದಾಯವನ್ನು ಮಹಾಭಾರತದ ಸೇನಾಧಿಪತಿಗೆ ಪಟ್ಟವನ್ನು ಕಟ್ಟುವ ಸಂಪ್ರದಾಯದ ನಿರೂಪಣೆಗೆ ಪಂಪನು ಬಳಸಿಕೊಂಡಿರಬಹುದೆ ? ಸೋಮದೇವನು ತನ್ನ ಯಶಸ್ತಿಲಕ ಚಂಪುವಿನಲ್ಲಿ ದಕ್ಷಿಣದೇಶದ, ಬಹುಶಃ ಕರ್ನಾಟಕದ, ಸೇನೆಯನ್ನು ವರ್ಣಿಸುತ್ತ—"ಅವರು ಸಮೃದ್ಧವಾಗಿ ಬೆಳೆದ ತಮ್ಮ ಕೂದಲನ್ನು ಒಟ್ಟಿಗೆ ಸೇರಿಸಿ ತಮ್ಮ ಹಣೆಯನ್ನು ಸುತ್ತುವರಿದ ಬಟ್ಟೆಯ ಪಟ್ಟಿಯಿಂದ ಕಟ್ಟಿಕೊಳ್ಳುತ್ತಿದ್ದರು"[103] ಎಂದು ಹೇಳುತ್ತಾನೆ. ಪಂಪನ ಆದಿಪುರಾಣದಲ್ಲಿ (13. 45. ವ) ಕರ್ನಾಟ ಬಲದ ವರ್ಣನೆ ಹೀಗೇ ಇದೆ. ("ಮತ್ತಿತ್ತ ಕೋಮಲ ಶ್ಯಾಮಲಚ್ಛಾಯಾ ಕಾಯಮುಪನಿಟಿಲ ಕುಟಿಲ ಘಟಿತ ಜೂಟ ಬಂಧಮುಂ..") ಬೇಗೂರಿನ ವೀರಗಲ್ಲಿನ ಮೇಲಿರುವ ಚಿತ್ರದಲ್ಲಿ ಕೆಲವರು ಸೈನಿಕರು ತಮ್ಮ ಕೂದಲನ್ನು ಮೇಲೆತ್ತಿ ಕಟ್ಟಿರುವುದು ಕಂಡುಬರುತ್ತದೆ.[104] (ಅದು ಶಿರಸ್ತ್ರಾಣವಿದ್ದರೂ ಇರಬಹುದು ಎಂಬ ಸಂದೇಹವೂ ಬರುತ್ತದೆ). ಕೆಲವರು ಸೈನಿಕರು ಈಗಿನ ಸಿಖ್ ಜನರನ್ನು ನೆನಪಿಗೆ ತರುತ್ತಾರೆ.

ಮಾರನೆಯ ದಿನವೇ ಕಾಳಗವು ಆರಂಭವಾಗುತ್ತದೆಯೆಂದು ' ಪಡೆವಳ 'ರು[105] ಎಂದರೆ ಸೈನ್ಯದ

---

101 EC. V. Hs. 17, C. 1141 A.D.

102 EC. IV. Hg. 115, 1062 A.D.

103 Handiqui : Yaśastilaka and Indian Culture, p. 59.
"ನಿಟಿಲತಟಪಟ್ಟಿಕಾಪ್ರತಾನ ಘಟಿತೋದ್ಭಟಜೂಟಿನಾ"

104 EC. IX (Frontispiece).

105 ಸೇನಾಪತಿಯು ಇಡೀ ಸೈನ್ಯದ ಮುಖ್ಯಸ್ಥನಾದರೆ, ಪಡೆವಳರು ಆ ಸೈನ್ಯದ ಒಂದೊಂದು ಭಾಗಕ್ಕೆ ಮುಖ್ಯಸ್ಥರೆಂದು ಕಾಣುತ್ತದೆ. ಅಜಿತಪುರಾಣದಲ್ಲಿ ರನ್ನನಿಂದ ಕೀರ್ತಿತಳಾಗಿರುವ ಅತ್ತಿಮಬ್ಬೆಯ ಮಗ ತೈಲನು 'ಪಡೆವಳ'ನಾಗಿದ್ದನು. ಅವನಿಗೆ 'ಪಡೆವಳ ತೈಲ'ನೆಂಬ ಹೆಸರೇ ಇದ್ದಿತು. "ಹಾಡವಳ" (=ಪಡೆವಳ) ಮುಸಣಯ್ಯ, ಅವನ ಅಣ್ಣ ಬೊಬ್ಬಯ್ಯನ– ಇವನೂ ಪಡೆವಳನೆ,–ಹೆಸರುಗಳು ಶಾಸನವೊಂದರಲ್ಲಿವೆ.—EC. IV. Ng. 56, C. 1071 A.D.

ಬೇರೆ ಬೇರೆ ಬೀಡುಗಳ ಮುಖ್ಯಸ್ಥರು ಸೈನ್ಯದಲ್ಲಿ ಸಾರಿ ಬರುತ್ತಿದ್ದರು.[106] ಆ ದಿನ ಸೈನಿಕರು ತಮ್ಮ ತಮ್ಮ ಆಯುಧಗಳನ್ನು ಮಸೆಯಿಸುತ್ತಿದ್ದರು. "ಸಾಣೆಗೊಡ್ಡಿದ ಇಟ್ಟಿಗೆಯ ರಜ"ದಂತೆ ಆ ದಿನ ಮುಳುಗುವ ಸೂರ್ಯನ ಕಾಂತಿಯು ಕಾಣಿಸಿಕೊಂಡಿತೆಂದು ಪಂಪನು ಹೇಳುತ್ತಾನೆ.[107] ಇಟ್ಟಿಗೆಯ ಚೂರುಗಳನ್ನು ಕಲ್ಲಮೇಲೆ ಹರಡಿ ಅವುಗಳ ಮೇಲೆ ಆಯುಧಗಳನ್ನು ಮಸೆಯುತ್ತಿದ್ದರೆಂದು ಕಾಣುತ್ತದೆ. ಆ ದಿನ ಸಂಜೆ ಎರಡು ಶಿಬಿರಗಳವರೂ ಕೊಳ್ಳಿಯನ್ನು ಬೀಸುತ್ತಿದ್ದರು. ಇದು ನಾವು ಎಚ್ಚರವಾಗಿದ್ದೇವೆ, ಯುದ್ಧಕ್ಕೆ ಸಿದ್ಧರಾಗುತ್ತಿದ್ದೇವೆ ಎಂಬುದರ ಸೂಚನೆಯಿರಬಹುದು. ಆ ದಿನ ರಾತ್ರಿ ವೀರರು ತಮ್ಮ ತಮ್ಮ ಇಷ್ಟದೇವತೆಗಳ ಪೂಜೆಯನ್ನು ಮಾಡಿ, ತಮ್ಮ ತಮ್ಮ ಆಯುಧಗಳನ್ನು ಪೂಜಿಸುತ್ತಿದ್ದರು. ಬೆಳಗಿನ ಜಾವಕ್ಕೆ ಪಡೆವಳರು ಎಲ್ಲರನ್ನೂ ಏಳಿಸುತ್ತಿದ್ದರು. ಸೈನಿಕರು ಎದ್ದು ತಮ್ಮ ತಮ್ಮ ಕವಚಗಳನ್ನು ತೊಟ್ಟು, ಆನೆ ಕುದುರೆಗಳನ್ನು ಸಿದ್ಧಪಡಿಸಿ ಯುದ್ಧಕ್ಕೆ ಸನ್ನದ್ಧರಾಗುತ್ತಿದ್ದರು.

## ಯುದ್ಧಭೂಮಿ:

ರಾಜನು ಯುದ್ಧರಂಗದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದನು. ವಿಷ್ಣುವರ್ಧನನನ್ನು 'ಆಳಿಂ ಮುನ್ನಿಱಿವಂ' ಎಂದರೆ, ತನ್ನ ಸೈನಿಕರಿಗಿಂತ ಮುಂದೆ ನುಗ್ಗಿ ಯುದ್ಧಮಾಡುತ್ತಿದ್ದವನು ಎಂದು ಅನೇಕ ಶಾಸನಗಳು ಪ್ರಶಂಸೆ ಮಾಡುತ್ತವೆ.[108] ಹಾನುಗಲ್ಲಿನ ಕೋಟೆಯನ್ನು ಹಿಡಿಯಲು ಯುದ್ಧವಾಗುತ್ತಿರುವಾಗ ಹೊಯ್ಸಳರ ರಾಜನು ಆನೆಯನ್ನೇರಿ ಎಲ್ಲವನ್ನೂ ಪರಿಶೀಲಿಸುತ್ತಿದ್ದನು.[109] ರಾಷ್ಟ್ರಕೂಟರಿಗೂ ಚೋಳರಿಗೂ ಯುದ್ಧವಾದಾಗ ರಾಷ್ಟ್ರಕೂಟ ಚಕ್ರವರ್ತಿ ಮೂರನೆಯ ಕೃಷ್ಣನೂ, ಗಂಗರ ಬೂತುಗನೂ ಪ್ರತ್ಯಕ್ಷವಾಗಿ ಯುದ್ಧದಲ್ಲಿ ಭಾಗವಹಿಸಿದರು. ಬೂತುಗನು ಚೋಳರ ರಾಜಾದಿತ್ಯನ ಆನೆಯ ಅಂಬಾರಿಗೆ ಹಾರಿ ಅಲ್ಲಿ ರಾಜಾದಿತ್ಯನನ್ನು ಕೊಂದಂತೆ ಶಾಸನಗಳು ತಿಳಿಸುತ್ತವೆ. ರಾಜನ ಕೆಳಗಿನ ಅಧಿಕಾರಿಗಳಲ್ಲಿ ಪ್ರಧಾನನೆಂದರೆ ಸೇನಾಧಿಪತಿ. ಸೈನ್ಯದ ಸಕಲ ಆಗುಹೋಗುಗಳನ್ನು ನೋಡಿಕೊಳ್ಳುವವನು ಇವನು. ಸೇನಾಪತಿಯ ಪದವಿಯೂ, ದಂಡನಾಯಕನ ಪದವಿಯೂ ಬೇರೆ ಬೇರೆ ಎಂದು ಕಾಣುತ್ತದೆ. ದಂಡನಾಯಕನು ಸೇನಾಧಿಪತಿಯೂ ಆಗಿದ್ದನೆಂಬುದಕ್ಕೆ ನೂರಾರು ಶಾಸನಾಧಾರಗಳಿವೆ. ಒಬ್ಬನೆ ಮಂತ್ರಿಯನ್ನು ಕುರಿತು ಹೇಳುವಾಗ ಅವನು ಸೇನಾಪತಿಯೂ ದಂಡನಾಯಕನೂ ಆಗಿದ್ದನೆಂದು ಹೇಳುವುದು[110] ಅವೆರಡೂ ಬೇರೆ ಬೇರೆ ಪದವಿಗಳೆಂಬುದನ್ನು ಸೂಚಿಸುತ್ತದೆ. ಹರ್ಷಚರಿತದಲ್ಲಿ ಸ್ಥಾಣ್ವೀಶ್ವರದ ಸೇನಾಪತಿಯ ವರ್ಣನೆಯಿದೆ.[110(a)]

ಸೈನ್ಯದಲ್ಲಿ ಕುಮಾರ ಅಥವಾ ಯುವರಾಜನ ಸ್ಥಾನವು ಸೇನಾಪತಿಗಿಂತ ಕೆಳಗಿನದು. ಅರ್ಥಶಾಸ್ತ್ರದಲ್ಲಿ ಕುಮಾರನ ಹೆಸರು ಸೇನಾಪತಿಯ ನಂತರ ಬರುವುದಲ್ಲದೆ ಸಂಭಾವನೆಯು ಸೇನಾಪತಿಗಿಂತ ಕುಮಾರನಿಗೆ ಕಡಮೆ. ಸೇನಾಪತಿಯ ಸಂಭಾವನೆ 48000 ಪಣಗಳಾದರೆ ಕುಮಾರನದು 12000

---

106 ಪಂಪಭಾರತ, 10. 34, ವ.

107 ಅದೇ, 10. 35, ವ. "ಸಾಣೆಗೊಡ್ಡಿದಿಟ್ಟಿಗೆಯ ರಜಂಬೋಲ್." ಗರಗರನೆ ತಿರುಗುವ ಸಾಣೆಯ ಚಕ್ರಕ್ಕೆ ಇಟ್ಟಿಗೆಯನ್ನು ಒಡ್ಡಿದಾಗ ಅದರಿಂದ ಹೊರಡುವ ಕೆಂಪು ಧೂಳಿನಂತೆ ಸೂರ್ಯನ ಕಾಂತಿಯಿತ್ತು ಎಂದು ಕೆಲವರು ಮೇಲಿನ ವಾಕ್ಯಕ್ಕೆ ಅರ್ಥಮಾಡುತ್ತಾರೆ.

108 EC. IV. Ng. 3, 1135 A.D.

109 EC. V. Bl. 202, 1138 A.D.

110 BKI. I. i. 111, 1071 A.D. ; EC. VIII. Sb. 170, 1126 A.D.

110(a) ವಿವರಗಳಿಗೆ, ನೋಡಿ : Pramathanath Banerjia : Public Administration in Ancient India, p. 202.

ಪಣಗಳು.[111] ಚಕ್ರವರ್ತಿಯು ತನ್ನ ವಿಶಾಲವಾದ ಸಾಮ್ರಾಜ್ಯದ ಬೇರೆ ಬೇರೆ ಭಾಗಗಳಿಗೆ ತನ್ನ ರಾಣಿಯರನ್ನು, ಮಕ್ಕಳನ್ನು ಅಧಿಕಾರಿಗಳಾಗಿ ಮಾಡಿ ಕಳುಹಿಸುತ್ತಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಹೀಗೆ ಆಳುತ್ತಿದ್ದ ರಾಜಕುಮಾರರ ಪದವಿಯನ್ನೇ 'ಕುಮಾರವೃತ್ತಿ' ಎಂದು ಶಾಸನಗಳು ಕರೆದಿರುವುದು. ಉದಾಹರಣೆಗೆ ತ್ರೈಲೋಕ್ಯಮಲ್ಲನ ಎರಡನೆಯ ಮಗ ಗಂಗಪೆರ್ಮಾಡಿದೇವನು ಗಂಗವಾಡಿ 96000 ಮುಂತಾದ ಭಾಗ ಗಳನ್ನು 'ಕುಮಾರವೃತ್ತಿ'ಯಿಂದ ಆಳುತ್ತಿದ್ದಂತೆ ಶಾಸನವೊಂದರಿಂದ ತಿಳಿದುಬರುತ್ತದೆ.[112] ಯುದ್ಧವಾದಾಗ ರಾಜಕುಮಾರರು ತಮ್ಮ ಸೇನೆಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅವರಿಗೆ ಸೇನಾಪತಿಯ ಸ್ಥಾನಕ್ಕಿಂತ ಕೆಳಗಿನ ಸ್ಥಾನವಿತ್ತು, ಮಹಾಸೇನೆಯಲ್ಲಿ.

ರಾಮಾಯಣ ಮಹಾಭಾರತಗಳ ಕಾಲದಲ್ಲಿ ಸೇನೆಯನ್ನು ಸೂಚೀವ್ಯೂಹ, ಮಕರವ್ಯೂಹ ಮುಂತಾದ ಬೇರೆ ಬೇರೆ ವ್ಯೂಹಗಳಲ್ಲಿ ನಿಲ್ಲಿಸುತ್ತಿದ್ದರು.[113] ಇಂತಹ ಯಾವ ವ್ಯೂಹದ ಹೆಸರೂ ಶಾಸನಗಳಲ್ಲಿ ಕಂಡು ಬರುವುದಿಲ್ಲ. ಆದರೂ ಸೈನ್ಯದಲ್ಲಿ ಶಿಸ್ತನ್ನು ಕಾಪಾಡುವುದಕ್ಕೂ, ಅದು ಹೆಚ್ಚು ಯಶಸ್ವಿಯಾಗಿ ಶತ್ರುವನ್ನು ಎದುರಿಸಲು ಸಮರ್ಥವಾಗುವುದಕ್ಕೂ ವ್ಯೂಹಗಳನ್ನು ರಚಿಸುತ್ತಿದ್ದರು. ಕನ್ನಡದಲ್ಲಿ ವ್ಯೂಹವನ್ನು 'ಒಡ್ಡು' ಎಂದು ಕರೆಯುತ್ತಿದ್ದರು.[114] ಬಹುಶಃ ಆನೆಗಳನ್ನು, ಕುದುರೆಗಳನ್ನು, ಕಾಲಾಳುಗಳನ್ನು ಪ್ರತ್ಯೇಕವಾಗಿ ನಿಲ್ಲಿಸುತ್ತಿದ್ದರು. ಆನೆಯ 'ವ್ಯೂಹ'ದ ಹೆಸರು ಸು. 980ರ ಶಾಸನವೊಂದರಲ್ಲಿದೆ.[115] ಶತ್ರುಗಳ ಬಲವಾದ ಸೇನೆಯ ವ್ಯೂಹವನ್ನು ನಾಶಪಡಿಸಿದ ವೀರನೆಂದು ಕದಂಬರ ಜಯಸಿಂಹನನ್ನು ಶಾಸನವೊಂದು ಪ್ರಶಂಸಿಸಿದೆ.[116] ಕೊಂತದ ಬೀರ ಎನ್ನುವವನು ಆನೆಗಳ 'ಒಡ್ಡ'ನ್ನು ಒಡೆದಂತೆ ಶಾಸನವೊಂದು ತಿಳಿಸುತ್ತದೆ.[117] ಆದರೆ ವ್ಯೂಹಗಳಲ್ಲಿ ಆನೆ, ಕುದುರೆ, ಕಾಲಾಳುಗಳನ್ನು ಹೇಗೆ ಹೇಗೆ ನಿಲ್ಲಿಸುತ್ತಿದ್ದರೆಂಬುದನ್ನು ತಿಳಿಯಲು ಯಾವ ಸಾಧನಗಳೂ ಇಲ್ಲ. ಸಾಮಾನ್ಯವಾಗಿ ವಿಶಾಲವಾದ ಬಯಲನ್ನು ಯುದ್ಧಭೂಮಿಯಾಗಿ ಆರಿಸಿಕೊಂಡು ಅಲ್ಲಿ ಸೇನೆಗಳನ್ನು ಒಡ್ಡುತ್ತಿದ್ದರು.[118] ಧರ್ಮಯುದ್ಧಕ್ಕೆ ಬಯಲನ್ನು ಯುದ್ಧಭೂಮಿಯಾಗಿ ಮಾಡಿ ಕೊಳ್ಳುವುದೇ ಉಚಿತವಾದುದು. ಬಿಲ್ಗಾರರು ಬಿಲ್ಗಾರರೊಡನೆ, ಕುದುರೆಯಾಳುಗಳು ಕುದುರೆಯಾಳು ಗಳೊಡನೆ ಹೋರಾಡಿದ ವಿಷಯವು ಶಾಸನವೊಂದರಲ್ಲಿ ಬಂದಿದೆ.[119] ಇಷ್ಟು ನಿಯಮಗಳನ್ನು ಯುದ್ಧ ರಂಗದಲ್ಲಿ ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದರೆಂದು ಊಹಿಸುವುದು ಕಷ್ಟ. ವೀರಗಲ್ಲುಗಳ ಮೇಲಿನ ಚಿತ್ರಗಳನ್ನು ನೋಡಿದರೆ ಕುದುರೆ ಸವಾರನು ಆನೆಗಳ ಮೇಲೆ, ಪದಾತಿಗಳು ಕುದುರೆ ಮತ್ತು ಆನೆಗಳ ಸೈನ್ಯಗಳ ಮೇಲೆ ಬಿದ್ದು ಹೋರಾಡುತ್ತಿದ್ದ ಹಲವಾರು ಚಿತ್ರಗಳನ್ನು ಕಾಣಬಹುದು.

---

111 H. C. Ray : 'Notes on war in Ancient India.' (Journal of the Department of Letters, Calcutta, XIV, pp. 58-9.)

112 SII. IX. i. 118, 1057 A.D.

113 ಕೆಲವು ವ್ಯೂಹಗಳ ಚಿತ್ರಗಳು ದಾತೆಯವರ The Art of War in Ancient India ಎಂಬ ಪುಸ್ತಕದಲ್ಲಿವೆ (ಪು. 94-105).

114 ಪಂಪನೂ ಈ ಮಾತನ್ನು ಬಳಸುತ್ತಾನೆ—"ಸೂಚೀವ್ಯೂಹಮನೊಡ್ಡಿ". (ಪಂಪಭಾರತ, 10. 52, ವ)

115 EC. XII. Si. 26, C. 980 A.D.

116 EC. V. Mj. 18, 1095 A.D.

117 EC. VII. Sk. 19, 1066 A.D.

118 EC. VII. Sk. 77, 1110 A.D. ; EC. VIII. Sb. 175, 1156 A.D.

119 EC. VIII. Sb. 10, C. 800 A.D.

## ರಥಗಳು

ಪ್ರಾಚೀನ ಭರತಖಂಡದ ಸೇನೆಯನ್ನು ಚತುರಂಗಬಲವೆಂದು ಕರೆಯುತ್ತಿದ್ದರು. ರಥ, ಗಜ, ಅಶ್ವ, ಪದಾತಿ—ಇವೇ ಆ ಚತುರಂಗಗಳು. ಅರ್ಥಶಾಸ್ತ್ರ, ಕಾಮಂದಕನ ನೀತಿಶಾಸ್ತ್ರ, ಅಗ್ನಿಪುರಾಣ, ನೀತಿ-ವಾಕ್ಯಾಮೃತ, ಯುಕ್ತಿಕಲ್ಪತರು, ಮುಂತಾದ ನೀತಿಗ್ರಂಥಗಳು ಚತುರಂಗಸೇನೆಯೇ ಅತ್ಯುತ್ತಮವಾದುದೆಂದು ಬಣ್ಣಿಸುತ್ತವೆ.[120] ಆದರೆ ಕ್ರಿಸ್ತಶಕದ ಆರಂಭದಿಂದೀಚೆಗೆ ಯುದ್ಧಗಳಲ್ಲಿ ರಥಗಳ ಬಳಕೆಯು ತಪ್ಪಿತು. ಗುಪ್ತರ ಕಾಲಕ್ಕೆ ಅವು ಕೇವಲ ವಸ್ತುಗಳನ್ನು ಸಾಗಿಸಲು ಸಾಧನಗಳಾಗಿ ಪರಿಣಮಿಸಿದುವು.[121] ಕಾಳಿದಾಸನು ರಥಗಳನ್ನು ಹೆಸರಿಸಿದರೂ ಅದು ಕೇವಲ ಸಂಪ್ರದಾಯದ ಅನುಸರಣೆ.[122] ಬಾಣನ ಹರ್ಷಚರಿತದಲ್ಲಿ ಬರುವ ಮಾಳವರಾಜನ ಸೇನೆಯ ವರ್ಣನೆಯಲ್ಲಿಯೂ, ಹ್ಯುಯೆನ್‌ತ್ಸಾಂಗನ ಪ್ರವಾಸದ ಬರಹದಲ್ಲಿಯೂ ರಥಗಳ ಹೆಸರು ಬಂದಿಲ್ಲ.[123] ಚೋಳರ ಯುದ್ಧಶಾಸನಗಳಲ್ಲಿಯೂ ರಥಗಳ ಪ್ರಸ್ತಾಪವಿಲ್ಲ.[124] ಮೊರೇಸರು ಮಾತ್ರ ಕದಂಬರ ಕಾಲದಲ್ಲಿ ರಥಗಳಿದ್ದುವೆಂದೂ, ಅವುಗಳನ್ನು ಯುದ್ಧಗಳಲ್ಲಿ ಬಳಸುತ್ತಿದ್ದರೆಂದೂ ವಾದಿಸಿ ಅವುಗಳನ್ನು ವರ್ಣಿಸುವುದಲ್ಲದೆ, ಅವು ಸೇನೆಯ ಮುಂಚೂಣಿಯಾಗಿದ್ದುವೆಂದೂ ಅಭಿಪ್ರಾಯಪಡುತ್ತಾರೆ.[125] ಇವರ ಅಭಿಪ್ರಾಯವು ಪರಿಶೀಲನಾರ್ಹವಾದುದು. ಅವರು ಹೇಳುವಂತೆ ಶಾಸನಗಳಲ್ಲೇನೋ ಆನೆ ಕುದುರೆಗಳ ಜೊತೆಯಲ್ಲಿ ರಥದ ಹೆಸರನ್ನೂ ಹೇಳಿರುವುದುಂಟು.[126] ಆದರೆ ಇದು ಬಹುಮಟ್ಟಿಗೆ ಹಿಂದಿನ ಸಂಪ್ರದಾಯವನ್ನನುಸರಿಸಿ ಆಡಿರುವಂತೆ ಕಂಡುಬರುವುದೇ ಹೊರತು ಯಾವ ಶಾಸನದಲ್ಲಿಯೂ ರಥವನ್ನು ಮುರಿದು ರಥದ ಕುದುರೆಗಳನ್ನೋ, ಸಾರಥಿಯನ್ನೋ, ರಥಿಕನನ್ನೋ ಕೊಂದ ವಿಷಯವು ಬರುವುದಿಲ್ಲ. 'ಗಜವೆಡಂಗ', 'ತುರಗವೆಡಂಗ' ಮುಂತಾದ ವಿಶೇಷಣಗಳಂತೆ 'ರಥವೆಡಂಗ' ಎಂಬ ವಿಶೇಷಣವು ನಮಗೆ ತಿಳಿದಮಟ್ಟಿಗೆ ಎಲ್ಲಿಯೂ ಕಂಡುಬರುವುದಿಲ್ಲ. ವೀರಗಲ್ಲುಗಳಲ್ಲಿ ಆನೆ, ಕುದುರೆ, ಕಾಲಾಳುಗಳ ಚಿತ್ರವಿರುವಂತೆ ರಥಗಳ ಚಿತ್ರಗಳಿಲ್ಲ. ಸಾರಾಂಶವೇನೆಂದರೆ, ಪ್ರಾಚೀನ ಕರ್ನಾಟಕದ ಯುದ್ಧಗಳಲ್ಲಿ ರಥವನ್ನು ಬಳಸುತ್ತಿರಲಿಲ್ಲ. ಆದರೆ ಶಿಬಿರಕ್ಕೆ ಸಾಮಾನುಗಳನ್ನು ಸಾಗಿಸಲು ಗಾಡಿಗಳನ್ನು ಬಳಸುತ್ತಿದ್ದರು.[127] ವಿಜಯನಗರದ ಸೇನೆಗಳಲ್ಲಿಯೂ ಆನೆ, ಕುದುರೆ, ಪದಾತಿಗಳು ಮಾತ್ರ ಇದ್ದುವು. ಭಾರತೀಯ ಆಕರಗಳೂ, ಪಾಶ್ಚಾತ್ಯ ಆಕರಗಳೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯವನ್ನೇ ವ್ಯಕ್ತಪಡಿಸುವುದಿಲ್ಲ.[128]

---

[120] Date : The Art of War in Ancient India, p. 53.

[121] Basham : The Wonder that was India, p. 130.

[122] India in Kālidāsa, p. 157.

[123] H.C. Ray : Notes on War in Ancient India, (Journal of the Department of Letters, Calcutta, XIV, pp. 38-39).

[124] V. R. R. Dixitar : War in Ancient India, p. 166.

[125] Moraes : The Kadamba kula, p. 280.

[162] BKI. I. ii. 175, 1124 A.D. ;
EC. VII. SK. 58, C. 1124 A.D ;
EC. VIII. Sa. 58, 1143 A.D.

[127] ಸೂಕ್ತಿಸುಧಾರ್ಣವ, ಪು. 385.—"—ಕಕ್ಕಡೆ ಸಬಳಂ ಸಲ್ಲಲಿತ ಹರಿಗೆ ಮೊದಲಾಗೆಲ್ಲಾ ಕೈದುಗಳ ಬಂಡಿಗಳ್ ಪೊಱಮಟ್ಟಾ...."

[128] B.A. Saletore : Social and Political life in Vijayanagar Empire, I, p. 415.

## ಗಜಸೇನೆ

ಸೈನ್ಯದಲ್ಲಿ ಆನೆಗಳಿಗೆ ಬಹುಮುಖ್ಯ ಸ್ಥಾನವಿದ್ದಿತು. ಆನೆ ಪ್ರಾಣಿಗಳಲ್ಲೆಲ್ಲ ಪ್ರತಿಷ್ಠಿತ ಪ್ರಾಣಿ. ಆನೆಗಳ ತವರೂರಾದ ಕನ್ನಡ ನಾಡಿನಲ್ಲಂತೂ ಅವುಗಳಿಗೆ ಹಿರಿಯ ಸ್ಥಾನವು ದೊರಕಿದ್ದುದರಲ್ಲಿ ಆಶ್ಚರ್ಯವಿಲ್ಲ. ಗಂಗವಂಶವು ಆನೆಯನ್ನು ತನ್ನ ಮುದ್ರೆಯಲ್ಲಿ ಬಳಸಿಕೊಂಡಿದೆ. ಇದಕ್ಕೆ ಕಾರಣವನ್ನು ಹೇಳುತ್ತಾ ಒಂದು ಕಥೆಯನ್ನೇ ನೆಯ್ಯುತ್ತವೆ ಶಾಸನಗಳು.[129] ಗಂಗರ ರಾಚಮಲ್ಲನು ತನ್ನ ಎಡಗೈಯಲ್ಲಿ ಮದ್ದಾನೆಯೊಂದನ್ನು ಹಿಡಿದು ನಿಲ್ಲಿಸಿದ ವಿಷಯವನ್ನು ಶಾಸನಗಳು ಬಹುವಾಗಿ ಪ್ರಶಂಸಿಸುತ್ತವೆ.[130] ಗಂಗರ ದೊರೆ ಶಿವಮಾರನು ಬರೆದ 'ಗಜಾಷ್ಟಕ'ವು ಕನ್ನಡನಾಡಿನಲ್ಲಿ 'ಒನಕೆವಾಡಾ'ಗಿ ಪರಿಣಮಿಸುವಷ್ಟು ಜನಪ್ರಿಯವಾಗಿದ್ದಿತು.[131]

ಆನೆಗಳನ್ನು ಹಿಡಿದು ಪಳಗಿಸಲು ಯಾವ ಕ್ರಮವನ್ನನುಸರಿಸುತ್ತಿದ್ದರೋ ತಿಳಿಯದು. ಆನೆಗಳು ಕಾಡಿನಿಂದ ಒಂಟೊಂಟಿಯಾಗಿ ಹೊರಬಂದು ಜನರನ್ನೂ ಬೆಳೆಗಳನ್ನೂ ನಾಶಪಡಿಸುತ್ತಿದ್ದ ವಿಷಯವು ಶಾಸನಗಳಲ್ಲಿದೆ.[132] ಈಗಿನ 'ಖೆಡ್ಡಾ' ಕಾರ್ಯಕ್ರಮದಂತೆ ಅವುಗಳನ್ನು ಹಿಡಿಯುತ್ತಿದ್ದಂತೆ ಊಹಿಸಬಹುದು. ಇದನ್ನು ಅಭಿಲಷಿತಾರ್ಥ ಚಿಂತಾಮಣಿಯು 'ವಾರಿಬಂಧ'ವೆಂದು ಕರೆದಿದೆ.[133] ಪಟ್ಟಣದ ಹೊರಭಾಗದಲ್ಲಿದ್ದ 'ವೈಹಾಳಿಯ ಬಯಲಿ'ನಲ್ಲಿ (ಸಂ. ವಾಹ್ಯಾಳಿ—ಕುದುರೆಗಳ ಸಾಲು ಅಥವಾ ಮೆರವಣಿಗೆ) ಕುದುರೆಗಳಿಗೆ ಮತ್ತು ಆನೆಗಳಿಗೆ ಶಿಕ್ಷಣವನ್ನು ಕೊಡುತ್ತಿದ್ದ ವಿಷಯವು ಹರಿಹರನ ಗಿರಿಜಾಕಲ್ಯಾಣದಲ್ಲಿ ಬಂದಿದೆ.[134] ರಾಜ್ಯಾಡಳಿತದಲ್ಲಿ ಆನೆಗಳಿಗಾಗಿಯೇ ಪ್ರತ್ಯೇಕವಾದ ಒಂದು ಶಾಖೆಯಿದ್ದಿತು. ಅದರ ಪ್ರಧಾನಾಧಿಕಾರಿಯ ಕರ್ತವ್ಯಗಳನ್ನು ಅರ್ಥಶಾಸ್ತ್ರವು ಒಂದು ಇಡೀ ಅಧ್ಯಾಯದಲ್ಲಿ ವಿಸ್ತಾರವಾಗಿ ನಿರೂಪಿಸಿದೆ.[135] ಈ ಮುಖ್ಯಾಧಿಕಾರಿಯನ್ನೇ ಕನ್ನಡ ಶಾಸನಗಳು "ಗಜಸಾಹಣಿ" ಎಂದು ಕರೆಯುವಂತೆ ಕಾಣುತ್ತದೆ.[136] (ಸಾಹಣಿ= ಮೇಲ್ವಿಚಾರಕ).[137] ಅದೇ ಅರ್ಥಶಾಸ್ತ್ರವು ಗಜವೈದ್ಯರನ್ನು ಹೆಸರಿಸುತ್ತದೆ. ಕ್ರಿ. ಶ. 1139ರ ಶಾಸನವೊಂದು ಗಜವೈದ್ಯ ವಿದ್ಯೆಯಲ್ಲಿ ಪ್ರಸಿದ್ಧನಾದ ಒಬ್ಬನನ್ನು ಹೆಸರಿಸುತ್ತದೆ.[138] ಈತನು ರಾಜ್ಯದ ಆನೆಗಳ ಇಲಾಖೆಗೆ ಸಂಬಂಧಿಸಿದವನೆನ್ನುವುದು ಸ್ಪಷ್ಟವಾಗಿದೆ. ಗಜಶಾಸ್ತ್ರವು ಪ್ರಾಚೀನ ಕರ್ನಾಟಕದ ಅಧ್ಯಯನ ವಿಷಯಗಳಲ್ಲಿ ಒಂದಾಗಿತ್ತು ಎನ್ನುವುದನ್ನು ಹಿಂದೆಯೇ ನೋಡಿದ್ದೇವೆ. ಯುದ್ಧಮಲ್ಲ ಎಂಬ ರಾಜನು ಆನೆಗಳನ್ನು ಎಣ್ಣೆಯ ಬಾವಿಗಳಲ್ಲಿ ಮೀಯಿಸುತ್ತಿದ್ದ ವಿಷಯವನ್ನು ಪಂಪನು ಹೇಳುತ್ತಾನೆ.[139]

---

129 EC. VII. Sh. 4, 1142 A.D.

130 MAR (1923). p. 114, C. 990 A.D

131 EC. VIII. Nr. 35–"ಏನೇಟ್ಟುದೊ ಶಿವಮಾರನು। ಹೀವಳಯಾಧಿಪನ ಸುಭಗ ಕವಿತಾ ಗುಣಮಂ ಭೂವಳಯದೊಳ್ ಗಜಾಷ್ಟಕ। ಮೋವನಿಗೆಯುಂಪೊನಕೆವಾಡುಮಾದುವೆ ಪೇಟ್ಟಿಂ॥"

132 EC. IV. Ng. 94, 1142 A.D.

133 ಮಾನಸೋಲ್ಲಾಸ, I (ಗಾಯಕವಾಡ್ ಓರಿಯೆಂಟಲ್ ಸೀರೀಸ್), ಪು. 46.

134 ಗಿರಿಜಾಕಲ್ಯಾಣ, 2. 74.

135 Arthaśāstra (Tr. Shamashastry), p. 151.

136 EC. XII. Gb. 34, 1134 A.D. ; SII. IX. i. 206, 1122 A.D.

137 'ಸಾಹಣಿ' ಎಂಬುದು ಸಂಸ್ಕೃತದ 'ಸಾಧನ' ಎಂಬುದರ ಪ್ರಾಕೃತರೂಪ. ಈ ಪ್ರಾಕೃತರೂಪವನ್ನು ಕನ್ನಡವು ಸ್ವೀಕರಿಸಿದೆ. 'ಸಾಹಣ' ಅಥವಾ ಸಾಹಿಣಿ ಎಂದರೆ 'ಸಿದ್ಧಪಡಿಸುವವನು,' ಸೈನ್ಯದ ಮೇಲ್ವಿಚಾರಕ ಎಂದರ್ಥ (ನೋಡಿ-ಪಾಇಅಸದ್ದಮಹಣ್ಣವೊ, ಪು. 1123).

138 EC. V. Ak. 17, 1139 A.D.

139 ಪಂಪಭಾರತ, 1. 17—"ಏನಂ ಪೇಟ್ಟುದೊ ಸಿರಿಯು। ದ್ದಾನಿಯನೆಣ್ಣೆಯೊಳೆ ತೀವಿ ದೀರ್ಘಿಕೆಗಳನಂ। ತಾ ನೃಪತಿ ನಿಚ್ಚಲಯ್ಯೂ। ಜಾನೆಯನವಗಾಹಮಿರಿಸುವಂ ಬೋದನದೊಳ್॥"

ನದಿಗಳನ್ನು ದಾಟುವಾಗ ಆನೆಗಳು ಸೇತುವೆಗಳ ಕೆಲಸವನ್ನು ಮಾಡುತ್ತಿದ್ದುವು.[140] ಯುದ್ಧದ ಮುಂಭಾಗದಲ್ಲಿ ನಿಂತು ಶತ್ರುಸೇನೆಯ ಒಡ್ಡನ್ನು ಮುರಿಯಲು ಸಹಾಯಕವಾಗುತ್ತಿದ್ದುವು. ಆನೆಯ ಮೇಲೆ ಅಂಬಾರಿಯನ್ನು ('ಬಿಸುಗೆ') ಕಟ್ಟುತ್ತಿದ್ದರು. ಲೋಹದ ಕವಚವನ್ನು (ಲೋಹವಕ್ಕರೆ. ಪಕ್ಕರೆ<ಪಕ್ಷರಕ್ಷೆ) ಕಟ್ಟಿ, ಅವುಗಳಿಗೆ ಮೊದಲು ಕಟ್ಟಿದ್ದ ಮುಖವಾಡಗಳನ್ನು ತೆಗೆಯುತ್ತಿದ್ದರು.[141] (ವೀರನೊಬ್ಬನು ತಾನು ಕೊಂದ ಆನೆಯ ಮುಖವಾಡವನ್ನು ರಾಜನಿಂದ ಪಡೆದಂತೆ ಶಾಸನವೊಂದು ತಿಳಿಸುತ್ತದೆ.[142]) ಬೇಗೂರಿನ ವೀರಗಲ್ಲಿನಲ್ಲಿರುವ ಚಿತ್ರದಲ್ಲಿ ಆನೆಯು ಕೊರಳಸುತ್ತ ಗಂಟೆಗಳ ಮಾಲಿಕೆಯಿದೆ.[143] ಅದರ ಮೇಲೆ ಸವಾರನಲ್ಲದೆ ಇಬ್ಬರು ಯೋಧರೂ ಕುಳಿತಿದ್ದಾರೆ. ಬಹುಶಃ ಒಂದು ಆನೆಯ ಮೇಲೆ ಇಬ್ಬರು ಸೈನಿಕರಿರುತ್ತಿದ್ದರೆಂದು ಕಾಣುತ್ತದೆ. ಕ್ರಿ. ಶ. 1117ರ ಶಾಸನದಲ್ಲಿ ಬಾಸಯ ಎಂಬಾತನು ಆನೆಯ ಮೇಲಿನ ಇಬ್ಬರು ಸೈನಿಕರನ್ನು ಕೊಂದ ವಿಷಯವಿದೆ.[144] ಇದೂ ಮೇಲಿನ ಚಿತ್ರದಲ್ಲಿನ ಅಂಶವನ್ನು ದೃಢಪಡಿಸುತ್ತದೆ. ಆನೆಯ ಮೇಲೆ ಕುಳಿತವರ ಆಯುಧಗಳೆಂದರೆ ಸಾಮಾನ್ಯವಾಗಿ ಬಿಲ್ಲು ಮತ್ತು ಬಾಣಗಳು.

ಆನೆಗಳೊಡನೆ ಹೋರಾಡಿ ಗೆದ್ದವರ ಮತ್ತು ಮಡಿದವರ ಪ್ರಶಂಸೆಯು ಶಾಸನಗಳ ತುಂಬ ಬಂದಿದೆ. ಆನೆಯ ಜೊತೆಯಲ್ಲಿ ಹೋರಾಡುವುದು ವ್ಯಕ್ತಿಯ ಸಾಹಸದ ಪರಾಕಾಷ್ಠೆ. ಬೇಗೂರಿನ ಶಾಸನವು ಇಂತಹ ವ್ಯಕ್ತಿಯ ಅಸಾಮಾನ್ಯ ಪರಾಕ್ರಮವನ್ನು ಹೊಗಳುತ್ತದೆ. ನಾಗತ್ತರನು 'ಆನೆಯೊಳಾಂತಿಱಿದು' ಸಾಯುವ ವಿಷಯವು ಅಲ್ಲಿ ಬಂದಿದೆ.[145] ಅದನ್ನು ಸೂಚಿಸುವ ಚಿತ್ರದಲ್ಲಿ ಆನೆಯು ನಾಗತ್ತರನ ಮೇಲೆ ಘೀಳಿಡುತ್ತ ತನ್ನ ಸೊಂಡಿಲಲ್ಲಿ ಒಬ್ಬ ಸೈನಿಕನನ್ನು ಹಿಡಿದು ಅಪ್ಪಳಿಸುತ್ತಾ ನಾಗತ್ತರನ ಮೇಲೆ ನುಗ್ಗುತ್ತಿದೆ. ನಾಗತ್ತರನು ಖಡ್ಗ ಗುರಾಣಿಗಳನ್ನು ಕೈಯಲ್ಲಿ ಹಿಡಿದು ಆನೆಯ ಕಡೆಗೆ ಮುನ್ನುಗ್ಗುತ್ತಿದ್ದಾನೆ. ಹೀಗೆಯೇ ಆನೆಯೊಡನೆ ಹೋರಾಡಿ ಸತ್ತ ಅನೇಕ ವೀರರ ಹೆಸರುಗಳನ್ನು ಶಾಸನಗಳು ಹೇಳುತ್ತವೆ. ಸು. 900ರಲ್ಲಿ ಒಕ್ಕಲ ಎಂಬಾತನು ಆನೆಯನ್ನು ಕೊಂದು ಮಡಿಯುತ್ತಾನೆ.[146] ಆನೆಯ ಅಂಬಾರಿಗೆ ಹಾರಿ ಅಲ್ಲಿರುವ ಯೋಧನೊಡನೆ ಯುದ್ಧಮಾಡುವ ವಿಷಯವು ಅನೇಕ ಶಾಸನಗಳಲ್ಲಿದೆ. ಬೂತುಗನು ರಾಜಾದಿತ್ಯನನ್ನು "ಬಿಸುಗೆಯೆ ಕಳನಾಗಿ ಸುರಿಗಿಱಿದು ಕಾದಿ" ಕೊಲ್ಲುತ್ತಾನೆ.[147] ಎಂದರೆ ಬೂತುಗನಿಗೆ ಅಂಬಾರಿಯೇ ಯುದ್ಧಭೂಮಿಯಾಯಿತು. ಇಂತಹದೇ ವಿಷಯ ಇನ್ನೊಂದು ಶಾಸನದಲ್ಲಿದೆ.[148] ಈ ಶಾಸನವಿರುವ ವೀರಗಲ್ಲಿನ ಮೇಲೆ ಎರಡು ಆನೆಗಳು ಪರಸ್ಪರ ಅಭಿಮುಖವಾಗಿ ಸೊಂಡಿಲುಗಳನ್ನು ಹೆಣೆದುಕೊಂಡು ನಿಂತಿವೆ. ಎರಡು ಆನೆಗಳ ಮೇಲೂ ಇಬ್ಬಿಬ್ಬರು ಇದ್ದಾರೆ. ಬಲಗಡೆಯ ಆನೆಯ ಮೇಲಿರುವವರು ಹಿಮ್ಮೆಟ್ಟುವ ಸ್ಥಿತಿಯಲ್ಲಿದ್ದಾರೆ. ಆ ಆನೆಯ ಮೇಲಿಂದ ಎಡ ಆನೆಯ ಮೇಲಕ್ಕೆ ಒಬ್ಬನು ಹಾರುತ್ತಿದ್ದಾನೆ. ಅವನೇ ಈ ಶಾಸನದ ನಾಯಕ. ಈ ಚಿತ್ರದಲ್ಲಿರುವ ಆನೆಗಳ ಕುಂಭಸ್ಥಳಗಳಿಗೆ ಕವಚದಂತಹ ರಕ್ಷಣೆಯಿರುವಂತಿದೆ.

---

140 IA. VIII. p. 241, 634 A.D.; EC. XII. Gb. 61, 812 A.D.

141 ಪಂಪಭಾರತ, 10. 51, ವ.

142 EC. VI. Kd. 34, 1148 A.D.

143 EC. IX. (Frontispiece).

144 MAR (1934). p. 98, 1117 A.D.

145 EI. I. p. 350, C. 850 A.D. ಕನ್ನಡ ಕಾವ್ಯಗಳಲ್ಲಿ ಬರುವ 'ಪೆಣೆದಿಱಿ' ಎಂಬುದು ಇನ್ನೊಂದು ರೀತಿಯ ಯುದ್ಧವನ್ನು ಸೂಚಿಸುತ್ತದೆ. ಇಲ್ಲಿ ವೀರನು ಆನೆಯ ಸೊಂಡಲಿಗೆ ಹೆಣೆದುಕೊಂಡು ಹೋರಾಡುತ್ತಾನೆ.

146 SII. IX. i. 12, C. 900 A.D.

147 EC. III. Md. 41, 950 A.D.

148 EC. XV. Ak. 237, 971 A.D.

ಹ್ಯುಯೆನ್‌ತ್ಸಾಂಗನು ತನ್ನ ಪ್ರವಾಸಕಥನದಲ್ಲಿ ಪುಲಿಕೇಶಿಯ ಸೇನೆಯನ್ನು ವರ್ಣಿಸುತ್ತ "ಅವರು ಯುದ್ಧಕ್ಕೆ ಮುನ್ನ ಮದ್ಯವನ್ನು ಕುಡಿದು, ತಮ್ಮ ಆನೆಗಳಿಗೂ ಮದ್ಯವನ್ನು ಕುಡಿಸಿ ಶತ್ರುಗಳ ಮೇಲೆ ಬಿಡುತ್ತಾರೆ. ತನ್ನ ಸೈನಿಕರ ಮತ್ತು ಆನೆಗಳ ಶಕ್ತಿ ಸಾಮರ್ಥ್ಯದ ಮೇಲೆ ವಿಶ್ವಾಸವಿರುವ[149] ಆ ರಾಜನು ತನ್ನ ನೆರೆಹೊರೆಯ ಶತ್ರುಗಳನ್ನು ನಿರ್ಲಕ್ಷ್ಯದಿಂದ ಕಾಣುತ್ತಾನೆ" ಎಂದು ಹೇಳಿದ್ದಾನೆ.[150] ಶಾಸನಗಳಾಗಲಿ ಕಾವ್ಯಗಳಾಗಲಿ ಇದನ್ನು ಪೋಷಿಸುವುದಿಲ್ಲವೆಂದು ಮಾತ್ರ ಹೇಳಬಹುದು. ಹ್ಯುಯೆನ್‌ತ್ಸಾಂಗನ ನಿರೂಪಣೆಯು ಸುಳ್ಳು ಎಂದು ಹೇಳಲು ಧೈರ್ಯ ಸಾಲದು. ಆನೆಗಳು ಯುದ್ಧದಲ್ಲಿ ನೋವನ್ನು ತಾಳಲಾರದೆ ಎರಡು ಕೋಡುಗಳನ್ನೂ ಊರಿ ಕೆಳಗೆ ಬೀಳುತ್ತಿದ್ದ ಚಿತ್ರವನ್ನು ಪಂಪ ಕೊಡುತ್ತಾನೆ.[151] ಸೈನಿಕರು ತಾವು ಕೊಂದ ಆನೆಗಳ ಮೊಗವಾಡ ಮತ್ತು ಪದಕಗಳನ್ನು ವಿಜಯಸ್ಮಾರಕವಾಗಿ (trophy) ಉಳಿಸಿಕೊಳ್ಳುತ್ತಿದ್ದರು.[152] ಯುದ್ಧದಲ್ಲಿ ಆನೆಯನ್ನು ಕೊಲ್ಲಲು ಕೊಂತ,[153] ಬಾಣ,[154] 'ಪಾಜಿಯಂಬು'[155] ಮುಂತಾದುವನ್ನು ಬಳಸುತ್ತಿದ್ದರು.

## ಅಶ್ವಸೇನೆ

ಕುದುರೆಗಳು ನಮ್ಮ ದೇಶದ ಪ್ರಾಣಿಗಳಲ್ಲ. ಅವುಗಳನ್ನು ಅರೇಬಿಯದಿಂದ ತರಿಸಿಕೊಳ್ಳುತ್ತಿದ್ದರು.[156] ತುರುಷ್ಕ (Turkey) ದೇಶದ ಕುದುರೆಗಳೂ ಪ್ರಸಿದ್ಧವಾಗಿದ್ದುವು.[157] ಕುದುರೆಗಳನ್ನು ನೋಡಿಕೊಳ್ಳಲು ಪ್ರತ್ಯೇಕವಾದ ಇಲಾಖೆಯೇ ಇರಬೇಕೆಂದು ಕೌಟಿಲ್ಯನ ಅರ್ಥಶಾಸ್ತ್ರವು ಹೇಳುತ್ತದೆ.[158] ಆ ಇಲಾಖೆಗೆ ಶಾಸನಗಳಲ್ಲಿ ಬರುವ 'ತುರಗ ಸಾಹಣಿ'ಯು ಮುಖ್ಯಾಧಿಕಾರಿ [ಸಾಹಣಿ=(ಅಶ್ವ) ಶಿಕ್ಷಕ]. ಕೌಟಿಲ್ಯನ 'ಹಯಾಧ್ಯಕ್ಷ' ಇವನೇ ಇರಬೇಕು. 'ಶಾಲಿಹೋತ್ರ'ವು[159] (=ಅಶ್ವಶಾಸ್ತ್ರ) ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದ ಒಂದು ಅಂಗವಾಗಿತ್ತು. ಶುಕ್ರನೀತಿಸಾರವು ಆನೆಗಳಿಗಿಂತ ಕುದುರೆಗಳಿಗೆ ಹೆಚ್ಚು ಪ್ರಾಮುಖ್ಯವು ಸಲ್ಲಬೇಕೆಂದು ಹೇಳಿದ್ದರೂ, ಪ್ರಾಚೀನ ಕರ್ನಾಟಕದ ಸೇನೆಯಲ್ಲಿ ಕುದುರೆಗಿಂತ ಆನೆಯೇ ಹೆಚ್ಚು ಪ್ರಮುಖಸ್ಥಾನವನ್ನು ಪಡೆದಿತ್ತು. ಅಭಿನವಚಂದ್ರನು ತನ್ನ 'ಅಶ್ವಶಾಸ್ತ್ರ'ವೆಂಬ ಕನ್ನಡ ಗ್ರಂಥದಲ್ಲಿ "ಅತಿದೂರಂ ಪಯಣಕ್ಕೆ ಬೇಂಟೆಗೆ ವಿನೋದಾರ್ಥಕ್ಕೆ ಸಂದಿಗ್ಧದೊ। ರ್ಜಿತಕಾರ್ಯಕ್ಕೆ ರಣಾಜಿರಕ್ಕೆ ಭಟರುಂ ಗಂಧೇಭಮುಂ ಸುತ್ತಿ ಮು। ತ್ತಿ ತುರುಂಬಿರ್ದ ಪದಕ್ಕೆ ಚಿಂತಿತ ಮನೋವಾಕ್ಕಾಯಕರ್ಮಂಗಳೊ। ರ್ಜಿತ

---

[149] ಸೈನ್ಯದಲ್ಲಿ ಹೆಚ್ಚು ಆನೆಗಳಿರುವುದನ್ನು ಶುಕ್ರನೀತಿಸಾರವು (IV. vii) ವಿರೋಧಿಸುತ್ತದೆ. ('ನಾಗಾಧಿಕಂ ನ ಹಿ').

[150] Thomas Watters : On Yuan Chwang's Travels in India, II, p. 239.

[151] ಪಂಪಭಾರತ, 10.103.

[152] EC. V. Hn. 116, 1123 A.D. ; EC. VI. Kd. 34, 1148 A.D.

[153] EC. IV. Ch. 9, 971 A.D.

[154] EC. IV. Ng. 94, 1142 A.D.

[155] ಪಂಪಭಾರತ, 11.60–"ಓರೊಂದೆ ಪಾಜಿಯಂಬಿನೊಳೋರೊಂದೆ ಗಜೇಂದ್ರಮುರುಳೆ."

[156] Altekar : The Rāṣṭrākūṭas and their Times, p. 249.

[157] EC. VII. SK. 197, C. 1182 A.D. ಕಳಿಂಗ, ಕಾಂಭೋಜ, ಬಾಹ್ಲೀಕ ದೇಶಗಳ ಕುದುರೆಗಳನ್ನು ತನ್ನ ಕೃತಿಗೆ ಮೆಚ್ಚಿ ಭೋಜರಾಜನು ತನಗೆ ಕೊಟ್ಟಂತೆ ಮೊದಲನೆಯ ನಾಗವರ್ಮನು (ಸು. 990) ಹೇಳಿಕೊಳ್ಳುತ್ತಾನೆ.–ಕಾದಂಬರಿ (ಸಂ. ಬಿ. ಮಲ್ಲಪ್ಪ), ಉತ್ತರಭಾಗ, ಪದ್ಯ 825.

[158] Arthaśāstra (Tr. Shamashastry), p. 146.

[159] ಈಗಲೂ ಮೈಸೂರಿನಲ್ಲಿ ಅಶ್ವವೈದ್ಯನನ್ನು ಕುದುರೆಗಾಡಿ ಹೊಡೆಯುವವರು 'ಸಾಲಿತ್ರಿ', 'ಸಾಲಿಸ್ತ್ರಿ' ಎಂದು ಕರೆಯುತ್ತಾರೆ. ಇದು 'ಶಾಲಿಹೋತ್ರ' ಎಂಬುದರ ತದ್ಭವವೆಂದು ಸುಲಭವಾಗಿ ಗುರುತಿಸಬಹುದು.

ನುಪ್ಪಂತು ನಿಜಾಧಿಪಂಗೆ ತುರಗಂ ನಾಬ್ಯಿಂ ಸುಖೋಪಾಯಮಂ" ಎಂಬ ಪದ್ಯದಲ್ಲಿ[160] ಕುದುರೆಯ ಉಪಯೋಗಗಳನ್ನು ಕೊಂಡಾಡಿದ್ದಾನೆ. ಈ ಕರ್ತೃವಿನ ಕಾಲ ಸು. 1400.

ಕುದುರೆಯನ್ನು ಏರಲು ಬಳಸುತ್ತಿದ್ದರು. ಅದನ್ನು ಏರುವ ಸವಾರರನ್ನು 'ಗೋಳಯಿಲರ್' ಎಂದು ಕರೆಯುತ್ತಿದ್ದರು[161] (ಘೋಟಕ=ಕುದುರೆ). ಅದನ್ನು ಏರಿ ಸವಾರಿಮಾಡುವುದೇ ಒಂದು ಕೌಶಲ. ಅಂತಹ ಕುಶಲರನ್ನು 'ತುರಗವೆಡಂಗ'ರೆಂದು ಶಾಸನಗಳು ಕರೆದಿವೆ.[162] ಆನೆಯಷ್ಟು ಶಕ್ತಿಯುತ ಪ್ರಾಣಿ ಯಲ್ಲದಿದ್ದರೂ, ವೇಗದಲ್ಲಿ ಅದನ್ನು ಮೀರಿಸುವ ಪ್ರಾಣಿಗಳು ಬಹಳ ಕಡಮೆ. ಅದರ ಓಟದ ಸೊಗಸು ಮತ್ತು ವೇಗಗಳನ್ನು ಶಾಸನಗಳು ಬಣ್ಣಿಸುತ್ತವೆ.[163] ಮಂತ್ರಿಗಳೂ, ಹಿರಿಯ ಅಧಿಕಾರಿಗಳೂ, ಅದನ್ನು ಬಳಸು ತ್ತಿದ್ದರು.[164] ಹೊಸದಾಗಿ ಕೊಂಡುಕೊಂಡ ಕುದುರೆಗಳನ್ನು ಪಳಗಿಸಿ ಒಳ್ಳೆಯ ಶಿಕ್ಷಣವನ್ನು ಕೊಡುವುದೊಂದು ಪ್ರತ್ಯೇಕ ಕಲೆಯಾಗಿತ್ತು.[165]

ಯುದ್ಧದಲ್ಲಿ ಕುದುರೆಗಳಿಗೆ ಕವಚಗಳನ್ನು ತೊಡಿಸುತ್ತಿದ್ದರು ಹೀಗೆ ಕವಚಗಳನ್ನು ತೊಡಿಸಿದಾಗ ಅವುಗಳ ಕಣ್ಣು ಮತ್ತು ಗೊರಸುಗಳು ಮಾತ್ರ ಕಾಣಿಸಿಕೊಳ್ಳುತ್ತಿದ್ದುವು ಎಂಬ ಪಂಪನ ಉಕ್ತಿ[166]ಯಲ್ಲಿ ಅಷ್ಟೇನೂ ಉತ್ಪ್ರೇಕ್ಷೆಯಿಲ್ಲ. ಇಂತಹ ಕುದುರೆಗಳ ಚಿತ್ರಗಳನ್ನು ಶಾಸನಗಳಲ್ಲಿ ಕಾಣಬಹುದು.[167] ಬೇಗೂರಿನ ವೀರಗಲ್ಲಿನಲ್ಲಿರುವ[168] ಕುದುರೆಗಳ ಮುಖಗಳಿಗೆ ಒಂದು ರೀತಿಯ ಕವಚವಿರುವಂತಿದೆ. ಒಂದೊಂದು ಕುದುರೆಗೂ ಜೀನು ಹಾಕಿದೆ. ಈ ಜೀನು ಒಂದು ರೀತಿಯಲ್ಲಿ ದೇಹಕ್ಕೆ ಕವಚವಿದ್ದಂತೆ. ಮುಂಭಾಗದಲ್ಲಿ ಕೊರಳ ಸುತ್ತಲೂ ಹಿಂಭಾಗದಲ್ಲಿ ಬಾಲದ ಸುತ್ತಲೂ ಗಂಟೆಗಳ ಸರವನ್ನು ಹಾಕಲಾಗಿದೆ. ಕಡಿವಾಣವನ್ನು ಎಡಗೈಯಲ್ಲಿ ಹಿಡಿದು, ಬಲಗೈಯಲ್ಲಿ ಖಡ್ಗವನ್ನು ಹಿಡಿದ ಸವಾರನು ಮೇಲೆ ಕುಳಿತಿದ್ದಾನೆ. ಕುದುರೆಗಳ ಗೊರಸುಗಳಿಗೆ ಲಾಳಗಳನ್ನು ಕಟ್ಟಿಸುತ್ತಿದ್ದರು.[169] ಅಶ್ವಯುದ್ಧದ ಅನೇಕ ವಿನ್ಯಾಸಗಳನ್ನು ಹೇಳುವ ಪಾರಿಭಾಷಿಕ ಪದಗಳನ್ನು ಪಂಪನು ಬಳಸುತ್ತಾನೆ.[170] ಅವುಗಳಿಗೆ ಅರ್ಥವನ್ನು ಹೇಳುವುದು ಕಷ್ಟ. ಕುದುರೆಯೊಡನೆ ಹೆಣೆದು ಹೋರಾಡಿ ಸತ್ತ ವೀರನ ವಿಷಯ ಶಾಸನವೊಂದರಲ್ಲಿ ಬಂದಿದೆ.[171] ಬಹುಶಃ ಶತ್ರುವಿನ ಕುದುರೆಯ ಕೊರಳಿಗೆ ಜೋತುಬಿದ್ದು ತನ್ನ ಕಾಲುಗಳನ್ನು ಅದರ ಎದೆಗೆ ಹೆಣೆದು ಹೋರಾಡಿರಬೇಕು. 'ಕುದುರೆಯ ಕಾಳಗ'[172] ವೆಂಬುದು ಬಹುಶಃ ಅಶ್ವಸೇನೆಗಳ ಮಧ್ಯೆ ನಡೆದ ಯುದ್ಧವನ್ನು ಸೂಚಿಸುತ್ತದೆ. ದನಗಳನ್ನು ಕಳುವುಮಾಡಲು ಕುದುರೆ ಗಳನ್ನು ಬಳಸುತ್ತಿದ್ದರು.[173] ಊರ ಹೊರಗೆ ಒಟ್ಟಾಗಿ ಮೇಯುತ್ತಿರುವ ದನಗಳನ್ನು ಕುದುರೆಯ ಮೇಲೇರಿ

---

160 ಕರ್ಣಾಟಕ ಕವಿಚರಿತೆ I (1961), ಪು. 505.

161 EC. II. 138, C. 940 A.D.

162 EI. XIII. p. 187, C. 880 A.D.

163 EC. IV. Ng. 28, C. 1125 A.D. ; EC. VII. Sh. 56, 1125 A.D.

164 ಅದೇ.

165 EI. XIII. p. 301, 1125 A.D.

166 ಪಂಪಭಾರತ, 10. 51, ವ.

167 The Kadamba Kula, p. 280.

168 EC. IX. (Frontispiece).

169 ಶಬ್ದಮಣಿದರ್ಪಣ (1959), ಪು. 84. "ಜೆಟ್ಟದುವೆನಿಪ್ಪ ಲೋಹಖುರವಳಯುಂಗಳ್".

170 ಪಂಪಭಾರತ, 10. 77.

171 EC. V. Mj. 43, 1022 A.D.

172 EC. XI. Hr. 30, C. 1100 A.D.

173 EC. VII. Sk. 32, C. 1134 A.D.

ಬಂದು ವೇಗವಾಗಿ ಓಡಿಸಿಕೊಂಡು ಹೋಗುವುದು ಸುಲಭ. ಅವರನ್ನು ಅಟ್ಟಿಕೊಂಡು ಹೋಗಿ ದನಗಳನ್ನು ಹಿಂದಿರುಗಿಸಲೂ ಕುದುರೆಗಳನ್ನು ಬಳಸುತ್ತಿದ್ದರು.[174] ಆನೆಯ ಕುಂಭಸ್ಥಳಕ್ಕೆ ತನ್ನ ಕುದುರೆಯನ್ನು ಹಾಯಿಸಿದ ವೀರನೊಬ್ಬನ ಅದ್ಭುತ ಸಾಹಸವನ್ನು ಶಾಸನವೊಂದು ಹೊಗಳುತ್ತದೆ ('ಭೀಮಯ್ಯನ ಮಗಂ ಪೆರ್ಗ್ಗಡೆ ಬೆಣಾಯ್ಯಂ ಗಂಗರಾನೆಯ ಕುಂಭಸ್ಥಳಕ್ಕೆ ಕುದುರೆಯಂ ಪಾಯಿ[ಸಿ] ಸತ್ತೊಡೆ...").[175]

ಯುದ್ಧಸನ್ನದ್ಧವಾದ ಕುದುರೆಗೆ ಜೀನುಗಳನ್ನು ತೊಡಿಸುತ್ತಿದ್ದುದು ಮಾತ್ರವಲ್ಲದೆ ಅದರ ಮೇಲೆ ಸವಾರನ ಉಪಯೋಗಕ್ಕಾಗಿ ಬಿಲ್ಲು, ಪರಶು, ಸೂಲಿಗೆ, ತೀರಿಕೆ, ಭಿಂಡಿವಾಳ, ಕರವಾಳ, ಕರ್ಕಡೆ, ಚಕ್ರ ಮುಂತಾದ ಆಯುಧಗಳನ್ನು ಸಿದ್ಧಗೊಳಿಸಿರುತ್ತಿದ್ದರು.[176]

### ಪದಾತಿ

ಪದಾತಿ ಸೇನೆಯ ಸೈನಿಕರು ನೆಲದ ಮೇಲೆ ನಿಂತು ಹೋರಾಡುವವರಾದ್ದರಿಂದ ಅವರನ್ನು "ಕಾಲಾಳು" ಗಳೆಂದು ಕನ್ನಡಶಾಸನಗಳು ಕರೆಯುತ್ತವೆ. (ಆನೆಯ ಮತ್ತು ಕುದುರೆಯ ಮೇಲಿನ ಸೈನಿಕರು "ಮೇಲಾಳು"ಗಳು). ಗಜಸೇನೆ, ಅಶ್ವಸೇನೆಗಿಂತ ಪದಾತಿಸೇನೆಯು ಎಷ್ಟೋ ಪಾಲು ದೊಡ್ಡದಾಗಿರುತ್ತಿದ್ದುದು ಸಹಜವೇ. ಪದಾತಿ ಬಲದಲ್ಲಿ ರಾಜನೇ ನೇಮಿಸಿಕೊಂಡಿದ್ದ ಸೈನಿಕರ ಸಂಖ್ಯೆ ದೊಡ್ಡದಾಗಿದ್ದಿರಬೇಕು. ಇದನ್ನು 'ಭೃತ' ವೆಂದು ಕರೆಯುತ್ತಾರೆ.[177] ಇದಲ್ಲದೆ 'ಮೂಲ' ಎಂಬ ಹೆಸರಿನ ಸೇನೆಯೂ ಇತ್ತು.[178] ಇದು ಒಂದು ರೀತಿಯಲ್ಲಿ ವಂಶಪಾರಂಪರ್ಯವಾಗಿ ಸೈನಿಕವೃತ್ತಿಯನ್ನು ಅವಲಂಬಿಸಿದವರಿಂದ ಕೂಡಿದ ಸೈನ್ಯ. ರಾಜನ ಸಂಪೂರ್ಣ ವಿಶ್ವಾಸಕ್ಕೆ ಪಾತ್ರವಾಗಿದ್ದ ಸೇನೆಯ ಭಾಗವೆಂದರೆ ಇದೇ. ಪುಲಿಕೇಶಿಯ ಐಹೊಳೆ ಶಾಸನದಲ್ಲಿ[179] ಮತ್ತು ಸು. 940ರ ಒಂದು ಶಾಸನದಲ್ಲಿ[180] ಮೂಲಬಲ ಅಥವಾ ಮೌಲದ ಹೆಸರಿದೆ. ಇದಲ್ಲದೆ ಯುದ್ಧವೊದಗಿದಾಗ ವರ್ತಕ ಶ್ರೇಣಿಗಳು ತಾವು ತಮ್ಮ ವ್ಯಾಪಾರದ ಸಂರಕ್ಷಣೆಗಾಗಿ ನೇಮಿಸಿಕೊಂಡಿದ್ದ ಸೇನೆಯನ್ನು ಕೊಡುತ್ತಿದ್ದರು. ಈ ಸೇನೆಯನ್ನು ಅರ್ಥಶಾಸ್ತ್ರವು 'ಶ್ರೇಣೀ' ಎಂದು ಕರೆಯುತ್ತದೆ.[181] ಕರ್ನಾಟಕದಲ್ಲಿ ಇಂತಹ ಸೇನೆ ಇತ್ತೇ ಎನ್ನುವುದು ವಿಚಾರಾರ್ಹವಾದ ಸಂಗತಿ. ಇಲ್ಲಿ ಅನೇಕ ವರ್ತಕ ಶ್ರೇಣಿಗಳಿದ್ದುದೇನೋ ನಿಜ. ಅವುಗಳ ವ್ಯಾಪಾರವು ಕರ್ನಾಟಕದ ಗಡಿಯಾಚೆಗೂ ವ್ಯಾಪಿಸಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ.[182] ಕಳ್ಳರ ಭಯವಿದ್ದ ಆ ಕಾಲದಲ್ಲಿ ವ್ಯಾಪಾರಿಗಳ ಜೊತೆಯಲ್ಲಿ ಸೈನಿಕರೂ ಇದ್ದಿರಬೇಕು. ಒಬ್ಬೊಬ್ಬ ವರ್ತಕನೂ ಪ್ರತ್ಯೇಕವಾಗಿ ಸೇನೆಯನ್ನು ನೇಮಿಸಿಕೊಂಡಿರುವುದು ಅಸಂಭವ. ಈ ಕೆಲಸವನ್ನು ವರ್ತಕಶ್ರೇಣಿಯು (merchant guild) ಕೈಗೊಂಡಿರಬಹುದು. ಅಷ್ಟೇ ಅಲ್ಲ, ವರ್ತಕರೇ ಸ್ವತಃ ಶೂರರಾಗಿದ್ದರು. ಯುದ್ಧಶಿಕ್ಷಣವನ್ನು ಪಡೆದಿದ್ದ ಅವರೇ ಮುಂದೆ ನುಗ್ಗಿ ಕಳ್ಳರ ಕೈಯಲ್ಲಿ ಹೋರಾಡುವ ಸಾಮರ್ಥ್ಯವನ್ನು ಪಡೆದಿದ್ದರು. ಅನೇಕ ಶಾಸನಗಳು ಅವರ ವ್ಯಾಪಾರಕೌಶಲದ ಜೊತೆಗೆ ದೈಹಿಕ ಪರಾಕ್ರಮವನ್ನು

---

174 EC. XI. Hn. 24, 985 A.D.

175 EI. XII. Mi. 71, C. 920 A.D.

176 "ಕುದುರೆಯ ಮೇಲೆ ಬಿಲ್ಪರಸು ಸೂಲಿಗೆ ತೀರಿಕೆ ಭಿಂಡಿವಾಳಮೆ । ತ್ತಿದ ಕರವಾಳುಮಾಟಡುವ ಕರ್ಕಡೆ ಪಾಱುವ ಚಕ್ರಮೆಂದೊಡೆಂ। ತೊದಱುವರೆಂತು ಪಾಯಿಸುವರೆಂತು ತಱುಂಬುವರೆಂತು ನಿಲ್ವರೆಂ । ತೊದವುವರೆಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ನ ಭೂಭುಜರ್" (EC. VII. Sk. 136).

177 Arthaśāstra (Tr. Shamashastry), p. 370

178 ಅದೇ.

179 IA. VIII. p. 241, 634 A.D.

180 EC. II. 138, C. 940 A.D.

181 Arthaśāstra, IX. ii.

182 SII. IX. i. 297, 1177 A.D.; EC. VII. Sk. 118, 1054 A.D.

ಹೊಗಳುತ್ತವೆ.[183] ಅವರನ್ನು ‘ವೀರಬಣಂಜು’ಗಳೆಂದೇ ಶಾಸನಗಳು ಕರೆಯುತ್ತವೆ.[184] ಅವರಿಗೆ ಪ್ರತ್ಯೇಕವಾದ ಧ್ವಜಗಳೂ ಲಾಂಛನಗಳೂ ಇದ್ದುವು.[185] ಸರಿಯಾಗಿ ಅರ್ಥವಾಗದ ಶಾಸನವೊಂದರಲ್ಲಿ ವರ್ತಕಕುಲದ ಪಂದಿಮಿರಿಯನ್ ಎಂಬುವನನ್ನು ಯುದ್ಧರಂಗದಲ್ಲಿ ಎದುರಿಸಿದವನು ತನ್ನ ತಲೆಯನ್ನು ಕಳೆದುಕೊಳ್ಳುವನು ಎಂದು ಹೇಳಿದೆ.[186] ನಯಸೇನನ ಧರ್ಮಾಮೃತದಲ್ಲಿ (1.207) ಬರುವ ಒಂದು ಕಥೆಯಲ್ಲಿ ವರ್ತಕರನ್ನು ಕಳ್ಳರು ಬಂದು ತಾಗಿದಾಗ ವರ್ತಕರ ಸೈನ್ಯವು ಕಳ್ಳರೊಡನೆ ಹೋರಾಟವನ್ನು ನಡೆಯಿಸಿದ ಅಂಶವು ಗಮನಾರ್ಹವಾದುದು. ವರ್ತಕರು ಕಳ್ಳರ ದಾಳಿಗೆ ಸಿಕ್ಕಿದಂತೆ ಯಾವ ಶಾಸನದಲ್ಲಿಯೂ ಹೇಳಿಲ್ಲ. ಅವರ ವ್ಯಾಪಾರಕ್ಕೆ ಕಳ್ಳರಿಂದ ಧಕ್ಕೆಯೊದಗಿದಂತೆ ಎಲ್ಲಿಯೂ ಕಂಡು ಬಂದಿಲ್ಲ. ಅವರು ಸೇನೆಯನ್ನು ಹೊಂದಿದ್ದರು ಎನ್ನುವುದು ಇದರಿಂದ ಸೂಚಿತವಾಗುತ್ತದೆಯೇ? ಯುದ್ಧಸಮಯದಲ್ಲಿ ಅವರು ರಾಜನಿಗೆ ತಮ್ಮ ಸೇನೆಯನ್ನು ಒಪ್ಪಿಸುತ್ತಿದ್ದರೆಂದು ಭಾವಿಸಬಹುದೆ? ಇಂತಹ ವರ್ತಕರ ಸೇನೆಯಲ್ಲಿ ಬರಿಯ ಪದಾತಿಗಳೇ ಇರಬೇಕಾಗಿರಲಿಲ್ಲ.

ಮೂಲಬಲದ ಸೈನಿಕರನ್ನು ಬಹುಮಟ್ಟಿಗೆ ಹೋಲುತ್ತಾರೆ, ಕನ್ನಡ ಶಾಸನಗಳಲ್ಲಿ ಬರುವ ‘ಲೆಂಕ’ರು.[187] ಇವರು ಯುದ್ಧಶಿಕ್ಷಣವನ್ನು ಪಡೆದು, ತಮ್ಮ ತಮ್ಮ ಊರುಗಳಲ್ಲಿ ವಾಸಮಾಡಿಕೊಂಡಿದ್ದು ಯುದ್ಧದ ಸಮಯದಲ್ಲಿ ಸೇನೆಯನ್ನು ಸೇರಿಕೊಳ್ಳುತ್ತಿದ್ದರೆಂದು ಕಾಣುತ್ತದೆ. ಇವರಿಗೆ ಕೆಲವು ಊರುಗಳನ್ನೇ ಬಿಟ್ಟುಕೊಟ್ಟು, ಆ ಊರುಗಳ ಆದಾಯವನ್ನು ಅನುಭವಿಸುತ್ತಿರುವಂತೆ ರಾಜನೋ, ಸಾಮಂತನೋ ನಿಯಮಿಸುತ್ತಿದ್ದರು. ಲೆಂಕರನ್ನು ಕೊಲ್ಲುವುದು ಯಾರಿಗೂ ಸಾಧ್ಯವಿಲ್ಲ ಎನ್ನುವಂತಹ ಒಂದು ಗಾದೆ ಬಹು ಈಚಿನವರೆಗೆ ಪ್ರಚಲಿತವಾಗಿದ್ದಂತೆ ಕಾಣುತ್ತದೆ.[187(a)] ಇಂತಹ ಸಾವಿರ ಲೆಂಕರ ಒಂದು ಸಂಘದ ಹೆಸರು ಕ್ರಿ. ಶ. 1045ರ ಶಾಸನದಲ್ಲಿದೆ.[188] ಅವರು ಆಹವಮಲ್ಲ ಚಕ್ರವರ್ತಿಯ ಸಾಮಂತನಾಗಿದ್ದ ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವ ಪೆರ್ಮಾನಡಿಯ ‘ಪಾದೋಪಜೀವಿ’ಗಳಾಗಿದ್ದರು. ಅವರು ಆರು ಹಳ್ಳಿಗಳನ್ನು ‘ತ್ರಿಭೋಗಾಭ್ಯಂತರಸಿದ್ಧಿ’ಯಿಂದ ಆಳುತ್ತಿದ್ದರು. ಇವರು ಪಲ್ಲವವಂಶದ ರಾಜ್ಯಕ್ಕೆ ‘ಮೂಳಸ್ತಂಭ’ದಂತೆ ಇದ್ದರೆಂದು ಶಾಸನವು ವರ್ಣಿಸುತ್ತದೆ. ಇವರ ವ್ಯಸನವೆಲ್ಲವೂ ಯುದ್ಧಭೂಮಿಗೆ ಸಂಬಂಧಪಟ್ಟುದು. ವೀರಾವತಾರರು, ಏಕೈಕ ವೀರರು--ಎಂದು ಮುಂತಾಗಿ ಅವರನ್ನು ಆ ಶಾಸನವು ಹೊಗಳುತ್ತದೆ.[189] ಇವರಿಗೆ ಪ್ರತ್ಯೇಕವಾದ ಧ್ವಜ ಮತ್ತು ವಾದ್ಯಗಳಿದ್ದುವು.[190] ಸಾಮಂತ ಶೋಭನರಸನ ‘ಪಾದಪದ್ಮೋಪಜೀವಿ’ಯಾಗಿದ್ದ ಬೇಣಯ್ಯ ಎಂಬ ಮತ್ತೊಬ್ಬ ಲೆಂಕನು ಬೇರೆ ಬೇರೆ ಭಾಗಗಳ ಸುಂಕವನ್ನು ನೋಡಿಕೊಂಡಿದ್ದನು.[191] ಯುದ್ಧದಲ್ಲಿ ಮಡಿದ ಲೆಂಕರ ಹೆಸರುಗಳು ಶಾಸನಗಳಲ್ಲಿವೆ. ತನ್ನನ್ನು ಸಾಕಿದ ಚಕ್ರವರ್ತಿಯ ಅಪ್ಪಣೆಯನ್ನು ಪಾಲಿಸಿ ಕೇತ ಎಂಬ ಲೆಂಕನು ಉಣಕಲ್ಲ

---

183 SII. IX. i. 297, 1177 A.D. ; EC. VII. Sk. 118, 1054 A.D.

184 EC. VII. Sk. 118, 1054 A.D.

185 ಅದೇ

186 Annual Report on Kannada Research in Bombay State (1939-40), p. 51

187 ‘ಲೆಂಕ’ ಎಂಬುದು ಅಚ್ಚದ್ರಾವಿಡಪದ. ಇದರ ಮೂಲ *ಇಳ ಅಥವಾ *ಎಳ (ಎಳೆಯದು). ತಮಿಳಿನಲ್ಲಿ “ಇಳಕು” ಎಂದರೆ ಹೊಸದಾಗಿ ಚಿಗುರು ಎಂದರ್ಥ. ತೊದ ಭಾಷೆಯಲ್ಲಿ ‘ಎಳ್ಕ್’ ಎಂದರೆ ಯೌವನವೆಂದರ್ಥ. ಇದೇ ತೆಲುಗಿನಲ್ಲಿ ‘ಲೇ(ಕ’ ಎಂದಾಗುತ್ತದೆ. ‘ಲೇ(ಕ’ ಎಂದರೆ ಸೇವಕ ಎಂದರ್ಥ. ಇದರ ಮೂಲ ಲೇಂಕ ಅಥವಾ ಲೆಂಕ. ಕನ್ನಡದಲ್ಲಿ ‘ಲೆಂಕ’ ಎಂದರೆ ‘ಯುವಕ ಸೈನಿಕ’ ಎಂದರ್ಥ. ಈ ಲೆಂಕ ಎಂಬ ರೂಪವು ಕನ್ನಡಕ್ಕೆ ತೆಲುಗಿನಿಂದ ಬಂದಿರಬೇಕು.

187 (a) “ಶ್ರೀಮುತು ಲೆಂಕರ ಕೊಂದವರಿಲ್ಲ ನಾಯ ತಿಂದವರಿಲ್ಲ” (SII. XV. No. 657, 14th Cent.)

188 SII. IX. i. 101, 1045 A.D.

189 190 ಅದೇ

191 BKI. I. i. 50, 1005 A.D.

ಕೋಟೆಯಲ್ಲಿ ಕಾದಾಡಿ ಮಡಿಯುತ್ತಾನೆ.[192] ಯುದ್ಧದಲ್ಲಿ ಮಡಿದ ಅನೇಕ ಲೆಂಕರನ್ನು ಕ್ರಿ. ಶ. 1015ರ ಒಂದು ಶಾಸನದಲ್ಲಿ ಹೆಸರಿಸಿದೆ.[193] ಒಬ್ಬ ಲೆಂಕನು ಗಡಿಗಳ ರಕ್ಷಣೆಗಾಗಿ ನಿಯೋಜಿತನಾಗಿದ್ದನು.[194] ದುದ್ಧರಸ ಎಂಬ ಮಲೆಪರರಾಜನ ಬಳಿ ಐವತ್ತು ಲೆಂಕರಿದ್ದರು.[195] ತನ್ನ ಯುದ್ಧವನ್ನು ತನ್ನ 'ಸ್ವಾಮಿ ನೋಡುತ್ತಿರಲು', ಬಮ್ಮಯ ನಾಯಕನೆಂಬ ಲೆಂಕನು ಮಡಿದ ವಿಷಯ ಶಾಸನವೊಂದರಲ್ಲಿದೆ.[196] ವಿಷ್ಣುವರ್ಧನನು ಹಾನುಗಲ್ಲಿನ ಕೋಟೆಯನ್ನು ಮುತ್ತಿದಾಗ ಮಾಚಗಾವುಂಡ ಎಂಬುವನು ತನ್ನ ಮಗ ಲೆಂಕರಾಯನು ಸೇನೆಯ ಮುಂಭಾಗದಲ್ಲಿದ್ದು ಹೋರಾಡಲು ರಾಜನ ಅಪ್ಪಣೆಯನ್ನು ಕೇಳಿ ಪಡೆಯುತ್ತಾನೆ. ಲೆಂಕರಾಯನು ಅದ್ಭುತವಾಗಿ ಹೋರಾಡಿ ಮಡಿಯುತ್ತಾನೆ. ಅವನ ಹೋರಾಟವನ್ನು ರಾಜ ವಿಷ್ಣುವರ್ಧನನೂ, ಅಣ್ಣ ಕಾಳಗಾವುಂಡನೂ, ಬಹುಶಃ ತಂದೆ ಮಾಚಗಾವುಂಡನೂ ಪ್ರಶಂಸೆಯಿಂದ ನೋಡುತ್ತಿರುತ್ತಾರೆ.[197] ಇನ್ನೊಂದು ಶಾಸನದಲ್ಲಿ ಮಾಚಣ ಎಂಬ ಲೆಂಕನು ತನ್ನ ಸಾವಿನ ನಂತರ ತನ್ನ ಮನೆಯ ಇಬ್ಬರ ಜೀವನೋಪಾಯಕ್ಕೆ ಪಡೆವಳಗನಿಂದ ಮಾತು ತೆಗೆದುಕೊಂಡು ಹೋರಾಡಿ ಮಡಿಯುತ್ತಾನೆ.[198]

ಹೀಗೆ ಲೆಂಕರು ಒಂದು ರೀತಿಯಲ್ಲಿ ಪಾಣಿನಿ ಹೇಳುವ 'ಆಯುಧಜೀವಿ'[199]ಗಳನ್ನು ಹೋಲುತ್ತಾರೆ. ಆಯುಧ ಜೀವಿಗಳು ಮುಖ್ಯವಾಗಿ ಸೈನಿಕ ವೃತ್ತಿಯವರು. ಅವರು ಸಂಘಗಳಾಗಿ ಸಂಘಟನೆಗೊಂಡು ಈಗಿನ ಪಂಜಾಬಿನಲ್ಲಿ ವಾಸಿಸುತ್ತಿದ್ದರು. ಇವರು ಕ್ರಿಸ್ತಪೂರ್ವ ನಾಲ್ಕನೆ ಶತಮಾನದಲ್ಲಿ ಗ್ರೀಕರಿಗೆ ಉಗ್ರ ಪ್ರತಿಭಟನೆಯನ್ನು ತೋರಿದರು.[200] 'ದೇಸಿಯಂಕಕಾಱ' ಎಂಬ ಒಂದು ವಿಶೇಷಣವು ಕೆಲವು ಶೂರರಿಗಿದ್ದುದು ಕಂಡುಬರುತ್ತದೆ.[200.1] ಇದರ ಅರ್ಥ 'ಒಳ್ಳೆಯ ಶೈಲಿಯ ಯೋಧ' ಎಂದು.

ಕಾಲಾಳುಗಳಲ್ಲಿ ಬಹುಪಾಲು ಜನ ಕವಚಗಳನ್ನೂ ಶಿರಸ್ತ್ರಾಣಗಳನ್ನೂ ಧರಿಸುತ್ತಿದ್ದರು. ಸೊಂಟದಿಂದ ಕೆಳಗೆ ಮೊಳಕಾಲಿನವರೆಗೆ ವೀರಗಚ್ಚೆ ಹಾಕಿರುವ ಒಂದು ವಸ್ತ್ರ, ಸೊಂಟದ ಬಲಭಾಗದಲ್ಲಿ ಒಂದು ಚಿಕ್ಕ ಕತ್ತಿ (ಅಲಗು), ಬಲಗೈಯಲ್ಲಿ ಒಂದು ಕತ್ತಿ ಅಥವಾ ಈಟಿ, ಎಡಗೈಯಲ್ಲಿ ಗುರಾಣಿ—ಇದು ಕಾಲಾಳಿನ ಚಿತ್ರ.

## ಧರ್ಮಯುದ್ಧ

ಯುದ್ಧವನ್ನು ಧರ್ಮಯುದ್ಧ ಅಥವಾ ಪ್ರಕಾಶಯುದ್ಧವೆಂದೂ, ಕೂಟಯುದ್ಧವೆಂದೂ ವಿಭಾಗಿಸು

---

192 BKI. I. i. 51, 1006 A.D.

193 EC. II. 378, C. 1015 A.D.

194 SII. IX. i. 130, C. 1066 A.D.

195 EC. I. 57, 1095 A.D.

196 EC. VII. Sh. 12, 1120 A.D

197 EC. V. Bl. 202, 1138 A.D.

198 EC. VI. Cm. 99, 1116 A.D.

199 Agarwala : India as known to Pāṇini, p. 422.

200 ಅದೇ.

200.1 EC. XI. Cd. 64, C. 1028 A.D. ; EC VI. Kd. 19, 1113 A. D.

'ಅಂಕ' ಎನ್ನುವುದು ಒಂದು ರೀತಿಯಲ್ಲಿ ಪಾರಿಭಾಷಿಕ ಪದ. ಬಸವಣ್ಣನವರ ಹಲವಾರು ವಚನಗಳಲ್ಲಿ ಅಂಕ ಮತ್ತು ಅಂಕಕಾರರ ಪ್ರಸ್ತಾಪವಿದೆ. "ಅಂಕ ಕಳನೇಱಿ ಕೈಮಱೆದಿರ್ದೊಡೆ ಮಾಱಂಕ ಬಂದಿಱಿವುದ ಮಾಣ್ಬನೆ ? " (ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 45). "ಅಂಕ ಕಂಡಾ ಕೋಲಾಸೆ ಮತ್ತೇಕಯ್ಯಾ ? ಲೆಂಕ ಕಂಡಾ ಪ್ರಾಣದಾಸೆ ಮತ್ತೇಕಯ್ಯಾ ?" (ಪು. 191). "ಕಟ್ಟಿದೆ ಒಱೆಯ, ಬಿಟ್ಟೆ ಜನ್ನಿಗೆಯರ, ಮುಟ್ಟ ಬಂದಿಱಿದರೆ ಓಸರಿಸುವನಲ್ಲ. ಓಡದಿರು, ಓಡದಿರು ! ನಿಮ್ಮ ಶರಣರ ಮನೆಯ ಬಿರುದಿನ ಅಂಕಕಾಱ". ಇಲ್ಲೆಲ್ಲಾ ಅಂಕ ಎನ್ನುವವನು ಶಸ್ತ್ರಧಾರಿಯೆಂದೂ, ಲೆಂಕನಿಂದ ಭಿನ್ನನೆಂದೂ ಸ್ಪಷ್ಟ. ಲೆಂಕನಿರುವುದು ಹೋರಾಡಿ ಮಡಿಯುವುದಕ್ಕಾಗಿ. ಹಾಗಾದರೆ 'ಅಂಕ'ನು ಯಾರು ?

ಈ ವಿಷಯದಲ್ಲಿ ಅಭಿಲಷಿತಾರ್ಥಚಿಂತಾಮಣಿಯು ನಮ್ಮ ಸಹಾಯಕ್ಕೆ ಬರುತ್ತದೆ. ಅಂಕ ಎನ್ನುವವನು 'ಮಲ್ಲ'

ತ್ತಾರೆ. ಧರ್ಮಯುದ್ಧವನ್ನು ಎಲ್ಲ ಗ್ರಂಥಕರ್ತರೂ ಹೊಗಳಿದ್ದಾರೆ. (ಆದರೆ ಕಾಮಂದಕ ಮುಂತಾದ ಕೆಲವರು ಕೂಟಯುದ್ಧಕ್ಕೆ ಸಂಪೂರ್ಣ ವಿರೋಧಿಗಳೇನೂ ಅಲ್ಲ.[201]) ಕನ್ನಡ ಶಾಸನಗಳು ಧರ್ಮ ಯುದ್ಧವನ್ನು ಮೆಚ್ಚಿವೆ. ಬಂಕೆಯರಸ ಎಂಬಾತನು 'ಸತ್ಯಸಮರ ಸಂಘಟ್ಟಣೋಪಲಬ್ಧ ವಿಜಯಲಕ್ಷ್ಮೀ ನಿವಾಸಿತ ಚೆಲ್ಲಕೇತನ' ನಾಗಿದ್ದನು.[202] ವಿನಯಾದಿತ್ಯನಿಗೆ 'ರಣಸುದ್ಧಮಾರ್ಗ' ಎಂಬ ಬಿರುದಿತ್ತು.[203] ರಣರಂಗದಲ್ಲಿ ಹುಲ್ಲುಕಚ್ಚಿದವರನ್ನು,[204] ಭೀತರನ್ನು,[205] ನೀರನ್ನು ಹೊಕ್ಕವರನ್ನು, ಶಿವಲಿಂಗವನ್ನಪ್ಪಿದವ ರನ್ನು[206], ಹುತ್ತವನ್ನೇರಿದವರನ್ನು[207] ಕೊಲ್ಲಕೂಡದೆಂಬ ಯುದ್ಧನೀತಿಯಿದ್ದಿತು. ಆದರೆ ಪ್ರಾಚೀನ ಕರ್ನಾಟಕದಲ್ಲಿ ಈ ನೀತಿಯನ್ನು ಎಷ್ಟರಮಟ್ಟಿಗೆ ಅನುಸರಿಸುತ್ತಿದ್ದರೋ ತಿಳಿಯದು. ಪ್ರಾಚೀನ ಗ್ರಂಥ ಕರ್ತರು ಹಾಕಿಕೊಟ್ಟಿದ್ದ ಯುದ್ಧನಿಯಮಗಳೆಲ್ಲವೂ ಈ ಕಾಲದ ಹೊತ್ತಿಗೆ ಸತ್ತುಹೋಗಿದ್ದುವು ಎಂಬ ಡಾ|| ಅಲ್ಟೇಕರರ ಅಭಿಪ್ರಾಯವು ಸತ್ಯವಾದುದು.[208] ಶಾಸನಗಳು ಧರ್ಮಯುದ್ಧವನ್ನು ಪ್ರಶಂಸಿಸುವುದೇ ಹೇಳುತ್ತದೆ, ಆ ಕಾಲಕ್ಕೆ 'ಕೆಟ್ಟ ಕಾಳೆಗ' ಗಳೂ ನಡೆಯುತ್ತಿದ್ದುವೆಂಬುದನ್ನು. ದನಗಳನ್ನು ಕದಿಯುವುದು, ಸ್ತ್ರೀಯರನ್ನು ಅಪಹರಿಸುವುದು, ಊರುಗಳನ್ನು ಬೆಂಕಿಹತ್ತಿಸಿ ನಾಶಪಡಿಸುವುದು — ಇವೇ ಮುಂತಾದ ಅಧಾರ್ಮಿಕ ಕೃತ್ಯಗಳನ್ನು ಶಾಸನಗಳು ನಿರೂಪಿಸುತ್ತವೆ.

ಪ್ರಾಚೀನ ಕರ್ನಾಟಕದಲ್ಲಿ ನಡೆದ ದೊಡ್ಡ ಯುದ್ಧಗಳು, ಶಾಸನಗಳನ್ನವಲಂಬಿಸಿ ಹೇಳುವುದಾದರೆ, ಬಹುಮಟ್ಟಿಗೆ ಹಗಲಿನಲ್ಲಿ ನಡೆದುವು. ರಾತ್ರಿ ಯುದ್ಧವು ಇರಲಿಲ್ಲವೆಂದೇ ಹೇಳಬಹುದು. ಆದರೂ ಒಂದೇ ಒಂದು ಶಾಸನದಲ್ಲಿ[209] ಮಾತ್ರ ರಾತ್ರಿಯುದ್ಧಗಳು ('ಇರುಳ ಬವರ') ಬಹು ವಿರಳವಾಗಿಯಾದರೂ ನಡೆಯು ತ್ತಿದ್ದುವೆಂಬುದಕ್ಕೆ ಸೂಚನೆಯಿದೆ.

ಇಲ್ಲಿ ಕೆಲವು ಯುದ್ಧಾಚರಣೆಗಳನ್ನು ಕುರಿತು ಪ್ರಸ್ತಾಪಿಸಬಹುದು. ಯುದ್ಧದ ಹಿಂದಿನ ಸಂಜೆ ಆಯಾ ಶಿಬಿರಗಳಲ್ಲಿ ಕೊಳ್ಳಿಯನ್ನು ಬೀಸಿ[210] ತಾವು ಯುದ್ಧಕ್ಕೆ ಸಿದ್ಧವಾಗುತ್ತಿರುವುದನ್ನು ಸೂಚಿಸುತ್ತಿದ್ದರು. ಯುದ್ಧರಂಗದಲ್ಲಿ ಏಕಾಏಕಿ ಮೈಮೇಲೆ ಬೀಳುವುದನ್ನು ನಿಷೇಧಿಸಿದರು. ಯುದ್ಧವು ಆರಂಭವಾಗಲಿ

---

(=ಕುಸ್ತಿಯಾಳು)ನನ್ನು ಹೋಲುತ್ತಾನೆ. ಮಲ್ಲರು ಬರಿಯ ಕೈಗಳಿಂದ ಹೋರಾಡಿದರೆ 'ಅಂಕ'ರು ಶಸ್ತ್ರಗಳನ್ನು ಕೈಯಲ್ಲಿ ಹಿಡಿದು ಹೋರಾಡುತ್ತಾರೆ. [ಮಾನಸೋಲ್ಲಾಸ, II, (ಗಾಯಕವಾಡ್ ಓರಿಯೆಂಟಲ್ ಸೀರೀಸ್), ಮುನ್ನುಡಿ, ಪು. 35.] ಈ ಹೋರಾಟಗಳು ಯುದ್ಧಗಳಲ್ಲ, ಬರಿಯ ಆಟಗಳು. ಆದರೂ ಅಂಕ, ಮಾರಂಕರ ಹೋರಾಟದಲ್ಲಿ ಪ್ರಾಣ ಹೋಗುವ ಸಾಧ್ಯತೆ ಇದ್ದಿತೆಂದು ಬಸವಣ್ಣನವರ ವಚನಗಳಿಂದ ಸೂಚಿತವಾಗುತ್ತದೆ.

201 Kāmandakīya Nītisāra (Tr. M. N. Dutt), p. 247.

202 EI. VII. p. 212, C. 875-6. ನೋಡಿ: "ಎತ್ತಿದ ಮೊನೆಗೆ ಮುಂತು, ಕೆಟ್ಟ ಕಾಳೆಗಕೆ ಪಿಂತು"— (EC. XII. Tp. 101, 1078 A.D.)

203 EC. III. Nj. 153, C. 980 A.D.

204 BKI. I. i. 69, 1033 A.D.

205 EC. XII Tp. 101, 1078 A.D.

206 EC. VI. Kd. 35, 1136 A.D.

207 EC. VIII. Sa. 58, 1143 A.D.

208 The Rāṣṭrakūṭas and their Times, p. 258.

209 EC. II. 73, 1118 A.D.—"ತೆಗೆವಾರುವಮುಂ ಹಾರುವ ಬಗೆಯುಂ ತನಗಿರುಳಬವರಮೆನುತ ಸವಂಗಂ ಬುಗುವ ಕಟಕಿಗರನಳಿಯಿಂ ಪುಗಿಸಿದುದು ಭುಜಾಸಿ ಗಂಗದಂಡಾಧಿಪನ"

210 ಪಂಪಭಾರತ, 10. 35, ವ.

ಎಂಬುದರ ಸೂಚನೆಯಾಗಿ ಆಯಾ ಪಕ್ಷದ ರಾಜರಿಬ್ಬರೂ ಕೈಗಳನ್ನು ಬೀಸುತ್ತಿದ್ದರು.[211] (ಕಯ್ವೀಸು–ರಣಾರಂಭ ಹಸ್ತ ಸೂಚನಯೋಃ[212].) ನಾಯಕರು ಕೈಬೀಸುವವರೆಗೆ ಸೈನ್ಯಗಳು ಸುಮ್ಮನೆ ನಿಂತಿರುತ್ತಿದ್ದುವು. ಆದರೆ ಒಮ್ಮೊಮ್ಮೆ ಅಲ್ಲಿಯವರೆಗೆ ತಾಳಲಾರದೆ ಕೈಬೀಸುವ ಮೊದಲೇ ಯುದ್ಧಕ್ಕೆ ನುಗ್ಗುತ್ತಿದ್ದುದುಂಟು.[213] ಯುದ್ಧರಂಗದಲ್ಲಿ ಕೈಬೀಸುವ ಈ ಸಂಪ್ರದಾಯವಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ.[214] ಬಿಲ್ಗಾರನು ತಾನು ಹೋರಾಡಲು ಆರಿಸಿಕೊಂಡ ಇನ್ನೊಬ್ಬ ಬಿಲ್ಗಾರನಿಗೆ ತನ್ನ ಇಷ್ಟವನ್ನು 'ಗಱಸನ್ನೆ'ಯ ಮೂಲಕ ಸೂಚಿಸುತ್ತಿದ್ದನು.[215] ಈ ಪದ್ಧತಿಯನ್ನು ಬಸವಣ್ಣನೂ ಸೂಚಿಸುತ್ತಾನೆ. ("ಗಱ ತೋಱಿ ಗಂಡರೆಂಬವರ ಕಾಣೆ. ನಿಱಿ ಸೋಕಲು ಮುನಿಯಿಲ್ಲ ನೋಡಯ್ಯ.")[216] ಆನೆಯ ಮೇಲಿನ ಯೋಧರು ತಮ್ಮ ಆನೆಗೆ ಶತ್ರುವಿನ ಆನೆಯನ್ನು ತೋರಿಕೊಡುತ್ತಿದ್ದರು.[217] ಯುದ್ಧವನ್ನು ನಿಲ್ಲಿಸಲು ಅಪಹಾರತೂರ್ಯವನ್ನು ಬಾರಿಸುತ್ತಿದ್ದರು.[218] ಸೋತವರು ತಮ್ಮ ಸೋಲನ್ನು ವಸ್ತ್ರಗಳನ್ನು ಬೀಸುವುದರ ಮೂಲಕ ಸೂಚಿಸುತ್ತಿದ್ದಂತೆ ಕಾಣಿಸುತ್ತದೆ — "ಪೋಯ್ತು ಪೋಯ್ತು ದುರ್ಗಮಿನ್ನೇನೆಂದೊಳಗೆಲ್ಲಮೆಯ್ದೆ ಸರಕುಗಟ್ಟೆ ಪೊಜಗೆಲ್ಲ–ಮೆಯ್ದೆ ಗುಡಿಕಟ್ಟೆ ಸೀರೆಯಂ ಬೀಸಿ ಬೊಬ್ಬಿಱಿದು"[219] — ಕೋಟೆಯು ಬೀಳುವ ಸಮಯ ಬಂದಿದೆ. ಜನರು ಸಮಯ ಬಂದರೆ ಸಾಧ್ಯವಾದಷ್ಟು ಸರಕುಗಳನ್ನು ಸಾಗಿಸಲನುಕೂಲವಾಗುವಂತೆ ಮನೆಯೊಳಗೆ ಗಂಟುಗಳನ್ನು ಕಟ್ಟಿ ಹೊರಗೆ ಮಾತ್ರ ಧ್ವಜಗಳನ್ನು ಎತ್ತಿಕಟ್ಟುತ್ತಿದ್ದರು. ಗೆದ್ದವರನ್ನು ಸ್ವಾಗತಿಸಿ ಸಮಾಧಾನಪಡಿಸಲು ಹೀಗೆ ಮಾಡುತ್ತಿದ್ದಿರಬಹುದು. ವಸ್ತ್ರವನ್ನು ಬೀಸುತ್ತಿದ್ದುದು ತಾವು ಸೋಲನ್ನು ಒಪ್ಪಿಕೊಂಡುದನ್ನು ಸೂಚಿಸಲು ಎಂದು ಕಾಣುತ್ತದೆ. ಈ ಸತ್ಸಂಪ್ರದಾಯಗಳನ್ನೆಲ್ಲ ಎಷ್ಟರಮಟ್ಟಿಗೆ ಚಾಚೂ ತಪ್ಪದೆ ಪಾಲಿಸುತ್ತಿದ್ದರೋ ತಿಳಿಯದು.

ಧರ್ಮಯುದ್ಧದ ಇನ್ನೊಂದು ನಿಯಮವೆಂದರೆ — ಲಿಂಗವನ್ನು ಅಪ್ಪಿದವರನ್ನು, ನೀರನ್ನು ಹೊಕ್ಕವರನ್ನು, ಹೆಣ್ಣುಡೆಯುಟ್ಟವರನ್ನು, ಹುತ್ತವನ್ನು ಹತ್ತಿದವರನ್ನು ಕೊಲ್ಲಕೂಡದು ಎಂಬುದು.[220] ಇದರ ಪರಿಪಾಲನೆ ಯುದ್ಧರಂಗದಲ್ಲಿ ಎಷ್ಟರಮಟ್ಟಿಗೆ ಸಾಧ್ಯವೊ ಹೇಳಲು ಬಾರದು.

## ಆಯುಧಗಳು

ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ನೂರಾರು ಆಯುಧಗಳ ಹೆಸರುಗಳು ಬರುತ್ತವೆ. ಅವುಗಳಲ್ಲಿ ಅನೇಕವನ್ನು ಸುಮ್ಮನೆ ಹೆಸರಿಸಿ ತೃಪ್ತಿಪಡಬೇಕಾಗಿದೆ. ಅವುಗಳ ಸ್ವರೂಪವೇನೆಂಬುದನ್ನು ತಿಳಿಯಲು ಇನ್ನೂ ಆಳವಾದ ಅಭ್ಯಾಸ ನಡೆಯಬೇಕು. ಅಂತಹ ಅಭ್ಯಾಸದಲ್ಲಿ ವೀರಗಲ್ಲುಗಳ ಮೇಲಿನ ಚಿತ್ರಗಳೂ, ದೇವಸ್ಥಾನಗಳಲ್ಲಿನ ವಿಗ್ರಹಗಳೂ ತಕ್ಕಮಟ್ಟಿನ ಸಹಾಯವನ್ನು ಒದಗಿಸಿದರೂ ಅನೇಕ ಆಯುಧಗಳ ಸ್ವರೂಪವು ಅಜ್ಞಾತವಾಗಿಯೇ ಉಳಿಯುತ್ತದೆ.

---

211 ಅದೇ, 10. 65, ವ.

212 ಶಬ್ದಮಣಿದರ್ಪಣ, ಪು. 228.

213 ಪಂಪಭಾರತ, 11. 63.

214 EC. VIII. Sb. 141—"ಪೆರ್ಮಾಡಿ ಸಾಂತರಂ ಕೋಂಟೆಯಂ ಪರಿಸುತ್ತ ಮುತ್ತಿ ಕೈವೀಸುವಾಗಳ್"; "ಆ ಪುರಮಂ ಸುತ್ತಿ ಕೈವೀಸಿ ಕಾದಲ್"

215 ಪಂಪಭಾರತ, 10. 87.

216 ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 29.

217 ಪಂಪಭಾರತ, 11. 69.

218 ಪಂಪಭಾರತ, 11. 24, ವ.

219 ಅನಂತನಾಥಪುರಾಣ, 11. 83, ವ.

220 "....ಲಿಂಗಮನಪ್ಪುಕೆಯ್ದು ಪಿಂಗದೆ ನಿಲೆ ನೀರನೊಡಿ ಪುಗೆ ಪೆಣ್ಣುಡೆಯುಟ್ಟಿರೆ ಪುತ್ತನೇಱೆ ಕೊಲ್ಲದ ತುಱಿ–ಲಾಳ್ತನಕ್ಕೆ ಸಮನಾವನೊ ಸಾಹಸಭೀಮನೃಪನೊಳ್ ॥ (ಗದಾಯುದ್ಧ, 1.22)

ಅಗ್ನಿ ಪುರಾಣವು ಆಯುಧಗಳನ್ನು ಅಸ್ತ್ರ ಮತ್ತು ಶಸ್ತ್ರಗಳೆಂದು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಅವುಗಳಲ್ಲಿ ಮೊದಲನೆಯದನ್ನು (1) ಯಂತ್ರಮುಕ್ತ, (2) ಪಾಣಿಮುಕ್ತ, (3) ಮಂತ್ರಮುಕ್ತ, (4) ಮುಕ್ತ ಸಂಧಾರಿತ (ಬಿಟ್ಟು ಹಿಂದಕ್ಕೆ ಪಡೆದದ್ದು) ಎಂದು ನಾಲ್ಕಾಗಿ ವಿಭಾಗಿಸುತ್ತದೆ. ಎರಡನೆಯದನ್ನು (1) ಖಡ್ಗಾದಿಕಂ, (2) ವಿಗತಾಯುಧಂ (ಮುಷ್ಟಿ ಮುಂತಾದ ಸಹಜವಾದ ಆಯುಧಗಳು) ಎಂದು ವಿಂಗಡಿಸುತ್ತದೆ. ವೈಶಂಪಾಯನನು (1) ಮುಕ್ತ, (2) ಅಮುಕ್ತ, (3) ಮುಕ್ತಾಮುಕ್ತ, (4) ಮಂತ್ರಮುಕ್ತ–ಎಂದು ನಾಲ್ಕಾಗಿ ವಿಂಗಡಿಸುತ್ತಾನೆ. ಅರ್ಥಶಾಸ್ತ್ರ ಮತ್ತು ಶುಕ್ರನೀತಿಸಾರಗಳು ಹೀಗೆಯೇ ಬೇರೆ ಬೇರೆ ವಿಧಾನವನ್ನನುಸರಿಸುತ್ತವೆ[221]. "ಈ ವಿಭಾಗ ಕ್ರಮಗಳು ಬಹುಮಟ್ಟಿಗೆ ಕೃತಕ"[222] ಎಂಬ ಹೇಳಿಕೆಯಲ್ಲಿ ಸತ್ಯವಿದೆ. ಮೇಲಿನ ವಿಭಾಗಕ್ಕಿಂತ ಜನ್ನನ ವಿಭಾಗ ಕ್ರಮವು ಹೆಚ್ಚು ಸಹಜವಾಗಿದೆ. ಅವನ ಪ್ರಕಾರ ಆಯುಧಗಳು ನಾಲ್ಕು ರೀತಿ–(1) ಇಸುವ, (2) ಇಡುವ, (3) ಇಱಿವ, (4) ಪೊಯ್ವ ಆಯುಧಗಳು.[223] 'ಇಸುವ' ಗುಂಪಿಗೆ ಬಿಲ್ಲು ಬಾಣಗಳು ಸೇರುತ್ತವೆ. 'ಇಡುವ' ಗುಂಪಿಗೆ ಕೈಯಿಂದ ಎಸೆಯುವ ಶಕ್ತಿ[224] ಮುಂತಾದ ಆಯುಧಗಳು ಸೇರುತ್ತವೆ. 'ಇಱಿವ' ಗುಂಪಿಗೆ ಒಳ್ಳೆಯ ಉದಾಹರಣೆ ಸುರಿಗೆ (ಸಂ. ಕ್ಷುರಿಕಾ).[225] 'ಪೊಯ್ವ' ಗುಂಪಿಗೆ ಗದೆ ಮುಂತಾದ, ಕೈಯಲ್ಲಿ ಹಿಡಿದು ಹೊಯ್ಯುವ[226] ಆಯುಧಗಳು ಸೇರುತ್ತವೆ. ನಮಗೆ ಹೆಸರು ದೊರಕಿರುವ ಆಯುಧಗಳನ್ನೆಲ್ಲ ಗುರುತಿಸುವುದು ಅಸಾಧ್ಯವಾಗಿರುವುದರಿಂದ ಬಿಲ್ಲು ಬಾಣಗಳು ಮತ್ತು ಇತರ ಆಯುಧಗಳು ಎಂದು ಎರಡು ಭಾಗಗಳಾಗಿ ಮಾಡಿಕೊಳ್ಳುತ್ತೇವೆ.

## ಬಿಲ್ಲು, ಬಾಣ

ಧನುರ್ವಿದ್ಯೆಯಲ್ಲಿ ಪ್ರವೀಣರಾಗಿದ್ದ ಹಲವರ ಹೆಸರುಗಳು ಶಾಸನಗಳಲ್ಲಿ ಕಂಡುಬರುತ್ತವೆ[227] (ಧನುರ್ವೇದವು ಉಪವೇದಗಳಲ್ಲಿ ಒಂದು). ಹಾರುವ ಹದ್ದಿನ ಕಣ್ಣಿಗೆ ಗುರಿಯಿಡುವ ಕುಶಲ ಧನುರ್ಧರ ಪೈಜರಸ ಎಂಬುವನೊಬ್ಬನಿದ್ದನು.[228] ಧನುರ್ವಿದ್ಯೆಯಲ್ಲಿ ಪ್ರಾಚೀನ ಕನ್ನಡಿಗರು ಪಡೆದಿದ್ದ ಪರಿಣತಿಗೆ ಇದು ಅತ್ಯುತ್ತಮ ನಿದರ್ಶನ. ಬಿಲ್ಲನ್ನು ತಾಳವೃಕ್ಷದಿಂದ ಅಥವಾ ಬೊಂಬಿನಿಂದ ಮಾಡುತ್ತಿದ್ದರೆಂದು ಕಾಣುತ್ತದೆ. ಪಂಪಭಾರತದಲ್ಲಿ 'ತಾಳವಟ್ಟದ ಬಿಲ್ಲಿ'ನ ಹೆಸರಿದೆ.[229] ತಾಳವೃಕ್ಷದಿಂದ ಮಾಡಿದ ಬಿಲ್ಲನ್ನು 'ಕಾರ್ಮುಕ'

---

[221] Date : The Art of War in Ancient India, pp. 10-11.

[222] ಅದೇ, ಪು. 11.

[223] ಅನಂತನಾಥ ಪುರಾಣ, 14. 1, ವ.
ಸಮಯಪರೀಕ್ಷೆಯಲ್ಲೂ ಹೆಚ್ಚು ಕಡಮೆ ಇದೇ ರೀತಿಯ ವಿಭಾಗಕ್ರಮವಿದೆ. "ಇಸುವ ಇಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದು ಬಿನ್ನಣಮುಂ" (5.125). "ಮಸೆಯಂ ಪತ್ತಿಸುವ" ಎನ್ನುವುದು ಮಸೆಯುವ ಕಾರ್ಯವನ್ನು ಸೂಚಿಸುವಂತೆ ಕಾಣುತ್ತದೆ.

[224] "ತಾರಕನಂ ಗುಹಂ ಮುಳಿದು ಶಕ್ತಿಯಿನಾಂತಿಡುವಂತೆ" (ಪಂಪಭಾರತ, 12.112).
"ಇಡು ಕರವಿಮೋಚನೆ." (ಶಬ್ದಮಣಿದರ್ಪಣ, 1959, ಪು. 220).

[225] "ಸುರಿಗಿಱಿದು ಸತ್ತಂ" (= ಸುರಿಗೆಯಿಂದ ಇರಿದು ಸತ್ತನು) ಎಂಬ ಉಕ್ತಿಯನ್ನು ಗಮನಿಸಿ.

[226] "ಗಜೆಗೊಂಡು....ನುರ್ಗಿ ಪೊಯ್ದು" (ಪಂಪಭಾರತ, 11. 74)

[227] EC. VIII. Sa. 80; EI. XIII. p. 301.

[228] EC. VI. Tk. 61.

[229] ಪಂಪಭಾರತ, 12. 135, ವ. 'ತಾಳವಟ್ಟ' ಎಂಬುದಕ್ಕೆ 'ಕಾಳವಟ್ಟ' ಎಂಬ ಪಾಠಾಂತರವಿದೆ. ಬಹುಶಃ ಇದೇ ಸರಿಯಾದ ಪಾಠ. ಇದು ಕರ್ಣನ 'ಕಾಲಪೃಷ್ಠ' ಎಂಬ ಹೆಸರಿನ ಬಿಲ್ಲನ್ನು ಸೂಚಿಸುವುದೆಂದು ಊಹಿಸಲು ಆಧಾರಗಳಿವೆ. ಶಬ್ದಕಲ್ಪದ್ರುಮ (II, ಪು, 110. ವಾರಣಾಸಿ, 1961) ಮತ್ತು ವಾಚಸ್ಪತ್ಯ (III, ಪು. 2001. ಚೌಕಾಂಬಾ ಸೀರೀಸ್, 1962) ಗಳನ್ನು ನೋಡಿ.

ಎಂದು ಕರೆಯುತ್ತಾರೆ.[230] ಪ್ರಾಚೀನ ಭಾರತದಲ್ಲಿ ಕೆಲವೆಡೆ ಕಾಲಾಳುಗಳು ಬಿಲ್ಲನ್ನು ಎಡಗಾಲಿನಿಂದ ನೆಲಕ್ಕೊತ್ತಿ ಬಾಣಪ್ರಯೋಗ ಮಾಡುತ್ತಿದ್ದರು.[231] ಪ್ರಾಚೀನ ಕರ್ನಾಟಕದ ಬಿಲ್ಲು ಇನ್ನೂ ಚಿಕ್ಕದಾಗಿದ್ದಿತು. ಆದ್ದರಿಂದ ಇನ್ನೂ ಹಗುರವಾಗಿದ್ದಿತು. ಬಿಲ್ಲನ್ನು ಕೈಯಿಂದ ಮೇಲೆತ್ತಿ ಬಾಣಗಳನ್ನು ಬಿಡುತ್ತಿದ್ದರು. ಶಾಸನಗಳ ಮೇಲಿನ ಚಿತ್ರಗಳನ್ನು ನೋಡಿ ಹೇಳುವುದಾದರೆ ಕನ್ನಡಿಗರು ಬಳಸುತ್ತಿದ್ದ ಬಿಲ್ಲು ಮೂರಡಿಯಿಂದ[232] ನಾಲ್ಕು ಅಥವಾ ನಾಲ್ಕುವರೆ ಅಡಿಗಳಷ್ಟು[233] ಉದ್ದವಾಗಿದ್ದಿತು. ಮೂರಡಿಗಳ ಬಿಲ್ಲುಗಳೇ ಹೆಚ್ಚು. ಬಾಣವನ್ನು ಹೂಡಿ ಕಿವಿಯವರೆಗೆ ಎಳೆದಾಗ ಬಿಲ್ಲು ಒಂದು ಚಕ್ರವನ್ನು ಹೋಲುತ್ತಿತ್ತು.[234]

ಬಾಣದ ಹಲವಾರು ಪ್ರಭೇದಗಳ ಹೆಸರುಗಳು ಶಾಸನಗಳಲ್ಲಿ ದೊರೆಯುತ್ತವೆ — ಬಿಳಿಯಂಬು,[235] ಕೋಲಂಬು,[236] ಸುಂಗಲಂಬು,[237] ಇತ್ಯಾದಿ. ಕನ್ನರ ಎಂಬ ಸಾಮಂತನನ್ನು 'ಬಿಳಿಯಂಬಿನಾತಂ'[238] ಎಂದು ಕರೆದಿರುವುದರಿಂದ ಬಿಳಿಯಂಬು ಎಂಬುದು ಪ್ರತಿಷ್ಠಿತವ್ಯಕ್ತಿಗಳು ಬಳಸುತ್ತಿದ್ದ ಹೊಳಪಿನ ಬಾಣವಿರಬಹುದೇ? ಬಾಣಗಳಿಗೆ ವೇಗವನ್ನು ತಂದುಕೊಡಲು ಗರಿಗಳನ್ನು ಜೋಡಿಸುತ್ತಿದ್ದರು.[239] ಕೆಂಪುಗರಿಗಳನ್ನು ಜೋಡಿಸಿದ್ದ ಪಾರೆಯಂಬು[240] ಎಂಬ ಬಾಣವನ್ನು ಪಂಪನು ಹೆಸರಿಸಿದ್ದಾನೆ.[241] ಇವುಗಳು ಹದ್ದುಗಳಂತೆ ಎರಗುತ್ತಿದ್ದುವೆಂದು ಪಂಪನ ಹೇಳಿಕೆ. ಅವನು ಹೇಳುವ ಇತರ ಬಾಣಗಳು—ಕೆಲ್ಲಂಬು,[242] ಕಿತ್ತಂಬು,[243] (=ಚಿಕ್ಕಬಾಣ?), ನಲ್ಲಂಬು[244] (ಒಳ್ಳೆಯ ಬಾಣ?), ಮಸೆಯಂಬು[245] (=ಮಸೆದ ಸರಲು[246]), ಕೆಂಗಱಿಯ ಮೊನೆಯಂಬು,[247] ಬಟ್ಟೆನಂಬು[248] (=ದುಂಡಗಿರುವ ಬಾಣ?). ರನ್ನನು ಕವಲಂಬು[249]

---

230 Arthaśāstra (Tr. Shamashastry), p. 111. ಚಾಪದಿಂದ (ಒಂದು ರೀತಿಯ ಬೊಂಬು) ಮಾಡಿದ್ದು ಕೋದಂಡ, ದಾರುವಿನಿಂದ (ಒಂದು ರೀತಿಯ ಮರ) ಮಾಡಿದ್ದು ದ್ರೋಣ, ಶೃಂಗದಿಂದ (ಕೊಂಬು) ಮಾಡಿದ್ದು ಧನುಸ್ ಅಥವಾ ಶಾರ್ಙ್ಗ.

231 V. R. R. Dixitar: War in Ancient India, p. 100.

232 The Kadamba kula—ಗ್ರಂಥದ ಪು. 208ರ ಎದುರಿಗಿರುವ ಚಿತ್ರವನ್ನು ನೋಡಿ.

233 ಈ ಚಿತ್ರಗಳನ್ನು ನೋಡಿ—MAR (1945). Plate IX ; MAR (1923). p. 54.

234 EC. IX. Nl. 60.

235 EC. XI. Cl. 5.

236 SII. IX. i. 58.

237 ಅದೇ.

238 SII. IX. i. 64.

239 EC. VII. Sk. 58. ಬೇಗೂರಿನ ಶಿಲಾಶಾಸನದಲ್ಲಿ (EC. IX.—Frontispiece) ಚಿತ್ರಿತವಾಗಿರುವಂತೆ ಆನೆಯ ಕುಂಭಸ್ಥಳಕ್ಕೆ ನೆಟ್ಟಿರುವ ಬಾಣಗಳಿಗೆ ಗರಿಗಳಿರುವುದು ಸ್ಪಷ್ಟವಾಗಿ ಕಾಣುತ್ತದೆ.

240 ಪಾರೆ-ಹಾರೆ, a crowbar. ಹಾರೆಯನ್ನು ಹೋಲುವ, ದಪ್ಪನೆಯ, ಲೋಹದ ಗಟ್ಟಿಯಾದ ಬಾಣವಿರಬಹುದೆ?

241 ಪಂಪಭಾರತ, 12. 112.

242 ಅದೇ, 10. 106, ವ; ಅನಂತನಾಥಪುರಾಣ, ಪು. 250. ಕೆಲ್ಲು ಎಂದರೆ ತಮಿಳಿನಲ್ಲಿ ಕೊರೆ, ತೋಡು ಎಂಬರ್ಥಗಳಿವೆ.

243 ಪಂಪಭಾರತ, 11.42 ; ಅದೇ, 12.60, ವ.

244 ಅದೇ.

245 ಅದೇ, 11.65.

246 EC. VIII. Sb. 141.

247 ಪಂಪಭಾರತ, 10.73.

248 ಅದೇ, 11.93.

249 ಗದಾಯುದ್ಧ, 4.26.

18

ಎಂಬ ಬಾಣವನ್ನು ಹೇಳುತ್ತಾನೆ. ಇದು ಅರ್ಧಚಂದ್ರ[250] ಎಂಬ ಹೆಸರಿನ ಬಾಣವಿರಬಹುದು. ಮೇಲಿನ ಕೋಲಂಬು ಇದೇ ಇರಬಹುದೆ? ಅಥವಾ ಕೋಲಿನ ಹಾಗೆ ಬಹಳ ಉದ್ದವಿರುವ ಬಾಣವೆ? ಜನ್ನನು ಹೇಳುವ 'ಅಚ್ಚಲಗಂಬು'[251] (=ಹೊಸ ಅಲಗಿನ ಬಾಣ, ಮಸೆದ ಬಾಣ, 'ಮಸೆಯುಂಬು'?) ಎಂಬ ಬಾಣವು ಯಾವುದು? ಕೇಶಿರಾಜನು 'ಬೋಳಿ' ಎಂಬ ಹೆಸರಿನ ಬಾಣವನ್ನು ಹೇಳಿದ್ದಾನೆ.[252] ಹರಿಹರನು ತನ್ನ ಬೇಡರಕಣ್ಣಪ್ಪನ ರಗಳೆಯಲ್ಲಿ (ಹರಿಹರನ ರಗಳೆಗಳು, ಭಾಗ 1, ಸಂ. ಫ. ಗು. ಹ.) 'ಬೋಳಿಯಂಬ'ನ್ನು ಹೆಸರಿಸಿದ್ದಾನೆ. ಇದು ಗರಿಗಳಿಲ್ಲದ, ಬೋಡು ಬೋಡಾದ ಬಾಣವಿರಬಹುದೆ?

ಮರದ ಅಥವಾ ಬೊಂಬಿನ ತುದಿಗೆ ಕಬ್ಬಿಣದ ಮೊನಚಾದ ಆಯುಧವನ್ನು ಸೇರಿಸಿ ಬಾಣಗಳನ್ನು ಮಾಡುತ್ತಿದ್ದರು. 'ಮರದ ಸರಲಿ'ನ ಹೆಸರು ಒಂದು ಶಾಸನದಲ್ಲಿದೆ (EC. VIII. Sb. 141). ಬಾಣಗಳ ಮೇಲೆ ವೀರರು ತಮ್ಮ ತಮ್ಮ ಹೆಸರುಗಳನ್ನು ಕೆತ್ತಿಸಿಕೊಳ್ಳುತ್ತಿದ್ದ ಸಂಪ್ರದಾಯವು ಪ್ರಾಚೀನ ಭಾರತದಲ್ಲಿದ್ದಿತು. ಮದರಾಸಿನ ಮ್ಯೂಸಿಯಮ್ಮಿನಲ್ಲಿ ಇಂತಹ ಎರಡು ನಾಮಾಂಕಿತ ಶರಗಳಿವೆ.[253] ಎಂದರೆ ಬಾಣಗಳ ಮೇಲೆ ಹೆಸರುಗಳನ್ನು ಕೆತ್ತಿಸುವ ಸಂಪ್ರದಾಯವು ಹದಿನೇಳನೆಯ ಶತಮಾನದಲ್ಲಿಯೂ ಇತ್ತೆಂಬುದು ಇದರಿಂದ ಸೂಚಿತವಾಗುತ್ತದೆ.[254] ಪ್ರಾಚೀನ ಕರ್ನಾಟಕದಲ್ಲೂ ಈ ಸಂಪ್ರದಾಯವಿದ್ದಿರುವುದು ಅಸಂಭವವಲ್ಲ.

ಬಾಣಗಳು ದೇಹದ ತುಂಬ ಚುಚ್ಚಿ ದೇಹವು ನೆಲಕ್ಕೆ ಬಿದ್ದಾಗ ಭೀಷ್ಮನಂತೆ ನೆಲವನ್ನು ಮುಟ್ಟದೆ ಬಾಣಗಳ ಮೇಲೆ ಒರಗಿದ ಹಲವರು ವೀರರನ್ನು ಶಾಸನಗಳು ಪ್ರಶಂಸೆಮಾಡಿವೆ. 'ತಾನುಂ ಪಲವುಂ ಎಸುವೆತ್ತು ಎಯ್ವೊದೊ (ದೆ) ದಪ್ಪಿದಪ್ಪೊಲ್ ಕಣೆಪಂಜರದೊಳ್ ಎರಗಿ ಭೀಷ್ಮನ್ವಿಟ್ಟಂತೆ ನೆಲಮುಟ್ಟದೆ ಬಿೞ್ದೊನಾನ್ ದೇವಗಣಿಕೆಯರಾರ್ಗ್ಳಂಬಿಡಿದು ಬಂದಿದಿರ್ಗೊಂಡು ವೀರಲೋಕಕ್ಕೆ ಸಂದೋನ್" ಎಂದು ಕುಲಮುದ್ದ ಎಂಬ ವೀರನನ್ನು ಒಂದು ಶಾಸನವು ಹೊಗಳಿದೆ.[255] ಮತ್ತೊಂದು ಶಾಸನವು ಬಹುಮಟ್ಟಿಗೆ ಪಂಪನನ್ನು[256] ಅನುಕರಿಸಿ ದೇಕರಸನನ್ನು ಹೀಗೆ ಹೊಗಳುತ್ತದೆ—"ಹೊತ್ತಗೆಯ ಟವಣೆಕೋಲ್ಗಳಲೆತ್ತಿದ ತೆಱದಂತೆ ಸರದ ತಂದಲು ತನುವಂ ತೆತ್ತಿಸಲ್ಕುಮರ ಕಾಂತಾ ಜತ್ತಕಿಯರುಯ್ಯೆ ದೇಕಂ ನಾಕಕ್ಕೇಱಿದ."[257]

---

[250] Date : The Art of War in Ancient India, p. 13.

[251] ಅನಂತನಾಥಪುರಾಣ. 14.6. ಮೇಲಿನ ಬಾಣಗಳಲ್ಲಿ ಕೆಲವಾದರೂ ಬಾಣದ ಪ್ರಭೇದಕ್ಕಿಂತ ಅದರ ಗುಣವನ್ನು ಹೇಳುವ ಹೆಸರುಗಳಾಗಿರಬಹುದು. ಉದಾ: ನಲ್ಲಂಬು, ಮಸೆಯುಂಬು ಇತ್ಯಾದಿ.

[252] ಶಬ್ದಮಣಿದರ್ಪಣ (1959), ಪು. 21. ಬೋೞಿಲ್=ಬಿಲ್ಲು. ಬೋೞಿ=ಒಂದು ಬಾಣಪ್ರಭೇದ.

ಕನ್ನಡದ ಮಂಗರಾಜ ನಿಘಂಟಿನಲ್ಲಿ 'ಬೋೞಿ' ಎಂಬುದು ಸಂಸ್ಕೃತದ 'ಕ್ಷುರಪ್ರ' ಎಂಬ ಅರ್ಧಚಂದ್ರಾಕಾರದ ತುದಿಯ ಬಾಣವನ್ನು ಸೂಚಿಸುವುದೆಂದು ಹೇಳಿದೆ (A Kannada English Dictionary, p. 508).

[253] C. Sivarama Murthy : 'Signed arrow' (K. V. Rangaswamy Iyengar commemoration volume, pp. 155-8).

[254] ಅದೇ.

[255] EC. VIII. Sb. 10, C. 800 A.D.

[256] " ತಿಂತಿಣಿಯಾಗೆ ನಟ್ಟಕಣೆಯೊಳ್ ನೆಲಮುಟ್ಟದೆ ಮೆಯ್ಯೊಳತ್ತಮಿ ।
ತ್ತಂ ತೆಱದಿರ್ದ ಪುಣ್ಗಳೆಸೆವಕ್ಕರದಂತಿರೆ ನೋಡಿ ಕಲ್ಲಿಮಂ ।
ಬಂತೆವೊಲಿರ್ದ ನಟ್ಟವಣೆಕೋಲ್ಗಳ ಮೇಲೆಸೆದಿದ್ದ ವೀರಸಿ ।
ದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ ॥"
(ಪಂಪಭಾರತ, 11.46. ಅಟ್ಟವಣೆಕೋಲ್=ವ್ಯಾಸಪೀಠ)

[257] EC. XII. Ck. 18.

ಅಂಬುಗಳನ್ನಿಡುತ್ತಿದ್ದ ಬತ್ತಳಿಕೆಯನ್ನು ದೊಣೆ[258] ಎಂದೂ, ಹೊದೆ[259] ಎಂದೂ ಕರೆಯುತ್ತಿದ್ದರು. ವೀರನೊಬ್ಬನು ಬತ್ತಳಿಕೆಯನ್ನು ಬೆನ್ನಿಗೆ ಕಟ್ಟಿರುವ ಚಿತ್ರವು ಒಂದು ವೀರಗಲ್ಲಿನ ಮೇಲಿದೆ. (MAR. 1923. p. 54)

## ಇತರ ಆಯುಧಗಳು

ಖಡ್ಗ ಅಥವಾ ಕತ್ತಿಗೆ ಕರವಾಳ್[260] ಅಥವಾ ತೋಳಬಾಳ್[261] ಎಂಬ ಹೆಸರುಗಳೂ ಇದ್ದುವು. ಕತ್ತಿಯನ್ನಿಡುವ ಒರೆಯನ್ನು ಸೊಂಟಕ್ಕೆ ಕಟ್ಟಿಕೊಳ್ಳುತ್ತಿದ್ದರು.[262] ಕಡಿತಲೆ[263] ಎಂಬುದು ಖಡ್ಗದ ಪ್ರಭೇದವಿರಬಹುದು. ಇದು ಮಚ್ಚಿನಂತಹ ಆಯುಧವಿರಬಹುದೆ? ಮಚ್ಚಿನಂತಹ ಆಯುಧದ ಚಿತ್ರವನ್ನು ಒಂದು ವೀರಗಲ್ಲಿನಲ್ಲಿ ಕಾಣಬಹುದು. (MAR. 1914–5. p. 32). ಅಲಗು[264] ಎಂಬುದು ಸಂಸ್ಕೃತದ 'ಕೃತಿ'[265] (=ಕಿರುಗತ್ತಿ)ಯನ್ನು ಹೋಲುತ್ತದೆ. 'ಗೇಣ್'[266] ಎಂಬುದು ಗೇಣುದ್ದದ ಕಠಾರಿಯಿರಬಹುದು. ಇದನ್ನು ಒರೆಯಲ್ಲಿ ಹಾಕಿ ಸೊಂಟದಲ್ಲಿ ಕಟ್ಟಿಕೊಳ್ಳುತ್ತಿದ್ದರು. MAR. (1923), p. 54ರಲ್ಲಿರುವ ಚಿತ್ರದಲ್ಲಿ ವೀರನೊಬ್ಬನು ಇಂತಹ ಆಯುಧವನ್ನು ಹಿಡಿದಿರುವುದು ಕಂಡುಬರುತ್ತದೆ.

ಉಳಿದ ಆಯುಧಗಳ ಪಟ್ಟಿಯನ್ನು ಕೆಳಗೆ ಕೊಡಲಾಗಿದೆ.

ಸಬಳ[267]

ಕೊಂತ[268] [ಸಂ. ಕುಂತ. 5, 6 ಅಥವಾ 7 ಹಸ್ತಗಳಷ್ಟು ಉದ್ದವಿರುವ ಮರದ ದಂಡವೆಂದು ಅರ್ಥಶಾಸ್ತ್ರದ ವ್ಯಾಖ್ಯಾನವು ಹೇಳುತ್ತದೆ. (ಪು. 111). ದೇಹಕ್ಕೆ ಕೊಂತಗಳು ನಾಟಿದ ವಿಷಯವು ಶಾಸನವೊಂದರಲ್ಲಿದೆ (EC. VIII. Sb. 175). ಆದ್ದರಿಂದ ಕೊಂತವು ಕಬ್ಬಿಣದ ಮೊನಚಾದ ತುದಿಯುಳ್ಳ ಆಯುಧವಿರಬೇಕು.]

ಶಲ್ಯ[269] (Javelin. ಈಟಿಯೂ ಇದೂ ಒಂದೇ ಇರಬಹುದೇ?)

ಭಲ್ಯ[270] (ಸಂ. ಭಲ್ಲಿ. ಒಂದು ರೀತಿಯ ಬಾಣ).

ಶೂಲ[271] (ಅನಿರ್ದಿಷ್ಟ ಉದ್ದವಿರುವ ಮೊನಚಾದ ದಂಡ—Arthaśāstra, p. 111).

---

258 ಪಂಪಭಾರತ, 7.92.
259 MAR. (1932). p. 189.
260 EC. VIII. Sa. 109
261 EC. XI. Dg. 167
262 EC. VIII.Sa. 109.
263 SII. IX. i. 5; EC. VIII. Sb. 141.
264 EC. IV. Ng. 28.
265 Date : The Art of War in Ancient India, p. 20
266 EC. V. Hn. 65
267 ಸೂಕ್ತಿಸುಧಾರ್ಣವ, ಪು. 385
268 EC. VIII. Sa. 80.
269 EC. VIII. Sa. 80.
270 ಅದೇ
271 EC. VII. Sk. 136.

ಕಣೆಯು[272] (ಸಂ. ಕಣಯ. ತ್ರಿಕೋಣಾಕಾರದ ಎರಡು ತುದಿಗಳುಳ್ಳ ಲೋಹದ ದಂಡ.)[273]

ಕರ್ಕಡೆ[274] (=ಕೈಯಿಂದ ಎಸೆಯುವ ಶೂಲದಂತಹ ಆಯುಧ. "ಪಾರ್ದಿಸುವ ಕಕ್ಕಡೆ"—ಎರಡನೆಯ ಗುಣವರ್ಮನ ಪುಷ್ಪದಂತಪುರಾಣ, 7.74.).

ಪರಿಘ[275] (ಕಬ್ಬಿಣದ ದಂಡ).

ಸುರಿಗೆ[276] (ಸಂ. ಕ್ಷುರಿಕಾ)

ಮುಸಲ[277] (ಖಾದಿರದಲ್ಲಿ ಮಾಡಿದ ಮೊನಚಾದ ದಂಡ—Arthaśāstra, p. 110).

ತೀರಿಕೆ[278]

ಜಟ್ಟಿಗೆ[279]

ಭಿಂಡಿವಾಳ[280] (ದಪ್ಪ ತುದಿಯಿರುವ ಕಬ್ಬಿಣದ ದಂಡ—(Arthaśāstra, p. 111).

ಈಟಿ (ಇಟ್ಟಿ)[281]

ಯುದ್ಧಗಳಲ್ಲಿ ಕಲ್ಲುಗಳನ್ನು ಬಳಸುತ್ತಿದ್ದುದರ ಸೂಚನೆ ಒಂದು ಶಾಸನದಲ್ಲಿದೆ.[282] ಇವಲ್ಲದೆ ಪಂಪನು ಹೇಳುವ ಕೆಲವು ಆಯುಧಗಳಿವು—

ಶಕ್ತಿ ನಾಲ್ಕು ಹಸ್ತಗಳಷ್ಟು ಉದ್ದದ ಲೋಹಾಯುಧ. ಕರವೀರದ ಎಲೆಯನ್ನು ಹೋಲುತ್ತದೆ. ಹಿಡಿಯು ಆಕಳಿನ ಕೆಚ್ಚಲನ್ನು ಹೋಲುತ್ತದೆ.—Arthaśāstra, p. 111).

ಪಂಚರಾಯುಧ (ಮೈಸೂರು ಅರಮನೆಯ ಆಯುಧಾಗಾರದಲ್ಲಿ 'ಪಂಚ ಕಠಾರಿ'ಯೆಂಬ ಆಯುಧವಿದೆ).[283]

ಆವುತಿ (ಶಬ್ದಮಣಿದರ್ಪಣದ ಪ್ರಕಾರ 'ಅವುತಿ' ಎಂದರೆ ಕವಚ.[284] 'ಅವು' ಎಂದರೆ ಮುಸಲ ಎಂಬ ಆಯುಧದಿಂದ ಹೊಡೆ ಎಂದರ್ಥ)[285]

ಮಾಳಜಿಗೆ.

---

272 EC. VIII. Sb. 141. ಕಣೆಯ ಎಂಬುದು ಕಣೆ(= ಬಾಣ)ಯಿಂದ ಬೇರೆ. ಏಕೆಂದರೆ ಕಣೆಯ ಮತ್ತು ಬಾಣಗಳನ್ನು ಈ ಶಾಸನದಲ್ಲಿ ಪ್ರತ್ಯೇಕವಾಗಿ ಹೇಳಿದೆ.

273 Arthaśāstra (Tr. Shamashastry), p. 111.

274 EC. VII. Sk. 136.

275 EC. IV. Ng. 28.

276 EC. XII. Tp. 81.

277 BKI. I. ii. 175.

278 EC. VII. Sk. 136.

279 EC. XI. Cl. 5.

280 EC. VII. Sk. 136.

281 ಸೂಕ್ತಿಸುಧಾರ್ಣವ, ಪು. 385

282 EC. VIII. Sb. 141. 'ಅಸಿಮು(ಯು)ಪಳ ಕಣೆಯ ಕೊಂತಂ ಮರದ ಸರಲು ಮೈಯ್ಯನುಚ್ಚೆ" (ಉಪಳ = ಕಲ್ಲು).

283 MAR. (1914–15). p. 32.

284 ಶಬ್ದಮಣಿದರ್ಪಣ (1959), ಪು. 279.

285 ಅದೇ, ಪು. 227.

ಪಿಡಿಕುತ್ತು. (ಹಿಡಿದು ಚುಚ್ಚುವ ಆಯುಧ ?)

ತೋಮರ (4, 4½ ಅಥವಾ 5 ಹಸ್ತಗಳಷ್ಟು ಉದ್ದವಿರುವ ಬಾಣದಂತಹ ತುದಿಯುಳ್ಳ ದಂಡ). Arthaśāstra, p. 111.

ಕಂಪಣ (ಸಂ. ಕರ್ಪಣ. ಕೈಯಿಂದ ಎಸೆಯಬಹುದಾದ ಬಾಣ. ಕುಶಲನಿಂದ ಎಸೆಯಲ್ಪಟ್ಟರೆ ನೂರು ಬಿಲ್ಲುಗಳಷ್ಟು ದೂರ ಹೋಗಬಲ್ಲುದು.—Arthaśāstra, p. 111).

ಮುಸುಂಡಿ (ಸಂ. ಮುಸುಂಠೀ ಅಥವಾ ಭುಶುಂಡಿ)

ಮುದ್ಗರ (ಮೈಸೂರಿನ ಅರಮನೆಯ ಆಯುಧಾಗಾರದಲ್ಲಿ ಈ ಹೆಸರಿನ ಆಯುಧವಿದೆ).[286]

ಸೂಕ್ತಿಸುಧಾರ್ಣವದಲ್ಲಿ ಬಿಟ್ಟೀಜು, ಒಕ್ಕಣ, ಉದ್ದುವಾರೆ, ಅಡಾಯುಧ, ಲೌಡಿ (<ಲಗುಡ= ದೊಣ್ಣೆ) ಮುಂತಾದ ಆಯುಧಗಳ ಹೆಸರಿವೆ. ಇವುಗಳಲ್ಲೆಲ್ಲ ಎಷ್ಟು ಕಡೆ ಒಂದು ಹೆಸರು ಇನ್ನೊಂದು ಹೆಸರಿನ ಅನುವಾದವೋ, ಎಷ್ಟು ನಿಜವಾಗಿಯೂ ಬಳಕೆಯಲ್ಲಿದ್ದುವೋ ತಿಳಿಯದು.

## ಗುರಾಣಿ

ಗುರಾಣಿಯನ್ನು ಕನ್ನಡದಲ್ಲಿ ಪಲಗೆ[287] ಎಂದು ಕರೆಯುತ್ತಾರೆ. ವೀರಗಲ್ಲುಗಳ ಮೇಲೆ ಚಿತ್ರಿತವಾಗಿರುವ ಗುರಾಣಿಗಳು ಬಹು ದೊಡ್ಡ ಗಾತ್ರದವು. ಯೋಧನು ಮುಂದೆ ಹಿಡಿದಾಗ ಕೊರಳಿನಿಂದ ಸೊಂಟದವರೆಗೆ ರಕ್ಷಣೆಯನ್ನು ಕೊಡುತ್ತಿದ್ದುವು.[288] ಸುಮಾರು ಎರಡಡಿ ಉದ್ದ, ಎರಡಡಿ ಅಗಲ ಎಂದು ಅವುಗಳ ಗಾತ್ರವನ್ನು ಸ್ಥೂಲವಾಗಿ ನಿರ್ಧರಿಸಬಹುದು. ಬಳ್ಳಿಗಾವೆಯ ಕೆಲವು ವೀರಗಲ್ಲುಗಳಲ್ಲಿ ವೀರರ ಕೈಲಿರುವ ಗುರಾಣಿಗಳ ಮೇಲೆ ಪ್ರಾಣಿಗಳ ಚಿತ್ರಗಳನ್ನು ಮತ್ತು ಬೇರೆ ಬೇರೆ ವಿನ್ಯಾಸಗಳನ್ನು ಕೆತ್ತಲಾಗಿದೆ.

## ಕವಚಗಳು

ಸೀಸಹ[289] ಎಂಬುದು ತಲೆಗೆ, ಬಾಹುರಕ್ಕೆ[290] (ಬಾಹುರಕ್ಷೆ) ಎಂಬುದು ತೋಳುಗಳಿಗೆ, ತನುತ್ರ[291] ವೆಂಬುದು ದೇಹಕ್ಕೆ ಕವಚಗಳು. ಸನ್ನಣ (ಸಂ. ಸನ್ನಾಹ) ಎಂಬುದೂ ದೇಹದ ಕವಚವೇ. ಅದನ್ನು ಬಿಚ್ಚುವಾಗ ' ಕಣಕ್ ' ಎಂದು ಶಬ್ದವಾಗುತ್ತಿತ್ತು.[292] ಕವಚಗಳನ್ನು ಲೋಹದಿಂದ ಮಾಡುತ್ತಿದ್ದರೆಂಬುದು

---

286 MAR (1914–15). ಪು. 32.

287 EC. VIII. Sb. 141.

288 ಈ ಚಿತ್ರಗಳನ್ನು ನೋಡಿ : MAR (1941). p. 96; The Kadamba Kula, p. 208.

289 EC. VI. Kd. 35. ಗದಾಯುದ್ಧದಲ್ಲಿ (2.28) ಸೀಸಕ ಎಂದು ಕರೆದಿದೆ. ಒಂದು ವೀರಗಲ್ಲಿನ ಮೇಲಿನ ಚಿತ್ರದಲ್ಲಿ ಮಾತ್ರ ಶಿರಸ್ತ್ರಾಣ ಸ್ಪಷ್ಟವಿದೆ. (MAR. 1938. p. 88). ಅನೇಕ ಕಡೆಗಳಲ್ಲಿ ಕಾಣಿಸದು. ಬರಿಯ ಕೂದಲನ್ನು ಎತ್ತಿ ಗಂಟು ಕಟ್ಟಿರುತ್ತದೆ. (MAR. 1914-15. p. 18). ಬೇಗೂರಿನ ಶಾಸನದ (EC. IX-Frontispiece) ಮೇಲಿನ ಚಿತ್ರದಲ್ಲಿ ವೀರರು ತಲೆಗೆ ಸೀಸಕವನ್ನು ಧರಿಸಿರುವಂತೆ ಕಾಣುತ್ತದೆ.

290 EC. VI. Kd. 35. ಚಿತ್ರಗಳಲ್ಲಿ ಒಂದೆರಡು ಕಡೆ ಬಾಹುರಕ್ಷೆಗಳು ಕಂಡುಬರುತ್ತವೆ.(MAR. 1919. p. 8)

291 EC. II. 35. ಚಿತ್ರಗಳಲ್ಲಿ ಒಂದೆರಡು ಕಡೆ ಕವಚಗಳನ್ನು ಧರಿಸಿರುವ ಸೂಚನೆಯಿದೆ. (EC. IX. ಮುಖಚಿತ್ರ ; MAR. 1919. p. 8). ಬಹು ಕಡೆ ಕವಚಗಳು ಕಾಣಿಸುವುದಿಲ್ಲ.

292 ಪಂಪಭಾರತ, 11.2, ವ.

ಇದರಿಂದ ಸ್ಪಷ್ಟ. ಆನೆಗಳಿಗೆ ಲೋಹವಕ್ಕರಿಕೆ (=ಲೋಹ ಪಕ್ಷರಕ್ಷೆ)ಗಳನ್ನು ಹಾಕುತ್ತಿದ್ದರು.[293] ಅವುಗಳಿಗೆ ಉಳಿದ ಸಮಯುಗಳಲ್ಲಿ ಮೊಗವಾಡಗಳನ್ನು ಕಟ್ಟಿ ಯುದ್ಧಸಮಯದಲ್ಲಿ ಆ ಮೊಗವಾಡಗಳನ್ನು ಬಿಚ್ಚಿ ಬಿಡುತ್ತಿದ್ದರು.[294] ಕುದುರೆಗಳಿಗೆ ಕಣ್ಣು ಗೊರಸುಗಳನ್ನು ಮಾತ್ರ ಬಿಟ್ಟು ಉಳಿದೆಲ್ಲ ಅಂಗಗಳನ್ನು ಕವಚಗಳಿಂದ ಮುಚ್ಚುತ್ತಿದ್ದರು.[295] ಸೈನಿಕರು 'ಜೋಡು' (=ಕವಚ)ಗಳನ್ನು ತೊಟ್ಟು ಮೊಚ್ಚೆ (=ಪಾದರಕ್ಷೆ)ಗಳನ್ನು[296] ಧರಿಸುತ್ತಿದ್ದರು. ಸೈನಿಕರ ಚಿತ್ರಗಳಲ್ಲಿ ಎದ್ದು ಕಾಣುವ ಅಂಶವೆಂದರೆ ಅವರ ದೊಡ್ಡ ಕಿವಿಯುಂಗುರಗಳು ಮತ್ತು ಮೇಲೆತ್ತಿ ಕಟ್ಟಿರುವ ಕೂದಲ ಗಂಟು.[297]

## ಯುದ್ಧವಾದ್ಯಗಳು ಮತ್ತು ಧ್ವಜಗಳು

ಸೈನಿಕರಿಗೆ ಉತ್ಸಾಹ ಹುಮ್ಮಸ್ಸುಗಳನ್ನು ತುಂಬಲು ಯುದ್ಧಗಳಲ್ಲಿ ನಾನಾ ಬಗೆಯ ವಾದ್ಯಗಳನ್ನು ಬಾರಿಸುತ್ತಿದ್ದರು. ಯುದ್ಧರಂಗದಲ್ಲಿ 'ಪಜೆ' (=ಹರೆ, ತಮ್ಮಟೆ)ಯನ್ನು ಬಾರಿಸುತ್ತಿದ್ದರು.[298] ಶಂಖವನ್ನು ಊದುತ್ತಿದ್ದರು.[299] ಜೇಗೂರಿನ ವೀರಗಲ್ಲಿನ ಮೇಲೆ ನೇರವಾಗಿರುವ ಕಹಳೆಯನ್ನು ಊದುತ್ತಿರುವ ಚಿತ್ರವಿದೆ.[300] ಯುದ್ಧರಂಗದಲ್ಲಿ ಕಹಳೆ, ಜಾಗಟೆ, ಮೃದಂಗಗಳನ್ನು ಬಾರಿಸುತ್ತಿದ್ದ ಚಿತ್ರವೊಂದು ಒಂದು ವೀರಗಲ್ಲಿನ ಮೇಲಿದೆ.[301] ಪಜೆ, ಕಹಳೆಗಳು ಇನ್ನೊಂದು ವೀರಗಲ್ಲ ಮೇಲೆ ಚಿತ್ರಿತವಾಗಿವೆ.[302] ವಾದ್ಯಕಾರರೆಲ್ಲರೂ ನಿರಾಯುಧರಾಗಿರುವಂತೆ, ಯುದ್ಧರಂಗದ ಮಧ್ಯೆ ಅಥವಾ ಅಂಚಿನಲ್ಲಿ ನಿಂತಿರುವಂತೆ ಚಿತ್ರಿತವಾಗಿರುವುದರಿಂದ ಬಹುಶಃ ಇವರನ್ನು ಯುದ್ಧದಲ್ಲಿ ಕೊಲ್ಲುತ್ತಿರಲಿಲ್ಲ. ಯುದ್ಧಶಿಬಿರಗಳಲ್ಲಿ ಸಂಜೆ ರವಳಿ ಎಂಬ ವಾದ್ಯವನ್ನು ಘೋಷಿಸುತ್ತಿದ್ದರು.[303] ದಿನದ ಯುದ್ಧ ಮುಗಿಯಿತೆಂಬುದಕ್ಕೆ 'ಅಪಹಾರ ತೂರ್ಯ' ವನ್ನು ಘೋಷಿಸುತ್ತಿದ್ದರು.[304]

"ಧ್ವಜಗಳು ಸ್ವತಃ ಮುಗ್ಧವಸ್ತುಗಳು. ಆದರೂ ಸೈನಿಕರ ಮೇಲೆ ಅಪಾರವಾದ ಪ್ರಭಾವವನ್ನು ಬೀರಿರುವುದು ಇತಿಹಾಸದಲ್ಲಿ ಕಂಡುಬರುತ್ತದೆ. ಧ್ವಜಕ್ಕೆ ಉತ್ತೇಜನ ಕೊಡುವ ಶಕ್ತಿಯಿದೆ. ಅದು ಶಕ್ತಿಯುಡುಗಿ ಚದುರಿರುವ ಸೈನ್ಯವನ್ನು ಒಗ್ಗೂಡಿಸುವ ಕೇಂದ್ರಸ್ಥಾನ."[305] ಪ್ರಾಚೀನ ಕರ್ನಾಟಕದಲ್ಲಿ

---

293 ಅದೇ. 10.51, ವ: ಗದಾಯುದ್ಧ, 6.28. ಶಾಸನಗಳಲ್ಲೆಲ್ಲಿಯೂ ಆನೆಗಳಿಗೆ ಹಾಕಿರುವ ಕವಚಗಳು ಕಾಣಿಸುವುದಿಲ್ಲ. ಗೆಜ್ಜೆಯ ಸರ ಮುಂತಾದ ಅಲಂಕಾರಗಳು ಕಾಣಿಸುತ್ತವೆ.

294 ಪಂಪಭಾರತ, 10.51, ವ.

295 ಅದೇ. ಕುದುರೆಗಳಿಗೆ ಒಳ್ಳೆಯ ರಕ್ಷಣೆಗಳಿದ್ದಂತೆ ಕೆಲವು ಚಿತ್ರಗಳಲ್ಲಿ ಕಂಡುಬರುತ್ತದೆ. ಅಥವಾ ಅವೂ ಕೇವಲ ಅಲಂಕಾರಗಳೋ ತಿಳಿಯದು (MAR. 1914–15. p. 18.) ಇನ್ನು ಕೆಲವು ಕಡೆಯಂತೂ ಕವಚವಿಲ್ಲದಿರುವುದು ಸ್ಪಷ್ಟ. (The Kadamba kula, p. 256 ರಲ್ಲಿನ ಚಿತ್ರ).

296 ಸೂಕ್ತಿಸುಧಾರ್ಣವ, ಪು. 386. ವೀರಗಲ್ಲ ಮೇಲಿನ ಯಾವ ಚಿತ್ರದಲ್ಲೂ ಪಾದರಕ್ಷೆಗಳು ಕಾಣಿಸುವುದಿಲ್ಲ.

297 MAR (1914-15), P. 18 ; EC. IX (Frontispiece).

298 EC. XV. Ak. 237.

299 EC. V. Bl. 17.

300 EC. IX (Frontispiece).

301 MAR (1914-15). p. 18.

302 ಅದೇ. ಪು. 32.

303 ಪಂಪಭಾರತ, 10.35, ವ.

304 ಅದೇ.

305 Date : The Art of War in Ancient India, p, 25.

ಸೈನ್ಯದೊಡನೆ ಅಸಂಖ್ಯಾತ ಧ್ವಜಗಳೂ ಹೊರಡುತ್ತಿದ್ದುವು. ಯುದ್ಧರಂಗದಲ್ಲಿ ಧ್ವಜಗಳನ್ನು ಎತ್ತಿ ಹಿಡಿಯುತ್ತಿದ್ದರು. ಆನೆಗಳ ಅಂಬಾರಿಗಳ ಮೇಲೆ ಧ್ವಜಗಳಿರುತ್ತಿದ್ದುವು. ಯುದ್ಧದಲ್ಲಿ ಸೋತವರ ಧ್ವಜಗಳನ್ನು ಸಂಗ್ರಹಿಸಿಕೊಂಡು ಬರುವ ಸಂಪ್ರದಾಯವಿದ್ದಿತು.[306] ಈ ಧ್ವಜಗಳಲ್ಲಿ ರಾಷ್ಟ್ರದ ಸಂಕೇತವಾದ ರಾಜನ ಧ್ವಜಕ್ಕೆ ಹೆಚ್ಚು ಬೆಲೆಯಿದ್ದಿರಬೇಕು. ಬೇಗೂರಿನ ವೀರಗಲ್ಲಿನ ಚಿತ್ರದ ಮೇಲ್ಭಾಗದಲ್ಲಿ ಒಂದು ದೊಡ್ಡ ಧ್ವಜವು ಹಾರಾಡುತ್ತಿದೆ. ಅದರ ಕೆಳಗೆ ಒಬ್ಬ ಸ್ತ್ರೀ ನಿಂತಿದ್ದಾಳೆ.[307] ಅದು ರಾಜನ ಏಕಚ್ಛತ್ರದ ಕೆಳಗೆ ರಾಜ್ಯಲಕ್ಷ್ಮಿಯು ನಿಂತಿರುವುದರ ಸಂಕೇತವಿರಬೇಕು.

## ಸಿಡಿಮದ್ದು

ಪ್ರಾಚೀನ ಭಾರತೀಯರಿಗೆ ಸಿಡಿಮದ್ದಿನ ಪ್ರಯೋಗ ತಿಳಿದಿತ್ತು ಮಾತ್ರವಲ್ಲ, ಸಿಡಿಮದ್ದನ್ನು ಕಂಡು ಹಿಡಿದ ಗೌರವವು ಭಾರತೀಯರಿಗೆ ಸಲ್ಲಬೇಕು ಎಂಬ ವಾದವನ್ನು ಡಾ॥ ಗುಸ್ಟವ್ ಒಪ್ಪೆರ್ಟ್ ಎಂಬ ವಿದ್ವಾಂಸರು ಮೊದಲು ಮುಂದಿಟ್ಟರು.[308] ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕೊಡುವುದಾಗಲಿ, ವಿಮರ್ಶಿಸುವುದಾಗಲಿ ಇಲ್ಲಿ ಅಪ್ರಕೃತ. ಅವರ ಅಭಿಪ್ರಾಯವನ್ನು ಹಾಪ್ಕಿನ್ಸ್, ದಾತೆ ಮುಂತಾದ ವಿದ್ವಾಂಸರು ಒಪ್ಪದೆ ನಿರಾಕರಿಸಿದ್ದಾರೆ.[309] ಶ್ರೀ ದೀಕ್ಷಿತರ್ ಮುಂತಾದ ವಿದ್ವಾಂಸರು ಒಪ್ಪಿಕೊಂಡು ಪುಷ್ಟೀಕರಿಸಿದ್ದಾರೆ.[310] ಪ್ರಾಚೀನ ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಅಗ್ನಿಚೂರ್ಣವೆಂಬ (ಇದನ್ನು 'gun powder' ಎಂದು ಒಪ್ಪೆರ್ಟ್ ಅವರು ಅನುವಾದಿಸುತ್ತಾರೆ) ಪದನಾಗಲಿ, ನಾಲಿಕ (ಇದನ್ನು 'gun' ಎಂದು ಅವರು ಅನುವಾದಿಸುತ್ತಾರೆ) ಎಂಬ ಪದವಾಗಲಿ ಸಾಹಿತ್ಯದಲ್ಲಿ ಶಾಸನಗಳಲ್ಲಿ ಇಲ್ಲ. ಪ್ರಾಚೀನ ಕನ್ನಡಿಗರಿಗೆ ಸಿಡಿಮದ್ದಿನ ಬಳಕೆಯು ತಿಳಿದಿರಲಿಲ್ಲವೆಂದು ಖಚಿತವಾಗಿ ಹೇಳಬಹುದು. ಫಿರಂಗಿ, ಗುಂಡುಗೋವಿ, ಶತಘ್ನಿ ಮುಂತಾದ ಸಿಡಿಮದ್ದಿನ ಆಯುಧಗಳು ಹದಿನಾರನೆಯ ಶತಮಾನದಿಂದ ಈಚಿನ ಕಾವ್ಯಗಳಲ್ಲಿ ಯಥೇಷ್ಟವಾಗಿ ಕಾಣಿಸಿಕೊಳ್ಳುತ್ತವೆ.[311] ದಕ್ಷಿಣ ಭಾರತದಲ್ಲಿ ಮಹಮ್ಮದೀಯರ ದಾಳಿಯ ಕಾಲದ ಬಳಿಕ ಸು. 1368ರ ಹೊತ್ತಿಗೆ ಸಿಡಿಮದ್ದು ಬಳಕೆಗೆ ಬಂದಿತೆಂದು ಡಾ॥ ಟಿ. ವಿ. ಮಹಾಲಿಂಗಂ ಹೇಳುತ್ತಾರೆ.[312] ಕ್ರಿ. ಶ. 1117ರಲ್ಲಿ ನಿರ್ಮಿತವಾದ ಬೇಲೂರಿನ ಚನ್ನಕೇಶವ ದೇವಸ್ಥಾನದ ಗೋಡೆಗಳ ಮೇಲೆ ಬಂದೂಕುಗಳಿಂದ ಹೊಡೆಯುತ್ತಿರುವ ಪುರುಷರ ವಿಗ್ರಹಗಳಿವೆ.[313] ಈ ಭಾಗವನ್ನು ದೇವಸ್ಥಾನದ ಮೂಲ ಕಟ್ಟಡಕ್ಕೆ ಆಮೇಲೆ ಸೇರಿಸಿದರೋ ಏನೋ ಎಂಬ ಸಂಗತಿ ವಿಚಾರಾರ್ಹವಾದುದು.

---

306 MAR (1942). p. 145 ; ಪಂಪಭಾರತ, 8. 109.

307 EC. IX (Frontispiece).

308 Gustav Oppert : On the Weapons, Army organisation and Political maxims of the Ancient Hindus, with special reference to gunpowder and firearms, (1880), pp. 58-82.

309 Date : The Art of War in Ancient India, pp. 36-40.

310 V. R. R. Dixitar : War in Ancient India, pp. 101-106.

311 ಚಿಟಗೇರಿ ಕೃಷ್ಣಶರ್ಮ : ಕನ್ನಡಿಗರ ಕೋಟೆಗಾಳಿಗ ('ಕರ್ನಾಟಕ ಜನಜೀವನ' ಎಂಬ ಗ್ರಂಥದಲ್ಲಿ, ಪು. 26).

312 Administration and Social Life under Vijayanagar, p. 149.

313 R. Narasimhachar : The Kēśava temple at Bēlūr, p. 9.

## ವೈದ್ಯಕೀಯ ಚಿಕಿತ್ಸೆ

ಸೈನ್ಯದ ಜೊತೆಯಲ್ಲಿ ವೈದ್ಯರೂ ಯುದ್ಧರಂಗಕ್ಕೆ ಹೋಗುತ್ತಿದ್ದರು. ಯುಧಿಷ್ಠಿರನ ಸೈನ್ಯದ ಜೊತೆಯಲ್ಲಿ ಗಾಡಿಗಳೂ, ಅಂಗಡಿಗಳೂ ಅಲ್ಲದೆ ವೈದ್ಯರೂ ಚಿಕಿತ್ಸಕರೂ ತೆರಳಿದಂತೆ ಮಹಾಭಾರತವು ತಿಳಿಸುತ್ತದೆ.[314] ಪ್ರಾಚೀನ ಶಾಸನಗಳಲ್ಲಿ ಎಲ್ಲಿಯೂ ಯುದ್ಧರಂಗದಲ್ಲಿ ಕೆಲಸಮಾಡುತ್ತಿದ್ದ ವೈದ್ಯರನ್ನು ಹೆಸರಿಸಿಲ್ಲ. ಕ್ರಿ. ಶ. 1087ರ ಶಾಸನದಲ್ಲಿ (EC. VIII. Nr. 40) ಯುದ್ಧರಂಗದ ವೈದ್ಯರ ಹೆಸರಿದೆಯೆಂದು ರೈಸ್ ಅವರು ಭಾವಿಸಿದ್ದಾರೆ. ಆ ಶಾಸನದ ಭಾಗವನ್ನು ಹೀಗೆ ತಪ್ಪಾಗಿ ಅರ್ಥೈಸಿದ್ದಾರೆ: "ಸೈನಿಕರು ರಣರಂಗಕ್ಕೆ ಹೋಗುವ ಅವಸರದಲ್ಲಿ ಹಸಿವನ್ನು ಇಂಗಿಸಲು ಹೆಣಗಳನ್ನು ತಿಂದರು. ಅದರ ಫಲವಾಗಿ ಅವರಿಗೆ ಹೊಟ್ಟೆನೋವು ಬಂದಿತು. ವೈದ್ಯರನ್ನು ಕೇಳಿದಾಗ ಆನೆಯನ್ನು ತಿನ್ನಿ ಎಂದರು. ಅವರು ಆನೆಗಳನ್ನು ನುಂಗಿದ್ದರಿಂದ ಹೊಟ್ಟೆನೋವು ವಾಸಿಯಾಯಿತು. ವೈದ್ಯರು ನಕ್ಕರು."[315] ಶಾಸನವನ್ನು ಸರಿಯಾಗಿ ಓದಿ ಅರ್ಥಮಾಡಿಕೊಳ್ಳದೆ ಇರುವುದರ ಫಲ ಇದು. ರಣರಂಗದಲ್ಲಿ ಬಿದ್ದ ಹೆಣಗಳನ್ನು ತಿನ್ನಲು ಬಂದ ಪಿಶಾಚಿಗಳು ಅತಿಯಾಗಿ ತಿಂದು ಅಜೀರ್ಣಕ್ಕೆ ತುತ್ತಾಗುತ್ತವೆ. ತಮ್ಮ ವೈದ್ಯರನ್ನು ಕೇಳಿದಾಗ ಅವರು ಆನೆಗಳನ್ನು ತಿಂದರೆ ಅಜೀರ್ಣ ಹೋಗುತ್ತದೆ ಎಂದು ಹೇಳಿದಂತೆ ಶಾಸನದಲ್ಲಿದೆ. ಆ ಶಾಸನದಲ್ಲಿ ಯುದ್ಧವೈದ್ಯರ ಪ್ರಸ್ತಾಪವಿಲ್ಲ. ಬೇಗೂರು ವೀರಗಲ್ಲಿನ ಮೇಲೆ ಬಲಗಡೆಯ ಮೂಲೆಯಲ್ಲಿ ಬಹುಶಃ ಗಾಯಗೊಂಡಿರುವ ವ್ಯಕ್ತಿಯನ್ನು ವೈದ್ಯಕೀಯ ಚಿಕಿತ್ಸೆಗಾಗಿ ಇಬ್ಬರು ಹೊತ್ತು ಕೊಂಡು ಹೋಗುತ್ತಿರುವ ಚಿತ್ರವಿದೆ. (ಮೂವಿಟ್ಟಗಳಲ್ಲಿ 'ಅಪನಯನ'ವೂ ಒಂದು. ಗಾಯಗೊಂಡ ಸೈನಿಕರನ್ನು ಹೊರುವುದೇ ಅಪನಯನ ಕರ್ಮ). ಗಾಯಗೊಂಡ ವ್ಯಕ್ತಿಗಳನ್ನು ತಕ್ಷಣವೇ ವೈದ್ಯಕೀಯ ಚಿಕಿತ್ಸೆಗಾಗಿ ಕೊಂಡೊಯ್ಯುತ್ತಿದ್ದ ದಳವೊಂದಿರಬೇಕು.[316] ಅವರನ್ನು ಹೊಡೆಯಕೂಡದು ಎಂಬ ನಿಯಮವೂ ಇದ್ದಿರಬೇಕು. ಆದರೆ ದುರದೃಷ್ಟವಶಾತ್ ಆ ವಿಷಯದಲ್ಲಿ ನಮಗೆ ಎಲ್ಲಿಯೂ ವಿವರಗಳು ದೊರೆಯುವುದಿಲ್ಲ. ಅಪನಯನ ಕರ್ಮದವರು ತಮ್ಮನ್ನು ಉಳಿದವರಿಂದ ಪ್ರತ್ಯೇಕಿಸುವಂತೆ ಪ್ರತ್ಯೇಕ–ಚಿಹ್ನೆಗಳನ್ನು ಹೊಂದಿದ್ದಂತೆ ಊಹಿಸಬಹುದು.

ಯುದ್ಧಭೂಮಿಯಲ್ಲಿ ನಡೆಯುತ್ತಿದ್ದ ಚಿಕಿತ್ಸೆಯ ಒಂದೆರಡು ಅಮೂಲ್ಯ ಅಂಶಗಳು ಪಂಪನಲ್ಲಿ ದೊರೆಯುತ್ತವೆ. ಯುದ್ಧವು ಮುಗಿದ ಮೇಲೆ ಸಂಜೆ ನಾಯಕರು ತಮ ತಮಗೆ ಇಷ್ಟರಾದ ಜನರ,ಆನೆಗಳ,[317] ಕುದುರೆಗಳ ಗಾಯಗಳಿಗೆ ಶಸ್ತ್ರಚಿಕಿತ್ಸೆ ಮಾಡುವುದಕ್ಕೂ, ಔಷಧಿಯನ್ನು ಹಾಕುವುದಕ್ಕೂ ವೈದ್ಯರನ್ನು ('ಮರ್ದು ಬೆಜ್ಜರ್') ಕಳುಹಿಸುತ್ತಿದ್ದರು. ಶಸ್ತ್ರಚಿಕಿತ್ಸೆಯ ಒಂದು ವಿಧಾನದ ಚಿತ್ರವು ಇಲ್ಲಿ ಬರುತ್ತದೆ. ಮೈಗೆ, ಎಲುಬುಗಳಿಗೆ ನಾಟಿದ ಬಾಣ, ಕತ್ತಿ ಮುಂತಾದ ಆಯುಧಗಳ ಚೂರುಗಳನ್ನು ಅಯಸ್ಕಾಂತವನ್ನು ತೋರಿ ತೆಗೆಯುತ್ತಿದ್ದರು.[318] ಈ ಶಸ್ತ್ರಚಿಕಿತ್ಸಾ ವಿಧಾನವು ಪ್ರಾಚೀನ ಭಾರತೀಯ ವೈದ್ಯ ವಿಜ್ಞಾನದಲ್ಲಿ ಪ್ರಸಿದ್ಧ

---

[314] H. C. Ray : 'Notes on War in Ancient India' (Journal of the Department of Letters, Calcutta, XIV, p. 66).

[315] Rice : Mysore and Coorg from Inscriptions, p. 188.

[316] ಸೇನೆಯಲ್ಲಿ ಗಾಯಗೊಂಡವರಿಗೆ ನಡೆಯಿಸಬೇಕಾದ ವೈದ್ಯಕೀಯ ಚಿಕಿತ್ಸೆಯನ್ನು ಕುರಿತು ಒಂದು ಸಣ್ಣ ಅಧ್ಯಾಯವಿದೆ ಅರ್ಥಶಾಸ್ತ್ರದಲ್ಲಿ (XIV. 4).

[317] 'ಗಜವೈದ್ಯ ವಿದ್ಯಾ ಪ್ರಸಿದ್ಧ'ನಾಗಿದ್ದುದಲ್ಲದೆ ಸಕಲ ವೈದ್ಯಗಳಲ್ಲೂ ಪಾರಂಗತನಾಗಿದ್ದ ಜೈಯು ಎಂಬ ವೈದ್ಯನ ಹೆಸರು ಶಾಸನವೊಂದರಲ್ಲಿದೆ (EC. V. Ak. 17, 1139 A.D.).

[318] ಪಂಪಭಾರತ, 11.2, ವ.–"ತಮ್ಮ ಮೆಯ್ಯೊಳುಡಿದಂಬುಗಳುಮನೆಲ್ವಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳು– ಮನಯಸ್ಕಾಂತಮಂ ತೋಱಿ ತೆಗೆಯಿಸುತ್ತಂ".

ವಾಗಿತ್ತು. ದೇಹದಲ್ಲಿರುವ, ದೇಹಕ್ಕೆ ಸಂಬಂಧಪಡದ ವಸ್ತುಗಳನ್ನು 'ಶಲ್ಯ'ಗಳೆಂದು ಕರೆಯುತ್ತಾರೆ (ಶಸ್ತ್ರಚಿಕಿತ್ಸೆಗೂ 'ಶಲ್ಯ'ವೆಂದೇ ಹೆಸರು). ಸುಶ್ರುತ ಸಂಹಿತೆಯು ಶಲ್ಯವನ್ನು ತೆಗೆಯುವ ಹದಿನಾರು ವಿಧಾನಗಳನ್ನು ಹೇಳುತ್ತದೆ. ಅದರಲ್ಲಿ ಅಯಸ್ಕಾಂತವನ್ನು ತೋರಿ ತೆಗೆಯುವುದು ಒಂದು.[319] ಶಸ್ತ್ರಚಿಕಿತ್ಸೆಯಲ್ಲಿ ಅಯಸ್ಕಾಂತದ ಉಪಯೋಗವನ್ನು ಅಷ್ಟಾಂಗಹೃದಯ ಸಂಹಿತೆಯೂ ಹೇಳುತ್ತದೆ.[320]—"ಉಂಗುರವಿಲ್ಲದ, ಬಿಗಿಯಾದ, ನೇರವಾದ ಅಗಲವಾದ ಮುಖವುಳ್ಳ ಕಬ್ಬಿಣದ ಶಲ್ಯಗಳು ಚುಚ್ಚಿದರೆ ಅಯಸ್ಕಾಂತ (ಸೂಜಿಕಲ್ಲು) ವನ್ನು ಹಿಡಿದು ಹೊರಕ್ಕೆ ಬಂದಮೇಲೆ ಹಿಡಿದು ಎಳೆದುಬಿಡಬೇಕು." ತಲೆಗೆ ನಾಟಿದ ಅಂಬುಗಳನ್ನು ಇಬ್ಬರು ಬಲಶಾಲಿಗಳಾದ ವ್ಯಕ್ತಿಗಳು ಅತ್ತ ಇತ್ತ ನಿಂತು ಇಕ್ಕುಳಿನಿಂದ ಕೀಳುತ್ತಿದ್ದರು.[321] ಆ ನೋವನ್ನು ಬಹಳ ಸುಲಭವಾಗಿ ಸಹಿಸಿಕೊಳ್ಳುತ್ತಿದ್ದರೆಂದು ಪಂಪನ ಹೇಳಿಕೆ.[322] ಪ್ರಾಚೀನ ಕರ್ನಾಟಕದ ವೈದ್ಯಶಾಸ್ತ್ರದಲ್ಲಿ ಶಸ್ತ್ರಚಿಕಿತ್ಸೆಯೂ ಒಂದು ಪ್ರಧಾನವಾದ ಅಂಗವಾಗಿತ್ತೆಂಬುದು ಮೇಲಿನ ವಾಕ್ಯಗಳಿಂದ ದೃಢಪಡುತ್ತದೆ. ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿಯಲ್ಲಿ 'ಶಸ್ತ್ರಕರ್ಮಕಲಾದಕ್ಷ'ರಾದ ವೈದ್ಯರನ್ನೂ ಶಸ್ತ್ರಕ್ರಿಯೆಯನ್ನೂ ಹೆಸರಿಸಿದೆ.[323] ಮಂತ್ರವೈದ್ಯ ಮತ್ತು ಶಸ್ತ್ರವೈದ್ಯಗಳೆಂಬ ಎರಡು ರೀತಿಯ ಚಿಕಿತ್ಸಾವಿಧಾನಗಳನ್ನು ಬಸವಣ್ಣನು ಹೆಸರಿಸುತ್ತಾನೆ.[324]

## ಯುದ್ಧ ಪ್ರಭೇದಗಳು

ಕೆಳಗೆ ವಿವರಿಸಿರುವ ಯುದ್ಧ ಪ್ರಭೇದಗಳಲ್ಲಿ ಒಂದೊಂದೂ ಇನ್ನೊಂದರಿಂದ ಸಂಪೂರ್ಣ ಭಿನ್ನವೆಂದೂ, ಎಲ್ಲವನ್ನೂ ಗೆರೆ ಎಳೆದು ಬೇರ್ಪಡಿಸಬಹುದೆಂದೂ ಭಾವಿಸಬಾರದು. ಒಂದರ ಜೊತೆಯಲ್ಲೇ ಇನ್ನೊಂದೂ ಬೆರೆತಿರಬಹುದು. ಉದಾಹರಣೆಗೆ 'ತುರುಗೋಳ್' ಮತ್ತು 'ಊರಟಿವು'. ಆದರೆ ಇಲ್ಲಿ ಅವುಗಳನ್ನು ಬೇರೆ ಬೇರೆಯಾಗಿ ವಿವೇಚಿಸಲು ರನ್ನನ ಗದಾಯುದ್ಧದ ಪದ್ಯ (2.24)[325] ಕಾರಣ. ಇವೆಲ್ಲವೂ ಯುದ್ಧಗಳೇ, ಒಂದು ಸಮಾನವಾದ ಉದ್ದೇಶವುಳ್ಳವು, ಸಮಾನ ಪರಿಣಾಮವುಳ್ಳವು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

## 1. ತುರುಗೋಳ್ (= ಗೋಗ್ರಹಣ)

ಯುದ್ಧಪ್ರಭೇದಗಳಲ್ಲಿ ಅತಿ ಮುಖ್ಯವಾದುದು "ತುಱುಗೋಳ್". (ತುಱು+ಕೋಳ್. 'ಕೋಳ್' ಎಂಬುದು ತೆಗೆದುಕೊ ಎಂಬರ್ಥದ 'ಕೊಳ್' ಧಾತುವಿನ ಭಾವನಾಮ.) ಕಳ್ಳರು ಬಂದು

---

319 Julius Jolly : Indian Medicine (Tr. C. G. Kashikar), pp. 164-5.

320 ಅಷ್ಟಾಂಗ ಹೃದಯ ಸಂಹಿತಾ, 1ನೆಯ ಭಾಗ-ಸೂತ್ರಸ್ಥಾನ (ಕರ್ನಾಟಕ ಭಾಷಾನುವಾದ ಸಹಿತವಾದದ್ದು. ಸಂಪಾದಕ–ಎನ್. ಎಲ್. ಭಟ್ಟಾಚಾರ್ಯ), ಪು. 388.

321 ಹೀಗೆ ಇಕ್ಕುಳಿನಂತಹ ಆಯುಧದಿಂದ 'ಶಲ್ಯ' ವನ್ನು ಹೊರಕ್ಕೆಳೆಯುವುದನ್ನು ಆಯುರ್ವೇದದಲ್ಲಿ 'ವಿವರ್ತನ' ವೆಂದು ಕರೆಯುತ್ತಾರೆ (Chandra Chakrabarty : An Interpretation of Ancient Hindu Medicine, p. 499).

322 ಪಂಪಭಾರತ, XI. 3.—"ಉನ್ನತ ಮಸ್ತಕಸ್ಥಳದೊಳಂಬುಗಳಟ್ಟಿಡಿದಿರ್ದೊಡತ್ತಮಿ । ತ್ತನ್ನೆಱೆ ತಂದು ಬಲ್ಲಿಡಿಗರಿಕ್ಕುೞಿನೊಳ್ ಕಿೞೆ ನೊಂದೆನೆನ್ನದಃ । ಎನ್ನದಣಂ ಮೊಗಂ ಮುರಿಯದಳ್ಕದೆ ಬೇನೆಗಳೊಳ್ ಮೊಗಂಗಳಂ । ಬಿನ್ನಗೆ ಮಾಡದಿರ್ದರಳವಚ್ಚರಿಯಾಗೆ ಕೆಲರ್ ಮಹಾರಥರ್ ॥"

323 ಅಭಿಲಷಿತಾರ್ಥ ಚಿಂತಾಮಣಿ, ಪು. 51.

324 ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 653–"ಗುರೂಪದೇಶ ಮಂತ್ರವೈದ್ಯ, ಜಂಗಮೋಪದೇಶ ಶಸ್ತ್ರ ವೈದ್ಯ ನೋಡಾ. ಭವರೋಗವ ಗೆಲುವ ಪರಿಯ ನೋಡಾ..."

325 ತುಱುಗೋಳೊಳ್ ಪೆಣ್ಬುಯ್ಯಲೊ । ಳೆಱೆವೆಸದೊಳ್ ನಂಟನೆಡಱೊಳೂರಟಿವಿನೊಳಂ ।
ತಱಿಸಂದು ಗಂಡುತನಮನೆ । ನೆಱಿಪದವಂ ಗಂಡನಲ್ಲನೆಂತುಂ ಷಂಡಂ ॥

ದನಗಳನ್ನು (ಮುಖ್ಯವಾಗಿ ಹಸುಗಳನ್ನು, ಎಮ್ಮೆಗಳನ್ನು) ಕದಿಯುತ್ತಿದ್ದುದನ್ನು 'ತುಱುಗೋಳ್' ಎಂದೂ ದನಗಳನ್ನು ರಕ್ಷಿಸಲು ನಡೆದ ಯುದ್ಧವನ್ನೂ 'ತುಱುಗೋಳ್' ಎಂದೂ ಶಾಸನಗಳು ಕರೆದಿವೆ. ಭರತಖಂಡದಲ್ಲಿ ಹಸುಗಳನ್ನು ಒಂದು ಐಶ್ವರ್ಯವೆಂದೇ ಬಹಳ ಕಾಲದಿಂದ ಭಾವಿಸಿದ್ದಾರೆ ('ಗೋಧನ')[325.1] ಅವುಗಳನ್ನು ಕದಿಯುವುದು ಕಳ್ಳರಿಗೆ ಬಹು ಪ್ರಿಯವಾಗಿತ್ತು.[326] ಪ್ರಾಚೀನ ಕರ್ನಾಟಕದಲ್ಲಿ ಜನರಿಗಿಂತ ದನಗಳು ಹೆಚ್ಚು ಅರಕ್ಷಿತ ಸ್ಥಿತಿಯಲ್ಲಿದ್ದಂತೆ ಊಹಿಸಬಹುದು. ಕಳ್ಳರು ಬಂದು ಕಪ್ಪಾಗ, ಗೋಗಳನ್ನು ಕಾಯುತ್ತಿದ್ದ ಗೋವಳರು ಮತ್ತು ಇತರರು ಹುಯ್ಯಲನ್ನೆಬ್ಬಿಸುತ್ತಿದ್ದರು (ತುರು ಗೋಳಿಗೆ 'ಹುಯ್ಯಲು' ಎಂಬ ಹೆಸರೂ ಇದೆ.)[327] ಊರಿನ ಜನರು ಅವುಗಳನ್ನು ರಕ್ಷಿಸಲು ಮುಂದಾಗುತ್ತಿದ್ದರು. ಈ ಸಮಯದಲ್ಲಿ ಹೋರಾಡಿ ಸತ್ತವರ ಸ್ಮಾರಕಗಳು ನೂರಾರು ದೊರಕುತ್ತವೆ. 'ತುಱುಗೋಳ'ಲ್ಲಿ ಶೌರ್ಯವನ್ನು ಮೆರೆಯದವನನ್ನು ಹೇಡಿಯೆಂದೇ ಜನರು ಭಾವಿಸುತ್ತಿದ್ದರು. ಮೊದಲನೆಯದಾಗಿ, ಗೋವು ಪೂಜನೀಯವಾದುದು. ಎರಡನೆಯದಾಗಿ, ಅದು ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ ಅವುಗಳನ್ನು ಕಳೆದುಕೊಳ್ಳುವುದರಲ್ಲಿ ಊರಿನ, ವ್ಯಕ್ತಿಯ ಮಾನಾವಮಾನದ ಪ್ರಶ್ನೆಯೂ ಇದೆ.

ಕ್ರಿ. ಶ. 883ರಲ್ಲಿ 'ತೊಱುಗಳೊ'ಳಲ್ಲಿ ಎಱೆಯಮ್ಮ ಎಂಬುವನು ಕಾದಿ ಸತ್ತನು.[328] ಸು. 884ರಲ್ಲಿ ಬಿದಿಯಾಯ್ತ ಎನ್ನುವವನು 'ತುಱುವನಿಕ್ಕಿಸಿ' ಎಂದರೆ ದನಗಳನ್ನು ಸಂರಕ್ಷಿಸಿ ಸತ್ತನು.[329] ಸು. 900ರಲ್ಲಿ ನೆಲ್ಮಲ್ಲ ಎನ್ನುವವನೂ 'ತೊಱುವನಿಕ್ಕಿಸಿ ಸಗ್ಗಿ'ಯಾದನು.[330] ಸು. 950ರಲ್ಲಿ ಮನೆಮುದ್ದ ಮಲ್ಲಯ್ಯ ಎನ್ನುವವನು 'ಊರ ತುಱು ಹುಯ್ಲೊಳ್ ತುಱುವಂ ಕಾದು ಸತ್ತು' ಸ್ವರ್ಗಸ್ಥನಾದನು.[331] ಕ್ರಿ. ಶ. 1138 ರಲ್ಲಿ ಬೀಚಗಾವುಂಡನು ದನಗಳನ್ನು ಹಿಂತಿರುಗಿಸಿ, ಕಳ್ಳರನ್ನು ಕೊಂದು ಸತ್ತನು.[332] ಹೀಗೆಯೇ ನಿದರ್ಶನಗಳನ್ನು ಬೆಳೆಸಬಹುದು.

ತುರುಗಳನ್ನು ಕದಿಯಲು ಬರುತ್ತಿದ್ದವರು ವೇಗವಾಗಿ ತುರುಗಳನ್ನು ಓಡಿಸಿಕೊಂಡು ಹೋಗಲು ಕುದುರೆಗಳನ್ನೇರಿ ಬರುತ್ತಿದ್ದುದೂ ಉಂಟು. ಅಂತಹ ಸಮಯಗಳಲ್ಲಿ ತುರುಗಳನ್ನು ರಕ್ಷಿಸಿ ಕಳ್ಳರ ಕುದುರೆಗಳನ್ನು ಸೆರೆಹಿಡಿಯುತ್ತಿದ್ದರು.[333] ಒಮ್ಮೊಮ್ಮೆ ನಾಡಿನ ಅಧಿಕಾರಿಗಳೂ ತುರುಗೋಳಿನಂತಹ ಅಕೃತ್ಯಗಳಲ್ಲಿ ತೊಡಗಿದ್ದುದು ಕಂಡುಬರುತ್ತದೆ.[334] ಪೆರ್ಗ್ಗಡೆ ಮಾದಿರಾಜ ಎನ್ನುವವನು ಬೆನತೂರಿನ ತುರುವನ್ನು ಅಣ್ಣಿಗೆರೆಗೆ ಅಟ್ಟಿಕೊಂಡು ಹೋಗುವಾಗ ಅಲ್ಲಿನ ಮಹಾಜನರು ತಡೆಯುತ್ತಾರೆ. ಅವನು ಮಹಾಜನರನ್ನೇ ಬಡಿಯುತ್ತಾನೆ. ಈ ಅನ್ಯಾಯವನ್ನು ಪ್ರತಿಭಟಿಸಿ ಮಾದಿಮಯ್ಯ ಎನ್ನುವವನು ಹೋರಾಡಿ ಸಾಯುತ್ತಾನೆ.[335]

---

325.1 ಐಶ್ವರ್ಯ ಎಂಬರ್ಥದ ಸಂಸ್ಕೃತದ 'ಧನ' ಎಂಬ ಶಬ್ದವು ಕನ್ನಡದಲ್ಲಿ cattle ಎಂಬರ್ಥದಲ್ಲಿ 'ದನ' ಎಂದಾಗುವುದಕ್ಕೆ ಬಹುಶಃ ಇದೇ ಕಾರಣ.

326 ದನಗಳನ್ನು ಕದಿಯುವುದೇ ಮುಖ್ಯವೃತ್ತಿಯಾಗಿರುವ ಕಳ್ಳರ್ ಮತ್ತು ಮರವರ್ ಎಂಬ ಜಾತಿಯ ಜನರು ಈಗಲೂ ಇದ್ದಾರೆ. **(Hutton : Caste in India, p. 11)**

327 **EC. VII. Sk. 73, C. 1048 A.D. ; EC. IV. Kp. 1, C. 1150 A.D.**

328 **BKI. I. i. 19, 883 A.D.**

329 **EC. II. 394, C. 884 A.D.**

330 **EC. IX. Ht. 110, C. 900 A.D.**

331 **MAR (1927). p. 90, C. 950 A.D.**

332 **EC. IV. Hg. 50, 1138 A.D.**

333 **EC. VI. Cm. 122, 1140 A.D.**

334 **EC. IV. Hg. 79, 1107 A.D. ; EC. VIII. Sb. 414, 1139 A.D.**

335 **BKI. I. i. 81, 1049 A.D.**

ಈ ಅಧಿಕಾರಿಯ ಕೃತ್ಯಕ್ಕೆ ಕಾರಣವೇನೋ ತಿಳಿಯದು. ಒಮ್ಮೊಮ್ಮೆ ರಾಜರುಗಳೇ ಊರಿನ ದನಗಳನ್ನು ಹೊಡೆದುಕೊಂಡು ಬರುವಂತೆ ಆಜ್ಞಾಪಿಸುತ್ತಿದ್ದರು. ಇದಕ್ಕೆ ನಿದರ್ಶನಗಳಾದ ಎರಡು ಶಾಸನಗಳ ಸಾರಾಂಶವನ್ನು ಕೊಡುತ್ತೇನೆ. ಶ್ರೀಮನ್ಮಹಾಮಂಡಳೇಶ್ವರ ಜಗದೇಕರಸರು ಕೊರಕೋಡು ಎಂಬ ಊರಿನ ತುರುಗಳನ್ನು ಹೊಡೆದುಕೊಂಡು ಬರುವಂತೆ ಕಾಳರಸನಿಗೆ ಆಜ್ಞಾಪಿಸುತ್ತಾರೆ. ಕಾಳರಸನು ಸೇನೆಯೊಡನೆ ಬಂದು ತುರುಗಳನ್ನು ಹೊಡೆದುಕೊಂಡು ಹೋಗುವಾಗ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಇಬ್ಬರು ಸೋದರರು ಊರ ಹೆಬ್ಬಾಗಿಲಲ್ಲಿ ಸಿಂಹಗಳಂತೆ ನಿಂತು ಬಾಣಗಳ ಮಳೆಯನ್ನೇ ಸುರಿಸುತ್ತಾರೆ. ಬಾಣಗಳನ್ನು ಬಿಟ್ಟೂ ಬಿಟ್ಟೂ ಬಿಲ್ಲಿನ ಹಗ್ಗವೇ ಕಿತ್ತುಹೋಗುತ್ತದೆ. ಸೊಂಟಕ್ಕೆ ಕಟ್ಟಿದ ಅಲಗನ್ನೇ ತೆಗೆದುಕೊಂಡು ಶತ್ರುಗಳ ಮೇಲೆ ಬಿದ್ದು ಅನೇಕರನ್ನು ಕೊಂದು ಮಡಿಯುತ್ತಾರೆ. ಅವರ ಮೈತುಂಬ ಬಾಣಗಳೂ, ಕೊಂತಗಳೂ ನಾಟುತ್ತವೆ. ಅವರ ಹೆಣಗಳನ್ನು ತುಳಿದು ದನಗಳು ಮುಂದೆ ನುಗ್ಗಿದುವು. ಇದನ್ನು ನೋಡಿ ಸೈರಿಸದ ಅವರ ತಮ್ಮ ಬಪ್ಪಗಾವುಂಡನು ತನ್ನ ಅಣ್ಣಂದಿರು ಆದದ್ದನ್ನೇ ಆಗಲು ಬಯಸಿ, ಸೇನೆಯನ್ನು ಬೆನ್ನಟ್ಟುತ್ತಾನೆ. ಅಷ್ಟರಲ್ಲಿ ಎಕ್ಕಲರಸನ ಆಳು ಕುದುರೆಗಳು ಅವನ ಸಹಾಯಕ್ಕೆ ಬಂದದ್ದರಿಂದ, ಹಾಲ್ಗಟ್ಟದ ಬಯಲಿನಲ್ಲಿ 'ಒಡ್ಡಸೊಡ್ಡಿ' ಶತ್ರುಗಳನ್ನು ಕೊಂದು ದನಗಳನ್ನು ಹಿಂದಿರುಗಿಸಿ, ಅಣ್ಣಂದಿರಿಗೆ ಜಲದಾನಕ್ರಿಯೆಯನ್ನು ಮಾಡಿ ವೀರಗಲ್ಲನ್ನು ನಿಲ್ಲಿಸುತ್ತಾನೆ.[336] ಬೇರೆ ಬೇರೆ ನಾಡುಗಳಿಗಿದ್ದ ಜಿದ್ದು ಈ ಯುದ್ಧಕ್ಕೆ ಕಾರಣವಿರಬಹುದು. ಅಥವಾ ದನಗಳನ್ನು ಕದ್ದು ಶತ್ರುವಿಗೆ ಅವಮಾನ ಮಾಡುವ ಉದ್ದೇಶವೂ ಇರಬಹುದು.[337] ಒಮ್ಮೊಮ್ಮೆ ರಾಜ್ಯವನ್ನಾಳುವ ವ್ಯಕ್ತಿಯು ದುಷ್ಟರ ಮಾತನ್ನು ಕೇಳಿ ಒಂದು ಊರಿನ ದನಗಳನ್ನು ಹಿಡಿಸುತ್ತಿದ್ದುದುಂಟು. ಚೋಳಮಹಾದೇವಿ ಎಂಬಾಕೆ 'ದುಷ್ಟ ಕಷ್ಟ ಮಾತಂ ಕೇಳಿ', ಬೇವೂರನ್ನು ದಾಳಿಮಾಡಲು ಹೇಳಿದಾಗ, ಅವಳ ಸೇನೆಯು ಬೇವೂರನ್ನು ಮುತ್ತಿ ಜನರನ್ನು ಸೆರೆಹಿಡಿದು ತುರುಗಳನ್ನು ಕೊಂಡೊಯ್ಯುತ್ತಿರಲು ಕೇತಮಲ್ಲ ಎನ್ನುವವನು ಅದನ್ನು ಪ್ರತಿಭಟಿಸಿ ತುರುಗಳನ್ನು ಹಿಂದಿರುಗಿಸಿ ಮಡಿಯುತ್ತಾನೆ. ಆಗ ಚೋಳದೇವಿಗೆ ಬುದ್ಧಿಬಂದು 'ಎಮ್ಮ ಮಕ್ಕಳ ನಾವು ನೋಯಿಸಿದೆವು' ಎಂದು ಪಶ್ಚಾತ್ತಾಪಪಟ್ಟು ಜನರಿಗೆ ಅಭಯವನ್ನು ಕೊಟ್ಟು, ಸತ್ತ ವೀರನ ಮಗನಿಗೆ ದತ್ತಿಯನ್ನು ಬಿಡಿಸುತ್ತಾಳೆ.[338] ಇಂತಹ ಕೆಲವು ಕಡೆಗಳಲ್ಲಾದರೂ ಊರಿನ ಜನರು ತೆರಿಗೆಗಳನ್ನು ಕೊಡದೆ ತಪ್ಪಿಸಿಕೊಂಡುದೋ ಅಥವಾ ಇನ್ನಾವುದೋ ಅಕೃತ್ಯವೋ ಕಾರಣವಿರಬಹುದು.

ಇವಿಷ್ಟು ತುರುಗಳನ್ನು ಕಳೆದುಕೊಂಡವರ ದೃಷ್ಟಿಯಿಂದ ಬರೆದ ಶಾಸನಗಳು. ತುರುಗಳನ್ನು ಅಪಹರಿಸುವವರ ದೃಷ್ಟಿಯಿಂದ ಬರೆದ ಶಾಸನವೂ ಒಂದಿದೆ. ಒಡೆಯನ ಅಪ್ಪಣೆಯಂತೆ ತುರುಗಳನ್ನು ಅಪಹರಿಸಿ ಬಿಡಿಸಲು ಬಂದ ಭಟನನ್ನು ಕೊಂದು, ತುರುಗಳನ್ನು ಒಡೆಯನ ಬಳಿಗೆ ಕಳುಹಿಸಿದ ವೀರನ ವಿಷಯವು ಆ ಶಾಸನದಲ್ಲಿ ಬರುತ್ತದೆ.[339]

---

336 EC. VIII. Sb. 175, 1156 A.D.

337 ತುರುಗಳನ್ನು ಕದ್ದು ಶತ್ರುವಿಗೆ ಅವಮಾನಮಾಡುವ ಸಂಪ್ರದಾಯವು ಮಹಾಭಾರತದಷ್ಟು ಹಳೆಯದು. ದುರ್ಯೋಧನನು ವಿರಾಟನ ಗೋವುಗಳನ್ನು ಹಿಡಿಸಿದುದನ್ನು ಇಲ್ಲಿ ನೆನೆಯಬಹುದು.

338 EC. V. Cn. 205, C. 1200 A.D.— "ಚೋಳಮಹಾದೇವಿಯರು ತಮ್ಮ ಭಂಡಾರಿ ರಾಯಣ್ಣ ನಾಚಣ್ಣ ಹೆಗ್ಗಡೆಗಳಂ ಕರದು ಎಮ್ಮ ಮಕ್ಕಳ ನಾವು ನೋಯಿಸಿದೆವು. ನೀವು ಹೋಗಿ ಎಮ್ಮ ಶ್ರೀವಚನದಲ್ ಅಭಯಮಂ ಕೊಟ್ಟು ಕೆಂಬಾಳೂರ್ ಅಱುವತ್ತೊಕ್ಕಲು ಮುಂತಾಗಿ ಕೇತಮಲ್ಲನಾಯಕನ ಮಗ ನರಸಿಂಹನಾಯಕನಂ ಕರದು ಸಂತವಿಟ್ಟುಡೆ ಕೊಟ್ಟು ಕೊಡಗಿಯ ಬಿಡ ಹೇಳಿದಪ್ಪಯ್ಸಿಡೆ ಬಿಟ್ಟ ಗದ್ದೆ............"

339 EC. VIII. Sb. 525, 1152 A.D.

## 2. "ಪೆಣ್ಬುಯ್ಯಲ್"

ಕಳ್ಳರು ತುರುಗಳನ್ನು ಕದಿಯಲು ಬಂದಾಗ ಕದಿಯುವುದರ ಜೊತೆಗೆ ಆ ಊರಿನ ಸ್ತ್ರೀಯರನ್ನು ಅವಮಾನಗೊಳಿಸುತ್ತಿದ್ದರು. ಕೆಲವು ಸಾರಿ ತುರುಗಳ ಜೊತೆಯಲ್ಲಿ ಅವರನ್ನೂ ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು ಅಥವಾ ಹುಯ್ಯಲಿಡುತ್ತಿದ್ದರು, ಎಂದರೆ ಕೂಗಿಕೊಳ್ಳುತ್ತಿದ್ದರು (ಆದ್ದರಿಂದಲೇ ಅದನ್ನು 'ಪೆಣ್ಬುಯ್ಯಲ್' ಎಂದು ಕರೆದಿರುವುದು).[340] ಸ್ತ್ರೀಯರ ವಸ್ತ್ರಗಳನ್ನು ಅಪಹರಿಸುವುದರ ಮೂಲಕ ('ಪೆಣ್ಣುಡೆಯುರ್ಚಿ') ಅವರ ಮಾನಭಂಗ ಮಾಡುತ್ತಿದ್ದರು. ಸು. 1000ದಲ್ಲಿ ಜಕ್ಕ ಎಂಬಾತನು ಸ್ತ್ರೀಯರ ವಸ್ತ್ರಗಳನ್ನು ಅಪಹರಿಸುವ ಹುಯ್ಯಲನ್ನೂ, ತುರುಗಳು ಅಪಹೃತವಾದ ವಿಷಯವನ್ನೂ ಕೇಳಿ ಬಂದು ಹೋರಾಡಿ ಮಡಿದನು.[340.1] ಒಮ್ಮೊಮ್ಮೆ ಕೇವಲ ಸ್ತ್ರೀಯರನ್ನು ಅವಮಾನಗೊಳಿಸುವ ಉದ್ದೇಶದಿಂದಲೂ ದಾಳಿಕಾರರು ಬರುತ್ತಿದ್ದರು.[341] ಕ್ರಿ. ಶ. 1036ರ ಶಾಸನದಲ್ಲಿ ಸಿರಿಯಣ್ಣ ಎಂಬಾತನು ಜೆಂಗಾಳ್ವನೊಡನೆ ಹೋರಾಡಿ ತುರುಗಳನ್ನು ಹಿಂದಿರುಗಿಸಿ, ಸ್ತ್ರೀಯರನ್ನು ಹಿಂದಿಕ್ಕಿ ಹೋರಾಡಿ ಸತ್ತ ವಿಷಯ ಬಂದಿದೆ ('ತುಱುವ ಮಗುಟ್ಚಿ ಪೆಂಡಿರ ಪೆಱಗಿಕ್ಕಿ ಕಾದಿ ಸತ್ತಂ').[342] ತುರುಗಳ ಜೊತೆಯಲ್ಲಿ ಸ್ತ್ರೀಯರನ್ನೂ ಅಪಹರಿಸುತ್ತಿದ್ದರೆಂಬುದಕ್ಕೆ ಈ ಶಾಸನವು ನಿದರ್ಶನವಾಗಿದೆ.

## 3. "ಊರೞಿವು"[343]

ಕಳ್ಳರು ತುರುಗಳನ್ನು ಕದ್ದು, ಸ್ತ್ರೀಯರನ್ನು ಮಾನಭಂಗಗೊಳಿಸಿ, ಊರನ್ನು ನಾಶಪಡಿಸುತ್ತಿದ್ದರು.[344] ಇದೇ 'ಊರೞಿವು' ಅಥವಾ ಊರಿನ ನಾಶ. ಕಳ್ಳರು ಊರನ್ನು ನುಗ್ಗಿ, ಸಂಪತ್ತನ್ನು ಅಪಹರಿಸಿ, ಊರಿಗೆ ಬೆಂಕಿಯಿಡುತ್ತಿದ್ದರು. ("ಕಳ್ಳರ ಕೊಳ್ಳಿಯ ಬಾಧೆ").[345] ಅಥವಾ (ಪಕ್ಕದ ರಾಜ್ಯದ) ರಾಜನು ನುಗ್ಗಿ ಬಂದು ಊರನ್ನು ನಾಶಪಡಿಸುತ್ತಿದ್ದಿರಬಹುದು.[346] ಗಂಗರಾಜಕುಮಾರ ದುರ್ವಿನೀತನು ಗ್ರಾಮವೊಂದನ್ನು ಹೀಗೆ 'ಇೞಿ'ದಾಗ, ಆ ಗ್ರಾಮದ ಎಪ್ಪತ್ತು ಜನರು ಒಗ್ಗಟ್ಟಾಗಿ ಪ್ರತಿಭಟಿಸಿ ನಿಂತು ಊರನ್ನು ಕಾಪಾಡಿದರು.[347] ಕ್ರಿಸ್ತಶಕ 888ರಲ್ಲಿ ಬಟ್ಟಗೆಱೆಯನ್ನು (ಈಗಿನ ಬೆಟಗೇರಿ) ಸಾದೇವನೆಂಬಾತನು "ಮರ್ಯಾದೆಯಂ ತಪ್ಪಿ" ನಾಶಪಡಿಸಲು ಬಂದಾಗ, ಗಣರಮ್ಮ ಎಂಬ 'ದ್ವಿಜಜನ್ಮೋತ್ತಮ'ನು ಧೈರ್ಯದಿಂದ ಕಾದುತ್ತಾನೆ.[348] ಮಹಾಮಾಂಡಲಿಕ ಬೂತಾರ್ಯನು ರೋಣದ ಜನರನ್ನು 'ಭತ್ತಾಯ' (ಭತ್ಯ) ಎಂಬ ಸುಂಕವನ್ನು ಕೊಡಲು ಒತ್ತಾಯಿಸುತ್ತಾನೆ. ಅದು ಅಗ್ರಹಾರವಾದ್ದರಿಂದ ಜನರು ಪ್ರತಿಭಟಿಸುತ್ತಾರೆ.

---

340 ನೋಡಿ—"ಪೆಣ್ಬುಯ್ಯಲ್ ಹುಯ್ಯಲ್ಚಿದಳ್"—ಅನಂತನಾಥಪುರಾಣ, 11.45.

340.1 EC. XII. Si. 43, C. 1000 A.D.

341 EC. V. Bl. 360, C. 1120 A.D.; BKI. I. ii. 184, C. 1101 A.D.

342 MAR (1944). p. 58, 1036 A.D.

343 'ತುರುಗೋಳ್', 'ಪೆಣ್ಬುಯ್ಯಲ್' ಮತ್ತು 'ಊರೞಿವು'—ಈ ಮೂರು ರೀತಿಯ ಯುದ್ಧಗಳ ಹೆಸರುಗಳು ರನ್ನನ ಈ ಪದ್ಯದಲ್ಲಿ ಕಾಣಿಸಿಕೊಳ್ಳುತ್ತವೆ—"ತುಱುಗೋಳೊಳ್ ಪೆಣ್ಬುಯ್ಯಲೊ। ಳೆಱೆವೆಸದೊಳ್ ಸಂಕಟನೆಡೞೊಳೂರೞಿವಿನೊಳಂ। ತಱಿಸಂದು ಗಂಡುತನಮನೆ। ನೆಱಪದವಂ ಗಂಡನಲ್ಲನೆಂತುಂ ಷಂಡಂ॥ (ಗದಾಯುದ್ಧ, 2.24.)

344 EC. VIII. Sb. 175, 1156 A.D.

345 BKI. I. ii. 152, 1103 A.D.

346 BKI. I. i. 3, C. 750 A.D.

347 MAR (1930). p. 176, C. 800 A.D.

348 EI. XIII. p. 189, 888 A.D.

ಅವರಲ್ಲಿ ಪಂಪಯ್ಯ ಎಂಬುವನು ಒಂದು ಅಕ್ಷತೆಯನ್ನೂ ಕೊಡುವುದಿಲ್ಲವೆಂದು ನಿಶ್ಚಯಿಸಿ ಕಾದಿ ಮಡಿಯು ತ್ತಾನೆ.[349] ಹೀಗೆ ಊರಳಿವು ಎಂಬುದು ನಾನಾ ರೀತಿಯ ಜನರಿಂದ ನಾನಾ ರೀತಿಯ ಕಾರಣಗಳಿಗಾಗಿ ನಡೆಯುತ್ತಿತ್ತು.

## 4. ಗಡಿಯುದ್ಧ

ರಾಜ್ಯದ ಗಡಿಗಳು ಸುರಕ್ಷಿತವಾಗಿರಲು ರಾಜರು ಅಲ್ಲಲ್ಲಿ ಕೆಲವು ಸೇನಾ ಕೇಂದ್ರಗಳನ್ನು (Military check-posts) ಸ್ಥಾಪಿಸುತ್ತಿದ್ದರು. ಅಂತಹ ಕೇಂದ್ರಗಳಲ್ಲಿದ್ದು ಗಡಿಗಳನ್ನು ಕಾಯುತ್ತಲಿದ್ದವರನ್ನು 'ಅಂತಪಾಲ'ರೆಂದು[350] ಕರೆಯುತ್ತಾರೆ. ರಾಜನು ದೇಶದ ಗಡಿಗಳಲ್ಲಿ ಕೋಟೆಗಳನ್ನು ನಿರ್ಮಿಸಿ ಅಲ್ಲಿ 'ಅಂತ ಪಾಲ'ರನ್ನು ನೇಮಿಸಬೇಕೆಂದು ಕೌಟಿಲ್ಯನು ಹೇಳುತ್ತಾನೆ.[351] ಕನ್ನಡ ಶಾಸನಗಳಲ್ಲಿ ಬರುವ 'ಗಡಿಯಂಕ ಮಲ್ಲ'[352] ಎಂಬ ವಿಶೇಷಣದೊಡನೆ ಕಾಣಿಸಿಕೊಳ್ಳುವ ವ್ಯಕ್ತಿಗಳೇ ಬಹುಶಃ ಅರ್ಥಶಾಸ್ತ್ರದ 'ಅಂತಪಾಲ'ರು. ಮಹಾಸಾಮಂತ ಬಚ್ಚಯ್ಯನಾಯಕನನ್ನು 'ಗಡಿಗಳಂಕುಸ' ಎಂದು ಶಾಸನವೊಂದರಲ್ಲಿ ಕರೆದಿದೆ.[353] ಮಹಾ ಸಾಮಂತ ಉದಯಾದಿತ್ಯನು ಚಾಳುಕ್ಯ ಸಾಮ್ರಾಜ್ಯದ ದಕ್ಷಿಣ ದಿಕ್ಕಿನ ಗಡಿಯ ಸಂರಕ್ಷಕನಾಗಿದ್ದನು.[354] ಗಡಿಯ ಆಚೆ ಇರುವ ನೆರೆಹೊರೆಯ ರಾಜರುಗಳನ್ನು 'ಪ್ರತ್ಯಂತವಾಸಿ'ಗಳೆಂದು ಕರೆಯುತ್ತಿದ್ದರು. ಉದಾಹರಣೆಗೆ ಚಾಳುಕ್ಯ ಸಾಮ್ರಾಜ್ಯಕ್ಕೆ ಚೇರ, ಚೋಳ, ಪಾಂಡ್ಯ, ಪಲ್ಲವರು 'ಪ್ರತ್ಯಂತವಾಸಿ' ಗಳಾಗಿದ್ದರು.[355] ಬನವಾಸಿ ಮುಂತಾದ ನಾಡುಗಳನ್ನಾಳುತ್ತಿದ್ದ ಉದಯಾದಿತ್ಯನು ಅವರನ್ನು ಸೋಲಿಸಿ ಕಪ್ಪವನ್ನು ತೆಗೆದುಕೊಂಡು ನಾಲ್ಕು ಸಮುದ್ರಗಳವರೆಗೆ ಸಾಮ್ರಾಜ್ಯವನ್ನು ವಿಸ್ತರಿಸಿದನೆಂದು ಅದೇ ಶಾಸನವು ಹೇಳು ತ್ತದೆ.[356] ಹಾಗೆ ನೋಡಿದರೆ, ರಾಜರಿಗೂ ರಾಜರಿಗೂ ನಡೆವ ಯುದ್ಧಗಳೆಲ್ಲವೂ ಗಡಿ ಕಾಳಗಗಳೇ. ಅಂತಹ ಗಡಿಕಾಳಗದಲ್ಲಿ ಹೋರಾಡಿ ಮಡಿದ ಕುಡಿಮುದ್ದನ ಹೆಸರು ಶಾಸನವೊಂದರಲ್ಲಿದೆ.[357]

ಹಳ್ಳಿ ಹಳ್ಳಿಗಳ ಗಡಿಗಳ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಬಂದು ಆ ವಿವಾದವು ಗಡಿಕಾಳಗದಲ್ಲಿ ಮುಕ್ತಾಯವಾಗುತ್ತಿದ್ದ ನಿದರ್ಶನಗಳೂ ದೊರಕುತ್ತವೆ. ಒಂದೊಂದು ಹಳ್ಳಿಗೂ ಗಡಿಗಳನ್ನು ರಾಜ್ಯದ ಅಧಿ ಕಾರಿಗಳು ನಿರ್ಧರಿಸುತ್ತಿದ್ದರು. ಉದಾಹರಣೆಗೆ ಮುಸಿಯಗೆಜ಼ಿ ಎಂಬ ಊರಿನ ಗಡಿಗಳನ್ನು ('ಚತುಸ್ಸೀಮೆ')[358] ನಿಷ್ಕರ್ಷಿಸುವ ವಿಧಾನವನ್ನು ಗಮನಿಸಬಹುದು. ದೇಗಾವೆ ಎಂಬ ಅಗ್ರಹಾರದ ಗಡಿಗಳನ್ನು ನಿರೂಪಿಸುವ ಒಂದೇ ಒಂದು ಉದ್ದೇಶದಿಂದ ಹೊರಟಿರುವ ಶಾಸನವೊಂದಿದೆ. ಶಾಸನದ ಕೊನೆಯಲ್ಲಿ 'ಸೀಮಾ ಶಾಸನವು ಸಂಪೂರ್ಣ' ಎಂದು ಹೇಳಿದೆ.[359] ಆ ಕಾಲದಲ್ಲಿ ಒಂದೊಂದು ಗ್ರಾಮವು ಆಡಳಿತದ ದೃಷ್ಟಿಯಿಂದ ಸ್ವತಂತ್ರ ಘಟಕವಾಗಿದ್ದುದರಿಂದ ಆಯಾ ಊರಿನ ಗಡಿಗಳಿಗೆ ಸ್ವಲ್ಪಮಟ್ಟಿಗೆ ಆಯಾ ಊರಿನ ಜನಗಳೇ ಹೊಣೆಗಾರ

---

349 BKI. I. i. 36, 942 A.D.
350 EC. VII. Sk. 176, C. 450 A.D.
351 Arthaśāstra (Tr. Shamashastry), p. 45.
352 EC. IV. Hs. 10, C. 1020 A.D.
353 EC. XI. Cd. 47, 1067 A.D.
354 EC. XI. Cd. 34, 1123 A.D.
355 EC. VII. Sk. 130, 1075 A.D.; IA. IV. p. 208, 1075-76 A.D.
356 ಅದೇ.
357 EC. V. Cn. 208, C. 770 A.D.
358 EI. XV. p. 97, 1074 A.D.
359 JBBRAS. IX. p. 310.

ರಾಗಿರುತ್ತಿದ್ದರು. ಊರುಗಳ ಗಡಿಗಳ ವಿಷಯದಲ್ಲಿ ವಿವಾದವಾದರೆ ಸುತ್ತಮುತ್ತಣ ಐದು ಅಥವಾ ಹತ್ತು ಗ್ರಾಮಗಳ ('ಪಂಚಗ್ರಾಮೀ ದಶಗ್ರಾಮೀವ') ಹಿರಿಯರು ಸೇರಿ ಗಡಿಗಳ ನೈಸರ್ಗಿಕ ಅಥವಾ ಕೃತಕ ಗುರುತುಗಳ ಸಹಾಯದಿಂದ ವಿವಾದವನ್ನು ಪರಿಹರಿಸಬೇಕು ಎಂದು ಅರ್ಥಶಾಸ್ತ್ರವು ಹೇಳುತ್ತದೆ.[360] ಶಾಂತಿಯುತವಾದ ಸಂಧಾನಗಳು ವಿಫಲವಾದದ್ದರ ಪರಿಣಾಮವಾಗಿ ಹಳ್ಳಿ ಹಳ್ಳಿಗಳಿಗೆ ಹೋರಾಟವು ನಡೆದು ಅನೇಕರು ಮಡಿಯುತ್ತಿದ್ದರು. ಉದಾಹರಣೆಗೆ ಹೊಸವೂರು ಮತ್ತು ಜಂಬೂರುಗಳ ಮಧ್ಯೆ ಗಡಿಕಾಳಗ ನಡೆದಾಗ ಈಸವೂರಿನ ತಳವಾರನಾದ ಮಾಳ ಎಂಬುವನು ಆ ಊರಿನ ಜನರ ಅಪ್ಪಣೆಯನ್ನು ಬೇಡಿ ಹೋರಾಡಿ ಅನೇಕರನ್ನು ಕೊಂದು ಸುರಲೋಕಪ್ರಾಪ್ತನಾಗುತ್ತಾನೆ.[360.1] ಬಳ್ಳುಗುಪ್ಪೆಯ ದಾಳಿಗವುಡ ಎಂಬಾತನು ಎರಡು ಹಳ್ಳಿಗಳ ಜೊತೆಯಲ್ಲಿ ಕಾದಾಡಿ 'ತನ್ನ ಗಡಿಯ ಭೂಮಿ'ಯಲ್ಲಿ ಮಡಿಯುತ್ತಾನೆ.[361]

## 5. ಕೋಟೆಗಾಳಿಗ

ಭದ್ರವಾದ ಕೋಟೆಯಿಲ್ಲದ ರಾಜನು ಬಿರುಗಾಳಿಯ ಮುಂದಿನ ಮೋಡದ ತುಂಡುಗಳಿಗೆ ಸಮಾನನೆಂದು ಕಾಮಂದಕನು ಹೇಳುತ್ತಾನೆ.[362] ದುರ್ಗವು ರಾಜ್ಯದ ಸಪ್ತಾಂಗಗಳಲ್ಲಿ ಒಂದು.[363] ದುರ್ಗಗಳ ಪ್ರಾಮುಖ್ಯವನ್ನು ಬಹು ಹಿಂದೆಯೇ ಭಾರತೀಯರು ಕಂಡುಕೊಂಡಿದ್ದರು. ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸುಪ್ರಸಿದ್ಧ ಅತ್ಯಂತ ಪ್ರಾಚೀನ ಕೋಟೆಯೆಂದರೆ ಬಾದಾಮಿಯ ಕೋಟೆ. ಇದನ್ನು ಕ್ರಿ. ಶ. 543ರಲ್ಲಿ ಬಹುಶಃ ಮೊದಲನೆಯ ಪುಲಿಕೇಶಿಯು ಕಟ್ಟಿಸಿದನು.[364] ದುರ್ಗಗಳನ್ನು ರಚಿಸುವ ವಿಧಾನವನ್ನು ಕುರಿತು ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವಿಸ್ತಾರವಾಗಿ ಚರ್ಚಿಸಿದ್ದಾನೆ.[365]

ಪ್ರಾಚೀನ ಕಾಲದ ಕೋಟೆಗಳ ರಚನೆಯನ್ನರಿಯಲು ಶಾಸನಗಳಿಗಿಂತ ಹೆಚ್ಚಾಗಿ ಕಾವ್ಯಗಳಿಂದ ಅಮೂಲ್ಯವಾದ ಸಹಾಯವು ಒದಗುತ್ತದೆ. ಹರಿಹರನ ಗಿರಿಜಾಕಲ್ಯಾಣದಲ್ಲಿ ಕೋಟೆಯ ವರ್ಣನೆಯು ಈ ರೀತಿಯಿದೆ—

ಪಳಿಕಿನ ಕೋಂಟೆ ಬಟ್ಟದೆನೆ ಜೇವಿನ ದಂಡೆ ನಭಕ್ಕೆ ಮೀಱುವ  
ಟ್ಟಳೆ ನಿಮಿರ್ದೇಱಿ ಪಾಱುವ ಪತಾಕೆ ವಿರಾಜಿತ ಗೊಂಟು ಗೊಂಟಿನೊಳ್  
ಬಳಸಿದ ಕೊತ್ತಳಂ ಸೊಗಯಿಪಾಳ್ವೆರಿ ಡೆಂಕಣಿ ಸಾರಮಾರಿಯು  
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ॥[366]

ಹಳಗನ್ನಡದ ಕೋಂಟೆಯೇ ಹೊಸಗನ್ನಡದ ಕೋಟೆ. 'ಪಳಿಕಿನ' (=ಸ್ಫಟಿಕದ) ಕೋಟೆ ಎಂಬುದು ಕವಿಯ ಕಲ್ಪನೆ. ಬಟ್ಟ ಅಥವಾ ವೃತ್ತಾಕಾರವಾಗಿರುವ ತೆನೆ ಎಂಬುದು ಕೋಟೆಯ ಗೋಡೆಯ ಮೇಲೆ ಉದ್ದಕ್ಕೂ ಕಟ್ಟಿರುವ ತೆನೆಯಾಕಾರದ ರಚನೆಗಳನ್ನು ಸೂಚಿಸುತ್ತದೆ. ಗೋಡೆಯ ಮೇಲೆ ಇಂತಹ ಸಾವಿರಾರು

---

360 Arthaśāstra (Tr. Shamashastry), p. 191.

360.1 EC. VII. Sk 298, 1089 A.D.

361 EC. V. Bl. 206, 1136 A.D.

362 Kāmandakīya Nītisāra (Tr. M. N. Dutt), p. 40. "ದುರ್ಗಹೀನೋ ನರಪತಿಃ ವಾತಾಭ್ರಾವಯವೈಸ್ಸಮಃ"—ದುರ್ಗಸಿಂಹನು ಈ ವಾಕ್ಯವನ್ನು ತನ್ನ ಪಂಚತಂತ್ರದಲ್ಲಿ ಉದ್ಧರಿಸಿದ್ದಾನೆ. (ಪು 215)

363 ರಾಜ, ಅಮಾತ್ಯ, ರಾಜ್ಯ, ದುರ್ಗ, ಕೋಶ, ಸೈನ್ಯ, ಮಿತ್ರ—ಇವೇ ಸಪ್ತಾಂಗಗಳು.

364 EI. XXVII. p. 8. ಅಥವಾ KI. II. p. 5.

365 Arthaśāstra (Tr. Shamashastry), pp. 50-3.

366 ಗಿರಿಜಾಕಲ್ಯಾಣ, 2.79.

ತೆನೆಗಳನ್ನು ಉದ್ದಕ್ಕೂ ಅಕ್ಕಪಕ್ಕದಲ್ಲಿ ಕಟ್ಟಿರುತ್ತಾರೆ. ತೆನೆಗಳು ಕೋಟೆಗೆ ಅಂದವನ್ನು ತಂದುಕೊಡುವುದಲ್ಲದೆ ಎರಡು ತೆನೆಗಳ ಮಧ್ಯೆ ತಲೆಹಾಕಿ ಕೆಳಕ್ಕೆ ಇಣುಕಿನೋಡಿ, ಅವುಗಳ ಹಿಂದೆ ಕುಳಿತು ಅಂಬುಗಂಡಿಯಿಂದ ಬಾಣಗಳನ್ನು ಬಿಡಬಹುದಿತ್ತು. ಬೇವಿನ ದಂಡೆಗೂ ಬೇವಿನ ಸೊಪ್ಪಿನ ಮಾಲೆಗೂ ಯಾವ ಸಂಬಂಧವೂ ಇಲ್ಲ. ಅದು ಬೇಹಿನವರಿಗೆ ಅಥವಾ ಕಾವಲುಗಾರರಿಗೆ ಸಂಬಂಧಿಸಿದ ಸ್ಥಳವಿರಬೇಕು. ಅವರು ವಿಶ್ರಾಂತಿ ತೆಗೆದು ಕೊಳ್ಳುತ್ತಿದ್ದ ಸ್ಥಳವಿದ್ದರೂ ಇರಬಹುದು. ಅಟ್ಟಳೆ (ಸಂ. ಅಟ್ಟಾಲಕ)ಗಳು ಕೋಟೆಯ ಗೋಡೆಯ ಮೇಲೆ ಎತ್ತರಕ್ಕೆ ಕಟ್ಟಿದ ವೇದಿಕೆಗಳು. ಇವು ಒಂದು ರೀತಿಯಲ್ಲಿ ವೀಕ್ಷಣ ಕೇಂದ್ರಗಳಿದ್ದಂತೆ. ಅಟ್ಟಳೆಗಳ ಮೇಲೆ ಧ್ವಜಗಳು ಹಾರುತ್ತಿದ್ದುವು. ಗೊಂಟು ಎಂಬುದು ಬಹುಶಃ ಕೋಟೆಯ ಗೋಡೆಗಳು ಸಂಧಿಸುವ ಸ್ಥಳ. ಅಂತಹ ಸಂಧಿಸ್ಥಾನಗಳಲ್ಲಿ ಅಟ್ಟಳೆಗಳಿಗಿಂತ ಎತ್ತರವಾಗಿ ಕಟ್ಟಿದ ವೀಕ್ಷಣ ಕೇಂದ್ರಗಳೇ ಕೊತ್ತಳಗಳು. ಕೋಟೆಯ ನಾಲ್ಕು ಅಥವಾ ಎಂಟು ದಿಕ್ಕುಗಳಲ್ಲಿಯೂ ಒಂದೊಂದು ಕೊತ್ತಳವಿರುತ್ತಿತ್ತು. ಆಳ್ವೆರಿ ಅಥವಾ ಆಳ್ವೇರಿಯು (ಸಂ. ಪ್ರಾಕಾರ) ಕೋಟೆಯ ಗೋಡೆಯನ್ನು ಸೂಚಿಸುತ್ತದೆ. ಡೆಂಕಣಿ ಎಂಬುದು ಕನ್ನಡ ಕೋಶಕಾರರು ಹೇಳುವ ಧ್ವಜಸ್ತಂಭವಲ್ಲವೆಂದೂ, 'ಅದೊಂದು ಭವ್ಯವಾದ ಆಯುಧವಿಶೇಷ'ವೆಂದೂ ಶ್ರೀ ಬೆಟಗೇರಿ ಕೃಷ್ಣಶರ್ಮರು ಸಾಧಾರವಾಗಿ ಪ್ರತಿಪಾದಿಸಿದ್ದಾರೆ.[367] ಇವು ಮುಗಿಲೆಡೆ ಮುಖಮಾಡಿ ನಿಂತಿರುತ್ತಿದ್ದುವು. ಯುದ್ಧಸಮಯದಲ್ಲಿ ಇವುಗಳನ್ನು ನೆಲದ ಕಡೆ ಬಾಗಿಸುತ್ತಿದ್ದರು. ಇವುಗಳ ಸ್ವರೂಪವೇನೆಂಬುದು ಮಾತ್ರ ಗೊತ್ತಾಗುವುದಿಲ್ಲ (ಬೆಂಗಳೂರಿಂದ ತುಮಕೂರಿಗೆ ಹೋಗುವಾಗ 'ಡೆಂಕಣಿ ಕೋಟೆ' ಎಂಬ ಹೆಸರಿನ ಊರು ಇದೆ). ಸಾರ ಎನ್ನುವುದು ಕೋಟೆಯನ್ನು ಹತ್ತುವುದಕ್ಕೆ ಶತ್ರುಗಳು ಬಳಸಿಕೊಳ್ಳುತ್ತಿದ್ದ ಸಾಧನ (scaffolding). ಅದನ್ನು ನಾಶಪಡಿಸಲು ಬಳಸುತ್ತಿದ್ದ ಒಂದು ಸಾಧನ ವಿಶೇಷವೇ ಸಾರಮಾರಿಯಿರಬೇಕು.[368] ಗೋಪುರ ಎನ್ನುವುದರ ಅರ್ಥ ಸ್ಪಷ್ಟವೇ. ಪುಲಿಬೊಗ ಎಂಬುದು ಕೋಟೆಯ ಹೆಬ್ಬಾಗಿಲಿಗೆ ಹೆಸರು.[369] ಕೋಟೆಯ ಸುತ್ತಲೂ ಆಳವಾದ ಕಂದಕವಿರುತ್ತಿತ್ತು[370] ಇಷ್ಟು ಪ್ರಾಚೀನ ಕರ್ನಾಟಕದ ಕೋಟೆಯ ಒಂದು ಸ್ಥೂಲವಾದ ಚಿತ್ರ

ಕನ್ನಡ ಶಾಸನಗಳು ಮೂರು ರೀತಿಯ ದುರ್ಗಗಳನ್ನು ಹೇಳುತ್ತವೆ. ಗಿರಿದುರ್ಗ, ವನದುರ್ಗ, ಜಲದುರ್ಗ–ಇವೇ ಆ 'ದುರ್ಗತ್ರಯ.'[371] ಈ ಪಟ್ಟಿಗೆ 'ಸ್ಥಲದುರ್ಗ' ಎಂಬ ಹೆಸರನ್ನೂ ಸೇರಿಸಿ ನಾಲ್ಕು ದುರ್ಗಗಳ ಹೆಸರನ್ನು ದುರ್ಗಸಿಂಹನು ಹೇಳುತ್ತಾನೆ.[372] ಒಂದೊಂದು ದುರ್ಗವೂ ಮತ್ತೆ ಎರಡು ಪ್ರಕಾರವಾಗಿರುತ್ತದೆಯೆಂದು ಹೇಳಿ ಒಟ್ಟು ಎಂಟು ದುರ್ಗಗಳ ವಿವರಣೆಯನ್ನು ಕೊಡುತ್ತಾನೆ.[373]

---

367 ಕನ್ನಡಿಗರ ಕೋಟೆಗಾಳೆಗ ('ಕರ್ನಾಟಕ ಜನಜೀವನ' ಎಂಬ ಪುಸ್ತಕದಲ್ಲಿ), ಪು. 52, 53. ಈ ಪ್ರಬಂಧವು ಅನೇಕ ಅಮೂಲ್ಯ ವಿಷಯಗಳನ್ನೊಳಗೊಂಡಿದೆ.

368 ಅದೇ, ಪು. 55.

369 ಅದೇ, ಪು. 51.

370 ಪಂಪಭಾರತ, 1.58.

371 EC. II. 43, 1131 A.D.

372 ಪಂಚತಂತ್ರ, ಪು. 215.

373 ಅದೇ, ಪು. 215–16.

| | | |
|---|---|---|
| ಎರಡು ನದಿಗಳ ಸಂಗಮದ ಮಧ್ಯದ ದುರ್ಗ | ಅಂತರ್ದ್ವೀಪ | ಜಲದುರ್ಗ |
| ದೊಡ್ಡ ಕೆರೆಗಳಿಂದಲೂ ಒರಟು ಮುಳ್ಳುಗಳಿಂದ ತುಂಬಿದ ಸರೋವರಗಳಿಂದಲೂ ಸುತ್ತು ವರಿಯಲ್ಪಟ್ಟ ದುರ್ಗ | ಮಹಾಸ್ಥಳ | |
| ಬಹು ಎತ್ತರವಾದ ಬೆಟ್ಟದ ತುದಿಗಳು ನಾಲ್ಕು ಕಡೆಯಿದ್ದು ಒಂದೇ ಬಾಗಿಲುಳ್ಳದ್ದು | ಗುಹ್ಯ | ಗಿರಿದುರ್ಗ |
| ಎಲ್ಲಿಯೂ ಒಳ್ಳೆಯ ದಾರಿಯಿಲ್ಲದೆ ಬೆಟ್ಟಗಳ ನಡುವೆ ನೀರು ಬೀಳುವ ಸ್ಥಳದಲ್ಲಿ ಸಣ್ಣದಾರಿಯಿರುವುದು | ಪ್ರಸ್ತರ | |
| ಹೊರಗಡೆ ನೀರು, ಗಿಡ, ಮರ, ಹುಲ್ಲು ಬಳ್ಳಿಗಳಿಲ್ಲದೆ, ಒಳಗೆ ಮಾತ್ರ ಹುಲ್ಲು, ಕಡ್ಡಿ, ನೀರಿನಿಂದ ಸಮೃದ್ಧ ವಾಗಿರುವುದು. | ಉದಕಸ್ತಂಭ | ಸ್ಥಲದುರ್ಗ |
| ಹೊರಗೆ ಉಪ್ಪುನೀರು, ಕುಡಿಯಲುಬಾರದ ನೀರು ಅಥವಾ ಸ್ವಲ್ಪವೇ ನೀರು ಇರುವುದು. | ವೈರಿಣಿ | |
| ಸುತ್ತ ನೀರು ತುಂಬಿದ ಜಲಾಶಯವಿದ್ದು, ಹೆದರಿಸು ವಷ್ಟು ('ದುರ್ದರ') ಅತಿಶೀತಲ ಕೆಸರುಳ್ಳದು. | ಕರ್ದಮೋದಕ | ವನದುರ್ಗ |
| ಅನೇಕ ಮರಗಳಿಂದ ಪರಿವೃತವಾಗಿ, ಸುತ್ತಮುತ್ತ ಹುಲ್ಲು ಯಥೇಚ್ಛವಾಗಿ ಬೆಳೆದಿರುವುದು. | ಸ್ತಂಭಗಹನ | |

ಐಹೊಳೆಯ ಶಾಸನದಲ್ಲಿ ಬನವಾಸಿಯನ್ನು ಸ್ಥಲದುರ್ಗ[374]ವೆಂದು ಕರೆದಿದೆ. ದುರ್ಗಸಿಂಹನ ವನದುರ್ಗದ ವಿವರಣೆಯನ್ನು ನೋಡಿದರೆ ಬನವಾಸಿಯನ್ನು ಸ್ಥಲದುರ್ಗಕ್ಕಿಂತ ವನದುರ್ಗವೆಂದು ಕರೆಯುವುದು ಹೆಚ್ಚು ಉಚಿತ. ಅದರ ಕೋಟೆಯ ಸುತ್ತಮುತ್ತ ವನವು ಬೇಲಿಯಂತೆ ಹಬ್ಬಿರುವುದನ್ನು ಶಾಸನವೊಂದು ವರ್ಣಿಸುತ್ತದೆ.[375] ಉಚ್ಚಂಗಿಯು ಆ ಕಾಲದ ಅತ್ಯಂತ ಶ್ರೇಷ್ಠ ದುರ್ಗಗಳಲ್ಲೊಂದು. ಅದನ್ನು ಗಿರಿದುರ್ಗವೆಂದು ಶಾಸನಗಳು ಕರೆಯುತ್ತವೆ.[376] ಗಿರಿದುರ್ಗಕ್ಕೆ ಬಾದಾಮಿ ಕೋಟೆಯು ಇನ್ನೊಂದು ಅತ್ಯುತ್ತಮ ನಿದರ್ಶನ.

---

374 IA. VIII. p. 241, 634 A.D. ಪುಲಿಕೇಶಿಯ ಸೇನಾಸಮುದ್ರವು ಸುತ್ತುವರಿದುದರಿಂದ ಸ್ಥಲದುರ್ಗವಾದ ಬನವಾಸಿಯು ಜಲದುರ್ಗವಾಯಿತೆಂದು ಶಾಸನವು ವರ್ಣಿಸುತ್ತದೆ.

375 EC. III. Nj. 134, 1021 A.D. ಬನವಾಸಿಯನ್ನು ವರದಾನದಿಯು ಮೂರುಕಡೆಗಳಲ್ಲಿ ಸುತ್ತುವರಿದಿದೆ. ಸುತ್ತಮುತ್ತಲೂ ದಟ್ಟವಾದ ಅರಣ್ಯವಿದೆ.

376 SII. IX. i. 245,1146 A D.

'ಅಜೇಯ'ವಾದ ಆ ಕೋಟೆಯನ್ನು ಕ್ರಿ. ಶ. 543ರಲ್ಲಿ ಕಟ್ಟಲಾಯಿತು.[377] ಅಲ್ಲಿಯವರೆಗೆ ಆ ಬೆಟ್ಟದ ಸಾಲಿಗೆ 'ವಾತಾಪಿ' ಎಂಬ ಹೆಸರಿದ್ದು ಅಲ್ಲಿ ದುರ್ಗವನ್ನು ಕಟ್ಟಿದ ಮೇಲೆ ಅದಕ್ಕೆ ರಾಜಕೀಯ ಪ್ರಾಶಸ್ತ್ಯವು ಬಂದಿರಬೇಕೆಂದು ಶ್ರೀ ಆರ್. ಎಸ್. ಪಂಚಮುಖಿಯವರು ಅಭಿಪ್ರಾಯಪಡುತ್ತಾರೆ.[378] ಜಲದುರ್ಗಕ್ಕೆ ಕನ್ನಡ ಶಾಸನಗಳಲ್ಲಿ ನಿದರ್ಶನಗಳಿಲ್ಲ. ಈಗಿನ ಶ್ರೀರಂಗಪಟ್ಟಣ ಅದಕ್ಕೆ ಉತ್ತಮ ನಿದರ್ಶನ. ನೆಲದ ಮೇಲಿರುತ್ತಿದ್ದ ದುರ್ಗಗಳೆಲ್ಲವನ್ನೂ ಸ್ಥಲದುರ್ಗಗಳೆಂದು ಭಾವಿಸಬಹುದು. ಶಾಸನವೊಂದು 'ದೇವದುರ್ಗ'ದ ಹೆಸರನ್ನು ಹೇಳುತ್ತದೆ. ಮೂರು ಕಡೆ ಪರ್ವತಗಳಿದ್ದು ಒಂದು ಕಡೆ ಮಾತ್ರ ಬಯಲಿದ್ದರೆ ಅಂತಹ ಊರನ್ನು 'ಖರ್ವಡ'ವೆಂದು ಕರೆಯುತ್ತಾರೆಂದೂ (ಮಾನಸಾರವು ಹೆಚ್ಚು ಕಡಮೆ ಅದೇ ರೀತಿಯಲ್ಲಿ 'ಖರ್ವಟ'ವನ್ನು ವಿವರಿಸುತ್ತದೆ),[379] ಅದರಲ್ಲಿ ನೀರಿನ ಬುಗ್ಗೆ (ಕಿನ್ನೀರ್<ಕಿಱ್‌ನೀರ್=ಅಂತರ್ಜಲ) ಇದ್ದರೆ ಅದನ್ನು ದೇವದುರ್ಗವೆನ್ನುತ್ತಾರೆಂದೂ ಆ ಶಾಸನವು ಹೇಳುತ್ತದೆ.[380] ಶಿರಸಂಗಿಯ ದುರ್ಗವು ಇಂತಹ ದೇವದುರ್ಗ. ಶತ್ರುಗಳನ್ನು ಕಂಡಾಗ ಅವರ ಮೇಲೆ ತಂತ್ರಮಂತ್ರಾದಿಗಳ ಸಹಾಯದಿಂದ ಕಲ್ಲು ಮುಂತಾದುವನ್ನು ಎಸೆದು ಕೊಲ್ಲಲು ಅನುಕೂಲವಾಗಿರುವ ದುರ್ಗವೇ ದೇವದುರ್ಗವೆಂದು ಮಾನಸಾರವು ಹೇಳುತ್ತದೆ.[381]

ಕೋಟೆಗಾಳೆಗದಲ್ಲಿ ಉಪಯೋಗಿಸುತ್ತಿದ್ದ ಸಾಧನ ಸಾಮಗ್ರಿಗಳ ವಿವರಗಳು ಯಾವ ಶಾಸನದಲ್ಲಿಯೂ ದೊರಕದುದು ದುರದೃಷ್ಟಕರ. ಇಲ್ಲಿ ನಮಗೆ ಜನ್ನನ ಅನಂತನಾಥ ಪುರಾಣದಿಂದ ಅತ್ಯಮೂಲ್ಯ ಸಹಾಯವು ಒದಗುತ್ತದೆ.[382] ತನ್ನ ಸಮಕಾಲೀನ ಕೋಟೆಗಾಳೆಗವನ್ನು ವರ್ಣಿಸುವ ಅವನು ತನ್ನ ಕಾಲದಲ್ಲಿದ್ದ ಅನೇಕ ಪಾರಿಭಾಷಿಕ ಪದಗಳನ್ನು ಬಳಸುತ್ತಾನೆ. ಅವುಗಳಲ್ಲಿ ಬಹುಭಾಗ ನಮಗೆ ಅರ್ಥವಾಗುವುದಿಲ್ಲ. ಹೊರಗಿನಿಂದ ಕೋಟೆಗೆ 'ಲಗ್ಗೆ' ಹತ್ತುವ ಮೊದಲು ಕೋಟೆಯ ನೀರಕಂಡಿ, ಕುದುರೆಗಂಡಿ ಮುಂತಾದ ಪ್ರವೇಶಸ್ಥಾನಗಳನ್ನೂ, ದುರ್ಬಲಸ್ಥಾನಗಳನ್ನೂ ಪರೀಕ್ಷಿಸುತ್ತಿದ್ದರು. ಕೋಟೆಯ ಒಳಭಾಗದಲ್ಲಿ ಕೋಟೆಯನ್ನು ರಕ್ಷಿಸಲು ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಕೋಟೆಯ ಗೋಡೆಯ ಮೇಲ್ಭಾಗದ ಕೊತ್ತಳ, ಅಟ್ಟಣೆ ಮುಂತಾದುವನ್ನು ಪೂಜಿಸಿ ಅಲ್ಲಿ ಧ್ವಜಗಳನ್ನು ಎತ್ತಿ ನಿಲ್ಲಿಸುತ್ತಿದ್ದರು. ಕೋಟೆಯ ಗೋಡೆಯ ಮೇಲೆ ಬೇಹಿನವರು ಎಚ್ಚರದಿಂದ ಶತ್ರುಗಳ ಸುಳುಹನ್ನು ಕಾಯುತ್ತಿದ್ದರು. 'ಸಾರವಮಾರಿ' ಮುಂತಾದ ಆಯುಧಗಳನ್ನು ಸಿದ್ಧಪಡಿಸಿಕೊಂಡಿರುತ್ತಿದ್ದರು. ಶತ್ರುಗಳ ಮೇಲೆ ಮೇಲಿನಿಂದ ಸುರಿಯಲು ಹಾವುಗಳು, ಕಾಸಿದ ಮರಳು, ಹಿಟ್ಟಿನ ಸರಿ ಮುಂತಾದುವನ್ನು

---

377 "ಧರಾಧರೇಂದ್ರವಾತಾಪಿಮಜೇಯಂ ಭೂತಯೇ ಭುವಃ। ಅಧಸ್ತಾದ್ ಉಪರಿಷ್ಟಾಚ್ಚ ದುರ್ಗಮೇತದಚೀಕರತ್" (EI. XXVII. p. 8, 543 A.D.)

378 ಅದೇ.

379 P. K. Acharya : Architecture of Mānasāra, p. 96.

380 KI. I. 25, 1186 A.D. "ಪರ್ವಿರೆ ಮೂಱುಂದೆಸೆಯೊಳು ಪರ್ವತಕುಳವೊಂದೆ ದೆಸೆಯೆ ಬಯಲಾಗಿರೆ ತಾಂ ಖರ್ವಡವದಱೊಳು ಕಿಂನೀರುರ್ವರಲಂತದುವೆ ದೇವದುರ್ಗವೆನಿಕ್ಕುಂ." ಪರ್ವತಗಳಿಂದ ಪರಿವೃತವಾಗಿರುವುದು ಅಥವಾ ರಕ್ಷಿತವಾಗಿರುವುದೇ ಖರ್ವಡ ಎಂದು ಆದಿಪುರಾಣವು (8.63, ವ) ಹೇಳುತ್ತದೆ.— "ಉರ್ವೀಧರ ನಿರುದ್ಧಂಗಳಪ್ಪ ಖರ್ವಡಂಗಳುಮಂ". ಇಲ್ಲಿ ಖರ್ವಡದ ಜೊತೆಗೆ ಗ್ರಾಮ, ಪುರ, ಖೇಟ, ಮಡಂಬ, ಪಟ್ಟಣ, ದ್ರೋಣಾಮುಖಗಳೆಂಬ ಇತರ ಗ್ರಾಮಪ್ರಭೇದಗಳ ವಿವರಣೆಯು ದೊರಕುತ್ತದೆ.

ಮೈಸೂರು ದೇಶದಲ್ಲಿ 'ಕಬ್ಬಳ' ಎಂಬ ಹೆಸರಿನ ಅನೇಕ ಊರುಗಳಿವೆ. ಈ ಪದವು ಸಂ. ಖರ್ವಟ ಅಥವಾ ಖರ್ವಡದಿಂದ ಬಂದಿರಬಹುದು. ಈಗಿನ ಕಬ್ಬಳ ಎಂಬ ಹೆಸರಿನ ಎಲ್ಲ ಊರುಗಳಲ್ಲಿಯೂ 'ಖರ್ವಟ'ದ ಲಕ್ಷಣವನ್ನು ಕಾಣಲು ಸಾಧ್ಯವಿಲ್ಲದಿದ್ದರೂ ಕಬ್ಬಾಳದುರ್ಗ ಎಂಬ ಕೋಟೆಯ ಹೆಸರು ಇಲ್ಲಿ ಸ್ಮರಣೀಯವಾಗಿದೆ.

381 P. K. Acharya : Architecture of Mānasāra, p. 98.

382 ಅನಂತನಾಥಪುರಾಣ, 11. 82–85. ಬೆಟಗೇರಿ ಕೃಷ್ಣಶರ್ಮರ 'ಕನ್ನಡಿಗರ ಕೋಟೆಗಾಳೆಗ' ಎಂಬ ಪ್ರಬಂಧದಲ್ಲಿ ಹೆಚ್ಚು ವಿವರಗಳು ದೊರೆಯುತ್ತವೆ.

ಸರಿಪಡಿಸಿಕೊಳ್ಳುತ್ತಿದ್ದರು. ಕೋಟೆಯ ಹೊರಭಾಗದಲ್ಲಿ ಲಗ್ಗೆ ಹತ್ತುವವರು ಏಣಿ, ಸಾರ್ಚುಂಡೊಲೆ, ವೀರ ಸೇತು, ನಡೆಸಾರ, ಬದ್ದರ, ಗೆಗ್ಗೆ, ಡೆಂಕಣಿ ಗುಮ್ಮ, ಪಡಿಗೋಂಟೆ ಮುಂತಾದ 'ಬಹು ಕೋಟಾಯಂತ್ರ ಸಾಮಗ್ರಿ'ಗಳ ಸಮೇತ ಕೋಟೆಯನ್ನು ಮುತ್ತುತ್ತಿದ್ದರು. ಮೇಲಿನಿಂದ ಸುಡುವ ಎಣ್ಣೆ, ಕಾಸಿದ ಮರಳು ಮುಂತಾದುವನ್ನು ಸುರಿಯುತ್ತಿದ್ದರು. ಅದರ ಜೊತೆಗೆ ಬಾಣಗಳ, ಕಲ್ಲುಗಳ ಸುರಿಮಳೆಯಾಗುತ್ತಿತ್ತು. ಇಷ್ಟನ್ನೂ ಸೈರಿಸಿಕೊಂಡು ಮೇಲೇರಿದ ಭಟರಿಗೂ, ಮೇಲಿದ್ದ ಭಟರಿಗೂ ಶಸ್ತ್ರಾಶಸ್ತ್ರಿ, ಖಡ್ಗಾ ಖಡ್ಗಿ, ದಂಡಾ– ದಂಡಿ, ಕಚಾಕಚಿ (=ಕೇಶಾಕೇಶಿ. ಕಚ=ಕೇಶ) ಯುದ್ಧಗಳು ನಡೆಯುತ್ತಿದ್ದುವು.[383] ದುರ್ಗಗಳಿಗೆ ಮದ್ದಾನೆಗಳನ್ನು ನುಗ್ಗಿಸಿ ಬಾಗಿಲುಗಳನ್ನು ಭೇದಿಸುತ್ತಿದ್ದರು.[384]

ಜನ್ನನು ಅನಂತನಾಥಪುರಾಣವನ್ನು ಕ್ರಿ. ಶ. 1230ರಲ್ಲಿ ಬರೆದಂತೆ ಅವನ ಗ್ರಂಥದಿಂದಲೇ ತಿಳಿದು ಬರುತ್ತದೆ. ಅವನ ಗ್ರಂಥದಲ್ಲಿ ಬಂದಿರುವ ಕೋಟೆಗಾಳೆಗದ ವರ್ಣನೆಯು ಅವನಿಗಿಂತ ಹಿಂದೆ ನಡೆಯುತ್ತಿದ್ದ ಕೋಟೆಗಾಳೆಗಗಳಿಗೂ ತಕ್ಕಮಟ್ಟಿಗೆ ಅನ್ವಯಿಸುವುದೆಂದು ಭಾವಿಸುವುದರಲ್ಲಿ ತಪ್ಪಿಲ್ಲ.

ಕೋಟೆಗಾಳೆಗದಲ್ಲಿ ಮಡಿದ ವೀರರ ಹೆಸರುಗಳಲ್ಲಿ ಕೆಲವನ್ನು ನೋಡಬಹುದು. ಪೊಟಿಲ್‌ಚೋರ ನೆಂಬ ಮಹಾಸಾಮಂತನು ಕೋಟೆಯನ್ನು ಹಿಡಿದಾಗ ಶಿಂಗವೆಣ್ಣ ಮುಂತಾದವರು ಮಡಿದ ವಿಷಯವು ಶಾಸನವೊಂದರಲ್ಲಿದೆ.[385] ಕೋಟೆಗಾಳೆಗದಲ್ಲಿ ಮಡಿದ ಶೂರನೊಬ್ಬನ ವಿಷಯವು ಸು. 900ರ ಶಾಸನದಲ್ಲಿದೆ.[386] ಹೊಯ್ಸಳದೇವನ ಅಪ್ಪಣೆಯ ಪ್ರಕಾರ '........ಗಾವುಂಡ' ಎಂಬಾತನು ಯಾವುದೋ ಕೋಟೆಯನ್ನು ಸುಟ್ಟು ಅಲ್ಲಿ ಅನೇಕರನ್ನು ಸಂಹರಿಸಿ ತಾನೂ ಮಡಿದ ವಿಷಯವು 1124ರ ಶಾಸನದಲ್ಲಿದೆ.[387] ವಿಷ್ಣುವರ್ಧನನು ಹಾನುಗಲ್ಲು ಕೋಟೆಯನ್ನು ವಶಪಡಿಸಿಕೊಳ್ಳಲು ಮಾಡಿದ ಯುದ್ಧವು ಹಲವು ಶಾಸನಗಳಲ್ಲಿ ವರ್ಣಿತವಾಗಿದೆ. ಅಲ್ಲಿ ನಡೆದ ಕೋಟೆಗಾಳೆಗವು ಬಹು ಭಯಾನಕವಾಗಿದ್ದಿರಬೇಕು. ಆ ಯುದ್ಧದಲ್ಲಿ ರಕ್ಕಸಮೊನೆಯಾಳ್ವದೇವ ಎಂಬಾತನು ಆನೆ ಕುದುರೆಗಳ ಮಧ್ಯೆ ನುಗ್ಗಿ ಯುದ್ಧಮಾಡುತ್ತಾ, ಕೈಯಲ್ಲಿದ್ದ ಬಾಣಗಳು ತೀರಿಹೋಗಲು ದೇವಣ ಎಂಬುವವನನ್ನು ಕೇಳಿ ಅವನ ಬತ್ತಳಿಕೆಯನ್ನು ತೆಗೆದುಕೊಂಡು ಹೋರಾಡಿ ಮಡಿದ ವಿಷಯವು ಶಾಸನ ವೊಂದರಲ್ಲಿದೆ.[388] ಹಾನುಗಲ್ಲಿನಲ್ಲಿ ನಡೆದ ಕಾಳೆಗದ ವಿಷಯ ಇನ್ನೂ ಅನೇಕ ಶಾಸನಗಳಲ್ಲಿ ಬಂದಿದೆ.[389] ವಿಷ್ಣುವರ್ಧನನಿಗೆ ಇರುವ ವಿಶೇಷಣಗಳಲ್ಲಿ 'ಹಾನುಂಗಲುಗೊಂಡ' ಎಂಬುದೂ ಒಂದು.[390] ನೀಲಗಿರಿ ಶಿಖರದ ಮೇಲಿದ್ದ ಕೊಳ್ಳುಕಲ್ಲ ಕೋಟೆಯಲ್ಲಿ ನಡೆದ ಯುದ್ಧದ ನಿರೂಪಣೆ ಕ್ರಿ. ಶ. 1142ರ ಶಾಸನದಲ್ಲಿದೆ.[390.1]

---

383 ಅನಂತನಾಥಪುರಾಣ, 11. 82–85.

384 ಅದೇ, 12. 21. (ಅನಂತನಾಥಪುರಾಣದ ಕಾಲದಿಂದೀಚೆಗೆ ಕೋಟೆಗಾಳೆಗದ ವಿಷಯದಲ್ಲಿ ಕನ್ನಡಿಗರು ಅನೇಕ ಹೊಸ ಹೊಸ ಪ್ರಯೋಗಗಳನ್ನು ನಡೆಯಿಸಿ ಹೊಸ ಹೊಸ ವಿಧಾನಗಳನ್ನು ಕೈಗೊಂಡಂತೆ ಕಾಣುತ್ತದೆ. ಇದರ ವಿವರಗಳಿಗೆ ಶ್ರೀ ಬೆಟಗೇರಿ ಕೃಷ್ಣಶರ್ಮರ ಲೇಖನವನ್ನು ನೋಡಬಹುದು. ಅವರ ಪ್ರಯತ್ನವು ಸ್ತುತ್ಯವಾದುದಾದರೂ ಇನ್ನೂ ಪರಿಹಾರ ವಾಗದಿರುವ ಸಮಸ್ಯೆಗಳು ಹಲವು ಇವೆಯೆಂಬುದನ್ನು ಅವರೇ ಒಪ್ಪಿಕೊಂಡಿದ್ದಾರೆ).

385 EC. XII. Tp. 47, C. 880 A.D.

386 SII. IX. i. 14, C. 900 A.D.

387 EC. III. Nj. 193, 1124 A.D.

388 MAR (1932). p. 189, C. 1125 A.D.

389 ಅದೇ, ಪು. 193.

390 EC. II. 143, 1131 A.D.

390.1 EC. IV. Ch. 20, 1142 A.D.

## 6. ನೌಕಾಯುದ್ಧ

ಕರ್ನಾಟಕದ ರಾಜರಲ್ಲಿ ಚಾಳುಕ್ಯರು ನೌಕಾಸೇನೆಯನ್ನು ಕಟ್ಟಿದ್ದರು. ಮಂಗಲೇಶ, ಎರಡನೆಯ ಪುಲಿಕೇಶಿ, ಎರಡನೆಯ ಕೀರ್ತಿವರ್ಮರು ತಮ್ಮ ನೌಕೆಗಳ ಸಹಾಯದಿಂದ ಅನೇಕ ದ್ವೀಪಗಳನ್ನು ಗೆದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ.[391] ಕದಂಬವಂಶದ ರಾಜನೊಬ್ಬನು ಕವಡಿದ್ವೀಪ ಮುಂತಾದ ದ್ವೀಪಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಆಳುತ್ತ, ತನ್ನ ಅನೇಕ ನೌಕೆಗಳ ಮೇಲೆ ಸಮುದ್ರದಲ್ಲಿ ಹೊರಟು ಸೌರಾಷ್ಟ್ರದ ಸೋಮೇಶ್ವರನನ್ನು ದರ್ಶನ ಮಾಡಿಕೊಂಡು ಬಂದಂತೆ ಶಾಸನವೊಂದು ತಿಳಿಸುತ್ತದೆ.[392] ಗೋವಾದ ಕದಂಬರ ಒಂದನೆಯ ಜಯಕೇಶಿಯ ಕ್ರಿ. ಶ. 1054ರ ಶಾಸನ ಶಿಲೆಯ ಮೇಲೆ ನೌಕಾಯುದ್ಧದ ಚಿತ್ರಗಳನ್ನು ಕೆತ್ತಿದ್ದಾರೆ.[392.1] ಆದರೂ ಕನ್ನಡಿಗರು ನೌಕಾಯುದ್ಧದಲ್ಲಿ ಅಷ್ಟೇನೂ ಪರಿಣತರಾಗಿರಲಿಲ್ಲವೆಂದು ಹೇಳಬಹುದು. ಈ ಮಾತು ಭರತಖಂಡಕ್ಕೇ ಅನ್ವಯಿಸುತ್ತದೆ.

## ಕೆಲವು ದೊಡ್ಡ ಯುದ್ಧಗಳು

ದೊಡ್ಡ ದೊಡ್ಡ ರಾಜಮನೆತನಗಳಿಗೆ ನಡೆದ ಕೆಲವು ದೊಡ್ಡ ಯುದ್ಧಗಳನ್ನು ಇಲ್ಲಿ ಹೆಸರಿಸಬಹುದು. ಗಂಗರಿಗೂ ರಾಷ್ಟ್ರಕೂಟರಿಗೂ ತುಮಕೂರು ಜಿಲ್ಲೆಯ ತುಮಕೂರು ತಾಲೂಕಿನ ಹಿರೀಗುಂಡಲು ಗ್ರಾಮದ ಬಳಿ ಬಹು ದೊಡ್ಡ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಮಡಿದ ವೀರರ ವಿಷಯವನ್ನು ಹೇಳುವ ಹತ್ತೊಂಬತ್ತು ವೀರಗಲ್ಲುಗಳಿವೆ.[393] ಅದೇ ತುಮಕೂರು ಜಿಲ್ಲೆಯ ಮಿಡಿಗೇಶಿ ಹೋಬಳಿಯ ಶ್ರವಣಗುಡಿ ಗ್ರಾಮದ ಬಳಿ ಚೋಳರಿಗೂ ರಾಷ್ಟ್ರಕೂಟರಿಗೂ ನಡೆದ ಯುದ್ಧಕ್ಕೆ ಸಂಬಂಧಿಸಿದ ಹತ್ತು ವೀರಗಲ್ಲುಗಳಿವೆ.[394] ಅವು ಇರುವ ಬಯಲನ್ನು 'ಸುಡುಗಾಡು ಬೈಲು' ಎಂದು ಈಗ ಕರೆಯುವುದು ಗಮನಾರ್ಹವಾದುದು. ರಾಷ್ಟ್ರಕೂಟರು ಮತ್ತು ಗಂಗರು ಒಟ್ಟಿಗೆ ಸೇರಿ ಚೋಳರನ್ನು ಸೋಲಿಸಿದ ವಿಷಯವನ್ನು ಆತಕೂರು ಶಾಸನವು ಹೇಳುತ್ತದೆ.[395] ರಾಷ್ಟ್ರಕೂಟರಿಗೂ ಚಾಲುಕ್ಯರಿಗೂ ನಡೆದ ಯುದ್ಧದಲ್ಲಿ ಚಾಲುಕ್ಯರ ವಿಜಯವನ್ನು ಮತ್ತೊಂದು ಶಾಸನವು ಸಾರುತ್ತದೆ.[396] ಚಾಲುಕ್ಯ ಚಕ್ರವರ್ತಿಯ ದಂಡನಾಯಕ ತುಂಬ ಎನ್ನುವವನು ದಕ್ಷಿಣದಲ್ಲಿ ಘಟ್ಟವನ್ನು ದಾಟಿ ಚೋಳರನ್ನು ಸೋಲಿಸಿ ಜಯಗೊಂಡ ಚೋಳಪುರದಲ್ಲಿ ಜಯಸ್ತಂಭವನ್ನು ನಿಲ್ಲಿಸಿದನು.[397] ಇಂತಹ ಘೋರಯುದ್ಧಗಳಲ್ಲಿ ಆಗುತ್ತಿದ್ದ ನರಬಲಿ, ರಕ್ತಪಾತಗಳು ಬಹುವಾಗಿದ್ದಿರಬೇಕು.

---

[391] V. R. R. Dixitar: War in Ancient India, pp. 292-3. ಪುಲಿಕೇಶಿಯು (ಬಹುಶಃ ಎರಡನೆಯ ಪುಲಿಕೇಶಿ) ದ್ವೀಪಾಂತರಗಳಲ್ಲೂ ತನ್ನ ಪ್ರಭಾವವನ್ನು ಪ್ರಕಟಿಸಿದನೆಂದು ರನ್ನನು ಹೇಳುತ್ತಾನೆ (ಗದಾಯುದ್ಧ, 2.7, ವ).

[392] EI. XIII. p. 231, 1125 A.D.

[392.1] EI. XXXVII. p. 284.

[393] EC. XVI. Tm. 86-104, C. 750 A.D.

[394] EC. XII. Mi. 100, C. 750 A.D.

[395] EI. VI. p. 53.

[396] EC. VII. Sk. 125, 1019 A.D.

[397] MAR (1930). p. 235, 1080 A.D. ರಾಜರು ತಮ್ಮ ವಿಜಯದ ಸ್ಮಾರಕವಾಗಿ ಜಯಸ್ತಂಭಗಳನ್ನು ನಿಲ್ಲಿಸುತ್ತಿದ್ದರು. ಕದಂಬರನ್ನು ಗೆದ್ದು ಚಾಲುಕ್ಯರು ಬಾದಾಮಿಯಲ್ಲಿ ಜಯಸ್ತಂಭವೊಂದನ್ನು ನಿಲ್ಲಿಸಿರಬೇಕು. ಮುಂದೆ ಬಾದಾಮಿಯನ್ನು ಆಕ್ರಮಿಸಿಕೊಂಡ ಪಲ್ಲವರು ಆ ಜಯಸ್ತಂಭವನ್ನು ಹಿಡಿದರು ಎಂದು ಶಾಸನದಲ್ಲಿ ಬರುತ್ತದೆ. (BKI. I. i. Introduction, p. 1). ಅದನ್ನು ನಾಶಪಡಿಸಿರಲೂ ಸಾಧ್ಯ. 'ಜಯಸ್ತಂಭ'ವೆಂಬುದು ಕಂಭವೇ ಆಗಬೇಕಾಗಿಲ್ಲ. ಕಲ್ಲಿನ ಫಲಕದ ಮೇಲೆ ಜಯದ ವಿಷಯವನ್ನು ಬರೆಯಿಸಿದರೂ ಅದು 'ಜಯಸ್ತಂಭ'ವೆಂದೇ ಕರೆಯಿಸಿಕೊಳ್ಳುತ್ತದೆ. ಉದಾಹರಣೆಗೆ, ಟಿ. ನರಸೀಪುರ ತಾಲೂಕಿನ ಕಲಿಯೂರ ಶಾಸನ (Aprameya's Jayastambha inscription at Kaliyur. Ed. M. Hanumantha Rao. Śrīkaṇṭhikā, pp. 79-84).

## ಯುದ್ಧಾನಂತರ

ಯುದ್ಧವು ಮುಗಿದ ಮೇಲಿನ ರಣರಂಗದ ಚಿತ್ರವು ಶಾಸನಗಳಲ್ಲಿ ಬರುತ್ತದೆ. ಸೈನಿಕರ, ಆನೆಗಳ, ಕುದುರೆಗಳ ಹೆಣಗಳು ಅಲ್ಲಿ ಬಿದ್ದಿರುತ್ತಿದ್ದುವು.[398] ದೇಹದ ಕರುಳು ಮುಂತಾದ ಅಂಗಗಳು ಹೊರಸೂಸಿದ್ದರಿಂದ, ರಕ್ತವು ಸೋರಿದ್ದರಿಂದ ಅವುಗಳ ಆಸೆಗಾಗಿ ಕಾಗೆಗಳು ರಣರಂಗದಲ್ಲಿ ತುಂಬಿಕೊಳ್ಳುತ್ತಿದ್ದುವು[399] (ಬೇಗೂರಿನ ವೀರಗಲ್ಲನ್ನು ಕೆತ್ತಿದ ಶಿಲ್ಪಿಯು ಆನೆ, ಕುದುರೆ, ಸೈನಿಕರನ್ನು ಚಿತ್ರಿಸುವುದರ ಜೊತೆಯಲ್ಲಿ, ಮಾಂಸದ ಆಸೆಗಾಗಿ ರಣರಂಗಕ್ಕೆ ಬರುತ್ತಿದ್ದ ಕಾಗೆಗಳನ್ನು ಚಿತ್ರಿಸುವುದನ್ನು ಮರೆತಿಲ್ಲ.) ಯಮನು ತಿಂದು ಕಾರಿದಂತಿತ್ತು ರಣರಂಗ ಎಂದು ಒಂದು ಶಾಸನವು ವರ್ಣಿಸಿದರೆ,[400] ತೆಂಗಿನ ತೋಟಕ್ಕೆ ಸಿಡಿಲು ಹೊಡೆದಂತಿತ್ತು ಹಸಿಯ ತಲೆಗಳಿಂದ ತುಂಬಿಹೋಗಿದ್ದ ರಣರಂಗ ಎಂದು ಮತ್ತೊಂದು ಶಾಸನವು ಬಣ್ಣಿಸುತ್ತದೆ.[401] ಹೆಣಗಳನ್ನು ಹೂಳಿಸುತ್ತಿದ್ದರು ಅಥವಾ ಸುಡಿಸುತ್ತಿದ್ದರು ಅಥವಾ ಹತ್ತಿರದಲ್ಲಿ ನದಿಯಿದ್ದರೆ ಅದಕ್ಕೆ ಹಾಕಿಸುತ್ತಿದ್ದರು.[402]

ಯುದ್ಧದಲ್ಲಿ ಸೆರೆಸಿಕ್ಕವರನ್ನು ಕಾರಾಗೃಹದಲ್ಲಿ ಇಡುತ್ತಿದ್ದುದಲ್ಲದೆ[404] ಸರಪಳಿಗಳಿಂದಲೂ ಕಟ್ಟಿಸುತ್ತಿದ್ದರು.[404] ಕೆಲವು ಕಾಲವಾದ ಮೇಲೆ ರಾಜನಿಗೆ ಇಷ್ಟಬಂದರೆ ಬಂಧಿತರನ್ನು ಬಿಡುಗಡೆಮಾಡುತ್ತಿದ್ದನು.[405] ಕೆಲವರನ್ನು ತೊತ್ತುಗಳನ್ನಾಗಿ ನೇಮಿಸಿಕೊಳ್ಳುತ್ತಿದ್ದರೆಂಬುದಕ್ಕೂ ಸೂಚನೆಯಿದೆ.[406] ಸೋತ ಸೈನ್ಯದ ಆನೆ, ಕುದುರೆ, ಐಶ್ವರ್ಯಾದಿಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳುತ್ತಿದ್ದರು.[407]

ಯುದ್ಧ ಮುಗಿದ ಮೇಲೆ ಸತ್ತ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ಸ್ಥಾಪಿಸುತ್ತಿದ್ದರು. (ಇದರ ವಿವರಗಳು ಹಿಂದೆಯೇ ಬಂದಿವೆ). ಅವರ ಸಂಸಾರದ ನಿರ್ವಹಣೆಗಾಗಿ ರಾಜನೋ ಸಾಮಂತನೋ ಅಥವಾ ಅವರ ಊರಿನವರೋ ಸೇರಿ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಹೀಗೆ ಬಿಟ್ಟು ಕೊಟ್ಟ ದತ್ತಿಗಳನ್ನು 'ನೆತ್ತರುಗೊಡಗೆ', 'ಬೀರಗೂಳ್', 'ಬಾಳ್ಗಚ್ಚು', 'ಕಲ್ನಾಟ್ಟು' ಮುಂತಾದ ಹೆಸರುಗಳಿಂದ ಶಾಸನಗಳು ಕರೆಯುತ್ತವೆ. ಪದ್ಮ ಎಂಬುವನ ಮಗನು ತುರುಗೋಳಲ್ಲಿ ಸತ್ತಾಗ ಆ ಊರಿನ ಮಹಾಜನಗಳು ತಂದೆ ಪದ್ಮನಿಗೆ 'ನೆತ್ತರುಗೊಡಗೆ'ಯಾಗಿ ಹೊಲವನ್ನು ಕೊಟ್ಟ ವಿಷಯ ಶಾಸನವೊಂದರಲ್ಲಿದೆ.[408] ನಾಗೆನಾಯಕ ಎಂಬುವನು ಯುದ್ಧದಲ್ಲಿ ಸತ್ತುಬೀಳಲು ಅವನ ತಮ್ಮನಿಗೆ ಬಂಕೆಕೆಱೆಯ ಎಂಬಾತನು 'ನೆತ್ತರುಗೊಡಗೆ' ಯಾಗಿ ಭೂಮಿಯನ್ನು ಕೊಟ್ಟ ವಿಷಯವು ಮತ್ತೊಂದು ಶಾಸನದಲ್ಲಿದೆ. ಯುದ್ಧದಲ್ಲಿ ಸತ್ತ ವೀರರಿಗೆ 'ಬೀರಗೂಳ'ನ್ನು ಎತ್ತಿ ಕಲ್ಲನ್ನು ನಿರಿಸಿದಂತೆ ಶಾಸನವೊಂದರಲ್ಲಿದೆ.[410]

---

398 BKI. I. ii. 175, 1124 A.D.
399 EC. III. Tn. 44, 1007 A.D.
400 EC. VIII. Sb. 3, 1130 A.D,
401 EC. VIII. Sb. 132, 1151 A.D.
402 EC. V. Bl. 48, 1117 A.D.
403 MAR (1929). p. 131, 1081 A.D.
404 EC. IX. Nl. 61, 802 A.D.
405 ಅದೇ.
406 MAR (1929). p. 131, 1081 A.D.
407 EC. IV. Ng. 76, 1145 A.D.
408 EC. VII. Hl. 65, 1125 A.D.
409 EC. VII. Ci. 65, C. 1100 A.D.
410 EC. VIII. Sb. 525, 1152 A.D.

'ಬಾಳ್ಗಚ್ಚು' ಎಂಬ ದತ್ತಿಯು ವಿಶಿಷ್ಟವಾದುದು. ಇದನ್ನು ಯುದ್ಧದಲ್ಲಿ ಹೋರಾಡಿ ಗೆದ್ದು ಬಂದವರಿಗೆ ಪ್ರಶಸ್ತಿರೂಪವಾಗಿ ಕೊಡುತ್ತಿದ್ದರು. ಆ ಪದದ ರೂಪವನ್ನು ನೋಡಿದರೆ ಯುದ್ಧದಲ್ಲಿ ಹೋರಾಡಿದ ವೀರನ ಕತ್ತಿಯನ್ನು ತೊಳೆಯುವ ಸಮಾರಂಭವನ್ನು ಅದು ಸೂಚಿಸುತ್ತದೆ.[411] (ಬಾಳ್+ಕಚ್ಚು; ಕಚ್ಚು=ತೊಳೆ. ಇದನ್ನೇ 'ಖಡ್ಗಧಾರಾಂಭಸ್' ಎಂದು ಸಂಸ್ಕೃತಕ್ಕೆ ತಿರುಗಿಸಿದ್ದಾರೆ.)[412] ಹಲ್ಮಿಡಿ ಶಾಸನದಲ್ಲಿ 'ಬಾಳ್ಗಚ್ಚಿ'ನ ವಿಷಯವಿದೆ. ಕೇಕಯ ಪಲ್ಲವರೊಡನೆ ಕಾದಿ ಗೆದ್ದ ವಿಜ ಅರಸ ಎಂಬುವನಿಗೆ ಪಲ್ಮಿಡಿ ಮತ್ತು ಮೂಳಿವಳ್ಳಿಗಳನ್ನು 'ಬಾಳ್ಗಚ್ಚಾ'ಗಿ ಬಿಟ್ಟುಕೊಟ್ಟ ವಿಷಯವು ಅಲ್ಲಿ ಬಂದಿದೆ.[413] ಯುದ್ಧದಲ್ಲಿ ಸತ್ತ ವೀರನ ಮನೆಯವರಿಗೆ ಕೊಟ್ಟ ದಾನವನ್ನೂ 'ಬಾಳ್ಗಚ್ಚು' ಎಂದು ಕೆಲವೆಡೆ ಕರೆದಿದೆ.[414] ಇಲ್ಲಿಯೂ ಸತ್ತ ವೀರನ ಕತ್ತಿಯನ್ನು ಸಕಲ ಗೌರವಗಳೊಡನೆ ತೊಳೆದು ದಾನವನ್ನು ಮಾಡುತ್ತಿದ್ದರೆಂದು ಊಹಿಸಬಹುದು. ಯುದ್ಧದಲ್ಲಿ ಗೆದ್ದುಬಂದ ಅನೇಕ ವೀರರಿಗೆ ಬಿರುದುಗಳನ್ನು ಕೊಟ್ಟು ಸನ್ಮಾನಿಸುತ್ತಿದ್ದರು. ಉದಾಹರಣೆಗೆ, ಪಂಚಮಮಾರಾಯ ಎಂಬಾತನು ಹನಸೋಗೆಯ ಯುದ್ಧದಲ್ಲಿ ಅನೇಕರನ್ನು ಕೊಂದು ಹಾಕಿದ್ದಕ್ಕೆ ಚೋಳರಾಜನು ಬಹುವಾಗಿ ಮೆಚ್ಚಿ ಅವನಿಗೆ 'ಕ್ಷತ್ರಿಯ ಶಿಖಾಮಣಿ ಕೊಂಗಾಳ್ವ' ಎಂದು ಪಟ್ಟವನ್ನು ಕಟ್ಟಿ ಮಾಲಂಬಿ ಎಂಬ ಊರನ್ನು ದತ್ತಿಯಾಗಿ ಬಿಟ್ಟುಕೊಟ್ಟ ವಿಷಯವು ಶಾಸನವೊಂದರಲ್ಲಿದೆ.[415] ವೀರರಿಗೆ ಕೊಡುತ್ತಿದ್ದ ದತ್ತಿಗಳಲ್ಲಿ 'ನೆತ್ತರುಗೊಡಗೆ' (=ನೆತ್ತರು+ಕೊಡುಗೆ)ಯೂ ಒಂದು.[416] "ವಾಳ್ಗಚ್ಚು" ಎಂಬ ರೂಪವೂ ಉಂಟು (EC. XVI. p. 80; ಬಾಳ್ಗಚ್ಚು-p. 82; ಮಾಳ್ಗಚ್ಚು-p. 83).

ಸತ್ತ ವೀರನ ಮನೆಯವರಿಗೆ ಕೊಟ್ಟ ದತ್ತಿಯ ಮೇರೆಯನ್ನು ಸೂಚಿಸಲು ಕಲ್ಲುಗಳನ್ನು ನೆಡುತ್ತಿದ್ದರು. ಅದರಿಂದ ಆ ದತ್ತಿಯನ್ನೂ 'ಕಲ್ನಾಡು'[417], 'ಕಲ್ನಾಟು'[418], 'ಕಲ್ನಟ್ಟು'[419]—ಎಂದೇ ಕರೆಯುತ್ತಿದ್ದರು. ನಾಗತ್ತರ ಎಂಬುವನು ಮಡಿದಾಗ ಅವನ ಮಗನಿಗೆ ಹನ್ನೆರಡು ಹಳ್ಳಿಗಳನ್ನು ಎಱೆಯಪ್ಪರಸರು

---

411 ಭೀಮನು ದುರ್ಯೋಧನನನ್ನು ಕೊಂದಮೇಲೆ ಅವನ ತೋಳನ್ನು ಕೃಷ್ಣ ಮುಂತಾದವರು ತೀರ್ಥಜಲದಿಂದ ತೊಳೆದು ಪೂಜಿಸಿದರೆಂದೂ, ಭೀಮನೇ ತನ್ನ ಗದೆಯನ್ನು ಪೂಜಿಸಿ ನಮಸ್ಕರಿಸಿದನೆಂದೂ ರನ್ನಕವಿ ಬಣ್ಣಿಸುತ್ತಾನೆ. (ಗದಾಯುದ್ಧ, 8. 65-6). ಭೀಮನಿಗೆ ಅವನ ತೋಳೂ ಒಂದು ಆಯುಧವೇ. ರನ್ನನ ನಿರೂಪಣೆಯು ಸಮಕಾಲೀನವಾದ 'ಬಾಳ್ಗಚ್ಚು' ಪದ್ಧತಿಯನ್ನು ನೆನಪಿಗೆ ತರುತ್ತದೆ.

412 EC. II. 281, C. 983 A.D. ಆತಕೂರು ಶಾಸನದಲ್ಲಿ 'ಬಾಳ್ಗಚ್ಚು' ಎಂಬ ಅರ್ಥದಲ್ಲಿ 'ಬಾಳ್ಗೆ ಮೆಚ್ಚುಗೊಟ್ಟಂ' ಎಂಬ ಉಕ್ತಿ ಬಂದಿದೆ.— "ಬೂತುಗನುಂ ಮನಾಲರಂ ತನ್ನ ಮುಂದೆ ನಿಂದಿಱಿದುದರ್ಕೆ ಮೆಚ್ಚಿ ಆತುಕೂರ್ಪನ್ನೆರಡುಂ ಬೆಳ್ವೊಲದ ಕೋಟೆಯೂರುಮಂ ಬಾಳ್ಗೆ ಮೆಚ್ಚುಗೊಟ್ಟಂ" (EI. II. p. 171, C. 950 A.D.). ಬಾಳ್=ಕತ್ತಿ. ಆದರೆ, 'ಬಾಳ್ಗಚ್ಚು' ಎಂಬುದರ ಪೂರ್ವಾರ್ಧ ಜೀವನವೆಂಬ ಅರ್ಥವನ್ನು ಕೊಡುತ್ತದೆಂದು ಭಾವಿಸಿ, ಜೀವನೋಪಾಯಕ್ಕಾಗಿ ಬಿಟ್ಟುಕೊಟ್ಟ ದತ್ತಿ ಎಂದು ಕೆಲವರು ಅರ್ಥೈಸಿದ್ದಾರೆ. ಆದರೆ ಹಿಂದಿನ ಉಲ್ಲೇಖಗಳಲ್ಲೆಲ್ಲ—ಎಲ್ಲ ಕಡೆಗಳಲ್ಲಿಯೂ 'ಬಾಳ್' ಪದದಲ್ಲಿ ಳುಳವೇ ಇರುವುದರಿಂದ (ಬಾಳ್=ಕತ್ತಿ; ಬಾೞ್=ಜೀವನ), ಅವರ ವ್ಯಾಖ್ಯಾನ ಸಮರ್ಥನೀಯವಾಗುವುದಿಲ್ಲ. ಪೂಜ್ಯರಾದರೆ ಅವರ ಕಾಲು ತೊಳೆದು ದತ್ತಿ ಕೊಡುತ್ತಿದ್ದರು: ವೀರರಾದರೆ ಅವರ ಕತ್ತಿ ತೊಳೆದು ದತ್ತಿ ಕೊಡುತ್ತಿದ್ದರು. 'ಬಾಳ್ಗಚ್ಚು' ಎಂಬ ಹೆಸರಿನ ಒಂದು ಊರೇ ಇರುವುದನ್ನು ಎಲ್ಲೋ ಓದಿದ ನೆನಪಿದೆ.

413 MAR (1936). p. 73, C. 450 A.D.

414 MAR (1931). p. 144, C. 886 A.D. ಇಲ್ಲಿ 'ಬಾಳ್ಗಚ್ಚು' ಕೊಡುವವನು ಸತ್ತ ವೀರನಿಗೆ 'ಮಾವ'ನಾಗಬೇಕು.

415 EC. IX. Cg. 46, C. 1005 A.D.

416 EC. VII. HK. 65, 1125 A.D.

417 EI. I. p. 350, C. 850 A.D.

418 EC. V. Ag. 61, 920 A.D.

419 MAR (1932). P. 200, C. 950 A.D.

ಶಾಸನ ಸಮೇತ 'ಕಲ್ನಾಡಾ'ಗಿ ಕೊಟ್ಟ ವಿಷಯವು ಶಾಸನವೊಂದರಲ್ಲಿದೆ.[420] ತೇಜಮಾನಿ ಎಂಬುವನು ಮಡಿದಾಗ ಅವನ ವಂಶದವರಿಗೆ ಅರಸನು ತನ್ನ ಭೂಮಿಯಲ್ಲೇ ('ಅವರಾ ಮಣ್ಣಮೇಗೆ') 'ಕಲ್ನಾಡ'ನ್ನು ಕೊಟ್ಟ ವಿಷಯುವು ಇನ್ನೊಂದು ಶಾಸನದಲ್ಲಿದೆ.[420.1] ಮಡಿದ ವೀರನ ಹೆಂಡತಿ ಮಕ್ಕಳು 'ಕಲ್ನಾಡಿ'ನ ಸಹಾಯದಿಂದ ಬದುಕುವರೆಂದು ಶಾಸನವೊಂದರಲ್ಲಿ ಹೇಳಿದೆ.[421] ಕಲ್ನಾಡಾಗಿ ಕೊಟ್ಟ ಹೊಲದ ಮೇರೆಯನ್ನು ಮೊದಲು ಓಲೆಯಲ್ಲಿ ಬರೆದು ಆಮೇಲೆ ಕಲ್ಲಿನ ಮೇಲೆ ಬರೆಯಲಾಯಿತೆಂದು ಶಾಸನದ ಅಂತ್ಯದಲ್ಲಿ ಹೇಳಿದೆ. ಇಂತಹ ದತ್ತಿಯೊಂದನ್ನು ಹೇಳುವ ಶಾಸನದ ಆರಂಭದಲ್ಲಿ 'ಮೀನಂಗೆಱೆಯ ಕಲ್ನಟ್ಟ ಮಂಗಳ' ಎಂದಿದೆ.[422] ಎರಗಾವಿ ಎಂಬ ವೀರನ ಮಗ ಬೀಚನು ನೆಟ್ಟೂರು ಎಂಬ ಊರನ್ನು 'ಕಲ್ನಟು'ವಾಗಿ ಪಡೆದ ವಿಷಯವೂ ಒಂದು ಶಾಸನದಲ್ಲಿದೆ.[423]

'ಕಲ್ನಾಡು' ಎಂಬಲ್ಲಿ ನಾಡು ಎಂಬುದು ಪ್ರದೇಶವನ್ನೂ ಕಲ್ಲು ಎಂಬುದು ವೀರಗಲ್ಲನ್ನೂ ಸೂಚಿಸುವುದಿಲ್ಲವೆಂದು ಭಾವಿಸಬಹುದು. ಅದು ಗಡಿಯ ಕಲ್ಲುಗಳನ್ನೂ, ಗಡಿಕಲ್ಲುಗಳ ಒಳಗಿನ ಭೂಮಿಯನ್ನೂ, ದಾನವನ್ನೂ ಸೂಚಿಸುತ್ತದೆ. 'ನಾಡು' ಅಥವಾ 'ನಾಟ್ಟು' ಎಂಬುದು 'ನಡು' (=to errect, to plant) ಧಾತುವಿನ ಭಾವನಾಮ. ತಮಿಳಿನಲ್ಲಿ 'ನಾಟ್ಟು' ಎಂದರೂ, 'ನಡು' ಎಂದರೂ ಒಂದೇ ಅರ್ಥ.

ಪ್ರಾಚೀನ ಭಾರತದಲ್ಲಿ ಯುದ್ಧದ ಬಿಸಿಯು ಯುದ್ಧಕ್ಕೆ ನೇರವಾಗಿ ಸಂಬಂಧಿಸಿದವರಿಗೆ ಮಾತ್ರ ತಟ್ಟುತ್ತಿತ್ತು. "ಆಗಾಗ್ಗೆ ನಡೆಯುತ್ತಿದ್ದ ಯುದ್ಧಗಳಿಂದ ವಿಚಂಚಲವಾಗದೆ ಸಮಾಜವು ತನ್ನ ವ್ಯಾಪಾರ, ಕಲೆ ಮುಂತಾದುವನ್ನು ಬೆಳೆಸಿಕೊಂಡು ಹೋಗುತ್ತಿತ್ತು."[424] "ಉಳಿದ ದೇಶಗಳಲ್ಲಿ ಯುದ್ಧವಾದಾಗ ಶತ್ರುಗಳು ಹೊಲಗಳನ್ನು ನಾಶಪಡಿಸುವುದು ರೂಢಿ. ಇಲ್ಲಾದರೋ ಯುದ್ಧವು ನಡೆಯುತ್ತಿರುವಾಗ ರೈತರು ನಿರಾತಂಕವಾಗಿ ತಮ್ಮ ಕೆಲಸಗಳನ್ನು ತಾವು ಮಾಡಿಕೊಂಡು ಹೋಗುತ್ತಿರುತ್ತಾರೆ"—ಎಂದು ಮೆಗಾಸ್ತನೀಸನು ಹೇಳುತ್ತಾನೆ.[425] ಈ ಮಾತುಗಳನ್ನು ಪ್ರಾಚೀನ ಕರ್ನಾಟಕಕ್ಕೂ ಅನ್ವಯಿಸಬಹುದೆ? ದೇಶದ ಒಂದು ಮೂಲೆಯಲ್ಲಿ ಯುದ್ಧವಾಗುತ್ತಿದ್ದರೆ ಉಳಿದ ಕಡೆಗಳಲ್ಲಿ ಜನರು ದೇವಸ್ಥಾನ ನಿರ್ಮಾಣದಂತಹ ಶಾಂತಕಾರ್ಯಗಳಲ್ಲಿ ತೊಡಗುವುದನ್ನು ಕಾಣುತ್ತೇವೆ. ಈ ಅಭಿಪ್ರಾಯಗಳನ್ನು ಬಹಳ ದೂರ ಒಯ್ಯದಿರುವುದು ಒಳ್ಳೆತು. ಏಕೆಂದರೆ ಯುದ್ಧದಲ್ಲಿ ಮಡಿದ ವೀರರ ವಿಷಯವಾಗಿ ಎಷ್ಟೇ ಹೆಮ್ಮೆಯಿದ್ದರೂ ಅವರ ಬಂಧುವರ್ಗವು ಅಪಾರವಾದ ದುಃಖಕ್ಕೆ ಒಳಗಾಗುತ್ತಿದ್ದುದು ಸಹಜವೇ. ಅನೇಕ ಸಂಸಾರಗಳು ಅನಾಥವಾಗುತ್ತಿದ್ದುವು. ವೀರನ ತಾಯಿ ಅಕ್ಕ ಮುಂತಾದ ಸಮೀಪದ ವ್ಯಕ್ತಿಗಳು ದುಃಖವನ್ನು ತಾಳದೆ ಮಡಿಯುತ್ತಿದ್ದರು.[426] ಅನೇಕ ವಿಧವೆಯರು ಸಹಗಮನವನ್ನು ಮಾಡುತ್ತಿದ್ದರು (ಇದರ ವಿವರಗಳು ಮುಂದೆ ಬರುತ್ತವೆ). ಸೋತವರಲ್ಲಿ ಹಲವರು

[420] EI. I. p. 350, C. 850 A.D.

[420.1] SII. IX. i. 20, C. 850 A.D.

[421] EC. III. Nj. 139, C. 915 A.D. ತಮಿಳು ಸಂಗಂ ಸಾಹಿತ್ಯದಲ್ಲಿ ವೀರರಿಗೆ ನಟ್ಟ ಕಲ್ಲನ್ನು 'ನಡುಗಲ್' ಎಂದು ಕರೆಯುತ್ತಿದ್ದರು. (K. Kailasapathy : Tamil Heroic poetry, p. 235.)

[422] MAR (1932). p. 200, C. 950 A.D.

[423] EC. V. Cn. 262, 971 A.D.

[424] V.R.R. Dixitar : War in Ancient India, p. 39

[425] Pramathanatha Banerjea : Public Administration in South India, p. 230.

[426] EC. III. Sb. 46, 1018 A.D. ; EC. II. 139, C. 950 A.D.

ಯಾಚಕರಾಗುತ್ತಿದ್ದರು. ಅನೇಕರು ಬೆಟ್ಟಗುಡ್ಡಗಳನ್ನು ಸೇರುತ್ತಿದ್ದರು.[427] ಬಿರುಗಾಳಿಯಂತೆ ಬೀಸಿದ ಯುದ್ಧದ ಫಲವಾಗಿ ದೇಶದ ಹಲವು ಪ್ರದೇಶಗಳು ಉಳುವವರಿಲ್ಲದೆ ಹೋಗುತ್ತಿದ್ದುವು. ದೇಶದ ಬೆನ್ನೆಲುಬಾದ ವ್ಯವಸಾಯ ಕಾರ್ಯಕ್ಕೂ ಭಂಗಬರುತ್ತಿದ್ದ ಸೂಚನೆ ಶಾಸನಗಳಲ್ಲಿದೆ.[428] ಹೀಗೆ ದೊಡ್ಡ ಯುದ್ಧವಾದಾಗ ಸಮಾಜದ ಕಟ್ಟಡವು ಸ್ವಲ್ಪವಾದರೂ ಅಲುಗುತ್ತಿತ್ತು. ಆದರೂ ಒಟ್ಟಿನಲ್ಲಿ 'ರಾಮರಾಜ್ಯ ಬಂದರೂ ರಾಗಿ ಬೀಸುವುದು ತಪ್ಪಲಿಲ್ಲ' ಎಂಬ ಈಗಿನ ಗಾದೆಯು ಹಿಂದಿರುವ ಮನೋಭಾವವೇ ಆ ಕಾಲದಲ್ಲಿಯೂ ಇದ್ದಿರಬಹುದು. ರಾಜನು ತನ್ನ ಗೆದ್ದ ರಾಜ್ಯದ ಆಡಳಿತದ ವಿಷಯಗಳಲ್ಲಿ ಯಾವ ಗಮನಾರ್ಹವಾದ ಬದಲಾವಣೆಗಳನ್ನೂ ಮಾಡಕೂಡದೆಂದೂ, ಸೋತ ರಾಜನು ಮನ್ನಿಸಿದ್ದ ಎಲ್ಲ ಪದ್ಧತಿಗಳನ್ನೂ ಗೆದ್ದ ರಾಜನು ಮನ್ನಿಸಬೇಕೆಂದೂ ಮನುವು ಹೇಳುತ್ತಾನೆ.[429] ಹೀಗಾಗಿ ಆಳುತ್ತಿದ್ದ ರಾಜನು ಹೋಗಿ ಮತ್ತೊಬ್ಬ ರಾಜನು ಆಡಳಿತಕ್ಕೆ ಬಂದಾಗಲೂ ಜನಸಾಮಾನ್ಯರಿಗೂ ಅಂತಹ ವ್ಯತ್ಯಾಸವೇನೂ ಕಂಡುಬರುತ್ತಿರಲಿಲ್ಲ. ಆಧುನಿಕ ಯುಗದಲ್ಲಿ ಯುದ್ಧಕ್ಕೆ ಸಿಲುಕಿರುವ ಇಡೀ ದೇಶವು ಜಾಗೃತವಾಗುವಂತೆ, ಅದರ ಜೀವನವು ಕ್ಷೋಭೆಗೊಳ್ಳುವಂತೆ ಪ್ರಾಚೀನ ಕಾಲದಲ್ಲಿ ಕ್ಷೋಭೆಗೊಳ್ಳುತ್ತಿರಲಿಲ್ಲವೆಂದು ಮಾತ್ರ ಸ್ಥೂಲವಾಗಿ ಹೇಳಬಹುದು.

## ಮಲೆಪರು

ಆಧುನಿಕಕಾಲದ ಮಧ್ಯಭಾರತದ ಥಕಾಯಿತ ಜನಾಂಗವನ್ನು, ಅಥವಾ ಅಸ್ಸಾಮಿನ ನಾಗಾ ಜನರನ್ನು ಬಹುಮಟ್ಟಿಗೆ ಹೋಲುವ ಕೆಲವು ಜನಾಂಗಗಳು ಪ್ರಾಚೀನ ಕರ್ನಾಟಕದಲ್ಲಿದ್ದುವು. ಇವರೇ ಗುಡ್ಡ ಬೆಟ್ಟ ಕಾಡುಗಳಲ್ಲಿ ವಾಸಿಸುತ್ತಿದ್ದ ಬೇಡರು, ಮಲೆಪರು ಮತ್ತು ಕುಱುಂಬರು. ಇವರಲ್ಲಿ ಬೇಡರು ಬಹುಶಃ ಬೇಟೆಗಾರರು. ಕುಱುಂಬರು ಬಹುಶಃ ಬೆಟ್ಟಗುಡ್ಡಗಳಲ್ಲಿ ದುರ್ಗಗಳನ್ನು ಮಾಡಿಕೊಂಡು ಬದುಕುತ್ತಿದ್ದ ಹಿಂದುಳಿದ ಜನಾಂಗ.[430] ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ತೊಂದರೆಕೊಡುತ್ತಿದ್ದ ಜನಾಂಗಗಳಿವು.[431] ಕುಱುಂಬರು ಬೇಡರಂತೆ ಸುಸಂಘಟಿತರಾಗಿದ್ದಂತೆ ಕಾಣಿಸುವುದಿಲ್ಲ. ಬೇಡರ ಪಡೆಗಳು ಬಂದು ತುರುಗಳನ್ನು ಅಪಹರಿಸಿದ ನಿದರ್ಶನಗಳು ಶಾಸನಗಳಲ್ಲಿವೆ.[432] ದಾರಿಗಟ್ಟಿ ಲೂಟಿಮಾಡುತ್ತಿದ್ದ ಬೇಡರನ್ನು ನಯಸೇನನು ಹೆಸರಿಸುತ್ತಾನೆ.[433] ಬೇಡರು ಕಾಡಿನ ಅಂಚುಗಳಲ್ಲಿಯೂ, ಬಯಲುನಾಡಿನ ಊರುಗಳಲ್ಲಿಯೂ ವಾಸಿಸುತ್ತಿದ್ದುದುಂಟು. ಬೇಡರ ಪಡೆಗಳಂತೆ ಕುಱುಂಬರ ಪಡೆಗಳು ಇದ್ದಂತೆ ಶಾಸನಾಧಾರಗಳಿಲ್ಲ. ಆದರೆ ಇವರ ಉಲ್ಲೇಖ ಬೇರೆಡೆಗಳಲ್ಲಿ ಬರುತ್ತದೆ. ಉದಾಹರಣೆಗೆ ಜನರಿಗೆ ಉಪದ್ರವವನ್ನು ಕೊಡುತ್ತಿದ್ದ ಜನರ ಪಟ್ಟಿ ಸುಕುಮಾರಚರಿತದಲ್ಲಿದೆ.[434]

---

427 EC. VIII. Tl. 192, 1103 A.D.

428 EC. IV. Ch. 83, 1117 A.D. "ಕೆಟ್ಟ ನಿಯೋಗಿ ಬಿತ್ತು ಮೊದಲಿಲ್ಲದೆ ಬಂದ ಕ್ರಿಶಿವಲಂ ಮೊದಲ್ಗೆಟ್ಟ ಕಿರಾತನೋಲಗಿಸಲಾಱದೆ ಸೇವಕನಾಗೆ..."

429 Laws of Manu (Tr. Bühler) VII, pp. 201–3.

430 ತಮಿಳಿನಲ್ಲಿ 'ಕುಱುಂಬು' ಎಂದರೆ ಕೋಟೆ ಎಂದರ್ಥ. ಕನ್ನಡದಲ್ಲಿ 'ಕುಱುಂಬ' ಎಂದರೆ ಕೋಟೆಯಲ್ಲಿ ವಾಸಿಸುವವನು ಎಂದರ್ಥ (A Dravidian Etymological Dictionary, p. 127). ಕುಱುಂಬ ಎಂಬುದು ಬೆಟ್ಟ ಗುಡ್ಡಗಳಲ್ಲಿ ವಾಸಿಸುವ ಜನಾಂಗದ ವ್ಯಕ್ತಿ ಎಂದೂ ಅರ್ಥವಾಗುತ್ತದೆ. (A Kan-Eng. Dictionary, p. 448).

431 EC. VIII. Sb. 184, C. 1033 A.D.

432 EC. VI. Tk, 84, 1209 A.D. ; EC. IV. Ng. 23, 977 A.D.

433 ಧರ್ಮಾಮೃತ, 6. 132, ವ.—"ಬಟ್ಟೆಗಟ್ಟಿ ಬಡಿವ ಬೇಡರ್."

434 "ಮಲೆಪರ್ ಮಾಱಾಂಪರಿಲ್ಲ ಕ್ರಮದಿನದಟರಾಟಂದರಿಲ್ಲುರ್ಕಿ ಬೇಡರ್ಚಲದಿಂ ಮಾರ್ಕೊಂಡರಿಲ್ಲೊಟ್ಟಜೆವೆರಸು ಕುಱುಂಬರ್ ತಱುಂಬಿರ್ದರಿಲ್ಲೆತ್ತಲುಮುದ್ದಂ ಬಂದು ದಳ್ಳಿಂದುರಿವ ರಿಪುಗಳಿಲ್ಲ...."(ಸುಕುಮಾರ ಚರಿತ್ರೆ, 1.80).

ಇವರಿಬ್ಬರಿಗಿಂತ ಹೆಚ್ಚು ಸುಸಂಘಟಿತರಾಗಿ, ದೊಡ್ಡ ದೊಡ್ಡ ರಾಜರನ್ನೇ ಎದುರಿಸಿ ಆಗಾಗ್ಗೆ ನಾಡಿನ ಮೇಲೆ ದಾಳಿಯಿಟ್ಟು ಬರುತ್ತಿದ್ದವರು ಮಲೆಪರು (ಮಲೆ=ಬೆಟ್ಟ.–ಪ=ಒಡೆಯ. ನೋಡಿ : ಭೂಪ) ಇವರು ದುರ್ಗಮವಾದ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತ, ಒಂದು ರೀತಿಯಲ್ಲಿ ನಾಗರಿಕತೆಯಿಂದ ದೂರವಾಗಿ ಸ್ವಾತಂತ್ರ್ಯ ಪ್ರಿಯರಾಗಿ ಬಾಳುತ್ತಿದ್ದರು. ಪರ್ವತಯುದ್ಧಗಳಲ್ಲಿ ನಿಷ್ಣಾತರಾಗಿದ್ದ ಇವರನ್ನು ಹಲವು ರಾಜರು ಒಲಿಸಿಕೊಂಡು ಯುದ್ಧಗಳಲ್ಲಿ ಇವರ ಸಹಾಯವನ್ನು ಪಡೆಯುತ್ತಿದ್ದರು.[435] ಮಹೇಂದ್ರ ಎಂಬುವನು (ಬಹುಶಃ ಪಲ್ಲವರ ಮೊದಲನೆಯ ಮಹೇಂದ್ರವರ್ಮನು) ಶಿಲಾದಿತ್ಯನೊಡನೆ[436] ಹೋರಾಡುವಾಗ ಬೇಡರನ್ನೂ ಮಲೆಪರನ್ನೂ ತನ್ನ ಸಹಾಯಕ್ಕೆ ತೆಗೆದುಕೊಂಡನೆಂದು ಶಾಸನವೊಂದು ಹೇಳುತ್ತದೆ.[437] ಮಲೆಪರ ಸುಂಕದ ಕಟ್ಟೆಗಳು ('ಡಂಗ' < ದ್ರಂಗ=ಸುಂಕದ ಕಟ್ಟೆ)[438] ರಾಜ್ಯದ ಅಂಚಿನಲ್ಲಿರುವುದು ಅಪಾಯಕಾರಿಯೆಂದೂ, ಪಾಂಡವರ ಸ್ನೇಹವನ್ನು ಪಡೆದರೆ ಮಲೆಪರ ಹಾವಳಿಯಿಂದ ತಪ್ಪಿಸಿಕೊಳ್ಳಬಹುದೆಂದೂ ಪಂಪನ ಶ್ರೀ ಕೃಷ್ಣನು ಕೌರವನಿಗೆ ಹೇಳುತ್ತಾನೆ.[439] ಆ ಕಾಲದ ರಾಜರಿಗೆ ಮಲೆಪರು ಸಿಂಹಸ್ವಪ್ನಸಮಾನರಾಗಿರದಿದ್ದರೂ ತಲೆನೋವಂತೂ ಆಗಿದ್ದರು. ಸಾಮಾನ್ಯ ಜನರಿಗಂತೂ ಈ ಮಲೆಪರೂ ಬೇಡರೂ ಕುಱುಂಬರೂ ದುಃಸ್ವಪ್ನವಾಗಿ ಪರಿಣಮಿಸಿದ್ದರು.

ಮಲೆಪರಿಗೆ ಅಶ್ವಬಲವಾಗಲಿ, ಪದಾತಿ ಬಲವಾಗಲಿ, ಭುಜಬಲವಾಗಲಿ ಇಲ್ಲವೆಂದು ಶಾಸನವೊಂದು ಅಪಹಾಸ್ಯಮಾಡುತ್ತದೆ.[440] ಇದು ತಪ್ಪು ಅಭಿಪ್ರಾಯ. ದುದ್ದರಸ ಎಂಬ ಮಲೆಪರ ರಾಜನ ವರ್ಣನೆಯು ಹೀಗಿದೆ. — ಶ್ರೀಮನ್ಮಹಾಮಂಡಲೇಶ್ವರನಾಗಿದ್ದ ಅವನು ಮಲೆಪರ ನಂದನವನವಾಗಿದ್ದನು. 'ಪರಮಂಡಳ ಸೂಱೆಕಾಱ'ನಾಗಿದ್ದನು. ಮಹಾಶೂರನಾಗಿದ್ದ ಅವನು ಮಲೆಯನ್ನು ಕಾಪಾಡಿ, ಶತ್ರುಗಳನ್ನು ಓಡಿಸಿ, ಶತ್ರುಗಳ ಕೋಟೆಗಳನ್ನು ನಾಶಪಡಿಸಿ 'ಸಂಹಥನಾಡು' ಮತ್ತು 'ಪಾಡುವಾಡಿ'ಗಳನ್ನು ಆಳುತ್ತಿದ್ದನು. ಅವನ ಬಳಿ ಹದಿನೈದು ಕುದುರೆಗಳಿದ್ದುವು, ಅಯ್ವತ್ತು ಲೆಂಕರಿದ್ದರು, ಇನ್ನೂರೈವತ್ತು ಎಕ್ಕಟಿಕರಿದ್ದರು, ನಲವತ್ತೈದು 'ಕುಳಪುಟ್ಟಗೆಗಾಯದಾಳು'ಗಳಿದ್ದರು. ಇವನು ತನ್ನ ರಾಜ್ಯವನ್ನಾಳುತ್ತಾ, ಕೆರೆ, ದೇವಾಲಯ, ಚತ್ರಗಳನ್ನು ಕಟ್ಟಿಸಿ ಸುರಲೋಕಪ್ರಾಪ್ತನಾದನು.[440.1] ಇದರಿಂದ ಮಲೆಪರ ಸೇನೆ ಚಿಕ್ಕದು ಎಂಬುದು ಮಾತ್ರ ಸಿದ್ಧಾಂತ ವಾಗುತ್ತದೆ. (ಅವರ ಸೇನೆಯಲ್ಲಿ ಬೆಟ್ಟಗುಡ್ಡಗಳಲ್ಲಿ ನಿರುಪಯುಕ್ತವೆನಿಸುವ ಆನೆಗಳಿಲ್ಲದಿರುವುದು ಗಮನಾರ್ಹ. ರಥಗಳಂತೂ ಯಾರ ಬಳಿಯೂ ಇರಲಿಲ್ಲ). ಇವರು ಆಗಾಗ್ಗೆ ತಮ್ಮ ಬೆಟ್ಟಗುಡ್ಡಗಳಿಂದ ಹೊರಬಂದು, ಹುಲಿಗಳಂತೆ ಬಯಲುನಾಡಿನ ಮೇಲೆ ಬಿದ್ದು ದನಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದರು.[441] ಇವರನ್ನು ಸೋಲಿಸಿ ಅಧೀನರನ್ನಾಗಿ ಮಾಡಿಕೊಂಡ ವಿಷಯವನ್ನು ಹೇಳಿಕೊಳ್ಳುವುದರಲ್ಲಿ ರಾಜರಿಗೆ ಹೆಮ್ಮೆಯಿತ್ತು.

---

435 ಅರ್ಥಶಾಸ್ತ್ರವು ಹೇಳುವ 'ಆಟವಿ ಬಲ' ಇದೇ. ಇವರು ಲೂಟಿ ಹೊಡೆಯಲು ಯಾವಾಗಲೂ ಕಾತರರಾಗಿರುತ್ತಾರೆಂದು ಕೌಟಿಲ್ಯನು ಹೇಳುತ್ತಾನೆ. (ಪು. 370–73).

436 ಇವನು ಶ್ರೀಹರ್ಷನಿರಬೇಕೆಂದು ಸಂಪಾದಕರ ಊಹೆ.

437 MAR (1923). p. 83, C. 700 A.D.

438 ಶಬ್ದವಿಹಾರ, ಪು. 71-76.

439 ಪಂಪಭಾರತ, 9.39.

440 EC. VII. Sk. 136, 1068 A.D.

440.1 EC. I. No. 57, 1095 A.D. ; EC. IX. Cg. 57, 1095 A.D.

441 EC. VII. Sk. 149, 1110 A.D.

(ಅವರು ಮಹಾಶಕ್ತರಾಗಿದ್ದರೆನ್ನುವುದು ಇದರಿಂದ ವ್ಯಕ್ತವಾಗುತ್ತದೆ). ಹೊಯ್ಸಳರಾಜ ವಿನಯಾದಿತ್ಯನು ಮಲೆಪರನ್ನು ಸೋಲಿಸಿದ ವಿಷಯವನ್ನು ಅನೇಕ ಶಾಸನಗಳು ಹೊಗಳುತ್ತವೆ.[442] ಹೊಯ್ಸಳ ದೊರೆಗಳಲ್ಲಿ ಹಲವರಿಗೆ 'ಮಲೆಪರೊಳ್ಗಂಡ' ಎಂಬ ಬಿರುದಿತ್ತು.[443] ಕದಂಬ ದೊರೆಗಳಲ್ಲಿ ಕೆಲವರಿಗೆ 'ಮಲೆಪರ ಮಾರಿ' ಎಂಬ ಬಿರುದಿತ್ತು.[444] ಮಲೆಪರನ್ನು ಚಾಳುಕ್ಯ ದೊರೆಗಳೂ ಸೋಲಿಸಿ ಅಧೀನರನ್ನಾಗಿ ಮಾಡಿಕೊಂಡಿದ್ದರು.[445]

[ಅನುಬಂಧ: ಶಿವಮೊಗ್ಗ ಜಿಲ್ಲೆಯ ಉತ್ತರದ ಶಿಕಾರಿಪುರ, ಸೊರಬ ತಾಲೂಕುಗಳಲ್ಲಿರುವ "ಮಲವರು" ಎಂಬ ವೀರಶೈವ ಧರ್ಮಾನುಯಾಯಿಗಳು ಮೂಲತಃ "ಮಲೆಪ"ರಾಗಿದ್ದರೆಂಬುದಕ್ಕೆ 'ಮಲವ' ಎಂಬ ರೂಪವೇ ಆಧಾರವಾಗಿದೆ. (ವಿಶೇಷವಾಗಿ ಅಂತ್ಯ "ವ" ಕಾರವನ್ನು ಗಮನಿಸಿ). ಇವರನ್ನು 'ಮಲೆಯ ಗೌಡರು' ಎಂದೂ ಕರೆಯುವುದುಂಟು. ಇವರಲ್ಲಿ ನೀರ ಮಲವರು, ಮುಸುಕಿನ ಮಲವರು ಎಂಬ ಒಳಭೇದಗಳಿರುವುದೆಂದು ತಿಳಿಯುತ್ತದೆ. ಶ್ರೀಮಂತರೂ ಉದಾರಿಗಳೂ ಆಗಿರುವ ಇವರಲ್ಲಿ ಹಲವರು ಹಿಂದಿನ ದರ್ಪ, ಅಧಿಕಾರಗಳನ್ನು ಅನಧಿಕೃತವಾಗಿ ಉಳಿಸಿಕೊಂಡಿರುವುದು ಇವರೇ ಹಿಂದಿನ ಮಲೆಪರ ಉತ್ತರಾಧಿಕಾರಿಗಳೆಂಬುದನ್ನು ಸಮರ್ಥಿಸುತ್ತದೆ. ಈ ಬಗ್ಗೆ ನಾನು ಪ್ರತ್ಯಕ್ಷ ಪರಿಶೀಲನೆ ನಡೆಸುವವರೆಗೆ ಇದಕ್ಕಿಂತ ಹೆಚ್ಚು ಹೇಳುವುದು ಸದ್ಯದಲ್ಲಿ ಸಾಧ್ಯವಿಲ್ಲ.]

---

442 EC. II. 132, 1123 A.D.

443 'ಮಲೆಪರೊಳ್‌ಗಂಡ' ಎಂಬುದನ್ನು 'champion among the hill kings' ಎಂದು ಅನುವಾದಿಸುತ್ತಾರೆ ಡೆರೆಟ್ ಅವರು (Duncan Derrett : The Hoysaḷas, p. 15). ಹೊಯ್ಸಳರು ಮೂಲತಃ ಮಲೆಪರಾಗಿದ್ದು, ನಂತರ ಬಯಲಿಗೆ ಬಂದು ರಾಜ್ಯವನ್ನು ಕಟ್ಟಿದರು ಎಂದು ಅವರ ಸಿದ್ಧಾಂತ (ಪು. 14). ಇದರ ಪರಿಶೀಲನೆ ಸದ್ಯಕ್ಕೆ ಅನಗತ್ಯ. 'ಮಲೆಪರೊಳ್ಗಂಡ' ಎಂಬ ಬಿರುದು ಅವರು ಮಲೆಪರನ್ನು ಸೋಲಿಸಿದುದನ್ನು ಸೂಚಿಸುತ್ತದೆ. ಎಲ್ಲಿಯೂ ಅವರು ತಮ್ಮನ್ನು 'ಮಲೆಪ'ರೆಂದು ಕರೆದುಕೊಂಡಿಲ್ಲ. ಅಷ್ಟೇ ಅಲ್ಲ, ಅವರಲ್ಲಿ ಬಹುಜನ 'ಮಲೆಪ'ರನ್ನು ಸೋಲಿಸಿದವರೇ. ವಿಷ್ಣುವರ್ಧನನು 'ಚೇರಮನ ಮಲೆ'ಯನ್ನು ಸೋಲಿಸಿದ ವಿಷಯ ಶಾಸನಗಳಲ್ಲಿದೆ.

(EC. V. Bl. 147, 1121 A.D.)

444 D. Derrett : The Hoysaḷas, p. 17.

445 EC. XI. Dg. 168, C. 1145 A.D.

# XI

# ಆತ್ಮಬಲಿಯ ಹಲವು ಪ್ರಕಾರಗಳು

ಜಿತೇನ ಲಭ್ಯತೇ ಲಕ್ಷ್ಮೀರ್ಮೃತೇನಾಪಿಸುರಾಂಗನಾ
ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ ॥[1]

ಪ್ರಾಚೀನ ಕನ್ನಡಿಗ ಯೋಧರ ಮನಸ್ಸಿನಲ್ಲಿ ತುಂಬಿಕೊಂಡಿದ್ದ ಭಾವನೆ ಇದು—ಯುದ್ಧದಲ್ಲಿ ಗೆದ್ದರೆ ಲಕ್ಷ್ಮಿ ದೊರಕುವಳು, ಸತ್ತರೆ (ಸ್ವರ್ಗದಲ್ಲಿ) ಸುರಾಂಗನೆಯರು ದೊರಕುವರು ; ದೇಹವು ಕ್ಷಣದಲ್ಲಿ ವಿಧ್ವಂಸವಾಗುವ ವಸ್ತುವಾದ್ದರಿಂದ ರಣರಂಗದಲ್ಲಿ ಮಡಿಯುವ ವಿಷಯದಲ್ಲಿ ಚಿಂತೆ ಏಕೆ ? ಈ ಭಾವನೆಗಳಿಂದ ಉತ್ತೇಜನಗೊಂಡ ಅವರು ಧೈರ್ಯದಿಂದ ರಣರಂಗದಲ್ಲಿ ಮುನ್ನುಗ್ಗಿ, ದೇಹವನ್ನು ಹುಲ್ಲಿಗಿಂತ ಕಡೆಯಾಗಿ ಎಣಿಸಿ ಹೋರಾಡಿ, ಗೆದ್ದು ಹಿಂದಕ್ಕೆ ಬರುತ್ತಿದ್ದರು ಅಥವಾ ಸೋತು ಯುದ್ಧರಂಗದಲ್ಲಿ ಒರಗುತ್ತಿದ್ದರು. ಇದು ಅವರ ಧೈರ್ಯವನ್ನೂ, ದೇಶಕ್ಕಾಗಿ, ಒಡೆಯನಿಗಾಗಿ ಅವರು ತೋರಿಸಿದ ಮಹಾತ್ಯಾಗವನ್ನೂ ತೋರಿಸುತ್ತದೆ. ಯುದ್ಧಗಳಲ್ಲಿ ಅವರು ಪ್ರಾಣವನ್ನು ತ್ಯಜಿಸಿದ್ದು ಶತ್ರುಗಳ ಕೈಯಿಂದ. ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿಗಳು ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುವ ಕೆಲವು ಪದ್ಧತಿಗಳಿದ್ದುವು. ಇವುಗಳನ್ನು ನಾವು 'ಆತ್ಮಬಲಿ' (Self-immolation) ಎಂದು ಕರೆದಿದ್ದೇವೆ. (ಕೆಲವೆಡೆ Self-immolation ಎಂಬ ಅರ್ಥದಲ್ಲಿ 'ದೇಹತ್ಯಾಗ' ಎಂಬ ಪದವನ್ನೂ ಬಳಸಿದ್ದೇವೆ). ಇಲ್ಲಿಯೂ ಅವರ ಉತ್ಕಟವಾದ ಮೋಕ್ಷಾಪೇಕ್ಷೆಯನ್ನೂ, ಅಸೀಮವಾದ ಧೈರ್ಯ, ನಿಷ್ಠೆ, ಸ್ವಾಮಿಭಕ್ತಿಗಳನ್ನೂ ಕಾಣಬಹುದು. ಈ ಆತ್ಮಬಲಿಗಳಲ್ಲಿ ಕೆಲವು ಪೂರ್ಣವಾಗಿ ಧಾರ್ಮಿಕವಾದುವು. ಇನ್ನು ಕೆಲವು ಇನ್ನೂ ಉದಾತ್ತವಾದ ಪತಿಪ್ರೇಮವನ್ನೂ ಸ್ವಾಮಿಭಕ್ತಿಯನ್ನೂ ಎತ್ತಿ ತೋರಿಸತಕ್ಕವು. ಆಧುನಿಕ ಯುಗದ ನಮಗೆ ಈ ಪದ್ಧತಿಗಳು ಬಹು ವಿಚಿತ್ರವಾಗಿಯೂ, ಅನಾಗರಿಕವಾಗಿಯೂ ತೋರಬಹುದು. ಮನುಷ್ಯರಿಗೆ ಪ್ರಾಣದ ಮೇಲಿನ ಮೋಹ ಎಷ್ಟು ಮಹತ್ತರವಾಗಿದೆಯೆಂಬುದನ್ನೂ, ಅವರು ಬದುಕುವ ಆಸೆಯನ್ನು ತೊರೆದು ತಾವು ಆದರ್ಶವೆಂದು ಭಾವಿಸಿದ ಒಂದು ಭಾವನೆಗಾಗಿ ತಮ್ಮನ್ನು ತಾವು ಕೊಂದುಕೊಂಡದ್ದನ್ನೂ ನೆನಪಿಗೆ ತಂದುಕೊಂಡರೆ ಅವರ ವಿಷಯದಲ್ಲಿ ಅಗಾಧವಾದ ಗೌರವವೂ, ಭಕ್ತಿಯೂ, ಹೆಮ್ಮೆಯೂ ಮೂಡುತ್ತವೆ.

## ಧಾರ್ಮಿಕ ದೇಹತ್ಯಾಗ ಅಥವಾ ಆತ್ಮಬಲಿ

ಪ್ರಾಚೀನ ಭರತಖಂಡವು ಆತ್ಮಹತ್ಯೆಯನ್ನು ಪಾಪವೆಂದು ಕರೆದು ನಿಷೇಧಿಸಿದೆ. ಆದರೂ ಸ್ಮೃತಿ, ಪುರಾಣೇತಿಹಾಸಗಳು ಕೆಲವು ಬಗೆಯ ಆತ್ಮಹತ್ಯೆಗಳನ್ನು ಅಥವಾ ದೇಹತ್ಯಾಗಗಳನ್ನು ಒಪ್ಪಿ ಮನ್ನಿಸಿವೆ. (i) ಬ್ರಾಹ್ಮಣರ ಕೊಲೆ, ಸುರಾಪಾನ ಮುಂತಾದ ಮಹಾಪಾತಕಗಳನ್ನು ಮಾಡಿದವರು ಪ್ರಾಯಶ್ಚಿತ್ತ ರೂಪವಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬಹುದು. (ii) ವಾನಪ್ರಸ್ಥನು ತೀರ್ಥಯಾತ್ರೆಗಾಗಿ ಹೊರಟು ದಾರಿಯಲ್ಲಿ ದೊಡ್ಡ ರೋಗದಿಂದ ಪೀಡಿತನಾಗಿ ತನ್ನ ನಿತ್ಯಕರ್ಮಗಳನ್ನು ಮಾಡಲು ಅಸಮರ್ಥನಾದರೆ ದೇಹತ್ಯಾಗವನ್ನು ಮಾಡಬಹುದು. (iii) ವೃದ್ಧನೂ, ದೊಡ್ಡ ರೋಗಿಯೂ ಆಗಿರುವ ವ್ಯಕ್ತಿಯು ಕರ್ಮಗಳನ್ನು ಮಾಡಲಾರದಷ್ಟು ದುರ್ಬಲನಾದರೆ ಎತ್ತರದಿಂದ ಬಿದ್ದೋ, ಬೆಂಕಿಯನ್ನು ಪ್ರವೇಶಿಸಿಯೋ,

[1] EC. VIII. Sb. 398, 399, 415, 416, 423, 425 ಇತ್ಯಾದಿ.

ಉಪವಾಸಮಾಡಿಯೋ, ತೀರ್ಥಯಾತ್ರೆ ಹೊರಟೋ, ಅಥವಾ ಪ್ರಯಾಗದಲ್ಲಿ ವಟವೃಕ್ಷದಿಂದ ಧುಮುಕಿಯೋ[2] ದೇಹತ್ಯಾಗವನ್ನು ಮಾಡಬಹುದು. (iv) ಗೃಹಸ್ಥನು ಆರೋಗ್ಯಶಾಲಿಯಾಗಿದ್ದರೂ ತನ್ನ ಜೀವಿತದ ಕಾರ್ಯಗಳೆಲ್ಲವೂ ಮುಗಿದುವು ಎಂಬ ಭಾವನೆ ಬಂದಿದ್ದರೆ, ಲೌಕಿಕ ಭೋಗಗಳ ಆಸೆಗಳೆಲ್ಲವೂ ಬತ್ತಿಹೋಗಿದ್ದರೆ, ವೇದಾಂತಿಯಾಗಿ ಜೀವನದ ನಶ್ವರತೆಯನ್ನು ಅನುಭವಿಸಿದ್ದರೆ ಮೇಲೆ ತಿಳಿಸಿದಂತೆ ದೇಹತ್ಯಾಗವನ್ನು ಮಾಡಬಹುದು. (v) ಧಾರ್ಮಿಕ ದೇಹತ್ಯಾಗ (Religious suicide) ಎಂದರೆ ಮೋಕ್ಷಾಪೇಕ್ಷಿಯಾಗಿ ಆತ್ಮಹತ್ಯೆಯನ್ನು ಮಾಡಿಕೊಳ್ಳಬಹುದು. (iv) ಗಂಡ ಸತ್ತಮೇಲೆ ಹೆಂಡತಿಯು ದೇಹತ್ಯಾಗ ಮಾಡಬಹುದು.[3]

ಇಂತಹ ದೇಹತ್ಯಾಗಗಳು ವಾರಣಾಸಿಯಲ್ಲೋ (ಕಾಶಿ) ಪ್ರಯಾಗದಲ್ಲೋ ನಡೆದರೆ ಅವನಿಗೆ ಶಾಶ್ವತವಾದ ಮುಕ್ತಿ ಲಭಿಸುತ್ತದೆ ಎಂದು ಹಲವು ಧರ್ಮಗ್ರಂಥಗಳು ಹೇಳುತ್ತವೆ. ವಾರಣಾಸಿಯಲ್ಲಿ ಆಕಸ್ಮಿಕವಾಗಿ ಸತ್ತರೂ ಮೋಕ್ಷವೆಂದು ಜನರು ನಂಬಿದ್ದರು. ಕ್ರಮೇಣ ಯಾವ ತೀರ್ಥಕ್ಷೇತ್ರದಲ್ಲಿ ದೇಹತ್ಯಾಗಮಾಡಿದರೂ ಮೋಕ್ಷವು ದೊರಕುವುದೆಂಬ ಭಾವನೆ ಬಲಿಯಿತು. ದೇಹತ್ಯಾಗಮಾಡಲು ಶುಭತಿಥಿಗಳು ಒಳ್ಳೆಯವು ಎಂಬ ನಂಬಿಕೆಯೂ ಬಂದಿತು. ಕೆಲವರ ಪ್ರಕಾರ, ಯಾವ ವರ್ಣದವರಾದರೂ ಸರಿಯೆ, ಈ ರೀತಿಯ ದೇಹತ್ಯಾಗವನ್ನು ಮಾಡಬಹುದು. ಇಂತಹ ದೇಹತ್ಯಾಗಗಳನ್ನು ಮುಂದಿನ ಕೆಲವು ಸ್ಮೃತಿಕಾರರು ವಿರೋಧಿಸಿರುವುದು ಕಂಡುಬರುತ್ತದೆ.[4]

ಚೀನಾದ ಬೌದ್ಧಪ್ರವಾಸಿ ಹ್ಯುಯೆನ್‌ತ್ಸಾಂಗನು ತನ್ನ ಪ್ರವಾಸ ಕಥನದಲ್ಲಿ ಈ ಧಾರ್ಮಿಕ ದೇಹತ್ಯಾಗಗಳ ವಿಷಯವನ್ನು ಪ್ರಸ್ತಾಪಿಸಿದ್ದಾನೆ. ಮುದುಕರೂ, ಸಾವನ್ನು ಸಮೀಪಿಸಿರುವ ರೋಗಿಗಳೂ ಬಾಳಿನಲ್ಲಿ ಜುಗುಪ್ಸೆಗೊಂಡು ಸಾಯಲು ಇಷ್ಟಪಟ್ಟರೆ ಅಂಥವರನ್ನು ದೋಣಿಯಲ್ಲಿ ಗಂಗಾನದಿಯ ಮಧ್ಯಕ್ಕೆ ಕಳುಹಿಸಿಕೊಡುವರೆಂದೂ ಅಲ್ಲಿ ಅವರು ಮುಳುಗಿ ಸಾಯುವರೆಂದೂ ಹೇಳಿದ್ದಾನೆ. ಹೀಗೆ ಸತ್ತರೆ ಮುಂದಿನ ಜನ್ಮದಲ್ಲಿ ಸ್ವರ್ಗಪ್ರಾಪ್ತಿಯಾಗುವುದೆಂದು ಜನರು ನಂಬಿದ್ದರು.[5] ಪ್ರಯಾಗದ ವಟವೃಕ್ಷವನ್ನೂ, ಅದರಿಂದ ನದಿಗೆ ಧುಮುಕಿ ಮಡಿಯುವುದನ್ನೂ ಕೂಡ ಒಂದೆಡೆ ಪ್ರಸ್ತಾಪಿಸಿದ್ದಾನೆ.[6] ಅಲ್ಬೆರೂನಿ ಕೂಡ ಇದೇ ವಿಷಯಗಳನ್ನು ಪ್ರಸ್ತಾಪಿಸಿದ್ದಾನೆ. ಜೀವನದಲ್ಲಿ ಜುಗುಪ್ಸೆ ಹುಟ್ಟಿದರೆ, ಅಪರಿಹಾರ್ಯವಾದ ರೋಗಕ್ಕೆ ತುತ್ತಾಗಿದ್ದರೆ, ತಿದ್ದಲಾಗದ ದೈಹಿಕ ದೋಷವಿದ್ದರೆ, ಮುದಿತನ ಪ್ರಾಪ್ತವಾಗಿದ್ದರೆ ಜನರು ಆತ್ಮಹತ್ಯೆಮಾಡಿಕೊಳ್ಳುತ್ತಾರೆ. ಬ್ರಾಹ್ಮಣರೂ ಕ್ಷತ್ರಿಯರೂ ಈ ರೀತಿಯ ಆತ್ಮಹತ್ಯೆಯನ್ನು ಮಾಡಿಕೊಳ್ಳಕೂಡದು. ವೈಶ್ಯರೂ ಶೂದ್ರರೂ ಬೇಕಾದರೆ ಮಾಡಿಕೊಳ್ಳಬಹುದು. ಬ್ರಾಹ್ಮಣರೂ ಕ್ಷತ್ರಿಯರೂ ಆತ್ಮಹತ್ಯೆ ಮಾಡಿಕೊಳ್ಳಲು ಇಷ್ಟಪಟ್ಟರೆ ಗ್ರಹಣಗಳಂತಹ ಶುಭದಿನಗಳಲ್ಲಿ ದೇಹತ್ಯಾಗಮಾಡಿಕೊಳ್ಳುತ್ತಾರೆ. ಕೆಲವರು ಹಣಕೊಟ್ಟು ಬೇರೆಯವರಿಂದ ಗಂಗಾನದಿಯಲ್ಲಿ ತಮ್ಮನ್ನು ಉಸಿರುಕಟ್ಟಿ ಸಾಯುವವರೆಗೂ ಮುಳುಗಿಸಿಕೊಳ್ಳುತ್ತಾರೆ ಎಂದು ಅವನು ಹೇಳಿದ್ದಾನೆ.[7]

---

[2] ಪ್ರಯಾಗದಲ್ಲಿ ಗಂಗಾ ಯಮುನಾ ನದಿಗಳ ಸಂಗಮದಲ್ಲಿದ್ದ ಈ ವಟವೃಕ್ಷವನ್ನೂ, ಅದರ ಮೇಲಿಂದ ಗಂಗೆಗೆ ಧುಮುಕಿ ಪ್ರಾಣತ್ಯಾಗಮಾಡುತ್ತಿದ್ದುದನ್ನೂ ಹ್ಯುಯೆನ್‌ತ್ಸಾಂಗ್ ಮತ್ತು ಅಲ್ಬೆರೂನಿಯರು ಹೇಳಿದ್ದಾರೆ (Thomas Watters : On Yuan Chwang's Travels in India, I, p. 362 ; Sachau : Alberuni's India, II, p. 170

[3] P. V. Kane : History of Dharmaśāstra, IV, p. 604.

[4] ಅದೇ, ಪು. 608.

[5] Thomas Watters : On Yuan Chwang's Travels in India, I, p. 175.

[6] ಅದೇ, ಪು. 362.

[7] Sachau : Alberuni's India, II, p. 170.

ಕರ್ನಾಟಕದ ಶಾಸನಗಳಲ್ಲಿ ಇಂತಹ ಧಾರ್ಮಿಕ ದೇಹತ್ಯಾಗಗಳ ಹಲವು ನಿದರ್ಶನಗಳಿವೆ. ಜಯನಾಗನ್ ಎನ್ನುವವನು ಮಕರ ಮಾಸದ ದಿನದಲ್ಲಿ ಬೆಂಕಿಯ ಕೊಂಡವನ್ನು ಹೊಕ್ಕ ವಿಷಯವು ಶಾಸನವೊಂದರಲ್ಲಿದೆ.[8] ಬೀರಯ್ಯ ಎನ್ನುವವನು ಕ್ರಿ.ಶ. 1133 ರಲ್ಲಿ ದೇವರಿಗೆ ಹರಕೆ ಹೊತ್ತು ಅಗ್ನಿ ಪ್ರವೇಶ ಮಾಡಿ ಶಿವಲೋಕ ಪ್ರಾಪ್ತನಾದ ವಿಷಯವು ಶಾಸನವೊಂದರಲ್ಲಿದೆ ("ಬೀರಯ್ಯ ದೇವವೆಸ ಕಾಯಾವಾಚಕ ಸರತಿ ಪ್ರಮಾಣನಿಮಿತ್ತ (?) ವಾಗಿ ಅಗ್ನಿಪ್ರವೇಶಂಗೆಯ್ದು ಶಿವಲೋಕಪ್ರಾಪ್ತನಾದ").[9] ಶ್ರೀಮತ್ ಷಣ್ಮೆದೋಕೋಕ ಎನ್ನುವವನೂ ಹೀಗೆಯೇ ಪ್ರಾಣವನ್ನು ತ್ಯಜಿಸಿದ ವಿಷಯವು ಇನ್ನೊಂದು ಶಾಸನದಲ್ಲಿದೆ.[10] ಕ್ರಿ. ಶ. 1068 ರಲ್ಲಿ ಚಾಳುಕ್ಯರ ದೊರೆ ಸೋಮೇಶ್ವರನು ಮಹಾ ಜ್ವರಪೀಡಿತನಾಗಿ ತುಂಗಭದ್ರಾ ನದಿಯಲ್ಲಿ ಪ್ರಾಣವನ್ನು ಬಿಟ್ಟ ವಿಷಯುವನ್ನು ಶಾಸನವೊಂದು ತಿಳಿಸುತ್ತದೆ.[11]

ಸು. 1141 ರ ಶಾಸನದಲ್ಲಿ "ಸೂರ್ಯಗ್ರಹಣ ದೊರೆಕೊಳೆ ತೆಲುಂಗದ ಮಲ್ಲಂ ಸುರಗಣಿಕೆಯರುಯೆ ಸೂರ್ಯಲೋಕಕ್ಕೋದ ಸೂರ್ಯಾಯನಮು" ಎಂದಿದೆ. (Ec. VII. Sk. 290) ಸೂರ್ಯಗ್ರಹಣದ ದಿನ ಜನ ಹೀಗೆ ದೇಹತ್ಯಾಗಮಾಡುತ್ತಿದ್ದರೆಂಬುದಕ್ಕೆ ಸಾಕಷ್ಟು ಉದಾಹರಣೆಗಳಿವೆ. (ನೋಡಿ—ಅದೇ, ಪು. 339).

ಇನ್ನೊಂದು ರೀತಿಯ ದೇಹತ್ಯಾಗವನ್ನು ಇಲ್ಲಿ ಹೆಸರಿಸಬಹುದು. ತನ್ನನ್ನು ಪೋಷಿಸಿರುವ ಒಡೆಯನಿಗೆ ಪುತ್ರಸಂತಾನವಾದರೆ ತಾನು ಬಲಿಯಾಗುವುದಾಗಿ ಹರಸಿಕೊಳ್ಳುತ್ತಿದ್ದ ಸಂಪ್ರದಾಯವೊಂದಿತ್ತು. ಸು. 991 ರ ಶಾಸನವೊಂದರಲ್ಲಿ ಆಕಟಿ ಎನ್ನುವವನು ಅರಸನಿಗೆ ಮಗನಾಗಲಿ ಎಂದು ಒಬ್ಬ ದೇವತೆಗೆ ತನ್ನ ತಲೆಯನ್ನು ಹರಸಿಕೊಂಡು, ಅರಸನಿಗೆ ಮಗನಾದಾಗ ದೇವತೆಗೆ ತನ್ನ ತಲೆಯನ್ನು ಕೊಟ್ಟು ಸ್ವರ್ಗಸ್ಥನಾದ ವಿಷಯವು ಬಂದಿದೆ.[12] ಇನ್ನೊಂದು ಶಾಸನದಲ್ಲಿ ಇನ್ನೂ ವಿಚಿತ್ರವಾದ ಹರಕೆಯಿದೆ. ಮಹಾಸಾಮಂತ ಬೊಪ್ಪರಸನ ರಾಣಿ ಮಾಯಾದೇವಿಯು ಗರ್ಭಿಣಿ. ಅವಳು ಗಂಡುಮಗುವನ್ನು ಪಡೆಯಬೇಕೆಂದು ಹಲವರ ಇಷ್ಟ. ಅವಳು ಕುಮಾರನನ್ನು ಹಡೆದರೆ ಕೊಂಡಸಬಾವಿಯ ಬ್ರಹ್ಮದೇವನಿಗೆ 'ಸಿಡಿತಲೆ'ಯನ್ನು ಕೊಡುವುದಾಗಿ ದೇಕೆಯ ನಾಯಕನು ಹರಸಿಕೊಳ್ಳುತ್ತಾನೆ. ರಾಣಿಗೆ ಗಂಡುಮಗುವಾಗುತ್ತದೆ. ಅವನು ಹರಕೆಯ ಪ್ರಕಾರ ಸಿಡಿತಲೆಯನ್ನು ಕೊಡುತ್ತಾನೆ. ಕೊಡುವ ವಿಧಾನ ಇದು—ತಲೆಯನ್ನು ಕೊಡಬೇಕಾದ ವ್ಯಕ್ತಿ ಧ್ಯಾನ ಭಂಗಿಯಲ್ಲಿ ಕುಳಿತುಕೊಳ್ಳುತ್ತಾನೆ. ಅವನ ಜುಟ್ಟಿಗೆ ನೆಲದಲ್ಲಿ ಹೂಳಿದ ಗಳುವೊಂದನ್ನು ಬಾಗಿಸಿ ಕಟ್ಟುತ್ತಾರೆ. ಅವನ ತಲೆಯನ್ನು ಇನ್ನೊಬ್ಬನು ಕತ್ತಿಯಿಂದ ಹಾರಿಸಿದಾಗ ತಲೆಯು ಮೇಲಕ್ಕೆ ಚಂಗನೆ ಸಿಡಿಯುತ್ತದೆ.[13] ಪ್ರಾಣವನ್ನು ತೃಣಕ್ಕೆ ಸಮಾನವಾಗಿ ಬಗೆದ ಇವರ ಸ್ವಾಮಿನಿಷ್ಠೆ ಅತ್ಯದ್ಭುತವಾದುದು. ಈಗಲೂ ಹಳ್ಳಿಗಳಲ್ಲಿ ಸಿಡಿ ಆಡುವ ಸಂಪ್ರದಾಯವಿದೆ. ಕ್ರಿ. ಶ. 1066 ರ ಶಾಸನದಲ್ಲಿ ಸಿಡಿಕಲ್ಲನ್ನು ಹೆಸರಿಸಿದೆ.[14] ಹಳ್ಳಿಗಳಲ್ಲಿ ಈಗ ಸಿಡಿಯಾಡುವ ಸಂಪ್ರದಾಯಕ್ಕೂ, ಹಿಂದೆ ಸಿಡಿತಲೆಯನ್ನು ಕೊಡುತ್ತಿದ್ದ ವಿಧಾನಕ್ಕೂ ಬಹಳ ವ್ಯತ್ಯಾಸವಿದೆ (ಅಡಿಟಿಪ್ಪಣಿಯನ್ನು ನೋಡಿ). ಎರಡಕ್ಕೂ ಏನು ಸಂಬಂಧವಿದೆಯೋ ಹೇಳುವುದು ಕಷ್ಟ.

---

8 SII. IX. i. 9, C. 900 A.D.

9 MAR (1942). p. 200, 1133 A.D.

10 EC. I. No. 62, C. 1100 A.D.

11 EC. VII. Sk. 136, 1068 A.D.

12 EC. VIII. Sb. 479, C. 991 A.D.

13 ಸಿಡಿತಲೆಯ ಚಿತ್ರಕ್ಕೆ ನೋಡಿ : MAR (1914–15). p. 32

14 EC. VIII. Nr. 59, 1066 A.D. ಹಳ್ಳಿಗಳಲ್ಲಿ 'ಸಿಡಿ'ಯಾಡುವ ಸಂಪ್ರದಾಯವು ಹೀಗಿದೆ. ಒಂದು ದೊಡ್ಡ ಕಂಬದ ತುದಿಗೆ ಅಡ್ಡಲಾಗಿ ಸುತ್ತಲೂ ತಿರುಗಬಲ್ಲ ಇನ್ನೊಂದು ಕಂಬವನ್ನು ತಿರುಗಣೆಯ ಸಹಾಯದಿಂದ ಸಿಕ್ಕಿಸಿರುತ್ತಾರೆ. ಸಿಡಿಯಾಡಲು ಹರಕೆ ಹೊತ್ತ ವ್ಯಕ್ತಿಯ ಬೆನ್ನ ನರವನ್ನು ಅಡ್ಡಕಂಬದ ಒಂದು ತುದಿಯಲ್ಲಿರುವ ಕೊಕ್ಕೆಗೆ ಸಿಕ್ಕಿಸಿ

ಧಾರ್ಮಿಕ ದೇಹತ್ಯಾಗಗಳು ನರ್ಮದಾ ನದಿಯ ನಡುದ್ವೀಪವಾದ ಮಾಂಧಾತದಲ್ಲಿ ಕಾಳಭೈರವನ ಸನ್ನಿಧಾನದಲ್ಲಿ ಇತ್ತೀಚಿನವರೆಗೆ ನಡೆಯುತ್ತಿದ್ದುವು.[15] ಧಾರ್ಮಿಕ ದೇಹತ್ಯಾಗಗಳು ಜೈನರಲ್ಲಿ ವಿಶೇಷವಾಗಿದ್ದುವು. ಅವು ಜೈನಧರ್ಮದ ವೈಶಿಷ್ಟ್ಯವೂ ಹೌದು. ಅವುಗಳನ್ನು ಸಮಾಧಿಮರಣಗಳೆಂದೂ, ಸಲ್ಲೇಖನ ವ್ರತಗಳೆಂದೂ ಕರೆಯುತ್ತಾರೆ. ಸಮಾಧಿಮರಣವನ್ನು ಹೊಂದಿದವರ ನೂರಾರು ಹೆಸರುಗಳು ಶ್ರವಣ ಬೆಳಗೊಳದ ಶಾಸನಗಳಲ್ಲಿ ಕಂಡುಬರುತ್ತವೆ. ಸಲ್ಲೇಖನ ವ್ರತವನ್ನು ಕೈಗೊಳ್ಳುವುದರ ಉದ್ದೇಶವೂ, ಹಿಂದೂಗಳು ಧಾರ್ಮಿಕ ದೇಹತ್ಯಾಗವನ್ನು ಮಾಡುವ ಉದ್ದೇಶವೂ ಒಂದೇ. ವ್ಯಕ್ತಿಗೆ ಜೀವನವು ಅಶಾಶ್ವತವೆಂದು ಕಂಡುಬಂದರೆ, ಕ್ಷಯಿಸಬೇಕಾದ ತನ್ನ ಕರ್ಮದ ಹೊರೆ ದೊಡ್ಡದು ಎಂದು ಅನ್ನಿಸಿದರೆ, ಅಪರಿಹಾರ್ಯವಾದ ಮಹಾ ರೋಗದಿಂದ ಪೀಡಿತನಾದರೆ ಆಗ ವ್ಯಕ್ತಿಯು ಯಾವಜ್ಜೀವವೂ ಆಹಾರವನ್ನು ತೊರೆದು ವ್ರತಧಾರಿಯಾಗುತ್ತಿದ್ದನು. ಮನಸ್ಸಿನಿಂದ ಹಿಂಸಾಮನೋಭಾವವನ್ನೂ, ದ್ವೇಷಭಾವವನ್ನೂ ತೊಡೆದು ಹಾಕಿ ಸರ್ವಜೀವಿಗಳ ವಿಷಯದಲ್ಲಿಯೂ ಕ್ಷಮೆಯನ್ನು ತಾಳಿ, ಜೀವನದ ಅಶಾಶ್ವತತೆಯನ್ನು, ಅರ್ಹಂತ ಮೊದಲಾದವರ ಸದ್ಗುಣಗಳನ್ನೂ, ಅವರು ಪಡೆದ ಸದ್ಗತಿಯನ್ನೂ ಮನಸ್ಸಿನಲ್ಲಿ ಧ್ಯಾನಿಸುತ್ತಿದ್ದನು. ಆ ವ್ರತಧಾರಿಯ ಸುತ್ತಲೂ ಅರ್ಹಂತನ ಸ್ತೋತ್ರ ಪಠನವು ನಡೆಯುತ್ತಿದ್ದಿತು. ಅವನ ದೇಹದಿಂದ ಪ್ರಾಣವು ಹೊರಟು ಹೋಗುತ್ತಿರುವಾಗ ಅವನ ಮನಸ್ಸಿನಲ್ಲಿ ಉತ್ತಮ ಭಾವನೆಗಳಿರಬೇಕೆಂದೂ, ಅದರ ಫಲವಾಗಿ ಮುಂದಿನ ಜನ್ಮದಲ್ಲಿ ಉತ್ತಮ ಸದ್ಗತಿಯು ದೊರೆಯುವುದೆಂದೂ ನಂಬಿದ್ದರು. ಸಮಾಧಿಮರಣದ ವ್ರತವನ್ನು ನಡೆಯಿಸಲು ಬೇಕಾದಷ್ಟು ನಿಯಮಗಳನ್ನು ಹಾಕಿದ್ದಾರೆ. ಅಲ್ಲದೆ, ಆ ವ್ರತದಲ್ಲಿ ಹಲವು ಪ್ರಭೇದಗಳಿವೆ. ಆ ವ್ರತವನ್ನು ತಾಳಿ ದೇಹತ್ಯಾಗವನ್ನು ಮಾಡಿದವರ ಸ್ಮಾರಕವಾಗಿ, ಅವರು ಯಾವ ಸ್ಥಳದಲ್ಲಿ ಕುಳಿತು ದೇಹತ್ಯಾಗಮಾಡಿದರೋ ಅಲ್ಲಿ ಆ ವ್ಯಕ್ತಿಯ ಗುಣಗಾನಮಾಡುವ ಶಾಸನಗಳನ್ನು ಬರೆಯಿಸುತ್ತಿದ್ದರು. ಇವುಗಳನ್ನೇ ನಿಷೀದಿಕಾ, ನಿಸದಿಗಲ್ಲು ಎಂದು ಕರೆದಿರುವುದು. ಮಹಾಸತಿಯ ಪ್ರಶಸ್ತಿಯನ್ನು ಹೇಳುವ ಶಾಸನಗಳು ಮಾಸ್ತಿಗಲ್ಲುಗಳು, ವೀರರ ಪ್ರಶಸ್ತಿಯನ್ನು ಹೇಳುವ ಶಾಸನಗಳು ವೀರಗಲ್ಲುಗಳು, ಸಲ್ಲೇಖನವ್ರತನಿಷ್ಠರ ದೃಢನಿರ್ಧಾರವನ್ನೂ ಶ್ರದ್ಧೆ ಧೈರ್ಯಾದಿಗಳನ್ನೂ ಹೊಗಳುವ ಕಲ್ಲುಗಳು ನಿಸದಿಗಲ್ಲುಗಳು. ಈ ನಿಸದಿಗಲ್ಲುಗಳು ಪರಮಪವಿತ್ರವೆಂದು, ಜೈನರು ಪೂಜಿಸುತ್ತಿದ್ದರು, ಈಗಲೂ ಪೂಜಿಸುತ್ತಾರೆ. (ಸಮಾಧಿಮರಣ ಮತ್ತು ನಿಸದಿಗಲ್ಲುಗಳ ವಿಸ್ತಾರವಾದ ಚರ್ಚೆಯು ಇದೇ ನಿಬಂಧದ 'ಜೈನಧರ್ಮ' ಎಂಬ ಅಧ್ಯಾಯದಲ್ಲಿ ದೊರೆಯುತ್ತದೆ).

ಧಾರ್ಮಿಕ ದೇಹತ್ಯಾಗವು ಜೈನರಲ್ಲಿದ್ದಷ್ಟು ಜೈನೇತರರಲ್ಲಿ ವಿಶೇಷವಾಗಿದ್ದಿಲ್ಲ. ಜೈನೇತರರಲ್ಲಿ ಇಂತಹ ದೇಹತ್ಯಾಗಗಳನ್ನು ಮಾಡಿದವರ ಶಾಸನಗಳು ಎಲ್ಲೋ ಕೆಲವು ಮಾತ್ರ. ಜೀವನವು ಅಶಾಶ್ವತವಾದುದೆಂದು ಪ್ರಬಲವಾಗಿ ಪ್ರತಿಪಾದಿಸಿದ ಜೈನರಲ್ಲಿ ಧಾರ್ಮಿಕ ದೇಹತ್ಯಾಗವು ಸ್ವಲ್ಪ ಹೆಚ್ಚಿನ ಸಂಖ್ಯೆಯಲ್ಲಿದ್ದರೆ ಆಶ್ಚರ್ಯವೇನಿಲ್ಲ. ಇಂತಹ ದೇಹತ್ಯಾಗದಿಂದ ಮುಂದಿನ ಜನ್ಮದಲ್ಲಿ ಸದ್ಗತಿಯೂ, ಮೋಕ್ಷವೂ, ಶಾಶ್ವತವಾದ ಸುಖವೂ ಪದವಿಯೂ ದೊರೆಯುತ್ತದೆ ಎನ್ನುವ ಭಾವನೆಯೇ ಇಂತಹ ದೇಹತ್ಯಾಗಗಳ ಹಿನ್ನೆಲೆಯಲ್ಲಿರುವುದು.

## ಜೋಳವಾಳಿ, ವೇಳೆವಾಳಿ, ಲೆಂಕವಾಳಿ

ಜೋಳವು ಒಂದು ರೀತಿಯ ಧಾನ್ಯ. ಕರ್ನಾಟಕದ ಕೆಲವು ಭಾಗಗಳಲ್ಲಂತೂ ಅದೇ ಪ್ರಮುಖವಾದ

---

ಅವನನ್ನು ಆ ಭಾಗಕ್ಕೆ ಬಟ್ಟೆಗಳಿಂದ ಕಟ್ಟಿಹಾಕುತ್ತಾರೆ. ಆ ಅಡ್ಡಕಂಬದ ಇನ್ನೊಂದು ತುದಿಗೆ ದೊಡ್ಡ ಹಗ್ಗವನ್ನು ಕಟ್ಟುರುತ್ತಾರೆ. ಆ ಹಗ್ಗವನ್ನು ಹಿಡಿದು ಅಡ್ಡಕಂಬವನ್ನು ಸುತ್ತಲೂ ತಿರುಗಿಸಿದಾಗ ಅದರ ಜೊತೆಗೇ ವ್ಯಕ್ತಿಯೂ ಆಕಾಶದಲ್ಲಿ ತಿರುಗುತ್ತಾ ಸುತ್ತಮುತ್ತ ಜನರ ಮೇಲೆ ಹೂವನ್ನು ಎರಚುತ್ತಾನೆ. ಸಾಮಾನ್ಯವಾಗಿ ಗ್ರಾಮದೇವತೆಯ ಉತ್ಸವದ ಕೊನೆಯ ದಿನ ಬಲಿಗಳೆಲ್ಲ ಮುಗಿದಮೇಲೆ ಸಿಡಿಯಾಡುತ್ತಾರೆ.

[15] Handiqui : Yaśastilaka and Indian Culture, p. 392.

ಆಹಾರ. 'ಪಾೞಿ' ಎಂದರೆ ಕರ್ತವ್ಯ, ಕ್ರಮ[16] ಅಥವಾ ಕ್ರಮಪಾಲನೆಯ ಧರ್ಮ (ತೆಲುಗು : ಪಾಡಿ, ಸಂಸ್ಕೃತ : ಪಾಲಿ).[17] 'ಜೋಳವಾೞಿ' ಎಂದರೆ (=ಜೋಳ+ಪಾೞಿ) ಅನ್ನದ ಕರ್ತವ್ಯ, ಅನ್ನದ ಋಣ ಎಂದರ್ಥ (ಈಗಿನ 'ಉಪ್ಪಿನ ಹಂಗು' ಇದ್ದಂತೆ). ತೆಲುಗಿನಲ್ಲಿ ಇದಕ್ಕೆ ಸಮಾನವಾದ ಉಕ್ತಿ 'ಜೊನ್ನಲು–ಗೊನ್ನ–ಋಣಂ'[18] (ಜೊನ್ನಲು=ಜೋಳ). ಅನ್ನವನ್ನು ಕೊಟ್ಟು ಸಾಕಿದ ಒಡೆಯನಿಗೆ ಕಷ್ಟಬಂದಾಗ ಅವನಿಂದ ಉಪಕೃತನಾಗಿರುವ ವ್ಯಕ್ತಿಯು ಒಡೆಯನಿಗೆ ಸಹಾಯಮಾಡಬೇಕು ; ಯುದ್ಧವು ಒದಗಿದಾಗ ಅವನ ಪರವಾಗಿ ಹೋರಾಡಬೇಕು. ಇದೇ 'ಜೋಳವಾೞಿ'. ಜೋಳವಾೞಿ ಎಂಬುದು ಕರ್ತವ್ಯವನ್ನೂ, ಕರ್ತವ್ಯವನ್ನು ಪರಿಪಾಲಿಸುವ ವ್ಯಕ್ತಿಯನ್ನೂ ಸೂಚಿಸುತ್ತದೆ.

ಪಂಪಭಾರತದಲ್ಲಿ ಹಲವೆಡೆ 'ಜೋಳದ ಪಾೞಿ'ಯ ಪ್ರಸ್ತಾಪವಿದೆ. ಕುಂತಿಯು ಕರ್ಣನನ್ನು ಪಾಂಡವರ ಪಕ್ಷಕ್ಕೆ ಸೇರಿಕೊ ಎಂದು ಕರೆದಾಗ ಕರ್ಣನು ತಾನು ದುರ್ಯೋಧನನನ್ನು ಬಿಟ್ಟು ಬಂದರೆ, ತನ್ನ ಒಡೆಯ ಮಾಡಿದ ಉಪಕಾರವನ್ನು ಹಿಂದಿಕ್ಕಿ 'ಪಾೞಿ'ಯನ್ನು ಬಿಟ್ಟು 'ಜೋಳ'ಕ್ಕೆ ತಪ್ಪಿದಂತಾಗುತ್ತದೆ, ಅಪಕೀರ್ತಿ ಬರುತ್ತದೆ ಎಂದು ಹೇಳುತ್ತಾನೆ.[19] ಯುದ್ಧರಂಗದಲ್ಲಿ ಭೀಷ್ಮರು ಸರಿಯಾಗಿ ಯುದ್ಧಮಾಡುತ್ತಿಲ್ಲವೆಂದು ದುರ್ಯೋಧನನು ಆಕ್ಷೇಪಿಸಿ "ನೀವು ಪಾಂಡವರೊಡನೆ ನಂಟುತನವನ್ನೇ ಕುರಿತು ಆಲೋಚಿಸುತ್ತಿರುವಿರಿ, ಸ್ವಲ್ಪ 'ಜೋಳದ ಪಾೞಿ'ಯನ್ನು ಕುರಿತು ಆಲೋಚಿಸಿರಿ" ಎಂದು ಕಟುವಾಗಿ ಮಾತನಾಡುತ್ತಾನೆ.[20] ಯುದ್ಧಕ್ಕೆ ಮುನ್ನ ಸೈನಿಕನೊಬ್ಬನ ಬಾಯಲ್ಲಿ "ಜೋಳದ ಪಾೞಿಯಂ ನೆರಪಿದಂ ಗಂಡಂ ಪೆಱಂ ಗಂಡನೇ" ಎಂಬ ಮಾತು ಬರುತ್ತದೆ.[21] ಶಾಂತಿಪುರಾಣದಲ್ಲೂ 'ಜೋಳದ ಪಾೞಿ'ಯ ಹೆಸರಿದೆ.[22] ಕೆಲವು ಸಾರಿ 'ಜೋಳ'[23] ಎಂದರೂ, 'ಪಾೞಿ'[24] ಎಂದರೂ 'ಜೋಳವಾೞಿ' ಎಂದೇ ಅರ್ಥ. ಶಾಸನಗಳಲ್ಲಿ 'ಜೋಳ

---

16 'ಪಾೞಿಯೆಂದು ಕ್ರಮಂ'—ಶಬ್ದಮಣಿದರ್ಪಣ (ಸಂ. ಡಿ. ಎಲ್. ನರಸಿಂಹಾಚಾರ್, ಪು. 20).

ಪಾಂಡವರು ವನವಾಸಕ್ಕೆ ಹೊರಟಾಗ ಹಿರಿಯರು ಅವರನ್ನು ಕುರಿತು, ನೀವು 'ಪಾೞಿಯ' ಮಾರ್ಗವನ್ನು ಬಿಟ್ಟು ಎಂದೂ ನಡೆದಿಲ್ಲ ಎನ್ನುತ್ತಾರೆ. (ಪಂಪಭಾರತ, 7.21). ಇಲ್ಲಿ 'ಪಾೞಿ' ಎಂದರೆ ಕ್ರಮ, ಧರ್ಮ ಎಂಬ ಅರ್ಥಗಳು ಸ್ಪಷ್ಟ.

17 'ಪಾೞಿ' ಎನ್ನುವುದು ಸಂಸ್ಕೃತದ ಪಾಲಿ ಎಂಬ ಪದದ ತದ್ಭವವಾಗಿರುವಂತೆ ಕಾಣುತ್ತದೆ. ತೆಲುಗಿನ 'ಪಾಡಿ' ಯನ್ನು ಬಿಟ್ಟರೆ ಉಳಿದ ಯಾವ ದ್ರಾವಿಡ ಭಾಷೆಯಲ್ಲೂ ಅದಕ್ಕೆ ಜ್ಞಾತಿ ಶಬ್ದಗಳಿಲ್ಲ.

18 ತೆಲುಗಿನ ನನ್ನಿಚೋಡದೇವನ ಕುಮಾರಸಂಭವಂ ಕಾವ್ಯದಲ್ಲಿ (11.204) ಈ ಉಕ್ತಿಯಿದೆ.—"ಮುನುಮಿಡಿ ವೈರಿ ವಾಹಿನುಲ ಮುಟ್ಟೆ ಪಡಲ್ಪಡವ್ರೇಸಿ........ಜೊನ್ನಲು ಗೊನ್ನ ಋಣಂಬು ನೀಗುದುನ್"

[Quoted by Dr. N. Venkataramanayya in his "Jōḷavāḷi, Vēḷavāḷi and Leṅkavāḷi"—Journal of Oriental Research, XIV, part ii, p. 98.]

19 ಪಂಪಭಾರತ, 9.84.

20 ಪಂಪಭಾರತ, 11.15.

21 ಅದೇ, 10.43

22 ಶಾಂತಿ ಪುರಾಣ, 3.71.

23 ಪಂಪಭಾರತ, 10.42.–"ತಳ್ತಿಱಿಯದಿರ್ದೊಡೆ ಜೋಳಮನೆಂತು ನೀಗುವೆಂ"

24 ಗದಾಯುದ್ಧ, 5.17.

ನೆಗಪಿ ವರೂಥಮಂ ವಸುಧೆ ನುಂಗಿದುದಂ ಸಮಪಾದದಾಸನಂ
ಬಗೆಗೊಳೆ ತನ್ನ ಮುಂ ತೆಗೆದ ಮುಷ್ಟಿಯೆ ದಕ್ಷಿಣ ಕರ್ಣಮೂಲದೊಳ್
ಸೊಗಯಿಸೆ ಪಾೞಿಯಂ ನೆಱಪಿದಾಳ್ದನ ಕಜ್ಜಮನೊಕ್ಕು ಸತ್ತರಂ
ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತ ಕೇತುದಂಡಮಂ ॥

ವಾಳಿ'ಯ ಹೆಸರು ಅನೇಕ ಕಡೆ ಬಂದಿದೆ. ವಿಷ್ಣುವರ್ಧನನು ತಲಕಾಡಿನ ಆದಿಯಮನ ಮೇಲೆ ದಾಳಿ ಮಾಡಿದಾಗ ಅವನ ಸಾಹಣಿ ಬಾಸಯನು ನುಗ್ಗಿ ಹೋರಾಡಿ 'ಜೋಳವಾಳಿ'ಯನ್ನು ಮೆರೆದು ಮಡಿಯುತ್ತಾನೆ.[25] ಶ್ರೀನಾರಸಿಂಗದೇವನ ಪಟ್ಟದರಸಿ ಬಮ್ಮಲದೇವಿಯು ಸ್ವರ್ಗಸ್ಥೆಯಾದಾಗ ಚಾಕಗವುಡ ಎಂಬಾತನು 'ಜೋಳವಾಳಿಗಂ ವಾ(ವೇ)ಳೆವಾಳಿಗಂ' ಮಡಿದು ಸುರಲೋಕಪ್ರಾಪ್ತನಾಗುತ್ತಾನೆ.[26] ಅವನು ವೇಳೆವಾಳಿಯಾದ್ದರಿಂದ ಆತ್ಮಹತ್ಯೆಯನ್ನು ಮಾಡಿಕೊಂಡನು. ಜೋಳವಾಳಿಯಲ್ಲಿ ಆತ್ಮಹತ್ಯೆಯ ಪ್ರಶ್ನೆಯೇ ಏಳುವುದಿಲ್ಲ. ಅನ್ನದ ಋಣಕ್ಕಾಗಿ ಯುದ್ಧದಲ್ಲಿ ಹೋರಾಡುವುದು ಮುಖ್ಯ. ಯುದ್ಧದಲ್ಲಿ ಮಡಿಯಬಹುದು ಅಥವಾ ಗೆದ್ದು ಹಿಂದಕ್ಕೆ ಬರಬಹುದು. ಆತ್ಮಹತ್ಯೆಯ ಪ್ರಶ್ನೆ ಬರುವುದು 'ವೇಳೆವಾಳಿ'ಯಲ್ಲಿ.

'ವೇಳೆವಾಳಿ' ತನವು ಕೃತಜ್ಞತೆಯ ಪರಾಕಾಷ್ಠೆ. ತಮಗೆ ಅನ್ನವನ್ನಿಟ್ಟ ಒಡೆಯನು ಮಡಿದರೆ ತಾವೂ ಮಡಿಯುವುದಾಗಿ ಹಲವರು ("ವೇಳೆವಡಿಚ"ರು) ಪ್ರತಿಜ್ಞೆಯನ್ನು ಕೈಗೊಳ್ಳುತ್ತಿದ್ದರು. ಹೀಗೆ ಪ್ರತಿಜ್ಞೆಯನ್ನು ಕೈಗೊಳ್ಳುವುದನ್ನೇ 'ವೇಳೆಗೊಳ್'[27] ಎಂದು ಕರೆದಿರುವುದು. ತಮ್ಮ ಒಡೆಯನು ಮಡಿದಾಗ ಅವನ ವೇಳೆವಡಿಚರು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದರು. ಇದೇ 'ವೇಳೆವಾಳಿ' (ವೇಳೆ+ಪಾಳಿ. ಇದರ ನಿಷ್ಪತ್ತಿಯನ್ನು ಮುಂದೆ ಚರ್ಚಿಸಲಾಗಿದೆ).

ವೇಳೆಗೊಳ್ಳುವ ಸಂಪ್ರದಾಯದ ಬೇರುಗಳು ಬಹು ಹಿಂದಕ್ಕೆ ಹೋಗುತ್ತವೆ. ಪ್ರಾಚೀನ ಜನಾಂಗಗಳಲ್ಲಿ ರಾಜನು ಸತ್ತಾಗ ಅವನು ಪರಲೋಕದಲ್ಲಿ ಇಲ್ಲಿಯಂತೆಯೇ ಸುಖವಾಗಿರಲಿ ಎಂದು ಅವನ ಸಮಾಧಿಯಲ್ಲಿ ಅವನಿಗೆ ಇಷ್ಟವಾದ ವಸ್ತುಗಳನ್ನೂ, ಪ್ರಾಣಿಗಳನ್ನೂ, ಜನರನ್ನೂ ಹೂಳುತ್ತಿದ್ದರು. ಉದಾಹರಣೆಗೆ, ಸಿಥಿಯನ್ನರ ರಾಜನು ಸತ್ತಾಗ ಅವನ ಜೊತೆಗೆ ಮತ್ತು ಅವನ ಸುತ್ತಮುತ್ತ ಅವನ ಅಡಿಗೆಯವರನ್ನೂ, ಆಳುಗಳನ್ನೂ, ಕುದುರೆಗಳನ್ನೂ ಹೂಳುತ್ತಿದ್ದರು.[28] ಬಹುಶಃ ಇದಕ್ಕೆ ಒಂದು ಧಾರ್ಮಿಕವಾದ ಬಣ್ಣವು ಬಂದು ರಾಜನ ಜೊತೆಯಲ್ಲಿ ತಾವೂ ಮಡಿಯುವುದಾಗಿ ರಾಜನ ಜೀವಿತದ ಅವಧಿಯಲ್ಲಿಯೇ ಹಲವರು ತಾವಾಗಿ ಮುಂದೆ ಬಂದು ಪ್ರತಿಜ್ಞೆಯನ್ನು ಕೈಗೊಳ್ಳುವ ಪದ್ಧತಿಯು ಮುಂದೆ ಬೆಳೆದಿರುವಂತೆ ಕಾಣುತ್ತದೆ. ರಾಮನು ನಿರ್ದಿಷ್ಟ ಅವಧಿಯಲ್ಲಿ ಹಿಂದಿರುಗದಿದ್ದರೆ ತಾನು ಅಗ್ನಿ ಪ್ರವೇಶ ಮಾಡುವುದಾಗಿ ಭರತನು ಪ್ರತಿಜ್ಞೆ ಮಾಡಿದ ವಿಷಯವು ರಾಮಾಯಣದಲ್ಲಿ ಪ್ರಸಿದ್ಧವಾಗಿದೆ. ಇದನ್ನು ವೇಳೆವಾಳಿತನವೆಂದು ಭಾವಿಸುವುದರಲ್ಲಿ ಕೆಲವು ತೊಂದರೆಗಳಿವೆ. ಬಾಣಭಟ್ಟನ ಕಾಲದಲ್ಲಿ ವೇಳೆವಾಳಿ ಪದ್ಧತಿಯಿದ್ದಿತೆಂಬುದಕ್ಕೆ ಸ್ಪಷ್ಟ ಸೂಚನೆಗಳಿವೆ. ಪ್ರಭಾಕರವರ್ಧನನು ಮಡಿದಾಗ ಅವನ ಜೊತೆಯಲ್ಲಿ ಹಲವರು ಪ್ರಾಣವನ್ನು ತ್ಯಜಿಸಿದಂತೆ ಹರ್ಷಚರಿತೆಯು ಹೇಳುತ್ತದೆ.[29] ಒಬ್ಬ ಪುರುಷನು ಸತ್ತಾಗ ಅವನ ಜೊತೆಯಲ್ಲಿ ಅವನ ಹೆಂಡತಿಯಲ್ಲದೆ ಅವನ ತಾಯಿ, ಸೋದರಿಯರು ಮುಂತಾದವರು, ಮಂತ್ರಿಗಳು, ದಾಸದಾಸಿಯರು ಪ್ರಾಣತ್ಯಾಗಮಾಡಿಕೊಳ್ಳುತ್ತಿದ್ದ ವಿಷಯ

---

25 MAR (1934). p. 98, 1117 A.D.

26 MAR (1936). p. 88, C. 1150 A.D.

27 ತನ್ನ ತಮ್ಮಂದಿರು ಸತ್ತರೆ ತಾನೂ ಸಾಯುವುದಾಗಿ ಧರ್ಮನಂದನನು 'ವೇಳೆಗೊಂಡಿ'ದ್ದನು. (ಪಂಪಭಾರತ, 13.15). ವಸಂತದಲ್ಲಿ ಮಲ್ಲಿಗೆಗಳು ಬಿರಿದಾಗ ತಮ್ಮ ಪ್ರೇಯಸಿಯರನ್ನು ನೆನೆದು ನಲ್ಲರ ಹೃದಯಗಳೂ ಬಿರಿದುವು. ಇದನ್ನು ನೋಡಿದರೆ ನಲ್ಲರ ಮೆಲ್ಲೆದೆಗಳು ಮಲ್ಲಿಗೆಗಳಿಗೆ 'ವೇಳೆಗೊಂಡಿ'ದ್ದಂತೆ ಕಾಣಿಸುತ್ತಿತ್ತು (ಪಂಪಭಾರತ, 5.33.) ಇಲ್ಲಿ ವೇಳೆ ಎಂಬ ಮಾತನ್ನು ಪಾರಿಭಾಷಿಕವಾದ ಅರ್ಥದಲ್ಲಿ ಪಂಪನು ಬಳಸಿದ್ದಾನೆ.

28 Encyclopaedia of Religion and Ethics, VI, p. 855.

29 ಹರ್ಷಚರಿತ (ಸಂ. ಶೂರನಾಡ್ ಕುಂಜನ್ ಪಿಳ್ಳೈ. ತಿರುವಾಂಕೂರು, 1958), ಪು 526. "ಕೇಚಿತ್ ಶಲಭಾ ಇವ ವೈಶ್ವಾನರಂ ಶೋಕಾವೇಶವಿವಶಾ ವಿವಿಶುಃ"

ವನ್ನು ಕಲ್ಹಣನು ಹೇಳುತ್ತಾನೆ.[30] ಕರ್ನಾಟಕದಲ್ಲಿ ಈ ಸಂಪ್ರದಾಯವು ಅತ್ಯಂತ ಪ್ರಬಲವಾಗಿದ್ದಿತು.[31] ಕ್ರಿ. ಶ. 864 ರ ಶಾಸನದಲ್ಲಿ ದೇಹತ್ಯಾಗವನ್ನು ಮಾಡಿದ ವ್ಯಕ್ತಿಯೊಬ್ಬನ ಪ್ರಶಂಸೆ ಇದೆ.[32] ಶಾಸನವು ಬಹಳ ತ್ರುಟಿತವಾಗಿರುವುದರಿಂದ, ಭಾಷೆಯೂ ತೊಡಕುತೊಡಕಾಗಿರುವುದರಿಂದ ಅದು ಧಾರ್ಮಿಕ ದೇಹ ತ್ಯಾಗವೋ ವೇಳೆವಾಳಿತನವೋ ಗೊತ್ತಾಗದು. ಕ್ರಿ. ಶ. 865 ರ ಮೇವುಂಡಿಯ ಶಾಸನವು ವೇಳೆವಾಳಿತನ ವನ್ನು ಕುರಿತು ಖಚಿತವಾಗಿ ಪ್ರಸ್ತಾಪಿಸುವ ಮೊಟ್ಟಮೊದಲ ಶಾಸನ.[33] ರೆಟ್ಟಯಣ್ಣ ಎಂಬ 'ಬೆಳಾವಡಿಚ' ನನ್ನು ಶಾಸನವು ಹೀಗೆ ಹೊಗಳುತ್ತದೆ–"ತಂದೆಯ ತಾಯ್ವಿರಾ ಸಂತಾನಮನುಳಿದು ಬಿಸುಟೋಂ ಮಜುವಾರ್ತೆ ಗೊಳ್ಳನ್....ತನ್ನನಾಳ್ದಾತ ಸಯೆ (=ಸಾಯಲು) ಬಾಟಿನ್". ಎಂದರೆ, ಅವನ ನಿಜವಾದ ತಂದೆ ತಾಯಿ ಅರಸನೇ ಆಗಿದ್ದನು. ತನ್ನ ಒಡೆಯ ಸತ್ತರೆ ತಾನೂ ಸಾಯುವುದಾಗಿ ಪ್ರತಿಜ್ಞೆ ಮಾಡಿದ್ದನು. (ಹೀಗೆ ಪ್ರತಿಜ್ಞೆಮಾಡಿ, ತಾಯ್ತಂದೆಗಳಿಂದ ದೂರವಾಗಿದ್ದನೋ ಏನೋ!) ಅವನಿಗೆ ಒಂದು ದಿನ ತನ್ನ ಅರಸನ ಮೈಗೆ ತುಂಬಾ ಅಸ್ವಸ್ಥವೆಂದು ತಿಳಿಯಿತು. ತಕ್ಷಣವೇ ಅವನು ಕೂಳನ್ನು ತೊರೆದು ಮೂವತ್ತು ಗಾವುದ ಗಳನ್ನು ಒಂದು ದಿವಸದಲ್ಲಿ ನಡೆದು ಬರಲು, ಅರಸನ ದೇಹವು ಚಿತೆಯಲ್ಲಿ ಉರಿಯುವುದು ಕಾಣಿಸಿತು. ತಕ್ಷಣವೇ ಅವನು ಖಡ್ಗದಿಂದ ತನ್ನ ತಲೆಯನ್ನು ತೆಗೆದುಕೊಳ್ಳುತ್ತಾನೆ. ಸುಮಾರು 900 ರ ಒಂದು ಶಾಸನ ದಲ್ಲಿ ಒಂದು ಅಪೂರ್ವ ಸಂಗತಿಯಿದೆ. ನಾಗತ್ತರ ಎಂಬುವನು ಯುದ್ಧದಲ್ಲಿ ಮಡಿಯುತ್ತಾನೆ.[34] ಅವನ 'ಮನೆ ಮಗ' ನಾದ ಪೇಗೂರನು ಸತ್ತ ವಿಷಯವನ್ನು ಇನ್ನೊಂದು ಶಾಸನವು ಹೇಳುತ್ತದೆ[35]. ಬಹುಶಃ ಅದು ವೇಳೆವಾಳಿತನವನ್ನು ಹೇಳುತ್ತದೆ. ಇನ್ನೊಂದು ಶಾಸನದಲ್ಲಿ[36] ನಾಗತ್ತರನ ಮಗಳು ಕೊಂಡಬ್ಬೆಯು "ಕತ್ತವ್ಯವೆಳೆಗೊಂಡು ಸತ್ತಂ" ಎಂಬ ವಿಷಯವು ಬರುತ್ತದೆ. ಇದನ್ನು 'ಕರ್ತವ್ಯ ವೇಳೆಗೊಂಡು ಸತ್ತಳ್' ಎಂದು

---

[30] Altekar : The Position of Women in Hindu Civilization, pp. 127–8.

[31] ಜಪಾನಿನಲ್ಲಿ 'ಹರಕಿರಿ' (Harakiri) ಪದ್ಧತಿಯು ಬಹು ಪ್ರಬಲವಾಗಿದ್ದಿತು. 'ಹರಕಿರಿ' ಎಂದರೆ ಹೊಟ್ಟೆ ಯನ್ನು ಕತ್ತರಿಸಿಕೊಳ್ಳುವುದೆಂದರ್ಥ. ಶತ್ರುಗಳ ಕೈಗೆ ಸಿಕ್ಕು ಅಪಮಾನಿತನಾಗುವ ಸಂದರ್ಭ ಒದಗಿದಾಗ, ಹಿರಿಯ ಅಧಿಕಾರಿಗಳಿಂದ ಅವಮಾನಿತನಾದಾಗ ಅಥವಾ ತನ್ನ ಒಡೆಯನು ತಪ್ಪುದಾರಿಯನ್ನು ಹಿಡಿದು ಅದನ್ನು ತೋರಿಸಲು ಇತರ ಎಲ್ಲ ವಿಧಾನಗಳೂ ವಿಫಲವಾದಾಗ, ಅಥವಾ ಮಡಿದುಹೋದ ತನ್ನ ಯಜಮಾನನ ಮೇಲಿನ ನಿಷ್ಠೆಯನ್ನು ಪ್ರಕಟಿಸುವ ಸಂದರ್ಭ ಒದಗಿದಾಗ ವ್ಯಕ್ತಿಯು ಮಾಡಿಕೊಳ್ಳುತ್ತಿದ್ದ ಆತ್ಮಹತ್ಯೆಯೇ 'ಹರಕಿರಿ'. ತಮ್ಮ ಸ್ನೇಹಿತರ ಪ್ರಾಮಾಣಿಕತೆಯನ್ನು ಎತ್ತಿಹಿಡಿಯಲೂ 'ಹರಕಿರಿ'ಯನ್ನು ಮಾಡಿಕೊಳ್ಳುತ್ತಿದ್ದರು. ಈ ಆತ್ಮಹತ್ಯೆಯ ವಿಧಾನವು ಭಯಾನಕವಾದುದು. 'ಹರಕಿರಿ'ಯನ್ನು ಮಾಡಿಕೊಳ್ಳುವವನು ಕತ್ತಿಯಿಂದ ತನ್ನ ಹೊಟ್ಟೆಯನ್ನು ಸೀಳಿ ಕರುಳನ್ನು ಹೊರಕ್ಕೆ ತೆಗೆಯುತ್ತಿದ್ದನು. ಅವನ ಸಂಕಟವನ್ನು ನೋಡಲಾರದೆ ಹತ್ತಿರದಲ್ಲಿ ನಿಂತಿದ್ದವರು ಅವನ ತಲೆಯನ್ನು ಕತ್ತರಿಸಿಬಿಡುತ್ತಿದ್ದರು. ಜಪಾನಿನಲ್ಲಿ ಹೋದ ಶತಮಾನದ ಉತ್ತರಾರ್ಧದವರೆಗೆ ಈ ಪದ್ಧತಿಯು ನ್ಯಾಯಸಮ್ಮತವಾಗಿದ್ದಿತು. ಈ ಪದ್ಧತಿಯು ಈಗ ಕಾನೂನಿಗೆ ವಿರೋಧವಾಗಿದ್ದರೂ 'ಹರಕಿರಿ' ಪದ್ಧತಿಯು ಜಪಾನಿನಿಂದ ಸಂಪೂರ್ಣ ಅಳಿಸಿಹೋಗಿದೆಯೆಂದು ಹೇಳಲು ಸಾಧ್ಯವಿಲ್ಲ. ವಿವರಗಳಿಗೆ, ನೋಡಿ : Encyclopaedia Brittannica, XII, p. 954; Encyclopaedia of Religion and Ethics, IV, p. 286 ; VI, p. 843. 'ಹರಕಿರಿ'ಗೂ ವೇಳೆವಾಳಿಗೂ ಸ್ವಲ್ಪಮಾತ್ರ ಹೋಲಿಕೆಯಿದೆ. ಹೋಲಿಕೆಗಿಂತ ವ್ಯತ್ಯಾಸಗಳೇ ಹೆಚ್ಚೆಂದು ಕಾಣುತ್ತದೆ.

[32] BKl. I. i. 10, 864 A.D.

[33] BKl. I. i. 11, 865 A.D.

[34] EC. IX. Bn. 81, C. 900 A.D.

[35] ಅದೇ, ನಂ. 87.

[36] ಅದೇ, ನಂ. 88.

ತಿದ್ದಬಹುದೆ? ತಂದೆ ಮಡಿದಾಗ ಮಗಳು ತಂದೆಗೆ ವೇಳೆವಾಳಿಯಾಗಿ ಮಡಿದಳು ಎಂದು ಭಾವಿಸಬಹುದೆ? [37] ಸು. 900 ರಲ್ಲಿ ಚಾಳುಕ್ಯ ರಾಜನಿಗೆ ವೇಳೆಗೊಂಡ ಶಂಭು ಎನ್ನುವವನ ಪ್ರಶಂಸೆಯು ಶಾಸನವೊಂದರಲ್ಲಿದೆ. ನಗುಮೊಗದಿಂದ ಬೆಂಕಿಯನ್ನು ಪ್ರವೇಶಿಸಿದ[38] ಅವನು ಅಸಮಾನನು ಎಂದೂ, ಹಿಂದೆ ಪ್ರಸಿದ್ಧರಾದ, ಈಗ ಪ್ರಸಿದ್ಧರಾಗಿರುವ, ಮುಂದೆ ಬರಲಿರುವ ವೇಳೆವಡಿಚರು ನಿನಗೆ ಸಮ ಅಲ್ಲ, ನಿನಗೆ ನೀನೇ ಸಮ ಎಂದೂ ಶಾಸನವು ಅವನನ್ನು ಹೊಗಳುತ್ತದೆ.[39] ಗಂಗರ ದೊರೆ ಪೆರ್ಮಾನಡಿಗಳು ಸ್ವರ್ಗವೇರಿದಾಗ ಬಖಿಯಮ್ಮ ಎಂಬುವನು ಅಗ್ನಿಪ್ರವೇಶ ಮಾಡಿದ ವಿಷಯವು ಶಾಸನವೊಂದರಲ್ಲಿದೆ.[40] ಬಹುಶಃ ಅದೇ ರಾಜನಿಗೆ ವೇಳೆಗೊಂಡು ಅಗ್ನಿಯನ್ನು ಪ್ರವೇಶಿಸಿದ ರಾಚೆಯ ಎನ್ನುವವನ ವಿಷಯ ಇನ್ನೊಂದು ಶಾಸನದಲ್ಲಿದೆ.[41] ವೇಳೆವಾಳಿ ಸಂಪ್ರದಾಯದ ಶಾಸನಗಳಲ್ಲಿ ಬಹು ಪ್ರಸಿದ್ಧವಾದುದು ದೊಡ್ಡಹುಂಡಿ ಶಾಸನ. ಗಂಗರ ದೊರೆ ಪೆರ್ಮಾನಡಿಗಳು ಸ್ವರ್ಗವೇರಿದಾಗ ಅವರ ಮನೆಮಗ ಅಗರಯ್ಯನು ("ಮನೆಮಗತ್ತಿನ್ ಅಗರಯ್ಯಂ") 'ಕೀಲ್ಗುಂಠೆ'ಯಾದ ವಿಷಯವು ಆ ಶಾಸನದಲ್ಲಿದೆ.[42] 'ಕೀಲ್ಗುಂಟೆ'ಯಾಗು ಎಂದರೆ ವೇಳೆವಾಳಿಯಾಗಿ ಮಡಿಯುವುದು ಎಂದರ್ಥ. (ಕೀಲ್ಗುಂಟೆಯ ವಿವರಣೆ ಮುಂದೆ ಬರುತ್ತದೆ.) ಆ ಶಾಸನದ ಮೇಲಿನ ಚಿತ್ರದಲ್ಲಿ ಮಂಚದ ಮೇಲೆ ಮಡಿದ ದೊರೆ ಮಲಗಿದ್ದಾನೆ. ಇನ್ನೊಂದು ಕಡೆ ಅಗರಯ್ಯನು ಕಠಾರಿಯಿಂದ ಇರಿದುಕೊಳ್ಳುತ್ತಿದ್ದಾನೆ. ಈ ಶಾಸನದಲ್ಲಿಯೂ ಹಿಂದೆ ಉದ್ಧರಿಸಿದ ಶಾಸನದಲ್ಲಿಯೂ ಬಂದಿರುವ 'ಮನೆಮಗ' ಎಂಬ ಉಕ್ತಿಯು ಗಮನಾರ್ಹವಾದುದು. ಇದು ಹರ್ಷಚರಿತದಲ್ಲಿ ಬಾಣನು ಹೇಳುವ 'ಕುಲಪುತ್ರ' ಎಂಬ ಉಕ್ತಿಗೆ ಸಮಾನ; ಮತ್ತು ಅದರ ಅಚ್ಚ ಕನ್ನಡಾನುವಾದ ಎಂಬುದರಲ್ಲಿ ಸಂದೇಹವಿಲ್ಲ. ಬಾಣನ ಕಾಲದಲ್ಲಿ ರಾಜರಿಗೆ ಸಂಬಂಧಿಸಿದಂತೆ 'ಕುಲಪುತ್ರ'ರಿರುತ್ತಿದ್ದರು. ಯುವಕರಾದ ಇವರು ವಂಶಾನುಗತವಾಗಿ ರಾಜರ ವಿಷಯದಲ್ಲಿ ಭಕ್ತಿಯನ್ನೂ ಗೌರವವನ್ನೂ ಇಟ್ಟುಕೊಂಡಿರುತ್ತಿದ್ದರು. ರಾಜ ರಾಣಿಯರು ಇವರನ್ನು ತಮ್ಮ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು.[43] ಹರ್ಷನ ತಂದೆ

---

37 ಇನ್ನೊಂದು ಶಾಸನದಲ್ಲಿ (ನಂ. 94) ನಾಗತ್ತರನ ಮಗಳು ರೊಂಡಬ್ಬೆಯು ಸನ್ಯಸನ ವಿಧಿಯಿಂದ ಮಡಿದಳು ಎಂದು ಹೇಳಿದೆ. ಕನ್ನಡ ಅಕ್ಷರಗಳಲ್ಲಿ ಎರಡು ಕಡೆ (ನಂ. 88, 94) ಕೊಂಡಬ್ಬೆ ಮತ್ತು ರೊಂಡಬ್ಬೆ ಎಂಬ ಬೇರೆ ಬೇರೆ ಹೆಸರುಗಳಿವೆ. ಇಂಗ್ಲಿಷ್ ಅಕ್ಷರಗಳಲ್ಲಿ ಅಚ್ಚಾಗಿರುವ ಶಾಸನಗಳಲ್ಲಿ ಎರಡು ಕಡೆಗಳಲ್ಲೂ ತೊಂಡಬ್ಬೆ ಎಂದಿದೆ. ಬಹುಶಃ ಕನ್ನಡ ಅಕ್ಷರಗಳಲ್ಲಿರುವ ಸಂಗತಿಗಳೇ ನಿಜ. ಏಕೆಂದರೆ, ಒಬ್ಬಳೇ ಮಗಳ ಸಾವಿನ ವಿಷಯವನ್ನು, ಅದೂ ಬೇರೆ ಬೇರೆ ರೀತಿಗಳಲ್ಲಿ, ಒಂದೇ ಕಡೆ, ಎರಡು ಶಾಸನಗಳಲ್ಲಿ ಹೇಳುವುದಾದರೂ ಏಕೆ? ಎಲ್ಲ ಶಾಸನಗಳನ್ನೂ ಪರಿಶೀಲಿಸಿ ಈ ತೀರ್ಮಾನಕ್ಕೆ ಬರಬಹುದು. ನಾಗತ್ತರನು ಮಡಿದಮೇಲೆ ಅವನ ನಚ್ಚಿನಾಳಾದ ಪೇಗೂರನೂ, ಮಗಳು ಕೊಂಡಬ್ಬೆಯೂ ವೇಳೆವಾಳಿಗಳಾಗಿ ತಕ್ಷಣವೇ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಇನ್ನೊಬ್ಬ ಮಗಳು ರೊಂಡಬ್ಬೆಯು ಸನ್ಯಸನ ವಿಧಿಯಿಂದ ಪ್ರಾಣವನ್ನು ಕಳೆದುಕೊಳ್ಳುತ್ತಾಳೆ. ನಾಗತ್ತರನ ಮಗನಿಗೆ ರಾಜನು 'ನಾಗತ್ತರ ಪಟ್ಟ'ವನ್ನು ಕಟ್ಟುತ್ತಾನೆ.

38 ವೇಳೆವಡಿಚರು ಅಗ್ನಿಪ್ರವೇಶ ಮಾಡುತ್ತಿದ್ದ ವಿಷಯವನ್ನು ಬಂಧುವರ್ಮ ಹೇಳಿದ್ದಾನೆ. "ಉರಿವ ಕೆಂಡಕ್ಕೆ ವಂದ ವೇಳೆವಡಿಚಂಗಂ...."—ಜೀವಸಂಬೋಧನೆ, (1.24.)

39 "ಮುನ್ನೆಗಬ್ದಿ ವೇಳೆವಡಿಚರುಮಿನ್ನಪ್ಪೊರುಮೀಗದುಳ್ಳೊರುಂ ಬಗೆವಡವರ್ ನಿನ್ನನ್ನರೆ ನಿನ್ನನ್ನರೆ ನಿನ್ನನ್ನರೆ ನಿನಗೆ ನೀನೆ ದೊರೆಯಯ್ ಸಂಬೂ" [IA. XX. p. 69, C. 900 A.D.]

ಕಾವ್ಯಾವಲೋಕನದ (ಪದ್ಯ. 317) ಈ ಪದ್ಯವೂ ವೇಳೆವಾಳಿಯ ಪ್ರಶಂಸೆ ಆಗಿದೆ—"ಕಾಯದೆ ಚಲಮಂ ಪಲರೂ। ಚೀಯೆನೆ ಪತಿ ಸಾಯೆ ಸಯ್ಯಲಂಜಿದನಾಯಂ। ನಾಯೆಂಬೆನಾಳ್ದನಂ ಕಾ। ದಾಯುತಿ ನಿಲೆ ಸತ್ತ ನಾಯನಾಂ ನಾಯೆಂಬೆಂ."

40 EC. V. Ag. 27, C. 915 A.D.

41 EC. V. Ag. 5, C. 915 A.D.

42 EC. III. TN. 91, C. 921 A.D. ಫ್ಲೀಟ್ ಅವರು ಈ ಶಾಸನದ ಕಾಲ ಸು. 840 ಎಂದು ಭಾವಿಸುತ್ತಾರೆ. (IA. VI. p. 41). ಅದು ಸರಿಯಾದರೆ ವೇಳೆವಾಳಿಗಳ ವಿಷಯ ಹೇಳುವ ಶಾಸನಗಳಲ್ಲಿ ಇದೇ ಅತ್ಯಂತ ಪ್ರಾಚೀನವಾಗುತ್ತದೆ.

43 ವಿ. ಎಸ್. ಅಗರವಾಲಾ : ಹರ್ಷಚರಿತ್—ಏಕ್ ಸಾಂಸ್ಕೃತಿಕ ಅಧ್ಯಯನ್, ಪು. 93.

ಪ್ರಭಾಕರವರ್ಧನನು ದೊಡ್ಡ ಕಾಯಿಲೆಗೆ ತುತ್ತಾಗಿ ಸಾವನ್ನು ಸಮೀಪಿಸಿದಾಗ ಆ ದುಃಖವನ್ನು ತಡೆಯಲಾರದೆ ಒಬ್ಬ ಕುಲಪುತ್ರನು ಅಗ್ನಿಪ್ರವೇಶವನ್ನು ಮಾಡಿ ಸತ್ತುಹೋಗುತ್ತಾನೆ.[44] ಆ ವಿಷಯವನ್ನು ಕೇಳಿದ ಹರ್ಷವರ್ಧನನು ಆಶ್ಚರ್ಯಗೊಂಡು ಆ ಕುಲಪುತ್ರನು ತನ್ನ ಸಾವಿನಿಂದ ಕುಲಪುತ್ರರ ಧರ್ಮವನ್ನು ಉಜ್ವಲಗೊಳಿಸಿದನೆಂದು ಉದ್ಗಾರವನ್ನು ತೆಗೆಯುತ್ತಾನೆ.[45] ಹರ್ಷಚರಿತದ ಕುಲಪುತ್ರನಿಗೂ, ಕನ್ನಡ ಶಾಸನಗಳ 'ಮನೆಮಗ'ನಿಗೂ ಇಷ್ಟು ಹತ್ತಿರದ ಸಂಬಂಧವಿದೆ. 'ಕೀಲ್ಗುಂಟೆ' ಯಾದ 'ಬೆಳವಡಿಚ' (=ವೇಳೆವಡಿಚ) ನೊಬ್ಬನ ವಿಷಯವು ಕ್ರಿ. ಶ. 930 ರ ಶಾಸನವೊಂದರಲ್ಲಿದೆ.[46] ಎಱೆಗಂಗಯ್ಯನಿಗೆ ಮಯ್ದಮ್ಮನು 'ಕೀಟಿಲ್ಗೊಂಟೆ'ಯಾಗಿ ಸತ್ತ ವಿಷಯವು ಮತ್ತೊಂದು ಶಾಸನದಲ್ಲಿದೆ.[47] ಸಾಂತರ ದೇವನ ಮಗ ಬೀರದೇವನು ಮಡಿದಾಗ ಪಡೆವಳ ಎಱೆಯಮ್ಮನು ರಾಯಸಾಂತರನು ತನಗೆ ಕೊಟ್ಟ 'ಬಡಗಗೊಡಲ್ಮ 3 ಸಿವನೆ'[48] ಯನ್ನು ಮಕ್ಕಳಿಗೆ ಜೀವನೋಪಾಯಕ್ಕಾಗಿ ಕೊಟ್ಟು ಮಡಿದ ವಿಷಯವು ಶಾಸನವೊಂದರಲ್ಲಿದೆ.[49] ಇದುವರೆಗೆ, ತಮ್ಮ ಪೋಷಕರಾದ ರಾಜರಿಗೆ ವೇಳೆಗೊಂಡ ವಿಷಯವನ್ನು ಪ್ರಸ್ತಾಪಿಸಿದ್ದಾಯಿತು. ತಮ್ಮನ್ನು ಪೋಷಿಸಿದ ಮಹಾರಾಣಿಯರಿಗೆ ಹಲವರು ವೇಳೆಗೊಂಡ ವಿಷಯವು ಹಲವಾರು ಶಾಸನಗಳಲ್ಲಿದೆ. ಪಟ್ಟದರಾಣಿ ಪದ್ಮಲದೇವಿಯು ಮಡಿದಾಗ ಇಬ್ಬರು ದಂಪತಿಗಳು ರಾಣಿಗೆ ವೇಳೆಗೊಂಡ ವಿಷಯವು ಶಾಸನವೊಂದರಲ್ಲಿದೆ.[50] ಅದರ ಮುಂದಿನ ಶಾಸನದಲ್ಲಿ ಉತ್ತಮ ಚೋಳಸೆಟ್ಟಿಯು ಬಾಲೆಯೊಬ್ಬಳ (ಬಹುಶಃ ಅವನ ಹೆಂಡತಿಯ) ತಲೆಯನ್ನು ಕಡಿಸಿ ತಾನೂ ಸತ್ತ ವಿಷಯವಿದೆ.[51] ವೇಳೆಗೊಂಡು ಮಡಿದ ದಂಪತಿಗಳು ಬಹುಶಃ ಇವರೇ ಇರಬಹುದು. ಪದ್ಮಲದೇವಿಗೆ ಆ ದಂಪತಿಗಳಿಬ್ಬರೂ ವೇಳೆಗೊಂಡಿದ್ದಿರಬೇಕು. ಉದಯಾದಿತ್ಯರಸರ ಮಗಳು ಏಚಲದೇವಿಯು ಮಡಿದಾಗ ಮಾದೆಯ ಎಂಬುವನು ವೇಳೆವಾಳಿಯಾದ ವಿಷಯ ಶಾಸನವೊಂದರಲ್ಲಿದೆ.[52] ಶ್ರೀನಾರಸಿಂಗದೇವನ ಪಟ್ಟದ ರಾಣಿ ಬಮ್ಮಲದೇವಿಗೆ ಚಾಕಗೌಡನು ಜೋಳವಾಳಿ ಮತ್ತು ವೇಳೆವಾಳಿತನಗಳಿಗಾಗಿ ಸುರಲೋಕಪ್ರಾಪ್ತನಾದ ವಿಷಯವನ್ನು ಶಾಸನವೊಂದು ಹೇಳುತ್ತದೆ.[53] ಮಹಾಮಂಡಲೇಶ್ವರ ಸೋವಿದೇವನ ರಾಣಿ ಲಚ್ಚಲದೇವಿಯು ಮಡಿದಾಗ 'ಮುನ್ನುಡಿದ ಭಾಷೆಯಂತೆ' ಬೊಪ್ಪಣನು ಮಡಿಯುತ್ತಾನೆ. ಅವನನ್ನು 'ವೇಳೆವಾಳಿ' ಎಂದು ಶಾಸನವು ಕರೆದಿದೆ.[54] ಆ ವೀರಗಲ್ಲಿನ ಮೇಲಿನ ಚಿತ್ರಗಳು ಗಮನಾರ್ಹವಾದುವು. ಕೆಳಗಿನ ಚಿತ್ರದಲ್ಲಿ ಲಚ್ಚಲದೇವಿಯು ಪೀಠದ ಮೇಲೆ ಕುಳಿತುಕೊಂಡು ಬೊಪ್ಪಣನಿಗೆ ವಸ್ತ್ರವೊಂದನ್ನು ಕೊಡುತ್ತಿದ್ದಾಳೆ. ಬೊಪ್ಪಣನು ಅವಳಿಂದ ಅದನ್ನು ಬಾಗಿದ ಭಕ್ತಿಯಿಂದ ಸ್ವೀಕರಿಸುತ್ತಿದ್ದಾನೆ. ಅವನ ಹಿಂದೆ ನಾಲ್ವರು

---

[44] ಅದೇ, ಪು. 93, 95–6.

[45] ಅದೇ, ಪು. 110.

[46] EC. XI. Dg. 119, 930 A.D.

[47] SII. IX. i. 40, 977 A.D. ಇನ್ನೂ ಹಲವು ವೇಳೆವಡಿಚರ ವಿಷಯ ಈ ಶಾಸನಗಳಲ್ಲಿದೆ : EC. V. Mj. 55, C. 1035 A.D.; SII. IX. i. 35, C. 970 A.D.; MAR (1939). P. 176, C. 1050 A.D., MAR (1943). p. 60, C. 1050 A.D.; SII. VII. 258, 1118 A.D.; MAR (1932) p. 190; 1124 A.D.; EC. VII. Hl. 47, 1130 A.D.

[48] 'ಸಿವನೆ' ಎಂಬುದು ಭೂಮಿಯ ಪ್ರಮಾಣವನ್ನು ಸೂಚಿಸುವ ಪದ.

[49] EC. VIII. Sa. 80, 1096 A.D.

[50] EC. IX. Cg. 43, 1077 A.D.

[51] EC. IX. Cg. 44, 1077 A.D.

[52] EC. VI. Cm. 70, C. 1117 A.D.

[53] MAR (1936). p. 88, C. 1150 A.D.

[54] EC. VII. Sk. 249, 1185 A.D.

ಅಷ್ಟೇ ಭಕ್ತಿಯಿಂದ ಕೈಮುಗಿದು ನಿಂತಿದ್ದಾರೆ. ಇದು ಬಹುಶಃ ಬೊಪ್ಪಣನು ತಾನು ವೇಳೆವಾಳಿಯಾಗು ವುದಾಗಿ ಪ್ರತಿಜ್ಞೆಯನ್ನು ಸ್ವೀಕರಿಸಿದ ಸಂದರ್ಭವನ್ನು ಸೂಚಿಸುವ ಚಿತ್ರವಿರಬೇಕು ಅಥವಾ ಲಚ್ಚಲದೇವಿಯು ಬೊಪ್ಪಣನಿಗೆ ಮಾಡುತ್ತಿದ್ದ ಉಪಕಾರದ ಪ್ರತೀಕವಾಗಿದ್ದರೂ ಇರಬಹುದು. ಮೊದಲನೆಯ ಊಹೆಯೇ ನಿಜವೆಂದು ಕಾಣುತ್ತದೆ. ಅದರ ಮೇಲಿನ ಚಿತ್ರದಲ್ಲಿ ಪದ್ಮಾಸನಭಂಗಿಯಲ್ಲಿ ಕುಳಿತಿರುವ ಬೊಪ್ಪಣನ ತಲೆಯನ್ನು ಕತ್ತರಿಸುತ್ತಿದ್ದಾರೆ. ಅದರ ಮೇಲಿನ ಚಿತ್ರದಲ್ಲಿ ದೇವತಾಸ್ತ್ರೀಯರು ಅವನನ್ನು ಕೈಲಾಸಕ್ಕೆ ಕರೆ ದೊಯ್ಯುತ್ತಿದ್ದಾರೆ.[55] ಕೆಲವು ಸಾರಿ ಪಡೆವಳರಂತಹ ಅಧಿಕಾರಿಗಳ ಪತ್ನಿಯರಿಗೂ ವೇಳೆಗೊಳ್ಳುತ್ತಿದ್ದುದುಂಟು.[56]

ಸಾಮಾನ್ಯವಾಗಿ ವೇಳೆವಾಳಿಗಳು ಕಿಚ್ಚನ್ನು ಪ್ರವೇಶಿಸಿಯೋ, ಕತ್ತಿಯಿಂದ ಇರಿದುಕೊಂಡೋ ಮಡಿದ ವಿಷಯವನ್ನು ಮೇಲೆ ನೋಡಿದೆವು. ಆದರೆ ಒಂದು ಅತಿ ವಿಚಿತ್ರವಾದ ಸಾವಿನ ಪರಿಯನ್ನು ನೋಡುತ್ತೇವೆ, ಸು. 1070 ರ ಶಾಸನವೊಂದರಲ್ಲಿ. ಸಾಂತರದೇವನು ಸ್ವರ್ಗಸ್ಥನಾದಾಗ ಪೊರವಳೆಯ ಗಾವುಂಡ ಎಂಬಾ ತನು ಅದಕ್ಕೆ ಮುನ್ನ ಮೂರುದಿನಗಳು ಬೆನ್ನ ಮೇಲಿನ ಚರ್ಮವನ್ನು ತೆಗೆದುಕೊಂಡು ನೋವನ್ನು ಅನುಭವಿಸಿ ಸಾಂತರನ ಸಾವಿನ ನಂತರ ಮಡಿಯುತ್ತಾನೆ.[57]

ಹೊಯ್ಸಳರ ಕಾಲದಲ್ಲಿ 'ಗರುಡ' ಎಂಬ ಪದವು ಪಾರಿಭಾಷಿಕ ಪದವಾಗಿ ಪರಿಣಮಿಸಿ, ವಿಶಿಷ್ಟ ರೀತಿಯಲ್ಲಿ ಸಾವನ್ನಪ್ಪಿದ ವ್ಯಕ್ತಿಯನ್ನು ಸೂಚಿಸಲು ಆರಂಭವಾದಂತೆ ತೋರುತ್ತದೆ. ಗರುಡನು ಮಹಾ ಶೌರ್ಯಶಾಲಿ, ವಿಷ್ಣುವಿನ ಆಪ್ತಸೇವಕ, ಮತ್ತು ವಾಹನ. ರಾಜನ ಸೇವಕರಿಗೆ ಶೌರ್ಯ ಮತ್ತು ಪತಿಭಕ್ತಿಗಳಲ್ಲಿ ಗರುಡನಿಗಿಂತ ಉತ್ತಮ ಆದರ್ಶವಿಲ್ಲ. ಶಾಸನಗಳಲ್ಲಿ ಮೊದಲಿನಿಂದಲೂ ಗರುಡನನ್ನು ಕುರಿತು ಪ್ರಶಂಸೆಯಿದೆ. ಒಡೆಯನ ವಿಶ್ವಾಸವನ್ನು ಗಳಿಸಿದವರನ್ನು ಗರುಡ ಎಂದು ಹೊಗಳುವುದುಂಟು. ಕ್ರಿ.ಶ. 1040 ರ ಶಾಸನದಲ್ಲಿ[58] ಜಗದೇಕಮಲ್ಲನ ಸಾಮಂತ ಎಱೆಯಮ್ಮರಸನನ್ನು 'ಸಿಂಗನ ಗರುಡಂ' ಎಂದಿದೆ. ಘಟ್ಟಿಯರಸನನ್ನು 'ಸಾಮಂತ ಗರುಡಂ' ಎಂದು ಶಾಸನವೊಂದು ಕರೆದಿದೆ.[59] ಸಾಮಂತ ಲಕ್ಷ್ಮರಸನನ್ನು 'ಸಂಗ್ರಾಮ ಗರುಡ' ಎಂದು ಒಂದೆಡೆ ಕರೆದಿದೆ.[60] ಆಚುಗಿದೇವ ಎಂಬುವನು ರಿಪುಬಳವೆಂಬ ಸರ್ಪಗಳಿಗೆ ಗರುಡನಂತಿದ್ದನು.[61] ಮಹಾ ಸಾಮಂತ ಉದಯಾದಿತ್ಯನನ್ನು 'ನೊಳಂಬನ ಗರುಡ'ನೆಂದು ಕರೆದಿದೆ.[62] ಏಚಣ ದಂಡನಾಯಕನು ತನ್ನ ರಾಜನಿಗೆ ಪತಿಭಕ್ತಿಯಲ್ಲಿ ವಿಷ್ಣುವಿಗೆ ಗರುಡನಿದ್ದಂತೆ ಇದ್ದನು ಎಂದು ಶಾಸನವೊಂದು ಸ್ಪಷ್ಟವಾಗಿ ಹೇಳುತ್ತದೆ.[63] ಹೀಗೆ ಮೊದಮೊದಲು ಗರುಡ ಎಂಬುದು ಶೌರ್ಯ, ಪತಿಭಕ್ತಿಗಳಿಗೆ ಆದರ್ಶವಾಗಿದ್ದು, ಮುಂದೆ ಆದರ್ಶವ್ಯಕ್ತಿಗಳ ವಿಶೇಷಣವಾಗಿ, ಹೊಯ್ಸಳ ದೊರೆಗಳ ಕಾಲದಲ್ಲಿ ರಾಜನ ಸಾವಿನ ಬಳಿಕ ಆತ್ಮಹತ್ಯೆ ಯನ್ನು ಮಾಡಿಕೊಂಡ ವ್ಯಕ್ತಿಯನ್ನು ಸೂಚಿಸಲಾರಂಭವಾಯಿತು. ಗರುಡರ ಸಂಪ್ರದಾಯವು ತನ್ನ ತುತ್ತ

---

[55] EC. VII. (opposite to page 9, Introduction).

[56] EC. VI. Cm. 66, 1089 A.D.

[57] EC. VII. Sk. 62, C. 1070 A.D. "ಪೊರವಳೆಯ ಗಾವುಂಡ ಮುನ್ನ ಮೂಱು ದೆವಸಮೆನೆ ಬೆನ್ನ ಬಾರನೆತ್ತಿಕೊಂಡು ತೆಱೆಯೆ ಸಾಂತರ.........ತ ಪರೋಕ್ಷದಲೆ ಆತನ ಪಿಂಬಡಿಗೆ."

(ಹೋಲಿಸಿ ನೋಡಿ, ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 28 : "ನಾಚಿಹೋದರೆ ಮನೆಯ ಗಂಡ ಬೆನ್ನ ಬಾರನೆತ್ತಿದ"). 'ಬೆನ್ನಬಾರನೆತ್ತು' ಎಂದರೆ ಬೆನ್ನಿನ ಚರ್ಮವನ್ನು ಸುಲಿ ಎಂದರ್ಥ.

[58] IA. XIX. p. 164, 1040 A.D.

[59] SII. IX. i. 115, 1054 A.D.

[60] BKI. I. i. 113, 1074 A.D.

[61] BKI. I. ii. 129, 1083 A.D.

[62] EC. XI. Cd. 34, 1123 A.D.

[63] EC. IV. Ng. 28, C. 1125 A.D.

ತುದಿಯನ್ನು ಮುಟ್ಟಿದ್ದು ಹದಿಮೂರನೆಯ ಶತಮಾನದಲ್ಲಿ ಈ ಹೆಸರಿನ ಸಂಪ್ರದಾಯದ ಹುಟ್ಟು ಬೆಳವಣಿಗೆಯ ಇತಿಹಾಸವು ನಮ್ಮ ಅಧ್ಯಯನದ ಅವಧಿಯನ್ನು ಮೀರಿರುವುದರಿಂದ ಆ ಸಂಪ್ರದಾಯದ ವಿಸ್ತೃತ ಚಿತ್ರವು ಬಂದಿರುವ ಒಂದೆರಡು ಶಾಸನಗಳಿಂದ ಕೆಲವು ಅಂಶಗಳನ್ನು ಮಾತ್ರ ಕೆಳಗೆ ಕೊಡುತ್ತೇವೆ.

ತನ್ನನ್ನು ಸಾಕಿ ಸಲಹಿದ ಒಡೆಯನಿಗೆ ಗರುಡನಾಗಬಯಸತಕ್ಕವನು ತನ್ನ ಒಡೆಯನ ಮುಂದೆ ಭಾಷೆಯನ್ನು ಕೊಟ್ಟು[64] ಎಡಗಾಲಿಗೆ 'ಗಂಡಪೆಂಡೇರ'ವನ್ನು ಕಟ್ಟಿಕೊಳ್ಳುತ್ತಿದ್ದನು.[65] ಚಿನ್ನದ ಆ ಆಭರಣದ ವರ್ಣನೆಯು ಈ ರೀತಿ ಇದೆ. ಒಂದು ಚಿನ್ನದ ಎಳೆಗೆ ಮುತ್ತುಗಳನ್ನು ಜೋಡಿಸಿ ಮಧ್ಯೆ ಮಧ್ಯೆ ಸಣ್ಣ ಬೊಂಬೆಗಳನ್ನು ಸೇರಿಸಿರುತ್ತಿದ್ದರು. ಓಡಾಡುವಾಗ ಝುಣ ಝುಣ ಶಬ್ದವಾಗುತ್ತಿದ್ದಿತು. ಒಮ್ಮೊಮ್ಮೆ ಅವನ ಜೊತೆಯಲ್ಲಿ ಅವನ ಹೆಂಡತಿಯು ತನ್ನ ಗಂಡನಿಗೆ ಭಾಷೆಯನ್ನು ಕೊಟ್ಟು ಎಡಗಾಲಿಗೆ ತಾನೂ ಅಂತಹ ಆಭರಣವನ್ನು ಧರಿಸುತ್ತಿದ್ದಳು.[66] ಸು. 1220 ರಲ್ಲಿ ಕುವರಲಕ್ಷ್ಮನು ವೀರಬಲ್ಲಾಳನಿಗೆ ಗರುಡನಾಗಲು ಪ್ರತಿಜ್ಞೆಯನ್ನು ಕೈಗೊಂಡಾಗ ಕುವರಲಕ್ಷ್ಮನಿಗೆ ಅವನ ಹೆಂಡತಿಯೂ, ಅವನ ಒಂದು ಸಾವಿರ ವೀರರೂ ಗರುಡರಾಗಲು ತಾವೂ ಪ್ರತಿಜ್ಞೆಯನ್ನು ಕೈಗೊಳ್ಳುತ್ತಾರೆ. ವೀರಬಲ್ಲಾಳನ ಸಾವಿನ ನಂತರ ಕುವರ ಲಕ್ಷ್ಮನೂ, ಅವನ ಹೆಂಡತಿಯೂ ಪ್ರಾಣತ್ಯಾಗಮಾಡುತ್ತಾರೆ ; ಆಗ ಒಂದು ಸಾವಿರ ವೀರರೂ ಪ್ರಾಣವನ್ನು ತ್ಯಜಿಸುತ್ತಾರೆ. ಇವರನ್ನು ಶಾಸನವು 'ಲೆಂಕ'ರೆಂದು ಕರೆದಿದೆ. ಕ್ರಿ. ಶ. 1257 ರ ಶಾಸನದಲ್ಲಿಯೂ, ಕ್ರಿ. ಶ. 1292 ರ ಶಾಸನದಲ್ಲಿಯೂ ಬೇರೆ ಬೇರೆ ಹೊಯ್ಸಳ ದೊರೆಗಳು ಮಡಿದಾಗ ಅವರ ಜೊತೆಯಲ್ಲಿ ಅನೇಕ ಲೆಂಕರೂ, ಲೆಂಕಿಯರೂ 'ಗಜಮಸ್ತಕ'ದಲ್ಲಿ ಅನೇಕ ಬಾರಿ 'ಗರುಡನನಪ್ಪಿ' 'ಬಾಸೆಯಂ ಪೂರಯ್ಸಿದ' ಎಂದರೆ, ಮಡಿದ ವಿಷಯವಿದೆ.[67] ಗರುಡನ ಹೊಡೆತವನ್ನು ತಾಳಲಾರದೆ ಆದಿಶೇಷನು ಪಾತಾಳಕ್ಕೆ ಹೋದನು ; ಆದರೆ ಈ ಲೆಂಕರಾದರೋ ಭಯಂಕರನಾದ ಗರುಡನನ್ನು ಎದುರಿಸಿ, ಅವನನ್ನು ಅಪ್ಪಿಕೊಂಡು ತಮ್ಮ 'ಲೆಂಕವಾಳಿ'ತನವನ್ನು ತೋರಿದರು ಎಂದು ಶಾಸನವು ಬಣ್ಣಿಸುತ್ತದೆ.[68] ಈ ಶಾಸನಗಳಿರುವ ಕಂಬಗಳ ತುದಿಯಲ್ಲಿ ಗರುಡನ ಜೊತೆಯಲ್ಲಿ ಲೆಂಕನು ಹೋರಾಡುವ ಚಿತ್ರವಿದೆ.[69] ಕುವರಲಕ್ಷ್ಮನು ಪ್ರಾಣತ್ಯಾಗವನ್ನು ಮಾಡಿದುದನ್ನು ಹೇಳುವ ಶಾಸನದಲ್ಲಿ, ಅವನು ಪ್ರಾಣತ್ಯಾಗಮಾಡಿದ ಬಳಿಕ ಪತಿಭಕ್ತಿಯಲ್ಲಿ ಸಮಾನರಾದ ಅವನ ಮತ್ತು ಗರುಡನ ವಿಗ್ರಹಗಳು ಶೋಭಿಸಿದುವು ಎಂದು ಬಣ್ಣಿಸಿದೆ.[70] ಲೆಂಕರು ಆನೆಯ ಮೇಲೆ ಕುಳಿತು, ಗರುಡನೊಡನೆ ಸಾಹಸದಿಂದ ಹೋರಾಡಿ ಅವನನ್ನು ಅಪ್ಪಿ ಮಡಿದರು ಎಂದು ಶಾಸನಗಳು ನಿರೂಪಿಸುವ ಅಂಶವನ್ನು ಸಮರ್ಪಕವಾಗಿ ವಿವರಿಸುವುದು ಕಷ್ಟ.

---

64 EC. V. Bl. 112, C. 1220 A.D.—"ಆತಂ ಪತಿಭಕ್ತಿ ಸಮನ್ವಿತಂ ಬಲ್ಲಾಳ ಭೂಮಿಪಾಲಂಗೆ ಜಗತ್ಪೂತ ಚರಿತ್ರಂ ಕೊಟ್ಟಂ ವೀತಭಯಂ ಭಾಷೆಯಂ ಪ್ರತಾಪವಿನೂತಂ." ಬಲ್ಲಾಳನಿಗೆ ಭಾಷೆಯನ್ನು ಕೊಟ್ಟವನು ಕುವರಲಕ್ಷ್ಮ.

65 ಅದೇ.

66 ಅದೇ."....ಬಲ್ಲಾಳ ಭೂಪೋತ್ತಮಪ್ರಿಯಸುತಂಗೆ ಕುಮಾರಲಕ್ಷ್ಮ ರಥಿನೀನಾಥಂಗೆ ಕೊಟ್ಟಳ್ ಮನಃಪ್ರಿಯೆಯೀ ಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗಳ್ವನ್ನೆಗಂ."

67 EC. IV. Kr. 9, 1257 A.D. ; Kp. 10, 1292 A.D.

68 EC. IV. Kr. 9, 1257 A.D. "ಗರುಡನ ಹೊಯ್ಲ್ಗೆ ಮೆಯ್ಯಿಗಿದು ಸುರ್ಕಿ ಸಹಸ್ರಫಣಾಧರಂ ವಸುಂಧರೆಯಡಿಗಳ್ದು ಹೋದನವನಂನನೆ ಕಂನೆಯ ನಾಯಕಂ ಭಯಂಕರ ಗರುಡಂಗೆ ಮಾರ್ಮಲೆದು ಹೊಯ್ದುಮರ್ದಪ್ಪಿ ನಿಮಿರ್ಚಿ ತೋಱಿದಂ ಬಿರುದರ ಗೋವನುರ್ವರೆಗೆ ಸೋಮನೃಪಾಳನ ಲೆಂಕವಾಳಿಯಂ."

69 MAR (1914-15), p. 18.

70 EC. V. Bl. 112, C. 1220 A.D.—"ದೊರೆ ಪತಿಭಕ್ತಿಗೆ ತನ್ನೊಳ್ ಗರುಡಂ ಗರುಡಂಗೆ ತಾನೆ ದೊರೆ ಪೆಱರಾರುಂ ದೊರೆಯಲ್ಲರೆಂಬ ತೆಱದಿಂ ದೊರೆಯಾದುವು ತಂನ ಗರುಡನೆಸೆವಾಕೃತಿಗಳ್."

ಮೇಲೆ ಉದ್ಧರಿಸಿದ ಶಾಸನದಲ್ಲಿ[70.1], ಪ್ರಾಣತ್ಯಾಗವನ್ನು ಮಾಡಿದ ಲೆಂಕರು 'ಅಸ್ವಯಾಗತ ಲೆಂಕವಾಳಿ'ಯರೆಂದು ಬಣ್ಣಿಸುವುದನ್ನು ನೋಡಿದರೆ ಅವರು ರಾಜವಂಶಕ್ಕೆ ವಿಧೇಯರಾಗಿದ್ದುಕೊಂಡು ರಾಜರು ಮಡಿದಾಗಲೆಲ್ಲಾ ಪ್ರಾಣವನ್ನು ಬಿಡುತ್ತಿದ್ದಂತೆ ಕಾಣುತ್ತದೆ. ಲೆಂಕವಾಳಿತನವನ್ನು ಮೆರೆಯುವುದು ಬಹುಶಃ ಅವರ ವಂಶದ ಕರ್ತವ್ಯವಾಗಿದ್ದಿತು. ಕುವರಲಕ್ಷ್ಮನ ಪ್ರಾಣತ್ಯಾಗವನ್ನು ಹೇಳುವ ಶಾಸನದಲ್ಲಿ 'ವೇಳೆ' ಎಂಬ ಮಾತು ಬಂದಿರುವುದರಿಂದಲೂ,[71] ವೇಳೆವಾಳಿತನವೂ ಲೆಂಕವಾಳಿತನವೂ ಸ್ಥೂಲವಾಗಿ ಒಂದೇ ಎಂದು ಭಾವಿಸ ಬಹುದು. ಲೆಂಕರ ವಿಷಯವನ್ನು ಹಿಂದಿನ ಅಧ್ಯಾಯವೊಂದರಲ್ಲಿ ಚರ್ಚಿಸಲಾಗಿದೆ. 'ಲೆಂಕ' (=ಶೂರ) ಎಂಬ ಮಾತು ಹಿಂದೆ ಬಳಕೆಯಲ್ಲಿದ್ದು, 'ಲೆಂಕವಾಳಿ' ಎಂಬ ಉಕ್ತಿಯು ಹನ್ನೆರಡನೆಯ ಶತಮಾನದಿಂದ ಈಚೆಗೆ ಹೆಚ್ಚು ಬಳಕೆಗೆ ಬಂದಂತೆ ಕಾಣುತ್ತದೆ. 13ನೇ ಶತಮಾನದಲ್ಲಿದ್ದ ಜನ್ನನು ತನ್ನ ಅನಂತನಾಥ ಪುರಾಣದಲ್ಲಿ ಲೆಂಕರು ತಮ್ಮ ತಲೆಗಳನ್ನು ಬಲಿಯಾಗಿ ಕೊಡುತ್ತಿದ್ದ ವಿಷಯವನ್ನು ಹೇಳಿದ್ದಾನೆ. ತಮ್ಮ ಒಡೆಯನು ಮಡಿದಕೂಡಲೆ ಅವರು 'ತಲೆಗೆ ಮುಂದಲೆಯಾಗಿ' ಸಿಡಿದಲೆಯನ್ನು ಕೊಡುತ್ತಿದ್ದರು.[72] ಆಗ ವೀರವಾದ್ಯಗಳನ್ನೂ ಬಿರುದಿನ ಕಹಳೆಗಳನ್ನೂ ಬಾರಿಸುತ್ತಿದ್ದರು; ಮುತ್ತಿನ ಕೊಡೆಗಳನ್ನು ಎತ್ತಿಹಿಡಿಯುತ್ತಿದ್ದರು.[73] ಅವರ ಕೇರಿಕೇರಿಗಳಲ್ಲಿ 'ಗಾಹೆ' (=ವೀರಕಾವ್ಯ?)ಗಳನ್ನು ಹಾಡಿಸುತ್ತಿದ್ದರು.[74] ಲೆಂಕರೊಡನೆ ಸಹಗಮನಮಾಡಲು ಲೆಂಕಿಯರು ಸಿದ್ಧರಾಗುತ್ತಿದ್ದರು.[75]

ವೇಳೆವಾಳಿ ಪದ್ಧತಿಯು ಕರ್ನಾಟಕದಲ್ಲಲ್ಲದೆ ತಮಿಳು ನಾಡಲ್ಲಿಯೂ, ಆಂಧ್ರದಲ್ಲಿಯೂ ಪ್ರಚಾರದಲ್ಲಿದ್ದಿತು. ತಮಿಳು ರಾಜರ ಬಳಿಯಲ್ಲಿಯೂ ದೇವಸ್ಥಾನಗಳಲ್ಲಿಯೂ 'ವೇಳೈಕ್ಕಾರ'ರೂ, 'ವೇಳೈಕ್ಕಾರಿ'ಯರೂ ಇದ್ದರು.[76] ಮಧ್ಯಂದಿನ ಯುಗಗಳಲ್ಲಿ ಭಾರತದಲ್ಲಿ ಪ್ರವಾಸಮಾಡಿದ ಹಲವರು ಪ್ರವಾಸಿಗರು ವೇಳೆಗೊಳ್ಳುವ ಪದ್ಧತಿಯನ್ನು ಸೂಚಿಸಿ ಕೆಲವು ವಿವರಗಳನ್ನು ಕೊಟ್ಟಿದ್ದಾರೆ. ಅಬು ಜೈದ್ (Abu Zaid) ಎಂಬುವನು ಹೀಗೆ ಹೇಳಿದ್ದಾನೆ– "ಭಾರತದ ಕೆಲವು ರಾಜರು ತಾವು ಸಿಂಹಾಸನವನ್ನೇರಿದಾಗ ಅನ್ನವನ್ನು ಮಾಡಿಸಿ ಬಾಳೆಯೆಲೆಗಳ ಮೇಲೆ ತಮ್ಮ ಬಳಿಗೆ ತರಿಸುತ್ತಾರೆ. ರಾಜನು ತನಗೆ ಆಪ್ತರಾದ ಮುನ್ನೂರು ಅಥವಾ ನಾನೂರು ಜನರನ್ನು ತನ್ನ ಬಳಿಗೆ ಬರಮಾಡಿಕೊಳ್ಳುತ್ತಾನೆ. ಇದರಲ್ಲಿ ಬಲವಂತವೇನೂ ಇರುವುದಿಲ್ಲ. ತಾನು ಸ್ವಲ್ಪ ಅನ್ನವನ್ನು ತಿಂದಾದ ಮೇಲೆ ಅದನ್ನು ಆಪ್ತರಿಗೆ ಕೊಡುತ್ತಾನೆ. ಅವರಲ್ಲಿ ಒಬ್ಬೊಬ್ಬನೂ ಬಂದು ಸ್ವಲ್ಪವನ್ನು ತೆಗೆದುಕೊಂಡು ತಿನ್ನುತ್ತಾನೆ. ರಾಜನು ಸತ್ತರೆ ಅಥವಾ ಯುದ್ಧದಲ್ಲಿ ಮಡಿದರೆ ಮೇಲೆ ಹೇಳಿದಂತೆ ಅನ್ನವನ್ನು ತಿಂದವರೆಲ್ಲರೂ ರಾಜನು ಸತ್ತ ದಿನವೇ ಚಿತೆಯನ್ನು ಏರಿ ಸಾಯಲೇಬೇಕು. ರಾಜನು ಸತ್ತೊಡನೆ ಅವನ ಆಪ್ತರೆಲ್ಲರೂ ತಡವಿಲ್ಲದೆ ಮಡಿಯಲೇಬೇಕು. ಈ ಋಣವು ಎಷ್ಟು ನಿಯಮಬದ್ಧವಾದುದೆಂದರೆ ರಾಜನ ಆಪ್ತರ ದೇಹವಾಗಲಿ, ಅದರ ಕುರುಹಾಗಲಿ ಏನೂ ಉಳಿಯಕೂಡದು."[77]

---

70.1 EC. IV. Kr. 9, 1257 A.D.

71 EC. V. Bl. 112, C. 1220 A.D. "ತೊೞ್ದಾಳ್ದನೊಡನೆ ಸಾಯದೆ ಪೆಱಗುಳಿದಂ ತೊೞ್ದು ಸತ್ತವನ ವೇಳೆ ದಲಾವೞಿವೆವಡನೆಂಬ ಗಂಡರೆ...."

72 ಅನಂತನಾಥ ಪುರಾಣ, 11.74, ವ.

73 ಅದೇ.

74 ಅದೇ, 12.11.

75 ಅದೇ, 11.74, ವ.

76 N. Venkataramanayya : "Jōḷavāḷi, Vēḷavāḷi and Leṅkavāḷi" [Journal of Oriental Research, XIV, part ii, pp. 97–111, 108].

77 K. A. Nilakantha Shastri : Foreign Notices, p. 128 (quoted by Dr. N. Venkataramanayya in his article mentioned above).

Book of Marvels of India ಎಂಬ ಗ್ರಂಥದಲ್ಲಿ[78] ವೇಳೆಕಾರರ ವ್ರತದೀಕ್ಷೆ ಮತ್ತು ಕರ್ತವ್ಯಗಳನ್ನು ಕುರಿತು ಹೆಚ್ಚಿನ ವಿವರಗಳಿವೆ–"ಆಪ್ತರಾದವರು ರಾಜನೊಡನೆ ಅನ್ನವನ್ನು ತಿಂದಾದ ಮೇಲೆ ಅವನು ತನ್ನ ಸ್ವಹಸ್ತದಿಂದ ವೀಳೆಯವನ್ನು ಕೊಡುತ್ತಾನೆ. ಅವರಲ್ಲಿ ಪ್ರತಿಯೊಬ್ಬನೂ ತನ್ನ ಕಿರುಬೆರಳನ್ನು ಕತ್ತರಿಸಿ[79] ರಾಜನ ಮುಂದಿಡುತ್ತಾನೆ. ಅಲ್ಲಿಂದ ಮುಂದೆ ಅವರೆಲ್ಲರೂ ಅವನ ಸಹವರ್ತಿಗಳು. ಅವನು ತಿಂದದ್ದನ್ನು ತಿನ್ನುತ್ತಾರೆ, ಕುಡಿದದ್ದನ್ನು ಕುಡಿಯುತ್ತಾರೆ. ಅವನ ಆಹಾರವನ್ನು ಪರೀಕ್ಷಿಸುತ್ತಾರೆ. ಅವನಿಗೆ ಸಂಬಂಧಿಸಿದ ಎಲ್ಲದರ ಮೇಲ್ವಿಚಾರಣೆಯೂ ಅವರದು. ಅವನು ಭೋಗಿಸಬೇಕಾದ ಸ್ತ್ರೀಯನ್ನು ಪರೀಕ್ಷಿಸುತ್ತಾರೆ. ಅವರು ಪರಿಶೀಲಿಸದ ಜಮಖಾನೆಯನ್ನು ರಾಜನ ನಡಗೆಗೆ ಹಾಸುವಂತಿಲ್ಲ. ರಾಜನಿಗೆ ಕುಡಿಯಲು ತಂದ ಪಾನೀಯವನ್ನೂ ತಿನ್ನಲು ತಂದ ಆಹಾರವನ್ನೂ, ಅದನ್ನು ತಂದ ವ್ಯಕ್ತಿಯು ಮೊದಲು ರುಚಿನೋಡಬೇಕೆಂದು ಒತ್ತಾಯಪಡಿಸುತ್ತಾರೆ. ರಾಜನಿಗೆ ಒದಗಬಹುದಾದ ಅಪಾಯಗಳ ವಿಷಯದಲ್ಲಿ ಹೀಗೆ ನಡೆದುಕೊಳ್ಳುತ್ತಾರೆ. ಅವನು ಸತ್ತರೆ ಅವರು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾರೆ. ಬೆಂಕಿಯಲ್ಲಿ ಸುಟ್ಟುಹೋದರೆ ತಾವೂ ಬೆಂಕಿಯಲ್ಲಿ ಬೀಳುತ್ತಾರೆ. ಅವನು ಕಾಯಿಲೆ ಬಿದ್ದರೆ ಅವನ ಸಂಕಟಕ್ಕೆ ಸಮಾನವಾದ ಸಂಕಟವನ್ನನುಭವಿಸಲು ತಮ್ಮನ್ನು ತಾವು ಚಿತ್ರಹಿಂಸೆಗೆ ಗುರಿಮಾಡಿಕೊಳ್ಳುತ್ತಾರೆ. ಯುದ್ಧವು ನಡೆಯುವಾಗ ಅವರು ಅವನ ಸುತ್ತಮುತ್ತ ಇದ್ದು ಅವನನ್ನು ಎಡೆಬಿಡದೆ ಓಲೈಸುತ್ತಾರೆ. ಶ್ರೇಷ್ಠ ಮನೆತನದ ಸ್ಫುರದ್ರೂಪಿಗಳೂ ಶೂರರೂ ಬುದ್ಧಿವಂತರೂ ಆಗಿರುವವರನ್ನು ಮಾತ್ರ 'ಬಲೌದ್ಯೆರ್' –('ವೇಲೈಕ್ಕಾರರ್') ಆಗಿ ನೇಮಿಸಿಕೊಳ್ಳಲಾಗುತ್ತದೆ."

ಈ ಎಲ್ಲ ಅಂಶಗಳು ಕರ್ನಾಟಕದ ರಾಜರಿಗೂ ಅವರ ವೇಳೆವಾಳಿಗಳಿಗೂ ಎಷ್ಟರಮಟ್ಟಿಗೆ ಅನ್ವಯಿಸುತ್ತಿದ್ದುವೋ ತಿಳಿಯದು. ರಾಜರ ಕೈಯಿಂದ ಅನ್ನವನ್ನು ("ಜೋಳ") ಸ್ವೀಕರಿಸುವುದೇ 'ಜೋಳವಾಳಿ' ಎಂದು ಭಾವಿಸಬಹುದೆ? ಬಹುಶಃ ಈ ಸಂಪ್ರದಾಯವನ್ನು ಸೂಚಿಸುವ ಚಿತ್ರದಲ್ಲಿ ರಾಣಿಯು ತನಗೆ ವೇಳೆಗೊಂಡವನಿಗೆ ವಸ್ತ್ರವನ್ನು ಕೊಡುತ್ತಿರುವ ಚಿತ್ರವಿದೆ.[80] ವೇಳೆವಾಳಿಗಳು ರಾಜರ ಅಥವಾ ತಮ್ಮ ಒಡೆಯರ ಹತ್ತಿರ ವ್ರತವನ್ನು ಅಂಗೀಕರಿಸುತ್ತಿದ್ದರೆಂಬುದಂತೂ ಸ್ಪಷ್ಟ. ವಿದೇಶೀ ಪ್ರವಾಸಿಗಳು ಹೇಳಿರುವ ವೇಳೆವಾಳಿಗಳ ಕರ್ತವ್ಯಗಳೆಲ್ಲವನ್ನೂ ಕರ್ನಾಟಕದ ವೇಳೆವಾಳಿಗಳು ನಡಸುತ್ತಿದ್ದಿರಬಹುದು.

---

78 ಅದೇ.

79 ಈ ಪದ್ಧತಿಯು ಕರ್ನಾಟಕದಲ್ಲಿಯೂ ಇದ್ದಿತೆಂಬುದಕ್ಕೆ ಒಂದು ಶಾಸನಾಧಾರವಿದೆ. (EC. VII. Sk. 152, 1060 A.D.). ತುಳುವಚಂಡಿಗ ಎನ್ನುವವನು 'ಬೆರಲ್ಗೆ ವೆ[ೞ]ಳೆಯೆನೆಂದು' ಪ್ರತಿಜ್ಞೆ ಮಾಡುತ್ತಾನೆ (ಶಾಸನದಲ್ಲಿ ಇಬ್ಬರು ರಾಜರ ಹೆಸರಿರುವುದರಿಂದ ಅವರಲ್ಲಿ ಯಾರಿಗೆ ಅವನು ವೇಳೆಗೊಂಡನೆಂಬ ವಿಷಯವು ಮಾತ್ರ ಸ್ಪಷ್ಟವಾಗುವುದಿಲ್ಲ.) ಅವನಿಗೆ ಅವರಲ್ಲಿ ಒಬ್ಬ ರಾಜನು ಪಸಾಯಿತ ವೃತ್ತಿಯನ್ನು ದಯಪಾಲಿಸುತ್ತಾನೆ. ಆಗ ತುಳುವ ಚಂಡಿಗನು 'ಕೊಟ್ಟೆ ಬೆರಲಂ ಕಡಿ' ಯುತ್ತಾನೆ. ಈ ವಿಷಯವನ್ನು ನಿರೂಪಿಸಿದೊಡನೆಯೇ ಶಾಸನವು ಕ್ರಿ. ಶ. 1060 ರಲ್ಲಿ ತುಳುವ ಚಂಡಿಗನು ಪೆರಮಾಳು ದೇವಸ್ಥಾನದ ಭೇರುಂಡೇಶ್ವರ ಸ್ತಂಭವನ್ನೇರಿ ಕೆಳಗೆ ನಟ್ಟಿದ ಬಾಣಗಳ ಮೇಲೆ ಬಿದ್ದು ಪ್ರಾಣವನ್ನು ತ್ಯಜಿಸಿದ ವಿಷಯವನ್ನು ನಿರೂಪಿಸುತ್ತದೆ. (ಯಾವ ರಾಜನ ಸಾವಿನ ವಿಷಯವನ್ನೂ ಶಾಸನವು ಹೇಳುವುದಿಲ್ಲ. ಆದರೆ ಅವನ ಯಜಮಾನನಾಗಿದ ರಾಜನು ಮಡಿದಿರಬೇಕೆಂದು ಊಹಿಸಲು ಅಭ್ಯಂತರವಿಲ್ಲ). ಸ್ತಂಭದ ಮೇಲಿನಿಂದ ಚಂಡಿಗನು ಹಾರಿರುವುದು, ಅವನ ಬೆನ್ನಿನಿಂದ ಬಾಣಗಳು ಹೊರಟಿರುವುದು—ಈ ಚಿತ್ರವನ್ನು ಶಾಸನದ ಮೇಲೆ ಕೆತ್ತಲಾಗಿದೆ.

ಕಾಲಭೈರವನಿಗೆ ಬೆರಳುಗಳನ್ನು–ಕಿರು ಬೆರಳು ಮತ್ತು ಉಂಗುರದ ಬೆರಳು–ಕೊಡುವ ಸಂಪ್ರದಾಯವು ಕರ್ನಾಟಕದ ಒಂದು ವರ್ಗದ ಜನರಲ್ಲಿ ಈಚಿನವರೆಗೂ ಇದ್ದಿತು. ಬೆರಳು ಕೊಡುವುದಕ್ಕಾಗಿ ದೇವಸ್ಥಾನಗಳಲ್ಲಿ ಪ್ರತ್ಯೇಕ ವ್ಯವಸ್ಥೆಯಿರುತ್ತಿದ್ದಿತು. ಸರ್ಕಾರವು ಈ ಪದ್ಧತಿಯನ್ನು ನಿಷೇಧಿಸಿದೆ. ಈಗ ಕಾಲಭೈರವನ ಭಕ್ತರು ಬೆರಳಸುತ್ತ ಹೂವು ಕಟ್ಟಿಕೊಳ್ಳುತ್ತಾರೆ(T.V. Mahalingam : Administration and Social Life under Vijayanagar, p 346).

80 EC. VII. Introduction, p. 9–ಇದರ ಎದುರಿಗಿರುವ ಚಿತ್ರವನ್ನು ನೋಡಿ.

ತಮಿಳುನಾಡಿನ ದೇವಸ್ಥಾನಗಳಲ್ಲಿದ್ದ 'ವೇಲೈಕ್ಕಾರ'ರು ಆ ದೇವಸ್ಥಾನದ ದೇವರಿಗೆ ನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದರು. ಕನ್ನಡನಾಡಿನ ದೇವಸ್ಥಾನಗಳಲ್ಲಿ ಇಂತಹ ಪದ್ಧತಿಯಿದ್ದ ಹಾಗೆ ಕಂಡುಬರುವುದಿಲ್ಲ.[80.1]

ವೇಳೆವಾಟಿ ಮತ್ತು ಕೀಳ್ಗುಂಟೆ ಎಂಬ ಪದಗಳ ನಿಷ್ಪತ್ತಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. 'ವೇಳೆವಾಟಿ' ಎಂಬುದು ವೇಳೆಗೊಳ್ಳುವ ಧರ್ಮವನ್ನೂ, ವೇಳೆವಡಿಚ ಎಂಬುದು ವ್ಯಕ್ತಿಯನ್ನೂ ಸೂಚಿಸುತ್ತದೆ. 'ವೇಳೆವಾಟಿ'ಯು 'ವೇಳೆವಾಳಿ' ಎಂಬ ರೂಪದಲ್ಲಿ ಈಚಿನ ಶಾಸನಗಳಲ್ಲಿ ದೊರಕುತ್ತದೆ (ಶಾಸನಗಳಲ್ಲಿ ವಾಳಿವಾಳಿ, ವೆಳಿವಳಿ, ವೇಳಿವಾಳೆ ಎಂದು ಅಶುದ್ಧ ರೂಪಗಳಲ್ಲಿ ದೊರಕುತ್ತದೆ). 'ವೇಳೆವಡಿಚ' ಎನ್ನುವುದು ಬೆಳಾವಡಿಚ, ವೇಳೆವಡಿಯ ಎಂಬ ರೂಪಗಳಲ್ಲೂ ದೊರಕುತ್ತದೆ. 'ವೇಳೆವಾಟಿ' ಎಂಬ ಱಳಸಹಿತವಾದ ರೂಪವು ಶಾಸನಗಳಲ್ಲಿ ಎಲ್ಲಿಯೂ ದೊರಕದಿದ್ದರೂ ಮೂಲತಃ ಱಳವಿದ್ದಿರಬೇಕು (ನೋಡಿ : ಪಂಪಭಾರತದ 'ಜೋಳದ ಪಾಟಿ'). ವೇಳೆ+ಪಾಟಿ→ವೇಳೆವಾಟಿ (=ಕರ್ತವ್ಯ, ಕ್ರಮ, ಧರ್ಮ) ಎಂಬುದಕ್ಕೆ ತೆಲುಗಿನಲ್ಲಿ (ತೆ. ಪಾಡಿ) ಉಚಿತವಾದುದು, ಕರ್ತವ್ಯ ಎಂಬ ಅರ್ಥವಿದೆ. ಮಲೆಯಾಳದಲ್ಲಿ 'ಪಾಳಿ' ಎಂಬ ರೂಪವಿದೆ. ಇದು ಅಚ್ಚದ್ರಾವಿಡ ಪದ. ಇದೇ ಸಂಸ್ಕೃತ ಭಾಷೆಯಲ್ಲಿ 'ಪಾಲಿ' ಎಂದಾಗಿದೆ ಎಂದು ಡಾ|| ಬರೋ ಅಭಿಪ್ರಾಯಪಡುತ್ತಾರೆ.[81] ವೇಳೆವಡಿಚ ಎನ್ನುವುದರಲ್ಲಿನ 'ಡ' ಕಾರವು ತೆಲುಗಿನ 'ಪಾಡಿ'ಯಿಂದ ಬಂದಿರಬೇಕು. ವೇಳೆವಾಳಿಯ ವಿಷಯವನ್ನು ಹೇಳುವ ಅತ್ಯಂತ ಪ್ರಾಚೀನ ಶಾಸನವಾದ ಮೇವುಂಡಿಯ ಶಾಸನದಲ್ಲಿ[82] ಡಕಾರವಿರುವುದರಿಂದ ಮೂಲತಃ ಡಕಾರವೇ ಇದ್ದು ನಂತರ ಱಳವು ಬಂದಿತೋ ಏನೋ ! ವೇಳೆ ಎಂಬುದು ಬಹುಶಃ ಸಂಸ್ಕೃತದ ವೇಲಾ ಎಂಬುದರ ತದ್ಭವವಿರಬೇಕು.[83] ವೇಲಾ ಎಂದರೆ ಸಮುದ್ರದ ಅಂಚು, ಋತು, ಸಮಯ ಎಂಬರ್ಥದಲ್ಲಿ ವೇಳೆಯಾಗಿರಬೇಕು. ರಾಜನ ವೇಳೆ+ಪಾಟಿ ಎಂದರೆ ರಾಜನ ಸಾವಿನ ಸಮಯದಲ್ಲಿ ತನ್ನ ಕರ್ತವ್ಯವನ್ನು ನಡೆಯಿಸುವವನು ಎಂದರ್ಥ.[84] ವೇಳೆವಾಳಿಗಳನ್ನು ಪಾಂಡ್ಯರ ಕಾಲದಲ್ಲಿ 'ಆಪತ್ತುದವಿಗಳ್' ಎಂದು ಕರೆಯುತ್ತಿದ್ದರು.[85] ಇದನ್ನು ನೋಡಿದರೆ ವೇಳೆ<ವೇಲಾ (= ಸಮಯ, ಆಪತ್ತು) ಎಂದು ತೀರ್ಮಾನಿಸಬೇಕಾಗುತ್ತದೆ. ಮುಂದಿನ ಪದವು ಅಚ್ಚ ದ್ರಾವಿಡಪದ. 'ಕೀಳ್ಗುಂಟೆ'ಯ ನಿಷ್ಪತ್ತಿಯು ತೊಡಕಾದುದು. ಇದು 'ಕೀಳ್ಗುಂಡೆ',[86]

---

80.1 ವೀರಶೈವರು ತಾವು ದೇಹದ ಮೇಲೆ ಧರಿಸಿದ್ದ ಲಿಂಗವು ಆಕಸ್ಮಾತ್ ಕಳೆದುಹೋದರೆ ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕು ಎಂಬ ಪದ್ಧತಿ ಒಂದು ಕಾಲದಲ್ಲಿದ್ದಿತು. ರಾಜರಿಗೆ ವೇಳೆವಾಳಿಗಳಿಗೆ ಇದ್ದ ಸಂಬಂಧ ಲಿಂಗ ಮತ್ತು ಶರಣನಿಗುಂಟು. ಆದ್ದರಿಂದ ಮೇಲಿನ ಪದ್ಧತಿಗೆ ಮೂಲ ಪ್ರಚೋದನೆ ವೇಳೆವಾಳಿಗಳಿಂದ ಬಂದಿರಬಹುದೇ ? ಅಥವಾ ಅದು ಒಂದು ರೀತಿಯ ವೇಳೆವಾಳಿತನವೆಂದು ಭಾವಿಸಬಹುದೇ ? ಕೆಲವರು ವಚನಕಾರರು ಮೇಲಿನ ಪದ್ಧತಿಯನ್ನು ಖಂಡಿಸಿ, ಲಿಂಗ ಕಳೆದುಹೋದರೆ ಇನ್ನೊಂದನ್ನು ಧರಿಸಬಹುದೆಂದು ಹೇಳಿದ್ದಾರೆ.

81 T. Burrow : Dravidian Studies, VII (Bulletin of the School of Oriental and African Studies, XII, 1947).

82 BKI. I. i. 11, 865 A.D.

83 'ವೇಲಾ' ಎಂಬುದೂ ಕೂಡ ಮೂಲತಃ ದ್ರಾವಿಡದಿಂದ ಸಂಸ್ಕೃತಕ್ಕೆ ಹೋಗಿರಬೇಕೆಂದು ಡಾ|| ಬರೋ ಹೇಳುತ್ತಾರೆ. ತಮಿಳು–ವೇಲೈ, ಕನ್ನಡ–ಬೇಲಿ ಇತ್ಯಾದಿಗಳನ್ನು ನೋಡಬಹುದು. ಉತ್ತರಕನ್ನಡ ಜಿಲ್ಲೆಯ ಕನ್ನಡದಲ್ಲಿ 'ಬೇಲಿ' ಎಂದರೆ ಸಮುದ್ರದ ಅಂಚು ಎಂದರ್ಥ.

84 ಸಂಸ್ಕೃತ ನಿಘಂಟುಕಾರನಾದ ಕೇಶವನೂ, ಕನ್ನಡ ನಿಘಂಟುಕಾರನಾದ ಅಭಿನವ ಮಂಗರಾಜನೂ 'ವೇಲಾ' ಎಂಬ ಪದಕ್ಕೆ ಬೇರೆ ಅರ್ಥಗಳ ಜೊತೆಗೆ 'ವ್ಯವಸ್ಥಾ' ಎಂಬ ಅರ್ಥವನ್ನೂ ಕೊಡುವುದರಿಂದ ರಾಜನೊಡನೆ ಅವನ ಆಪ್ತರು ಮಾಡಿಕೊಳ್ಳುವ ವ್ಯವಸ್ಥೆಯಿಂದಾಗಿ ಅವರನ್ನು ವೇಳೆವಾಳಿಗಳೆಂದು ಕರೆಯಲಾಗುತ್ತದೆ–ಇದು ಡಾ|| ಎನ್. ವೆಂಕಟರಮಣಯ್ಯನವರ ಅಭಿಪ್ರಾಯ (ಅವರ ಲೇಖನ, ಪು. 100–2).

85 A History of South India, p. 307.

86 EC. III. Tn. 91, C. 921 A.D ; EC. XI. Dg. 119, 930 A.D.

'ಕೀೞ್ಗೂಂಟೆ'[87] ಎಂಬ ರೂಪಗಳಲ್ಲಿ ದೊರಕುತ್ತದೆ. 'ಕುಂಠೆ' ಎಂಬುದು ತೆಲುಗಿನ ಗುಂಡ (=ಸೇವಕ), ಮಲಯಾಳದ 'ಕುಂಡೆ' (=ಸೇವಕ)ಗೆ ಸಮಾನವೆಂದು ಭಾವಿಸಿ, 'ಕೀೞ್' ಎನ್ನುವುದಕ್ಕೆ 'ಹೊರಕ್ಕೆ ತೆಗೆ' ಎಂದು ಅರ್ಥಮಾಡಿ 'ಕೀೞ್ಗುಂಠೆಯಾದಂ' ಎನ್ನುವುದನ್ನು "(ಸಾವನ್ನು ತಂದ ಆಯುಧವನ್ನು) ಹೊರತೆಗೆದ ಸೇವಕನಾದವನು" ಎಂದು ಫ್ಲೀಟ್ ಅವರು ಅನುವಾದಿಸುತ್ತಾರೆ.[88] ಇವರ ಅನುವಾದದ ಪ್ರಕಾರ 'ಕೀೞ್ಗುಂಟೆ' ಎಂಬ ಪದವು ಸಾವನ್ನು ಸೂಚಿಸುವುದಿಲ್ಲ. ರೈಸ್ ಅವರ ಅನುವಾದವು ಇದಕ್ಕಿಂತ ಹೆಚ್ಚು ಸಮರ್ಪಕವಾಗಿದೆ. 'ಕೀೞ್' ಎಂಬುದು ಕೆಳಗೆ ಎಂಬುದನ್ನು ಸೂಚಿಸುತ್ತದೆ. 'ಕುಂಠೆ' ಎಂಬುದು ಈಗಿನ ಕುಣಿ (=ಗುಂಡಿ)ಯನ್ನು ಸೂಚಿಸುತ್ತದೆ. 'ಕೀೞ್ಗುಂಠೆಯಾದಂ' ಎಂದರೆ ತನ್ನ ಒಡೆಯನ ಚಿತೆಯ ಕೆಳಗೆ ಅಥವಾ ಸಮಾಧಿಯ ಕೆಳಗೆ ಹೂಳಲ್ಪಟ್ಟನು ಎಂದು ಅವರು ಅರ್ಥ ಮಾಡುತ್ತಾರೆ.[89] ಹೆಚ್ಚು ಸಮರ್ಪಕವಾದ ವಿವರಣೆಯು ಬರುವವರೆಗೆ ಇದನ್ನು ಒಪ್ಪಿಕೊಳ್ಳಬಹುದೆಂದು ಕಾಣುತ್ತದೆ.

## ಸಹಗಮನ

ಪ್ರಾಚೀನ ಜನಾಂಗಗಳು ಈ ಲೋಕದಂತಹ ಇನ್ನೊಂದು ಲೋಕವಿದೆಯೆಂದು ಬಹು ದೃಢವಾಗಿ ನಂಬಿದ್ದರು. ವ್ಯಕ್ತಿ ಮಡಿದಾಗ ಅವನು ಆ ಪರಲೋಕಕ್ಕೆ ಹೋಗುವನೆಂದೂ ಅಲ್ಲಿಯ ಅವನ ಭೋಗಕ್ಕೆ ಇಲ್ಲಿಂದ ಅವನಿಗಿಷ್ಟವಾದ ವಸ್ತುಗಳನ್ನು 'ಕಳುಹಿಸ'ಬೇಕೆಂದೂ[90] ಭಾವಿಸಿದ್ದರು. ಬಹುಶಃ ಸಹಗಮನ ಪದ್ಧತಿಗೆ ಇದೇ ಮೂಲವಿರಬಹುದು.[91] ಅಥವಾ ತಾನು ಸತ್ತಮೇಲೆ ತನ್ನ ಪ್ರೇಯಸಿಯು ಇನ್ನೊಬ್ಬನ ವಶಳಾಗುವ ಸಾಧ್ಯತೆಯನ್ನು ಕಲ್ಪಿಸಿಕೊಂಡ ಪುರುಷನ ಅಸೂಯೆಯೂ ಕಾರಣವಿರಬಹುದು. ಪತಿಯ ಜೊತೆಯಲ್ಲಿ ಅವನ ವಿಧವೆಯನ್ನೂ ಸುಡುವ ಪದ್ಧತಿಯು ಪ್ರಾಚೀನ ಭಾರತದಲ್ಲಿ ಮಾತ್ರವಲ್ಲ, ಪ್ರಾಚೀನ ಗ್ರೀಕ್, ಜರ್ಮನ್ ಮುಂತಾದ ಯೂರೋಪು ಮತ್ತು ಪಶ್ಚಿಮ ಏಷ್ಯಾ ಜನಾಂಗಗಳಲ್ಲಿಯೂ ಇದ್ದಿತು.[92] ಚೀನಾದಲ್ಲಿ ವಿಧವೆಯು ಮತ್ತೆ ವಿವಾಹವಾಗುವುದು ಪಾಪವೆಂದು ನಂಬಿದ್ದರು. ಗಂಡನ ಸಾವಿನ ನಂತರ ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಿದ್ದವರ ಗೌರವಾರ್ಥವಾಗಿ ಚಕ್ರವರ್ತಿಯು ತೋರಣಗಳನ್ನು ಕಟ್ಟಿಸುತ್ತಿದ್ದನು.[93] ವೈದಿಕ ಯುಗದಲ್ಲಿ ಸಹಗಮನ ಪದ್ಧತಿಯು ಆಚರಣೆಯಲ್ಲಿರಲಿಲ್ಲ. ಅಥರ್ವ ವೇದದ ಕಾಲದಲ್ಲಿ ವಿಧವೆಯು ಗಂಡನ ಶವದ ಪಕ್ಕದಲ್ಲಿ ಮಲಗಿಕೊಳ್ಳುತ್ತಿದ್ದಳು. ಅವಳನ್ನು ಉಳಿದವರು ಕೆಳಗಿಳಿದು ಬಾ ಎಂದು ಕರೆದು ತನ್ನ ಮಕ್ಕಳು

---

87 SII. IX. i. 40, 977 A.D.

88 EI. VI. p. 41.

89 EC. XI. Dg. 119 (ಶಾಸನದ ಇಂಗ್ಲಿಷ್ ಅನುವಾದವನ್ನು ನೋಡಿ).

90 ಉದಾಹರಣೆಗೆ ಪ್ರಾಚೀನ ಈಜಿಪ್ಟಿನಲ್ಲಿ ದೊರೆಯು ಮಡಿದಾಗ ಅವನಿಗೆ ಮುಂದಿನ ಜನ್ಮದಲ್ಲಿ ಉಪಯೋಗಕ್ಕೆ ಬರಲೆಂದು ಅವನಿಗೆ ಬೇಕಾದ ಆಯುಧಗಳು, ಆಭರಣಗಳು, ಆಹಾರಸಾಮಗ್ರಿಗಳು, ವಸ್ತುಗಳು-ಇತ್ಯಾದಿಗಳನ್ನೂ ಅವನೊಡನೆ ಹೂಳುತ್ತಿದ್ದರು [Zakaria Goneim : The Buried Pyramid, p. 9]. ನಮ್ಮ ದೇಶದಲ್ಲಿಯೂ ಪ್ರಾಚೀನ ಸಮಾಧಿಗಳನ್ನು ತೆರೆವಾಗ ಅಲ್ಲಿ ಹೂಳಿದ್ದ ವ್ಯಕ್ತಿಯ ಅಸ್ಥಿಪಂಜರದ ಜೊತೆಯಲ್ಲಿ ಅನೇಕ ಕುಡಿಕೆಗಳೂ, ಆಭರಣಗಳೂ ದೊರಕಿರುವುದನ್ನು ಇಲ್ಲಿ ನೆನೆಯಬಹುದು. ಸಿಥಿಯನ್ನರಲ್ಲಿ ರಾಜನು ಸತ್ತಾಗ ಅವನೊಡನೆ ಅವನ ಅಡಿಗೆಯವರನ್ನೂ ಆಳುಗಳನ್ನೂ ಕುದುರೆಗಳನ್ನೂ ಹೂಳುತ್ತಿದ್ದ ಪದ್ಧತಿಯನ್ನು ಹೆರೊಡೊಟಸ್ ಹೇಳುತ್ತಾನೆ.

(Encyclopaedia of Religion and Ethics, VI, p. 847)

91 A. S. Altekar : The Position of Women in Hindu Civilization, pp. 115–116.

92 Kane : History of Dharmaśāstra, II. i. p. 625.

93 Penzer : Suttee (Quoted by Edward Thompson in his "Suttee", p. 26).

ಮತ್ತು ಐಶ್ವರ್ಯದೊಡನೆ ಸುಖವಾಗಿ ಅವಳು ಬಾಳಲೆಂದು ಪ್ರಾರ್ಥನೆ ಮಾಡುತ್ತಿದ್ದರು.[94] ಬಹುಶಃ ವಿಧವೆಯನ್ನು ಅವಳ ಗಂಡನ ತಮ್ಮನಿಗೆ ಕೊಟ್ಟು ವಿವಾಹವನ್ನು ಮಾಡುತ್ತಿದ್ದರು.[95]

ಬ್ರಾಹ್ಮಣಗಳಲ್ಲಿಯೂ, ಗೃಹ್ಯಸೂತ್ರಗಳಲ್ಲಿಯೂ ಸಹಗಮನವನ್ನು ಹೆಸರಿಸಿಲ್ಲ.[96] ಯಜ್ಞಗಳಲ್ಲಿ ಪಶುವಧೆಯನ್ನು ವಿರೋಧಿಸಿದ ಬುದ್ಧನು ತನ್ನ ಕಾಲದಲ್ಲಿ ಸಹಗಮನ ಪದ್ಧತಿಯು ಇದ್ದಿದ್ದರೆ ಅದನ್ನೂ ಖಂಡಿತವಾಗಿ ವಿರೋಧಿಸುತ್ತಿದ್ದನು.[97] ಕ್ರಿ.ಪೂ. 400ರ ವರೆಗೆ ಅದು ಎಲ್ಲಿಯೂ ಕಾಣಿಸಿಕೊಂಡಿಲ್ಲ.[98] ಮಹಾಭಾರತದಲ್ಲಿ ಕೆಲವೆಡೆ ಸಹಗಮನ ಪದ್ಧತಿಯು ಕಾಣಿಸಿಕೊಂಡಿದ್ದರೂ (ಉದಾಹರಣೆಗೆ ಮಾದ್ರಿಯ ಸಹಗಮನ) ಯುದ್ಧದ ಕೊನೆಯಲ್ಲಿ ಎಷ್ಟೋ ಜನ ವಿಧವೆಯರು ಸಹಗಮನವನ್ನು ಮಾಡದೆ ಹಾಗೆಯೇ ಉಳಿಯುತ್ತಾರೆ. ಸಹಗಮನದ ಮೊದಲನೆಯ ಐತಿಹಾಸಿಕ ನಿದರ್ಶನವೆಂದರೆ ಕ್ರಿ. ಪೂ. 316ರಲ್ಲಿ ಗ್ರೀಕರೊಡನೆ ಹೋರಾಡಿ ಮಡಿದ ಕೆತ್ಯೂಸನ ಕಿರಿಯ ಹೆಂಡತಿಯ ಸಹಗಮನ. ಹಿರಿಯವಳು ಗರ್ಭಿಣಿಯಾಗಿದ್ದುದರಿಂದ ಅವಳಿಗೆ ಅಪ್ಪಣೆಯು ದೊರಕಲಿಲ್ಲ.[99] ಬಹುಶಃ ಕ್ರಿ. ಪೂ. 4ನೇ ಶತಮಾನಕ್ಕೆ ಸ್ವಲ್ಪ ಹಿಂದೆ ಆರಂಭವಾದ ಈ ಪದ್ಧತಿಗೆ ಅತ್ಯಂತ ಪ್ರಾಚೀನ ಸ್ಮೃತಿಕಾರರಾದ ಮನು ಮತ್ತು ಯಾಜ್ಞವಲ್ಕ್ಯರ ಒಪ್ಪಿಗೆಯು ದೊರಕಿಲ್ಲ. ವಿಧವೆಯು ತನ್ನ ಗಂಡನ ಸಾವಿನ ನಂತರವೂ ಬದುಕಿದ್ದು ಕಠಿಣ ವ್ರತಾಚರಣೆಗಳಲ್ಲಿ ಕಾಲವನ್ನು ಕಳೆಯಬೇಕೆಂದು ಮಾತ್ರ ಅವರು ವಿಧಿಸಿದ್ದಾರೆ.[100] ವಿಷ್ಣು ಬೃಹಸ್ಪತಿಗಳು ಮಾತ್ರ ಆಜೀವಪರ್ಯಂತ ಕಠಿಣ ತಪಸ್ಸು ಮತ್ತು ಸಹಗಮನ ಇವೆರಡರಲ್ಲಿ ವಿಧವೆಯು ಯಾವುದನ್ನಾದರೂ ಆರಿಸಿಕೊಳ್ಳಬಹುದು ಎಂದು ಹೇಳುತ್ತಾರೆ.[100.1]

ಕ್ರಿಸ್ತಶಕ ನಾಲ್ಕನೆಯ ಶತಮಾನದಿಂದ ಸಹಗಮನಪದ್ಧತಿಯು ಹೆಚ್ಚು ಪ್ರಚಾರಕ್ಕೆ ಬಂದಿತು. ಗಂಡನ ಸಾವಿನ ನಂತರ ಹೆಂಡತಿಯು ಅಗ್ನಿಪ್ರವೇಶವನ್ನು ಮಾಡಿದರೆ, ಅವಳೂ ಅವಳ ಗಂಡನೂ ಪಾಪಗಳಿಂದ ಮುಕ್ತರಾಗುವುದಲ್ಲದೆ ಮೂರುವರೆ ಕೋಟಿ ವರ್ಷ ಸ್ವರ್ಗದಲ್ಲಿ ಸುಖವಾಗಿರುತ್ತಾರೆ ಎಂದು ಹಾರೀತ ಮುಂತಾದವರು ಹೇಳಿದ್ದಾರೆ.[101] ಕವಿಗಳ ಪೈಕಿ ಕಾಳಿದಾಸನು ಸಹಗಮನವು ಸ್ತ್ರೀಗೆ ಸಹಜವಾದುದು ಎಂದು ಅಭಿಪ್ರಾಯಪಡುತ್ತಾನೆ.[102] ಆದರೆ ಬಾಣನು ತನ್ನ ಕಾದಂಬರಿಯಲ್ಲಿ ಅದನ್ನು ಅಷ್ಟೇ ಉಗ್ರವಾಗಿ ವಿರೋಧಿಸಿದ್ದಾನೆ.[103]

---

[94] Altekar : The Position of Women in Hindu Civilization, p. 118.

[95] Indra : The Status of Women in Ancient India, p. 116.

[96] Altekar : The Position of Women in Hindu Civilization, p. 118.

[97] ಅದೇ.

[98] ಅದೇ.

[99] S. K. Dixit : An Introduction to Archaeology, p. 84.

[100] Indra : The Status of Women in Ancient India, p. 117.

[100.1] ಅದೇ. ಆಜೀವಪರ್ಯಂತ ಕಠಿಣ ತಪಸ್ಸು ಮತ್ತು ಸಹಗಮನ– ಇವೆರಡರಲ್ಲಿ ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆಯು ಎರಡನೆಯದನ್ನು ಆರಿಸಿಕೊಂಡಳು; ಅತ್ತಿಮಬ್ಬೆಯು ಅನಿವಾರ್ಯವಾಗಿ ಮೊದಲನೆಯದನ್ನು ಆರಿಸಿಕೊಳ್ಳಬೇಕಾಯಿತು; ಬಹು ಕಠಿಣವಾದ ವ್ರತಾಚರಣೆಗಳಲ್ಲಿ ಕಾಲವನ್ನು ಕಳೆದಳು. ಸ್ಮೃತಿಕಾರರ ಅಭಿಪ್ರಾಯದೊಡನೆ ರನ್ನನ ಅಜಿತಪುರಾಣದ ಈ ಪದ್ಯದ ಭಾವವನ್ನು ಹೋಲಿಸಬಹುದು—'ಎರಡೆ ವಲಂ ಕುಲವಧುಗಾ। ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ। ಚರಣಂ ಮೇಣ್ ಶುಭಚರಿತದೆ। ಮರಣಂ ಮೇಣಳಿಪಿನಿಂದೆ ಬಾಳ್ವುದು ದೊರೆಯೇ॥' (ಅಜಿತಪುರಾಣ, 1.46).

[101] Altekar : The Position of Women in Hindu Civilization, p.126.

[102] ಕುಮಾರಸಂಭವ, IV. 33.

ಶಶಿನಾ ಸಹ ಯಾತಿ ಕೌಮುದೀ ಸಹ ಮೇಘೇನ ತಡಿತ್ ಪ್ರಲೀಯತೇ
ಪ್ರಮದಾಃ ಪತಿವರ್ತ್ಮಗಾ ಇತಿ ಪ್ರತಿಪನ್ನಂ ಹಿ ವಿಚೇತನೈರಪಿ॥

[103] ಕಾದಂಬರಿ (ನಿರ್ಣಯಸಾಗರ ಮುದ್ರಣ, 1948) ಪೂರ್ವಾರ್ಧ, ಪು. 364.

"ಯದೇತದನುಮರಣಂ ನಾಮ ತದತಿ ನಿಷ್ಫಲಂ ಅವಿದ್ವಜ್ಜನಾಚರಿತ ಏಷ ಮಾರ್ಗಃ"ಎಂದು ಮುಂತಾಗಿ ಮಹಾಶ್ವೇತೆಯ ಮುಂದೆ ಚಂದ್ರಾಪೀಡನು ಸಹಗಮನವನ್ನು ಖಂಡಿಸುತ್ತಾನೆ.

ಆದರೂ ಉತ್ತರಭಾರತದಲ್ಲಿ, ಅದರಲ್ಲೂ ವಿಶೇಷವಾಗಿ ಕಾಶ್ಮೀರದಲ್ಲಿ ಇದು ಅತ್ಯಂತ ಪ್ರಬಲವಾಯಿತೆಂದು ಕಲ್ಹಣನ ರಾಜತರಂಗಿಣಿಯಿಂದ ತಿಳಿದುಬರುತ್ತದೆ.[104]

ದಕ್ಷಿಣ ಭಾರತದಲ್ಲಿ ಕ್ರಿ.ಶ. 10ನೆಯ ಶತಮಾನದವರೆಗೆ ಸಹಗಮನಪದ್ಧತಿಯು ಹೆಚ್ಚು ಪ್ರಚಾರಕ್ಕೆ ಬರಲಿಲ್ಲ. ಹತ್ತನೇ ಶತಮಾನದ ಆರಂಭದಲ್ಲಿ ಪಶ್ಚಿಮ ಕರಾವಳಿಯಲ್ಲಿ ಪ್ರವಾಸಮಾಡಿದ ಅರಬ್ಬೀ ವರ್ತಕ ಸುಲೇಮಾನನು ಹೇಳುವಂತೆ, ಎಲ್ಲೋ ವಿರಳವಾಗಿ ಮಾತ್ರ ರಾಣಿಯರು ತಮ್ಮ ಗಂಡಂದಿರ ಚಿತೆಗಳನ್ನೇರುತ್ತಿದ್ದರು. ಅಲ್ಲಿಯೂ ಬಲವಂತವಿರುತ್ತಿರಲಿಲ್ಲ. ಏರುವುದು, ಬಿಡುವುದು ಅವರಿಷ್ಟವಾಗಿತ್ತು.[105] ಸುಮಾರು 900ರ ವರೆಗಿನ ಪಲ್ಲವ, ಚೋಳ, ಪಾಂಡ್ಯರಲ್ಲಿಯೂ ಈ ಸಂಪ್ರದಾಯದ ಚಿಹ್ನೆಗಳು ಕಂಡುಬಂದಿಲ್ಲ.[106]

ಕರ್ನಾಟಕದಲ್ಲಿ ಸಹಗಮನದ ಅತ್ಯಂತ ಪ್ರಾಚೀನ ಉಲ್ಲೇಖವೆಂದರೆ ಬಹುಶಃ ಕ್ರಿ. ಶ. ಸು. 400ರ ಸೊರಬ ತಾಲ್ಲೂಕಿನ ಶಾಸನ. ಕದಂಬ ವಂಶದ ರಾಣಿಯೊಬ್ಬಳು ರವಿವರ್ಮನೊಡನೆ–ಈತ ಆಕೆಯ ಗಂಡನಾಗಿರ ಬೇಕು–'ಮುಕ್ತ'ಳಾದಂತೆ ಆ ಶಾಸನವು ತಿಳಿಸುತ್ತದೆ.[107] "ಕರ್ಣಾಟಕದ ಅರಸುಮನೆತನಗಳ" ಕರ್ತೃಗಳು ರವಿವರ್ಮನ ಕಾಲವು ಕ್ರಿ. ಶ. 503ರಿಂದ ಕ್ರಿ.ಶ. 538 ಎಂದು ಅಭಿಪ್ರಾಯಪಡುವುದರಿಂದ[108] ಮೇಲಿನ ಶಾಸನವು ಆರನೆಯ ಶತಮಾನದ್ದೆಂದು ಭಾವಿಸಬೇಕಾಗುತ್ತದೆ. ಮುಂದೆ ಸುಮಾರು ಮೂರು, ನಾಲ್ಕು ಶತಮಾನ ಗಳಲ್ಲಿ ಎಲ್ಲಿಯೂ ಸಹಗಮನದ ವಿಷಯವು ಬರುವುದಿಲ್ಲ. ಕ್ರಿ. ಶ. 908-9ರ ಶಾಸನವೊಂದರಲ್ಲಿ[109] "..ನ ಹೆಗ್ಗಡೆ ತೊಮ್ಮನೆಂಬೊ.. [ಆಜಿ]ಯೊಳ್ಕಾದಿ ಸತ್ತೊಡಾತನ ಪೆಂಡತಿ ಬಳಕ್ಕನಪ.. ಸದೊ ಕಾಯಿಕೋಜ" ಎಂದಿದೆ. ಈ ಶಾಸನದಲ್ಲಿ ಸಹಗಮನದ ವಿಷಯವು ಇದ್ದಿರಬಹುದಾದ ಭಾಗವು ತ್ರುಟಿತವಾಗಿದೆ. ಸು. 945ರಲ್ಲಿ ತನ್ನ ಭಾರತ ವನ್ನು ಬರೆದ ಪಂಪನು ಮಾದ್ರಿಯ ಸಹಗಮನವನ್ನು ವರ್ಣಿಸಿದ್ದಾನೆ. ಪಂಪನ ಕಾಲಕ್ಕಾಗಲೇ ಸಹಗಮನವು ತಕ್ಕಮಟ್ಟಿಗೆ ಪ್ರಚುರವಾಗಿದ್ದುದರಿಂದ ಅವನು ತನ್ನ ಕಾವ್ಯದಲ್ಲಿ ಮಾದ್ರಿಯು ಸತಿಯಾಗಲು ನಿಶ್ಚಯಿಸಿದಾಗ ಅವಳ ಧೈರ್ಯವನ್ನು ತಪೋವನದ ಮುನಿಜನಗಳೂ ವನದೇವತೆಗಳೂ ಹೊಗಳಿದರೆಂದು. ವರ್ಣಿಸುತ್ತಾನೆ (ಪಂಪಭಾರತ, 2.26, ವ.).[110] ಅದೇ ಪಂಪಭಾರತದಲ್ಲಿ ವೀರನೊಬ್ಬನು ನಾಳೆ ತಾನು ಸತ್ತು ದೇವತಾಸ್ತ್ರೀಯರನ್ನು ಸೇರುವೆನೆಂದು ಹೇಳಿದಾಗ ಅವನ ನಲ್ಲೆಯು ತಾನು ಅವನಿಗಿಂತ ಮುಂಚೆಯೇ ದೇವಲೋಕಕ್ಕೆ ಹೋಗುವುದಾಗಿ ಹೇಳುತ್ತಾಳೆ (10.45).

ಕರ್ನಾಟಕದಲ್ಲಿ ಸಹಗಮನದ ಸ್ಪಷ್ಟ ಐತಿಹಾಸಿಕ ನಿದರ್ಶನವು ಕ್ರಿ.ಶ. 972ರ ಶಾಸನವೊಂದರಲ್ಲಿ ದೊರಕುತ್ತದೆ. ಬಿದಿಯಣ್ಣ ಎನ್ನುವವನು ಮಡಿದಾಗ ಅವನ ಹೆಂಡತಿಯಾಗಿದ್ದ ಜಕ್ಕಬ್ಬೆಯೂ ಪ್ರಾಣವನ್ನು

---

[104] Rājataraṅgiṇi (Tr. R S. Pandit, also entitled 'River of Kings'), p. 202, 208, 228, 253–4, 316, 365.

[105] Altekar : The Position of Women in Hindu Civilization, p. 128.

[106] ಅದೇ.

[107] EC. VIII. Sb. 523 "....ಶ್ರೀ ಮೃಗೇಶ ಸುತಶ್ಚಯಃ....ಹ ಮಲ್ಲ ತಾಂ ರಾಜ್ಞೀ ಶ್ರೀ ರವಿವರ್ಮಣಾ.... ಷಕಯುಕ್ತಾ ಸಾ ಮುಕ್ತಾ ವೈರ ವಿತೇಜಸಾ...."

[108] ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿ : ಕರ್ಣಾಟಕದ ಅರಸುಮನೆತನಗಳು, ಪು. 15.

[109] SII. IX. i. 56, 908–9 A.D.

[110] "...ತಪೋವನದ ಮುನಿಜನಮುಂ ವನದೇವತಾ ಜನಮುಂ ತನ್ನಣ್ಮಂ ಪೊಗಟೆ ಮಾದ್ರಿ ಪಾಂಡುರಾಜನೊಡನೆ ದಾಹೋತ್ತರದಂತೆ (?) ಕೀರ್ತಿಂಗೆ ಕುಲದೊಳಂ ಚಲದೊಳಂ ಆವ ಕಂದುಂ ಕುಂದುಮಿಲ್ಲದೆ ತನ್ನೊರೆಗಂ ದೊರೆಗ ಮಾರು ಮಿಲ್ಲೆನಿಸಿದಾಗಳ್". 'ದಾಹೋತ್ತರ'ವೆಂದರೇನೋ ತಿಳಿಯದು.

ತ್ಯಜಿಸುತ್ತಾಳೆ. ಅವಳ ತಂಗಿ ಜಾಬೆಯು ಕಲ್ಲನ್ನು ನಿಲ್ಲಿಸುತ್ತಾಳೆ.[111] ಬಹುಶಃ ಅದೇ ಸರಿಸುಮಾರಿನಲ್ಲಿ ದಾನ ಚಿಂತಾಮಣಿಯೆಂದು ಪ್ರಸಿದ್ಧಳಾಗಿರುವ ಅತ್ತಿಮಬ್ಬೆಯ ತಂಗಿ ಗುಂಡಮಬ್ಬೆಯು ಸಹಗಮನವನ್ನು ಮಾಡುತ್ತಾಳೆ. ರನ್ನನು ಈ ಪ್ರಸಂಗವನ್ನು ಸ್ವಲ್ಪ ವಿಸ್ತರಿಸಿದ್ದಾನೆ. ತನ್ನ ಅಜಿತಪುರಾಣದಲ್ಲಿ (ಕ್ರಿ.ಶ. 993). ಚಾಲುಕ್ಯ ಚಕ್ರವರ್ತಿ ಆಹವಮಲ್ಲದೇವನ ಭುಜಾದಂಡದಂತೆ ಇದ್ದ ನಾಗದೇವನಿಗೆ ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬ ಸೋದರಿಯರು ಪತ್ನಿಯರಾಗಿದ್ದರು. ಅತ್ತಿಮಬ್ಬೆಗೆ ಅಣ್ಣಿಗನೆಂಬ ಕಿರಿಯ ವಯಸ್ಸಿನ ಮಗನಿದ್ದನು. ಹೀಗಿರುವಾಗ ನಾಗದೇವನು ಸ್ವರ್ಗವಾಸಿಯಾಗುತ್ತಾನೆ. ಗಂಡನ ಪರೋಕ್ಷದಲ್ಲಿ ಸತಿಯ ಕರ್ತವ್ಯವೇನೆಂಬುದನ್ನು ರನ್ನನು ಗುಂಡ ಮಬ್ಬೆಯ ಬಾಯಲ್ಲಿ ಹೇಳಿಸುತ್ತಾನೆ. ಕುಲವಧುವಾದವಳು ಪತಿಯ ಪರೋಕ್ಷದಲ್ಲಿ ಮಾಡಬೇಕಾದ ಕರ್ತವ್ಯಗಳು ಎರಡೇ–ಒಂದು, 'ಜಿನದೀಕ್ಷಾಚರಣಂ' ; ಮತ್ತೊಂದು, 'ಶುಭಚರಿತದೆ ಮರಣಂ.' ಗಂಡನ ಸಾವಿನ ನಂತರ ಭೋಗಜೀವನವನ್ನು ನಡೆಯಿಸುವುದು ಪಾಪಕರ[112] (ರನ್ನನು ಬಹುಶಃ ವಿಷ್ಣು, ಬೃಹಸ್ಪತಿಯರ ಮತವನ್ನು ಒಪ್ಪಿಕೊಂಡಿರುವಂತೆ ಕಾಣುತ್ತದೆ). ಹೀಗೆ ಹೇಳಿದ ಗುಂಡಮಬ್ಬೆಯು, ಅಕ್ಕ ಅತ್ತಿಮಬ್ಬೆಗೆ ಒಬ್ಬ ಮಗನಿರುವುದ ರಿಂದ ಅವನನ್ನು ಬೆಳೆಸುವುದು ಅವಳ ಕರ್ತವ್ಯವೆಂದು ಹೇಳಿ,[113] ತನ್ನ ಗಂಡನನ್ನು ಅಪ್ಪಿಕೊಂಡು ಚಿತಾಗ್ನಿಯಲ್ಲಿ ಮಡಿಯುತ್ತಾಳೆ. ಅವಳನ್ನು ಇಡೀ ಲೋಕವೇ ಹೊಗಳಿತು.[114] ("ಗುಂಡೆಲ್ಲಂ ಪೊಗೞೆ"). ಪತಿಯ ಪರೋಕ್ಷದಲ್ಲಿ ಕುಲವಧುವಿನ ಇನ್ನೊಂದು ಕರ್ತವ್ಯವಾದ 'ಜಿನದೀಕ್ಷಾಚರಣೆ'ಯನ್ನು ಅತ್ತಿಮಬ್ಬೆ ಅಂಗೀಕರಿಸುತ್ತಾಳೆ. ಇಲ್ಲೆಲ್ಲ ನಾವು ಗಮನಿಸಬೇಕಾದ ಅಂಶವೆಂದರೆ–ಸತಿಯಾಗಲು ಬಯಸುವ ಸ್ತ್ರೀಯರನ್ನು ಬಲವಂತದಿಂದ ಯಾರೂ ನಿಲ್ಲಿಸುತ್ತಿರಲಿಲ್ಲ. ಅವರು ಹಾಗೆ ಪ್ರಾಣತ್ಯಾಗಮಾಡುವುದು ಸಹಜವಾದುದು ಎಂಬ ಭಾವನೆ ಜನರಲ್ಲಿದ್ದರೂ, ಆಪ್ತರಾದವರು ಅವರ ಸಹಗಮನವನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದಿರಬಹುದು.

ಕ್ರಿ.ಶ. 1051ರ ಶಾಸನದಲ್ಲಿ[115] ಬೋಗಾರ ಕರಡಿಯ ಸೆಟ್ಟಿ ಎಂಬುವನು ಮಡಿದಾಗ ಅವನ 'ಮದವಳಿಗೆ' ನಾಗಮ್ಮ ಎಂಬುವಳು 'ಸಹಾಗಮನ'ವನ್ನು ಮಾಡಿದ ವಿಷಯವೂ, ಅವಳಿಗಾಗಿ ನಿಲ್ಲಿಸಿದ 'ಮಾಸ್ತಿಕಳು' (=ಮಹಾಸತಿ ಕಲ್ಲು)ವಿನ ವಿಷಯವೂ ಬಂದಿದೆ. ಇವೆಲ್ಲವೂ 'ಸಹಗಮನ' ಅಥವಾ 'ಸಹ ಮರಣ'ದ ನಿದರ್ಶನಗಳು. ಸಹಗಮನವೆಂದರೆ ಪತಿಯ ಶವದ ಜೊತೆಯಲ್ಲಿಯೇ ಚಿತೆಯೇರುವುದು. ಪತಿಯು ಎಲ್ಲೋ ದೂರದ ಪ್ರದೇಶದಲ್ಲಿ ಮಡಿದದ್ದನ್ನು ಕೇಳಿ ಅವನ ಸ್ಮಾರಕವಾಗಿ ಅವನಿಗೆ ಸೇರಿದ ಯಾವುದಾದರೂ ವಸ್ತು ವನ್ನು ಹಿಡಿದುಕೊಂಡು ಪ್ರಾಣವನ್ನು ಬಿಡುವುದು 'ಅನುಗಮನ' ಅಥವಾ 'ಅನುಮರಣ.' ಈ ಅನುಗಮನಕ್ಕೆ ಅತ್ಯುತ್ತಮ ನಿದರ್ಶನವು ಹೆಗ್ಗಡದೇವನಕೋಟೆ ತಾಲ್ಲೂಕಿನ ಬೆಳತೂರು ಶಾಸನದಲ್ಲಿ ದೊರಕುತ್ತದೆ.[116] ನುಗುನಾಡ ಅಧಿಪತಿ ರವಿಗ ಮತ್ತು ಪೊನ್ನಕಬ್ಬೆಯರ ಮಗಳು ದೇಕಬ್ಬೆ–ಇವಳನ್ನು ನವಲೆನಾಡ ಏಚನಿಗೆ ಕೊಡುತ್ತಾರೆ. ಇವನು ಒಮ್ಮೆ ದಾಯಿಗರೊಡನೆ ಹೋರಾಡುತ್ತಿರುವಾಗ ಅವನನ್ನು ಬಂಧಿಸಿ ತಲಕಾಡಿಗೆ ಕೊಂಡೊಯ್ದು ಕೊಲ್ಲು ತ್ತಾರೆ. ಅದನ್ನು ಕೇಳಿದ ದೇಕಬ್ಬೆಯು ಅಗ್ನಿಪ್ರವೇಶಮಾಡಲು ನಿರ್ಧರಿಸುತ್ತಾಳೆ ('ಸಾಯಲೆಂದು ಕೊಂಡಕೆ

111 EC. VIII. Sb. 457, 972 A.D.

112 ಅಜಿತಪುರಾಣ, 1.46. "ಎರಡೆ ವಲಂ ಕುಲವಧುಗಾ । ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ । ಚರಣಂ ಮೇಣ್ ಶುಭಚರಿತದೆ । ಮರಣಂ ಮೇಣಳಿಪಿನಿಂದೆ ಬಾೞ್ವುದು ದೊರೆಯೇ ॥"

113 ಗರ್ಭಿಣಿಯರಿಗೆ, ಚಿಕ್ಕಮಕ್ಕಳಿರುವ ತಾಯಂದಿರಿಗೆ ಸಹಗಮನವನ್ನು ಸ್ಮೃತಿಗಳು ನಿಷೇಧಿಸಿವೆ.—"ಅಯಂ ಚ ಸಕಲ ಏವ ಸರ್ವಾಣಾಂ ಸ್ತ್ರೀಣಾಮಗರ್ಭಿಣೀನಾಮಬಾಲಾಪತ್ಯಾನಾಮಾಚಂಡಾಲಂ ಸಾಧಾರಣೋ ಧರ್ಮ" [ಮಿತಾಕ್ಷರ, ಯಾಜ್ಞವಲ್ಕ್ಯಸ್ಮೃತಿ (ಬೊಂಬಾಯಿ, 1909), ಪು. 25].

114 ಅಜಿತಪುರಾಣ, 1.47, ವ.

115 EC. VII. Sk. 72, C. 1051 A.D. "ಆತನ ಮದವಳಿಗೆ ನಾಗಂಮ ಕೂಡೆ ಸಹಾಗಮನವಾದಲ್ಲಿ ನಿಲಿಸಿಽ ಮಾಸ್ತಿಕಳು ಪ್ರತಿಷ್ಟೆಗೆ ಮಂಗಳ ಮಹಾ ಶ್ರೀ ಶ್ರೀ".

116 EI. VI. p. 215; EC. IV. Hg. 18, 1057 A.D.,

ನಡೆದಳ್'). ಅವಳ ತಂದೆ ತಾಯ್ಗಳು, ಬಂಧುಗಳು ಎಲ್ಲರೂ ಸೇರಿ ಸಾಯಬೇಡವೆಂದು ಕಾಲುಹಿಡಿದು ಬೇಡಿಕೊಳ್ಳುತ್ತಾರೆ. ತಾನು ಸಾಯದೆ ಬದುಕಿ ಕೊಟ್ಟ ಕೊಂಡ ಮನೆಗೆ ಕೆಟ್ಟ ಹೆಸರು ತರುವುದಿಲ್ಲವೆಂದು ಮುನಿದು ಹೇಳುತ್ತಾಳೆ ದೇಕಬ್ಬೆ. ದೇವಾಲಯಕ್ಕೆ ಬೇಕಾದಷ್ಟು ದತ್ತಿಯನ್ನು ಬಿಡುತ್ತಾಳೆ. ಎಲ್ಲರೂ ಸೇರಿ ಮತ್ತೆ ಮತ್ತೆ ಬೇಡಿಕೊಳ್ಳುತ್ತಾರೆ, ಸಹಗಮನವನ್ನು ಮಾಡಬೇಡ ಎಂದು. ಆದರೂ ಅವರೆಲ್ಲರ ಮಾತುಗಳನ್ನು ನಿರ್ಲಕ್ಷಿಸಿ, ಬೇಡಿದವರಿಗೆಲ್ಲ ಹೊನ್ನು, ವಸ್ತ್ರ, ಹಸು, ಹಣಗಳನ್ನು ನೀಡಿ[117] ಅಗ್ನಿಯನ್ನು ಪ್ರವೇಶಿಸುತ್ತಾಳೆ.[118] ಇಂತಹವಳನ್ನು ಯಾರು ತಾನೇ ಮರೆಯುತ್ತಾರೆ ? ('ಇಂತೀ ನಾರಿಜನರನ್ನಮನದಾರೊ ಮಱೆವರ್'). ಕನ್ನಡದಲ್ಲಿ ಇಷ್ಟು ವಿಸ್ತಾರವಾಗಿ ಸಹಗಮನವನ್ನು ವರ್ಣಿಸಿರುವ ಶಾಸನ ಮತ್ತೊಂದಿಲ್ಲ. ಸು. 1088ರ ಶಾಸನವೊಂದರಲ್ಲಿ ನವಲಾಪಿರಾಜ ಎನ್ನುವವನು ಸತ್ತಾಗ ಅವನ ಎಳೆಯ ಹೆಂಡತಿಯೊಬ್ಬಳು ಬೆಂಕಿಯಲ್ಲಿ ಹಾರಿ ('ಪಾಯ್ದು') ಪ್ರಾಣವನ್ನು ಬಿಟ್ಟ ವಿಷಯವು ಬಂದಿದೆ.[119] ಗಂಡನು ಮಡಿದಾಗ ಹೆಂಡತಿಯು 'ಪುರುಷಬ್ರತ'ವನ್ನು (=ಪುರುಷವ್ರತ) ಕೈಗೊಂಡು ಮಡಿದ ವಿಷಯವು ಇನ್ನೊಂದು ಶಾಸನದಲ್ಲಿದೆ.[120] ಸಹಗಮನವನ್ನು ಮಾಡಿದ ಮಹದೇವಿ ಎಂಬುವಳನ್ನು ಒಂದು ಶಾಸನವು 'ಮಹಾಸತಿ' ಎಂದು ಕರೆಯುತ್ತದೆ.[121] ಸತ್ಯವೆಗ್ಗಡೆ ಎಂಬುವನು ಮಡಿದಾಗ ಅವನ ಇಬ್ಬರು ಹೆಂಡಿರು 'ಸನ್ಯಸನವಿಧಿ'ಯಿಂದ ಪ್ರಾಣವನ್ನು ಬಿಟ್ಟ ವಿಷಯವು ಶಾಸನವೊಂದರಲ್ಲಿದೆ.[122] ಜೈನರಾಗಿದ್ದ ಅವರು ಪತಿಯೊಡನೆ ಚಿತೆಯೇರಿ ಪ್ರಾಣವನ್ನು ಬಿಡುವುದಕ್ಕಿಂತ ಸನ್ಯಸನವಿಧಿಯಿಂದ ಪ್ರಾಣಬಿಡುವುದು ಹೆಚ್ಚು ಶ್ರೇಯಸ್ಕರವೆಂದು ಭಾವಿಸಿರಬೇಕು. ಜೈನರಲ್ಲಿಯೂ ಸಹಗಮನವಿದ್ದಿತೆಂಬುದಕ್ಕೆ ಹಿಂದೆಯೇ ಸೂಚಿಸಿರುವ ಗುಂಡಮಬ್ಬೆಯ ಸಹಗಮನವು ಉತ್ತಮ ಆಧಾರವಾಗಿದೆ.

ಆರನೇ ಶತಮಾನದಿಂದ ಹನ್ನೆರಡನೇ ಶತಮಾನದ ಮಧ್ಯಭಾಗದವರೆಗೆ ಸಹಗಮನದ ಸುಮಾರು ಹತ್ತು ನಿದರ್ಶನಗಳು ದೊರಕುತ್ತವೆ. ಮುಂದೆ ಇವುಗಳ ಸಂಖ್ಯೆಯು ಹೆಚ್ಚುತ್ತಾ ಹೋಗುತ್ತದೆ.[123] ಕರ್ನಾಟಕದಲ್ಲಿ ವೀರಯುಗದೊಡನೆ (9–10ನೇ ಶತಮಾನ) ಪ್ರಬಲಗೊಂಡ ಸಹಗಮನ ಪದ್ಧತಿಯು ಹೊಯ್ಸಳ ವಿಜಯನಗರ ಸಾಮ್ರಾಜ್ಯಗಳ[124] ಕಾಲದಲ್ಲಿ ತನ್ನ ತುದಿಯನ್ನು ಮುಟ್ಟಿತು. ಒಬ್ಬ ರಾಜನು ಮಡಿದ ತಕ್ಷಣ, ಅಥವಾ ಅವನು ಮಡಿಯುವ ಸೂಚನೆಯು ದೊರಕಿದರೂ ಸಾಕು, ಸಾಯಲು ಸಿದ್ಧರಾಗುತ್ತಿದ್ದ ರಾಣಿಯರ ವಿಷಯವನ್ನು ಜನ್ನನ ಅನಂತನಾಥ ಪುರಾಣವು ವರ್ಣಿಸುತ್ತದೆ.[125]

---

117 ಬಹುಶಃ ಇವುಗಳಲ್ಲಿ ಎಷ್ಟೋ ವಸ್ತುಗಳನ್ನು ಪವಿತ್ರವಸ್ತುಗಳೆಂದು ಜನರು ರಕ್ಷಿಸಿಕೊಳ್ಳುತ್ತಿದ್ದರೆಂದು ಕಾಣುತ್ತದೆ.

118 "ನೆರೆದೆಲ್ಲಂ ಬೇಡಮಾಹೆಂದಡೆ ನುಡಿಯದಿರಿಂ ಪೋಗಿವಾಂ ಮಾಣೆನೆಂದಾದರದಿಂದಂ ಭೂಮಿ ಪೊಂ ಪುಟ್ಟಗೆ ಪಸು ಧನಮುಂ ನೀಡುತುಂ ದೇವರ ದೇವಂಗಟ್ಟಿಯಿಂ ಕಯ್ಮುಗಿದುರಿವುರಿಯಂ ಪೊಕ್ಕು ದೇಕಬೆ ತನ್ನಂ ಧರೆಯೆಲ್ಲಂ ಮೆಚ್ಚಿ ನಿಚ್ಚಂ ಪೊಗೞೆ ನೆಗೞುತುಂ ದೇವಲೋಕಕ್ಕೆ ವೋದಳ್."

119 EC. IV. Hg. 100, C. 1088 A.D.

120 EC. VII. Sh. 32, 1134 A.D.

121 EC. IV. Ng. 96, C. 1150 A.D.

122 MAR (1943). p. 71, C. 1150 A.D.

123 ಕ್ರಿ. ಶ. 1000–1400ರಲ್ಲಿ ಸುಮಾರು ಹನ್ನೊಂದು ಸಹಗಮನಗಳೂ, ಕ್ರಿ. ಶ. 1400-1600ರಲ್ಲಿ ಸುಮಾರು ನಲವತ್ತೊಂದು ಸಹಗಮನಗಳೂ ನಡೆದಂತೆ ಎಪಿಗ್ರಫಿಯ ಕರ್ನಾಟಿಕದಲ್ಲಿ ಪ್ರಕಟವಾಗಿರುವ ಶಾಸನಗಳಿಂದ ತಿಳಿದುಬರುತ್ತದೆ ಎಂದು ಅಲ್ಟೇಕರರು ಹೇಳುತ್ತಾರೆ (The Position of Women in Hindu Civilization, p. 131). ಇವರ ಗಣನೆಯಲ್ಲಿ ವೇಳೆವಾಳಿಗಳಾದವರ ಜೊತೆಯಲ್ಲಿ ಮಡಿದ ಸ್ತ್ರೀಯರ ಸಂಖ್ಯೆ ಸೇರಿಲ್ಲ. ಶಾಸನ ಇಲಾಖೆಯ ವರದಿಗಳಲ್ಲಿ ಬಂದಿರುವ ಶಾಸನಗಳು ಸೇರಿಲ್ಲ.

124 ವಿಜಯನಗರದ ಕಾಲದಲ್ಲಿ ರಾಜ ಸತ್ತಾಗ ಎರಡು ಅಥವಾ ಮೂರುಸಾವಿರ ಸ್ತ್ರೀಯರು ಚಿತೆಯೇರುತ್ತಿದ್ದರು. (Suttee, p. 35).

125 ಅನಂತನಾಥ ಪುರಾಣ, 12. 10-20.

ಸಹಗಮನವನ್ನು ಮಾಡಿ 'ಮಹಾಸತಿ'ಯರಾದವರ ಸ್ಮಾರಕವಾಗಿ ನಿಲ್ಲಿಸಿದ ಕಲ್ಲುಗಳೇ 'ಮಾಸ್ತಿಕಲ್ಲು'ಗಳು. ಸಾಮಾನ್ಯವಾಗಿ ಮಾಸ್ತಿಕಲ್ಲುಗಳ ಮೇಲೆ ಎತ್ತಿದ ತೋಳಿನ ಸ್ತ್ರೀಯ ಚಿತ್ರವಿರುತ್ತದೆ. (ಇವುಗಳ ಮೇಲೆ ಸಾಮಾನ್ಯವಾಗಿ ಶಾಸನಗಳಿರದಿದ್ದರೂ, ವಿರಳವಾಗಿಯಾದರೂ ಶಾಸನಗಳು ದೊರಕುತ್ತದೆ. ಉದಾ.ಗೆ–ಸೋಂಡಿ=SII. XV. P. 412, 1384 A.D) ಸ್ತ್ರೀಯ ತಲೆಯ ಹಿಂದೆ ಹೂವಿನ ದಂಡೆಯನ್ನು ಕೊರೆಯುವುದುಂಟು. ಕೆಲವೊಮ್ಮೆ ಇಂತಹ ಕಲ್ಲುಗಳ ಮೇಲೆ ಕಂಬದಿಂದ ಹೊರಟ ತೋಳಿನ ಚಿತ್ರಮಾತ್ರವಿರುತ್ತದೆ. ಸತಿಯರು ಚಿತೆಯನ್ನೇರಲು ಹೋಗುವಾಗ ಕುಂಕುಮದಲ್ಲಿ ಕೈಯನ್ನು ಅದ್ದಿ ಬಾಗಿಲಿನ ಮೇಲೆ ತಮ್ಮ ಬೆರಳುಗಳನ್ನು ಮೂಡಿಸುತ್ತಿದ್ದರು. ಆ ಬೆರಳುಗಳನ್ನು, ಅದಕ್ಕೆ ಸೇರಿದಂತೆ ತೋಳನ್ನು ಶಿಲ್ಪಿಗಳು ಕೊರೆಯುತ್ತಿದ್ದರು.[126] ಬಹುಶಃ ಈಗ ದೊರಕುವ ಮಾಸ್ತಿಕಲ್ಲುಗಳ ಮೇಲಿನ ತೋಳುಗಳು ಸಹಗಮನವನ್ನು ಮಾಡಿದ ಸ್ತ್ರೀಯ ಬೆರಳುಗಳ ಪಡಿಯಚ್ಚಾಗಿದ್ದರೂ ಇರಬಹುದು.[126.1] ಮಹಾಸತಿಯ ಬಲಗೈ ಶುಭದ, ಸೌಭಾಗ್ಯದ, ಧನ್ಯಜೀವನದ ಸಂಕೇತ. ಕೆಲವು ಮಾಸ್ತಿಕಲ್ಲುಗಳ ಮೇಲೆ ಗಂಡನ ಮತ್ತು ಅವನ ಹೆಂಡತಿಯ ಅಥವಾ ಹೆಂಡಿರ ಚಿತ್ರಗಳೂ ಇರುವುದುಂಟು. ಮಹಾಸತಿಯ ಕೈಯಲ್ಲಿ ಒಂದು ಮಾದಲದ ಹಣ್ಣು ಇರುತ್ತದೆ. ದಾವಣಗೆರೆ, ಶಿವಮೊಗ್ಗ ಜಿಲ್ಲೆಗಳಲ್ಲಿ ಮಾಸ್ತಿಯ ಬಲಗೈಯಲ್ಲಿ ಹೆಬ್ಬೆರಳು, ಉಂಗುರದ ಬೆರಳುಗಳ ಮಧ್ಯೆ ಸಿಕ್ಕಿಸಿರುವ ನಿಂಬೆಹಣ್ಣು ಇರುತ್ತದೆ. ಇದರ ಅರ್ಥವೇನೋ ತಿಳಿಯದು. ಮಹಾಸತಿಯರನ್ನು ದೇವತೆಗಳೆಂದು ಭಾವಿಸಿ ಪೂಜಿಸುತ್ತಾರೆ. ಕೆಲವು ಕಡೆ ಅವರಿಗಾಗಿ ದೇವಸ್ಥಾನಗಳನ್ನೇ ಕಟ್ಟಿರುತ್ತಾರೆ. ಹುಬ್ಬಳ್ಳಿಯಿಂದ ಕಾರವಾರಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ಸುಪ್ರಸಿದ್ಧವಾದ ಮಾಸ್ತಿಗುಡಿಯಿದೆ.[126.2] ಈಗಲೂ ಕೆಲವು ಹಳ್ಳಿಗಳಲ್ಲಿ ಇರುವ ಮಾಸ್ತಿಕಲ್ಲುಗಳಿಗೆ ಬಳೆ, ಕುಂಕುಮಗಳನ್ನು ಅರ್ಪಿಸಿ ದೀಪಗಳನ್ನು ಹಚ್ಚಿಡುವ ಸಂಪ್ರದಾಯವಿದೆ. ತಮಿಳುನಾಡಿನಲ್ಲಿ ಮತ್ತು ಸಿಂಹಳದಲ್ಲಿ ಕನ್ನಗಿ, ಆಂಧ್ರದಲ್ಲಿ ಪೆರಂತಲಮ್ಮ ಎಂಬ ಮಹಾಸತಿಯರು ಈಗಲೂ ಪೂಜ್ಯರಾಗಿದ್ದಾರೆ. ಕೇವಲ ತೋಳು ಇರುವ ಮಾಸ್ತಿ ಕಲ್ಲುಗಳನ್ನು 'ವ್ಯಾಸನತೋಳು' ಎಂದು ಕರೆಯುತ್ತಾರೆ. (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇವನ್ನು 'ಒಂಟಿಕೈ ಮಾಸ್ತಿ' ಎಂದು ಕರೆಯುತ್ತಾರೆಂದು ತಿಳಿದು ಬಂದಿದೆ). ಎರಡು ಕೈಯಿರುವ ಮಾಸ್ತಿಕಲ್ಲುಗಳೂ ಇವೆ ('ಇಕ್ಕೈ ಮಾಸ್ತಿ').

ದಿ. ಎಂ. ಎಸ್. ಪುಟ್ಟಣ್ಣನವರ ಮಾಡಿದುಣ್ಣೋ ಮಹಾರಾಯ[127] ಎಂಬ ಕಾದಂಬರಿಯಲ್ಲಿ ಸತಿಯೊಬ್ಬಳು ಸಹಗಮನವನ್ನು ಮಾಡಿದ ಚಿತ್ರಣವಿದೆ. ಆದರ ವರ್ಣನೆಯನ್ನು ನೋಡಿದರೆ ಕಾದಂಬರಿಕಾರರು ಬಹುಶಃ ಪ್ರತ್ಯಕ್ಷದರ್ಶಿಗಳಿಂದ ಅದನ್ನು ಕೇಳಿರಬಹುದೆಂದು ಊಹಿಸಬಹುದು. ಅದು ಹತ್ತೊಂಬತ್ತನೆಯ

126 Edward Thompson : Suttee, p. 30.

126.1 ಮಂಡ್ಯ ತಾಲ್ಲೂಕಿನ ಪುರ ಎಂಬ ಗ್ರಾಮದಲ್ಲಿ ಮಾಸ್ತಿಗುಡಿಯಿದೆ. ಆ ಊರಿನ ಒಂದು ಶಾಸನದಲ್ಲಿ ಹೀಗಿದೆ: "ಬುತಿಖರನು ಶ್ವರ್ಗಸ್ತನಾದಲ್ಲಿ ಆತನ ಹೆಂಡತಿಯರು ಮೂವರು ತೋಳು ಕಯಿಕೊಟ್ಟ ಕಂಬ". ಬುತಿಖರನ ಹೆಂಡತಿಯರು ಸಹಗಮನ ಮಾಡಿದ್ದನ್ನು ವರ್ಣಿಸುವಾಗ ತೋಳುಕೈಯನ್ನು ಕೊಟ್ಟರು ಎಂಬ ಉಕ್ತಿ ಬರುವುದು ಗಮನಾರ್ಹ. ಒಂದು ಕಂಬ, ಕಂಬದಿಂದ ಹೊರಟ ತೋಳು–ಇದು ಸಹಗಮನ ಮಾಡಿದ ಸತಿಯ ಸ್ಮಾರಕ. ಪುರದ ಶಾಸನದಲ್ಲಿ ಬರುವ ಮೂವರು ಹೆಂಗಸರು ತಮ್ಮ ಕೈಯ ಗುರುತನ್ನು ಸಾಯುವ ಮುನ್ನ ಕಲ್ಲಿನಮೇಲೆ ಮೂಡಿಸಿದರೆಂದು ಕಾಣುತ್ತದೆ. ಕಂಬದ ಅರ್ಥವೇನೋ ತಿಳಿಯದು.

126.2 ಈ ಮಾಸ್ತಿಗುಡಿಯ ಇತಿಹಾಸ ಸ್ವಾರಸ್ಯವಾಗಿದೆ. ಹುಬ್ಬಳ್ಳಿ–ಕಾರವಾರ ರಸ್ತೆಯಿಂದ ಸ್ವಲ್ಪದೂರದಲ್ಲಿರುವ ಒಂದು ಹಳ್ಳಿಯಲ್ಲಿ ಒಂದು ಮಾಸ್ತಿಕಲ್ಲಿದ್ದಿತು. ಒಬ್ಬ ಕಂಟ್ರಾಕ್ಟರನು ಅದಕ್ಕೆ ಹರಸಿಕೊಂಡದ್ದರಿಂದ ಆವನಿಗೆ ಲಾಭವು ಬಂದಿತು. ಆ ಮಾಸ್ತಿಕಲ್ಲನ್ನು ತಂದು ರಸ್ತೆಯ ಪಕ್ಕದಲ್ಲಿ ಸ್ಥಾಪಿಸಲು ಪ್ರಯತ್ನಪಟ್ಟನು. ಆದರೆ ಆ ಹಳ್ಳಿಯವರು ಅದಕ್ಕೆ ಅವಕಾಶಕೊಡದಿದ್ದರಿಂದ ಅವನು ಅದರ ಪ್ರತಿರೂಪವನ್ನು ಕಲ್ಲಿನಲ್ಲಿ ಕೆತ್ತಿಸಿ ರಸ್ತೆಯ ಪಕ್ಕದಲ್ಲಿ ಸ್ಥಾಪಿಸಿದ. ಆ ಮಾರ್ಗದಲ್ಲಿ ಹೋಗಿ ಬರುತ್ತಿದ್ದ ವಾಹನಗಳು, ಜನಗಳು ಅಲ್ಲಿ ನಿಂತು, ಪೂಜೆ ಆರಂಭವಾಯಿತು. ಮಾಸ್ತಿಕಲ್ಲಿಗೆ ಪವಾಡದ ಶಕ್ತಿ ಇದೆಯೆಂದು ಜನ ನಂಬಿದರು. ಹಾಗೆಯೇ ಕ್ರಮೇಣ ಹಣ ಸಂಗ್ರಹವಾಗಿ ಒಂದು ದೇವಸ್ಥಾನವೂ ಎದ್ದಿತು. ಈಗ ಆ ದೇವಸ್ಥಾನದಲ್ಲಿ ಕಾಳಿಕಾದೇವಿಯ ಪ್ರತಿಷ್ಠೆಯಾಗಿ, ಒಬ್ಬ ಸನ್ಯಾಸಿ–ಪೂಜಾರಿ ಅದ್ಭುತ ಕಥೆ ಕಟ್ಟಿ ಹೇಳುತ್ತಿದ್ದಾನೆ. ಮಾಸ್ತಿಕಲ್ಲು ಹಿಂದೆ ಬಿದ್ದಿದೆ. ಗುಡಿಯ ಹೆಸರು ಮಾತ್ರ 'ಮಾಸ್ತಿಗುಡಿ'

127 ಎಂ. ಎಸ್. ಪುಟ್ಟಣ್ಣ : ಮಾಡಿದ್ದುಣ್ಣೋ ಮಹಾರಾಯ (ಪ್ರಥಮ ಪ್ರಕಟಣೆ–ಕ್ರಿ. ಶ. 1915).

ಶತಮಾನದಲ್ಲಿ ವಿರಳವಾಗಿಯಾದರೂ ನಡೆಯುತ್ತಿದ್ದ ಸಹಗಮನದ ವಾಸ್ತವಚಿತ್ರದಂತೆ ಕಂಡುಬರುವುದರಿಂದ, ಅಲ್ಲಿಂದ ಕೆಲವು ಸಂಗತಿಗಳನ್ನು ಆರಿಸಿ ಕೆಳಗೆ ಕೊಡಲಾಗಿದೆ. ಸಹಗಮನವನ್ನು ಮಾಡುವ ಮೊದಲು ಆ ವಿಷಯವನ್ನು ರಾಜ್ಯದ ಅಧಿಕಾರಿಗಳಿಗೆ ತಿಳಿಸಬೇಕಾಗಿದ್ದಿತು. ಅವರು "ಸರಕಾರದಿಂದ ಅರಿಸಿನ, ಕುಂಕುಮ, ತಾಂಬೂಲ, ಹೂವು, ದೋತ್ರದ ಜೊತೆ, ಹಳದೀ ಪತ್ತಲ ಇವೇ ಮೊದಲಾದದ್ದನ್ನು ಕೊಡಿಸುತ್ತಿದ್ದದ್ದು ಅಲ್ಲದೆ, ಗಂಡನ ಸಂಗಡಲೇ ಜೀವಸಹಿತ ಚಿತೆಯನ್ನು ಏರಿದ ಹೆಂಗಸು ಉರಿಯನ್ನು ತಡೆಯಲಾರದೆ ಈಚೆಗೆ ಎದ್ದು ಓಡಿಬಂದಲ್ಲಿ ರಾಜ್ಯಕ್ಕೆ ಹಾನಿ ತಟ್ಟುವುದೆಂದು ಅದಕ್ಕೆಲ್ಲ ಅಡ್ಡಿಯಾಗಿರುವ ಹಾಗೆ ಮದ್ದು ತುಂಬಿದ ಗಡಿಗೆಗಳು, ಬಾಣಗಳು, ಎಣ್ಣೆ ತುಪ್ಪದ ಗಡಿಗೆಗಳು ಇವುಗಳೆಲ್ಲವನ್ನು ಚಿತೆಯ ಮಧ್ಯ ಭಾಗದಲ್ಲಿಯೂ, ಪಕ್ಕಗಳಲ್ಲಿಯೂ ಇರಿಸುವುದಕ್ಕಾಗಿ ಬೇಕಾದ್ದನ್ನೆಲ್ಲಾ ಕೊಡಿಸುತ್ತಾ ಇದ್ದರು."[128] ಸತಿಯನ್ನು ನೋಡಲು ಸಾವಿರಾರು ಜನರು ನೆರೆಯುತ್ತಿದ್ದರು. ಸತಿಯು ಆ ದಿನ ಸ್ನಾನವನ್ನು ಮಾಡಿ ಮೈತುಂಬಾ ಅರಿಶಿನವನ್ನು ಹಚ್ಚಿಕೊಂಡು ಹಳದಿಯ ಬಣ್ಣದ ಸೀರೆಯನ್ನುಟ್ಟು ಕುಂಕುಮಾದಿಗಳನ್ನು ಧರಿಸಿ ಬ್ರಾಹ್ಮಣರಿಗೆ, ಮುತ್ತೈದೆಯರಿಗೆ ಯಥೇಷ್ಟವಾಗಿ ದಾನಮಾಡಿ[129] ಎಲ್ಲರ ಅಪ್ಪಣೆಯನ್ನು ಪಡೆದು, ಕೈಯಲ್ಲಿ ನಿಂಬೆಯ ಹಣ್ಣುಗಳನ್ನು ಹಿಡಿದು[130] 'ಅಮ್ಮಾಲೆ ಚೆಂಡಾಡುತ್ತ', ಎಂದರೆ ಅವುಗಳನ್ನು ಮೇಲೆ ಎಸೆದು ಹಿಡಿಯುತ್ತ ಬರುತ್ತಿದ್ದಳು. (ಸತಿಯಾದವರ ವಿಗ್ರಹಗಳ ಕೈಯಲ್ಲಿರುವ ಹಣ್ಣು ಇದೇ ಇರಬಹುದೆ?). ಅವಳು ಸಂತೋಷವಾಗಿ ಗಂಡನ ಜೊತೆಯಲ್ಲಿ ಹೋಗಲು ಸಿದ್ಧವಾಗುತ್ತಿರುವುದನ್ನು ಇದು ಸೂಚಿಸಬಹುದು. ಚಿತೆಯ ಮೇಲೆ ಪುರುಷನ ಶವದ ಜೊತೆಯಲ್ಲಿ ಅವಳನ್ನು ಕಟ್ಟಿಹಾಕಿ, ಮೇಲೆ ಭಾರವನ್ನು ಹೇರಿ ಬೆಂಕಿಯನ್ನು ಹಚ್ಚುತ್ತಿದ್ದರು. 'ಮಹಾ ಪತಿವ್ರತೆ' ಎಂಬ ಕೂಗೂ ಜನರ ಹಾಹಾಕಾರವೂ ದಿಕ್ಕುಗಳನ್ನು ತುಂಬುತ್ತಿದ್ದಿತು. ಅವಳು ನಡೆದುಬಂದ ದಾರಿಯಲ್ಲಿ ಮೂಡಿದ ಅವಳ ಹೆಜ್ಜೆಯ ಗುರುತುಗಳಿಂದ ಧೂಳನ್ನು ತೆಗೆದುಕೊಂಡು ಕಣ್ಣಿಗೆ ಒತ್ತಿಕೊಳ್ಳುತ್ತಿದ್ದರು. ಜೀವಸಹಿತ ಬೆಂದುಹೋದ ಆ ದೃಶ್ಯವನ್ನು ಕಂಡ ಜನರ ಕಣ್ಣಿಗೆ ಅವಳು ಮಹಾಲಕ್ಷ್ಮಿಯಂತೆ ಪೂಜನೀಯಳಾಗುತ್ತಿದ್ದಳು. ಅವಳು ಸುಟ್ಟ ಪ್ರದೇಶವು ಪುಣ್ಯಸ್ಥಳವಾಗುತ್ತಿದ್ದಿತು.

ವೇಳೆವಾಳಿ ಮತ್ತು ಸಹಗಮನಗಳ ಹಿಂದಿರುವ ತತ್ವವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ಎರಡೂ ಒಂದೇ ಆದರ್ಶದ ಎರಡು ಮುಖಗಳು–ಒಂದು ಕಡೆ ಒಡೆಯನಿಗಾಗಿ ಪ್ರಾಣವನ್ನು ತ್ಯಜಿಸಿದರೆ, ಇನ್ನೊಂದು ಕಡೆ ಪತಿಗಾಗಿ ಪ್ರಾಣವನ್ನು ತ್ಯಜಿಸುವುದು. ಎರಡರ ಮೂಲದಲ್ಲೂ ಕೃತಜ್ಞತೆ, ಭಕ್ತಿಗಳಿವೆ; ಇನ್ನೊಂದು ಲೋಕದ ವಿಷಯದಲ್ಲಿ ದೃಢ ವಿಶ್ವಾಸವಿದೆ. ಆಧುನಿಕ ದೃಷ್ಟಿಗೆ ಇವು ಅರ್ಥಹೀನವಾಗಿ ಕ್ರೌರ್ಯದ ಪ್ರತೀಕವಾಗಿ ಕಾಣಬಹುದು. ಆಧುನಿಕ ಭಾರತವು ಈ ಸಂಪ್ರದಾಯಗಳನ್ನು ಕೈಬಿಟ್ಟಿದೆ.[131] ಕೈಬಿಟ್ಟಿರುವುದು

---

128 ಅವೇ. ಪು. 112 (1949).

129 ದೇಕಬ್ಬೆಯು ಸಹಗಮನಮಾಡಿದ ಶಾಸನದ ನಿರೂಪಣೆಯನ್ನು ಇಲ್ಲಿ ಸ್ಮರಿಸಬಹುದು.

130 ಪಿಯೆಟ್ರೊ ಡೆಲ್ಲ ವಲ್ಲೆ ಎಂಬ ಒಬ್ಬ ಪ್ರವಾಸಿ ಕ್ರಿ. ಶ. 1623ರಲ್ಲಿ ತಾನು ಇಕ್ಕೇರಿಯಲ್ಲಿ ಕಂಡ ಒಂದು ಸಹಗಮನವನ್ನು ವರ್ಣಿಸುತ್ತಾ, ಸತಿಯ ಒಂದು ಕೈಯಲ್ಲಿ ನಿಂಬೆಯ ಹಣ್ಣೂ ಇನ್ನೊಂದರಲ್ಲಿ ಕನ್ನಡಿಯೂ ಇದ್ದ ಸಂಗತಿಯನ್ನು ಹೇಳುತ್ತಾನೆ. ಮದುವೆಯ ಗಂಡು ಜಂಬೀರ ಫಲವನ್ನು ಹಿಡಿದಿರುತ್ತಿದ್ದ ವಿಷಯ ಶಿವತತ್ವ ಚಿಂತಾಮಣಿಯಲ್ಲಿದೆ (31.26). ಸತಿಯಾಗಲಿರುವ ಸ್ತ್ರೀ ಕೈಯಲ್ಲಿ 'ಜಂಬೀರ ಫಲ'ವನ್ನೂ ಕನ್ನಡಿಯನ್ನು ಹಿಡಿದಿರುತ್ತಿದ್ದ ಸಂಗತಿ ಸಿದ್ಧೇಶ್ವರ ಪುರಾಣದಲ್ಲೂ ಇದೆ (ಜಂಬೀರ= ನಿಂಬೆ). ನಿಂಬೆಯ ಹಣ್ಣು ಮಂಗಲ ಸೂಚಕ ಮತ್ತು ಸತಿಯಾಗಲಿರುವವಳು ಗಂಡನ ಮನೆಗೆ ಹೋಗುತ್ತಿದ್ದೇನೆಂದು ಭಾವಿಸುತ್ತಿದ್ದುದರ ಸೂಚಕವಾಗಿ ಅವಳ ಕೈಲಿ ನಿಂಬೆಹಣ್ಣು ಇರುತ್ತಿದ್ದುದೆಂಬುದು ಸ್ಪಷ್ಟವಾಗಿಯೇ ಇದೆ.

131 ಹತ್ತೊಂಬತ್ತನೆಯ ಶತಮಾನದಲ್ಲಿ ರಾಜಾರಾಮಮೋಹನರಾಯ್ ಮುಂತಾದ ಮಹನೀಯರ ಸತತ ಪ್ರಯತ್ನಗಳ ಫಲವಾಗಿ ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದಲ್ಲ ಸಹಗಮನವನ್ನು ನಿಷೇಧಿಸುವ ಶಾಸನವು ಕ್ರಿ. ಶ. 1829ನೇ ಡಿಸೆಂಬರ್ ತಿಂಗಳಲ್ಲಿ ಜಾರಿಗೆ ಬಂದಿತು. ಶಾಸನವು ಜಾರಿಗೆ ಬಂದಮೇಲೂ ಅಲ್ಲಿ ಇಲ್ಲಿ ಸಹಗಮನಗಳು ನಡೆದರೂ, ಕ್ರಮೇಣ ಆ ಪದ್ಧತಿಯು ಭಾರತದಿಂದ ನಿರ್ನಾಮವಾಯಿತು. ಆದರೂ ವರ್ಷಕ್ಕೊಮ್ಮೆ, ಎರಡು ವರ್ಷಕ್ಕೊಮ್ಮೆ ಸತಿಯಾಗಲು ಬಯಸಿದ ಹೆಂಗಸು ಇತರರ ಕಣ್ಣು ತಪ್ಪಿಸಿ ಗಂಡನ ಚಿತೆಯೇರಿದ ಸಂಗತಿಯನ್ನು ಈಗಲೂ ಪತ್ರಿಕೆಯಲ್ಲಿ ಓದಬಹುದು.

ಒಳ್ಳೆಯದೇ. ಆದರೂ ವೇಳೆವಾಳಿಗಳ ವಿಷಯದಲ್ಲಿಯೂ, ಸತಿಯರ ವಿಷಯದಲ್ಲಿಯೂ ನಮ್ಮ ಗೌರವವು ಉಳಿದೇ ಉಳಿಯುತ್ತದೆ. ಏಕೆಂದರೆ ಅವರ ಆಚರಣೆಗಿಂತ, ಅವರ ದೃಷ್ಟಿ, ಶ್ರದ್ಧೆ, ವಿಶ್ವಾಸಗಳು ಮುಖ್ಯ.[132] ಪ್ರವಾಸಿಯೊಬ್ಬನು (Pietro della Valle) ಹೀಗೆ ಹೇಳಿದ್ದಾನೆ — "ಸ್ತ್ರೀಯೊಬ್ಬಳು ಸತಿಯಾಗಲಿರುವಳೆಂದು ನನಗೆ ತಿಳಿದರೆ ಅಲ್ಲಿಗೆ ಹೋಗಿ ದಯಾರ್ದ್ರವಾತ್ಸಲ್ಯದಿಂದ ಅವಳನ್ನು ಗೌರವಿಸದಿರಲಾರೆ. ಅವಳ ಆ ಮಹಾ ಪಾತಿವ್ರತ್ಯ ಮತ್ತು ಪ್ರೇಮಗಳು ಅಂತಹ ಗೌರವಕ್ಕೆ ಅರ್ಹವಾದುವು."[133] ಸಮಾಜದ ಬಲವಂತಕ್ಕೆ ಸಿಕ್ಕು ಅನೇಕರು ಮಡಿದ ನಿದರ್ಶನಗಳು ಇತಿಹಾಸದಲ್ಲಿ ದೊರಕುತ್ತವೆ. ಗುಜರಾತಿನಲ್ಲಿ ಹನ್ನೆರಡು ಅಡಿ ಚದುರದ ಮರದ ಮನೆಯನ್ನು ಕಟ್ಟಿ ಅದರಲ್ಲಿ ವಿಧವೆಯನ್ನು ಕಟ್ಟಿ ಹಾಕಿ ಬೆಂಕಿಯಿಡುತ್ತಿದ್ದರು. ಬಂಗಾಳದಲ್ಲಿ ಮರದ ಕಂಬಕ್ಕೆ ವಿಧವೆಯ ಕಾಲುಗಳನ್ನು ಕಟ್ಟಿ ಸುಟ್ಟುಹಾಕುತ್ತಿದ್ದರು.[134] ಪ್ರಾಚೀನ ಕರ್ನಾಟಕದಲ್ಲಿ ಇಂತಹ ಕ್ರೂರ ಕೃತ್ಯಗಳು ಎಲ್ಲಿಯೂ ಕಾಣಿಸಿಕೊಂಡಿಲ್ಲ. ಬಹುಮಟ್ಟಿಗೆ ಸ್ವಸಂತೋಷದಿಂದ ಚಿತೆಯೇರಿರುವರೇ ಹೆಚ್ಚು.[135]

---

132 "........far from being ashamed of our 'suttees' we take a pride in them ; that is even true of the most 'progressive' amongst us. It is very much like the tenderness which our children may some day feel for those of their race who were willing to throw away their lives for 'their country right or wrong', though the point of view may seem to us then, as it seem to so many already, evidence rather of generosity than balanced judgement."

–Ananda Coomaraswamy : 'Status of Indian Women' (Dance of Shiva, p. 126).

133 Quoted by Edward Thompson in his "Suttee", p. 136.

134 ಅದೇ, ಪು. 134.

135 ಸಹಗಮನ ಮಾಡಲು ಕೆಲವುಸಾರಿ ಸರ್ಕಾರದಿಂದ ಅಪ್ಪಣೆ ಪಡೆಯುತ್ತಿದ್ದರೆಂಬುದಕ್ಕೆ ದಿವಾನ್ ಪೂರ್ಣಯ್ಯನವರ ಕಾಲದ ಒಂದು ಸನ್ನದನ್ನು ಉಲ್ಲೇಖಿಸಬಹುದು (M.A.R. 1938, p. 179)– "ಶ್ರೀ ಮತ್ತು ಶ್ರೀ ಪೂರ್ಣೈಯನವರು ಸೋಸಲೆ ಅಮಲದಾರ ವೆಂಕಟರಮಣೈಯಗೆ ಆಶೀರ್ವಾದ ಅದಾಗಿ ತಲಕಾಡು । ತಲಕಾಡಿನ ವೆಂಕಟ್ರಾಮಶಾಸ್ತ್ರಿಗಳು ಯಿದದಕೆ ಯಿದ ಹಾಗೆ ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ರಿಂದ ಅವರ ಕುಟುಂಬ ಸಹಗಮನ ಮಾಡಬೇಕೆಂಬುದಾಗಿ ಯಾರು ಹೇಳಿದಾಗ್ಯು ಕೆಳದೆ ಮುಷಕರ ಮಾಡಿಕೊಂಡು ಅಪ್ಪಣೆ ಕೊಡಬೇಕೆಂಬುದಾಗಿ ಯಿದಾರೆಂಬ ವಿವರಗಳಾಗಿ ಬರೆದು ಸರಿಯಷ್ಟೆ. ಆ ಬಗ್ಯೆ ಅವರು ದೊಡ್ಡ ಬ್ರಾಂಹರು ಅವರು ಯಿದದುಕ್ಕೆ ಯೀಕೆ ಈ ಮೇರೆಗೆ ಮಾಡಬಾರದು. ಬೇಡವೆಂಬುದಾಗಿ ಹೇಳಿದರೆ ಕೇಳದ ಮೇಲೆ ಆಕೆ ಹೇಳಿದ ಮೇರೆಗೆ ನಡೆದುಕೊಳುವಂತೆ ಅಪ್ಪಣೆ ಕೊಟ್ಟುಬಿಡುವದು। ರಕ್ತಾಕ್ಷಿ ಸಂವತ್ಸರದ ಫಾಲ್ಗುಣ ಬ 6 ಲು ರುಜು ಶ್ರೀ॥ ಪೈವಸ್ತಗಿ ಪಾಲ್ಗುಣ ಬ 9 ಲು ಸಾಗಮನ ಮಾಡುವ ಹೆಂಗಸಿಗೆ ಅಪ್ಪಣೆ". ಈ ಸನ್ನದಿನ ಕಾಲ 24–3–1805. ಆ ಹೆಂಗಸು ಸ್ವಸಂತೋಷದಿಂದ ಸಹಗಮನ ಮಾಡಲು ಉದ್ಯುಕ್ತಳಾದಳೆಂಬುದು ಈ ಸನ್ನದಿನಲ್ಲಿ ಸ್ಪಷ್ಟವಾಗಿದೆ.

ಸಹಗಮನದ ಬಗ್ಗೆ, ಹೆಚ್ಚಿನ ವಿವರಗಳಿಗೆ ನೋಡಿ– ಎಂ. ಚಿದಾನಂದಮೂರ್ತಿ: ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು (1975).

# XII

# ಆಡಳಿತ ವ್ಯವಸ್ಥೆ

ಪ್ರಾಚೀನ ಕರ್ನಾಟಕದ ಆಡಳಿತ ವ್ಯವಸ್ಥೆಯನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸ ಬಹುದು—ರಾಜ್ಯಾಡಳಿತ ಮತ್ತು ಊರುಗಳ ಆಡಳಿತ. ಈ ವಿಭಜನೆಯು ಕೇವಲ ಸೌಕರ್ಯಕ್ಕಾಗಿ ಮಾಡಿ ಕೊಂಡಿರುವಂಥದು ಎಂಬುದನ್ನು ಮರೆಯಬಾರದು. ಏಕೆಂದರೆ ಒಂದನ್ನು ಬಿಟ್ಟು ಮತ್ತೊಂದು ಇದ್ದಿಲ್ಲ, ಒಂದರ ಸಹಕಾರದಿಂದ ಮತ್ತೊಂದು ನಡೆಯುತ್ತಿದ್ದಿತು. ಆದರೂ ಅಂತಹ ವಿಭಜನೆಯಲ್ಲಿ ಒಂದು ಔಚಿತ್ಯವೂ ಇದೆಯೆಂಬುದನ್ನೂ ಮರೆಯಬಾರದು. ಗ್ರಾಮಗಳ ಮತ್ತು ನಗರಗಳ ಮೊತ್ತವೇ ರಾಜ್ಯ. ಎಲ್ಲಕ್ಕೂ ರಾಜನೇ ಅಧಿಪತಿ. ಎಲ್ಲವೂ ಅವನ ಆಳಿಕೆಗೆ ಒಳಪಟ್ಟುವು. ಆದರೂ ಪ್ರಾಚೀನ ಕರ್ನಾಟಕದ ಗ್ರಾಮಗಳ ಆಳಿಕೆಯನ್ನು ಪರಿಶೀಲಿಸಿದರೆ ಒಂದೊಂದು ಗ್ರಾಮವೂ ಕೆಲವು ವಿಷಯಗಳಲ್ಲಿ ಆಡಳಿತದ ಪ್ರತ್ಯೇಕ ಘಟಕ ವೆಂಬಂತೆ ನಡೆದುಕೊಳ್ಳುತ್ತಿದ್ದಿತು. ಶಾಸನಗಳಲ್ಲಿ ಚಿತ್ರಿತವಾಗಿರುವಂತೆ ಒಂದೊಂದು ಗ್ರಾಮವೂ ವಿಶಾಲ ವಾದ ರಾಜ್ಯದೊಳಗಿನ ಒಂದು ಪುಟ್ಟರಾಜ್ಯ ಎನ್ನುವ ಭಾವನೆ ಬರುತ್ತದೆ (ಇದರ ವಿವರಣೆ ಮುಂದೆ ಬರುತ್ತದೆ). ಆದ್ದರಿಂದ ಮೊದಲು ರಾಜ್ಯಾಡಳಿತದ ವಿಷಯವನ್ನು ವಿಚಾರಮಾಡಿ, ಬಳಿಕ ಊರುಗಳ ಆಡಳಿತದ ಚರ್ಚೆಯನ್ನು ಎತ್ತಿಕೊಳ್ಳಲಾಗಿದೆ.

## ರಾಜ್ಯಾಡಳಿತ

ಪ್ರಾಚೀನರ ಪ್ರಕಾರ ರಾಜ್ಯ ಎನ್ನುವುದು ರಾಜ[1]ನಿಗೆ ಸೇರಿದುದು. ಅದರ ರಕ್ಷಣೆ ಅವನ ಹೊಣೆ. ಸೋಮದೇವನ ನೀತಿವಾಕ್ಯಾಮೃತದ ಪ್ರಕಾರ ಪ್ರಜೆಗಳನ್ನು ರಕ್ಷಿಸದವನು ರಾಜನೇ ಅಲ್ಲ ("ಸ ಕಿಂ ರಾಜಾ ಯೋ ನ ರಕ್ಷತಿ ಪ್ರಜಾಃ"[2]). ಪ್ರಜಾಪಾಲನೆಯೇ ರಾಜನ ನಿಜವಾದ ಯಜ್ಞವೆಂದೂ ಭಾವಿಸಿದ್ದರು. ('ಪ್ರಜಾಪಾಲನಂ ಹಿ ರಾಜ್ಞಃ ಯಜ್ಞಃ'). ಹೀಗೆ ರಾಜನಿರುವುದು ಪ್ರಜೆಗಳಿಗಾಗಿ, ಅವರ ಯೋಗಕ್ಷೇಮ ಕ್ಕಾಗಿ ಎಂಬ ಭಾವನೆ ಸಾರ್ವತ್ರಿಕವಾಗಿದ್ದಿತು. ರಾಜನ ಉಗಮದ ವಿಷಯವಾಗಿ ಹೊರಟಿರುವ ಕಥೆಗಳೂ ಇದನ್ನೇ ಪೋಷಿಸುತ್ತವೆ. ಐತರೇಯ ಬ್ರಾಹ್ಮಣದಲ್ಲಿ ಒಂದು ಕಥೆಯಿದೆ. ದೇವತೆಗಳಿಗೂ ರಾಕ್ಷಸರಿಗೂ ಯುದ್ಧ ನಡೆಯಿತು. ದೇವತೆಗಳನ್ನು ಅಸುರರು ಸೋಲಿಸಿದರು. ಆಗ ದೇವತೆಗಳು ತಮಗೊಬ್ಬ ರಾಜನಿಲ್ಲ ದಿರುವುದೇ ತಮ್ಮ ಸೋಲಿಗೆ ಕಾರಣವೆಂದು ಭಾವಿಸಿದರು. ಒಬ್ಬ ರಾಜನನ್ನು ಆರಿಸಿಕೊಂಡರು.[3] ದೇಶದಲ್ಲಿ

---

[1] ರಾಜನ್ ಎನ್ನುವ ಪದಕ್ಕೆ, ಅದರ ಮೂಲವಾದ ರಾಟ್ ಎನ್ನುವುದಕ್ಕೆ ಆಳುವವನು ಎಂದರ್ಥ. ಇವು ಲ್ಯಾಟಿನ್ನಿನ 'ರೆಕ್ಸ್' ಎನ್ನುವ ಪದದ ಜ್ಞಾತಿಪದಗಳು. ಆದರೆ ಭಾರತೀಯ ನೀತಿಶಾಸ್ತ್ರಕಾರರು ರಾಜನ್ ಪದವು 'ರಂಜ್' (=ಸಂತೋಷಪಡಿಸು) ಎಂಬ ಧಾತುವಿನಿಂದ ಬಂದಿದೆಯೆಂದು ಕಲ್ಪಿಸಿದ್ದಾರೆ. ಅದನ್ನು ಮೊದಲಿನಿಂದಲೂ ಎಲ್ಲರೂ ಒಪ್ಪಿಕೊಂಡು ಬಂದಿದ್ದಾರೆ (Jayaswal: Hindu Polity, p. 189). ಕ್ರಿ. ಪೂ. 2ನೆಯ ಶತಮಾನದ ಖಾರವೇಲನು ತಾನು ತನ್ನ ಪ್ರಜೆಗಳನ್ನು 'ರಂಜಿ'ಸಿದುದಾಗಿ ಹೇಳಿಕೊಂಡಿದ್ದಾನೆ. ಮೇಲಿನ ನಿಷ್ಪತ್ತಿಯನ್ನು ಬೌದ್ಧಗ್ರಂಥಗಳೂ ಒಪ್ಪಿಕೊಂಡಿವೆ (ಅದೇ).

[2] Rangaswamy Iyengar: Considerations on some aspects of Ancient Indian Polity, p. 108.

[3] Jayaswal: Hindu Polity, p. 189.

'ಮಾತ್ಸ್ಯನ್ಯಾಯ'ವು[4] ತಾಂಡವವಾಡುವಾಗ ಅದರ ಉಪಟಳಗಳಿಂದ ತಪ್ಪಿಸಿಕೊಳ್ಳಲು ಜನರು ಇಚ್ಛಿಸಿದುದರ ಫಲವಾಗಿ ರಾಜಪದವಿಯು ಉದಯವಾಯಿತು ಎಂದು ಕೌಟಿಲ್ಯನು ಹೇಳುತ್ತಾನೆ. ಜಾತಕಗಳೂ ಹಾಗೆಯೇ ನಿರೂಪಿಸುತ್ತವೆ.[5] ಹೀಗೆ ರಾಜಪದವಿಯ ಉದಯದ ವಿಷಯವಾಗಿ ಹೊರಟ ಕಥೆಗಳೂ ರಾಜನಿರುವುದು ಪ್ರಜೆಗಳಿಗಾಗಿ ಎಂಬ ಮೇಲಿನ ಅಂಶವನ್ನು ಪೋಷಿಸುತ್ತವೆ. ಪ್ರಜೆಗಳ ನಾಯಕನಾದ ರಾಜನನ್ನು ದೈವದ ಮಟ್ಟಕ್ಕೆ ಏರಿಸಿರುವುದೂ ಕಂಡುಬರುತ್ತದೆ. ರಾಜನು ಬಾಲಕನೇ ಆಗಿದ್ದರೂ ಅವನನ್ನು ಮನುಷ್ಯ ಎಂದು ಕರೆದು ಅವಮಾನಪಡಿಸಕೂಡದು, ಏಕೆಂದರೆ ದೊಡ್ಡದೇವತೆಯು ಮನುಷ್ಯನ ರೂಪದಲ್ಲಿ ಕಾಣಿಸಿಕೊಂಡಿದೆ ಎನ್ನುತ್ತಾನೆ ಮನು.[6] ರಾಜನೇ ಪ್ರತ್ಯಕ್ಷ ದೇವತೆ, ಅವನೇ 'ಕಾಲಕ್ಕೆ' ಕಾರಣ ಎಂಬ ಹೇಳಿಕೆಗಳು ಸಾಕಷ್ಟು ಪ್ರಸಿದ್ಧವಾಗಿವೆ. ಹೊಯ್ಸಳ ದೊರೆ ವಿಷ್ಣುವರ್ಧನನನ್ನು ವಿಷ್ಣುವಿನ ಹನ್ನೊಂದನೆಯ ಅವತಾರ ("ಏಕಾದಶಾವತಾರನ್") ಎಂದು ಶಾಸನವೊಂದು ಕರೆದಿದೆ.[7]

ರಾಜನ ಸ್ಥಾನಮಾನಗಳನ್ನು ಕುರಿತು ಪ್ರಾಚೀನ ಭಾರತದಲ್ಲಿ ಯಾವ ಅಭಿಪ್ರಾಯವನ್ನು ಹೊಂದಿದ್ದರು ಎಂಬುದನ್ನು ಕುರಿತು ಸ್ವಲ್ಪ ವಿಸ್ತಾರವಾಗಿ ವಿವೇಚಿಸಿದುದಕ್ಕೆ ಕಾರಣವೂ ಇದೆ. ಒಂದು ಗ್ರಾಮದ ಜೀವನವು ಆ ಗ್ರಾಮದ ದೇವಸ್ಥಾನದ ಸುತ್ತ ರೂಪಿತವಾಗುತ್ತಿದ್ದಂತೆ, ಒಂದು ದೇಶದ ಜನ ಜೀವನವು ಆ ದೇಶದ ರಾಜನನ್ನು ಅವಲಂಬಿಸಿದ್ದಿತು. ಅವನ ಏಳುಬೀಳುಗಳೇ ರಾಜ್ಯದ ಏಳುಬೀಳುಗಳು. ಇಡೀ ಪ್ರಪಂಚಕ್ಕೆ ಮಳೆ ಮತ್ತು ರಾಜ ಆಧಾರಭೂತಗಳಾಗಿವೆ, ಒಂದು ಪಕ್ಷ ಮಳೆ ಇಲ್ಲದಿದ್ದರೆ ಜನ ಹೇಗೋ ನಿರ್ವಹಿಸುತ್ತಾರೆ, ಆದರೆ ರಾಜನಿಲ್ಲದೆ ನಿರ್ವಹಿಸಲಾರರು ಎಂಬರ್ಥ ಬರುವಂತೆ ಒಂದು ಕನ್ನಡ ಪದ್ಯವಿದೆ.[8] ಆದ್ದರಿಂದ ಪ್ರಾಚೀನ ಕರ್ನಾಟಕದಲ್ಲಿ ರಾಜನಿಗೆ ಇದ್ದ ಸ್ಥಾನಮಾನಗಳು, ಅವನ ಸಹಾಯಕರಾದ ಅಧಿಕಾರಿಗಳು ಇವರನ್ನು ಕುರಿತು ವಿವೇಚನೆಮಾಡಿದರೆ ರಾಜ್ಯಾಡಳಿತದ ಬಹುಭಾಗವನ್ನು ತಿಳಿದುಕೊಂಡಂತೆ ಆಗುತ್ತದೆ.

## ರಾಜ

ಪ್ರಾಚೀನ ಕರ್ನಾಟಕದ ರಾಜರು ತಾವು ಮೂಲತಃ ದೈವೀಪುರುಷನೊಬ್ಬನಿಂದ ಇಳಿದುಬಂದವರೆಂದು ಹೇಳಿಕೊಳ್ಳಲು ಹೆಮ್ಮೆಪಡುತ್ತಿದ್ದರು. ರಾಜರು ದೈವದ ಅವತಾರ ಎಂಬ ಭಾವನೆಯು ಜನರಲ್ಲಿ ಬೆಳೆಯಲು ಇದೂ ಸ್ವಲ್ಪಮಟ್ಟಿಗೆ ಕಾರಣವಿರಬಹುದು. ಕದಂಬವಂಶವು ತನ್ನ ಮೂಲಪುರುಷ ಈಶ್ವರನೆಂದು ಭಾವಿಸುತ್ತದೆ. ತ್ರಿಪುರದಹನವಾದಮೇಲೆ ಶಿವನಿಗೆ ಆಯಾಸವೊದಗಿ ಅವನು ಒಂದು ಕದಂಬವೃಕ್ಷದ ನೆರಳನ್ನು ಆಶ್ರಯಿಸಿರಲು ಅವನ ಬೆವರಿನ ಹನಿಯೊಂದು ಕೆಳಗೆ ಬಿದ್ದಿತೆಂದೂ, ಅದರಿಂದ ಕದಂಬವಂಶವು ಉದ್ಭವಿಸಿತೆಂದೂ ಒಂದು ಶಾಸನವು ಹೇಳುತ್ತದೆ.[9] ಇದಕ್ಕಿಂತ ಪ್ರಾಚೀನವಾದ ತಾಳಗುಂದದ ಶಿಲಾಲೇಖನದ

---

4 ನಾವು 'Anarchy' ಎಂಬುದಕ್ಕೆ 'ಅರಾಜಕತೆ'ಯು ಸಮಾನವಾದುದೆಂದು ಭಾವಿಸುತ್ತೇವೆ. ಅರಾಜಕತೆ ಎಂದರೆ ರಾಜನಿಲ್ಲದಿರುವಿಕೆ ಎಂದರ್ಥ. 'Anarchy' ಎಂಬುದಕ್ಕೆ ಸಮಾನಪದ 'ಮಾತ್ಸ್ಯನ್ಯಾಯ' : ದೊಡ್ಡಮೀನು ಚಿಕ್ಕ ಮೀನನ್ನು ನುಂಗಿಹಾಕುವಂತೆ ಬಲಿಷ್ಠರು ದುರ್ಬಲರನ್ನು ಹಿಂಸಿಸುವುದೇ 'ಮಾತ್ಸ್ಯನ್ಯಾಯ.' [ರಾಷ್ಟ್ರವು ದಂಡಹೀನವಾದಾಗ ಮಾತ್ಸ್ಯನ್ಯಾಯವು ಪ್ರವರ್ತಿಸುವುದೆಂದು ಅಭಿಲಷಿತಾರ್ಥ ಚಿಂತಾಮಣಿಯು (ಮೈಸೂರು, ಪು. 178) ಹೇಳುತ್ತದೆ— "ದಂಡಹೀನೇ ಗತೇ ರಾಷ್ಟ್ರೇ ಮಾತ್ಸ್ಯೋ ನ್ಯಾಯಃ ಪ್ರವರ್ತತೇ."].

5 Agarwala : India as Known to Pāṇini, p. 411.

6 ಬಾಲೋऽಪಿ ನಾವಮಂತವ್ಯೋ ಮನುಷ್ಯ ಇತಿ ಭೂಮಿಪಃ । ಮಹತೀ ದೇವತಾ ಹ್ಯೇಷಾ ನರರೂಪೇಣ ತಿಷ್ಠತಿ ॥
(ಮಾನವಧರ್ಮಶಾಸ್ತ್ರ, VII. 8)

7 EC V. Bl. 58, 1117 A.D.

8 ಆರಯ್ಯೆ ಸರ್ವಭೂತಾ। ಧಾರಂ ಮೞೆಯುಂ ನೃಪೇಂದ್ರನುಂ ಮೞೆಗಾಲಂ। ಬಾರದೊಡಂ ನಿರ್ವಹಿಸುವ। ರಾರುಂ ನೃಪನಿಲ್ಲದಂದು ನಿರ್ವಹಿಸುವರೇ ॥ " (ಕಾವ್ಯಾವಲೋಕನ, ಪದ್ಯ 313)

9 EI. XIII. p. 301, 1125 A.D.

ಪ್ರಕಾರ ಬ್ರಾಹ್ಮಣಕುಲವೊಂದು ತಮ್ಮ ಮನೆಯ ಹತ್ತಿರ ಒಂದು ಕದಂಬವೃಕ್ಷವನ್ನು ಬೆಳೆಸಿದ್ದರಿಂದ ಅದಕ್ಕೆ ಕದಂಬಕುಲವೆಂದು ಹೆಸರಾಯಿತು.[10] ಬಹುಶಃ ಕದಂಬಕುಲಕ್ಕೆ ಆ ಹೆಸರು ಬರಲು ಬಹುಮಟ್ಟಿಗೆ ಇದೇ ನಿಜವಾದ ಕಾರಣ. ಸುಮಾರು ಮೂವತ್ತು ವರ್ಷ ಅಜ್ಞಾತವಾಗಿದ್ದು ಮತ್ತೆ ತಲೆಯೆತ್ತಿದ ಕದಂಬವಂಶದ ರಾಜರು ತಮ್ಮ ಐತಿಹಾಸಿಕ ಮೂಲವನ್ನು ಮರೆತುಬಿಟ್ಟು ದಂತಕಥೆಗಳನ್ನು ಕಟ್ಟಿದರು ಎಂಬ ಡಾ|| ಮೊರೇಸರ ಅಭಿಪ್ರಾಯ[11] ಸಾಧುವಾದುದು. ಚಾಳುಕ್ಯರು ಕೆಲವೆಡೆ ತಮ್ಮ ವಂಶಕ್ಕೆ ವಿಷ್ಣು ಮೂಲನೆಂದೂ, ಕೆಲವೆಡೆ ಬ್ರಹ್ಮ ಮೂಲನೆಂದೂ ಹೇಳಿಕೊಂಡಿದ್ದಾರೆ. ವಿಷ್ಣು→ ಬ್ರಹ್ಮ→ ಅಂಗೀರಸ್→ ಬೃಹಸ್ಪತಿ→ ಭರದ್ವಾಜ→ ದ್ರೋಣ→ ಅಶ್ವತ್ಥಾಮ. ಅಶ್ವತ್ಥಾಮನು ಒಮ್ಮೆ ಸಂಧ್ಯಾಸಮಯದಲ್ಲಿ ಅರ್ಘ್ಯ ಕೊಟ್ಟ ನಂತರ ಅವನ ಅಂಗೈಯಿಂದ ಚಳುಕಿ ಎನ್ನುವವನು ಹುಟ್ಟಿದನೆಂದೂ, ಅವನೇ ಚಾಳುಕ್ಯವಂಶಕ್ಕೆ ಮೂಲ ಪುರುಷನಾದನೆಂದೂ ಶಾಸನವೊಂದು ತಿಳಿಸುತ್ತದೆ.[12] ಬಿಲ್ಹಣನ ವಿಕ್ರಮಾಂಕದೇವಚರಿತೆ ಚಾಳುಕ್ಯವಂಶದ ಮೂಲವನ್ನು ಇನ್ನೊಂದು ರೀತಿಯಲ್ಲಿ ವಿವರಿಸುತ್ತದೆ. ಬ್ರಹ್ಮನು ಒಮ್ಮೆ ಸಂಧ್ಯಾವಂದನೆಯಲ್ಲಿರುವಾಗ ಇಂದ್ರನು ಭೂಮಿಯ ಮೇಲೆ ಅಧರ್ಮವು ಹೆಚ್ಚಿದೆಯೆಂದೂ, ಅದನ್ನು ಹೋಗಲಾಡಿಸಲು ವೀರನೊಬ್ಬನನ್ನು ಸೃಷ್ಟಿಸಬೇಕೆಂದೂ ಕೇಳಿಕೊಳ್ಳಲು ಬಂದಾಗ ಬ್ರಹ್ಮನು ತನ್ನ ದೃಷ್ಟಿಯನ್ನು ಅಂಗೈಮೇಲೆ ಪಸರಿಸುತ್ತಾನೆ. ಅಲ್ಲಿಂದ ವೀರನೊಬ್ಬನು ಧುಮ್ಮಿಕ್ಕುತ್ತಾನೆ. ಅವನೇ ಚಾಳುಕ್ಯವಂಶದ ಮೂಲಪುರುಷ.[13] ಗಂಗಕುಲ[14] ಮತ್ತು ಸಿಂದಕುಲ[15] ಮುಂತಾದುವೂ ಕೂಡ ಹೀಗೆಯೇ ಪೌರಾಣಿಕವಾದ ಉಗಮಗಳನ್ನು ಹೇಳಿಕೊಳ್ಳುತ್ತವೆ. ಬೇರೆ ಬೇರೆ ರಾಜವಂಶಗಳು ಹೀಗೆ ಪೌರಾಣಿಕ ಉಗಮಗಳನ್ನು ಹೇಳಿಕೊಳ್ಳಲು ಆರಂಭಿಸಿದ್ದು ಒಂಬತ್ತನೇ ಶತಮಾನದಿಂದೀಚೆಗೆ ಎಂದು ಫ್ಲೀಟ್ ಅಭಿಪ್ರಾಯಪಡುತ್ತಾರೆ.[16]

ರಾಜ್ಯದ ಉನ್ನತಿ ಅವನತಿಗಳು ಬಹುಮಟ್ಟಿಗೆ ರಾಜನನ್ನು ಅನುಸರಿಸುತ್ತಿದ್ದುದರಿಂದ ರಾಜ ಕುಮಾರನ ವಿದ್ಯಾಭ್ಯಾಸಕ್ಕೆ ಬಹುವಾದ ಗಮನವನ್ನು ಕೊಡುತ್ತಿದ್ದರು. ಇದರ ಸ್ಪಷ್ಟವಾದ ಚಿತ್ರವು ಎಲ್ಲಿಯೂ ದೊರಕದಿದ್ದರೂ ಪಂಪನು ತನ್ನ ಪಂಪಭಾರತದಲ್ಲಿ ವರ್ಣಿಸಿರುವ ಅರ್ಜುನನ ವಿದ್ಯಾಭ್ಯಾಸದ ಚಿತ್ರವು[17] ಆ ಕಾಲದ ರಾಜಕುಮಾರರ ಶಿಕ್ಷಣವನ್ನು ತಕ್ಕಮಟ್ಟಿಗೆ ಪ್ರತಿನಿಧಿಸುತ್ತದೆಯೆಂದು ಭಾವಿಸಬಹುದು (ಇದರ ವಿವರಗಳು ಹಿಂದಿನ ಅಧ್ಯಾಯವೊಂದರಲ್ಲಿ ಬಂದಿವೆ). ರಾಜರ ವಿಶೇಷಣಗಳನ್ನು ನೋಡಿದರೆ ಅವರಲ್ಲಿ ಬಹುಪಾಲು ಜನ ದೊಡ್ಡ ವಿದ್ಯಾವಂತರೂ ಶೂರರೂ ಆಗಿದ್ದರೆಂದು ಊಹಿಸಬಹುದು. ಗಂಗಕುಲದ ರಾಜ ನೊಬ್ಬನನ್ನು ಒಂದು ಶಾಸನವು "ಸಮಧಿಗತ ಸಕಲ ಶಾಸ್ತ್ರಾರ್ಥ ತತ್ವಃ" ಎಂದು ಕರೆದಿದೆ.[18] ಮತ್ತೊಂದೆಡೆ ರಾಜನೊಬ್ಬನನ್ನು "ದಾರುಣಾರಿಗಣವಿದಾರಣೋಪಲಬ್ಧ ವಿಭೂಷಣ ವಿಭೂಷಿತಃ..........ಸಮ್ಯಕ್ ಪ್ರಜಾಪಾಲನ ಮಾತ್ರಾಧಿಗತ ರಾಜ್ಯಪ್ರಯೋಜನಃ ವಿದ್ವತ್ಕವಿಕಾಂಚನ ನಿಕಷೋಪಲ ಭೂತಃ ನೀತಿಶಾಸ್ತ್ರಸ್ಯ

---

[10] EC. VII. Sk. 176, C. 450 A.D.

[11] Moraes : The Kadamba kula, p. 7.

[12] MAR (1935). p. 117, C. 951 A.D.

[13] Fleet : The Dynasties of the Kanarese Districts (Gazetteer of the Bombay Presidency, I. ii), p. 340.

[14] Rice : Mysore and Coorg from Inscriptions, p. 31.

[15] EI. III. p. 232, 991 A.D.

[16] EI. VI. pp. 74-6.

[17] ಪಂಪಭಾರತ, 2.34, ವ.

[18] MAR (1942). p. 145, C. 800 A.D.

ವಕ್ತೃಪ್ರಯೋಕ್ತೃ ಕುಶಲಃ.......” ಎಂದು ಕರೆದಿದೆ.[19] ಕಾಕುಸ್ಥವರ್ಮ ಎಂಬ ದೊರೆಗೆ ಅವನ ಉತ್ತಮ ಪ್ರಜ್ಞೆಯೇ ಭೂಷಣವಾಗಿದ್ದಿತು ಎಂದು ಶಾಸನವೊಂದು ಹೇಳುತ್ತದೆ.[20] ಹೀಗೆ ರಾಜನು ಮುಂದೆ ಚೆನ್ನಾಗಿ ಪ್ರಜಾಪರಿಪಾಲನೆಯನ್ನು ಮಾಡುವುದೊಂದನ್ನೇ ತನ್ನ ರಾಜ್ಯದ ಪ್ರಯೋಜನವಾಗಿ ಮಾಡಿಕೊಳ್ಳಬೇಕಾದರೆ, ಆದರ್ಶ ರಾಜನಾಗಬೇಕಾದರೆ ಅವನಿಗೆ ಉತ್ತಮ ಶಿಕ್ಷಣದ ಆವಶ್ಯಕತೆ ಎಷ್ಟು ಎಂಬುದು ಸ್ಪಷ್ಟವಾಗುತ್ತದೆ.

ರಾಜಕುಮಾರನು ರಾಜನಾಗಬೇಕಾದರೆ ಅವನಿಗೆ ಕೊನೆಯಪಕ್ಷ ಸುಮಾರು ಇಪ್ಪತ್ತನಾಲ್ಕು ವರ್ಷ ವಾದರೂ ಆಗಿರಬೇಕಾಗಿತ್ತು ಎಂದು ಕಾಣಿಸುತ್ತದೆ.[21] ಅಶೋಕನಿಗೆ ಪಟ್ಟವಾಗಲು ನಾಲ್ಕು ವರ್ಷ ಅವನು ಕಾಯಬೇಕಾಯಿತು. ಅದಕ್ಕೆ ಕಾರಣ, ಬಹುಶಃ ಅವನಿಗೆ ಇಪ್ಪತ್ತನಾಲ್ಕು ತುಂಬಿರಲಿಲ್ಲ.[22] ರಾಜನ ಪದವಿಯು ವಂಶಾನುಗತವಾಗಿ ತಂದೆಯಿಂದ ಸಾಮಾನ್ಯವಾಗಿ ಹಿರಿಯ ಮಗನಿಗೆ ಹರಿದುಬರುತ್ತಿದ್ದರೂ ಒಮ್ಮೊಮ್ಮೆ ಆ ಕ್ರಮವು ವಿಪರ್ಯಯವಾಗಿ ಅತ್ಯಂತ ಸಮರ್ಥನಾದ ಮಗನಿಗೆ ದೊರಕುತ್ತಿದ್ದಿತು. ಉದಾಹರಣೆಗೆ ರಾಷ್ಟ್ರಕೂಟ ದೊರೆ ಮೂರನೆಯ ಗೋವಿಂದ.[23] ರಾಜನು ಸತ್ತು ರಾಜಕುಮಾರನು ಅಪ್ರಾಪ್ತವಯಸ್ಕನಾಗಿದ್ದರೆ ರಾಜನ ಹತ್ತಿರದ ಬಂಧುವೊಬ್ಬನು ರಾಜಕುಮಾರನ ಪರವಾಗಿ ಆಳುತ್ತಿದ್ದನು. ಎರಡನೆಯ ಪುಲಿಕೇಶಿಯ ತಂದೆಯು ಮಡಿವಾಗ ಅವನಿನ್ನೂ ಚಿಕ್ಕ ವಯಸ್ಸು. ಅವನ ಚಿಕ್ಕಪ್ಪ ಮಂಗಲೇಶನು ಪಟ್ಟಕ್ಕೆ ಬಂದು ಪುಲಿಕೇಶಿಗೆ ಪಟ್ಟವನ್ನು ತಪ್ಪಿಸಿ ತನ್ನ ಮಗನನ್ನು ರಾಜನನ್ನಾಗಿ ಮಾಡುವ ಪ್ರಯತ್ನದಲ್ಲಿ ತನ್ನ ಪ್ರಾಣವನ್ನು ಕಳೆದುಕೊಂಡನೆಂದು ಐಹೊಳೆಯ ಶಾಸನವು ಹೇಳುತ್ತದೆ.[24] ರಾಜಕುಮಾರನು ಸಿಂಹಾಸನವನ್ನೇರುವ ಉತ್ಸವವನ್ನು 'ಪಟ್ಟಬಂಧ'ವೆಂದು,[25] 'ಪಟ್ಟಬಂಧನೋತ್ಸಾಹ'ವೆಂದು,[26] 'ವೀರಪಟ್ಟಬದ್ಧ ಶುಭಾಭಿಷೇಕ ಮಹೋತ್ಸವ'ವೆಂದು,[27] 'ರಾಜ್ಯಾಭಿಷೇಕ'[28]ವೆಂದು ಶಾಸನಗಳು ಕರೆದಿವೆ. ಈ ಪಟ್ಟಾಭಿಷೇಕಗಳು ಬಹು ವೈಭವದಿಂದ ನೆರವೇರುತ್ತಿದ್ದುವು. ರಾಜಕುಮಾರನಿಗೆ ರಾಜಧಾನಿಯಲ್ಲಿ ಪಟ್ಟಾಭಿಷೇಕವಾದರೆ ದೇಶಾದ್ಯಂತ ಅದರ ಉತ್ಸವವನ್ನು ಆಚರಿಸುತ್ತಿದ್ದರು, ಬೇರೆ ಬೇರೆಯವರು ರಾಜನ ಒಳಿತಿಗಾಗಿ ದೇವರುಗಳಿಗೆ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು.[29] ಬಾದಾಮಿಯ ಹತ್ತಿರವಿರುವ ಪಟ್ಟದಕಲ್ಲು ಯಾವಾಗಲೂ ಚಾಳುಕ್ಯರ ರಾಜಧಾನಿ ಯಾಗಿರಲಿಲ್ಲ. ಆದರೂ ಎಲ್ಲ ಚಾಳುಕ್ಯ ದೊರೆಗಳ ಪಟ್ಟಾಭಿಷೇಕ ಮಹೋತ್ಸವವು ಅಲ್ಲಿ ನಡೆಯುತ್ತಿದ್ದುದರಿಂದ ಆ ಊರಿಗೆ ಪಟ್ಟದಕಲ್ಲು ಎಂಬ ಹೆಸರು ಮುಂದೆ ರೂಢಿಗೆ ಬಂದಿತು. ("ಶ್ರೀ ಚಾಳುಕ್ಯಾನ್ವಯ ಪಟ್ಟಬಂಧ–

---

[19] EC. VI. Mg. 36, 749 A.D.

[20] EC. VII. Sk. 176, C. 450 A.D.

[21] Altekar : The Rāṣṭrakūṭas and their Times, p. 152.

[22] Jayaswal : Hindu Polity, p. 231. ಆದರೆ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಅವನ ತಂದೆ ಬಿಂದುಸಾರ ಮಡಿದಮೇಲೆ ದೇಶದಲ್ಲಿ ಅನಾಯಕತ್ವ ಉಂಟಾಗಿದ್ದರಿಂದ ಅದೆಲ್ಲವನ್ನೂ ಅಡಗಿಸಿ ದೇಶವನ್ನು ಸುಸ್ಥಿತಿಗೆ ತರಲು ನಾಲ್ಕು ವರ್ಷಗಳು ಬೇಕಾದುವೆಂದೂ, ಆಮೇಲೆ ಅಶೋಕ ಪಟ್ಟಾಭಿಷಿಕ್ತನಾದನೆಂದೂ ಕೆಲವರು ಭಾವಿಸುತ್ತಾರೆ. (Amulyachandra Sen : Aśoka's Edicts, pp. 14–15).

[23] Altekar : The Rāṣṭrakūṭas and their Times, p. 151.

[24] IA. VIII. p. 241, 634 A.D.

[25] SII. IX. i. 98, 1044 A.D.

[26] BKI. I. i. 110, 1070 A.D.

[27] EC. V. Hs. 17, C. 1141 A.D.

[28] MAR (1942). p. 145, C. 800 A.D.

[29] SII. IX. i. 98, 1044 A.D.

ನೋತ್ಸಾಹಾಸ್ಸಕಳ ವಿಷಯ ಪಟ್ಟಣಾಧಿಪತಿ ಶ್ರೀಮತ್ಕಿಸುವೊಳಲ........"[30]. ಕಿಸುವೊಳಲ್ ಎಂಬುದು ಪಟ್ಟದಕಲ್ಲಿಗೆ ಹಿಂದೆ ಇದ್ದ ಹೆಸರು). ಗಂಗವಂಶದ ಮೂಲಪುರುಷರಾದ ದಡಿಗ ಮತ್ತು ಮಾಧವರಿಗೆ ಅವರ ಗುರುಗಳಾದ ಸಿಂಹಣಂವ್ಯಾಚಾರ್ಯರು ಪಟ್ಟವನ್ನು ಕಟ್ಟಿದ ಬಳಿಕ ಹೇಳಿದ ಬುದ್ಧಿವಾದಗಳು ಬಹಳ ಗಮನಾರ್ಹ ವಾಗಿವೆ.[31]

ರಾಜಧಾನಿಯನ್ನು 'ನೆಲೆವೀಡು' ಎಂದು ಕರೆಯುತ್ತಿದ್ದರು[32] ("ಕಲ್ಯಾಣದ ನೆಲೆವೀಡಿನೊಳ್ ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ").[33] ರಾಜಧಾನಿಯಲ್ಲದೆ ಬೇರೊಂದು ಕಡೆ ರಾಜನು ಬೀಡನ್ನು ಬಿಟ್ಟಿದ್ದರೆ ಅದನ್ನು 'ವಿಜಯಸ್ಕಂಧಾವಾರ'[34] ಎಂದು ಕರೆಯುತ್ತಿದ್ದರು. ಆದರೂ ಕೆಲವೆಡೆ ರಾಜಧಾನಿಯನ್ನೇ 'ವಿಜಯಸ್ಕಂಧಾವಾರ' ಎಂದು ತಪ್ಪಿ ಕರೆದಿರುವುದೂ ಉಂಟು.[35] ರಾಜಧಾನಿಯನ್ನು 'ಅಧಿಷ್ಠಾನ' ಎಂದು ಕರೆದಿರುವುದೂ ಉಂಟು.[36]

ರಾಜಾಸ್ಥಾನಗಳ ಒಂದು ಸಮಗ್ರಚಿತ್ರವು ಎಲ್ಲಿಯೂ ದೊರೆಯದಿರುವುದು ದುರದೃಷ್ಟ. ರಾಜಕೀಯವಾದ ಮಂತ್ರಾಲೋಚನೆಗಾಗಿ ಸಭೆ ಸೇರುತ್ತಿದ್ದ ವಿಷಯವನ್ನು ಹಿಂದೆ ಆಗಲೇ ಚರ್ಚಿಸಿದ್ದೇವೆ. ಆಸ್ಥಾನಗಳಲ್ಲಿ ರಹಸ್ಯವಲ್ಲದ, ಸಾಮಾಜಿಕವಾದ ವಿಷಯಗಳನ್ನು ರಾಜನು ಚರ್ಚಿಸುತ್ತಿದ್ದನೆಂದು ಊಹಿಸ ಬಹುದು. ಅಂತಹ ಆಸ್ಥಾನಗಳಲ್ಲಿ ಸುಂದರಿಯರ ಗೀತ ವಾದ್ಯ ನೃತ್ಯ ವೇಣು ವೀಣಾರವಗಳು ನಡೆಯು ತ್ತಿದ್ದುವು. ಪಾಠಕರು ರಾಜನ ಗುಣಾವಳಿಗಳನ್ನು ಉದ್ಘೋಷಿಸುತ್ತಿದ್ದರು. ರಾಜನು ವಿದ್ವಾಂಸರೊಡನೆ ಮತ್ತು ಕವಿಗಳೊಡನೆ ಕಾವ್ಯ ನಾಟಕಗಳ ವಿಚಾರವನ್ನು ಚರ್ಚಿಸುತ್ತಿದ್ದನು.[37] ರಾಜನು ಅನೇಕ ವಿದ್ಯೆಗಳನ್ನು ಪರೀಕ್ಷೆಮಾಡುತ್ತಿದ್ದುದು ಬಹುಶಃ ಅಲ್ಲಿಯೇ.[38] ದೇಶದ ಎಲ್ಲೆಡೆಗಳಿಂದ ಜನರು ಬಂದು ರಾಜನ ಆಸ್ಥಾನ ವನ್ನು ಕಂಡು ಬೆರಗಾಗುತ್ತಿದ್ದರು, ರಾಜನನ್ನು ಆಶೀರ್ವದಿಸುತ್ತಿದ್ದರು. ಒಂದು ಶಾಸನವಂತೂ—ಸಕಳ ಜನರೂ ನಿತ್ಯವೂ ಮಾಡುವ ಆಶೀರ್ವಾದದ ಸಾಮರ್ಥ್ಯದಿಂದ ವಿಷ್ಣುವರ್ಧನನ ಆಯುರಾರೋಗ್ಯಾದಿಗಳು ಹೆಚ್ಚುತ್ತಿವೆ ಎಂದು ಹೇಳುತ್ತದೆ ("ಸಕಳ ಜನ ಸತ್ಯ ನಿತ್ಯಾಶೀರ್ವಾದ ಸಾಮರ್ಥ್ಯ ಸಂಪಾದಿತ ಕಲ್ಪಾಯುರಾರೋಗ್ಯಾಭಿವೃದ್ಧಿಯುಕ್ತ")[39]. ಜನರ ಪ್ರೀತಿವಿಶ್ವಾಸಗಳೆಂಬ ಭದ್ರವಾದ ಕೋಟೆಯ ಹಿಂದೆ ರಕ್ಷಣೆ ಪಡೆಯುವ ರಾಜನು ಅಜೇಯನು ಎಂಬ ಮಹಾಭಾರತದ ಹೇಳಿಕೆಯು[40] ಇಲ್ಲಿ ನೆನಪಿಗೆ ಬರುತ್ತದೆ.

---

30 BKI. I. i. 110, 1070 A.D.

31 EC. VII. Sh. 4, 1122 A.D. "ನುಡಿದುದನಾರೊಳಂ ನುಡಿದು ತಪ್ಪಿದೊಡಂ ಜಿನಶಾಸನಕ್ಕೊಡಂ। ಬಡದಡ-ಮನ್ಯನಾರಿಗೆರೆದಟ್ಟದಡಂ ಮಧುಮಾಂಸ ಸೇವೆಗೆ। ಯ್ದಡಮಕುಲೀನರಪ್ಪವರ ಕೊಳ್ಕೊಡೆಯಾದಡಮರ್ತ್ಥಿಗರ್ಥಮಂ। ಕುಡದೊಡಮಾಹವಾಂಗಣದೊಳೋಡಿದಡಂ ಕಿಡುಗುಂ ಕುಲಕ್ರಮಂ."

32 'ನೆಲೆವೀಡಿ'ನ ಮೇಲೆ ಫ್ಲೀಟ್ ಅವರ ಚರ್ಚೆಗೆ, ನೋಡಿ–IA. XII. pp. 110-1.

33 EI. XII. p. 274, 1077 A.D.

34 EI. XII. p. 150, 1087 A.D.

35 ಅದೇ.

36 KI. I. pp. iii-v.

37 EC. V. Mj. 18, 1095 A.D.

38 ವಿಷ್ಣುವರ್ಧನನ ಈ ವಿಶೇಷಣಗಳನ್ನು ನೋಡಿ : "ಸಂಗೀತ ಪ್ರಸಂಗಭಂಗೀ ಸಂಗತ ಚತುರ ಭರತನುಂ ತರ್ಕ ವಿದ್ಯಾ ವಿಶಾರದ ವಿಚಾರನಿರತನುಂ ಶಬ್ದವಿದ್ಯಾ ಸಮಗ್ರ ಲಕ್ಷಣ ಸುಶಿಕ್ಷನುಂ ವಿವಿಧ ವಿದ್ಯಾ ಪರೀಕ್ಷಾದಕ್ಷನುಂ ಸಕಳ ಪುರಾಣ ಪುಂಜಿತಾರ್ಥ ರತ್ನ ಕೋಶನುಂ ಕವಿತ್ವ ತತ್ವ ನಿಶಿತ ಬುದ್ಧಿಯುಂ ಅವಂಧ್ಯ ಮಂತ್ರ ಸಿದ್ಧಿಯುಂ ಕಾಂಭೋಜವಾಜಿರಾಜಿ ಸಂಚರಣ ತರಳ ಧರಣೀ ವಳಯನುಂ" [EC. IV. Ng. 3, I135 A.D.]

39 EC. IV. Ng. 76, 1145 A.D.

40 K. V. Rangaswami Iyengar : Considerations on some aspects of Ancient Indian Polity, p. 85.

ರಾಜ್ಯದ ಯೋಗಕ್ಷೇಮದ ಸೂತ್ರಗಳನ್ನು ಹಿಡಿದಿರುವ ರಾಜನ ಕರ್ತವ್ಯಗಳು ನಾಲ್ಕು ಎಂದು ಒಂದು ಶಾಸನವು ಹೇಳುತ್ತದೆ–"ಉದಧಿ ಮೇಖಳಾಳಂಕೃತ ವಸುಂಧರಾ ತಳಮಂ ಬಾಂಸ್ಕೇಳಿಸಿ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನಂ ಆತ್ಮಿ (ತ್ಮ) ರಕ್ಷಣಂ ಧರ್ಮಯತ್ನವೆಂಬ ಚತುರ್ವಿಧ ರಾಜನೀತಿಗಳನಳವಡಿಸಿ...."[41] ದುಷ್ಟರನ್ನು ಶಿಕ್ಷಿಸುವುದು, ಸದ್ವ್ಯಕ್ತಿಗಳನ್ನು ಕಾಪಾಡುವುದು, ತನ್ನನ್ನು ತಾನು ರಕ್ಷಿಸಿಕೊಳ್ಳುವುದು, ಧರ್ಮಕ್ಕೆ ಸಂಬಂಧಿಸಿದ ದಾನ, ದೇವಸ್ಥಾನ ನಿರ್ಮಾಣ ಮುಂತಾದ ಕಾರ್ಯಗಳನ್ನು ಕೈಗೊಳ್ಳುವುದು—ಇವೇ ಚತುರ್ವಿಧ ರಾಜನೀತಿಗಳು. ಪ್ರಾಚೀನ ಕರ್ನಾಟಕದ ರಾಜರ ಆದರ್ಶಗಳು ಇವು. ಐದನೆಯ ಶತಮಾನದ ಒಂದು ತಾಮ್ರಪಟವು ದೊರೆಯೊಬ್ಬನನ್ನು 'ಸರ್ವಜೀವಬಂಧುಃ' ಎಂದು ಕರೆಯುತ್ತದೆ.[42] ಎಷ್ಟೋ ಕೆರೆಗಳನ್ನೂ ದೇಗುಲಗಳನ್ನೂ ಕಟ್ಟಿಸಿ ವಿನಯಾದಿತ್ಯನೆಂಬ ಹೊಯ್ಸಳ ದೊರೆಯು ಪ್ರಜೆಗಳನ್ನು ಸಂತೋಷ ಪಡಿಸಿದನೆಂದು ಶಾಸನವೊಂದು ಹೇಳುತ್ತದೆ.[43] ರಾಷ್ಟ್ರಕೂಟ ದೊರೆಯೊಬ್ಬನನ್ನು ಒಂದು ತಾಮ್ರಪಟವು "ದೀನಾನಾಥ ಜನಾಹ್ಲಾದನಕರ ದಾನನಿರತಮನೋವೃತ್ತಿಃ" ಎಂದು ಕರೆಯುತ್ತದೆ.[44] ಜನರ ಯೋಗ ಕ್ಷೇಮಗಳನ್ನು ಪ್ರತ್ಯಕ್ಷವಾಗಿ ವಿಚಾರಿಸಲು ರಾಜನು ತನ್ನ ರಾಜ್ಯದಲ್ಲಿ ಆಗಾಗ್ಗೆ ಸಂಚರಿಸಬೇಕೆಂದು ನೀತಿ ಗ್ರಂಥಗಳು ವಿಧಿಸುತ್ತವೆ. ಕ್ರಿ. ಶ. 1124 ರ ಶಾಸನದಲ್ಲಿ ಹೊಯ್ಸಳ ದೊರೆಯೊಬ್ಬನು ಇಂತಹ ಸಂಚಾರ ವೊಂದರ ಸಮಯದಲ್ಲಿ ಮತ್ತವುರ ಎಂಬ ಊರಿಗೆ ಬಂದು ಅಲ್ಲಿ ಒಂದು ಬಸದಿಯನ್ನು ಕಟ್ಟಿಸಿಕೊಟ್ಟ ವಿಷಯವಿದೆ.[45] ಪಂಪಭಾರತದಲ್ಲಿ ಪಂಪನು ಪಾಂಡವರ ಪ್ರಯಾಣವನ್ನು ವರ್ಣಿಸುವ ನೆಪದಲ್ಲಿ ಬಹುಶಃ ಅರಿಕೇಸರಿಯ ದೇಶಸಂಚಾರವನ್ನು ವರ್ಣಿಸಿದ್ದಾನೆ.[46] ರಾಜನು ಪ್ರಜೆಗಳಿಗೆ ದುರ್ಲಭನಾಗಿರಲಿಲ್ಲ. ಎಷ್ಟೋ ಕಡೆ ಪ್ರಜೆಗಳು ಅಧಿಕಾರಿಗಳಿಂದ ತಮಗಾಗುತ್ತಿರುವ ಕಿರುಕುಳವನ್ನು ರಾಜನಿಗೆ ನೇರವಾಗಿ ಹೇಳಿಕೊಂಡಿರು ವುದುಂಟು. ನರಗ ಎನ್ನುವವನಿಂದ ತಗರೆನಾಡ ಜನರಿಗೆ ಬಹಳ ಹಿಂಸೆಯಾದಾಗ ಆ ನಾಡ ಜನರು ರಾಜನಲ್ಲಿ

---

[41] SII. IX. i. 220, C. 1127 A.D.

[42] EC. IV. Hs. 18, C. 450 A.D. ಬಾಂಧವರನ್ನು ಕಳೆದುಕೊಂಡಿರುವ ತನ್ನ ರಾಜ್ಯದ ಪ್ರಜೆಗಳಲ್ಲಿ ಒಬ್ಬೊಬ್ಬನೂ ತನ್ನನ್ನು ಆಯಾ ಬಾಂಧವನೆಂಬುದಾಗಿ ತಿಳಿಯುವಂತೆ ದುಷ್ಯಂತನು ತನ್ನ ಪಟ್ಟಣದಲ್ಲಿ ಸಾರಿಸುವ ವಿಷಯವನ್ನು ಇಲ್ಲಿ ನೆನೆಯಬಹುದು (ಅಭಿಜ್ಞಾನಶಾಕುಂತಲ, 6.154).

[43] EC. II. 143, 1131 A.D.

[44] EC. XII. Gb. 61, 812 A.D.

[45] MAR (1932). p. 171, 1124 A.D. ಈ ಶಾಸನದ ವಿಷಯವು ಅಪೂರ್ವವಾಗಿದೆ. ಮತ್ತವುರ ಎಂಬ ಹಳ್ಳಿಗೆ ವಿನಯಾದಿತ್ಯನು ಬಂದು ಬೆಟ್ಟದ ಮೇಲೆ ಏಕೆ ಬಸದಿ ಮಾಡಿಸಿದಿರಿ ಎಂದು ಕೇಳುತ್ತಾನೆ. ಅದಕ್ಕೆ ಆ ಊರಿನ ಮಾಣಿಕಸೆಟ್ಟಿಯು ಆ ಸಮಯವನ್ನು ಬಳಸಿಕೊಂಡು ನಿಮ್ಮ ಹಣವು ಮಲೆಯರಸುಗಳ ಬತ್ತಕ್ಕೆ ಸಮಾನ, ನೀವು ಒಂದು ಬಸದಿಯನ್ನು ಊರಲ್ಲಿ ಮಾಡಿಸಿಕೊಡಿ ಎಂದು ಕೇಳಿಕೊಂಡಿದ್ದಕ್ಕೆ ರಾಜನು "ಮೆಚ್ಚಿ ನಕ್ಕು" ಆ ಊರಲ್ಲಿ ಒಂದು ಬಸದಿಯನ್ನು ಕಟ್ಟಿಸಿಕೊಡುತ್ತಾನೆ. ರಾಜ ಮತ್ತು ಅವನ ಪ್ರಜೆಗಳ ಪ್ರೀತಿಪೂರ್ವಕ ಸಂಬಂಧದ ದ್ಯೋತಕವಾಗಿದೆ ಈ ಶಾಸನ.

[46] ಪಂಪಭಾರತ, 2.97, ವ. "ತಾಮಾದಿಗರ್ಭೇಶ್ವರರಪ್ಪುದಱಿಂ ತಳರ್ದೆಡೆಯೆಡೆಯ ಮರಂಗಳ ತೋಱಿಗಳ ಬಾಡಂಗಳ ಪೆಸರ್ಗಳಂ ಬೆಸಗೊಳುತ್ತುಂ ಮಹಾಗ್ರಹಾರಂಗಳ ಮಹಾಜನಂಗಳ ಕೊಟ್ಟ ಪೊನ್ನ ಜನ್ನವಿರಂಗಳುಮನವರ ಪರಕೆಯುಮಂ ಕೆಯ್ಕೊಳುತ್ತುಮವರ್ಗೆ ಬಾಧೆಯಾಗದಂತು ಕಾಪಂ ನಿಯಮಿಸುತ್ತುಂ ಕಾಲೂರ್ಗಳ ಗಂಡರ ಪೆಂಡಿರ ನಡೆಯುಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆನಗುತ್ತುಮಲ್ಲಿಗಲ್ಲಿಗೊಡೆದ ಕೆಱಿಗಮುಱಿದಾಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ ಬೀಡುದಾಣಂಗಳೊಳಿಕ್ಕಿದ ಬಳ್ಳಿಗಾವಣಂಗಳೊಳಂ ನನೆಯ ಜೊಂಪಂಗಳೊಳಂ ವಿಶ್ರಮಿಸುತ್ತಂ ಬಂದು . . . ." ದಿಲೀಪನು ರಥದಲ್ಲಿ ಹೋಗುತ್ತಾ ದಾರಿಯಲ್ಲಿನ ಮರಗಿಡಗಳ ಹೆಸರನ್ನು ಕೇಳಿ ತಿಳಿದುಕೊಳ್ಳುತ್ತಿದ್ದುದನ್ನು ಕಾಳಿದಾಸನು ಹೀಗೆ ವರ್ಣಿಸುತ್ತಾನೆ: "ಹೈಯಂಗವೀನಮಾದಾಯ ಘೋಷವೃದ್ಧಾನು-ಪಸ್ಥಿತಾನ್ । ನಾಮಧೇಯಾನಿ ಪೃಚ್ಛಂತೌ ವನ್ಯಾನಾಂ ಮಾರ್ಗಶಾಖಿನಾಂ ॥" [ರಘುವಂಶ, 1.45]

ಹೇಳಿಕೊಳ್ಳುವುದೂ, ರಾಜನು ನರಗನ ಹಿಂಸೆಯನ್ನು ತಪ್ಪಿಸಿದ ವಿಷಯವೂ ಶಾಸನವೊಂದರಲ್ಲಿದೆ.[47] ದೇಶದಲ್ಲಿ ತಾನೇ ಧರ್ಮಕಾರ್ಯಗಳನ್ನು ಕೈಗೊಳ್ಳುವುದರ ಜೊತೆಗೆ, ಹಾಗೆ ಧರ್ಮಕಾರ್ಯಗಳನ್ನು ಎಸಗಿದವರನ್ನು ಸನ್ಮಾನಿಸಿ ಅವರಿಗೆ ಪ್ರಶಸ್ತಿಗಳನ್ನು ರಾಜನು ಕೊಡುತ್ತಿದ್ದನು. ಪ್ರಶಸ್ತಿಗಳನ್ನು ಕೊಡುವ ರೀತಿ ಗಮನಾರ್ಹ ವಾದುದು. ಒಂದು—ರಾಜನು ದಾನಿಗೆ ತನ್ನ ಹೆಸರನ್ನು ಒಳಗೊಂಡಿರುವ ಒಂದ ಹೆಸರನ್ನು ಅಥವಾ ಬಿರುದನ್ನು ಕೊಡುತ್ತಿದ್ದುದು. ಇನ್ನೊಂದು—ದಾನಿಯ ಕೈಗೆ ಕಡಗವನ್ನು ತೊಡಿಸುತ್ತಿದ್ದುದು.[48] ಉದಾಹರಣೆಗೆ ಬಿದಿಯೆಱೆಯ ಎಂಬಾತನು ಒಂದು ಕೆರೆಯನ್ನು ಕಟ್ಟಿಸಿದ್ದಕ್ಕೆ ಅವನಿಗೆ ಶ್ರೀವೀರನೊಳಂಬನು 'ನೊಳಂಬದೊಡ್ಡ' ಎಂಬ ಹೆಸರಿಟ್ಟು ಅವನಿಗೆ ಕಡಗವಿಡುತ್ತಾನೆ. ಶ್ರೀಮುಖರಾಮ ಮತ್ತು ಪೊನ್ನೇಜರು ಎನ್ನುವವರೂ ಕೂಡ ಶ್ರೀಮುಖದೊಡ್ಡನೆಂದೂ ಪೊನ್ನೇಜದೊಡ್ಡನೆಂದೂ ಹೆಸರಿಟ್ಟು ಬೇರೆ ಬೇರೆ ಕಡಗಗಳನ್ನಿಡು ತ್ತಾರೆ.[49] ರಾಜನು ತನ್ನ ಹೆಸರಿನ ಒಂದು ಭಾಗವನ್ನೇ ಗೌರವಸೂಚಕವಾಗಿ ಕೊಡುತ್ತಿದ್ದ ಸೂಚನೆಯು ಇತರ ಹಲವು ಶಾಸನಗಳಲ್ಲಿಯೂ ಬಂದಿದೆ. ಸು. 980 ರಲ್ಲಿ ಇಱುವನೊಳಂಬ ಘಟೆಯಂಕಕಾಱ ಪಲ್ಲವಾದಿತ್ಯನು ಬಳಿಗಾಱ ಕರವಯ್ಯನಿಗೆ 'ಮುಮ್ಮಡಿ ಗವಱೆ ಪಲ್ಲವಾದಿತ್ಯ ನೊಳಂಬಸೆಟ್ಟಿ' ಎಂದು ಹೆಸರಿಟ್ಟು ಪಟ್ಟಗಟ್ಟಿ ಕೊಡೆ, ಕುದುರೆ, ಅಡ್ಡಣಿಗೆ, ಸಣ್ಣಪಟ್ಟ ಇತ್ಯಾದಿಗಳನ್ನು ಕೊಡುತ್ತಾನೆ.[50] ವೀರ ಮಹೇಂದ್ರನೊಳಂಬನು ಕೀರ್ತಿಗಾಮುಂಡನ ಮಗನಿಗೆ ನೊಳಂಬಗಾವುಂಡ ಎಂದು ಹೆಸರಿಟ್ಟು ಪಟ್ಟವನ್ನು ಕಟ್ಟುವ ವಿಷಯ ಇನ್ನೊಂದು ಶಾಸನದಲ್ಲಿದೆ.[51] ಹೀಗೆ ರಾಜನ ಹೆಸರಿನ ಒಂದು ಭಾಗವನ್ನು ಪಡೆದವರು ಅತಿಶಯ ಗೌರವವನ್ನು ಪಡೆದಂತೆ ಭಾವಿಸುತ್ತಿದ್ದರೆಂದು ಕಾಣಿಸುತ್ತದೆ. ಪಂಪನ ಪೋಷಕನ ಬಿರುದು ಗುಣಾರ್ಣವ ಎಂದಿದ್ದರೆ ಪಂಪನ ಬಿರುದು ಕವಿತಾಗುಣಾರ್ಣವ ಎನ್ನುವುದಾಗಿತ್ತು ಎಂಬುದನ್ನೂ ಇಲ್ಲಿ ಸ್ಮರಿಸಬಹುದು. (ಈ ಪದ್ಧತಿ ತಮಿಳುನಾಡಲ್ಲಿಯೂ ಇದ್ದಿತು).[51.1]

## ರಾಣಿಯರು

ಕರ್ನಾಟಕದ ರಾಣಿಯರು ಪಾಣಿನಿ ಹೇಳುವ 'ಅಸೂರ್ಯಂ ಪಶ್ಯೆ'[52]ಯರಾಗಿರಲಿಲ್ಲ. ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಜೀವನಗಳಲ್ಲಿ ಮಾತ್ರವಲ್ಲ, ರಾಜಕೀಯ ಜೀವನದಲ್ಲೂ ಪ್ರಧಾನ ಪಾತ್ರವನ್ನು ಅವರು ವಹಿಸಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ರಾಜನು ತನ್ನ ರಾಣಿಯರನ್ನು ರಾಜ್ಯದ ಬೇರೆ ಬೇರೆ ಭಾಗಗಳನ್ನಾಳಲು ನೇಮಿಸುತ್ತಿದ್ದನು. ಸುಮಾರು 920 ರಲ್ಲಿ ಬೂತುಗನ ಅರಸಿ ಸರಮಬ್ಬೆಯು ಕುರ್ಗ್ಗಲ್ಲನ್ನು ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[53] ಕ್ರಿ. ಶ. 997 ರಲ್ಲಿ ಶ್ರೀಮಚ್ಚಾಳುಕ್ಯ ಪೆರ್ಮಾನಡಿ ದೇವರ ಮಗಳು ಪಂಪಾದೇವಿಯು ರಾಜ್ಯಭಾರಮಾಡುತ್ತಿದ್ದಂತೆ ಇನ್ನೊಂದು ಶಾಸನವು ತಿಳಿಸುತ್ತದೆ.[54] ಇಂತಹ ರಾಣಿಯರಲ್ಲಿ ಅತ್ಯಂತ ಪ್ರಸಿದ್ಧಳಾದವಳು ಅಕ್ಕಾದೇವಿ. ಇವಳು ಕ್ರಿ. ಶ. 1050ರಲ್ಲಿ

---

[47] EC. VI. Kd. 147, 972 A.D.

[48] ಇದು ಇತ್ತೀಚಿನವರೆಗೆ ಪ್ರಶಸ್ತಿ ರೂಪವಾಗಿ ತೋಡಾಗಳನ್ನು ಕೊಡುತ್ತಿದ್ದ ಪದ್ಧತಿಯನ್ನು ನೆನಪಿಗೆ ತರುತ್ತದೆ.

[49] SII. IX, i. 17, C. 900 A.D.

[50] SII. IX. i. 41, C. 980 A.D.

[51] SII. IX. i. 39.

[51.1] K. Kailaspathy : Tamil Heroic Poetry, p. 59.

[52] Agarwala : India as known to Pāṇini, p. 405. ಸೂರ್ಯನ ಬೆಳಕನ್ನೇ ಕಾಣದಷ್ಟು ಸುರಕ್ಷಿತರಾಗಿ ಅರಮನೆಯ ಅಂತಃಪುರದಲ್ಲೇ ಯಾವಾಗಲೂ ಇರುವವರು 'ಅಸೂರ್ಯಂ ಪಶ್ಯೆ'ಯರು.

[53] EC. IV. Hs. 92, C. 920 A.D.

[54] EC. IV. Hs. 50, 997 A.D.

ಕಿಸುಕಾಡು 70, ತೊಱುಗರೆ 50, ಮಾಸವಾಡಿ 140 ಗಳನ್ನು 'ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನ'ದಿಂದ ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[55] ಕೆಲವೊಮ್ಮೆ ರಾಣಿಯರು ರಾಜ್ಯದ ರಾಜಧಾನಿಯಲ್ಲೇ ಇದ್ದು ಕೊಂಡು ಬೇರೆ ಬೇರೆ ಭಾಗಗಳನ್ನು ಆಳುತ್ತಿದ್ದರೆಂಬುದಕ್ಕೆ ಒಂದು ಶಾಸನದ ಆಧಾರವಿದೆ. ತ್ರಿಭುವನಮಲ್ಲನ ರಾಣಿ ಜಕ್ಕಳದೇವಿಯು ಕಲ್ಯಾಣದಲ್ಲಿರುವಾಗ ಒಬ್ಬ ವ್ಯಾಪಾರಿಯು ತಂದ ಸುಂದರ ಜಿನವಿಗ್ರಹವನ್ನು ಅವಳು ಕೊಂಡುಕೊಂಡಳೆಂದೂ, ಚಕ್ರವರ್ತಿಯು ನಿನ್ನ ಆಳ್ಕೆಯ ಊರಲ್ಲಿ ಅದನ್ನು ಪ್ರತಿಷ್ಠಿಸು ಎಂದಾಗ ಅವಳು ಅದನ್ನು ಇಂಗುಳಿಕೆಯಲ್ಲಿ ಪ್ರತಿಷ್ಠಿಸಿದಳೆಂದೂ ಆ ಶಾಸನವು ಹೇಳುತ್ತದೆ.[56] ಇಷ್ಟು ಪ್ರಭಾವಶಾಲಿಗಳಾಗಿದ್ದ ರಾಣಿಯರಿಂದ ರಾಜರು ರಾಜನೀತಿಯ ವಿಷಯವಾಗಿ ಸಲಹೆಗಳನ್ನು ಪಡೆಯುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ.

## ಮಂತ್ರಿಗಳು

ಪ್ರಾಚೀನ ಕರ್ನಾಟಕದ ದೊರೆಗಳು ದೊಡ್ಡ ಸೇನೆಯನ್ನು ಕಟ್ಟಿದ್ದರೂ ದೇಶವನ್ನಾಳುತ್ತಿದ್ದುದು ಸೈನ್ಯದ ಬಲದಿಂದಲ್ಲ, ನಾಗರೀಕ ಅಧಿಕಾರಿಗಳ ಬೆಂಬಲದಿಂದ.[57] ಆ ಆಡಳಿತವನ್ನು 'King-in-minsitry' ಎಂದು ವರ್ಣಿಸಬಹುದು. ಎಂದರೆ, ರಾಜನು ತನ್ನ ಮಂತ್ರಿಗಳ ಮೂಲಕ ಆಡಳಿತವನ್ನು ನಡೆಸುತ್ತಿದ್ದನು. ಎಂಥವರನ್ನು ಮಂತ್ರಿಗಳನ್ನಾಗಿ ಆರಿಸಿಕೊಳ್ಳಬೇಕು ಎಂಬುದರ ಚರ್ಚೆ ವಿಸ್ತಾರವಾಗಿ ಬಂದಿದೆ, ಅರ್ಥಶಾಸ್ತ್ರದಲ್ಲಿ.[58] ತನ್ನ ಸಹಪಾಠಿಗಳನ್ನು ಆರಿಸಿಕೊಳ್ಳಬೇಕೆಂದು ಭಾರದ್ವಾಜ, ತನ್ನ ಕಷ್ಟಗಳಲ್ಲಿ ಸಂರಕ್ಷಿಸಿದ ಮತ್ತು ಪ್ರಾಮಾಣಿಕರಾದ ವ್ಯಕ್ತಿಗಳನ್ನು ಆರಿಸಿಕೊಳ್ಳಬೇಕೆಂದು ಪರಾಶರ, ಅರ್ಥಮಂತ್ರಿಗಳಾಗಿ ದೇಶದ ಐಶ್ವರ್ಯವನ್ನು ವೃದ್ಧಿಗೊಳಿಸಬಲ್ಲ ಮೇಧಾವಿಗಳನ್ನು ಎಂದು ಪಿಶುನ, ತಂದೆ ತಾತಂದಿರು ಮಂತ್ರಿಗಳಾಗಿದ್ದು ಅವರ ವಂಶದಲ್ಲಿ ಹುಟ್ಟಿಬಂದವರನ್ನು ಎಂದು ಕೌಣಪದಂತ, ಅರ್ಥಶಾಸ್ತ್ರವನ್ನು ಚೆನ್ನಾಗಿ ಬಲ್ಲ ಹೊಸಬರನ್ನು ಎಂದು ವಾತವ್ಯಾಧಿ ಹೇಳುತ್ತಾರೆ– ಎಂದು ಬೇರೆಬೇರೆಯವರ ಅಭಿಪ್ರಾಯಗಳನ್ನು ಕೌಟಿಲ್ಯನು ಉದ್ಧರಿಸಿ, ಕೊನೆಗೆ ಬಾಹುದಂತೀ ಎಂಬುವಳ ಅಭಿಪ್ರಾಯಗಳನ್ನುದ್ಧರಿಸಿ ಆಕೆಯ ಅಭಿಪ್ರಾಯಗಳಿಗೆ ತನ್ನ ಸಮ್ಮತಿಯನ್ನು ಕೊಡುತ್ತಾನೆ. ಅವಳ ಪ್ರಕಾರ ವ್ಯಕ್ತಿಗಳು ಯಾರೇ ಆಗಿರಲಿ, ಅವರು ಉತ್ತಮವಂಶ ಸಂಭೂತರೂ, ವಿವೇಕಿಗಳೂ, ಧೀರರೂ, ಪ್ರಾಮಾಣಿಕರೂ ಆಗಿದ್ದರೆ ಅಂಥವರನ್ನು ಆರಿಸಿಕೊಳ್ಳಬೇಕು. ಎಂದರೆ ಮಂತ್ರಿಗಳ ಆಯ್ಕೆಯು ಸಂಪೂರ್ಣವಾಗಿ ಯೋಗ್ಯತೆಯ ಆಧಾರದಮೇಲೆ ನಡೆಯಬೇಕು. ಪ್ರಾಚೀನ ಕರ್ನಾಟದಕಲ್ಲಿ ಮಂತ್ರಿಪದವಿಯು ತಂದೆಯಿಂದ ಮಗನಿಗೆ ಹರಿದುಬರುತ್ತಿದ್ದಿತು. ಉದಾಹರಣೆಗೆ ವಿಷ್ಣುವರ್ಧನನು ತನ್ನ ಮಂತ್ರಿಯೊಬ್ಬನ ಮಗನಾದ ವಿಷ್ಣುವನ್ನು "ಅನ್ವಯಾಗತಪ್ರಧಾನಸಂತತಿಯುಂ ತನಗೆ ಧರ್ಮಸಂತತಿಯುಮೆಂಬ ಬಹುಮಾನದಿಂ"ದ ತಾನೇ ಉಪನಯನ ವನ್ನು ಮಾಡಿಸಿ, ಪ್ರಾಪ್ತವಯಸ್ಕನಾದಮೇಲೆ ದಂಡಾಧೀಶ ಪದವಿಯನ್ನು ಕೊಡುತ್ತಾನೆ.[59] ಹೀಗೆ ದಂಡಾಧೀಶ ಪದವಿಯನ್ನು ಪಡೆದ ವಿಷ್ಣುವು ಆ ಪದವಿಗೆ ಬೇಕಾದ ಸಕಲ ಅರ್ಹತೆಗಳನ್ನೂ ಪಡೆದಿದ್ದನೆಂದು ಶಾಸನವು ವರ್ಣಿಸುತ್ತದೆ. ವಡ್ಡಾರಾಧನೆಯ ಒಂದು ಕಥೆಯಲ್ಲಿ ರಾಜನು ತನ್ನ ಮಂತ್ರಿಯ ಸಾವಿನ ಬಳಿಕ ಅವನ ಪದವಿಯನ್ನು ಅವನ ಮಕ್ಕಳಿಗೆ ಕೊಟ್ಟದ್ದನ್ನು, ಅವರು ಅನರ್ಹರೆಂದು ತಿಳಿದಬಳಿಕ ಅವರ ಪದವಿಯನ್ನು ಕಿತ್ತುಕೊಂಡದ್ದನ್ನು ಅವರು ಯೋಗ್ಯತೆಯನ್ನು ಸಂಪಾದಿಸಿದ ಮೇಲೆ ಮರಳಿ ಹಿಂದಕ್ಕೆ ಕೊಟ್ಟದ್ದನ್ನು ಇಲ್ಲಿ

---

[55] EI. XV. p. 78, 1050 A.D.

[56] Jainism in South India, No. 1, 1094 A.D.

[57] "Hindu monarchy was not military but civil in character" [V.R.R. Dixitar : Hindu Administrative Institutions, p. 75].

[58] Arthaśāstra (Tr. Shamasastry), pp. 12–14.

[59] EC. V. Bl. 17, 1136 A.D.

ನೆನೆಯಬಹುದು.[60] ಎಂದರೆ, ಮಂತ್ರಿಪದವಿಯು ವಂಶಪಾರಂಪರ್ಯವಾಗಿ ಬರುತ್ತಿದ್ದರೂ, ಅರ್ಹತೆಯನ್ನೂ ರಾಜನು ಗಮನಿಸುತ್ತಿದ್ದನು. ರಾಜನು ಯೋಗ್ಯತೆಯನ್ನು ಗುರುತಿಸಿ ಹೊಸಬರನ್ನು ಮಂತ್ರಿಗಳಾಗಿ ಆರಿಸುತ್ತಿದ್ದನೆಂಬುದಕ್ಕೆ ಹಲವು ಶಾಸನಾಧಾರಗಳಿವೆ. ಮಾಳದಾಲೂರು ಎಂಬ ಅಗ್ರಹಾರದ ಸುರಿಗೆಯ ನಾಗರಸನನ್ನು ಶ್ರೀ ತ್ರಿಭುವನಮಲ್ಲನು ಮಹಾಪ್ರಧಾನಿಯಾಗಿ ಆರಿಸಿಕೊಂಡದ್ದಕ್ಕೆ ನಾಗರಸನ ಯೋಗ್ಯತೆಯೇ ಕಾರಣ. ನಾಗರಸನನ್ನು ಮೊದಲು ಅಂತಃಪುರಾಧ್ಯಕ್ಷನನ್ನಾಗಿ ಆರಿಸಿಕೊಂಡು ಆತನ ಯೋಗ್ಯತೆಯನ್ನು ಕಂಡು ಮೆಚ್ಚಿ ಬಳಿಕ ಮಹಾ ಪ್ರಧಾನಿಯನ್ನಾಗಿ ಆರಿಸಿಕೊಂಡಂತೆ ಆ ಶಾಸನದಿಂದ ಊಹಿಸಬಹುದು.[61] ನಾಗರಸನನ್ನು ಶಾಸನವು ಪ್ರಭು ಮಂತ್ರ ಉತ್ಸಾಹ ಎಂಬ ಶಕ್ತಿಗಳನ್ನು ಪಡೆದವನೆಂದೂ, ಪತಿಹಿತಾಭರಣನೆಂದೂ, ಮಂತ್ರಮಾಣಿಕ್ಯನೆಂದೂ 'ನೀತಿಚಾಣಕ್ಯ'ನೆಂದೂ, ಆತ್ರೇಯಗೋತ್ರ ಪವಿತ್ರನೆಂದೂ ಬಣ್ಣಿಸುತ್ತದೆ. ಕ್ರಿ. ಶ. 1090 ರ ಶಾಸನವೊಂದು ಸಂಧಿವಿಗ್ರಹಿ ಪದವಿಯನ್ನು ರಾಜನಿಂದ ಪಡೆದ ರವಿದೇವನು "ಶಸ್ತ್ರಶಾಸ್ತ್ರ ಸಾಹಿತ್ಯ ಕಳಾಜ್ಞಾನ ನಿಧಿ"ಯೆಂದು ಹೊಗಳುತ್ತದೆ.[62] ಹಾಗೆ ಮಂತ್ರಿಪದವಿಯನ್ನು ಕೊಡುವಾಗ ರಾಜನು ಮಂತ್ರಿಗೆ ಬೆಳ್ಗೊಡೆ, ಚಾಮರ, ಮಹಾಡಂಬರ ಅಥವಾ ಮೇಘಾಡಂಬರ, ಕುರುಳಕೊಂತ, 'ಒಜ್ಝರ' ಮುಂತಾದ ರಾಜಚಿಹ್ನೆಗಳನ್ನು ಕೊಡುತ್ತಿದ್ದನು.[63]—'ಉಪಾಯ ಸಂಪನ್ನ'ನಾಗಿದ್ದ ಅವನು ತನ್ನ ಮಂತ್ರ ಕ್ರಮದಿಂದ ಅನೇಕ ರಾಜ್ಯಗಳನ್ನು ಗೆದ್ದು ಚಕ್ರವರ್ತಿಗೆ ಅಧೀನವನ್ನಾಗಿ ಮಾಡಿದನೆಂದು ಅದೇ ಶಾಸನವು ಬಣ್ಣಿಸುತ್ತದೆ.[64] ಆದ್ದರಿಂದಲೇ ಶಾಸನವು ಅವನನ್ನು 'ಚಾಲುಕ್ಯ ರಾಜ್ಯದ ಮೂಲಂ' ಎಂದು ಹೊಗಳಿರುವುದು.

ರಾಜನು ಮಂತ್ರಿಗಳನ್ನು ಆರಿಸಿಕೊಂಡ ಮೇಲೆ ಅವರನ್ನು ರಹಸ್ಯವಾಗಿ ಅನೇಕ ಪ್ರಲೋಭನಗಳಿಗೆ ಒಳಗುಮಾಡಿ ಪರೀಕ್ಷಿಸಬೇಕೆಂದೂ, ಆ ಪ್ರಲೋಭನಗಳಿಗೆ ಮನಸೋತರೆ ಅವರನ್ನು ಓಡಿಸಬೇಕೆಂದೂ ಅರ್ಥಶಾಸ್ತ್ರವು ಹೇಳುತ್ತದೆ.[65] ಅಂತಹ ಪರೀಕ್ಷೆಗಳಲ್ಲಿ ವಿಜಯಿಗಳಾಗಿ ಪ್ರಾಮಾಣಿಕರೆಂದು ಸ್ಥಾಪಿತರಾದ ಮಂತ್ರಿಗಳನ್ನು 'ಚತುರುಪಧಾವಿಶುದ್ಧರ್'[66] ಎಂದು ಕರೆಯುತ್ತಿದ್ದರು. ಪ್ರಾಚೀನ ಕರ್ನಾಟಕದಲ್ಲಿಯೂ ಕೆಲವು ರಾಜರು ಅಧಿಕಾರಿಗಳನ್ನು ಪರೀಕ್ಷೆಗೆ ಗುರಿಮಾಡುತ್ತಿದ್ದರೆಂಬುದಕ್ಕೆ ಶಾಸನಾಧಾರವಿದೆ. ಸೌಜನ್ಯ, ಶೌಚ ಮುಂತಾದ ಗುಣಮೂರ್ತಿಯೂ, ಕೀರ್ತಿಶಾಲಿಯೂ, ಉದಾರಚರಿತನೂ ಆಗಿದ್ದ ಕೊಪ್ಪದೇವ ಎಂಬಾತನು ತನ್ನ ದೊರೆಯನ್ನು 'ಉಪಧಾ ವಿಶುದ್ಧಿಯಿಂ'ದ ಮೆಚ್ಚಿಸಿ ಭಂಡಾರದ ಕರಣಿಕ ವೃತ್ತಿಯನ್ನು ಪಡೆದನೆಂದು ಶಾಸನವೊಂದು ಹೇಳುತ್ತದೆ.[67]

ಪ್ರಾಚೀನ ಕರ್ನಾಟಕದ ದೊರೆಗಳ ಮಂತ್ರಿ ಮಂಡಲ ಅಥವಾ 'ಅಮಾತ್ಯ ಸಮಿತಿ'ಯ[68] ಬಲವೆಷ್ಟು ಎಂಬ ಪ್ರಶ್ನೆಗೆ ಉತ್ತರಿಸುವುದು ಸುಲಭವಲ್ಲ. ನೀತಿಗ್ರಂಥಗಳೂ ಸ್ಮೃತಿಗ್ರಂಥಗಳೂ ಈ ವಿಷಯವಾಗಿ

---

60 ವಡ್ಡಾರಾಧನೆ (1959), ಪು. 2 ; 4.

61 BKI. I. ii. 173, 1124 A.D.

62 SII. IX. i. 158, 1090 A.D.

63 ಅದೇ.

64 "ವಿಕ್ರಮಚಕ್ರಿಗೆ ನಿಜ ಮಂತ್ರಕ್ರಮದಿಂದೊತ್ತಿ ತಂದು ಕಡಿತಕ್ಕೆ ಧರಾಚಕ್ರಮನೇರಿಸಿದತುಳಪರಾಕ್ರಮ-ಮೇದೊರಿತೊ ರವಿಗ ದಂಡಾಧಿಪನಂ....". ಕಡಿತ ಎಂದರೆ ಲೆಕ್ಕದ ಪುಸ್ತಕ. 'ಕಡಿತಕ್ಕೆ ಏರಿಸು' ಎಂದರೆ ಲೆಕ್ಕದ ಪುಸ್ತಕದಲ್ಲಿ ಬರೆಯಿಸು, ಎಂದರೆ ಚಕ್ರವರ್ತಿಗೆ ಅಧೀನವಾಗಿ ಮಾಡು ಎಂದರ್ಥ.

65 Arthaśāstra (Tr. Shamasastry), pp. 16–17.

66 ಆದಿಪುರಾಣ, 1.81, ವ.

67 EI. XII. p. 274, 1077 A.D.

68 EC. III. Md. 78, 1022 A.D.

ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿವೆ. ಮಂತ್ರಿಗಳ ಸಂಖ್ಯೆ ಎಂಟರಿಂದ ಇಪ್ಪತ್ತರವರೆಗೆ ಇರಬಹುದೆಂದು ಅವು ಅಭಿಪ್ರಾಯಪಟ್ಟಿವೆ. ಕ್ರಿ. ಶ. 1050 ರಲ್ಲಿ ಆಳುತ್ತಿದ್ದ ಅಕ್ಕಾದೇವಿಗೆ ಏಳು ಜನ 'ಪ್ರಧಾನ'ರು ಅಥವಾ ಮಂತ್ರಿಗಳಿದ್ದಂತೆ ಶಾಸನವೊಂದು ಹೇಳುತ್ತದೆ.[69] ಇನ್ನೊಂದು ಶಾಸನವು ರಾಜನೊಬ್ಬನಿಗೆ ಐವರು ಪ್ರಧಾನರು ಇದ್ದ ವಿಷಯವನ್ನು ಹೇಳುತ್ತದೆ.[70] ಮತ್ತೊಂದು ಶಾಸನವು ಕದಂಬ ರಾಜ ಶ್ರೀ ಪೆರ್ಮಾಡಿ ಯು ಎಂಬತ್ತನಾಲ್ಕು ಊರುಗಳಲ್ಲಿ ಎಂಬತ್ತನಾಲ್ಕು ಮಂತ್ರಿಗಳನ್ನಿಟ್ಟಿದ್ದನೆಂದು ಹೇಳುತ್ತದೆ ('ಚತುರಶೀತಿ ನಗರಾಧಿಷ್ಠಿತ ನಿಜಾಮಾತ್ಯ ಸಾರ್ಥನುಂ').[71] ಬಹುಶಃ ಇಲ್ಲಿ ಅಮಾತ್ಯ ಎನ್ನುವ ಮಾತು 'ಕಿರಿಯ ಅಧಿಕಾರಿ' ಎಂಬ ಅರ್ಥದಲ್ಲಿ ಬಳಕೆಯಾಗಿರುವಂತೆ ತೋರುತ್ತದೆ. ಸೋಮದೇವನು ತನ್ನ ಯಶಸ್ತಿಲಕ ಚಂಪುವಿನಲ್ಲಿ ರಾಜನು ಒಬ್ಬ ಮಂತ್ರಿಯನ್ನೇ ಅವಲಂಬಿಸಿರಕೂಡದೆಂದೂ, ಹಾಗೆ ಮಾಡಿದರೆ ಬಳ್ಳಿಯು ಒಂದೇ ಕೊಂಬೆಯಿರುವ ವೃಕ್ಷವನ್ನು ಅವಲಂಬಿಸಿದಂತಾಗುವುದೆಂದೂ ಹೇಳುತ್ತಾನೆ.[72] ಅವನು ತನ್ನ ನೀತಿವಾಕ್ಯಾಮೃತದಲ್ಲಿ ರಾಜನು ಮೂವರು, ಐವರು ಅಥವಾ ಏಳು ಜನರನ್ನು ಮಂತ್ರಿಗಳನ್ನಾಗಿ ಆರಿಸಿಕೊಳ್ಳ ಬಹುದೆಂದು ಸೂಚಿಸಿ, ಆದರೂ ರಾಜನ ಏಳಿಗೆಯು ಒಬ್ಬ ಮಂತ್ರಿಯ ಶೀಲವನ್ನವಲಂಬಿಸಿರುವುದೆಂದು ಹೇಳುತ್ತಾನೆ.[73] ಅವನು ಹೇಳುವ ಮೂರು ಜನರ ಮಂತ್ರಿಮಂಡಲವು ಶಾಸನಗಳಲ್ಲಿ ಒಂದು ಕಡೆ ಉಕ್ತವಾಗಿದೆ. ಬನವಸೆ ನಾಡನ್ನು ಆಳುತ್ತಿದ್ದ ಬಿಜ್ಜಳನ ಮಹಾ ಪ್ರಧಾನ ಕೇಶಿಮಯ್ಯನಿಗೆ ಮೂವರು ಪ್ರಧಾನರಿದ್ದರೆಂದು ಒಂದು ಶಾಸನವು ವರ್ಣಿಸುತ್ತದೆ.[74] ಆದ್ದರಿಂದ ರಾಜನು ಮೂವರು ಐವರು ಅಥವಾ ಏಳು ಜನರಿರುವ ಮಂತ್ರಿಮಂಡಲವನ್ನು ರಚಿಸಿಕೊಳ್ಳುತ್ತಿದ್ದರೆಂದು ಭಾವಿಸಬಹುದು. ಈ ಸಂಖ್ಯೆಯ ಮಂತ್ರಿಮಂಡಲಗಳನ್ನು ಶಾಸನಗಳು ಉಲ್ಲೇಖಿಸಿವೆಯೆಂಬುದನ್ನು ಹಿಂದೆಯೇ ನೋಡಿದ್ದೇವೆ. ಸೋಮದೇವನ ಉಕ್ತಿಯು ಸಮಕಾಲೀನ ಸಂಗತಿಗೆ ಅನುಗುಣವಾಗಿದೆಯೆಂಬುದು ಅತ್ಯಂತ ಗಮನಾರ್ಹವಾದುದು.

ಮಂತ್ರಿಮಂಡಲದ ಮಂತ್ರಿಗಳನ್ನು ಮಹಾಪ್ರಧಾನಿ, ಮಹಾಮಾತ್ಯ (ಬಹುಶಃ ಇವೆರಡೂ ಒಂದೇ), ದಂಡನಾಥ, ಮಹಾದಂಡನಾಥ, ಸಂಧಿವಿಗ್ರಹಿ ಮುಂತಾದ ಹೆಸರುಗಳಿಂದ ಶಾಸನಗಳು ಕರೆದಿವೆ. ಮಂತ್ರಿಮಂಡಲದ ಒಬ್ಬೊಬ್ಬ ಸಚಿವನಿಗೂ ಆಡಳಿತದ ಯಾವ ಯಾವ ಶಾಖೆಗಳನ್ನು ಯಾವ ಯಾವ ಆಧಾರದ ಮೇಲೆ ರಾಜನು ಹಂಚುತ್ತಿದ್ದನೆಂಬ ವಿಷಯದಲ್ಲಿ ಸ್ಪಷ್ಟ ಚಿತ್ರವನ್ನು ಶಾಸನಗಳು ಕೊಡುವುದಿಲ್ಲ. ಏಕೆಂದರೆ ಒಬ್ಬನೇ ಮಂತ್ರಿಗೆ ಮೇಲಿನ ಎಲ್ಲ ವಿಶೇಷಣಗಳನ್ನೂ ಕೊಟ್ಟಿರುವುದು ಕಂಡುಬರುತ್ತದೆ. ಅಕ್ಕಾದೇವಿಯ ಏಳು ಜನ 'ಪ್ರಧಾನ'ರ ಹೆಸರುಗಳನ್ನೂ ಅವರಿಗೆ ಕೊಟ್ಟ ವಿಶೇಷಣಗಳನ್ನೂ ಒಂದು ಶಾಸನವು[75] ಹೀಗೆ ಕೊಟ್ಟಿದೆ— ಶ್ರೀಮನ್ ಮನೆವೆರ್ಗ್ಗಡೆ ಕಾಳಿದಾಸಯ್ಯ, ತಂತ್ರಪಾಳ ಮಿಳ್ಳಯ್ಯ, ತಂತ್ರಪಾಳ ಚಿಟ್ಟಿಮಯ್ಯ, ಪ್ರಧಾನ ದೆಮ್ಮಣ್ಣ, ಅಳಿಯಂ ಚಂದಿಮಯ್ಯ, ಅಡಪದ ಚಾವುಂಡರಾಯಂ, ತಂತ್ರದ ಸೇನಬೋವಂ. ಇವರಲ್ಲಿ ಚಂದಿಮಯ್ಯನು ಅವಳ ಅಳಿಯನಾಗಿದ್ದು ಅವಳಿಗೆ ಮಂತ್ರಿಯೂ ಆಗಿದ್ದನೆಂದು ಕಾಣುತ್ತದೆ. ಇವುಗಳಲ್ಲಿ ಮನೆವೆರ್ಗ್ಗಡೆ ಎಂಬುದು ಬಹುಶಃ ಸಂಸ್ಕೃತದ 'ಗೃಹಮಹತ್ತರ' ಎಂಬುದಕ್ಕೆ ಸಮಾನ.[76] ಮಂತ್ರಿಗಳ ಈ ಪಟ್ಟಿಯು ನಮಗೆ ಅಷ್ಟಾಗಿ ಸಹಾಯಕವಾಗುವುದಿಲ್ಲ.

---

69 EI. XV. p. 78, 1050 A.D.

70 SII. IX. i. 115, 1054 A.D.

71 EC. VII. Sk. 117, 1118 A.D.

72 Yaśastilaka and Indian Culture, p. 101.

73 ಅದೇ.

74 EC. VII. Sk. 185, 1158 A.D.

75 EI. XV. p. 78, 1050 A.D.

76 ಪೆರ್ಗಡೆ= ಮಹತ್ತರ. ಇವೆರಡೂ ದೊಡ್ಡ ಅಧಿಕಾರಿಗಳನ್ನು ಸೂಚಿಸುವ ಪದಗಳು. 'ಪೆರ್ಗಡೆ' ಎನ್ನುವುದು ಸಂಸ್ಕೃತದ 'ಮಹತ್ತರ'ದ ಅನುವಾದವಾಗಿರುವಂತಿದೆ. ಮಹತ್ತರ= ಮಹತ್+ತರ, greater, 'ಮಹತ್'ಗಿಂತ

ಮಹಾಪ್ರಧಾನ ಅಥವಾ ಮಹಾಮಾತ್ಯನು ಮಂತ್ರಿಮಂಡಲದ ಮುಖ್ಯಸ್ಥನೆಂದು ಭಾವಿಸಬಹುದು. ಮಾಧವಭಟ್ಟ ಎನ್ನುವವನನ್ನು 'ಸಮಸ್ತ ರಾಜ್ಯಭರ ನಿರೂಪಿತ ಮಹಾಮಾತ್ಯ ಪದವೀ ವಿರಾಜಮಾನ' ಇತ್ಯಾದಿಯಾಗಿ ಒಂದು ಶಾಸನವು ಕೀರ್ತಿಸುತ್ತದೆ.[77] ಅನೇಕ ಶಾಸನಗಳು ಬೇರೆ ಬೇರೆ ಮಹಾಮಾತ್ಯರನ್ನು ಇದೇ ರೀತಿಯಾಗಿ ಕೀರ್ತಿಸಿವೆ.[78] ಈ ಅನೇಕ ಮಹಾಪ್ರಧಾನರು ದಂಡನಾಯಕರೂ, ಅಂತಃಪುರಾಧ್ಯಕ್ಷರೂ ಆಗಿದ್ದರು. ದಂಡನಾಯಕ ಎಂಬ ವಿಶೇಷಣವು ಎಲ್ಲ ಮಂತ್ರಿಗಳಿಗೂ ಬಹುಮಟ್ಟಿಗೆ ಸಮಾನವಾದುದು. ಇಲ್ಲಿ ಕೆಲವು ದಂಡನಾಯಕರ ಗುಣಗಳನ್ನು ಮತ್ತು ಸಾಹಸಗಳನ್ನು ವಿವರಿಸುತ್ತೇವೆ. ರೇವದಾಸವೀಸೋತ್ತರ ದೀಕ್ಷಿತ ಎಂಬ ಬ್ರಾಹ್ಮಣನಿಗೆ ಗೊಜ್ಜಿಗದೇವನು ದಂಡನಾಥ ಪದವಿಯ ಜೊತೆಯಲ್ಲಿ ಗುಡಿ, ಶಂಖ, ಚಾಮರ, ಬೆಳ್ಗೊಡೆ, ಘಳಿಗೆ, ವಿಚಿತ್ರಾತಪತ್ರಧ್ವಜ (=ಪಾಳಿಧ್ವಜ ? ), ಪೆರ್ಬಿಡಿ (=ದೊಡ್ಡ ಹೆಣ್ಣಾನೆ), ಸೌಧ' ಚಿತ್ರದಂಡ, ಪಟು (=ವಸ್ತ್ರ), ಝಳಂಬ (ಅಂದರೆ ಮೇಲುವಸ್ತ್ರ), ಆನೆ, ಕುದುರೆ, ನಡೆಮಾಡ, ಮಹಾತೂರ್ಯ ಮುಂತಾದುವನ್ನು ಕೊಟ್ಟಂತೆ ಒಂದು ಶಾಸನವು ಹೇಳುತ್ತದೆ.[79] ಭೋಗದೇವರಸ ಎಂಬ ಮಹಾಪ್ರಚಂಡ ದಂಡನಾಯಕನನ್ನು ಮಹಾಸಾಮಂತಾಧಿಪತಿ ಎಂದು ಒಂದು ಶಾಸನದಲ್ಲಿ ಕರೆದಿದೆ. ಇವನು 'ಪಂಗರಗಿ ಪನ್ನೆರಡ'ನ್ನು ಆಳುತ್ತಿದ್ದನು.[80] ಚಾಳುಕ್ಯಚಕ್ರವರ್ತಿಯ ಮಹಾಮಾತ್ಯನಾಗಿದ್ದ ದಂಡನಾಯಕ ನಾಗದೇವಯ್ಯನು ಬೇರೆ ಬೇರೆ ನಾಡುಗಳನ್ನು ಆಳುತ್ತಿದ್ದಂತೆ ಶಾಸನವೊಂದು ನಿರೂಪಿಸುತ್ತದೆ.[81] ಬಹುಶಃ ರಾಜ್ಯದ ಬೇರೆ ಬೇರೆ ಭಾಗಗಳ ಆಳಿಕೆಯ ಹೊಣೆಯನ್ನು ದಂಡನಾಯಕರಿಗೆ ರಾಜನು ಹಂಚಿಕೊಡುತ್ತಿದ್ದನೆಂದು ಕಾಣುತ್ತದೆ. "ಮಹಾಪ್ರಚಂಡನಾಯಕ" ಪದವಿಯು ದಂಡನಾಯಕ ಪದವಿಗಿಂತ ಮೇಲಿನದು ಎಂದು ಶಾಸನವೊಂದರಿಂದ ತಿಳಿದುಬರುತ್ತದೆ.[82] ಮಹಾಪ್ರಚಂಡ ದಂಡನಾಯಕನಾಗಿದ್ದ ವಾಸುದೇವ ದಂಡಾಧೀಶನು "ಸೇನಾಧಿಪತ್ಯ ಪದವೀ ಧುರಂಧರ"ನೂ ಆಗಿದ್ದನು.[83] ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದ ದಂಡನಾಯಕರು ಒಮ್ಮೊಮ್ಮೆ ಪ್ರಬಲಿಸಿದಾಗ ರಾಜನು ಅವರ ಮೇಲೆ ದಂಡೆತ್ತಿಹೋಗಿ ನಿಗ್ರಹಿಸಬೇಕಾಗಿದ್ದಿತು.[84] ನಿಂಬದಂಡಾಧಿನಾಥ ಎನ್ನುವವನು ಮಂತ್ರಸಂಪಾದನದ ಪದಕ್ಕೆ ಮಂತ್ರಿಯಾಗಿ, ಯುದ್ಧಕ್ಕೆ ಶ್ರೇಷ್ಠ ದಂಡಾಧೀಶ್ವರನಾಗಿ ಇದ್ದನೆಂದೂ ಚತುರುಪಧಾಶುದ್ಧಿಯನ್ನು ಪಡೆದವನೆಂದೂ, ನೂತನ ಮುದ್ರಾರಾಕ್ಷಸ ನೆಂದೂ ಒಂದು ಶಾಸನವು ಹೊಗಳುತ್ತದೆ ("ಎನಿತಂ ಚಾಳುಕ್ಯಚಕ್ರೇಶ್ವರನ ನಿಜ ವಿಜಗೀಷು ಪ್ರಭಾಟೋಪಮಾಯ್ತನಿತರ್ಕಂ ಮಂತ್ರಸಂಪಾದನದ ಪದಕೆ ತಾಂ ಮಂತ್ರಿ ಯುದ್ಧಕ್ಕದೇ ನಚ್ಚಿನ ದಂಡಾಧೀಶ್ವರಂ ಚತುರುಪಧಾಶುದ್ಧಿಯಂ ತಾಳ್ದಿದಂ ನೂತನ ಮುದ್ರಾರಾಕ್ಷಸಂ ನೂತನ ಕಮಳಭವಂ ನಿಂಬ ದಂಡಾಧಿನಾಥಂ"[85]). ದಂಡನಾಯಕ ಎನ್ನುವುದು ಸೇನಾಧಿಪತಿ ಪದವಿಗೆ ಇನ್ನೊಂದು ಹೆಸರಾಗಿದೆ ಎಂಬುದು ಇದರಿಂದ ಸೂಚಿತವಾಗುತ್ತದೆ. ಆದರೆ ಮಧುವಪಯ್ಯನಾಯಕ ಎಂಬುವನಿಗೆ ದಂಡನಾಯಕ ಮತ್ತು

---

ದೊಡ್ಡದು ಎಂಬ ಅರ್ಥದಲ್ಲಿ ಪೆರ್ + ಕಡೆ (> ಪೆರ್ಗಡೆ) ಎಂಬಲ್ಲಿಯೂ 'ಕಡೆ' ಎಂಬುದು 'ಪೆರ್'ಗಿಂತ ದೊಡ್ಡದು ಎಂಬ ಅರ್ಥವನ್ನು ಸೂಚಿಸುವಂತೆ ಕಾಣುತ್ತದೆ. ಕಡ(ಡೆ)= exceed, excell, transgress, end. 'ಪೆರ್ಗಡೆ' ಎಂಬುದೇ ಈಗಿನ 'ಹೆಗ್ಗಡೆ'.

77 BKI. I. ii. 190, 1106 A.D.
78 BKI. I. i. 60, 1024 A.D. ; EC. IV. Ng. 51, 972 A.D.
79 EI. XIII. p. 329, 925 A.D.
80 EI. IV. p. 260, 1053 A.D.
81 EI. XV. p. 87, 1058 A.D.
82 EC. VII. Sk. 92, 1068 A.D.
83 BKI. I. i. 101, 1068 A.D.
84 EC. IV. Ng. 56, C. 1071 A.D.
85 BKI. I. i. 116, 1075 A.D.

ಸೇನಾಧಿಪತಿ ಎಂಬುವು ಬೇರೆ ಬೇರೆ ವಿಶೇಷಣಗಳಾಗಿ ಬಂದಿವೆ. ಕೆಲವು ದಂಡನಾಯಕರನ್ನು 'ಮಹಾ ಸಾಮಂತಾಧಿಪತಿ'ಗಳೆಂದು ಕರೆದಿದೆ.[86] ದಂಡಾಧೀಶನೂ, 'ಮಹಾಸೇನಾಧಿಪತಿ ಶಿರಶ್ಶೇಖರ'ನೂ ಆಗಿದ್ದ ಅನಂತಪಾಲ ಎಂಬುವನು ತನ್ನ ಶೌರ್ಯಕೃತ್ಯಗಳಿಂದ ಚಕ್ರವರ್ತಿಯ ಪ್ರಸಾದವನ್ನು ಪಡೆದು ಸಮಸ್ತ ಪ್ರಧಾನರಲ್ಲಿ ಅಗ್ರಗಣ್ಯನಾದನೆಂದು ಒಂದು ಶಾಸನವು ತಿಳಿಸುತ್ತದೆ.[87] ಪ್ರಾಚೀನ ಕರ್ನಾಟಕದ ಅತ್ಯಂತ ಸಮರ್ಥ ದಂಡನಾಯಕರಲ್ಲೊಬ್ಬ ಈ ಅನಂತಪಾಲ ಎನ್ನುವವನು.[87.1] ಶ್ರೀಮನ್ಮಹಾಪ್ರಧಾನನೂ, ಮಹಾ ಪ್ರಚಂಡ ದಂಡನಾಯಕನೂ ಆಗಿದ್ದ ಭೀಮಣಯ್ಯ ಎನ್ನುವವನು ಸಪ್ತಾರ್ಧಲಕ್ಷೆಯ 'ಅಚ್ಚುಪನ್ನಾಯ'ವನ್ನು ಆಳುತ್ತಿದ್ದನೆಂದೂ, ಮಹಾಮಾತ್ಯ ದಂಡನಾಯಕ ಮಾಧವಭಟ್ಟನೆನ್ನುವವನು ಅವನ 'ಪಾದಪದ್ಮೋಪಜೀವಿ' ಯಾಗಿದ್ದನೆಂದೂ ಒಂದು ಶಾಸನವು ಹೇಳುತ್ತದೆ.[88] ಭೀಮಣಯ್ಯನು ಆಳುತ್ತಿದ್ದ ನಾಡಿನಲ್ಲಿ ಅವನ ಪ್ರತಿನಿಧಿಯಾಗಿ, ಅವನ ಕೈಕೆಳಗಿನ ಅಧಿಕಾರಿಯಾಗಿ ಮಾಧವಭಟ್ಟನು ಇದ್ದನೆಂದು ಊಹಿಸಬಹುದು. ಸೋಮದಂಡಾಧಿಪ ಎನ್ನುವವನು ಶಬ್ದಶಾಸ್ತ್ರ, ತರ್ಕ, ಶ್ರುತಿ, ಸಾಹಿತ್ಯಶಾಸ್ತ್ರ, ಶುಕ್ರಶಾಸ್ತ್ರ ಮುಂತಾದುವು ಗಳಲ್ಲಿ ಭಾರ್ಗವನೆನ್ನಿಸಿಕೊಂಡಿದ್ದನೆಂದು ಒಂದು ಶಾಸನವು ತಿಳಿಸುತ್ತದೆ.[89] ಸಂದರ್ಭ ಸಿಕ್ಕಾಗ ಒಡೆಯನ ಹಣವನ್ನು ಅಪಹರಿಸುವ ದಂಡನಾಯಕರೂ ಇದ್ದರೆಂದು ಒಂದು ಶಾಸನವು ತಿಳಿಸುತ್ತದೆ.[90]

ಮಂತ್ರಿಮಂಡಲದಲ್ಲಿದ್ದ ಮತ್ತೊಬ್ಬ ಪ್ರಮುಖ ವ್ಯಕ್ತಿ ಸಂಧಿವಿಗ್ರಹಿ. ಇವನ ಸ್ಥಾನ ಬಹುಮಟ್ಟಿಗೆ ಆಧುನಿಕ ಕಾಲದ ವಿದೇಶಾಂಗ ಮಂತ್ರಿಯದು ಇದ್ದಂತೆ. ಅಕ್ಕಪಕ್ಕದ ರಾಷ್ಟ್ರಗಳೊಡನೆ ರಾಜನು ವ್ಯವಹರಿಸು ತ್ತಿದ್ದುದು ಬಹುಮಟ್ಟಿಗೆ ಇವನ ಮೂಲಕವೇ. ಸಂಧಿ ಮತ್ತು ಸಮರಗಳನ್ನು ನಿಶ್ಚಯಿಸುತ್ತಿದ್ದುದು ಇವನೇ. ಇವನು ಪರರಾಷ್ಟ್ರಗಳೊಡನೆ ವ್ಯವಹರಿಸಬೇಕಾಗಿದ್ದುದರಿಂದ ಹಲವಾರು ಭಾಷೆಗಳನ್ನೂ, ಲಿಪಿಗಳನ್ನೂ ಬಲ್ಲವ ನಾಗಿರುತ್ತಿದ್ದನು. ನಕುಳಾರ್ಯ ಎನ್ನುವ ಸಂಧಿವಿಗ್ರಹಿಯನ್ನು 'ಚತುರ್ಭಾಷಾ ಲಿಖಿತ್ಥಕ ವಿದ್ಯಾಧರ'ನೆಂದು ಒಂದು ಶಾಸನವು[91] ಕರೆದಿರುವುದರಲ್ಲಿ ಅರ್ಥವಿದೆ. ಸೋಮದೇವನೂ ಸಂಧಿವಿಗ್ರಹಿಯ ಈ ಗುಣಗಳನ್ನು ಎತ್ತಿ ಹೇಳುತ್ತಾನೆ–"ವಾಚಯತಿ ಲಿಖತಿ ಕವತೇ ಗಮಯತಿ ಸರ್ವಾ ಲಿಪೀಶ್ಚ ಭಾಷಾಶ್ಚ । ಆತ್ಮ ಪರ ಸ್ಥಿತಿ ಕುಶಲಃ । ಸ ಪ್ರತಿಭಃ ಸಂಧಿವಿಗ್ರಹೀ ಕಾರ್ಯಃ ॥".[92] ಶಾಸನಗಳಲ್ಲಿ 'ಹೇರಿಲಾಳ ಕನ್ನಡ ಸಂಧಿವಿಗ್ರಹಿ'ಯ ಹೆಸರು ಅನೇಕ ಕಡೆ ಬಂದಿದೆ[93]. 'ಹೇರಿ ಸಂಧಿವಿಗ್ರಹಿ',[94] 'ಹಿರಿಕನ್ನಡ ಸಂಧಿವಿಗ್ರಹಿ'[95] ಮುಂತಾದುವನ್ನು ನೋಡಿದರೆ 'ಹೇರಿ' ಎಂಬುದು 'ಹಿರಿಯ' ಎಂಬುದರ ರೂಪಾಂತರವಾಗಿದ್ದಂತೆ ಕಾಣುತ್ತದೆ ('ಹಿರಿಯ' ಎನ್ನುವುದು ಸಂಸ್ಕೃತದ 'ಮಹಾ' ಎನ್ನುವುದರ ಕನ್ನಡ ರೂಪಾಂತರ). ಲಾಳ ಅಥವಾ ಲಾಟವು ಈಗಿನ ಗುಜರಾತನ್ನು ಸೂಚಿಸುತ್ತದೆ. ಈ ಹೆಸರಿನ ಸಂಧಿವಿಗ್ರಹಿಗಳು ಬಹುಶಃ ಲಾಟ ಮತ್ತು ಕರ್ನಾಟಕ ದೇಶಗಳ

---

86 BKI. I. ii. 139, 1095 A.D.

87 BKI. I. ii. 147, 1099 A.D.

87.1 ಹೆಚ್ಚಿನ ವಿವರಗಳಿಗೆ, ನೋಡಿ—R. N. Gurav : 'Anantapala' (Studies in Indian History and Culture, pp. 229–237)

88 BKI. I. ii. 150, 1102 A.D.

89 EI. XIII. p. 301, 1125 A.D.

90 EC. VII. Sk. 137, 1114 A.D. "ಅವಸರಮಾಗೆ ಪಾರ್ದು ಕಿವಿವರ್ಚುವ ಸಂಗರವಾಗೆ ನೋಡೆ ಬೆರ್ಚುವ ಪತಿಯರ್ಥಮಂ ಕಳಲೊಡರ್ಚುವ...."

91 EC. V. Ag. 99, 1079 A.D.

92 Yaśastilaka and Indian Culture, p. 108.

93 BKI. I. ii. 124, 1077 A.D.

94 SII. IX. i. 232, 1135 A.D.

95 EC. VII. Sk. 267, 1147 A.D.

ವ್ಯವಹಾರವನ್ನು ನೋಡಿಕೊಳ್ಳುತ್ತಿದ್ದರೆಂದು ಕಾಣುತ್ತದೆ. 'ಲಾಳ ಸಂಧಿವಿಗ್ರಹಿ'ಯಾಗಿದ್ದ ರವಿದೇವನನ್ನು ಶಾಸನವೊಂದು "ಇಂತೆನೆ ಮೂಱುಂ ರಾಜ್ಯದೊಳಂ ತಾನೆ ಚಾಳುಕ್ಯನೃಪರ್ಗೆ ಕೆಯ್ಗನ್ನಡಿಯಾದಂ ತನ್ನ ಗುಣದಿನ್"[96] ಎಂದು ಪ್ರಶಂಸಿಸಿದೆ. ಇಲ್ಲಿಯ ಮೂರು ರಾಜ್ಯಗಳು ಚಾಲುಕ್ಯರ ಒಂದನೇ ಸೋಮೇಶ್ವರ, ಎರಡನೇ ಸೋಮೇಶ್ವರ ಮತ್ತು ಅವನ ತಮ್ಮ ಆರನೆಯ ವಿಕ್ರಮಾದಿತ್ಯರು ಆಳಿದ ರಾಜ್ಯಗಳನ್ನು ಸೂಚಿಸುತ್ತವೆ. ಈ ಮೂವರು ದೊರೆಗಳಿಂದ ಹೆಚ್ಚು ಹೆಚ್ಚಿನ ಅಧಿಕಾರಗಳನ್ನು ಪಡೆದು ಅವರ ಅಭ್ಯುದಯಕ್ಕೆ ಕಾರಣನಾದ ರವಿದೇವ ಬಹು ಪ್ರಭಾವಶಾಲಿ ವ್ಯಕ್ತಿಯಾಗಿದ್ದನು.[97]

ಸಂಧಿವಿಗ್ರಹಿಯ ಮತ್ತೊಂದು ಮುಖ್ಯ ಕರ್ತವ್ಯ-ಶಾಸನಗಳ ಮತ್ತು ದಾನಪತ್ರಗಳ ಪಾಠವನ್ನು ಸಿದ್ಧಪಡಿಸುವುದು. ಅನೇಕ ತಾಮ್ರಪಟಗಳ ಮತ್ತು ಶಾಸನಗಳ ಕೊನೆಯಲ್ಲಿ ಇಂತಹ ಮಾತುಗಳು ಕಂಡು ಬರುತ್ತವೆ-"ಮಹಾ ಸಂಧಿವಿಗ್ರಹಿಕ ಶ್ರೀರಾಮ ಪುಣ್ಯವಲ್ಲಭೇನ ಲಿಖಿತಮಿದಂ ಶಾಸನಂ"[98]; "ಮಹಾಸಂಧಿ-ವಿಗ್ರಾಹಾಧೀಕಾರಧೀಪತೇ ಶ್ರೀಧರಸ್ಯ ಲೀಖೀತಃ"[99]; "ಈ ಶಾಸನಮುಂ ಸಂಧಿವಿಗ್ರಹಿ ವೈಲಯ್ಯನುಂ ದೇವರ ಪೆರ್ಗ್ಗಡೆ ಕೀರ್ತಿಸೆಟ್ಟಿಯುಂ ಬರೆದ ಕಲೋಜಂ ಬೆಸಗೆಯ್ದಂ"[100]. ಯಾಜ್ಞವಲ್ಕ್ಯ ಸ್ಮೃತಿಯ ಅಪರಾರ್ಕನ ವ್ಯಾಖ್ಯಾನದಲ್ಲಿ ಉದ್ಧೃತವಾಗಿರುವ ಶ್ಲೋಕವೊಂದರಲ್ಲಿ 'ಸಂಧಿವಿಗ್ರಹ ಲೇಖಕ'ನ ಹೆಸರಿದೆ[101]. ಹೀಗೆ ಸಂಧಿವಿಗ್ರಹಿ ವಿದೇಶಾಂಗ ವ್ಯವಹಾರಗಳನ್ನು ನೋಡಿಕೊಳ್ಳುವುದರ ಜೊತೆಗೆ, ದಾನಪತ್ರಗಳ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುತ್ತಿದ್ದನು. ದಾನಪತ್ರವು ಹೊರಬಿದ್ದೊಡನೆಯೇ ದತ್ತಿಯ ವಸ್ತು ಒಂದು ಹೆಸರಿನಿಂದ ಇನ್ನೊಂದು ಹೆಸರಿಗೆ ವರ್ಗಾವಣೆಯನ್ನು ಪಡೆಯುತ್ತಿದ್ದಿತು. ಅದನ್ನು ರಾಜಧಾನಿಯ ಕಡತ ದಲ್ಲಿಯೂ, ಉಳಿದ ಕಡತಗಳಲ್ಲಿಯೂ ನಮೂದಿಸಬೇಕಿದ್ದಿತು. ಬಹುಶಃ ಈ ಅಂಶಗಳಿಗೆ ಸಂಧಿವಿಗ್ರಹಿಯು ಗಮನನನ್ನು ಕೊಡುತ್ತಿದ್ದನೆಂದು ಕಾಣಿಸುತ್ತದೆ.

ಸಂಧಿವಿಗ್ರಹಿಯ ನಾನಾ ಕರ್ತವ್ಯಗಳ ಚಿತ್ರವು ಯಶಸ್ತಿಲಕ ಚಂಪುವಿನಲ್ಲಿ ದೊರೆಯುತ್ತದೆ. ಪರರಾಷ್ಟ್ರ ಗಳಿಂದ ಬಂದ ದೂತರನ್ನು ಸ್ವಾಗತಿಸಿ ರಾಜನ ಬಳಿಗೆ ಕರೆದೊಯ್ಯುವವನೂ ಅವನೇ. ಪರರಾಷ್ಟ್ರಗಳ ರಾಜರಿಗೆ ಪತ್ರಗಳನ್ನು ಸಿದ್ಧಪಡಿಸುವವನೂ ಅವನೇ.[102] ಒಬ್ಬೊಬ್ಬ ರಾಜನ ಬಳಿಯೂ ಹಲವಾರು ಸಂಧಿ ವಿಗ್ರಹಿಗಳಿರುತ್ತಿದ್ದು ಅವರಿಗೆ ಮಹಾಸಂಧಿವಿಗ್ರಹಿಯು ಮುಖ್ಯಸ್ಥನಾಗಿರುತ್ತಿದ್ದಂತೆ ಕಾಣಿಸುತ್ತದೆ. ಮಹಾ ಪ್ರಧಾನಿಗಳೂ ಮಹಾ ದಂಡನಾಯಕರೂ ಕೂಡ ಸಂಧಿವಿಗ್ರಹಿಗಳಾಗಿರುತ್ತಿದ್ದರು.

ರಾಜ್ಯದ ಭಂಡಾರವನ್ನು ನೋಡಿಕೊಳ್ಳಲು ಒಬ್ಬ ಮಂತ್ರಿಯಿದ್ದನು. ಈತನಿಗೆ ಸಂಬಂಧಿಸಿದ ವಿವರಗಳು ಹೆಚ್ಚಾಗಿ ಶಾಸನಗಳಲ್ಲಿಲ್ಲ. ಕೆಲವು ಭಂಡಾರಿಗಳ ಹೆಸರುಗಳು ಶಾಸನಗಳಲ್ಲಿವೆ.[103] ಕೊಪ್ಪದೇವ ಎನ್ನುವವನು ತನ್ನ ಉಪಧಾವಿಶುದ್ಧಿಯಿಂದ ಜಯಸಿಂಹದೇವನನ್ನು ಮೆಚ್ಚಿಸಿ ಅವನ 'ನೆಗಟ್ದಕ್ಷಯನಿಧಿ ಭಂಡಾರಗರಣ ತನ'ವನ್ನು ಪಡೆದಂತೆ ಶಾಸನವೊಂದರಲ್ಲಿದೆ.[104] ಭಂಡಾರದ ಮೇಲ್ವಿಚಾರಣೆಗೆ ಬಹು ಎಚ್ಚರದಿಂದ ಅಧಿಕಾರಿ ಗಳನ್ನು ಆರಿಸಿಕೊಳ್ಳುತ್ತಿದ್ದರೆಂದು ಕಾಣುತ್ತದೆ.

---

96 EI. XII. p. 274, 1077 A.D.

97 ವ್ಯಕ್ತಿಯ ಅಭ್ಯುದಯಕ್ಕೆ ಅವನ 'ಗುಣ' ಕಾರಣವಾಗಿದ್ದಿತೆಂಬ ಇಲ್ಲಿಯ ಮಾತು ಗಮನಾರ್ಹ.

98 IA. XIX. p. 149, 692 A.D.

99 IA. XI. p. 126, 803–4 A.D.

100 EI. XIII. p. 170, 1050 A.D.

101 Yaśastilaka and Indian Culture, p. 108.

102 Yaśastilaka and Indian Culture, p. 107.

103 EC. VIII. Tl. 198, C. 1090 A.D. ; EC. XI. Cl. 43, 1108 A.D.

104 EI. XII. p. 274, 1077 A.D.

## ಇತರ ಅಧಿಕಾರಿಗಳು

'ದೂತ' ಎನ್ನುವ ಅರ್ಥದಲ್ಲಿ 'ನಿಯೋಗಿ' ಎನ್ನುವ ಪದವು ಶಾಸನಗಳಲ್ಲಿದೆ. ನಿಯೋಗಿಗಳು ಬಹುಶಃ ಸಂಧಿವಿಗ್ರಹಿಯ ನಿಯಂತ್ರಣದಲ್ಲಿರುತ್ತಿದ್ದರೆಂದು ಊಹಿಸಬಹುದು. ಪ್ರತಿಕಂಠಚಂದ ಎಂಬ ಪ್ರಸಿದ್ಧ ನಿಯೋಗಿಯೊಬ್ಬನ ಕೀರ್ತನೆಯು ಒಂದು ಶಾಸನದಲ್ಲಿ ಬಂದಿದೆ. ಬ್ರಾಹ್ಮಣಶ್ರೇಷ್ಠನಾದ ಇವನ ತಂದೆ ನಿಯೋಗಿ ಮಾಧವನು ಅನಂತಪಾಳನೆಂಬ ಮಹಾಪ್ರಧಾನಿಯ ಮತ್ತು ಅವನ ತಮ್ಮಂದಿರ ಕಾರ್ಯಸಿದ್ಧಿಗೆ ಧುರಂಧರನಾಗಿದ್ದನು. ತನ್ನ ನಿಯೋಗದಿಂದ ಹಲವರನ್ನು ಮೆಚ್ಚಿಸಿ 'ಉಪಾಯಚಾಣಕ್ಯ'ನೆನ್ನಿಸಿಕೊಂಡಿದ್ದನು. ಅವನ ಮಗ ಪ್ರತಿಕಂಠಚಂದನೂ ತಂದೆಯಷ್ಟೇ ಪ್ರಸಿದ್ಧನಾದ ನಿಯೋಗಿಯೆನಿಸಿಕೊಂಡನು. ಇವನಿಗಿಂತ ಹಿರಿಯ ನೀತಿವಂತರು, ಮಹಾಮತಿವಂತರು, ಸತ್ಯವಂತರು, ಗುಣವಂತರು, ಕಾಂತಿವಂತರು ಆ ಕಾಲದಲ್ಲಿ ಇಲ್ಲವೆಂದು ಆ ಶಾಸನವು ಹೇಳುತ್ತದೆ.[105] ಅವನ 'ಅಕ್ಕರ' ಅಥವಾ ಬರೆಹ (ಅಥವಾ ವಿದ್ಯೆ ?) ಅನೇಕ ರಾಜರ ಸಭೆಗಳಿಗೆ ಭೂಷಣಪ್ರಾಯವಾಗಿದ್ದಿತು.[106] ಮಾತ್ರವಲ್ಲ, ಅದು ಅವನ ಒಡೆಯನನ್ನು ವರ್ಧಿಸು ವಂತಹುದೂ ಆಗಿದ್ದಿತು. ಅದು ಅನೇಕರನ್ನು ಕಾಪಾಡುವಂತಹುದೂ ಆಗಿದ್ದಿತು. ಈ ಮಾತುಗಳಲ್ಲಿ ನಿಯೋಗಿ ಅಥವಾ ದೂತನ ಯೋಗ್ಯತೆ, ಕರ್ತವ್ಯ, ಹೊರೆ, ಹೊಣೆಗಳು ಪ್ರತಿಫಲಿತವಾಗಿರುವುದನ್ನು ಗಮನಿಸ ಬೇಕು. ರಾಜ್ಯದ ಮತ್ತು ರಾಜನ ಹಿತಾಹಿತಗಳು ದೂತನನ್ನು ಅವಲಂಬಿಸಿದ್ದುವು. ದಂಡನಾಯಕರಂತಹ ಹಿರಿಯ ಅಧಿಕಾರಿಗಳೂ ನಿಯೋಗಿಗಳಾಗಿ ಹೋಗಿಬರುತ್ತಿದ್ದರು.[107]

ಸೋಮದೇವನು ಅಕ್ಷಪಟಲಿಕ ಎಂಬ ಅಧಿಕಾರಿಯನ್ನು ಹೆಸರಿಸುತ್ತಾನೆ.[108] (ಇವನೇ ಸನ್ನತಿಯ ಶಾಸನ ಗಳಲ್ಲಿ ಬರುವ 'ಅಖಪಟಲಿಕ' ಎಂಬ ಅಧಿಕಾರಿ.) ಆಡಳಿತಕ್ಕೆ ಸಂಬಂಧಿಸಿದ ಮಹತ್ವಪೂರ್ಣ ದಾಖಲೆಗಳ ಮೇಲ್ವಿಚಾರಕನಾದ ಅಧಿಕಾರಿ ಇವನು. ದಾನಪತ್ರಗಳ ಪ್ರತಿಗಳನ್ನು ಸಂರಕ್ಷಿಸಿಡುತ್ತಿದ್ದ 'ಅಕ್ಷಪಟಲ'ವನ್ನು ರಾಜತರಂಗಿಣಿಯು ಹೆಸರಿಸುತ್ತದೆ. ಅದೇ ಕೃತಿಯಲ್ಲಿ ಬರುವ 'ಅಕ್ಷ ಪಟಲಾಧೀಶ'ನೂ[109], ಅಕ್ಷಪಟಲಿಕನೂ ಒಂದೇ ಎನ್ನುವುದರಲ್ಲಿ ಸಂದೇಹವಿಲ್ಲ. ಶಾಸನಗಳಲ್ಲಿ ಅಕ್ಷಪಟಲಾಧೀಶನ ಹೆಸರು ಹಲವೆಡೆ ಬಂದಿದೆ. ಆ ಪದವಿ ಯಲ್ಲಿದ್ದ ಥಲ್ಲ ಎನ್ನುವವನನ್ನು 'ಅಖಿಳ ರಾಜ್ಯಭರ ನಿರೂಪಿತ ಮಹಾಮಂತ್ರಾಕ್ಷಪಟಲಾಧಿಪತಿ' ಎಂದು ಒಂದು ಶಾಸನವು ಕರೆಯುತ್ತದೆ. ಎಂದರೆ, ಆ ಸ್ಥಾನವು ಬಹು ಹೊಣೆಗಾರಿಕೆಯದೆಂಬುದು ಇದರಿಂದ ಸೂಚಿತವಾಗುತ್ತದೆ. ಇನ್ನೊಂದು ಶಾಸನದ ಕೊನೆಯಲ್ಲಿ ಹೀಗಿದೆ–"ಮಯೇದಂ ಶಾಸನಾಧಿಕಾರಿಕಾಕ್ಷಪಟಲಿಕ ಮಹಾಪ್ರಚಂಡ ದಂಡನಾಯಕ ಕಾಳಿದಾಸಸುತ ವಿಕ್ರಮಾದಿತ್ಯಾನುಮತ್ಯಾ ವತ್ಸಗೋತ್ರ ಸಾಮವೇದಿಭಟ್ಟ ವಿಲಾಸೋಪಮಾನಾರ್ಯಮ ಸ್ವಾಮಿ ಸೂನುನಾ ಕಾಶ್ಮೀರ ಭಟ್ಟ ಮಲ್ಲಯ್ಯ ಪಂಡಿತೇನ ದಾನಾಧಿಕಾರಿಣಾ ಲಿಖಿತಮಿದಮಿತಿ ಶುಭಂ".[110]

---

105 BKI. I. ii. 147, 1099 A.D. "ಪಿರಿಯ ನಿಯೋಗದೊಳ್ನಡೆದೆನೆಂಬ ನಿಯೋಗಿಗಳೆಲ್ಲನೆಲ್ಲಿಯುಂ ಪಿರಿಯನೆನೊಂದು ಕಡುಗಿನೊಡು ಪ್ರತಿಕಂಠಚಂದನಿಂ ಪಿರಿಯರೆ ನೀತಿಮಂತರೆ ಮಹಾಮತಿಮಂತರೆ ಸಲೆ ಸತ್ಯಮಂತರೆ ಕರಂ ಗುಣಮಂತರೆ ಕಾಂತಿಮಂತರೇ".

106 "ಪರಿಕಿಪೊಡೆಲ್ಲರಕ್ಕರಮುಮಕ್ಕರಮೇ ಪ್ರತಿಕಂಟಚಂದನಕ್ಕರಮೆ ನೆಗತ್ತೆಯಕ್ಕರಮನೇಕರುಮಂ ಪೊರೆವಕ್ಕರ ಮಹೀಶ್ವರರ ಸಭಾಂತರಾಳಮನಳಂಕರಿಪಕ್ಕರವೆಂತುಮಾಳ್ದನಂ ಪಿರಿಯದಗುಂತಿಯೊಳ್ನಿಲಿಪುವಕ್ಕರಮಪ್ಪರಟ್ಟದಕ್ಕರ."

107 EC. VII. Sk. 10, 1098 A.D. ; EI. XXVIII. p. 33, 1082 A.D.

108 Yaśastilaka and Indian Culture, p. 108. ಕ್ರಿ. ಶ. ಎರಡನೇ ಶತಮಾನದ ನಾಸಿಕ್ ಶಾಸನದಲ್ಲಿ ಬರುವ 'ಫಲಕ–ವಾರ' ಎಂಬುದು ರಾಜನ ಅಕ್ಷಪಟಲ ಇಲಾಖೆಯಲ್ಲಿ ದಾನಪತ್ರಗಳ ಮೂಲಪ್ರತಿಗಳನ್ನು ಸಂಗ್ರಹಿಸಿಡುತ್ತಿದ್ದ ಕೋಣೆಯನ್ನು ಸೂಚಿಸುವಂತೆ ಕಾಣುತ್ತದೆ (D. C. Sircar : Indian Epigraphy, p. 99)

109 Yaśastilaka and Indian Culture, p. 109.

110 EI. XII. p. 150, 1087 A.D.

ಅಕ್ಷಪಟಲಾಧಿಕಾರಿಯ ಕರ್ತವ್ಯಗಳು ಮುಖ್ಯವಾಗಿ ಎರಡು. ಒಂದು, ಆಡಳಿತದ ದಾಖಲೆಗಳನ್ನು ಸುರಕ್ಷಿತವಾಗಿ ಇಡುವುದು ; ಮತ್ತೊಂದು, ದಾನಪತ್ರಗಳ ಪ್ರತಿಗಳನ್ನು ತೆಗೆದಿಡುವುದು. ರಾಜ್ಯದ ಯಾವುದೇ ಭಾಗಗಳಲ್ಲಿ ದಾನವೊಂದು ನಡೆದು ಅದರಲ್ಲಿ ನಿರೂಪಿತವಾದ ದತ್ತಿಯ ವಿಷಯವು ವಿವಾದಕ್ಕೆ ಎಡೆಗೊಟ್ಟಾಗ, ಅಥವಾ ಕೃತಕ ದಾನಪತ್ರವನ್ನು ಯಾವನೋ ಸೃಷ್ಟಿಸಿರುವನೆಂದು ಸಂದೇಹ ಬಂದಾಗ ಅಕ್ಷಪಟಲಾಧಿಕಾರಿಯ ವಶದಲ್ಲಿದ್ದ ದಾನಪತ್ರಗಳ ಪ್ರತಿಗಳು ವಿವಾದಪರಿಹಾರಕ್ಕೆ ಸಹಾಯವನ್ನುಂಟುಮಾಡುತ್ತಿದ್ದುವು. ಶಾಸನಗಳನ್ನು ಓದುವುದಕ್ಕಾಗಿಯೇ ಕೆಲವರನ್ನು ನೇಮಿಸಿಕೊಂಡಿದ್ದಂತೆ ಕಾಣುತ್ತದೆ. ಅವರನ್ನೇ ಶಾಸನಗಳು 'ಶಾಸನವಾಚಕ ಚಕ್ರವರ್ತಿ'[111] ಎಂದು 'ಸಕಳ ಶಾಸನ ವಾಚಕ ಚಕ್ರವರ್ತಿ'[112] ಎಂದು ಕರೆದಿರುವುದು. ಬಹುಶಃ ಇವರಿಗೆ ಪ್ರಚಲಿತ ಲಿಪಿಗಳ ಜೊತೆಗೆ ಪ್ರಾಚೀನ ಲಿಪಿಗಳೂ ತಿಳಿದಿದ್ದುವೆಂದು ಕಾಣಿಸುತ್ತದೆ. ಪ್ರಾಚೀನ ಕಾಲದ ಶಾಸನವೊಂದರಲ್ಲಿರುವ ದತ್ತಿಯ ವಿಷಯವನ್ನು ರಾಜನು ಮನ್ನಿಸಬೇಕಾದರೆ ಅದನ್ನು ಓದುವವರು ಇರಬೇಕು ತಾನೇ ! ದಂಡನಾಯಕರಂತಹ ಹಿರಿಯ ಅಧಿಕಾರಿಗಳನ್ನು ದಾಖಲೆಗಳ ಇಲಾಖೆಗೆ ನೇಮಿಸುತ್ತಿದ್ದರು.[113] ಶಾಸನವೊಂದು ಹಾಳಾಗಿ ಹೋಗಿ ಅದರ ಸ್ಥಾನದಲ್ಲಿ ಅದರ ಹೊಸ ಪ್ರತಿಗಳನ್ನು ಸ್ಥಾಪಿಸಬೇಕಾದರೆ ಅಕ್ಷಪಟಲಿಕನಂತಹ ಅಧಿಕಾರಿಯ ಒಪ್ಪಿಗೆಯನ್ನು ಪಡೆಯಬೇಕಿದ್ದಿತು. ಉದಾಹರಣೆಗೆ ಕ್ರಿ. ಶ 1005 ರಲ್ಲಿ ಹೊರಟ ಶಾಸನವೊಂದು 'ಸ್ಫುಟಿತ'ವಾಗಲು ಅದರ ಸ್ಥಾನದಲ್ಲಿ 'ಪುನರ್ದತ್ತಿ'ಯನ್ನು ಕೊಡುವಾಗ ಶ್ರೀಮನ್ಮಹಾಪ್ರಧಾನನೂ, 'ಪತ್ತಳಕರಣ'ನೂ ಆದ ಮಹಾದೇವಯ್ಯನಿದ್ದನೆಂದು ಒಂದು ಶಾಸನವು ಹೇಳುತ್ತದೆ. 'ಪತ್ತಳಕರಣ' ಎಂಬುದು ಬಹುಶಃ 'ಅಕ್ಷಪಟಲಿಕ' ಎಂಬುದಕ್ಕೆ ಸಮಾನ. ( ಪತ್ತಳೆ ಎಂದರೆ ಪತ್ರಿಕೆ, Record ? ). ಕ್ರಿ. ಶ. 1076 ರ ಒಂದು ಶಾಸನದಲ್ಲಿ (EC. VII. Sk.48) 'ಪೊತ್ಥಗ್ರಾಹಕ ಜನಾರ್ದಯ್ಯ' ಎಂಬ ಅಧಿಕಾರಿಯ ಹೆಸರಿದೆ. ಇವನು ರಾಜ್ಯದ ದಾಖಲೆಗಳನ್ನಿಡುತ್ತಿದ್ದ (ಪೊತ್ಥ < ಪುಸ್ತಕ) 'ಕಡಿತವೆರ್ಗಡೆ'ಯಂತಹ ಅಧಿಕಾರಿಯಿರಬೇಕು.

'ರಜ್ಜುಕ' ಎಂಬ ಹೆಸರಿನ ಅಧಿಕಾರಿಗಳು ಕ್ರಿ. ಶ. 2 ನೆಯ ಶತಮಾನದಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಾರೆ.[114] ಅಶೋಕನ ಕಾಲದಲ್ಲಿ ಮೊದಲು ಕಾಣಿಸಿಕೊಂಡ ಇವರು, ಬಹುಶಃ ಈಗಿನ ಮೋಜಣಿದಾರರ ಹಾಗೆ ಹೊಲಗಳನ್ನು ಅಳತೆಮಾಡುವ ಅಧಿಕಾರಿಯಾಗಿದ್ದರೆಂದು ಕಾಣುತ್ತದೆ.[115] (ರಜ್ಜುಕ ಎಂದರೆ ಹಗ್ಗವನ್ನು ಹಿಡಿದಿರುವವನು). ಜಾತಕಗಳಲ್ಲಿ 'ರಜ್ಜುಕ ಗಾಹಕ ಅಮಚ್ಚ'ರ ಹೆಸರಿದೆ.[116] ಈ ಹೆಸರಿನ ಅಧಿಕಾರಿಗಳು ಮುಂದೆ ಎಲ್ಲಿಯೂ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವುದಿಲ್ಲ.

## ರಾಜ್ಯಚಿಹ್ನೆಗಳು

ಇರುಗಳೆ (?), ಗುಡಿ, ಚಾಮರ, ಮೇಘಾಡಂಬರಾದಿಗಳು ರಾಜ್ಯಚಿಹ್ನೆಗಳೆಂದು ಒಂದು ಶಾಸನವು ತಿಳಿಸುತ್ತದೆ.[117] ಇವು ಬಹುಶಃ ಎಲ್ಲ ರಾಜರಿಗೂ ಸಮಾನವಾದುವು. ಆದರೆ ಒಂದೊಂದು ರಾಜವಂಶವೂ ತನಗೇ ವಿಶಿಷ್ಟವಾಗಿದ್ದ ವಾದ್ಯ ಅಥವಾ ವಾದ್ಯಗಳನ್ನೂ, ಧ್ವಜ ಮತ್ತು ಲಾಂಛನಗಳನ್ನೂ ಪಡೆದಿದ್ದಿತು. ಇವುಗಳ ಒಂದು ಸಣ್ಣ ಪಟ್ಟಿಯನ್ನು ಕೆಳಗೆ ಕೊಡುತ್ತೇವೆ :

---

111 EC. IX. Nl. 1, 1029 A.D.
112 EC. IV. Ch. 83, 1117 A.D.
113 IA. VIII. p. 10, 1078 A.D.
114 EC. VII. Sk. 263, C. 150 A.D.
115 Rice : Mysore and Coorg from Inscriptions, p. 14.
116 New Indian Antiquary, I, p. 247.
117 EC. VII. Sh. 10, C. 1085 A.D.

| ವಂಶ | ವಾದ್ಯ | ಧ್ವಜ | ಲಾಂಛನ |
|---|---|---|---|
| ಕದಂಬ | ಪೆರ್ಮಟ್ಟಿತೂರ್ಯ | ಕಪಿ | ಸಿಂಹ.[118] |
| ಬಾಣ | ಪೈಶಾಚಿಕ ಪಟಹ | ಕೃಷ್ಣ | ವೃಷಭ.[119] |
| (ವಂಶ ಗೊತ್ತಿಲ್ಲ) | ಕಂಬಳಪಱೆ | ಶಿಖಿಶಿಖಾ | ಸಿಂಹ.[120] |
| ರಾಷ್ಟ್ರಕೂಟ | ತಿವಳಿ;ಪಱೆ;ಢಕ್ಕಾ | ಪಾಳಿ | ಗರುಡ.[121] |
| ನಾಗ | ವಿಜಯಪಱೆ | ನಾಗ | ವ್ಯಾಘ್ರ.[122] |
| ಗಂಗ | — | ಪಿಂಛ | ಮದಗಜ.[123] |
| ಚಾಳುಕ್ಯ | ಪದಢಕ್ಕಾ | ಪಾಳಿ | ವರಾಹ.[124] |

ಇವುಗಳಲ್ಲಿ ವಾದ್ಯಗಳು ಮತ್ತು ಧ್ವಜಗಳು ಸ್ಪಷ್ಟ. ರಾಜರು ತಮ್ಮ ಮುದ್ರೆಗಳಲ್ಲಿ ಬಳಸುತ್ತಿದ್ದ ಗುರುತೇ ಲಾಂಛನ. ಪ್ರಾಚೀನ ಕರ್ನಾಟಕದ 'ಅಯ್ಯಾವೊಳೆ ಐನೂರ್ವ'ರಂತಹ ಹಿರಿಯ ವ್ಯಾಪಾರಶ್ರೇಣಿಗಳೂ ಪ್ರತ್ಯೇಕವಾದ ವಾದ್ಯ, ಧ್ವಜಗಳನ್ನು ಪಡೆದಿದ್ದುವು.[125]

ಮೇಲೆ ಹೇಳಿದ ಧ್ವಜಗಳಲ್ಲಿ ಪಾಳಿ ಧ್ವಜ ಎಂಬುದು ಗಮನಾರ್ಹವಾದುದು. ರಾಷ್ಟ್ರಕೂಟರ ಶಾಸನಗಳಲ್ಲಿ ಇದು ವಿಶೇಷವಾಗಿ ಕಾಣಿಸಿಕೊಳ್ಳುತ್ತದೆ–"ಶ್ವೇತಾತಪತ್ರತ್ರಯ ಕಹಳ ಶಂಖ ಪಾಳಿಧ್ವಜೋ (ಜೌ) ಕ ಕೇತು ಪತಾಕಾಚ್ಛಾದಿತ ದಿಗಂತರೆಲ್ಲಂ"[126]; "ಢಕ್ಕಾ ಪಾಳಿಮಹಾಧ್ವಜ ನಿತ್ಯ ಶ್ರೀಯಮೋಘ ವರ್ಷ ದೇವಸ್ಯ".[127] ರಾಷ್ಟ್ರಕೂಟರ ಸಾಮಂತನಾದ ಅರಿಕೇಸರಿಯ ಆಶ್ರಯದಲ್ಲಿದ್ದ ಪಂಪನ ಪಂಪಭಾರತದಲ್ಲಿಯೂ ಪಾಳಿಧ್ವಜದ ಉಲ್ಲೇಖವಿದೆ.[128] ಮೊದಲನೆಯ ಅಮೋಘವರ್ಷನ ಗುರುವಾದ ಜಿನಸೇನಾಚಾರ್ಯರ ಆದಿಪುರಾಣದಲ್ಲಿ ಇದರ ವಿವರಣೆಯಿದೆ.[129] ಪಾಳಿಧ್ವಜವೆನ್ನುವುದು ಒಂದು ಧ್ವಜವಲ್ಲ. ಅದೊಂದು ಧ್ವಜಗಳ ವಿಶಿಷ್ಟ ವಿನ್ಯಾಸ. ಪಾಲಿ ಎಂದರೆ ಸಂಸ್ಕೃತದಲ್ಲಿ ಸಾಲು ಎಂದರ್ಥ. ಹತ್ತು ದಿಕ್ಕುಗಳಲ್ಲಿಯೂ ಒಂದೊಂದು ದಿಕ್ಕಿನಲ್ಲಿ ಒಂದೊಂದು ರೀತಿಯ ನೂರೆಂಟು ಧ್ವಜಗಳು; ಎಂದರೆ ಹತ್ತು ದಿಕ್ಕುಗಳಿಂದ ಒಟ್ಟು ಒಂದು ಸಾವಿರದ ಎಂಬತ್ತು (1080) ಧ್ವಜಗಳು. ಇಂತಹ ಧ್ವಜವಿನ್ಯಾಸ ನಾಲ್ಕು ಕಡೆಯಲ್ಲಿ ರೂಪುಗೊಂಡರೆ ಅದು ಪಾಳಿಧ್ವಜವೆನ್ನಿಸಿಕೊಳ್ಳುತ್ತದೆ. ಎಂದರೆ, ಪಾಳಿಧ್ವಜದಲ್ಲಿ ಒಟ್ಟು ನಾಲ್ಕು ಸಾವಿರದ ಮುನ್ನೂರ ಇಪ್ಪತ್ತು (4320)

---

118 KI. I. 17, 1055 A.D.; EC. VII. Sk. 117, 1118 A.D.

119 SII. IX. i. 157, 1088 A.D.

120 ಅದೇ. 'ಶಿಖಾಸ್ಥಲ' ಎಂಬ ವಸ್ತುವನ್ನು ಗೌರವವಾಗಿ ದೆಹಲಿಯ ಬಾದಷಹನು ಚಿತ್ರದುರ್ಗದ ಮುರುಘಾ ಮಠಕೆ ಕೊಟ್ಟಂತೆ ವದಂತಿಯಿದೆ. ಅದನ್ನು ಬಿಚ್ಚಿನೋಡದೆ ವಾಸ್ತವವಾಗಿ ಅದೇನು ಎಂದು ಹೇಳುವುದು ಕಷ್ಟ.

121 BKI. I. i. 12, 867–8 A.D.; IA. XII. p. 218, 866–7 A.D.

122 EI. III. p. 232, 991 A.D.

123 Fleet: The Dynasties of the Kanarese Districts (Gazetteer of the Bombay Presidency, I. ii), p. 299.

124 ಅದೇ.

125 EC. VII. Sk. 118, 1054 A.D. ಅಯ್ಯಾವೊಳೆಯ ಐನೂರ್ವರದು 'ಗುಡ್ಡಧ್ವಜ.' ವಾದ್ಯ 'ಡವರುಗ ಪಱೆ'. ಇನ್ನೊಂದು ಶಾಸನದಲ್ಲಿ ವರ್ತಕರದು ಚಕ್ರಧ್ವಜ ಎಂದಿದೆ. (SII. IX. i. 297, 1177 A.D).

126 IA. XII. p. 218, 866–7 A.D.; EI. VI. p. 102, 866 A.D.

127 BKI. I. i. 12, 867–8 A.D.

128 ಪಂಪಭಾರತ, 10.27, ವ.–"ಮುಂದೆ ಪರಿವ ಧವಳಚ್ಛತ್ರಚಾಮರಗಳುಂ ಮಿಳಿರ್ವ ಪಾಳಿ ಕೇತನಂಗಳುಂ"; 14.13–"ಪಸರಿಸಿ ಬಂದ ಮಾಮರನೆ ಬೆಳ್ಗೊಡೆ ರಾಗದ ಪುಂಜದನ್ನವಪ್ಪಸುಗೆಯ ನೀಳ್ದ ಕೆಂದಳಿರೆ ಪಾಳಿ ಮಹಾಧ್ವಜಂ".

129 K. B. Pathak: 'The explanation of the term Pāḷidhvaja' (IA. XIV. p. 104).

ಧ್ವಜಗಳಿರಬೇಕು. ಆದ್ದರಿಂದಲೇ ಮೇಲೆ ಉಲ್ಲೇಖಿಸಿರುವ ಶಾಸನಗಳಲ್ಲಿ ಮತ್ತು ಪಂಪಭಾರತದಲ್ಲಿ ದಿಕ್ಕುಗಳೆಲ್ಲವೂ ಧ್ವಜಗಳಿಂದ ಆಚ್ಛಾದಿತವಾದುವೆಂದೂ, 'ಪಾಳಿ ಮಹಾಧ್ವಜ'ವೆಂದೂ ಕರೆದಿರುವುದು.

ರಾಜ್ಯ ಸೂಚಕವಾದ ಪಂಚಮಹಾವಾದ್ಯಗಳ ಪ್ರಸಕ್ತಿ ಶಾಸನಗಳಲ್ಲಿಯೂ,[130] ಕಾವ್ಯಗಳಲ್ಲಿಯೂ[131] ಹಲವೆಡೆ ಕಂಡುಬರುತ್ತದೆ. ಪಂಚಮಹಾಶಬ್ದವೆಂದರೆ ಮಹಾ ಎಂದು ಪ್ರಾರಂಭವಾಗುವ ಐದು ಬಿರುದುಗಳೆಂದೂ, ವಾದ್ಯವನ್ನು ಐದು ಸಲ ಬಾರಿಸುವುದೆಂದೂ ಬೇರೆ ಬೇರೆ ರೀತಿಗಳಲ್ಲಿ ಅರ್ಥೈಸಿದ್ದಾರೆ.[132] ಆದರೆ ಗ್ರೌಸ್ ಎಂಬ ವಿದ್ವಾಂಸರು ಪಂಚಮಹಾವಾದ್ಯಗಳು ಐದು ರೀತಿಯ ವಾದ್ಯಗಳನ್ನು ಸೂಚಿಸುತ್ತವೆಯೆಂದು ತುಲಸೀರಾಮಾಯಣದ ಆಧಾರದ ಮೇಲೆ ನಿರ್ಧರಿಸಿದ್ದಾರೆ.[133] ಶ್ರೀ ಕೆ. ಬಿ. ಪಾಠಕರು ಈ ಅಭಿಪ್ರಾಯಗಳನ್ನು ಪುಷ್ಟೀಕರಿಸಿ ನಿಜಗುಣಶಿವಯೋಗಿಯ ವಿವೇಕಚಿಂತಾಮಣಿಯ ಆಧಾರದ ಮೇಲೆ ಶೃಂಗ, ತಮ್ಮಟ, ಶಂಖ, ಭೇರಿ, ಜಯಘಂಟಾ ಎಂಬುವೇ ಆ ಐದು ಮಹಾವಾದ್ಯಗಳು ಎಂಬ ತೀರ್ಮಾನಕ್ಕೆ ಬಂದಿದ್ದಾರೆ.[134] ಕ್ರಿ. ಶ. 1092 ರ ಒಂದು ಶಾಸನದ ಪ್ರಕಾರ ತಿವರಿ, ದಟ್ಟ, ಖಂಡಿಕೆ, ಜಯಘಂಟೆ, ಕಹಳೆ ಇವೇ ಪಂಚಮಹಾವಾದ್ಯಗಳು.[135] ಡಾ|| ವಿ. ರಾಘವನ್ ಅವರು ಪಂಚಮಹಾಶಬ್ದಗಳ ಮೇಲೆ ಒಂದು ವಿಸ್ತಾರವಾದ ಲೇಖನವನ್ನು ಬರೆದು ತಮಗಿಂತ ಹಿಂದೆ ನಡೆದಿರುವ ಎಲ್ಲ ಚರ್ಚೆಗಳ ಸಾರಾಂಶವನ್ನು ಕೊಟ್ಟಿದ್ದಾರೆ. ಕಲ್ಹಣನು 'ಪಂಚಮಹಾಶಬ್ದ'ವು ಐದು ಅಧಿಕಾರಗಳನ್ನು ಸೂಚಿಸುವುದೆಂದು ಹೇಳಿ ಆ ಐದು ಅಧಿಕಾರಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಸಾಮಾನ್ಯವಾಗಿ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಬರುವ 'ಪಂಚಮಹಾಶಬ್ದ'ವು ಐದು ರೀತಿಯ ವಾದ್ಯಗಳನ್ನು ಸೂಚಿಸುವುದೆಂದು ಸ್ಪಷ್ಟವಾಗಿದ್ದರೂ ಕಲ್ಹಣನಲ್ಲಿ ಮಾತ್ರ ಅದು ಐದು ರೀತಿಯ ಅಧಿಕಾರಗಳನ್ನು ಸೂಚಿಸಲು ಕಾರಣವೇನು ? ಪಂಚಮಹಾವಾದ್ಯಗಳ ಗೌರವವು ಮಹಾ ಸಾಮಂತರಿಗೂ ಮಹಾ ಮಂಡಲೇಶ್ವರರಿಗೂ ಮೀಸಲಾಗಿದ್ದ ಗೌರವವಾಗಿದ್ದು, ಬಳಿಕ ಅವರ ಅಧಿಕಾರಗಳನ್ನು ಸೂಚಿಸುವುದಕ್ಕೆ ಕಲ್ಹಣನು ಆ ಶಬ್ದವನ್ನು ಬಳಸಿಕೊಂಡಿರಬಹುದೆಂದು ಡಾ|| ವಿ. ರಾಘವನ್ ಅಭಿಪ್ರಾಯಪಡುತ್ತಾರೆ.[136] ಪಂಚಮಹಾಶಬ್ದಗಳಲ್ಲಿ ಐದೂ ವಾದ್ಯಗಳೇ ಆಗಿರಬೇಕಿಲ್ಲ ; ಅವುಗಳಲ್ಲಿ ನಾಲ್ಕು ವಾದ್ಯಗಳಾಗಿರಬಹುದು, ಐದನೆಯದು ಮನುಷ್ಯನ ಧ್ವನಿಯಾಗಿರಬಹುದು ಎಂಬ ಅಂಶವೂ ಗಮನಾರ್ಹವಾದುದು.[137] ಪಂಚಮಹಾವಾದ್ಯಗಳ ಗೌರವವು ಮಂಡಲೇಶ್ವರರಿಗೆ ಮತ್ತು ಸಾಮಂತರಿಗೆ ಮಾತ್ರ ಮೀಸಲಾದುದು. ಆ ಗೌರವವು ದೇವಸ್ಥಾನಗಳಲ್ಲಿ ದೇವರಿಗೂ ಸಲ್ಲುತ್ತಿದ್ದಿತೆಂದು ಶಾಸನವೊಂದರಿಂದ ತಿಳಿಯುತ್ತದೆ. 'ಪಂಚಮಹಾಶಬ್ದವಂ ತ್ರಿಕಾಳ ಬಾಜಿಸುವುದಕ್ಕೆ' ದತ್ತಿಯನ್ನು ಬಿಟ್ಟುಕೊಟ್ಟ ವಿಷಯವು ಆ ಶಾಸನದಲ್ಲಿದೆ.[138]

---

130 EC. II. 35, C. 800 A.D.

131 ಪಂಪಭಾರತ, 1.49–" ಸಮನೆನಿಸುವರ್ ಪ್ರಶಸ್ತಿಕ್ರಮದೊಳ್ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಂತರೆನಲ್ ಸಮನೆನಿಪರೆ ಗುಣದೊಳರಿಗನೊಳ್ ಸಾಮಂತರ್".

132 Sir Walter Elliot : 'On the Naubat' (IA. V).

133 F. S. Growse : 'The Phrase Pañcamahāśabda' (IA. V).

134 IA. XII. pp. 95-6.

135 EC. VIII. Sb. 153, 1092 A.D.

136 V. Raghavan : 'Pañca-Mahā-Śabda' (Indian Linguistics-Turner Jubilee Volume, I, 1958, pp. 308-9).

137 ಅದೇ, ಪು. 308.

138 EC. III. Nj. 164, 1092 A.D. ಈಗ ಗೋಕರ್ಣದ ಮಹಾಬಲೇಶ್ವರ ದೇವಸ್ಥಾನದಲ್ಲಿ ದೇವರ ಗೌರವಾರ್ಥವಾಗಿ ಬಾರಿಸುವ ವಾದ್ಯಗಳನ್ನು 'ಪಂಚವಾದ್ಯ'ಗಳೆಂದು ಕರೆಯುತ್ತಾರೆ. ಆದರೆ ಅವುಗಳ ಸಂಖ್ಯೆ ಐದಕ್ಕಿಂತ ಹೆಚ್ಚಾಗಿದೆ–ಶ್ರುತಿ, ಮೌರಿ, ಸಮ್ಮೇಳ, ವೀರಣ, ದವಣ, ತಾಳ, ತಾಸ್‌ಮಾರು ಇತ್ಯಾದಿ. ಈ ಪಟ್ಟಿಗೆ ಬಹುಶಃ ಶಂಖವನ್ನೂ ಸೇರಿಸ

ಪ್ರಾಚೀನ ಕರ್ನಾಟಕದಲ್ಲಿ ಈಗಿನ ರಹದಾರಿ (Pass-ports) ಗಳನ್ನು 'ಉಂಡಿಗೆ'ಗಳೆಂದು ಕರೆಯುತ್ತಿದ್ದರು. ಉಂಡಿಗೆಗಳ ಮೇಲೆ ಆ ರಾಜ್ಯದ ರಾಜನ ಲಾಂಛನವನ್ನು ಒತ್ತುತ್ತಿದ್ದರು. ಗಂಗವಂಶದ ಉಂಡಿಗೆಯ ಮೇಲೆ ಆನೆಯ ಚಿತ್ರವಿರುವುದಕ್ಕೆ ಒಂದು ಕಥೆಯನ್ನೇ ನೆಯ್ಯುತ್ತವೆ ಶಾಸನಗಳು. ಗಂಗವಂಶದ ವಿಷ್ಣುಗುಪ್ತನೆಂಬುವನು ನೇಮಿನಾಥ ತೀರ್ಥಂಕರನ ಕಾಲದಲ್ಲಿ ಐಂದ್ರಧ್ವಜವೆಂಬ ಪೂಜೆಯನ್ನು ಮಾಡಿದ್ದರಿಂದ ಇಂದ್ರನು ಪ್ರೀತನಾಗಿ ತನ್ನ ಐರಾವತವನ್ನು ಅವನಿಗೆ ಕೊಟ್ಟನೆಂದೂ, ಅವನು ತನ್ನ ಎರಡನೆಯ ಮಗನಾದ ಶ್ರೀದತ್ತನಿಗೆ ಸಕಲ ರಾಜ್ಯವನ್ನೂ, ಆ ಗಜವನ್ನೂ ಕೊಟ್ಟನೆಂದೂ, ಅಂದಿನಿಂದ 'ಆನೆಯುಂಡಿಗೆ'ಯು ಸಲ್ಲಲಾರಂಭವಾಯಿತೆಂದೂ ಶಾಸನಗಳು ಹೇಳುತ್ತವೆ.[139] ಶಾಸನವೊಂದರಲ್ಲಿ ಕಂಡುಬರುವ 'ಉಂಡಿಗೆಯ ದಮ್ಮಿಸೆಟ್ಟಿ'[140]ಯು ಬಹುಶಃ ಉಂಡಿಗೆಗಳಿಗೆ ಸಂಬಂಧಿಸಿದ ಇಲಾಖೆಯ ಅಧಿಕಾರಿಯಿರಬೇಕು. ಉಂಡಿಗೆಗಳನ್ನು ಟಂಕಿಸುತ್ತಿದ್ದ ಕಮ್ಮಟದ ಹೆಸರು ಶಾಸನವೊಂದರಲ್ಲಿದೆ[141]. ಒಂದು ಪರರಾಜ್ಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದನ್ನು 'ಉಂಡಿಗೆಗೇಱಿಸು'[142] ಎಂದೂ ಕರೆಯುತ್ತಿದ್ದರು. ಏಕೆಂದರೆ ಆ ವಶವಾದ ರಾಜ್ಯದಲ್ಲಿ ಗೆದ್ದ ರಾಜನ ಉಂಡಿಗೆಗೆ ಬೆಲೆಯು ಪ್ರಾಪ್ತವಾಗುತ್ತಿದ್ದಿತು. ಪಂಪನಲ್ಲಿ ಬರುವ 'ಉಂಡಿಗೆ ಸಾಧ್ಯಂಮಾಡು'[143] ಎಂಬ ಉಕ್ತಿಗೂ ಇದೇ ಅರ್ಥ. 'ಕಡಿತಕ್ಕೆ ಬರಸು' ಎಂದರೂ ಇನ್ನೊಂದು ರಾಜ್ಯವನ್ನು ವಶಮಾಡಿಕೊಳ್ಳುವುದು ಎಂದರ್ಥ. ರಾಜನ ಆದಾಯದ ಕಡತದ ಪುಸ್ತಕಕ್ಕೆ ಆ ರಾಜ್ಯವು ಸೇರಿತು ಎಂದರ್ಥ. ಎರಡನೆಯ ಸೋಮೇಶ್ವರನಿಗೆ ಬೇರೆ ಬೇರೆ ದ್ವೀಪಗಳ ಮೇಲೆ ಸಂಪೂರ್ಣ ಅಧಿಕಾರವಿದ್ದಿತು ಎಂಬುದನ್ನು ಹೇಳುವಾಗ ಅಲ್ಲಿ ಅವನ ಆಜ್ಞೆ, ಅವನ ನಾಣ್ಯಗಳು, ಅವನು ಇಟ್ಟ ರಾಜರು, ಅವನ ಓಲೆ, ಅವನ ಉಂಡಿಗೆಗಳು ಸಲ್ಲುತ್ತಿದ್ದುವು ಎಂದು ಶಾಸನವೊಂದು ಹೇಳುತ್ತದೆ.[144]

## ಸಾಮಂತರಾಜರು

ಅಧಿರಾಜ ಅಥವಾ ಚಕ್ರವರ್ತಿಗಳ ಅಧೀನದಲ್ಲಿ ಇದ್ದುಕೊಂಡು ಬೇರೆ ಬೇರೆ ಪುಟ್ಟ ರಾಜ್ಯಗಳನ್ನು ಆಳುತ್ತಿದ್ದ ಸಾಮಂತರ ವಿಷಯದಲ್ಲಿ ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ಅವರವರ ಆಳಿಕೆಯ ಪ್ರದೇಶದಲ್ಲಿ ಅಧಿರಾಜರಿಗಿದ್ದ ಸ್ಥಾನಮಾನಗಳೇ, ಗೌರವಗಳೇ ಸಾಮಂತರಿಗೂ ಇದ್ದವು. ಅಧಿರಾಜರಂತೆಯೇ ಇವರು ಮಂತ್ರಿಗಳನ್ನೂ ಸೇನೆಯನ್ನೂ ಇತರ ಅಧಿಕಾರಿವರ್ಗವನ್ನೂ ಪಡೆದಿದ್ದರು. ಸಾಮಂತರಂತೆಯೇ ಮಂಡಲೇಶ್ವರರು ಅಧಿರಾಜನ ಅಧೀನರು, ತಮ್ಮ ಆಳಿಕೆಯ ಪ್ರದೇಶದಲ್ಲಿ ಸರ್ವಾಧಿಕಾರಿಗಳು. ಆದರೂ ಇಬ್ಬರಿಗೆ ಒಂದು ಸಣ್ಣ ವ್ಯತ್ಯಾಸವಿರುವಂತೆ ಕಾಣಿಸುತ್ತದೆ. ಸಾಮಂತರು ಯಾವುದೇ ಪ್ರಾಂತವನ್ನು ಮೊದಲಿ

---

ಬಹುದು. ಇವುಗಳಲ್ಲಿ ಮುಖ್ಯವಾದ ಐದನ್ನು ಹೇಳಿ ಎಂದರೆ ಅಲ್ಲಿಯ ವಾದ್ಯಕಾರರು ಶ್ರುತಿ, ಮೌರಿ, ಸಮ್ಮೇಳ, ದವಣ, ತಾಳಗಳನ್ನು ಹೆಸರಿಸುತ್ತಾರೆ. ಆದರೆ ಇದನ್ನು ನಾವು ಹೆಚ್ಚಾಗಿ ಲೆಕ್ಕಿಸಬೇಕಾಗಿಲ್ಲ. ಬಹುಶಃ ಮೊದಲು ಐದು ವಾದ್ಯಗಳನ್ನು ಬಾರಿಸುತ್ತಿದ್ದರು. ಕ್ರಮೇಣ ಆ ಪಂಚವಾದ್ಯ ಎಂಬ ಹೆಸರು ಮಾತ್ರ ಉಳಿದುಕೊಂಡಿತು ; ವಾದ್ಯಗಳ ಸಂಖ್ಯೆ ಹೆಚ್ಚಾಯಿತು.

139 EC. VII. Sh. 4, 1122 A.D.

140 EC. II. 159, C. 1130 A.D.

141 EC. XII. Si. 37, C. 1040 A.D.

142 EC. XII. Gb. 34, 1134 A.D.

143 ಪಂಪಭಾರತ, 14.31, ವ.-"ಎಂದರಿಕೇಸರಿ ತೆಂಕನಾಡಂ ನಾಡಾಡಿಯಲ್ಲದೆ ಮೆಚ್ಚುತ್ತುಮಾ ನಾಡನೊಂದೆ ಬಿಲ್ಲೊಳುಂಡಿಗೆ ಸಾಧ್ಯಂ ಮಾಡಿ...."

144 BKI. I. i. 116, 1075 A.D.- "ಧರೆಯುಂ ತ್ರೈಲೋಕ್ಯಮಲ್ಲ ಕ್ಷಿತಿಪತಿ ಕುಡೆ ಕಯ್ಕೊಂಡು ಮತ್ತತ್ತ ರತ್ನಾಕರ ಮಧ್ಯದ್ವೀಪ ನಾನಾ ವಿಷಯ ತತಿಗೆ ತನ್ನಾಣೆ ತನ್ನಚ್ಚು ತನ್ನಿಟ್ಟರಸರ್ ತನ್ನೋಲೆ ತನ್ನುಂಡಿಗೆಯೆನೆ ವಿದಿತಾಜ್ಞಾನ್ವಿತಂ ಮಾಡಿದಂ ಬಾಪ್ಪುರೆ ಪದ್ಮಾನಂದ ತೇಜಂ ನೃಗನಳಚರಿತಂ ಮೂರ್ತಿ ಮಾರ್ತಾಂಡ ತೇಜಂ."

ನಿಂದಲೂ ಆಳುತ್ತಾ ಬಂದಿರತಕ್ಕವರು, ಅಧಿರಾಜನು ತಮ್ಮನ್ನು ಗೆದ್ದಿರುವುದರಿಂದ ಅವನ ಅಧೀನರು ಮತ್ತು ಸಮಯ ಸಿಕ್ಕಿದಾಗ ಸ್ವತಂತ್ರರಾಗಲು ಹವಣಿಸುವವರು. ಮಹಾಮಂಡಲೇಶ್ವರರನ್ನು ರಾಜ್ಯದ ಬೇರೆ ಬೇರೆ 'ಮಂಡಲ' ಅಥವಾ ಭಾಗಗಳಿಗೆ ಅಧಿರಾಜನು ನೇಮಿಸುತ್ತಿದ್ದಂತೆ ಕಾಣುತ್ತದೆ. ಇದಕ್ಕೆ ಸ್ಪಷ್ಟ ನಿದರ್ಶನವು ಹೆಗ್ಗಡದೇವನಕೋಟೆ ತಾಲ್ಲೂಕಿನ ಶಾಸನದಲ್ಲಿದೆ. ಕುಡಿಯರ ಒಡೆಯನೂ, ನುಗುನಾಡ ಅಧಿಪತಿಯೂ ಆದ ರವಿಗನಿಗೆ ಚೋಳಚಕ್ರವರ್ತಿಯು ಸತ್ತಿಗೆ, ಶಂಖ, ಝಲ್ಲಳಿ ಮುಂತಾದುವನ್ನು ಕೊಟ್ಟು 'ಮಂಡಳೀಕ ಪದವಿ' ಯನ್ನು ದಯಪಾಲಿಸಿದಂತೆ ಆ ಶಾಸನವು[145] ಹೇಳುತ್ತದೆ.

ಮಂಡಲೇಶ್ವರ ಮತ್ತು ಸಾಮಂತರಿಗೂ ರಾಜರಂತೆಯೇ ಪ್ರತ್ಯೇಕ ಧ್ವಜ, ಲಾಂಛನಗಳಿದ್ದುವು.[146] ಅವರೂ ರಾಜರಂತೆ ತಮ್ಮ ತಮ್ಮ ಆಳಿಕೆಯ ಭಾಗಗಳಲ್ಲಿ ದೇಶಸಂಚಾರವನ್ನು ಕೈಗೊಂಡು ಜನರ ಕಷ್ಟಸುಖ ಗಳನ್ನು ವಿಚಾರಿಸುತ್ತಿದ್ದ ಪ್ರಸ್ತಾಪ ಅಲ್ಲಲ್ಲಿ ಬಂದಿದೆ.[147] ಯುದ್ಧದ ಸಮಯದಲ್ಲಿ ಇವರು ತಮ್ಮ ಅಧಿರಾಜನ ಸಹಾಯಕ್ಕೆ ಹೋಗಿ ಅನೇಕ ದೇಶಗಳಲ್ಲಿ ಗೆದ್ದುಕೊಟ್ಟದ್ದು ಉಂಟು.[148] ಆದ್ದರಿಂದಲೇ ಹಲವು ಸಾಮಂತ ರನ್ನು ಚಕ್ರವರ್ತಿಯು ಕಟ್ಟಿಕೊಂಡ ನಚ್ಚಿನ ಅಲಗುಗಳೆಂದು ವರ್ಣಿಸಿರುವುದು.[149] ಮಹಾಮಂಡಳೇಶ್ವರ ಎನ್ನುವುದು ಮಂಡಳೇಶ್ವರ ಎನ್ನುವ ಪದವಿಗಿಂತ ದೊಡ್ಡದು ಎಂಬುದು ಸ್ಪಷ್ಟವಾಗಿದೆ. ಒಬ್ಬ ಮಹಾ ಮಂಡಳೇಶ್ವರನ ಅಧೀನದಲ್ಲಿ ಹಲವು ಮಂಡಳೇಶ್ವರರಿರುತ್ತಿದ್ದರೆಂದು ಕಾಣುತ್ತದೆ. ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ ಮಲ್ಲದೇವನು ನಲವತ್ತುನಾಲ್ವರು ಮಂಡಳಿಕರ ತಲೆಗಳನ್ನು ತೆಗೆದುಕೊಂಡ ಶೂರನಾಗಿದ್ದ ನೆಂದು ಶಾಸನವೊಂದು ಹೇಳುತ್ತದೆ ("ನಲವತ್ತುನಾಲ್ವರ್ ಮಂಡಳಿಕರ ತಲೆಗೊಂಡ ಗಂಡ)[150]." ಮಂಡಲೇಶ್ವರರು ಮಹಾಮಂಡಲೇಶ್ವರನಿಗೆ ಕಪ್ಪವನ್ನು ಕೊಡುತ್ತಿದ್ದಂತೆ ಶಾಸನವೊಂದರಿಂದ[151] ತಿಳಿದು ಬರುತ್ತದೆ. ಮಹಾಮಂಡಲೇಶ್ವರರು ತಮ್ಮ ಆಳಿಕೆಯ ಪ್ರದೇಶದ ಆದಾಯದ ಒಂದು ಭಾಗವನ್ನು ಚಕ್ರವರ್ತಿಗೆ ಸಲ್ಲಿಸುತ್ತಿದ್ದರು.

ಅಧಿರಾಜನ ಅಧೀನದಲ್ಲಿ ಆಳುತ್ತಿದ್ದ ಬೇರೆ ಬೇರೆ ಸಾಮಂತರೂ ಮಂಡಳೇಶ್ವರರೂ ಬೇರೆ ಬೇರೆ 'ವೃತ್ತಿ'ಗಳಿಂದ ಆಳುತ್ತಿದ್ದರೆಂದು ಶಾಸನಗಳು ತಿಳಿಸುತ್ತವೆ. ಅವರಿಗೂ ಅಧಿರಾಜನಿಗೂ ಇದ್ದ ರಾಜಕೀಯ ವಾದ ಸಂಬಂಧವನ್ನು 'ವೃತ್ತಿ' ಎಂಬ ಪದವು ಸೂಚಿಸುವಂತೆ ಕಾಣುತ್ತದೆ. ಮೊದಲನೆಯದು 'ಕುಮಾರ ವೃತ್ತಿ'. ಯುವರಾಜನನ್ನು 'ಕುಮಾರ' ಎಂದು ಶಾಸನಗಳಲ್ಲಿ ಕರೆದಿರುವುದು ಕಂಡುಬರುತ್ತದೆ.[152] ರಾಜಕುಮಾರರು ಮುಂದೆ ರಾಜರಾಗಬೇಕಾದುದರಿಂದ ಅವರು ಆಳಿಕೆಯ ವಿಷಯದಲ್ಲಿ ಅನುಭವವನ್ನು ಪಡೆಯಲೆಂಬ ಉದ್ದೇಶದಿಂದ ಅವರನ್ನು ರಾಜನು ರಾಜ್ಯದ ಬೇರೆ ಬೇರೆ ಭಾಗಗಳಿಗೆ ಅಧಿಪತಿಗಳನ್ನಾಗಿ ಮಾಡುತ್ತಿದ್ದನು.[153] ವಿಕ್ರಮಾದಿತ್ಯನು ತನ್ನ ಮಗ ಮಲ್ಲಿಕಾರ್ಜುನ 'ಕುಮಾರ'ನಿಗೆ ಯುವರಾಜ ಪಟ್ಟವನ್ನು ಕಟ್ಟಿ ಅಲಂದೆಸಾವಿರದ ಆಧಿಪತ್ಯವನ್ನು ಕೊಟ್ಟ ವಿಷಯವು ಶಾಸನವೊಂದರಲ್ಲಿದೆ.[154] ಯುವರಾಜನ

---

145 EC. IV. Hg. 18, 1057 A.D.
146 EC. XI. Hk. 68, 1126 A.D.
147 EC. VII. Sk. 238, C. 1128 A.D.
148 EC. XI. Cd. 76, 937 A.D.
149 EC. XI. Dg. 41, 1148 A.D.
150 EC. XII. Si. 40, 1040 A.D.
151 EC. VIII. Sb. 468, 1112 A.D.
152 SII. IX. i. 190, 1113 A.D.
153 Mysore and Coorg from Inscriptions, p. 169.
154 EI. XXVIII. p. 33, 1082 A.D.

ಅಥವಾ ರಾಜಕುಮಾರರ ಆಳಿಕೆಯನ್ನೇ 'ಕುಮಾರವೃತ್ತಿ'ಯ ಆಳಿಕೆಯೆಂದು ಭಾವಿಸಬಹುದು. ತ್ರೈಲೋಕ್ಯಮಲ್ಲನ ಎರಡನೆಯ ಮಗ ಗಂಗಪೆರ್ಮಾಡಿ ದೇವರು ಗಂಗವಾಡಿ ತೊಂಬತ್ತಾರುಸಾಸಿರ ಮುಂತಾದ ನಾಡುಗಳನ್ನು 'ಕುಮಾರವೃತ್ತಿ'ಯಿಂದ ಆಳುತ್ತಿದ್ದಂತೆ ಶಾಸನವೊಂದು ತಿಳಿಸುತ್ತದೆ.[155] ಶ್ರೀಮನ್ಮಹಾಮಂಡಳೇಶ್ವರ ಜಗದೇಕಮಲ್ಲ ಪಾಂಡ್ಯದೇವರು ಹಲವು ದೇಶಗಳಲ್ಲಿ 'ಕುಮಾರವೃತ್ತಿ'ಯಿಂದ ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[156] ಅಶೋಕನು ತನ್ನ ವಿಸ್ತಾರವಾದ ಚಕ್ರಾಧಿಪತ್ಯದ ನಾನಾ ಭಾಗಗಳಿಗೆ ರಾಜಕುಮಾರರನ್ನು ಅಧಿಕಾರಿಯಾಗಿ ನೇಮಿಸಿದ್ದ ವಿಷಯವು ಇತಿಹಾಸ ಪ್ರಸಿದ್ಧವಾಗಿದೆ.[157]

'ಕುಮಾರವೃತ್ತಿ'ಯಂತಹ ಮತ್ತೊಂದು ವೃತ್ತಿ 'ಅಚಳವೃತ್ತಿ'. ಈ ವೃತ್ತಿಯನ್ನು ವಿವರಿಸುವುದು ಸ್ವಲ್ಪ ಕಷ್ಟವೇ. ತನ್ನ ಒಡೆಯನಲ್ಲಿ ಅಚಲವಾದ ಭಕ್ತಿಗೌರವಗಳನ್ನಿಟ್ಟುಕೊಂಡ ಆಳಿಕೆ ಎಂದು ಭಾವಿಸಬಹುದೋ ಏನೋ! ಅಥವಾ ರಾಜನಿಂದ ಪ್ರಾಪ್ತವಾಗಿರುವ ಅಧಿಕಾರವು ಶಾಶ್ವತವಾದುದು ಎಂಬುದನ್ನೂ ಸೂಚಿಸಬಹುದು. ಆಹವಮಲ್ಲ ಚಕ್ರವರ್ತಿಯ ಕಾಲದಲ್ಲಿ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಯು ಅನೇಕ ನಾಡುಗಳನ್ನು 'ಅಚಳವೃತ್ತಿ'ಯಿಂದ ಆಳುತ್ತಿದ್ದಂತೆಯೂ, ಈ ಪಲ್ಲವ ಪೆರ್ಮಾನಡಿಯ ಪಾದಪದ್ಮೋಪಜೀವಿಗಳಾದ ಸಾಸಿರ್ವರು ಲೆಂಕರು ಆರು ಊರುಗಳನ್ನು 'ಅಣುಗಜೀವಿತ'ವಾಗಿ ಆಳುತ್ತಿದ್ದರೆಂದೂ ಒಂದು ಶಾಸನದಲ್ಲಿದೆ.[158] ರಾಷ್ಟ್ರಕೂಟರ ಸಾಮಂತ ಮಾರಸಿಂಘ ಪೆರ್ಮಾನಡಿಯು ಅನೇಕ ನಾಡುಗಳನ್ನು 'ಅಣುಗಜೀವಿತ'ವಾಗಿ ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[159] ರಾಷ್ಟ್ರಕೂಟರ ಮತ್ತೊಬ್ಬ ಸಾಮಂತ ತೈಲಪನು ತರ್ದವಾಡಿ ಸಾಸಿರವನ್ನು 'ಅಣುಂಗಜೀವಿತ'ವಾಗಿ ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[160] ತ್ರೈಲೋಕ್ಯಮಲ್ಲನ ಮಾಂಡಲಿಕ ಲಕ್ಷ್ಮಣನನ್ನು ಚಕ್ರವರ್ತಿಯ 'ಅಣುಗಾಳ್' ಎಂದು ಒಂದು ಶಾಸನವು ಕರೆದಿದೆ.[160.1] 'ಅಣುಗ' ಎಂದರೆ 'ಪ್ರೀತಿಪಾತ್ರ' ಎಂದರ್ಥ. 'ಅಣುಗವೃತ್ತಿ'ಯು ರಾಜನಿಗೂ ಅವನ ಆಶ್ರಿತರಾಜರಿಗೂ ಇದ್ದ ಪ್ರೀತಿಪೂರ್ವಕ ಸಂಬಂಧವನ್ನು ಸೂಚಿಸುವಂತೆ ಕಾಣುತ್ತದೆ. ಇಂತಹದೇ ಇನ್ನೊಂದು ಸಂಬಂಧ 'ಬೀಟವೃತ್ತಿ' ಎಂಬುದು. ಚಾಳುಕ್ಯರ ಸಾಮಂತನಾದ ಶ್ರೀಪಂದಯ್ಯ ಎನ್ನುವವನು 'ಬೀಟವೃತ್ತಿ'ಯಿಂದ ಆಳುತ್ತಿದ್ದನು.[161] ಪಡೆವಳ ತೈಲನು ಮಾಸವಾಡಿ ನೂರ ನಾಲ್ವತ್ತನ್ನು 'ಬೀಳವೃತ್ತಿ'ಯಿಂದ ಆಳುತ್ತಿದ್ದನು.[162] ಚಾಳುಕ್ಯಚಕ್ರವರ್ತಿ ತ್ರೈಳೋಕ್ಯ ಮಲ್ಲದೇವನ ಮಗ ಸೋಮೇಶ್ವರನು 'ಬೀಳಾನುವೃತ್ತಿ'ಯಿಂದ ಆಳುತ್ತಿದ್ದಂತೆ ಒಂದು ಶಾಸನದಿಂದ ತಿಳಿದುಬರುತ್ತದೆ.[163] ಬೀಳವೃತ್ತಿ ಮತ್ತು ಬೀಳಾನುವೃತ್ತಿಗಳ ಹೆಸರುಗಳು ಇನ್ನೂ ಹಲವೆಡೆ ಬರುತ್ತವೆ.[164] ಇಲ್ಲೆಲ್ಲಾ ಒಂದು ಅಪವಾದವನ್ನು ಬಿಟ್ಟರೆ ಉಳಿದೆಡೆಗಳಲ್ಲೆಲ್ಲಾ 'ಬೀಟವೃತ್ತಿ'ಯು ಅಧಿರಾಜ ಮತ್ತು ಸಾಮಂತರ ಸಂಬಂಧವನ್ನು ಸೂಚಿಸುತ್ತದೆ. 'ಬೀಟ್' ಎಂದರೆ ಕೆಳಗೆ ಬೀಳು, ಸೋಲು ಎಂದರ್ಥ. 'ಬೀಟವೃತ್ತಿ'ಯು ಸಾಮಂತನು ಅಧಿರಾಜನಿಗೆ

155 SII. IX. i. 118, 1057 A.D.

156 EC. XI. Dg. 41, 1148 A.D.

157 V. R. R. Dixitar : Hindu Administrative Institutions, p. 114.

158 SII. IX. i. 101, 1045 A.D.

159 BKI. I. i. 43, 970 A.D.

160 BKI. I. i. 40, 973 A.D.

160.1 EC. VII. SK. 136, 1068 A.D.

161 EC. XI. Cd. 50, 968 A.D.

162 BKI. I. i. 52, 1007 A.D.

163 BKI. I. i. 84, 1049 A.D.

164 SII. IX. i. 109, 1052-53 A.D. ; 143, 1079 A.D.

ಸೋತದ್ದನ್ನು, ಅವನಿಗೆ ತೋರಿಸುತ್ತಿದ್ದ ಗೌರವವನ್ನೂ ಭಕ್ತಿಯನ್ನೂ ಸೂಚಿಸುವಂತೆ ಕಾಣುತ್ತದೆ. ಅಥವಾ ಇದಕ್ಕಿಂತ ಉತ್ತಮವಾದ ಊಹೆಯೊಂದನ್ನು ಮಾಡಬಹುದು. ಬೀಟಿಲ್ ಎಂದರೆ ಆಲದಮರದ ಬಿಳಿಲು ಅಥವಾ ಬೇರು. ಇದೂ 'ಬೀಟ್' ಧಾತುವಿನಿಂದ ಬಂದಿರುತ್ತದೆ. ಆಲದಮರದ ವಂಶವು ಈ ಬಿಳಿಲುಗಳಿಂದ ಬೆಳೆಯುತ್ತಾ ಹೋಗುತ್ತದೆ. ಒಂದು ವಂಶದ ರಾಜನ ಆಶ್ರಯದಲ್ಲಿ ಅದೇ ವಂಶದ ಇತರರು ಅಧೀನರಾಗಿ ಆಳುತ್ತಿದ್ದ ವಿಷಯವನ್ನು ಬೀಟಿವೃತ್ತಿಯು ಸೂಚಿಸಬಹುದು. 'ಅಚಲವೃತ್ತಿ', 'ಅಣುಗವೃತ್ತಿ' ಮತ್ತು 'ಬೀಟಿವೃತ್ತಿ'ಗಳಲ್ಲಿ ಯಾವುವು ಸಮನಾರ್ಥಕ ಪದಗಳೋ, ಅವುಗಳ ನಿರ್ದಿಷ್ಟವಾದ ಅರ್ಥವೇನೋ –ಸ್ಪಷ್ಟವಾಗಿ ಗೊತ್ತಾಗುವುದಿಲ್ಲ.

ಭೌಗೋಳಿಕವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಳಿಕೆಯ ಸೌಕರ್ಯದ ದೃಷ್ಟಿಯಿಂದ ಮೂರು ಭಾಗಗಳಾಗಿ ವಿಂಗಡಿಸಿದ್ದರು-ಮಂಡಲ, ನಾಡು, ಊರು.[165] ರಾಜಧಾನಿಯ ಸುತ್ತಮುತ್ತಣ ಭಾಗವನ್ನು ರಾಜನೇ ನೇರವಾಗಿ ಆಳುತ್ತಿದ್ದು ಉಳಿದ ರಾಜ್ಯವನ್ನು ಮಂಡಲಗಳಾಗಿ ವಿಂಗಡಿಸಿ ಒಂದೊಂದು ಮಂಡಲಕ್ಕೂ ಮಂಡಲೇಶ್ವರರನ್ನು ನೇಮಿಸುತ್ತಿದ್ದನು. ಒಂದೊಂದು ಮಂಡಲವನ್ನೂ ಮತ್ತೆ ಬೇರೆ ಬೇರೆ ನಾಡುಗಳಾಗಿ ವಿಂಗಡಿಸಿ ಆಯಾ ನಾಡಿಗೆ 'ನಾಡ್ಪ್ರಭು' ಅಥವಾ 'ನಾಡಗಾವುಂಡು'ಗಳನ್ನು ನೇಮಿಸುತ್ತಿದ್ದರು.[166] ನಾಡಿನ ಆಯಾ ಊರಿಗೆ ಮುಖ್ಯಸ್ಥನಾದ 'ಪ್ರಭುಗಾವುಂಡ' ಅಥವಾ 'ಊರಗಾವುಂಡ'ನಿರುತ್ತಿದ್ದನು. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು. ಕ್ರಿ. ಶ. 1030 ರಲ್ಲಿ ಮಂಡಳಿಕ ಬ್ರಹ್ಮದೇವರಸನೂ 'ನಾಟ್ಗಾವುಂಡ' ನಾಗಾರ್ಜುನನೂ, ಊರಗಾವುಂಡ ಆರಜಗಾವುಂಡರೂ ಆಳುತ್ತಿದ್ದರು.[166.1] ಕನ್ನರದೇವನು ಚಕ್ರವರ್ತಿಯಾಗಿದ್ದಾಗ ಜವನ್ನೆಶನು ಬನವಾಸಿಯನ್ನು ಆಳುತ್ತಿದ್ದಂತೆಯೂ, ಬಿಟ್ಟಗನು ನಾಟ್ಗಾವುಂಡನಾಗಿಯೂ ಬೀವ ಎನ್ನುವವನು ಊರಗಾವುಂಡನಾಗಿಯೂ ಇದ್ದರು.[167] ಹೀಗೆಯೇ ಇನ್ನೂ ಹಲವು ಶಾಸನಗಳನ್ನು ನೋಡಿದರೆ ರಾಜ, ಅವನ ಕೆಳಗೆ ಮಂಡಳೇಶ್ವರ, ಅವನ ಕೆಳಗೆ ನಾಡಪ್ರಭು, ಅವನ ಕೆಳಗೆ ಊರಗಾವುಂಡು–ಈ ಕ್ರಮದಲ್ಲಿ ಅಧಿಕಾರಿಗಳಿರುತ್ತಿದ್ದರೆಂದು ಕಾಣುತ್ತದೆ. ಕೆಲವೆಡೆ ಮಂಡಲೇಶ್ವರನಿಗೂ ನಾಡಪ್ರಭುವಿಗೂ ಮಧ್ಯೆ 'ಮನ್ನೆಯ' ಅಥವಾ ಮಾನ್ಯ ಎಂಬ ಹೆಸರಿನ ಅಧಿಕಾರಿಯ ಹೆಸರೂ ಸುಳಿಯುತ್ತದೆ.[168] ಕೆಲವೆಡೆ ಮನ್ನೆಯ ಎಂಬುದು ನಾಡಪ್ರಭುವಿನ ಸ್ಥಾನದಲ್ಲಿ ಕಾಣಿಸಿಕೊಳ್ಳುವುದುಂಟು.[169]

---

165 ತಮಿಳು ನಾಡಿನಲ್ಲಿಯೂ ಮಂಡಲಂ, ಕೊಟ್ಟಮ್ ಅಥವಾ ವಳನಾಡು, ನಾಡು ಮತ್ತು ಊರು ಎಂದು ನಾಲು ಭಾಗಗಳಾಗಿ ವಿಂಗಡಿಸಿದ್ದರು. ಇವು ಈಗಿನ ಪ್ರಾಂತ, ಜಿಲ್ಲೆ, ತಾಲ್ಲೂಕು ಮತ್ತು ಊರುಗಳಿಗೆ ಸಮಾನ.

[V.R.R. Dixitar : Hindu Administrative Institutions, p. 357]

166 ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಸಮೀಪದ ಉದಿಯಾವರದ ಆಳುಪರ ಶಾಸನಗಳಲ್ಲಿ ಇಂತಹ ಉಕ್ತಿಗಳು ಬಂದಿವೆ–"ಬೋಯ್ಗವರ್ಮರ ನಾಟುಮುದಿಮೆಯುಳ್"; "ಅರಕೆಲ್ಲರ ನಾಟು ಮುದಿಮೆಯುಳ್" [EI. IX. p. 21, 23]. ಈ ಶಾಸನಗಳನ್ನು ಸಂಪಾದಿಸಿರುವ ಹುಲ್ಷ್ ಅವರು ತಮಿಳಿನ 'ನಾಟ್ಟುಮುದುಮೈ' ಎಂಬ ಉಕ್ತಿಯ ಕಡೆ ಗಮನವನ್ನು ಸೆಳೆದಿದ್ದಾರೆ. 'ನಾಟ್ಟುಮುದುಮೈ' ಎಂದರೆ 'ನಾಡಿನ ಹಿರಿಯ ಅಧಿಕಾರ' ಎಂದರ್ಥ. ಶಾಸನಗಳಲ್ಲಿ ಬಂದಿರುವ ಉಕ್ತಿಗಳಿಗೆ ಕ್ರಮವಾಗಿ "ಬೋಯ್ಗವರ್ಮರು ನಾಡಿನ ಹಿರಿಯ ಅಧಿಕಾರಿಯಾಗಿದ್ದ ಕಾಲದಲ್ಲಿ ಅಥವಾ ಅವರ ಅಧಿಕಾರದ ಸಮಯದಲ್ಲಿ" ಎಂದೂ, "ಅರಕೆಲ್ಲರ ನಾಡಿನ ಹಿರಿಯ ಅಧಿಕಾರದ ಸಮಯದಲ್ಲಿ" ಎಂದೂ ಅರ್ಥ. 'ನಾಟುಮುದಿಮೆ' ಎಂಬುದು ಉಳಿದ ಶಾಸನಗಳ 'ನಾಟ್ಗಾವುಂಡು' ಎಂಬುದಕ್ಕೆ ಸಮಾನ.

166.1 EC. VII. Sk. 81, 1030 A.D.

167 EC. VIII. Sb. 202, 955 A.D.

168 EC. VII. Sk. 118, 1054 A.D.

169 EC. VII. Sk. 19, 1066 A.D.

## ನ್ಯಾಯಪರಿಪಾಲನೆ

ರಾಜನ ಕರ್ತವ್ಯಗಳು ಮುಖ್ಯವಾಗಿ ಎರಡು ಎಂಬುದನ್ನು ಹಿಂದೆಯೇ ನೋಡಿದ್ದೇವೆ. ಒಂದು 'ದುಷ್ಟನಿಗ್ರಹ'; ಮತ್ತೊಂದು, 'ಶಿಷ್ಟಪರಿಪಾಲನ.' ಇವೆರಡೂ ಸಮರ್ಪಕವಾಗಿ ನೆರವೇರಬೇಕಾದರೆ ರಾಜನು ಆಗಾಗ್ಗೆ ಶಾಸನ ಅಥವಾ ಆಜ್ಞೆಗಳನ್ನು ಹೊರಡಿಸಬೇಕಾಗುತ್ತದೆ. ಶಿಷ್ಟರಿಗೆ ನ್ಯಾಯವು ದೊರಕುವಂತೆಯೇ ದುಷ್ಟರಿಗೆ ಸರಿಯಾದ ಶಿಕ್ಷೆಯಾಗುವಂತೆಯೂ ಏರ್ಪಾಟು ಮಾಡಬೇಕಾಗುತ್ತದೆ. ಅನ್ಯಾಯವನ್ನು ತುಳಿದು ಹಾಕುವುದೇ ದಂಡವೆಂದು ಕಾಮಂದಕನು ಹೇಳುತ್ತಾನೆ.[170] ಲೋಕದಲ್ಲಿ ಶುಚಿ ಎನ್ನಿಸಿಕೊಳ್ಳುವವನು ದುರ್ಲಭನೆಂದೂ ದುಷ್ಟರೇ ಬಹುವಾಗಿರುವುದರಿಂದ ಲೋಕವನ್ನು 'ದಂಡ'ದಿಂದಲೇ ಜಯಿಸಬೇಕೆಂದೂ, ಜಗತ್ತು ಭೋಗ್ಯವಾಗುವುದು ದಂಡದ ಭಯದಿಂದಲೇ ಎಂದೂ ಮನು ಹೇಳುತ್ತಾನೆ.[170·1] ಅವನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ದಂಡವೇ ಧರ್ಮವೆಂದೂ ಸಾರುತ್ತಾನೆ ("ದಂಡಂ ಧರ್ಮಂ ವಿದುರ್ಬುಧಾಃ"). ಪ್ರಾಚೀನ ಕರ್ನಾಟಕದ ರಾಜರು ದಂಡನೀತಿಯನ್ನು ಅಥವಾ ನ್ಯಾಯಪರಿಪಾಲನೆಯನ್ನು ಯಾವ ರೀತಿ ಕೈಗೊಂಡಿದ್ದರು, ಅದರ ಸ್ವರೂಪವೇನು ಎಂಬುದರ ಸ್ಪಷ್ಟ ಚಿತ್ರವು ಶಾಸನಗಳಲ್ಲಿ ದೊರೆಯುವುದಿಲ್ಲ. ಸಣ್ಣಪುಟ್ಟ ಜಗಳಗಳನ್ನು ಸಮಾಜದ ಹಿರಿಯರು ಕೂಡಿ ತಾವೇ ಪರಿಹರಿಸಿಕೊಳ್ಳುತ್ತಿದ್ದರು. ಅವು ದೊಡ್ಡ ವಿವಾದಗಳಾದರೆ ದಂಡನಾಯಕರಂತಹ ಹಿರಿಯ ಅಧಿಕಾರಿಗಳೂ, ಕೆಲವೊಮ್ಮೆ ರಾಜರೂ ನ್ಯಾಯಮೂರ್ತಿಗಳಾಗಿ ತೀರ್ಪುಕೊಡುತ್ತಿದ್ದರು. ಇದಕ್ಕೆ ನಿದರ್ಶನಗಳನ್ನು ಮುಂದೆ ಕೊಡುತ್ತೇವೆ.

ರಾಜನು ಹೊರಡಿಸುತ್ತಿದ್ದ ಆಜ್ಞೆಗಳ ಸ್ವರೂಪವು ನಮಗೆ ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುವಂತಿಲ್ಲ.[171] ಯಾವುದೋ ಒಂದು ಗ್ರಾಮವನ್ನು ವಿದ್ವಾಂಸನಿಗೋ ವೈದಿಕನಿಗೋ ರಾಜನು ಬಿಟ್ಟುಕೊಟ್ಟಾಗ ಹೊರಡಿಸುತ್ತಿದ್ದ ಆಜ್ಞೆಯ ಒಕ್ಕಣಿಕೆಯನ್ನು ಒಂದು ಶಾಸನದಿಂದ ಅರಿಯಬಹುದು–"ಶ್ರೀಮತ್ ಸತ್ಯಾಶ್ರಯ ಪೃಥಿವೀವಲ್ಲಭ ಮಹಾರಾಜಃ ಸಮರ ಶತ ಸಂಘಟ್ಟ ಸಂಸಕ್ತ ಪರನೃಪತಿ ಪರಾಜಯೋಪಲಬ್ಧ ಪರಮೇಶ್ವರಾಪರ ನಾಮಧೇಯಃ ಸರ್ವಾನಾಜ್ಞಾಪಯತಿ" ಇತ್ಯಾದಿ.[172] ಒಬ್ಬ ರಾಜನು ಹೊಸ ರಾಜ್ಯವನ್ನು ಗೆದ್ದು ಅಲ್ಲಿ ತನ್ನ 'ಆಣೆ' (=ಆಜ್ಞೆ) ಮತ್ತು 'ಗೋಸನೆ' (=ಘೋಷಣೆ)[173]ಗಳನ್ನು ಹೊರಡಿಸುತ್ತಿದ್ದನು. ರಾಜನು ಪ್ರಜೆಗಳ ನೀತಿ ಮತ್ತು ನಡತೆಗಳಿಗೆ ಸಂಬಂಧಿಸಿದಂತೆ ಕೆಲವು ಆಜ್ಞೆಗಳನ್ನು ಹೊರಡಿಸುತ್ತಿದ್ದನು. ಒಬ್ಬ ದೊರೆ ಹೊರಡಿಸಿದ 'ಆಣೆ' ಈ ರೀತಿ ಇದೆ. ಬೈದವನಿಗೆ ಒಂದು ಹಣ, ಹೊಡೆದವನಿಗೆ ಆರು ಹಣ, ಇರಿದವನಿಗೆ ಹನ್ನೆರಡು ಹಣ, ಇರಿಯಲು ಸುರಿಗೆಯನ್ನು ತೆಗೆದುಕೊಂಡು ಮುನ್ನುಗ್ಗಿದವನಿಗೆ ಎಂಟು ಹಣ, ಆಜ್ಞೆಯನ್ನು ಮೀರಿ ಹೋದವನಿಗೆ ಬಹುಶಃ ಹಿಂದೆ ಹೇಳಿದ ದಂಡದ ಜೊತೆಯಲ್ಲಿ ಮತ್ತೆ ಎರಡು ಹಣ–ಹೀಗೆ ಅಪರಾಧಿಗಳು ದಂಡವನ್ನು

---

[170] V. R. R. Dixitar : Hindu Administrative Institutions, p. 6.

[170·1] "ಸರ್ವೋ ದಂಡಜಿತೋ ಲೋಕೋ ದುರ್ಲಭೋ ಹಿ ಶುಚಿಃ ಕ್ವಚಿತ್
ದಂಡಸ್ಯ ಹಿ ಭಯಾತ್ ಕೃತ್ಸ್ನಂ ಜಗತ್ ಭೋಗಾಯ ಕಲ್ಪತೇ ॥"
(ಅದೇ.)

[171] ಪ್ರಾಚೀನ ಈಜಿಪ್ಟ್ ಮತ್ತು ಗ್ರೀಸ್ ದೇಶಗಳ ಶಾಸನಗಳಲ್ಲಿ ರಾಜನು ಹೊರಡಿಸುತ್ತಿದ್ದ ಆಜ್ಞೆಗಳ ಅಥವಾ ಮಾಡುತ್ತಿದ್ದ ಕಾನೂನುಗಳ ನಿರೂಪಣೆ ದೊರಕುತ್ತದೆ (Dixit : An Introduction to Archaeology, p. 80.) ಆದರೆ ಭಾರತದ ಶಾಸನಗಳಲ್ಲಿ ರಾಜಾಜ್ಞೆಗಳ ಉಲ್ಲೇಖ ಇಲ್ಲವೇ ಇಲ್ಲ ಎನ್ನುವ ಶ್ರೀ ದೀಕ್ಷಿತ್ ಅವರ ಅಭಿಪ್ರಾಯವು ಅಷ್ಟು ಮಾನ್ಯವಾದುದಲ್ಲ. ಏಕೆಂದರೆ ಕರ್ನಾಟಕದ ಶಾಸನಗಳಲ್ಲಿ ಹಲವೆಡೆ ರಾಜಾಜ್ಞೆಗಳು ಸಂಕ್ಷಿಪ್ತವಾಗಿ ನಿರೂಪಿತವಾಗಿರುವುದನ್ನು ಕಾಣಬಹುದು.

[172] IA. VI. p. 73, 612 A.D

[173] EI. XI. p. 27, 1110 A.D.

ತೆರಬೇಕು. ಈ ದಂಡಗಳಿಂದ ಬಂದ ಹಣವನ್ನು ರಾಜನು ಆ ಊರಿನ ಕೆರೆಯ ಜೀರ್ಣೋದ್ಧಾರಾದಿ ಕೆಲಸಗಳಿಗೆ ಬಿಟ್ಟುಕೊಟ್ಟಿದ್ದಾನೆ.[174] ಈ ಶಾಸನದ ಧಾಟಿಯನ್ನು ನೋಡಿದರೆ ಅಪರಾಧಗಳ ನಿರ್ಣಯವನ್ನು ಊರಿನವರೇ ಮಾಡುತ್ತಿದ್ದರೆಂದೂ, ಯಾವ ಅಪರಾಧಕ್ಕೆ ಎಷ್ಟು ಶಿಕ್ಷೆಯನ್ನು ಕೊಡಬೇಕೆಂಬುದನ್ನು ಮಾತ್ರ ರಾಜನು ಮೊದಲೇ ನಿರ್ಧರಿಸುತ್ತಿದ್ದನೆಂದೂ ಊಹಿಸಬೇಕಾಗುವುದು. ರಾಜನು ತನ್ನ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಾಗಿರಬೇಕಾದ ಅಳತೆಯ ಕೋಲುಗಳನ್ನೂ ನಾಣ್ಯಗಳನ್ನೂ ನಿರ್ಧರಿಸಿ ಆಜ್ಞೆಗಳನ್ನು ಹೊರಡಿಸುತ್ತಿದ್ದನು.[175] [ಇದರ ವಿವರಗಳು ಮುಂದಿನ ಅಧ್ಯಾಯವೊಂದರಲ್ಲಿ ಬಂದಿವೆ.] ಪ್ರಜೆಗಳು ತಮ್ಮ ಕಷ್ಟನಷ್ಟಗಳನ್ನು ಹೇಳಿಕೊಳ್ಳಲು ರಾಜನೇನೂ ಅವರಿಗೆ ದುರ್ಲಭನಾಗಿರಲಿಲ್ಲ. ಎಷ್ಟೋ ಶಾಸನಗಳಲ್ಲಿ ಹಲವರು ನೇರವಾಗಿ ರಾಜನ ಅಥವಾ ಚಕ್ರವರ್ತಿಯ ಬಳಿಗೆ ಹೋಗಿ ತಮ್ಮ ಕಷ್ಟಗಳನ್ನು ಹೇಳಿಕೊಂಡು ಪರಿಹಾರಗಳನ್ನು ಪಡೆದುಕೊಂಡಂತೆ ನಿರೂಪಿತವಾಗಿದೆ. ಕುರುಗೋಡಿನ ದೇವಸ್ಥಾನವೊಂದಕ್ಕೆ ಸೇರಿದ ಅರವತ್ತೆರಡು ಮತ್ತರು ಭೂಮಿಯನ್ನು ಪುಟ್ಟಿಗಳ್ಳ ಎನ್ನುವವನು ಆಕ್ರಮಿಸಿಕೊಂಡಾಗ ಆ ದೇವಸ್ಥಾನದ ಒಡೆಯನಾದ ಗಡ್ಡದ ರುದ್ರರಾಸಿ ಭಟಾರರು ಹೋಗಿ ಚಕ್ರವರ್ತಿಯನ್ನು ಕಂಡು ಆ ಭೂಮಿಯನ್ನು ಮತ್ತೆ ಸರ್ವಬಾಧಾಪರಿಹಾರವಾಗಿ ಪಡೆದಂತೆ ಶಾಸನವೊಂದರಲ್ಲಿದೆ.[176] ಇನ್ನೊಂದು ಶಾಸನವು ಬಹಳ ಸ್ವಾರಸ್ಯವಾಗಿದೆ. ಬಾಳ್ಗುಳಿ ಎಂಬ ಊರಿನಲ್ಲಿ ಮೊದಲು ರಾಷ್ಟ್ರಕೂಟ ಕನ್ನರದೇವನು ಸುಂಕದ ವಿಷಯಗಳಲ್ಲಿ "ಮಾಡಿದ ಮರ್ಯಾದೆ" ನಡೆಯುತ್ತಿದ್ದಿತು. ರಾಷ್ಟ್ರಕೂಟರ ಬಳಿಕ ಚಾಳುಕ್ಯರ ಆಳಿಕೆ ಆರಂಭವಾಗುತ್ತದೆ, ಅದರ ಜೊತೆಯಲ್ಲೇ 'ಸುಂಕದ ಅನ್ಯಾಯ'ವೂ ಹೆಚ್ಚುತ್ತದೆ. ಆಗ ಬಾಳ್ಗುಳಿಯ ಹಲವು ವರ್ತಕರು ಹೋಗಿ ಚಕ್ರವರ್ತಿ ಆಹವಮಲ್ಲನನ್ನು ಕಂಡು ತಮ್ಮ ಕಷ್ಟಗಳನ್ನು ಹೇಳಿಕೊಂಡಾಗ ಅವನು "ಕನ್ನರದೇವನ ಮರ್ಯಾದೆಯಲಾಧ ಸುಂಕದ ಮರ್ಯಾದೆಯಂ ತಪ್ಪದೆ ನಡೆಯಿಂ" ಎಂದು ಹೇಳಿಕಳುಹಿಸುತ್ತಾನೆ.[177] ಒಂದು ರಾಜ್ಯದ ಮೇಲೆ ಆಗಾಗ ಬೇರೆ ರಾಜರು ಬಂದು ದಾಳಿಮಾಡಿದಾಗ ಆ ರಾಜ್ಯದ ಅನೇಕ ಗ್ರಾಮ ನಗರಗಳು ಬಹುವಾಗಿ ನಷ್ಟವನ್ನನುಭವಿಸುತ್ತಿದ್ದವು. ಆ ಗ್ರಾಮ ನಗರಗಳ ವ್ಯವಸ್ಥೆಯೆಲ್ಲವೂ ಕೆಟ್ಟುಹೋಗುತ್ತಿದ್ದಿತು. ಆಗ ಆ ರಾಜ್ಯದ ರಾಜನೋ, ಅವನ ಅಧಿಕಾರಿಗಳೋ ಬಂದು ಒಂದು ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಈ ಕೆಲಸವನ್ನು ಅನೇಕ ನಾಡುಗಳನ್ನಾಳುತ್ತಿದ್ದ ಅಕ್ಕಾದೇವಿ ಎನ್ನುವವಳು ಕೈಗೊಂಡಳೆಂದು ಒಂದು ಶಾಸನವು ನಿರೂಪಿಸುತ್ತದೆ.[178] ಸೂಡಿಯ ಎಂಟುಜನ ವರ್ತಕರಿಗೂ, ಎಂಬತ್ತು ಒಕ್ಕಲಿಗೂ ಅವರವರಿಗೆ ನ್ಯಾಯವಾಗಿ ಸಲ್ಲಬೇಕಾದ ಅಂಗಡಿ, ಹೊಲ, ಮನೆಗಳನ್ನು ತನ್ನ ಸಮಸ್ತ ಪ್ರಧಾನರ ಮುಂದೆ ಬಿಟ್ಟುಕೊಡುತ್ತಾಳೆ. ಅದಕ್ಕೆ ಕಾರಣ—"ಚೋಳಿಕರ ಪ್ರಘಟ್ಟದಿಂ ಕೆಟ್ಟ ಸಮ್ಮಂಧಿ(ಂಬಂಧಿ)"ಯಿಂದ ಎಂದು ಶಾಸನವು ಹೇಳುತ್ತದೆ. ಚೋಳರ ದಾಳಿಯಿಂದ ಮೇಲೆ ಹೇಳಿದ ಜನರು ಬಹು ನಷ್ಟಕ್ಕೆ ಒಳಗಾಗಿದ್ದರೆಂದು ಕಾಣುತ್ತದೆ. ಹೀಗೆ ಅವರ ಆಸ್ತಿಯನ್ನು ಅವರಿಗೆ ಹಿಂದಕ್ಕೆ ಕೊಡಿಸಿಕೊಟ್ಟು ಅಕ್ಕಾದೇವಿಯು ಒಂದು ಆಜ್ಞೆಯನ್ನು ಹೊರಡಿಸುತ್ತಾಳೆ. "ಇಡೀ ಕಿಸುಕಾಡು ಎಪ್ಪತ್ತಕ್ಕೆ ಅನೇಕ ಸುಂಕಗಳನ್ನು ಬಿಟ್ಟುಕೊಡಬೇಕು ಪಟ್ಟಣದಲ್ಲಿ ಏನಾದರೂ ಅನ್ಯಾಯ ನಡೆದರೆ ಅದಕ್ಕೆ ತಳವಾರನು ಹೊಣೆ, ಮತ್ತು ಅವನು ಆ ನಷ್ಟವನ್ನು ತುಂಬಿಕೊಡಬೇಕು. ತಂದೆಯ ದೋಷ

---

174 SII. IX. i. 102, 1046 A.D.–" ಬಯ್ದಂಗೆ ಪಣಮುಮೊ[ಂದುಂ] ಪೊಯ್ದಂಗಾಱು ಪಣಮಿಱಿಯೆ ಪನ್ನೆರಡು ಪಣಂ ಪಾಯುರದೆ ಸುರಿಗೆಗಿತ್ತೀರದೆಯ್ದಿದವಂಗೆಂಟು ಪಣಮೆ ದಂಡಂ ನಿರುತಂ ॥ ಅಣೆಯನೆ ಮಿಕ್ಕು ಪೋದಡೆ ಮಾಣಸೆ ಕೊಟ್ಟೆರಡು ಪಣಮಿವಂ ಕೆಱೆಗಿತ್ತಂ ಕ್ಷೋಣಿಪತಿ ಮಿಕ್ಕ ದಂಡಂ ಜಾಣೆ ನರಸಿಂಗಿದೂರ್ಗೆ ಮಾಡಿದ ಸಮಯಂ." (ಸಮಯ= ಕಟ್ಟುಪಾಡು, Law).

175 SII. IX. i. 53, C. 750 A.D.

176 SII. IX. i. 65, 947 A.D.

177 SII. IX. i. 76, 991 A.D.

178 EI. XV. p. 78, 1050 A.D

ಮಗನನ್ನೂ, ಮಗನ ದೋಷ ತಂದೆಯನ್ನೂ ಹೊಂದುವುದಿಲ್ಲ. ಕಳ್ಳ, ಬಂದಿಕಾಱ, 'ಅಂಚಲ್‌ವಿಡಿವಂ'[179], ಹಗೆ, ಕೆಟ್ಟಮನುಷ್ಯ-ಇವರನ್ನು ಅಂಗಡಿಯ ತಡಿಕೆಯ ಕೆಳಗೆ, ಎಂದರೆ ಅವರ ಅಪರಾಧದ ಸ್ಥಳದಲ್ಲಿಯೇ ಇರಿದರೆ ದಂಡವಾಗಲಿ, ದೋಷವಾಗಲಿ ಇಲ್ಲ. ಇವರನ್ನು ಬಿಟ್ಟು ಬೇರೆಯವರನ್ನು ಇರಿದರೆ ಅದಕ್ಕೆ ತಕ್ಕ ದಂಡವನ್ನು ತರಬೇಕು."[180] ಹಿಂದೆ ನಾವು ನೋಡಿದ ರಾಜಾಜ್ಞೆಯೊಂದನ್ನು ಇದು ಬಹುಮಟ್ಟಿಗೆ ಹೋಲುವುದಲ್ಲದೆ ಅದಕ್ಕಿಂತ ಹೆಚ್ಚು ವಿವರಗಳನ್ನು ಕೊಡುತ್ತದೆ.

ರಾಜನು ತನ್ನ ಅನೇಕ ಮಕ್ಕಳನ್ನು ತನ್ನ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಆಳಲು ನೇಮಿಸುತ್ತಿದ್ದನೆಂದು ನಾವು ಹಿಂದೆ ನೋಡಿದ್ದೇವೆ. ಅಂತಹ ರಾಜಕುಮಾರರು ತಮ್ಮ ತಮ್ಮ ನಾಡುಗಳಲ್ಲಿ ಅನೇಕ ಬಗೆಯ ಆಜ್ಞೆಗಳನ್ನು ಹೊರಡಿಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ವಿಕ್ರಮಾದಿತ್ಯ ಯುವರಾಜನು ಪುಲಿಗೆರೆಯ ಮಹಾಜನರಿಗೂ ಅಲ್ಲಿಯ ವರ್ತಕರಿಗೂ ('ನಗರ'= ನಕರ), ಹದಿನೆಂಟು 'ಪ್ರಕೃತಿ' (= ಜಾತಿ)ಗಳಿಗೂ ಕೊಟ್ಟ 'ಆಚಾರ ವ್ಯವಸ್ಥೆ'ಯನ್ನು ಹೇಳುವ ಶಾಸನವು ಬಹು ಮುಖ್ಯವಾದುದು.

—"ಓಂ ಸ್ವಸ್ತಿಶ್ರೀ ವಿಕ್ರಮಾದಿತ್ಯ ಯುವರಾಜರ್ ಪೊರಿಗೆಱೆಯಾ ಮಹಾಜನಕ್ಕುಂ ನಗರಕ್ಕುಂ ಪದಿನೆಂಟುಂ ಪ್ರಕೃತಿಗಳ್ಗುಂ ಕೊಟ್ಟ ಆಚಾರ ವ್ಯವಸ್ಥೆ । ರಾಜಪುರುಷರ್ ಮನೆಗಳೊಳ್ ವೀಡಿಲ್ಲಾದುದು ರಾಜದತ್ತಂ ರಾಜಶ್ರಾವಿತಂ ಸಪ್ತಮೆ (read ಸತ್‌ಪ್ರಮೆ–Editor) ಮರ್ಯ್ಯಾದೆ ತಾಂಬ್ರ ಶಾಸನಂ ಭುಕ್ತಾನುಭೋಗಂ....ಅಯುದು ಧರ್ಮದಾ ಜೀವಿತಂಗಳಾನ್ ಕಾವೊದು । ಇದು ಮಹಾಜನಕ್ಕೆ ನಗರ ಮರ್ಯ್ಯಾದೆ ಮನೆವೀಡಿಲ್ಲಾದುದು ಓರಾಟಿಕ್ಕೆ ಒರ್ಮ್ಮೆ ವೈಶಾಖ ಮಾಸದುಲ್ ದೇಶಾಧಿಪತಿಗಳ್ ಅಪ್ಪೊರ್ಗೆ ಕುಡುವ ತೆಱೆ ಉತ್ತಮಮಪ್ಪ ಒಕ್ಕಲ್ಮಿಸಂ ಪತ್ತು ಪಣವುಂ ಮಧ್ಯಮಮ[ಪ್ಪ] ಒಕ್ಕಲ್ ಏಟುಂ ಪಣವುಂ ಕನಿಷ್ಟರಯ್ದುಂ ಕನೀಯಸರ್ ಮೂಱು ಮಂತಪ್ಪ ಒಸಗೆ ಉತ್ಸಾಹಂಗಳ್ಗೆ ಒಂದೊಕ್ಕಲಲೊಂದು ಪುಟ್ಟಿಗೆ ಮ.....ಚೋರ ಪಾಕದಂಡ ದಶಾಪರಾಧಂಗಳಪ್ಪವೆಲ್ಲಂ ಪೂರ್ವಾಚಾರಂ ಅ[ಪು]ತ್ರ ಧನಮೆನ್ಪೊದು ತಾನೇ ಇಲ್ಲಿ ಸೇಣಿಗೆ ಪಾಂಡಿಸೆಟ್ಟಿ ಕಾರ್ತಿಕಮಾಸದುಳ್ ಕೊಡುವುದು ಗುತ್ತಂ ರೂವಂಗೆ ಮಾಘಮಾಸದುಳ್ ಕೊಡುವದು ನಾಲ್ ಛಾಸಿರಂ ತಿರ್ಮೆ ಸಗಡೆಣಕ್ಕೊ ಪೊಟಲಾನಾಳೆ ಕಂಚಗಾಱ ಸೇಣಿಗೆ ಮನೆವೀಡಿಲ್ಲಾದುದ ಉತ್ತಮಮಪ್ಪ ಒಕ್ಕಲ್ ಚೆಳಕಿ ಇಪ್ಪೊತ್ತು ಪಲಂ ಮಧ್ಯಮಂ ಪದಿನಯ್ದು ಕನಿಷ್ಟಂ ಪತ್ತು ಕನೀಯಸಂ ಅಯ್ದು ಮಂತಪ್ಪ ಒಸಗೆ ಉತ್ಸಾಹಂಗಳ್ಗ ಸಮೂಹಂ ಒರ್‌ತೊಲೆ ತೆಲ್ಲಿಗ ಸೇಣಿಗೆ ಮನೆವೀಡಿಲ್ಲಾದದು ಕೂಟಿಲ್ಲಾದದು ತೆಱೆಯುಂ ಕೆಯುಳ್ಳಾರ್ ಅರೆವಾಡ ಕೆಯಿ ಸೋಱೆ ಮತ್ತಪ್ಪ ಒಸಗೆ ಉತ್ಸಾಹಂಗಳ್ಗೆ ಇಟ್ಟುವಯಿಲಮುಂ ಪತ್ತೆವೀವಯಿಲಮುಂ ಸೊವಗೆಯಾ ಮರ್ಯ್ಯಾದೆ ಇರ್ಪತ್ತಾ ಅಯಿವಳ್ಳಕೆಯ್ಯಾ ವಿಟ್ಟೆಯಾನ್ ಕೆಯಿನಾ....ಗಾಱ ಸೇಣಿಗೆಉತ್ತಮಂ ಅ....ಮಧ್ಯಮ ಸಾಯಿರ .... ಸಾಯಿರ [ಮ್] ಕನಿಷ್ಠ ಕನೀಯ [ಸಂ] .... ರ ಸೇಣಿಗೆ .... ಅರಸಾಳ್ಕೆ"[180.1] ಇತ್ಯಾದಿ.

---

[179] 'ಬಂದಿಕಾಱಂ ಮಂಚಲ್ವಿಡಿವಂ' ಎಂದಿದೆ. 'ಬಂದಿಕಾಱನ್+ಅಂಚಲ್ವಿಡಿವಂ' ಎಂದು ಬಿಡಿಸಿಕೊಳ್ಳಬೇಕೆಂದು ತೋರುತ್ತದೆ. 'ಅಂಚಲ್' ಎಂದರೆ ತಮಿಳು ಮತ್ತು ಮಲೆಯಾಳಗಳಲ್ಲಿ, 'ಪ್ರಯಾಣದ ಸಮಯದಲ್ಲಿ ತಂಗುವ ನಿಲ್ದಾಣ', 'relay' ಎಂದು ಅರ್ಥ. ಕನ್ನಡದ 'ಅಂಚೆ' (= Post) ಇದರ ಜ್ಞಾತಿಪದ. ತುಳುವಿನಲ್ಲಿ 'ಅಂಚಲ್' ಎಂದರೆ 'the Post' ಎಂದು ಅರ್ಥ. 'ಅಂಚಲ್‌ವಿಡಿವವನು' ಎಂದರೆ ರಾಜಾಜ್ಞೆಗಳನ್ನು ಹೊತ್ತ ಟಪ್ಪಾಲುಗಳನ್ನು ಅಪಹರಿಸುವವನು ಎಂದು ಅರ್ಥ ಮಾಡಬಹುದೆ? ರಾಜನ ಆಜ್ಞೆಗಳನ್ನು ಹೊತ್ತು ಒಯ್ಯುತ್ತಿದ್ದವರನ್ನು ಕಾಳಿದಾಸನು 'ಶಾಸನಹಾರಿ'ಗಳೆಂದು ("ಶಾಸನ ಹಾರಿಣಃ") ಕರೆಯುತ್ತಾನೆ [India in Kālidāsa, p. 135].

[180] EI. XV. p. 78, 1050 A.D.

[180.1] EI. XIV. p. 190, C. 725 A.D.

ಈ ಶಾಸನವನ್ನು ಸಮರ್ಪಕವಾಗಿ ವ್ಯಾಖ್ಯಾನಿಸಲು ಸಾಧ್ಯವಾಗಿದ್ದರೆ ಎಷ್ಟೋ ಅಮೂಲ್ಯ ವಿಷಯಗಳು ತಿಳಿಯುತ್ತಿದ್ದುವು. ಇಲ್ಲಿ ದೇಶಾಧಿಪತಿಗಳಿಗೆ ಕೊಡುವ ತೆರಿಗೆಗಳು, ಹಬ್ಬಗಳಿಗೆ ಕೊಡಬೇಕಾದ ಚಂದಾ ಹಣ, ದಶಾಪರಾಧಗಳ ವಿಷಯ, ಅಪುತ್ರಕ ಧನದ ವಿಷಯ ಇತ್ಯಾದಿ ಇತ್ಯಾದಿ ವಿಷಯಗಳನ್ನು ಹೇಳಿ ಒಂದೊಂದು ವರ್ತಕಶ್ರೇಣಿಗೂ, ಒಂದೊಂದು ಜಾತಿಗೂ ಬೇರೆ ಬೇರೆ ನಿಯಮಗಳನ್ನು ಈ ಶಾಸನವು ವಿಧಿಸುತ್ತದೆ. ಇದೆಲ್ಲವೂ ಆಡಳಿತದ ಸೌಕರ್ಯಕ್ಕೆ ಎಂಬುದನ್ನು ನಾವು ನೆನಪಿಡಬೇಕು.

ಅನೇಕ ದಂಡನಾಯಕರೂ ಕೂಡ ಮೇಲಿನ ಆಜ್ಞೆಗಳಂತಹ ಆಜ್ಞೆಗಳನ್ನು ಹೊರಡಿಸಿದ್ದಾರೆ.[181] ಅನೇಕ ದಂಡನಾಯಕರ ವಿಶೇಷಣಗಳನ್ನು ನೋಡಿದರೆ ರಾಜಾಜ್ಞೆಗಳನ್ನು ತಪ್ಪಿ ನಡೆದವರಿಗೆ ವಿಧಿಸುತ್ತಿದ್ದ ಶಿಕ್ಷೆಗಳು ಸಾಕಷ್ಟು ಕ್ರೂರವಾಗಿಯೇ ಇರುತ್ತಿದ್ದುವೆಂದು ಊಹಿಸಬಹುದು. ಬಾಯನ್ನು ಸುಡುವುದು, ಶೂಲಕ್ಕೇರಿಸುವುದು, ಹಗ್ಗದಲ್ಲಿ ಕಟ್ಟಿಹಾಕುವುದು, ಸೆರೆಯಲ್ಲಿಡುವುದು—ಇವು ಆ ಶಿಕ್ಷೆಗಳಲ್ಲಿ ಕೆಲವು. ಲಂಚವನ್ನು ತೆಗೆದುಕೊಳ್ಳುವುದನ್ನು ರಾಜಾಜ್ಞೆಯು ವಿರೋಧಿಸಿದ್ದಿತು. ಮಹಾಪ್ರಧಾನ ನೊಕ್ಕಯ್ಯನನ್ನು ಒಂದು ಶಾಸನವು 'ಲಂಚಕಾಯ ಮುಖ ಮುದ್ರಂ' ಎಂದು ಕರೆದಿದೆ.[182] ಹೊಯ್ಸಳರಲ್ಲಿ ಕರಣಿಕನಾಗಿ ಅನುಭವವನ್ನು ಪಡೆದಿದ್ದ ಹರಿಹರನು ತನ್ನ ಬಸವರಾಜದೇವರ ರಗಳೆಗಳಲ್ಲಿ ಅಧಿಕಾರಿಗಳು ಲಂಚವನ್ನು ತೆಗೆದುಕೊಳ್ಳುತ್ತಿದ್ದುದರ ಪ್ರಸ್ತಾಪಮಾಡುತ್ತಾನೆ.[183] ರಾಜನಿಗೆ ಪುತ್ರೋತ್ಸವವಾದಾಗ ಆ ಸಂತೋಷದ ಕುರುಹಾಗಿ ಸೆರೆಮನೆಯ ಅನೇಕ ಬಂದಿಗಳನ್ನು ಬಿಡುಗಡೆಮಾಡಿಸುತ್ತಿದ್ದನು.[184]

ಇಲ್ಲಿ ಒಂದೆರಡು ವಿಚಿತ್ರ ಸಂಗತಿಗಳನ್ನು ನಿರೂಪಿಸಬಹುದು. ಅಧಿಕಾರಿಯೊಬ್ಬನು ತನ್ನ ಅಧಿಕಾರವನ್ನು ಅತಿಕ್ರಮಿಸಿ ನಡೆದುಕೊಂಡಾಗ ಅವನನ್ನು ರಾಜನು ಶಿಕ್ಷಿಸಲೇಬೇಕಾಗುತ್ತದೆ. ಆಗ ಆ ಅಧಿಕಾರಿಯ ಪರವಾಗಿ, ಬಹುಶಃ ಅವನಿಂದ ಬಹುವಾಗಿ ಉಪಕೃತನಾದ ಒಬ್ಬ ವ್ಯಕ್ತಿಯು ಮುಂದೆ ಬಂದು, ಆ ಅಧಿಕಾರಿಯ ಎಲ್ಲ ತಪ್ಪುಗಳನ್ನೂ ತಾನು ಹೊತ್ತು ತಾನೇ ಇರಿದುಕೊಂಡು ಸತ್ತು ಆ ಅಧಿಕಾರಿಗೆ ಕ್ಷಮೆಯನ್ನು ಕೊಡಿಸಿದ ಒಂದು ಅತಿ ವಿರಳ ನಿದರ್ಶನವು ಶಾಸನವೊಂದರಲ್ಲಿದೆ.[185] ಇನ್ನೊಂದು ಶಾಸನವು ಇದಕ್ಕಿಂತಲೂ ವಿಚಿತ್ರವಾದ ಸಂಗತಿಯನ್ನು ಹೇಳುತ್ತದೆ. ಮೂವರು ಗಾವುಂಡರಿಗೆ ಸೇರಿದ್ದ ಹೊಲವನ್ನು ಚಿದ್ದಯ್ಯ ಮತ್ತು ಜಕ್ಕಯ್ಯ ಎಂಬ ಬ್ರಾಹ್ಮಣರು ಅಧಿಕಾರಿಗೆ ತೋರಿಸಿ 'ಎಡೆಯಾಯ್ಲಿತನದಿಂ'ದ ಮೂರು ವರ್ಷ ಅನುಭವಿಸುತ್ತಾರೆ. ತಮಗೆ ನ್ಯಾಯವಾಗಿ ಸೇರಬೇಕಾದ ಭೂಮಿಯನ್ನು ಪಡೆಯಬೇಕಾದರೆ ಮೂವರಲ್ಲಿ ಒಬ್ಬನು ಸಾಯಲೇಬೇಕೆಂದೂ ಸತ್ತವರಿಗೆ ಮುನ್ನಿನ ಭಾಗವಲ್ಲದೆ ಮತ್ತೊಂದು ಭಾಗವನ್ನು ಕೊಡತಕ್ಕದ್ದೆಂದೂ ಒಪ್ಪಂದಕ್ಕೆ ಬರುತ್ತಾರೆ. ಮೂವರಲ್ಲಿ ಸಾಯಲು ಯಾರೂ ಮೊದಮೊದಲು ಸಿದ್ಧವಾಗಿರಲಿಲ್ಲ. ಕೊನೆಗೆ ಅವರಲ್ಲಿ ಒಬ್ಬನಾದ ನಿಜ್ಜರ ಗಾವುಂಡನು ಆ ಭಾಗಗಳನ್ನು ತನ್ನ ಮಗ ಮಾಚಿಗಾವುಂಡನಿಗೆ ಕೊಡಿ ಎಂದು ಹೇಳಿ ಇರಿದುಕೊಂಡು ಸಾಯುತ್ತಾನೆ. ವೈದಿಕರಿಂದ ಭೂಮಿಯನ್ನು ಪಡೆದು ಮಾಚಿಗಾವುಂಡನಿಗೆ ಆಸ್ತಿಯಲ್ಲಿ ಮೂರನೆಯ ಎರಡು ಭಾಗಗಳನ್ನು ಕೊಟ್ಟು ಉಳಿದ ಇಬ್ಬರು ಮೂರನೆಯ ಒಂದು ಭಾಗವನ್ನು ಹಂಚಿಕೊಳ್ಳುತ್ತಾರೆ.[186] ಈ ಶಾಸನ

---

181 BKI. I. ii. 127, 1082 A.D.

182 EC. VII. Sh. 10, C. 1085 A.D.

183 ಬಸವರಾಜದೇವರ ರಗಳೆ (ಸಂ. ಟಿ. ಎಸ್. ವೆಂಕಣ್ಣಯ್ಯ), 1959, ಪು. 26. "ಎರೆವ ಲಂಚವನೀವ ದಂಡನಾಥರ್ಕಳಂ".

184 "ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಿಂ | ಪಲವಗ್ರಹಾರಮುಂ ಕುಡೆ ಪಡೆವ ಪಾರ್ವರಿಂ"

— ಅಜಿತಪುರಾಣ, 4. 7.

185 EC. XI. Hr. 1, 975 A.D.

186 SII. IX. i. 123, 1059-60 A.D.

ವನ್ನು ಹೇಗೆ ವ್ಯಾಖ್ಯಾನಿಸುವುದೋ ಗೊತ್ತಾಗುವುದಿಲ್ಲ. ಆ ಮೂವರು ಗಾವುಂಡರು ಎಷ್ಟು ಪ್ರಯತ್ನಿಸಿದರೂ ಅವರಿಗೆ ನ್ಯಾಯವು ದೊರಕಲಿಲ್ಲವೆಂದೂ, ಕೊನೆಗೆ ತಮ್ಮ ವಾದವು ನಿಜವೆಂದು ತೋರಲು ತಮ್ಮಲ್ಲಿ ಒಬ್ಬ ವ್ಯಕ್ತಿ ಪ್ರಾಣವನ್ನು ಬಿಡಲೂ ಸಿದ್ಧನೆಂದು ಹೇಳಿ, ಎಲ್ಲರನ್ನೂ ಒಪ್ಪಿಸಿ ಮೇಲೆ ಹೇಳಿದ ರೀತಿಯಲ್ಲಿ ನಡೆದು ಕೊಂಡಿರಬೇಕು. ಇದು 'ದಿವ್ಯ'ದ ಅತಿರೇಕಸ್ಥಿತಿ ಎಂದು ಭಾವಿಸಬಹುದೆ? (ಅಥವಾ ಜಪಾನಿನ 'ಹರಕಿರಿ' ಯನ್ನು ಹೋಲುತ್ತದೆ ಎಂದು ಹೇಳಬಹುದೇ? 'ಹರಕಿರಿ' ಪದ್ಧತಿಗೆ–ಹಿಂದೆ ನೋಡಿ). ಕೋಲಾರದ ಜಿಲ್ಲೆ ಯಲ್ಲಿರುವ ಒಂದು ಶಾಸನವು ಇನ್ನೊಂದು ವಿಚಿತ್ರ ಸಂಗತಿಯನ್ನು ಹೇಳುತ್ತದೆ. ಈ ಶಾಸನವಿರುವ ಕಲ್ಲನ್ನು ಯಾರು ಮರೆಹೊಗುವರೋ ಅವರನ್ನು ಕೊಲ್ಲಲಾಗದು ಎಂದು ಶಾಸನದಲ್ಲಿದೆ.[187] ಈ ಶಾಸನದ ಮೇಲಿರುವ ಚಿತ್ರ ಗಮನಾರ್ಹವಾದುದು. ಧ್ಯಾನಸ್ಥನಾಗಿರುವ ತಪಸ್ವಿಯೊಬ್ಬನ ತಲೆಯನ್ನು ಕತ್ತಿ ಹಿಡಿದಿರುವ ಸೈನಿಕ ನೊಬ್ಬನು ಕತ್ತರಿಸಿದ್ದಾನೆ. ಆ ಸನ್ಯಾಸಿಯ ಬಲಪಾರ್ಶ್ವದಲ್ಲಿ ಚಾಮರ ಹಿಡಿದಿರುವ ದೇವತಾಸ್ತ್ರೀಯೊಬ್ಬಳಿದ್ದಾಳೆ. ಈ ಚಿತ್ರವು ನಮ್ಮ ಕಲ್ಪನೆಯನ್ನು ಕೆರಳಿಸುತ್ತದೆ.. ಯಾವ ರಾಜನು–ಅವನು ಚೋರಯ್ಯನೇ ಇರಬಹುದು-ಆ ಸನ್ಯಾಸಿಯನ್ನು ಅರ್ಥಮಾಡಿಕೊಳ್ಳದೆ ಕೊಂದನೋ? ಅಥವಾ ಯಾವನೋ ನಿರಪರಾಧಿಯನ್ನು ಆ ರಾಜನು ಶಿಕ್ಷಿಸಲು ಹೊರಟಾಗ ಅವನ ನಿರಪರಾಧಿತ್ವವನ್ನು ಸ್ಥಾಪಿಸಲು ಆ ಸನ್ಯಾಸಿ ಬಲಿಯಾದನೋ ಏನೋ! ಎರಡನೆಯ ಊಹೆಯೇ ನಿಜವಿದ್ದರೂ ಇರಬಹುದು. ಅಂತೂ ಆ ಸನ್ಯಾಸಿಯ ಸಾವಿನ ನಂತರ ಅವನದು ಬಲಿದಾನವೆಂದು ಗುರುತಿಸಿದ ರಾಜನು ತನ್ನ ತಪ್ಪನ್ನು ತಿದ್ದಿಕೊಳ್ಳಲು ಆ ಶಾಸನವಿರುವ ಕಲ್ಲು ಪವಿತ್ರವೆಂದೂ, ಅದರ ಮರೆಹೊಕ್ಕವರನ್ನು ಯಾರೂ ಕೊಲ್ಲಬಾರದೆಂದೂ ಆಜ್ಞೆ ಹೊರಡಿಸಿರಬೇಕು. ಅಮೃತಸರದ ಸಿಕ್ಖ ಜನಾಂಗದ ಸುಪ್ರಸಿದ್ಧ ದೇವಾಲಯದಲ್ಲಿ ಆಶ್ರಯ ಪಡೆದವರನ್ನು ಬಂಧಿಸಕೂಡದೆಂಬ ಈಗಿನ ಪದ್ಧತಿಯನ್ನು ಮೇಲಿನ ಶಾಸನವು ನೆನಪಿಗೆ ತರುತ್ತದೆ.

## ದಿವ್ಯಗಳು

ಪ್ರಾಚೀನ ಕರ್ನಾಟಕದ ಸಾಮಾಜಿಕ-ಧಾರ್ಮಿಕ ಸಂಸ್ಥೆಯಾಗಿದ್ದ ದೇವಸ್ಥಾನದ ಸ್ವರೂಪ, ಸ್ಥಾನ ಇತ್ಯಾದಿಗಳನ್ನು ಚರ್ಚಿಸುವಾಗ ದಿವ್ಯದ ವಿಷಯವನ್ನು ಸ್ವಲ್ಪ ವಿಸ್ತಾರವಾಗಿ ಪ್ರಸ್ತಾಪಮಾಡಲಾಗಿದ್ದಿತು. ಇಲ್ಲಿ ಮತ್ತೆ ಅದನ್ನು ಕುರಿತು ಬಹು ಸಂಕ್ಷೇಪವಾಗಿ ನಿರೂಪಿಸುವುದು ಅವಶ್ಯಕ. ವಿವಾದವೊಂದನ್ನು ನಿರ್ಣ ಯಿಸಲು ಮಾನುಷ ಪ್ರಮಾಣಗಳ ಅಭಾವವಿರುವಾಗ ಅನುಸರಿಸುವ ವಿಧಾನವೇ ದಿವ್ಯ[188] ಎಂಬುದನ್ನು ಹಿಂದೆ ನೋಡಿದ್ದೇವೆ. ಕರ್ನಾಟಕದಲ್ಲಿ ಸಪ್ತದಿವ್ಯಗಳ ಆಚರಣೆಯು ಇದ್ದಿತೆಂದು ಒಂದೆರಡು ಶಾಸನಗಳಿಂದ ತಿಳಿದುಬರುತ್ತದೆ.[189] 'ಕೊಪ' (ಬಹುಶಃ 'ಕೋಶ'ವಿರಬೇಕು), ರವಿ, ತಂಡುಲ, ಅಗ್ನಿ, ತಪ್ತಮಾಷ ಜಲ, ವಿಷ-ಇವೇ ಆ ಸಪ್ತದಿವ್ಯಗಳು. ದಿವ್ಯವನ್ನು ಹಿಡಿಯುವ ವ್ಯಕ್ತಿಯೇ ಶೋಧ್ಯ. ಆ ಶೋಧ್ಯನು ದಿವ್ಯವನ್ನು ಹಿಡಿಯುವ ಮುನ್ನ ಆ ವಿವಾದದ ವಿಷಯವನ್ನು ಪತ್ರವೊಂದರಲ್ಲಿ ಬರೆದು ಅದನ್ನು ಅವನ ತಲೆಯ ಮೇಲೆ ಇಡುತ್ತಿದ್ದರು[190] (ಈ ನಿಯಮವನ್ನು ಸ್ಮೃತಿಗಳೇ ಹಾಕಿಕೊಟ್ಟಿವೆ). ಕ್ರಿ. ಶ. 1150 ಕ್ಕಿಂತ ಈಚಿನ ಹಲವು

---

[187] MAR (1928). p. 45, C. 900 A.D. "ಸ್ವಸ್ತಿಶ್ರೀ ವೈದುಂಬ ಮಹಾರಾಜರ್ ಪ್ರಿತುವೀರಾಜ್ಯಮ್‌ಗೆಯೆ ಚೋರಯ್ಯ ನೆಲವಂಕಿ ಅಭ್ಯಂತರ ಸಿದ್ಧಿ ಆಳುತ್ತಿರೆ ಚೋರಯ್ಯನ ವೆಸದಿ ಭಂಗುವ ಕಲ್ಲು ಈ ಕಲ್ಲ ಮಱೆವೊಕ್ಕರ ಕೊಲಲಾಗದು."

[188] "ತತ್ರ ಮಾನುಷ ಪ್ರಮಾಣಾನಿರ್ಣೀಯಸ್ಯಾಪಿ ನಿರ್ಣಾಯಕಂ ಯತ್ತದ್ದಿವ್ಯಮಿತಿ ಲೋಕಪ್ರಸಿದ್ಧಂ". (–ದಿವ್ಯತತ್ತ್ವ.) ಡಾ॥ ಪಿ. ವಿ. ಕಾಣೆಯವರ History of Dharmaśāstra, III, p. 363 ರಲ್ಲಿ ಉದ್ಧೃತವಾಗಿದೆ.

[189] SII. IX. i. 143, 1079 A D. ; EC. VII. Sk. 185, 1158 A.D.

[190] EC. III. Mandya. 79, C. 1275 A.D.

ಶಾಸನಗಳಲ್ಲಿ ಕಾಸಿದ ಕಬ್ಬಿಣದ ತುಂಡನ್ನು ಕೈಯಲ್ಲಿ ಹಿಡಿದೋ,[190.1] ಕಾಸಿದ ತುಪ್ಪದಲ್ಲಿ ಕೈಯದ್ದಿಯೋ-ಅಂತೂ ದಿವ್ಯದ ಪರೀಕ್ಷೆಗಳಿಗೆ ಒಳಗಾಗಿ ಗೆದ್ದು ಬಂದ ವಿಷಯವು ಹಲವು ಶಾಸನಗಳಲ್ಲಿದೆ.[191] ದಿವ್ಯದ ವಿಷಯವು ಅನೇಕ ಕನ್ನಡ ಕಾವ್ಯಗಳಲ್ಲಿಯೂ ಉಕ್ತವಾಗಿದೆ.[192] ಇದೆಲ್ಲವನ್ನೂ ನೋಡಿದರೆ ಪ್ರಾಚೀನ ಕರ್ನಾಟಕದಲ್ಲಿ ದಿವ್ಯದ ಪದ್ಧತಿಯು ತಕ್ಕಮಟ್ಟಿಗೆ ಪ್ರಬಲವಾಗಿಯೇ ಇದ್ದಿತೆಂದು ಊಹಿಸಬಹುದು. ಶಾಸನಗಳ ಮತ್ತು ಕಾವ್ಯಗಳ ಸಹಾಯದಿಂದ ನಾವು ಕೆಳಗಿನ ಕೆಲವು ತೀರ್ಮಾನಗಳಿಗೆ ಬರಬಹುದು. ಇಬ್ಬರಿಗೆ ಜಗಳ ವಾಗುತ್ತದೆಯೆಂದು ಭಾವಿಸೋಣ. ಆಗ ಒಬ್ಬನು ತನ್ನ ತಲೆಯಮೇಲಿನ ಟೊಪ್ಪಿಗೆಯನ್ನೋ ಅಥವಾ ತಾನು ತಲೆಗೆ ಧರಿಸಿದ್ದ ವಸ್ತ್ರವನ್ನೋ ಕಿತ್ತು ಎಸೆದರೆ ಅದು ಪ್ರತಿಪಕ್ಷದವನಿಗೆ ಸವಾಲು ಹಾಕಿದಂತಾಗುತ್ತಿದ್ದಿತು. ಇದನ್ನೇ 'ಮುಡಿಗೆಯಿಕ್ಕು' ಅಥವಾ 'ಮುಂಡಿಗೆ ಇಕ್ಕು' ಎಂದು ಕಾವ್ಯಗಳಲ್ಲಿ ಕರೆದಿರುವುದು.[193] ಇನ್ನೊಬ್ಬನು ಆ ವಸ್ತ್ರವನ್ನು ಮೇಲೆತ್ತಿದರೆ ಸವಾಲನ್ನು ಅಂಗೀಕರಿಸಿದಂತಾಗುತ್ತಿದ್ದಿತು. ಎಷ್ಟೋ ಸಾರಿ ತಾನು ದಿವ್ಯವನ್ನು ಹಿಡಿದು ತನ್ನ ವಾದವೇ ಸರಿಯೆಂದು ತೋರಿಸಬಲ್ಲೆ ಎಂಬ ಸವಾಲನ್ನು 'ಮುಂಡಿಗೆಯಿಕ್ಕು'ವ ರೂಪದಲ್ಲಿ ಹಾಕುತ್ತಿದ್ದುದೂ ಉಂಟು.[194] ದಿವ್ಯಗಳನ್ನು ಸಾಮಾನ್ಯವಾಗಿ ಯಾವುದೋ ಪ್ರಸಿದ್ಧ ದೇವಸ್ಥಾನದಲ್ಲಿ ಬ್ರಾಹ್ಮಣರ ಮುಂದೆ ನಡೆಯಿಸುತ್ತಿದ್ದರು. ದಿವ್ಯಗಳಲ್ಲಿ ಬಹು ಪ್ರಚಲಿತವಿದ್ದುದೆಂದರೆ 'ಪಾಳದಿವ್ಯ'[195] ಅಥವಾ ಫಾಲದಿವ್ಯ. ಕಾಸಿದ ಲೋಹವನ್ನು ಕೈಯಲ್ಲಿ ಹಿಡಿಯುವುದನ್ನೇ ಪಾಳದಿವ್ಯವೆಂದು ಕರೆದಿರುವುದು. ದಿವ್ಯಗಳಲ್ಲಿ ಗೆದ್ದವರಿಗೆ ಜಯಪತ್ರಗಳನ್ನು ಕೊಡುತ್ತಿದ್ದರು. ದಿವ್ಯಗಳು ನಡೆಯುತ್ತಿದ್ದ ದೇವಸ್ಥಾನಗಳಿಗೆ ದಿವ್ಯಗಳಿಂದ ತಕ್ಕಮಟ್ಟಿಗೆ ಆದಾಯವು ಬರುತ್ತಿದ್ದಿತು.[196]

ದಿವ್ಯಗಳನ್ನು ಸಣ್ಣಪುಟ್ಟ ಜಗಳಗಳ ನಿರ್ಣಯಕ್ಕಾಗಿ ಬಳಸಬಾರದೆಂದು ಸ್ಮೃತಿಗಳು ಹೇಳುತ್ತವೆ. ಅದರಂತೆ ಪ್ರಾಚೀನ ಕರ್ನಾಟಕದಲ್ಲಿಯೂ ಕೂಡ ಭೂಮಿಗೆ ಸಂಬಂಧಿಸಿದ ವಿವಾದಗಳಲ್ಲಿ, ಅಥವಾ ಒಂದು ಜಾತಿಯ ಪ್ರತಿಷ್ಠೆಗೆ ಭಂಗವನ್ನು ತರಬಹುದಾದ ವಿವಾದಗಳಲ್ಲಿ ಮಾತ್ರ ದಿವ್ಯಗಳನ್ನು ಬಳಸುತ್ತಿದ್ದರೆಂದು ಶಾಸನಗಳಿಂದ ಊಹಿಸಬಹುದು. ಇಲ್ಲಿ ನಾವು ಗಮನಿಸಬೇಕಾದ ಅಂಶವೆಂದರೆ-ಹಲವರು ದಿವ್ಯಗಳನ್ನು ಹಿಡಿದು, ಅಗ್ನಿಯಿಂದ ಯಾವ ಗಾಯಕ್ಕೂ ಒಳಗಾಗದೆ ಗೆದ್ದಿರುವುದು. ಈಗ ನಮ್ಮ ದೃಷ್ಟಿಗೆ ದಿವ್ಯವು ಒಂದು ಅನಾಗರಿಕವಾದ ಪದ್ಧತಿಯಂತೆ ಕಂಡುಬಂದರೂ ಪ್ರಾಚೀನ ಕರ್ನಾಟಕದಲ್ಲಿ ಮಾತ್ರ ಅದೊಂದು ಸಹಜವೂ ಶಾಸ್ತ್ರೋಕ್ತವೂ ಆದ ಪದ್ಧತಿಯಾಗಿದ್ದಿತು.

---

190.1 ನಯಸೇನನ ಧರ್ಮಾಮೃತದ ಒಂದು ಕಥೆಯಲ್ಲಿ ನಿಷ್ಕಾರಣವಾಗಿ ವೃಷಭದ ಮೇಲೆ ಕೊಲೆಯ ಆರೋಪಣ ಬಂದಾಗ ಜನರು ಅದನ್ನು ಹೊಡೆದರೆಂದೂ, ಆಗ ಆ ಬಸವನು ವೇದನೆಯನ್ನು ತಡೆಯಲಾರದೆ, 'ತನ್ನ ಮನದ ನಿರ್ಮಲತೆಯ-ನೆಲ್ಲರ್ಗೆ ತೋಱುವಂತೆ' ಒಬ್ಬ ಕಮ್ಮಾರ ಕಾಯಿಸುತ್ತಿದ್ದ ಕಬ್ಬಿಣವನ್ನು ಕಚ್ಚಿಹಿಡಿಯಿತೆಂದೂ, ಆಗ ಜನರು ಅದು ನಿರಪರಾಧಿಯೆಂದು ತೀರ್ಮಾನಿಸಿದರೆಂದೂ ಹೇಳಿದೆ.

191 JBBRAS. X. p. 260 ; EC· III. Mandya. 79 ; EC· IV. Yelandur· 2.

192 ಪಂಪಭಾರತ, 1.70 ; ಶಾಂತಿಪುರಾಣ, 4.30, ವ. ; ಧರ್ಮಾಮೃತ, I, ಪು. 429 ; ಪಂಪರಾಮಾಯಣ, 9.101 ; ಬಸವಣ್ಣನವರ ಷಟ್ಸ್ಥಲದ ವಚನಗಳು (1954), ಪು. 60, 84, 169 ; ಸಿದ್ಧರಾಮಚಾರಿತ್ರ, 7.20.

193 ಪಂಪಭಾರತ, 8·22 ; ಬಸವಣ್ಣನವರ ಷಟ್ಸ್ಥಲದ ವಚನಗಳು (1954), ಪು. 195. ವಿವರಗಳಿಗೆ ನೋಡಿ-ಎಂ. ಚಿದಾನಂದಮೂರ್ತಿ : 'ಪ್ರಾಚೀನ ಕರ್ನಾಟಕದಲ್ಲಿ "ದಿವ್ಯ" ಮತ್ತು "ಮುಂಡಿಗೆ" ' (ಸಂಶೋಧನ ತರಂಗ, ಪು. 87-104).

194 EC. III. Mandya. 79, C. 1275 A.D.

195 JBBRAS. IX· p· 304

196 SII· IX. i. 143, 1079 A.D·

## ಊರುಗಳ ಆಡಳಿತ

'ಊರುಗಳ ಆಡಳಿತ' ಎಂಬ ಶೀರ್ಷಿಕೆಯ ಕೆಳಗೆ ಮೂರು ವಿಷಯಗಳನ್ನು ಚರ್ಚಿಸಲಾಗಿದೆ. (1) ಪಟ್ಟಣಗಳ ಆಡಳಿತ, (2) ಅಗ್ರಹಾರಗಳ ಆಡಳಿತ, (3) ಹಳ್ಳಿಗಳ ಆಡಳಿತ. ಈ ವಿಭಜನೆಗೆ ಶಾಸನಗಳ ಒಪ್ಪಿಗೆಯೂ ಇದೆ. ಬನವಾಸಿ ದೇಶವನ್ನು ಒಂದು ಶಾಸನವು ವರ್ಣಿಸುತ್ತ, ಅದು ಅಗ್ರಹಾರ, ಪುರ, ಪಲ್ಲಿ (= ಹಳ್ಳಿ)ಗಳಿಂದ ತುಂಬಿದ್ದಿತು ಎಂದು ಹೇಳುತ್ತದೆ.[197] ಇವುಗಳಲ್ಲಿ ಅಗ್ರಹಾರಗಳ ಆಡಳಿತವನ್ನು ಕುರಿತು ಹಿಂದೆ 'ವಿದ್ಯಾಭ್ಯಾಸ' ಎಂಬ ಅಧ್ಯಾಯದಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಿರುವುದರಿಂದ ಈ ಅಧ್ಯಾಯದಲ್ಲಿ ಕೆಲವು ಅಂಶಗಳನ್ನು ಮಾತ್ರ ಸೂಚಿಸುತ್ತೇವೆ. ರಾಜ್ಯಾಡಳಿತಕ್ಕೆ ಸಂಬಂಧಿಸಿದ ವಿಷಯಗಳು ಹೇಗೆ ವಿಪುಲವಾಗಿ ಸಿಗುವುದಿಲ್ಲವೋ ಹಾಗೆಯೇ ಊರುಗಳ ಆಡಳಿತಕ್ಕೆ ಸಂಬಂಧಿಸಿದಂತೆಯೂ ಹೆಚ್ಚು ಸಿಗುವುದಿಲ್ಲ. ಅಲ್ಲಿ ಇಲ್ಲಿ ದೊರಕುವ ತುಂಡು ತುಂಡುಗಳನ್ನು ಸೇರಿಸಿ ಒಂದು ಸ್ಥೂಲವಾದ ಚಿತ್ರವನ್ನು ಕಲ್ಪಿಸಿಕೊಂಡು ಅಷ್ಟರಿಂದಲೇ ತೃಪ್ತರಾಗಬೇಕಾಗಿದೆ.

## ಪಟ್ಟಣಗಳ ಆಡಳಿತ

ಡಾ|| ಜಯಸ್ವಾಲರು 'ಪೌರ' ಮತ್ತು 'ಜಾನಪದ' ಎಂಬ ಎರಡು ಸಂಸ್ಥೆಗಳತ್ತ ವಿದ್ವಾಂಸರ ಗಮನವನ್ನು ಸೆಳೆದವರಲ್ಲಿ ಮೊದಲಿಗರು. ಪೌರ ಎಂಬುದು ರಾಜಧಾನಿಯ ಪ್ರತಿನಿಧಿಗಳನ್ನು, ಜಾನಪದ ಎಂಬುದು ಒಟ್ಟು ರಾಷ್ಟ್ರದ ಇತರ ಪ್ರತಿನಿಧಿಗಳನ್ನು ಸೂಚಿಸುತ್ತದೆಯೆಂದು ಅವು ಕೆಟ್ಟ ಆಡಳಿತದ ಫಲಗಳಾದ ಅನಾಯಕತ್ವ ಅಥವಾ ಅವ್ಯವಸ್ಥೆಯಿಂದುಂಟಾಗುವ ದುಷ್ಪರಿಣಾಮಗಳನ್ನು ತಡೆಯಲು ಪ್ರಯತ್ನಿಸುವ ಸಂಸ್ಥೆಗಳೆಂದೂ ಅವರು ಪ್ರತಿಪಾದಿಸಿದರು.[198] (ಈ ಅಭಿಪ್ರಾಯಗಳನ್ನು ಹಲವರು ಒಪ್ಪುವುದಿಲ್ಲ). ನಮಗೆ ತಿಳಿದಮಟ್ಟಿಗೆ ಪ್ರಾಚೀನ ಕರ್ನಾಟಕದಲ್ಲಿ ಈ ಹೆಸರಿನ ಸಂಸ್ಥೆಗಳು ಇರಲಿಲ್ಲ. ಜಾನಪದ ಎಂಬ ಮಾತೇನೋ ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಕ್ರಿ. ಶ. 929 ರ ಶಾಸನವೊಂದರಲ್ಲಿ 'ಜನಪದ' ಎಂಬುದು ನಾಡು ಎಂಬರ್ಥದಲ್ಲಿ ಕಾಣಿಸಿಕೊಳ್ಳುತ್ತದೆ.[199] ಕವಿರಾಜಮಾರ್ಗದಲ್ಲಿ ಬರುವ ಜನಪದ ಎಂಬ ಮಾತಿಗೆ ನಾಡು ಎಂದೇ ಅರ್ಥವಾಗುತ್ತದೆ.[200] ರಾಜಧಾನಿಯನ್ನು 'ನೆಲೆವೀಡು',[201] 'ಅಧಿಷ್ಠಾನ'[202]

---

197 EC. VIII Sb. 262, 1077 A.D.

198 Hindu Polity, XXVII, XXVIII.

199 EI. XIII. p. 329, 929 A.D. "ಭರತಮಹೀಮಂಡಲಕ್ಕಾಭರಣಂ ಕುಂತಳಧರಾತಳಂ ತದ್ವಿಷಯಕ್ಕೆರಡ-ಱುನೂಱು ಲಲಾಮಂ ಪುಲಿಕರ ಜನಪದಂ ಅದಕ್ಕೆ ನವಪವಿ ಮುಕುರಂ ॥ ಆ ಪುರಿಗೆಱ್ಱೆ ನಾಡೊಳಗೆ ಶ್ರೀಪುಂಜಂ ದೇವತಾ ನಿವಾಸವಿಳಾಸವ್ಯಾಪಾರಕೃತಂ ನೆಗಟ್ದ ಮಹಾಪಟ್ಟಣಂ ಒಳ್ಪನಾಳ್ದ ಪುಲಿಗೆಱೆಯೆಸೆಗುಂ ॥"

200 "ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್ । ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷಂ ॥ ಅದಱೊಳಗಂ ಕಿಸುವೊೞಲಾ ವಿದಿತ ಮಹಾಕೊಪಣನಗರದಾ ಪುಲಿಗೆಱೆಯಾ । ಸದಭಿಸ್ತುತಮಪ್ಪೊಂಕುಂದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

(ಕವಿರಾಜಮಾರ್ಗ, 1.36–7)

ಜನಪದ ಎಂಬುದು ಒಂದು ನಾಡನ್ನು ಸೂಚಿಸಿದರೂ ಅದು ಸಾಂಸ್ಕೃತಿಕ, ಸಾಮಾಜಿಕ ಅಥವಾ ರಾಜಕೀಯವಾದ ಏಕತೆ ಇರುವ ಒಂದು ಭೂಭಾಗವನ್ನು ಸೂಚಿಸುತ್ತದೆ.

[India as Known to Pāṇini, p. 48, 81, 480].

201 IA. XIX. p. 164, 1040 A.D.

202 IA. VI. p. 31, C. 520 A.D.

ಎಂದು ಶಾಸನದಲ್ಲಿ ಕರೆದಿದೆ. 'ವಿಜಯಸ್ಕಂಧಾವಾರ'[203] ಎಂಬುದು ರಾಜನು ಪ್ರಯಾಣಮಾಡುತ್ತಿರುವಾಗ ಬೀಡುಬಿಟ್ಟ ಪಟ್ಟಣವನ್ನೋ, ಊರನ್ನೋ ಸೂಚಿಸುತ್ತದೆ. ಕ್ರಿಸ್ತಪೂರ್ವ ಕಾಲದ ಭಾರತದ 'ಪೌರ' ಎಂಬ ಸಂಘ ಅಥವಾ ಸಂಸ್ಥೆಯನ್ನು ಕರ್ನಾಟಕದ 'ನಗರ' ಅಥವಾ 'ನಖರ' ಎಂಬ ಸಂಸ್ಥೆಯು ಸ್ವಲ್ಪಮಟ್ಟಿಗೆ ಹೋಲುತ್ತದೆ. ಇದರ ವಿವರಗಳು ಮುಂದೆ ಬರುತ್ತವೆ.

ಮಾನಸಾರದ ಪ್ರಕಾರ ಒಂದು ಊರು 'ಪುರ' ಎನ್ನಿಸಿಕೊಳ್ಳಬೇಕಾದರೆ ಅದರ ಸುತ್ತಮುತ್ತ ಆರಾಮುಗಳೂ, ತೋಟಗಳೂ ಇರಬೇಕು; ಬಹು ವಿಧದ ಜನರು ವಾಸವಾಗಿರಬೇಕು; ಮಾರಾಟಗಾರರಿಂದ ಮತ್ತು ಕೊಳ್ಳುವವರಿಂದ ಕಿಕ್ಕಿರಿದು ತುಂಬಿ ಗದ್ದಲದಿಂದ ಕೂಡಿರಬೇಕು; ಏಳು ದೇವತೆಗಳ ದೇವಸ್ಥಾನಗಳಿಂದ ರಾರಾಜಿಸುತ್ತಿರಬೇಕು.[203.1]

ಹಳ್ಳಿ ಅಥವಾ ಗ್ರಾಮಕ್ಕೂ, ಪುರ ಅಥವಾ ಪಟ್ಟಣಕ್ಕೂ ಮಧ್ಯೆ ಒಂದು ಗೆರೆಯನ್ನೆಳೆಯುವುದು ಕಷ್ಟವಾದರೂ ಮಾನಸಾರದ ವರ್ಣನೆಯು ಪಟ್ಟಣವೆಂದರೆ ಏನು ಎಂಬುದರ ಚಿತ್ರವನ್ನು ತಕ್ಕಮಟ್ಟಿಗೆ ತಂದುಕೊಡುತ್ತದೆ. ಪ್ರಾಚೀನ ಕರ್ನಾಟಕದ ಕೆಲವು ಪಟ್ಟಣಗಳನ್ನು ಇಲ್ಲಿ ಹೆಸರಿಸಬಹುದು. ಶ್ರೀಮದನಾದಿ ಪಟ್ಟಣವೆಂದು ಶಾಸನಗಳು ಸಂಕೀರ್ತಿಸಿರುವ ಮುಳುಗುಂದವು[204] ಬಹುದೊಡ್ಡ ವ್ಯಾಪಾರಕೇಂದ್ರವಾಗಿದ್ದಿತು. ಅಲ್ಲಿ ಹತ್ತಿ, ಬತ್ತ, ಬೆಲ್ಲ, ಮರ, ಬಿದಿರು, ಎಣ್ಣೆ–ಇವುಗಳ ವ್ಯಾಪಾರವು ಎತ್ತು, ಕತ್ತೆ, ಬಂಡಿಗಳ ಮೂಲಕ ನಡೆಯುತ್ತಿದ್ದಿತು. ಆ ಪಟ್ಟಣದಲ್ಲಿ ಮುನ್ನೂರು ಸೆಟ್ಟಿಗಾವುಂಡುಗಳೂ, ನೂರಿಪ್ಪತ್ತು ಮಹಾಜನರೂ, ಐವತ್ತೆರಡು ಸಾಲಿಗರೂ, ನೂರಿಪ್ಪತ್ತೆರಡು ತೆಲ್ಲಿಗರೂ ಐವತ್ತೆಂಟು ಮಾಲೆಗಾರರೂ ಪಂಚಮಠಸ್ಥಾನಗಳೂ ಇದ್ದುವು.[205] ಆ ಕಾಲದ ಮತ್ತೊಂದು ಪ್ರಸಿದ್ಧವಾದ ಪಟ್ಟಣವೆಂದರೆ ಪುಲಿಗೆರೆ ಅಥವಾ ಈಗಿನ ಲಕ್ಷ್ಮೇಶ್ವರ. ಭರತಖಂಡಕ್ಕೆ ಕುಂತಳ ದೇಶವು ಆಭರಣಪ್ರಾಯವೆಂದೂ ಆ ದೇಶಕ್ಕೆ ಎರಡಱುನೂಱು ಎಂಬುದು 'ಲಲಾಮ'ವೆಂದೂ, ಅದರಲ್ಲಿ ಪುಲಿಗೆಱೆ ಎಂಬ ಜನಪದವು 'ನವಪವಿ ಮುಕುರ'ದಂತೆ ಇದೆಯೆಂದೂ, ಆ ಪುಲಿಗೆರೆ ನಾಡಿನಲ್ಲಿ 'ಶ್ರೀಪುಂಜಂ ದೇವತಾ ನಿವಾಸ ವಿಳಾಸ ವ್ಯಾಪಾರಕೃತ'ವಾದ 'ಮಹಾ ಪಟ್ಟಣ'ವೆನ್ನಿಸಿಕೊಂಡ ಪುಲಿಗೆರೆಯು ಶೋಭಿಸುತ್ತಿದೆಯೆಂದೂ ಶಾಸನವೊಂದು ಹೊಗಳುತ್ತದೆ.[206] ಲೊಕ್ಕಿಗುಂಡಿ ಅಥವಾ ಈಗಿನ ಲಕ್ಕುಂಡಿಯು ಪ್ರಸಿದ್ಧವ್ಯಾಪಾರಕೇಂದ್ರವಾಗಿದ್ದ 'ಮಹಾಗ್ರಾಮ'[207] ವಾಗಿದ್ದಿತು. ಅದು ಇಂದ್ರನ ಅಮರಾವತಿಯಂತೆ ಸಂಪದ್ಯುಕ್ತವಾಗಿದ್ದಿತು.[208] ಬಹುಶಃ ಆ ಕಾಲಕ್ಕೆ ಅತ್ಯಂತ ಪ್ರಸಿದ್ಧವಾಗಿದ್ದ ಪಟ್ಟಣವೆಂದರೆ ಬಳ್ಳಿಗಾವೆ. ಅದನ್ನು ಶಾಸನಗಳು 'ಶ್ರೀಮದನಾದಿ ಪಟ್ಟಣ'ವೆಂದೂ,[209] 'ಪಟ್ಟಣಂಗಳ ತವರ್ಮನೆ'[210] ಎಂದೂ ಹೊಗಳಿರುವುದು ಉಚಿತವೇ ಆಗಿದೆ. ಅದು ಅನೇಕ ಧರ್ಮಗಳ, ಸಾಮಾಜಿಕ ಚಟುವಟಿಕೆಗಳ, ವಿದ್ಯಾಭ್ಯಾಸದ, ದೊಡ್ಡ ವ್ಯಾಪಾರದ ಕೇಂದ್ರವಾಗಿದ್ದಿತು ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ನೋಡಿದ್ದೇವೆ. ಅಲ್ಲಿಯ ವರ್ತಕರು ನಶಿಸಿಹೋಗುವ ಐಶ್ವರ್ಯವನ್ನು ಮಾತ್ರ ಸಂಪಾದಿಸದೆ ಇಹ ಮತ್ತು ಪರಗಳಿಗೆ ಸಾಧಕವಾದ ಶಾಶ್ವತ

---

203 IA. XIX. p. 149, 692 A.D. ಮಾನಸಾರದ ಪ್ರಕಾರ ಸ್ಕಂಧಾವಾರ ಎಂಬುದು ಎಂಟು ರೀತಿಯ ಕೋಟೆಗಳಲ್ಲೊಂದು—Mānasāra (Tr.), p. 95.

203.1 ಅದೇ.

204 BKI. I. ii. 198, 1123 A.D.

205 BKI. I. i. 97, 1062 A.D.

206 EI. XIII. p. 329, 929 A.D.

207 BKI. I. ii. 202, C. 1125 A.D.

208 BKI. I. ii. 196, 1121 A.D.

209 EC. VII. Sk. 92, 1068 A.D.

210 EC. VII. Sk. 100, 1129 A.D.

ಕೀರ್ತಿಯನ್ನೂ ಮೋಕ್ಷವನ್ನೂ ಸಂಪಾದಿಸುತ್ತಿದ್ದರೆಂದು ಶಾಸನವೊಂದು[211] ಹೊಗಳುತ್ತದೆ. ಆ ಪಟ್ಟಣದ 'ಪುರ'ಗಳು ಲಕ್ಷ್ಮಿಯ ಮೂರು ಕಣ್ಣುಗಳಿದ್ದಂತೆ ಅಥವಾ ಆಕೆಯ ಕೊರಳ ಮೂರು ಮುತ್ತಿನ ಸರಗಳಿದ್ದಂತೆ ಇದ್ದುವೆಂದು ಅದೇ ಶಾಸನವು ಹೇಳುತ್ತದೆ.[212] ಈ ಕೆಲವು ಪಟ್ಟಣಗಳ ವರ್ಣನೆಯು ಮಾನಸಾರದ ವರ್ಣನೆಗೆ ಬಹುಮಟ್ಟಿಗೆ ಹೊಂದಿಕೊಳ್ಳುತ್ತದೆ. ಪ್ರಾಚೀನ ಕರ್ನಾಟಕದ ಪಟ್ಟಣಗಳು ಬಹುಮಟ್ಟಿಗೆ ವ್ಯಾಪಾರಕೇಂದ್ರಗಳು. ಬಹುಶಃ ವ್ಯಾಪಾರದಿಂದಲೇ ಊರುಗಳು ಪಟ್ಟಣಗಳಾಗುತ್ತಿದ್ದುವು. 'ಸೆಟ್ಟಿ ಬಿಟ್ಟಲ್ಲೇ ಪಟ್ಟಣ' ಎನ್ನುವ ಗಾದೆಯ ಹಿಂದೆ ಅರ್ಥವಿಲ್ಲದಿಲ್ಲ. ಹಿಂದೊಮ್ಮೆ ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಟವು ಈಗ ಗುಲ್ಬರ್ಗ ಜಿಲ್ಲೆಯ ಮಳ್‌ಖೇಡ್ ಎಂಬ ಒಂದು ಹಳ್ಳಿ. ಈಗ ಪ್ರಚಲಿತವಾಗಿರುವ ಕಥೆಗಳ ಪ್ರಕಾರ ಅದು ಪೂರ್ವದಲ್ಲಿ ಹತ್ತು ಮೈಲಿ ದೂರವಿರುವ ಸೇಡಂ ಊರಿನವರೆಗೂ, ಪಶ್ಚಿಮದಲ್ಲಿ ನಾಲ್ಕುಮೈಲಿ ದೂರ ವಿರುವ ದಂಡೋತಿಯವರೆಗೂ ಹಬ್ಬಿದ್ದಿತು.[213] ಇದು ನಿಜವಾದರೆ ಪ್ರಾಚೀನ ಕರ್ನಾಟಕದ ಕೆಲವು ದೊಡ್ಡ ಪಟ್ಟಣಗಳ ವಿಸ್ತಾರವನ್ನು ನಾವು ಊಹಿಸಿಕೊಳ್ಳಬಹುದು.

ಪಟ್ಟಣಗಳ ಪೌರಕಾರ್ಯಗಳಿಗಾಗಿ (Municipal duties) ರಾಜನಿಂದ ನೇಮಿಸಲ್ಪಟ್ಟ ಆಡಳಿತ ವರ್ಗವೊಂದು ಬಹುಶಃ ಇರಲಿಲ್ಲ. ರಾಜನು ತೆರಿಗೆಗಳ ಸಂಗ್ರಹಣ ಇತ್ಯಾದಿ ಕೆಲಸಗಳಿಗಾಗಿ ನಿಯಮಿಸುತ್ತಿದ್ದ ಅಧಿಕಾರಿಗಳಿರುತ್ತಿದ್ದರು. ಆದರೆ ಉಳಿದ ಪೌರಕಾರ್ಯಗಳಿಗಾಗಿಯೇ ಮೀಸಲಾದ ಒಂದು ಸಂಸ್ಥೆಯಿರದಿದ್ದರೂ ಪಟ್ಟಣದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ 'ನಗರ' ಅಥವಾ 'ನಖರ' ಎಂಬ ವರ್ತಕಶ್ರೇಣಿಯು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದಿತು. ದೇವಸ್ಥಾನ ನಿರ್ಮಾಣ, ದತ್ತಿಯನ್ನು ಬಿಡುವುದು ಇತ್ಯಾದಿ ಕಾರ್ಯಗಳೆಲ್ಲ ವರ್ತಕಶ್ರೇಣಿಗಳ ಸಮ್ಮುಖದಲ್ಲಿ ನಡೆಯುತ್ತಿದ್ದುವು. ಅಂತಹ ಕಾರ್ಯಗಳಲ್ಲಿ ವರ್ತಕಶ್ರೇಣಿಗಳು ಮುಂದೆ ಬಂದು ಭಾಗವಹಿಸುತ್ತಿದ್ದುವು. ವರ್ತಕಶ್ರೇಣಿಗಳ ರಚನೆ, ಕಾರ್ಯ, ಉದ್ದೇಶ ಇತ್ಯಾದಿಗಳನ್ನು ಹಿಂದಿನ ಅಧ್ಯಾಯವೊಂದರಲ್ಲಿ ಚರ್ಚಿಸಿದ್ದೇವೆ. ಪಟ್ಟಣಗಳ ಆಡಳಿತಕ್ಕೆ ಸಂಬಂಧಿಸಿದ ವಿಷಯಗಳ ಮೇಲೆ ಬೆಳಕು ಬೀರುತ್ತದೆ ಕ್ರಿ. ಶ. 725 ರ ಒಂದು ಶಾಸನ.[214] ವಿಕ್ರಮಾದಿತ್ಯ ಯುವರಾಜನು ಪುಲಿಗೆರೆಯ ಮಹಾ ಜನರಿಗೂ, ನಗರ ಅಥವಾ ವರ್ತಕಶ್ರೇಣಿಗೂ, ಹದಿನೆಂಟು ಪ್ರಕೃತಿ ಅಥವಾ ಜಾತಿಗಳಿಗೂ ಕೊಟ್ಟ 'ಆಚಾರ ವ್ಯವಸ್ಥೆ'ಯನ್ನು ಅದು ಹೇಳುತ್ತದೆ. ಅದು ಕೊಡುವ ವಿವರಗಳು ಅರ್ಥವಾಗದಿದ್ದರೂ ಪಟ್ಟಣದಲ್ಲಿ ವಾಸ ಮಾಡುತ್ತಿದ್ದ ವರ್ತಕರೂ, ಬ್ರಾಹ್ಮಣರೂ ಉಳಿದ ಜಾತಿಯ ಜನರೂ ತಮ್ಮತಮ್ಮಲ್ಲೇ ಪ್ರತ್ಯೇಕವಾದ ಸಂಘಗಳನ್ನು ಹೊಂದಿದ್ದು ರಾಜ ಶಾಸನಗಳನ್ನು ತಮ್ಮ ತಮ್ಮ ಜನರು ಅನುಸರಿಸುವಂತೆ ನೋಡಿಕೊಳ್ಳುತ್ತಿದ್ದರು. (ಈ ಸಂಘಗಳಲ್ಲಿ ಆಯಾ ಜಾತಿಯ ಹಿರಿಯರಿರುತ್ತಿದ್ದರೆಂದು ಊಹಿಸಬಹುದು. ಸಂಘದಲ್ಲಿ ಇಷ್ಟೇ ಸದಸ್ಯರಿರಬೇಕು, ಇಂತಿಂತಹ ನಿಯಮಗಳನ್ನನುಸರಿಸಬೇಕೆಂಬ ಕಟ್ಟುಪಾಡುಗಳು ಪ್ರಾಯಶಃ ಇರಲಿಲ್ಲ). ವಿಷಯವು ಎಲ್ಲರಿಗೂ ಸಂಬಂಧಪಟ್ಟುದಾದಾಗ ಎಲ್ಲರೂ ಸೇರುತ್ತಿದ್ದರು. ಐಹೊಳೆಯ ದೇವಾಲಯಕ್ಕೆ ಕೆಲವು ಸುಂಕಗಳನ್ನು ರಾಜನ, ಮಹಾಜನರ ಮತ್ತು ನಕರಗಳ ಸಮಕ್ಷದಲ್ಲಿ ಬಿಡಲಾಗಿದೆ ಎಂದು ಶಾಸನವೊಂದು[215]

---

211 "ಕಿಡುವೊಡಮೆಯೊಂದನೆ ಕೊಟ್ಟಿಡೆ ಮಡಗದಿಹಂ ಪರಗಳೆಂಬೆರಡುಮನಂಗಡಿಯೊಳ್ ಕಿಡಸೊಡಮೆಯು- ನಡಿಗಡಿಗಾರ್ಜಿಪರಲ್ಲಿ ನೆಗರ್ದ ನಗರ ಜನಂಗಳ್". ಹೋಲಿಸಿ: "ಒಡಲೊಡಮೆಯೆಂಬಿವೆರಡುಂ। ಕಿಡಲಿರ್ಪುವು ಕಿಡದ ಕಸವರಂ ಜಸಮುದಱಿಂ। ಕಿಡುವೊಡಲೊಡಮೆಯುನೆಂದುಂ। ಕಿಡದೊಡವೆಗೆ ಮಾಱುಗುಡುವುದಿಜಿನಬೆಡಂಗಾ ॥" (ಗದಾಯುದ್ಧ, 2.4).

212 EC. VII. Sk. 100, 1129 A.D.

213 P. B. Desai : Jainism in South India, pp. 192-3.

214 EC. XIV. p. 190, C. 725 A.D.

215 IA. VIII. p. 286, C. 735 A.D.

ಹೇಳುವುದು ಗಮನಾರ್ಹ. ಇಂತಹ ಸಾಮೂಹಿಕ ಸಭೆಗಳಲ್ಲಿ 'ನಕರ'ರು ಪ್ರಭಾವಶಾಲಿಗಳಾಗಿರುತ್ತಿದ್ದರೆಂದು ಊಹಿಸಬಹುದು. ಬಳ್ಳಿಗಾವೆಯ ದೇವಸ್ಥಾನವೊಂದು ಜೀರ್ಣವಾದಾಗ ಆ ಪಟ್ಟಣದ ವರ್ತಕರೂ, ಬೇರೆ ಬೇರೆ ಸ್ಥಾನಾಧಿಪತಿಗಳೂ ಸಭೆ ಸೇರಿದುದನ್ನು, ಅದರಲ್ಲೂ ಅಲ್ಲಿಯ 'ಪಟ್ಟಣಸಾಮಿ' ಮೇಚಿಸೆಟ್ಟಿ ಮುಂತಾದ 'ನಗರ'ಗಳು ಕೈಕೊಂಡ ತೀರ್ಮಾನಕ್ಕೆ ಆ ಊರಿನ ವರ್ತಕರೂ, ಪರದೇಶೀ ವ್ಯಾಪಾರಿಗಳೂ, ಇತರರೂ ಒಪ್ಪಿಕೊಂಡದ್ದನ್ನು ಇಲ್ಲಿ ಸ್ಮರಿಸಬಹುದು.[216] ಮುಳುಗುಂದ ಪಟ್ಟಣಕ್ಕೆ ವೈದಿಕ ಬ್ರಾಹ್ಮಣನಾದ ಬೆಳ್ಳಾಳ ಸೋಯಿಮಯ್ಯನು 'ಊರೊಡೆಯ'ನಾಗಿದ್ದನೆಂದು ಶಾಸನವೊಂದು ಹೇಳುತ್ತದೆ.[217] ಇದರಿಂದ ಪಟ್ಟಣಗಳ ಸಾಮೂಹಿಕ ಸಭೆಗಳಲ್ಲಿ ವರ್ತಕರಷ್ಟೇ ಅಲ್ಲಿಯ ಬ್ರಾಹ್ಮಣರೂ ಪ್ರಭಾವಶಾಲಿಗಳಾಗಿದ್ದರೆಂದೂ, ಆ ಎರಡೂ ಪಂಗಡಗಳಲ್ಲಿ ಹಿರಿಯನೂ, ವಿವೇಕಿಯೂ ಆದವನನ್ನು ತಮ್ಮ ನಾಯಕನೆಂದು ಭಾವಿಸುತ್ತಿದ್ದರೆಂದೂ ಊಹಿಸಬಹುದು.

ರಾಜಧಾನಿಗಳಾಗಿದ್ದ ಕೆಲವು ಪಟ್ಟಣಗಳನ್ನು 'ಗಾವುಂಡು'ಗಳು ರಕ್ಷಿಸುತ್ತಿದ್ದರೆಂದು ಒಂದೆರಡು ಶಾಸನಗಳು ತಿಳಿಸುತ್ತವೆ. ಉದಾಹರಣೆಗೆ ಗೊಂಕದೇವನ ರಾಜಧಾನಿಯಾಗಿದ್ದ ತೇರದಾಳನ್ನೂ ಅಲ್ಲಿಯ ಧರ್ಮಗಳನ್ನೂ, ಅಲ್ಲಿಯ ಹನ್ನೆರಡು ಗಾವುಂಡುಗಳು ರಕ್ಷಿಸುತ್ತಿದ್ದರು.[218] ಗೊಂಕದೇವನು ಗೊಂಕ ಜಿನಾಲಯವನ್ನು ಕಟ್ಟಿಸಿ ಅದಕ್ಕೆ ದತ್ತಿಗಳನ್ನು ಬಿಡುವಾಗ ಆ ಹನ್ನೆರಡು ಗಾವುಂಡುಗಳನ್ನೂ, ಆ ಊರಿನ 'ನಕರ'ಗಳನ್ನೂ ಬರಮಾಡಿಕೊಂಡನೆಂದು ಆ ಶಾಸನವು ಹೇಳುತ್ತದೆ. ಹಬ್ಬೆಯ ನಾಯಕ ಎನ್ನುವವನು ಶಿರಸಂಗಿಯಲ್ಲಿ ಕಟ್ಟಿಸಿದ ದೇವಾಲಯಕ್ಕೆ ದತ್ತಿಯನ್ನು ಬಿಡುವಾಗ 'ಮೂಲಿಗ ಮುಖ್ಯರಜುವರ್ ಗಾವುಂಡುಗಳ ಪಾದಪೂಜೆ ಕೊಟ್ಟು' ಅವರಿಂದ ಕೊಂಡುಕೊಂಡ ಭೂಮಿಯನ್ನು ದಾನವಾಗಿ ಕೊಡುತ್ತಾನೆ.[219] ಬಹುಶಃ ತೇರದಾಳ್ ಮತ್ತು ಶಿರಸಂಗಿಗಳು ಹಿಂದೊಮ್ಮೆ ಹಳ್ಳಿಗಳಾಗಿದ್ದಾಗ ಅಲ್ಲಿಯ ಗಾವುಂಡುಗಳಿಗೆ ಸಲ್ಲುತ್ತಿದ್ದ ಗೌರವವು ಆ ಪಟ್ಟಣಗಳಾಗಿ ವರ್ಧಿಸಿದ ಮೇಲೆಯೂ ಸಲ್ಲುತ್ತಿದ್ದಿರಬಹುದು.

ಪ್ರಾಚೀನ ಕರ್ನಾಟಕದ 'ನಗರ' ಅಥವಾ 'ನಖರ'ಗಳು ಪ್ರಾಚೀನ ತಮಿಳುನಾಡಿನ 'ನಗರತ್ತಾರ್' ಎಂಬ ಸಂಸ್ಥೆಗಳನ್ನು ನೆನಪಿಗೆ ತರುತ್ತವೆ. ಬಹುಮಟ್ಟಿಗೆ ಅವೆರಡೂ ಒಂದೇ ಎಂದು ಭಾವಿಸಬಹುದು.[220] ಈಗಿನ ಕಾಲದ 'ನಗರ್ತರು'[221] (ನಗರತ್ತಾರ್= ನಗರದವರು) ಎಂಬುವರು ನಗರ ಅಥವಾ ನಕರರ ವಂಶದವರೆಂದು ಕಾಣುತ್ತದೆ.

ಈಗಿನ ನಗರ್ತರು ತಮ್ಮನ್ನು ವೈಶ್ಯರೆಂದು ಕರೆದುಕೊಳ್ಳುತ್ತಾರೆ. ತಾವು ಮೂಲತಃ ಆಯೋಧ್ಯಾ ನಗರದವರೆಂದೂ, ಆದ್ದರಿಂದಲೇ ತಮ್ಮ ಜಾತಿಯ ಹೆಸರು 'ನಗರ್ತರು' ಎಂದೂ ಭಾವಿಸುವರು. ನಗರೇಶ್ವರ ಇವರ ಆರಾಧ್ಯದೈವ. ಇವರಲ್ಲಿ ಶೈವನಗರ್ತರು (ಲಿಂಗಧಾರಿ ನಗರ್ತರು) ಎಂದೂ, ವೈಷ್ಣವ ನಗರ್ತರು (ನಾಮಧಾರಿ ನಗರ್ತರು) ಎಂದೂ ಎರಡು ಬಗೆ. ಈ ಜನಾಂಗದವರೆಲ್ಲರೂ ಬಹುಮಟ್ಟಿಗೆ ವರ್ತಕರು. ಇವರಲ್ಲಿ

---

216 EC. VII. Sk. 118, 1054 A.D.

217 BKI. I. i. 97, 1062 A.D.

218 IA. XIV. p. 15, 1123-4 A.D.—"ಭೂವಿನುತ ಚತುಸ್ಸಮಯಸಮಾವಗಮೆಸೆವಾಬ್ಜು ದರ್ಶನಂಗಳುಮಂ ಕೈಗಾವಗ್ಗದ ಪನ್ನಿರ್ವರ್ ಗಾವುಂಡುಗಳಿರ್ದು ರಕ್ಷಿಪರ್ ತತ್‌ಪುರಮಂ."

219 KI. I. 25, 1186 A.D.

220 'ನಗರತ್ತಾರ್' ಎಂಬ ಸಂಘಗಳ ವಿವರಗಳಿಗೆ, ನೋಡಿ—K. A. Nilakantha Shastry: Studies in Cōḷa History and Administration, p. 78.

221 ವಿವರಗಳಿಗೆ ನೋಡಿ: H. V. Nanjundaiah and L. K. Ananthakrishna Iyer: The Mysore Tribes and Castes, IV, pp. 402–21.

ಸುವ್ಯವಸ್ಥಿತವಾದ ಸಾಮಾಜಿಕ ವ್ಯವಸ್ಥೆಯಿದೆ (ಪ್ರಾಚೀನ ಕರ್ನಾಟಕದ 'ನಕರ' ಅಥವಾ 'ನಗರ'ರಿಗೂ ಈ ಮಾತು ಅನ್ವಯವಾಗುತ್ತದೆ). ನಗರ್ತ ವರ್ತಕರಿಗೆಲ್ಲ ಮುಖ್ಯಸ್ಥರು 'ಸೆಟ್ಟಿ' ಮತ್ತು 'ಯಜಮಾನ್' ಎಂಬುವರು (ಪ್ರಾಚೀನ ಕರ್ನಾಟಕದ 'ಪಟ್ಟಣಸೆಟ್ಟಿ' ಅಥವಾ 'ಪಟ್ಟಣಸ್ವಾಮಿ'ಯನ್ನು ಇಲ್ಲಿ ನೆನೆಯಬಹುದು). ಸಮಾಜದಲ್ಲಿ ಯಾವ ಕೆಲಸವಾಗಬೇಕಾದರೂ ಇವರ ನೇತೃತ್ವದಲ್ಲಿ ಮತ್ತು ಸಾನ್ನಿಧ್ಯದಲ್ಲಿ ನಡೆಯಬೇಕು. ಹೀಗೆ ಆಧುನಿಕ ಕಾಲದ 'ನಗರ್ತ'ರು ಪ್ರಾಚೀನ ಕರ್ನಾಟಕದ 'ನಗರ'ರ ವಂಶದವರು ಎಂಬುದು ದೃಢವಾಗುತ್ತದೆ. ನಗರ್ತರಲ್ಲಿ ಒಂದು ಪಂಗಡದ ಮನೆಮಾತು ಮಾತ್ರ ತೆಲುಗು; ಉಳಿದವರ ಮನೆಮಾತು ಕನ್ನಡ. ಈ ನಗರ್ತರ ವಿಷಯದಲ್ಲಿ ಇನ್ನೂ ಹೆಚ್ಚಿನ ಕೆಲಸ ನಡೆದು ಅವರಿಗೂ ಪ್ರಾಚೀನ ಕರ್ನಾಟಕದ 'ನಖರ' ಅಥವಾ 'ನಗರ'ರಿಗೂ ಇರುವ ಸಂಬಂಧದ ಸ್ವರೂಪವು ಸ್ಪಷ್ಟವಾಗಬೇಕಾಗಿದೆ.

## ಅಗ್ರಹಾರಗಳ ಆಡಳಿತ

ಹಿಂದೆ ಬಂದಿರುವ 'ವಿದ್ಯಾಭ್ಯಾಸ' ಎಂಬ ಅಧ್ಯಾಯದಲ್ಲಿ ಅಗ್ರಹಾರಗಳು ಹೇಗೆ ವಿದ್ಯಾಭ್ಯಾಸ ಕೇಂದ್ರಗಳಾಗಿದ್ದುವು ಎಂಬುದನ್ನು ಪ್ರತಿಪಾದಿಸುವಾಗ ಅಗ್ರಹಾರ ಎಂದರೇನು, ಅಗ್ರಹಾರಗಳ ಸ್ಥಾಪನೆ, ಅವುಗಳ ಆಡಳಿತ—ಇತ್ಯಾದಿ ವಿಷಯಗಳನ್ನು ಸವಿಸ್ತರವಾಗಿ ಚರ್ಚಿಸಲಾಗಿದೆ. ಆ ಚರ್ಚೆಯ ಸಾರಾಂಶವನ್ನು ಮಾತ್ರ ಇಲ್ಲಿ ಕೊಡುತ್ತೇವೆ. ಬ್ರಾಹ್ಮಣರಿಗೆ ದತ್ತಿಯಾಗಿ ಬಿಟ್ಟುಕೊಟ್ಟ ಊರುಗಳೇ ಅಗ್ರಹಾರಗಳು. ಆ ಊರಿನ ಉತ್ಪತ್ತಿಯೆಲ್ಲವೂ ಬ್ರಾಹ್ಮಣರಿಗೆ ಸಲ್ಲುತ್ತಿದ್ದಿತು. ಅಗ್ರಹಾರಗಳ ಒಡೆಯರು 'ಮಹಾಜನ'ರು. ಮಹಾಜನ ಎನ್ನುವ ಈ ಸಂಸ್ಥೆಯ ರಚನೆ ಏನು ಎನ್ನುವುದು ಸ್ಪಷ್ಟವಾಗದೆ ಇದ್ದರೂ, ಆ ಸಂಸ್ಥೆಯಲ್ಲಿ ಹತ್ತರಿಂದ ಐನೂರು ಅಥವಾ ಅದಕ್ಕಿಂತ ಹೆಚ್ಚು ಸಂಖ್ಯೆಯ ಮಹಾಜನರಿರುತ್ತಿದ್ದರು. ಈ ಸಂಖ್ಯೆಯು ಬಹುಶಃ ಆ ಅಗ್ರಹಾರದ ಬ್ರಾಹ್ಮಣ ಗೃಹಸ್ಥರನ್ನು ಸೂಚಿಸುವಂತೆ ಕಾಣಿಸುತ್ತದೆ. ಆ ಊರಿನ ಸಮಸ್ತ ಚಟುವಟಿಕೆಗಳೆಲ್ಲವನ್ನೂ ಈ ಮಹಾಜನರು ನಿಯಂತ್ರಿಸುತ್ತಿದ್ದರು. ದೇವಸ್ಥಾನ ನಿರ್ಮಾಣ, ವಿದ್ಯಾಭ್ಯಾಸ ಇತ್ಯಾದಿ ಸಾಂಸ್ಕೃತಿಕ ಕಾರ್ಯಗಳಿಗೆ, ಕೆರೆಯನ್ನು ಕಟ್ಟಿಸುವುದು ಇತ್ಯಾದಿ ಸಾಮಾಜಿಕ ಕಾರ್ಯಗಳಿಗೆ ಮಹಾಜನರು ಬೇಕಾದಷ್ಟು ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. ಅಗ್ರಹಾರದ ನ್ಯಾಯಪರಿಪಾಲನೆಯು ಮಹಾಜನರ ಕರ್ತವ್ಯಗಳಲ್ಲೊಂದು.

## ಹಳ್ಳಿಗಳ ಆಡಳಿತ

ಅತ್ಯಂತ ಪ್ರಾಚೀನ ಕಾಲದಿಂದಲೂ ಭರತಖಂಡದಲ್ಲಿ ಹಳ್ಳಿಯು ಆಡಳಿತದ ಒಂದು ಘಟಕವಾಗಿ (unit) ಪರಿಣಮಿಸಿದ್ದಿತು. ಹೆಚ್ಚುಕಡಮೆ ಸಮಾನಸ್ಥಿತಿಗಳಲ್ಲಿ ಬಾಳುತ್ತ, ಅನೇಕ ಸಮಾನಾಂಶಗಳೆಂಬ ಸೂತ್ರದಿಂದ ಬದ್ಧರಾಗಿ, ಒಂದು ಗ್ರಾಮಾಡಳಿತದ ಕೆಳಗೆ ಬದುಕುವ ಜನರಿಂದ ಕೂಡಿದ್ದ ಹಳ್ಳಿಗಳು ದೇಶದ, ಬಹುಮಟ್ಟಿಗೆ ಎಲ್ಲೆಡೆಗಳಲ್ಲಿಯೂ, ಆರ್ಥಿಕ ಘಟಕಗಳಾಗಿ ಪರಿಣಮಿಸಿದ್ದುವೆಂಬ ಭಾವನೆಯನ್ನು ವಿದೇಶಿ ಪ್ರವಾಸಿಗಳ ಬರಹಗಳು ಮೂಡಿಸುತ್ತವೆ.[222] ಈ ಎಲ್ಲಾ ಮಾತುಗಳೂ ಪ್ರಾಚೀನ ಕರ್ನಾಟಕಕ್ಕೂ ಅಕ್ಷರಶಃ ಅನ್ವಯಿಸುತ್ತವೆ. ಶಾಸನಗಳಲ್ಲಿ ಅಲ್ಲಿ ಇಲ್ಲಿ ಪುಲಿಗೆರೆಯಂತಹ, ಲಕ್ಕುಂಡಿಯಂತಹ ನಗರ ಮಹಾನಗರಗಳ ಉಲ್ಲೇಖ ಕಂಡುಬರುವುದೇ ಹೊರತು, ಶಾಸನಗಳ ತುಂಬ ಮೂಡಿರುವುದು ನಮ್ಮ ಹಿಂದಿನ ಹಳ್ಳಿಗಳ ಜನಜೀವನ, ಅವರ ಆಸೆ ಆಕಾಂಕ್ಷೆಗಳು, ಭಕ್ತಿ ಶ್ರದ್ಧೆಗಳು, ಅವರ ಕಷ್ಟ ಸುಖಗಳು, ಅವರ ಆರ್ಥಿಕ ಪರಿಸ್ಥಿತಿ ಇತ್ಯಾದಿಗಳೇ. ಒಂದೊಂದು ಹಳ್ಳಿಯೂ ರಾಜನಿಗೆ ಸಲ್ಲಿಸಬೇಕಾದ ತೆರಿಗೆಗಳನ್ನು ಸಲ್ಲಿಸಿಬಿಟ್ಟರೆ ಸಾಕಾಗಿತ್ತು;

[222] Appadorai: Economic Conditions in South India, p. 71.

ವರ್ಷದುದ್ದಕ್ಕೂ ಅದೊಂದು ಪ್ರತ್ಯೇಕ ರಾಜ್ಯವೆಂಬಂತೆ, ಒಂದು ರೀತಿಯಲ್ಲಿ ಸ್ವತಂತ್ರವಾಗಿ ತನ್ನಷ್ಟಕ್ಕೆ ತಾನು ಬದುಕುತ್ತಿತ್ತು. ಇಡೀ ದೇಶಕ್ಕೆ ವಿಪ್ಲವ ಒದಗಿದಾಗ, ಅಥವಾ ಆ ಊರಿನ ಜನರೇ ಸೇರಿ ಪರಿಹರಿಸಿಕೊಳ್ಳಲಾಗದ ಯಾವುದೋ ಸಮಸ್ಯೆ ಅಥವಾ ತೊಂದರೆ ಒದಗಿದಾಗ ಮಾತ್ರ ಹಳ್ಳಿಗೆ ಕೇಂದ್ರಾಡಳಿತದ ಪ್ರವೇಶವಾಗುತ್ತಿದ್ದಿತೆಂದು ಕಾಣುತ್ತದೆ.

ಮೊದಲು ಹಳ್ಳಿಗಳ ರಚನೆಯನ್ನು ಪರಿಶೀಲಿಸಬಹುದು. ಆಡಳಿತವರ್ಗವು ಒಂದೊಂದು ಹಳ್ಳಿಯ ಗಡಿಗಳನ್ನೂ ನಿರ್ಧರಿಸಿ ಗುರುತಿಸುತ್ತಿದ್ದಿತು.[223] ಶಾಸನಗಳಲ್ಲಿ ಹಳ್ಳಿಗಳ ಗಡಿಗಳನ್ನು ಗುರುತಿಸುವಾಗ ಆ ಗಡಿಗಳಲ್ಲಿರುತ್ತಿದ್ದ ಕೆರೆ, ಹಳ್ಳ, ದಿಣ್ಣೆ, ಮರಗಳು, ಕಲ್ಲುರಾಶಿ ಅಥವಾ ನೆಟ್ಟ ಕಲ್ಲು, ದಾರಿ, ಗುಡ್ಡ, ಬೆಟ್ಟ ಇತ್ಯಾದಿಗಳನ್ನು ಹೆಸರಿಸಿರುವುದನ್ನು ಕಾಣಬಹುದು.[224] ದೇಗಾವೆಯೆಂಬ ಅಗ್ರಹಾರದ ಗಡಿಗಳನ್ನು ಹೇಳುವುದನ್ನು ಏಕೈಕ ಉದ್ದೇಶವಾಗುಳ್ಳ ಶಾಸನವೊಂದಿದೆ.[225] ಹೀಗೆ ಗಡಿಗಳನ್ನು ಮಾತ್ರ ಹೇಳುವ ಶಾಸನಗಳು ಇಲ್ಲವೇ ಇಲ್ಲವೆನ್ನಬಹುದು. ಊರುಗಳ ಗಡಿಗಳನ್ನು ನಿರ್ಧರಿಸುತ್ತಿದ್ದ ಬಗೆಗೆ ಈ ಶಾಸನವು ಉತ್ತಮ ನಿದರ್ಶನವಾಗಿರುವುದರಿಂದ ಶಾಸನದ ಪೂರ್ಣ ಪಾಠವನ್ನು, ಸ್ವಲ್ಪ ದೀರ್ಘವಾಗಿದ್ದರೂ, ಕೆಳಗೆ ಕೊಡಲಾಗಿದೆ—

"ಓಂ ನಮಃ ಶಿವಾಯ । ಸ್ವಸ್ತಿ ಸೀಗೇರಿ ಗ್ರಾಮ ಸಮನ್ವಿತಂ ಶ್ರೀಮತ್ಸರ್ವನಮಸ್ಯದಗ್ರಹಾರಂ ದೇಗಾಂವೆಯ ಸೀಮಾಕ್ರಮ । ಊರಿಂ ಬಡಗಲ್ ಶ್ರೀ ಕಮಳೇಶ್ವರ ದೇವರ ತೋಟದಿಂ ಮೂಡಲೊತ್ತಿ ತೆಂಕಲ್ ನಟ್ಟ ನಾಗರಕಲ್ಲು । ಅಲ್ಲಿಂ ಮೂಡಲೊತ್ತಿ ತೆಂಕಲಾದೇವರ ತೋಟದಾಗ್ನೇಯದ ಲಿಂಗದ ಕಲ್ಲು । ಅಲ್ಲಿಂ ಮೂಡಲೊತ್ತಿ ತೆಂಕಲ್ ನಟ್ಟಕಲ್ಲು । ಅಲ್ಲಿಂ ತೆಂಕಲೊತ್ತಿ ಮೂಡಲ್ ನಟ್ಟಕಲ್ಲು । ಅಲ್ಲಿಂ ಮೂಡಲ್ ಕೋಳಿಂಗೆರೆಯೇರುಂಗೋಡಿಯ ಬಡಗಣ ದಂಡೆ । ಅಲ್ಲಿಂ ಮೂಡಲ್ ಪುಣಿಸೆಯ ನಟ್ಟಕಲ್ಲು । ಅಲ್ಲಿಂ ಮೂಡಲ್ ಸಾಲಮಾವಿನ ನಟ್ಟಕಲ್ಲು । ಅಲ್ಲಿಂ ಮೂಡಲ್ ಶ್ರೀ ಹೆಮ್ಮೇಶ್ವರ ದೇವರ ಕೆಯ್ಯ ಮೂಡಣ ಲಿಂಗದ ಕಲ್ । ಅಲ್ಲಿಂ ಮೂಡಲ್ ಕಲ್ಲ ಪುಂಜಿಗೆಯ ಮೇಗಣ ಸೇಲೆ । ಅಲ್ಲಿಂ ಬಸುರಿಕೊಡಮಾವಿನೋರವೆಯ ತೆಂಕಣ ದಂಡೆಯ ಸಸಿಯಾಲದ ನಟ್ಟಕಲ್ । ಅಲ್ಲಿಂ ಮೂಡಲ್ ಕೆರಿಯೇರಿಯ ಮೇಗಣಾಲದ ನಟ್ಟಕಲ್ । ಅಲ್ಲಿಂ ಮೂಡಲ್ ಭಂಡಿದಾರಿವಿಡಿದು ತೆಂಕಲೊತ್ತಿ ಮೂಡಲಿರ್ದ ಕಲ್ಲುಜದಾಲದ ನಟ್ಟಕಲ್ । ಅಲ್ಲಿಂ ಮೂಡಲ್ ವೋದೆಯ ದಂಡೆವಿಡಿದಿರ್ದ ಬೆಟ್ಟದ ನಟ್ಟಕಲ್ । ಅಲ್ಲಿಂ ಮೂಡಲ್ ಕಲ್ಪುಂಜದ ಮೇಗಣ ಸೇಲೆ । ಅಲ್ಲಿಂ ಮೂಡಲೊತ್ತಿ ತೆಂಕಲ್ ಕಲ್ಪುಂಜ । ಅಲ್ಲಿಂ ಮೂಡಲೊತ್ತಿ ತೆಂಕಲ್ ಪಿರಿಯ ಕಲ್ಲೋರೆ । ಅಲ್ಲಿಯ ತೆಂಕಲ್ ನಾಗಾವೆಯ ಪಡುವಣ ಬೆಟ್ಟದ ಪಡುವಣೋರೆ । ಅಲ್ಲಿಂ ತೆಂಕಲ್ ನಾಗಾವೆಯ ಕಕ್ಕೆರೆಯ ಮುಗುಡ್ಡೆ । ಅಲ್ಲಿಂ ಮೂಡಲೊತ್ತಿ ತೆಂಕಲ್ ಕಕ್ಕೆರೆಯ ಪೊಲದಿಂ ಪಡುವಲ್ಪುರ್ವದ ಸೇಲೆವಿಡಿದು ತೆಂಕಲ್ಬರಲಾ ಕಕ್ಕೆರೆಯಿಂ ಕೂಲವಳ್ಳಿಗೆ ಹೋದ ಭಂಡಿದಾರಿಯಿಂ ಪಡುವಣ ನಟ್ಟಕಲ್ । ಅಲ್ಲಿಂ ತೆಂಕಲೊತ್ತಿ ಪಡುವಲಂ ಬಡೆಯ ಕೊಳ್ಳದ ತೆಂಕಣೋರೆ । ಅಲ್ಲಿಂ ತೆಂಕಲೊತ್ತಿ ಪಡುವಲ್ ಪುಣಿಸೆಯ ಕೊಳ್ಳದ ತೆಂಕಣ ನೆಲ (?ವೊ) ರಡಿಯ ಮೇಲಣ ಸೇಲೆ ।

---

223 ಈಗಲೂ ಒಂದೊಂದು ಹಳ್ಳಿಯ ಗಡಿಗಳನ್ನು ಗುರುತಿಸಿ ಪ್ರತ್ಯೇಕಿಸಿರುವುದನ್ನು ಕಾಣಬಹುದು.

224 ಉದಾಹರಣೆಗೆ ನೋಡಿ: EI. XV. p. 97, 1074 A.D.; EC. V. Bl. 17, 1136 A.D.; E.C. III. Md. 113, 713 A.D. ಇತ್ಯಾದಿ

225 JBBRAS. IX. p. 310.

ಅಲ್ಲಿಂ ಪಡುವಲಬ್ಬೂಲವಳ್ಳಿಗೆ ಪೋದ ದಾರಿಯಿಂ ಪಡುವಣ ಗುಂಡುಕಲ್ಲ ತೆ( ? ತು )ರದ ಬಡಗಣೋರೆ। ಅಲ್ಲಿಂ ತೆಂಕಲೊತ್ತಿ ಪಡುವಲ್ ಕೂಲವಳ್ಳಿಯ ಬಸದಿಯ ಕೆಯ್ಯೀಶಾನ್ಯದ ಮೂರುಂ ಹಳ್ಳದ ಕೂಡಲ ತೆಂಕಣ ನಟ್ಟಕಲ್। ಆ ಪಳ್ಳಂಬಿಡಿದು ಬರೆ ತೆಂಕಲೊತ್ತಿ ಪಡುವಲ್ಕು ಗುಜೆಯ ಪಳ್ಳದ ಕೂಡಲ್। ಅಲ್ಲಿಂ ಪಡುವಲ್ಮೇದಗಂಡಿಯ ಪಡುವಣಡ (?ದ)ಪೆಟ್ಟದ ಬಡಗಣೋರೆ। ಆ ಬೆಟ್ಟಂಬಿಡಿದು ಬರೆ ಪಡುವಲ್ ಬಿಲ್ಕಂಡಿ। ಅಲ್ಲಿಂ ಪಡುವಲ್ ಸೇವೆಯ ಕೊಳ್ಳದ ಬೆಟ್ಟದ ಬಡಗಣೋರೆ। ಅಲ್ಲಿಂ ಪಡುವಲ್ಮತ್ತಿಯ ಬಯಲ ತೆಂಕಣ ಬೆಟ್ಟದ ಬಡಗಣೋರೆ। ಅಲ್ಲಿಂ ಪಡುವಲ್ ಕಿರುವೂರಡಿಯ ಮೂಡಣೋರೆ। ಅಲ್ಲಿಂ ಪಡುವಲೊತ್ತಿ ಬಡಗಲೋಡಗೆರೆಯ ಮೂಡಣ ಕೋಡಿ। ಅಲ್ಲಿಂ ಪಡುವಲೊತ್ತಿ ಬಡಗಲ್ಮಾವಿನ ಬೆಟ್ಟದ ಶಿಖರ। ಆ ಬೆಟ್ಟಂ ಬಿಡಿದು ಬರೆ ಪಡುವಲೊತ್ತಿ ಬಡಗಲ್ ಮೋಟನ ಮೊರಡಿ। ಅಲ್ಲಿಂ ಬಡಗಲ್ ಬೆಟ್ಟದ ಪಡುವಣ ಭಂಡಿ ದಾರಿಯ ಪಡುವಣ ನೆಲವೂರಡಿಯ ಮೂಡಣೋರೆ। ಅಲ್ಲಿಂ ಪಡುವಲೊತ್ತಿ ಬಡಗಲ್ ತಾರಿಯ ಕೆರೆಯ ನಡುವಣಿಂ ಬಂದ ಹಾಣದಿಯ ಪಡುವಣ ದಂಡೆ। ಅಲ್ಲಿಂ ಪಡುವಲೊತ್ತಿ ಬಡಗಲಾ ಹಾಣದಿಯ ಪಡುವಣ ಪುರ್ವಿನ ಸಸಿಪುಣಿಸೆಯ ನಟ್ಟಕಲ್। ಅಲ್ಲಿಂ ಪಡುವಣಾಲದಿಂ ಪಡುವಲ್ ಹಾಣದಿಯ ನಡುವಣ ಗೋಲಿಕಲ್ಲ ಪುಂಜಿಗೆ। ಅಲ್ಲಿಂ ಪಡುವಲಾ ಹಾಣದಿಯ ತೆಂಕಣ ಪುರ್ವಿನಾಲದ ನಟ್ಟಕಲ್। ಅಲ್ಲಿಂ ಪಡುವಲ್ ಪಕ್ಕುಳಿಗೆರೆಯ ತೆಂಕಣೇರಿ। ಆ ಕೆರೆಯಿಂ ಪಡುವಲ್ ಮಿಂಡವಳ್ಳಿಯಿಂ ಕೆರೆವಾಡಕ್ಕೆ ಪೋದ ಪೆರ್ವಟ್ಟೆಯ ಮೂಡಗಿ ಪುರ್ವಿನಾಲದ ನಟ್ಟಕಲ್। ಅಲ್ಲಿಂ ಬಡಗಲಾ ಬಟ್ಟೆಯ ಪಡುವಣ ಪುರ್ವಿನ ನಟ್ಟಕಲ್ಲು। ಅಲ್ಲಿಂ ಮೂಡಲೊತ್ತಿ ಬಡಗಣ ಬಸುರಿಗೆ ಮೂಡಲೊತ್ತಿ ಬಡಗಲ್ ಮೋದೆಯ ದಂಡೆಯ ನಟ್ಟಕಲ್ಲು। ಅಲ್ಲಿಂ ಮೂಡಲೊತ್ತಿ ಬಡಗಲ್ ಕರದಿಗೆಯ ಬೆಲ್ಲದ ನಟ್ಟಕಲ್। ಅಲ್ಲಿಂ ಮೂಡಲೊತ್ತಿ ಬಡಗಲ್ನಟ್ಟ ಗೋರಿಕಲ್। ಅಲ್ಲಿಂ ಬಡಗಲ್ ಮಿಂಡವಳ್ಳಿಯ ಸಿರಿಪುಂಜಗೆರೆಯ ತೆಂಕಣ ಮೋದೆಯ ದಂಡೆಯ ನಡುವೆ ನಟ್ಟ ಸಟ್ಟುಗದ ಕಲ್। ಅಲ್ಲಿಂ ಬಡಗಲಾ ದಡೆವಿಡಿಧು(ದು)ಕೆರೆಯೊಳಗಣೆ ಬರಲಾ ಕೆರೆಯ ಬಡಗಣ ಕೋಡಿಯ ದೇಸೆಯ ಮಿಂಡವಳ್ಳಿಗೆ ಪೋದ ಪೆರ್ವಟ್ಟೆಯ ತೆಂಕಣ ಪುರ್ವಿನ ನಟ್ಟ ಸಟ್ಟುಗದ ಕಲ್। ಅಲ್ಲಿಂ ಮೂಡಲಾ ಬಟ್ಟೆಯ ಬಡಗಣ ಪುರ್ವಿನ ಹಾತಲ ನಟ್ಟಕಲ್। ಅಲ್ಲಿಂ ಬಡಗಲ್ ಮರುಲಾಲ ಬೆಲ್ಲದ ನಟ್ಟಕಲ್। ಅಲ್ಲಿಂ ಬಡಗಲ್ ಹಾತಲ ನಟ್ಟ ಕಲ್। ಅಲ್ಲಿಂ ಮೂಡಲ್ ಕೌವ್ವಲ ನಟ್ಟಕಲ್। ಅಲ್ಲಿಂ ಬಡಗಲ್ ನಟ್ಟ ಕಗ್ಗಲ್। ಅಲ್ಲಿಂ ಬಡಗಲ್ ಬಸುರಿಯ ಪಡುವಣ ನಟ್ಟಕಲ್। ಅಲ್ಲಿಂ ಬಡಗಲ್ (ಶ್ರೀ ಮೂಲ) ಸ್ಥಾನ ದೇವರ ತೋಟದ ಪಡುವಣೊರವುಗಾರಿಗೆ। ಅಲ್ಲಿಂ ಬಡಗಲ್ ದೇಗುಲವಳ್ಳಿಯ ಮೂಡಣ ಬಾ (?)....ರೆ ಯೊಳಗಣೆ ಬರಲೊರವುಗಾರಿಗೆಯ ಮೂಡಣ ಹುಬ್ಬಿನ ಹುಣಿಸೆ ಮಾವುಗಳ ನಟ್ಟಕಲ್। ಅಲ್ಲಿಂ ಮೂಡಲ್ ಪುಣಿಸೆಯ ನಟ್ಟಕಲ್। ಅದರೀಶಾನ್ಯದ ಕರದಿಗೆಯ ಹುತ್ತಿನ ನಟ್ಟಕಲ್। ಅ(ಲ್ಲಿಂ ಮೂ)ಡಲೊತ್ತಿ ಬಡಗಲ್ ಬಾವಿಯ ತಡಸಿ(ನಟ್ಟಕ)ಲ್ಲು ಅಲ್ಲಿಂ ಮೂಡಲೊತ್ತಿ ಬಡಗಲ್ ಮುಗುಳಿಯ ಗುತ್ತಿಯ ನಟ್ಟಕಲ್। ಅಲ್ಲಿಂ ಮೂಡಲೊತ್ತಿ ಬಡ(ಗಲ್ ಶ್ರೀ) ಕಮಳೇಶ್ವರ ದೇವರ ತೋಟದ ಮೇರೆಯ ಲಿಂಗದ ಕಲ್। ಅಲ್ಲಿಂ ಮೂಡಲ್ ಮುಗ್ಗುಡ್ಡೆ। ಅಲ್ಲಿಂ ತೆಂಕ(ಲ್ ಶ್ರೀ) ಕಮ ಳೇಶ್ವರ ದೇವರ ತೋಟದ ಮೂಡಣೊರವುಗಾರಿಗೆ ವಿಡಿದು ಬರೆ ನಟ್ಟಕಲ್ಲು। ಸೀಮಾ ಶಾ(ಸನಮು)ಂತು ಸಂಪೂರ್ಣಂ ।। ಶ್ರೀಮದ್ರಾಜ್ಞೆನಿಯಮದೆ ಸೀಮಾ ಶಾಸನಮನಣ್ಣಮಯ್ಯಂ ಬರೆದಂ ಸೋಮ.... ಕುಳಾದ್ರಿವ್ಯೋಮಂ ನಿಲ್ವನ್ನಮೆಸೆವುತಿರ್ಪಂತಿದವಂ ।। ಭದ್ರಂ ಶುಭಂ ಮಂಗಳಂ ।। ಶಿವಮಸ್ತು ।। ಜನಕಂ ವಿಶ್ರುತ ಸೂರ್ಯವಂಶ ಮಣಿದೀಪಂ ಕಾಮಭೂಪಂ ಯಶೋಧನೆ ತಾಯ್ಬಿಟ್ಟಲದೇವಿ

ಸೋಮಕುಳಭೂಭೃಜ್ಜಾತೆ ನಾಥಂ ತ್ರಿಳೋಚನಕಾದಂಬನರೇಂದ್ರಮೇರುಶಿವಚಿತ್ತ(ಂ) ವೀರ ಪೆರ್ಮಾ(ಡಿ)ದೇವನೆನಲ್ಕೂವಡಿಸಿತ್ತು ಪೇರ್ವೆ ಕಮಳಾದೇವೀ ಮಹಾದೇವಿಯು ||"

ಸೀಗೇರಿ ಎಂಬ ಗ್ರಾಮಸಮನ್ವಿತವಾದ ದೇಗಾವೆ ಅಗ್ರಹಾರವನ್ನು ಬಹುಶಃ ಬಿಟ್ಟುಕೊಟ್ಟ ಕಮಲಾದೇವಿ ಎಂಬ ರಾಣಿಯ ಆಜ್ಞಾನುಸಾರವಾಗಿ ಸೀಮಾ ಶಾಸನವನ್ನು ಬರೆದ ಅಣ್ಣಮಯ್ಯನ ಕ್ರಮವು ಶಾಸ್ತ್ರೀಯವಾದುದು. ಉತ್ತರದಿಕ್ಕಿನಿಂದ ಆರಂಭಿಸಿ ಊರಿನ ಗಡಿಯನ್ನೇ ಅನುಸರಿಸಿಕೊಂಡು ಬಂದು ಪೂರ್ವ, ಪಶ್ಚಿಮ, ದಕ್ಷಿಣ ದಿಕ್ಕುಗಳಲ್ಲಿ ಕ್ರಮವಾಗಿ ಉದ್ದಕ್ಕೂ ಇರುವ ಗುರುತುಗಳನ್ನು ಹೇಳಿಕೊಂಡು ಬಂದಿದ್ದಾನೆ. ಸ್ವಲ್ಪ ಕಷ್ಟಪಟ್ಟರೆ ಆ ಊರಿನ ಗಡಿಯ ನಕ್ಷೆಯನ್ನು ಬರೆಯಬಹುದಾದಷ್ಟು ಸ್ಪಷ್ಟ ವಿವರಣೆಗಳಿಂದ ಕೂಡಿದೆ ಈ ಸೀಮಾಶಾಸನ. ಅಣ್ಣಮಯ್ಯನು ಊರಿನ ಗಡಿಯ ಪ್ರತ್ಯಕ್ಷ ಪರಿವೀಕ್ಷಣೆಯನ್ನು (survey) ಕೈಗೊಂಡಿದ್ದನೆಂಬುದರಲ್ಲಿ ಸಂದೇಹವಿಲ್ಲ.

ಊರಿನ ಗಡಿಗಳನ್ನು ದಾಟಿ, ಹೊಲಗಳನ್ನು ಹಾದು ಬಂದರೆ ಊರಿನ ವಸತಿಯ ಸುತ್ತ ದೊಡ್ಡ ಬೇಲಿಯನ್ನು ಕಾಣಬಹುದಾಗಿದ್ದಿತು. ಇದನ್ನೇ 'ಪೇರೊಟ್ಟಿ'[226] (ಒಟ್ಟಿ→ಒಬ್ಬೆ=ಬೇಲಿ) ಎಂದು ಕರೆದಿರುವುದು. ಬಹುಶಃ ಈ ಬೇಲಿಯ ಒಳಗೆ, ಊರಿಗೆ ಅಂಟಿಕೊಂಡಂತೆ 'ಹೊಲಗೇರಿ'ಯು ಇರುತ್ತಿದ್ದಿತು. ಹೊಲಗೇರಿಯ ಪಕ್ಕದ ಹೊಲವೊಂದನ್ನು ಶಾಸನವು ನಿರ್ದೇಶಿಸಿರುವುದನ್ನು ನೋಡಿದರೆ,[227] ಊರ ಹೊರಗೆ, ಹೊಲಗಳ ಪಕ್ಕದಲ್ಲಿ ಹೊಲಗೇರಿಯಿರುತ್ತಿದ್ದಿತು ಎಂಬುದು ಸ್ಪಷ್ಟವಾಗುತ್ತದೆ (ಈಗಲೂ ಇದೇ ಪರಿಸ್ಥಿತಿ ಮುಂದುವರಿದುಕೊಂಡು ಬರುತ್ತಿದೆ). ಊರ ಹೊರಗಡೆ ಇದ್ದ ಪುಷ್ಪವಾಟಿಗಳನ್ನೂ, 'ಆರಾಮ'ಗಳನ್ನೂ ಕೆಲವು ಶಾಸನಗಳು ವರ್ಣಿಸುವುದನ್ನು ನೋಡಿದರೆ,[228] ಅವು ಊರ ಹೊರಗಡೆ ಇದ್ದ ಸಾರ್ವಜನಿಕ ಉದ್ಯಾನಗಳಾಗಿದ್ದಿರಬಹುದೆಂಬ ಭಾವನೆ ಬರುತ್ತದೆ.

ಎಲ್ಲ ಊರುಗಳಿಗಲ್ಲದಿದ್ದರೂ, ಬಹು ಸಂಖ್ಯೆಯ ಊರುಗಳಿಗಾದರೂ ಕೋಟೆಗಳಿರುತ್ತಿದ್ದುವು. ಪ್ರಾಚೀನ ಕಾಲದ ಹಳ್ಳಿಗಳ ಅರಕ್ಷಿತ ಸ್ಥಿತಿಯನ್ನೂ, ಹಳ್ಳಿಗರು ತಮ್ಮ ಊರನ್ನು ತಾವೇ ರಕ್ಷಿಸಿಕೊಳ್ಳಬೇಕಾಗಿದ್ದಿತೆಂಬುದನ್ನೂ ಜ್ಞಾಪಿಸಿಕೊಂಡರೆ ಕೋಟೆಗಳಿಂದ ಊರುಗಳಿಗೆ ಒದಗುತ್ತಿದ್ದ ರಕ್ಷಣೆಯ ಅರಿವಾಗುತ್ತದೆ. ಊರಲ್ಲಿ ಮನೆಗಳನ್ನು ಒತ್ತೊತ್ತಾಗಿ ಕಟ್ಟಿಕೊಳ್ಳುತ್ತಿದ್ದರೆಂದು ಊಹಿಸಬಹುದು. ಊರಿಗೆಲ್ಲಾ ಒಂದು ಹೆಬ್ಬಾಗಿಲು ಇರುತ್ತಿದ್ದಿತು. ಕೊರಕೋಡು ಗ್ರಾಮದ ತುರುಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುವಾಗ ಅದೇ ಊರಿನ ದೇವಗಾವುಂಡ, ಮಲ್ಲಗಾವುಂಡರು ಊರ ಹೆಬ್ಬಾಗಿಲಿನಲ್ಲಿ "ಗುಹೆಯ ಬಾಗಿಲಲ್ಲಿ ಸಿಂಹ" ನಿಂತಂತೆ ನಿಂತು ಹೋರಾಡಿ ಮಡಿಯುವ ವಿಷಯ ಶಾಸನವೊಂದರಲ್ಲಿದೆ.[229] ಪ್ರಾಚೀನ ಕರ್ನಾಟಕದ ಸಮಾನವೃತ್ತಿಯ ಜನರ ಸಾಂಘಿಕವಾದ ಚಟುವಟಿಕೆಗಳನ್ನು ನೋಡಿದರೆ ಊರಿನಲ್ಲಿ ಆಯಾ ವೃತ್ತಿಯ ಅಥವಾ ಜಾತಿಯ ಜನರು ಬಹುಮಟ್ಟಿಗೆ ಬೇರೆಬೇರೆ ಕೇರಿಗಳಲ್ಲಿ ಒಟ್ಟೊಟ್ಟಿಗೆ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರೆಂದು ಊಹಿಸಬಹುದು. ಹಳೆಯ ಕಾಲದ ಮಾದರಿಯನ್ನುಳಿಸಿಕೊಂಡು ಬಂದಿರುವ ಈಗಿನ ಕೆಲವು ಊರುಗಳ ರಚನೆಯೂ ಈ ಊಹೆಯನ್ನು ಪೋಷಿಸುತ್ತದೆ.

ಅನೇಕ ಹಳ್ಳಿಗಳು ದೇವಸ್ಥಾನದ ಸುತ್ತಮುತ್ತ ಹುಟ್ಟಿ ಹಬ್ಬಿ ಬೆಳೆದದ್ದುಂಟು. ಇದು ಬಹು ಸಹಜವೇ. ಒಂದು ದೇವಸ್ಥಾನವಿದ್ದರೆ ಅದರ ಸಮೀಪದಲ್ಲಿಯೇ ಅರ್ಚಕರೂ, ಅದಕ್ಕೆ ಸಂಬಂಧಿಸಿದ ಇತರರೂ ವಾಸಿಸಬೇಕು. ಆ ದೇವಸ್ಥಾನಕ್ಕೆ ಬರುವ ಭಕ್ತರ ಸೌಕರ್ಯಕ್ಕಾಗಿ ಬೀಡುದಾಣಗಳೂ ಅಂಗಡಿಗಳೂ ಏಳುತ್ತವೆ. ಭರತಖಂಡದ ಅನೇಕ ಊರುಗಳೂ, ಪಟ್ಟಣಗಳೂ ಬೆಳೆದಿರುವುದು ಹೀಗೆ. ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿಯೂ ಇದಕ್ಕೆ ಸೂಚನೆಗಳನ್ನು ಕಾಣುತ್ತೇವೆ. ಏಹೂರಿನ ಸ್ವಯಂಭೂ ದೇವಾಲಯಕ್ಕೆ ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲನು

226 EC. III. Nj. 139, C. 915 A.D.
227 BKI. I. i. 50, 1005 A.D.
228 BKI. I. ii. 119, 948 A.D.
229 EC. VIII. Sb. 175, 1156 A.D.

ಬೇಕಾದಷ್ಟು ದತ್ತಿಗಳನ್ನು ಕೊಟ್ಟು, ಆ ಹೊಲಗಳನ್ನು ಸಾಗುವಳಿ ಮಾಡುವ ರೈತರಿಗಾಗಿ ಜಾಗವನ್ನು ಬಿಟ್ಟು ಕೊಟ್ಟು ಅದಕ್ಕೆ 'ಶಿವಪುರ'ವೆಂಬ ಹೆಸರಿಟ್ಟನೆಂದು ಶಾಸನವೊಂದು ಹೇಳುತ್ತದೆ.[230] ವಿನಯಾದಿತ್ಯನು ಮತ್ತ್ರವುರದ ಸಮೀಪದಲ್ಲಿ ಬಸದಿಯನ್ನು ಕಟ್ಟಿಸಿ ಅದರ ಅಕ್ಕಪಕ್ಕದಲ್ಲಿ ಹಲವು ಮನೆಗಳನ್ನು ಮಾಡಿಸಿ ಅದಕ್ಕೆ 'ರಿಷಿಹಳ್ಳಿ' ಯೆಂಬ ಹೆಸರಿಟ್ಟನೆಂದು ಮತ್ತೊಂದು ಶಾಸನವು ಹೇಳುತ್ತದೆ.[231]

ಪ್ರಾಚೀನ ಭಾರತದಲ್ಲಿ ಕೆಲವು ಸ್ಥಳೀಯ ಸಂಸ್ಥೆಗಳು ಕೇಂದ್ರಾಡಳಿತದ ಅಂಗಗಳಾಗಿದ್ದುವು. ಆದರೂ ಅವು ಅನ್ಯ ನಿಯಂತ್ರಣಗಳಿಗೆ ಒಳಗಾಗದೆ ತಮ್ಮನ್ನು ತಾವು ಆಳಿಕೊಳ್ಳುತ್ತಿದ್ದುವು. ಈ ಸ್ಥಳೀಯ ಸಂಸ್ಥೆಗಳ ಭದ್ರ ಬುನಾದಿಯ ಮೇಲೆ ಕೇಂದ್ರಾಡಳಿತವು ರೂಪಿತವಾಗಿರುತ್ತಿದ್ದಿತು.[232] ಇಂತಹ ಸ್ಥಳೀಯ ಸಂಸ್ಥೆಗಳಲ್ಲಿ ಹಳ್ಳಿಗಳ ಗಾವುಂಡುಗಳ ಸಮೂಹವೂ ಒಂದು. ಈ ಸಮೂಹವನ್ನು ಬಹು ಸ್ಥೂಲಾರ್ಥದಲ್ಲಿ ಕೇವಲ ಸೌಕರ್ಯ ಕ್ಕಾಗಿ 'ಗ್ರಾಮ ಸಭೆ' ಎಂದು ಕರೆದಿದ್ದೇವೆ. ಹಾಗೆ ನೋಡಿದರೆ, ಇದನ್ನು ಸಭೆ ಅಥವಾ ಸಂಸ್ಥೆ ಎಂದು ಕರೆಯು ವುದು ಅಷ್ಟು ಉಚಿತವೇನೂ ಅಲ್ಲ. ಏಕೆಂದರೆ ಆ ಗ್ರಾಮಸಭೆಗಳಲ್ಲಿರುತ್ತಿದ್ದವರು ರಾಜನಿಂದ ನೇಮಿಸಲ್ಪಟ್ಟವರೂ ಅಲ್ಲ, ಊರಿನವರು ಚುನಾಯಿಸಿದವರೂ ಅಲ್ಲ. ಅವರು ವಯಸ್ಸಿನ ಕಾರಣದಿಂದಲೋ, ಆನುವಂಶಿಕ ಕಾರಣ ಗಳಿಂದಲೋ ಊರಿನ ಸಹಜನಾಯಕರು, ಆ ಊರಿನ ಹಿತಾಸಕ್ತಿಗಳನ್ನು ನೋಡಿಕೊಳ್ಳುತ್ತಿದ್ದವರು. ಊರಿನ ಜನತೆ ಅವರಲ್ಲಿ ನಂಬಿಕೆಯಿಟ್ಟು ಊರಿನ ಆಡಳಿತವನ್ನು ಅವರಿಗೆ ಒಪ್ಪಿಸಿದ್ದುದರಿಂದ ಆಧುನಿಕ ಯುಗದ ಪ್ರಜಾ ಪ್ರಭುತ್ವದ ಮೂಲಬೀಜಗಳನ್ನು ಆ ಗ್ರಾಮಸಭೆಗಳಲ್ಲಿ ಕಾಣಬಹುದು. ಕೇಂದ್ರಾಡಳಿತಕ್ಕೂ ಆ ಊರಿನ ಜನರಿಗೂ ಮಧ್ಯವರ್ತಿಯಾಗಿದ್ದ ಗಾವುಂಡುಗಳನ್ನು ಅಥವಾ ಪ್ರಭುಗಾವುಂಡನನ್ನು ರಾಜ್ಯದ ಅಧಿಕಾರಿಗಳೆಂದು ಭಾವಿಸುವುದಕ್ಕಿಂತ ಜನರ ಪ್ರತಿನಿಧಿಗಳೆಂದು ಭಾವಿಸುವುದೇ ಹೆಚ್ಚು ಉಚಿತವಾದುದು.[233]

ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ 'ಗಾವುಂಡು'[234]ಗಳ ಮತ್ತು 'ಪ್ರಭುಗಾವುಂಡು' ಗಳ ಸಂಖ್ಯೆಯನ್ನು ಕೆಲವು ಶಾಸನಗಳು ಕೊಡುತ್ತವೆ. ಸಿರಿವುರದಲ್ಲಿ ಎಂಟು ಜನ ಗಾವುಂಡುಗಳಿದ್ದಂತೆ ಶಾಸನ

---

230 EI. XII. p. 274, 1077 A.D.

231 MAR (1932). p. 171, 1124 A.D. ಕೇರಳದಲ್ಲಿ ಬೌದ್ಧ ವಿಗ್ರಹಗಳು ದೊರೆತಿರುವ ಊರುಗಳಿಗೆ 'ಪಳ್ಳಿ' ಎಂಬ ಉತ್ತರಪದ ಅಂಟಿಕೊಂಡಿರುವುದು ಇಲ್ಲಿ ಗಮನಿಸಬೇಕಾದ ಸಂಗತಿ. 'ಪಳ್ಳಿ' ಎಂಬುದು ಬೌದ್ಧಧರ್ಮ ಸ್ಮಾರಕ ವಾಗಿದ್ದಿತು ಅಲ್ಲಿ. (Alexander : Buddhism in Kerala, pp. 75-6) ಈಗ 'ಪಳ್ಳಿ' ಎಂಬುದು ಕ್ರಿಶ್ಚಿಯನ್, ಮುಸ್ಲಿಂ ಮತ್ತು ಯೆಹೂದ್ಯರ ಪ್ರಾರ್ಥನಾ ಮಂದಿರಗಳನ್ನು ಸೂಚಿಸುತ್ತದೆ. (ಅದೇ, ಪು. 168)

232 V.R.R. Dixitar : Hindu Administrative Institutions, p. 328.

233 "He (the village headman) was more a representative of the people than the servant of the central government."

[Altekar : The Rāṣṭrakūṭas and their Times, p. 189].

234 'ಗಾವುಂಡ' ಎನ್ನುವ ಪದವು 'ಗ್ರಾಮವೃದ್ಧ'ದಿಂದ ಬಂದಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ [A.N. Narasimhiah:'Gowḍa in Kannada'[Indian Linguistics, xxii, 1961, pp. 110-5]. ರಾಜ್ಯದ ಅಧಿಕಾರಿಗಳನ್ನು ಹೆಸರಿಸುವಾಗ ಗ್ರಾಮವೃದ್ಧ ಎಂಬ ಅಧಿಕಾರಿಯ ಹೆಸರು ಎಲ್ಲಿಯೂ ಉಕ್ತವಾಗಿಲ್ಲ. 'ಗ್ರಾಮಕೂಟ' ಎಂಬ ಅಧಿಕಾರಿಯ ಹೆಸರಿದೆ (BKI. I. ii. 136, 1091 A.D.). ಈ 'ಗ್ರಾಮಕೂಟ' ಎಂಬುದೇ 'ಗಾವುಂಡ' (=ಗೌಡ) ಆಗಿರಬಹುದೇ ಎಂಬುದು ವಿಚಾರಯೋಗ್ಯವಾದುದು. ಗಾಮಉಡ, ಗಾಮಊಡ ಎಂಬ ರೂಪಗಳು ಪ್ರಾಕೃತ ದಲ್ಲಿ ದೊರೆಯುತ್ತವೆ (ಇದು ದೇಶ್ಯಶಬ್ದವೆಂದು ಹೇಮಚಂದ್ರನ ಅಭಿಮತ). 'ಗ್ರಾಮಕೂಟ' ಎಂದರೆ ಸಂಸ್ಕೃತದಲ್ಲಿ ಗ್ರಾಮದ ಮುಖ್ಯಸ್ಥ ಎಂದರ್ಥ. ಗೌಡ ಶಬ್ದದ ವ್ಯುತ್ಪತ್ತಿ ಬಹುಶಃ ಹೀಗೆ: ಸಂ. ಗ್ರಾಮಕೂಟ> ಪ್ರಾ. ಗಾಮಊಡ, ಗಾಮಉಡ> ಕನ್ನಡ. ಗಾವುಂಡ. ಇದೇ ಕ್ರಮೇಣ ಗಾವುಂಡ, ಗೌಂಡ, ಗೌಡ ಎಂದಾಗಿದೆ. ಈ ವ್ಯುತ್ಪತ್ತಿಯು ಅನೇಕ ವಿದ್ವಾಂಸರಿಗೆ ಒಪ್ಪಿಗೆಯಾಗಿದೆ.

ವೊಂದು ಹೇಳುತ್ತದೆ.[235] ಬೆಳ್ಳಿಟ್ಟಗೆಯಲ್ಲಿ ಹನ್ನೆರಡು 'ಗೌಡ'ರಿದ್ದರು.[236] ನರೆಯಂಗಲ್ಲಿನಲ್ಲಿ 'ಧರ್ಮಪ್ರತಿಪಾಳನಾಪರರಪ್ಪ' 'ಪ್ರಭುಗಾವುಂಡು'ಗಳಿದ್ದರು.[237] (ಸಂಖ್ಯೆಯನ್ನು ಕೊಟ್ಟಿಲ್ಲ). ಬೆಳ್ತುರು ಎಂಬ ಗ್ರಾಮದಲ್ಲಿ ಮೂವರು 'ಗ್ರಾಮಾಧಿಪ'ರಿದ್ದರೆಂದು ಹೇಳಿ ಅವರ ಹೆಸರುಗಳನ್ನು ಒಂದು ಶಾಸನವು ಕೊಟ್ಟಿದೆ.[238] 'ಊರೊಡೆಯ ಗೌಂಡು'ಗಳ ಉಲ್ಲೇಖ ಶಾಸನವೊಂದರಲ್ಲಿದೆ.[239] ಇನ್ನು ಕೆಲವು ಶಾಸನಗಳಲ್ಲಿ ಒಬ್ಬನೇ ಒಬ್ಬ ಗಾವುಂಡನ ಹೆಸರಿರುವುದಲ್ಲದೆ, ಕೆಲವು ಕಡೆ ಅವನೊಬ್ಬನೇ ಆ ಊರಿನ ಗಾವುಂಡ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಪಸುಂಡಿ ಎಂಬ ಗ್ರಾಮದಲ್ಲಿ ನಾಗಪುಲಿಗಾವುಂಡ ಎನ್ನುವವನು 'ಗಾವುಂಡುಗೆಯ್ಯು'ತ್ತಿದ್ದಂತೆ ಶಾಸನವೊಂದು ಹೇಳುತ್ತದೆ.[240] ಕಲ್ಲಮ ಎನ್ನುವವನು 'ಊರ್ಗಾವುಂಡುಗೆಯ್ಯು'ತ್ತಿದ್ದ ವಿಷಯವು ಶಾಸನವೊಂದರಲ್ಲಿದೆ.[241] ಸಿಗುನೂರಿನಲ್ಲಿ ಕಲ್ಲಯ್ಯ ಎನ್ನುವವನು 'ಏಕಭಾಗದ ಗಾವುಂಡುಗೆಯ್ಯು'ತ್ತಿದ್ದನು.[242] 'ಏಕಭೋಗಂ ಗಾವುಂಡಿಕೆ'ಯ ವಿಷಯ ಇನ್ನೊಂದು ಶಾಸನದಲ್ಲಿದೆ.[243]

ಹೀಗೆ ಕೆಲವು ಊರುಗಳಲ್ಲಿ ಒಬ್ಬನೇ ಗಾವುಂಡನೂ, ಇನ್ನು ಕೆಲವು ಊರುಗಳಲ್ಲಿ ಹಲವರು ಗಾವುಂಡುಗಳೂ ಇದ್ದುದು ಗೋಚರವಾಗುತ್ತದೆ. ಈ ಎರಡರಲ್ಲಿ ಯಾವ ಪದ್ಧತಿಯು ಪ್ರಾಚೀನವಾದುದು ಎಂಬುದನ್ನು ನಿರ್ಧರಿಸುವುದು ಕಷ್ಟ. ಗ್ರಾಮಸಭೆಗಳ ವಿಶೇಷ ಅಧ್ಯಯನಮಾಡಿರುವ ಡಾ|| ಅಲ್ಟೇಕರರೇನೋ ಒಂದು ಊರಿನಲ್ಲಿ ಹಲವರು ಗಾವುಂಡುಗಳಿದ್ದರೆ, ಅವರು ಮೂಲತಃ ಒಬ್ಬನೇ ಗಾವುಂಡನ ಬೇರೆ ಬೇರೆ ಮನೆತನಗಳಿಗೆ ಸೇರಿದ ಹಿರಿಯರಿರಬಹುದು ಎಂದು ಹೇಳಿ[244] ತಮ್ಮ ಒಲವು ಎತ್ತ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ. ಸ್ವಲ್ಪ ವರ್ಷಗಳ ಹಿಂದಿನವರೆಗೆ ಇದ್ದ ಪದ್ಧತಿಯೂ ಕೂಡ ಇದನ್ನೇ ಸಮರ್ಥಿಸುತ್ತದೆ. ಊರಿಗೆ ಒಬ್ಬನೇ ಗಾವುಂಡನಿದ್ದರೂ ಅವನು ಸರ್ವಾಧಿಕಾರಿಯಂತೆ ನಡೆದುಕೊಳ್ಳುತ್ತಿರಲಿಲ್ಲವೆಂದೂ ಇತರ ಹಿರಿಯರ ಸಭೆ ಸೇರಿಸಿ, ಅವರೊಡನೆ ಚರ್ಚಿಸಿ, ಅವರ ಒಪ್ಪಿಗೆಯಂತೆ ನಿರ್ಧಾರಗಳನ್ನು ಕೈಗೊಳ್ಳುತ್ತಿದ್ದನೆಂದೂ ಊಹಿಸಬಹುದು. ಆದ್ದರಿಂದ ಮುಂದಿನ ಪರ್ಯಾಲೋಚನೆಯಲ್ಲಿ ಒಬ್ಬನೇ ಗಾವುಂಡನಿದ್ದ ಊರುಗಳಲ್ಲಿಯೂ ಗ್ರಾಮಸಭೆಗಳಿದ್ದುವೆಂದು ಭಾವಿಸಿಕೊಳ್ಳಲಾಗಿದೆ.

ಗಾವುಂಡುಗಳು ಗ್ರಾಮವನ್ನು 'ಆಳು'ತ್ತಿದ್ದರು. ಅವರು 'ಊರೊಡೆಯು'ರೂ[245] ಹೌದು. ಅನೇಕ ಶಾಸನಗಳು ಅವರ ಗುಣಗಾನವನ್ನು ಮಾಡಿವೆ. ಅವರು 'ಅಖಿಳ ಗುಣಾಗ್ರಣಿ'ಗಳೆಂದೂ, 'ಧರ್ಮಪ್ರತಿಪಾಳನಾಪರ'ರೆಂದೂ 'ಶೂರ'ರೆಂದೂ 'ದಾನಿ'ಗಳೆಂದೂ ಶಾಸನಗಳು ಹೊಗಳುತ್ತವೆ. ಊರಿನ ಸಮಸ್ತ ಹೊಣೆಯನ್ನೂ ಹೊತ್ತ ಗಾವುಂಡುಗಳಲ್ಲಿರಬೇಕಾದ ಗುಣಗಳನ್ನು ಈ ಮಾತುಗಳು ನಿನದಿಸುತ್ತವೆ. ಗಾವುಂಡುಗಳ ಚಟುವಟಿಕೆಗಳು ಹಲವು. ಊರಿನಲ್ಲಿ ಯಾವ ಸಾರ್ವಜನಿಕ ಕ್ರಿಯೆ ನಡೆದರೂ ಅದು ಇವರ ಸಾನ್ನಿಧ್ಯದಲ್ಲಿ ನಡೆಯುತ್ತಿದ್ದಿತು.

---

235 BKI. I. i. 50, 1005 A.D.
236 BKI. I. ii. 138, 1093 A.D.
237 BKI. I. II. 155, 1104-5 A.D.
238 EC. XI. Dg. 3, 1121 A.D.
239 EC. XI. Dg. 155, 1124 A.D.
240 BKI. I. i. 34, 925 A.D.
241 KI. I. 14, 866 A.D.
242 EI. XV. p. 331, 1028 A.D.
243 EC. VII. Hl. 14, 1076 A.D.
244 The Rāṣṭrakūṭas and their Times, pp. 189-90.
245 ಅಗ್ರಹಾರದ ಮಹಾಜನರನ್ನು 'ಊರೊಡೆಯ'ರೆಂದು ಕರೆಯುವುದಕ್ಕೂ, ಗಾವುಂಡುಗಳನ್ನು ಊರಿನ ಊರೊಡೆಯರೆಂದು ಕರೆಯುವುದಕ್ಕೂ ವ್ಯತ್ಯಾಸವಿದೆ. ಊರಿನಿಂದ ರಾಜನಿಗೆ ಸಲ್ಲಬೇಕಾಗಿದ್ದ ಆದಾಯವೆಲ್ಲವೂ ಮಹಾಜನರಿಗೆ ಸಲ್ಲುತ್ತಿದ್ದಿತು. ಆದರೆ ಗಾವುಂಡಗಳು ಊರಿನ ಹಿತಾಸಕ್ತಿಗಳನ್ನು ಮಾತ್ರ ನೋಡಿಕೊಳ್ಳುತ್ತಿದ್ದವರು.

ಬೈರುಂಬರ ಮಲ್ಲಿಮಯ್ಯ ಎಂಬಾತನು ತಾನು ಕಟ್ಟಿಸಿದ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟದ್ದು ತನ್ನ ಊರಿನ ಗಾವುಂಡುಗಳ ಸಾನ್ನಿಧ್ಯದಲ್ಲಿ.[246] ಹೀಗೆ ಬಿಟ್ಟುಕೊಟ್ಟ ದತ್ತಿಯನ್ನು ಊರಿನ ಗಾವುಂಡನು ಪ್ರತಿಪಾಲಿಸುತ್ತಾನೆ ಎಂದು ಶಾಸನಗಳು ಕೊನೆಯಾಗುವುದನ್ನು ನೋಡಿದರೆ[247] ಅನೇಕ ದತ್ತಿಗಳಿಗೆ ಗಾವುಂಡುಗಳು ಧರ್ಮದರ್ಶಿಗಳಾಗಿರುತ್ತಿದ್ದರು ಎಂಬುದು ತಿಳಿದುಬರುತ್ತದೆ. ದತ್ತಿಗಳನ್ನು ಬಿಟ್ಟುಕೊಡುವಾಗ ಆ ಊರಿನ ಗಾವುಂಡ ಅಥವಾ ಗಾವುಂಡುಗಳು ಸಾಮಾನ್ಯವಾಗಿ ಅಲ್ಲಿ ಇರುತ್ತಿದ್ದರು. ಊರಿನ ಕೆರೆಯ ಸ್ಥಿತಿಗತಿಗಳನ್ನು ನೋಡಿಕೊಳ್ಳುವುದಕ್ಕೆ, ಊರಿನಲ್ಲಿ ಉತ್ಸವಾದಿಗಳು ನಡೆಯುವುದಕ್ಕೆ ಬಹುಶಃ ಗಾವುಂಡುಗಳು ತಮ್ಮ ತಮ್ಮಲ್ಲೇ ತಾತ್ಕಾಲಿಕವಾದ ಸಮಿತಿಗಳನ್ನು ರಚಿಸಿಕೊಳ್ಳುತ್ತಿದ್ದರೆಂದೂ, ಆ ಕೆಲಸಗಳು ಮುಗಿದ ಮೇಲೆ ಆ ಸಮಿತಿಗಳು ತಮ್ಮಷ್ಟಕ್ಕೆ ತಾವೇ ಕರಗುತ್ತಿದ್ದುವೆಂದೂ ವಿದ್ವಾಂಸರು ಊಹಿಸಿದ್ದಾರೆ.[248] ಗ್ರಾಮಸಭೆಗಳ ಕೆಲಸ ಒಂದು ನಿಯಮಬದ್ಧವಾಗಿರಲಿಲ್ಲ. ಎಲ್ಲರ ಒಪ್ಪಿಗೆ ಪಡೆದು, ಎಲ್ಲರ ಸೌಕರ್ಯಕ್ಕೆ ತಕ್ಕಂತೆ ಅವರವರಿಗೆ ಕೆಲಸಗಳನ್ನು ಹಂಚುತ್ತಿದ್ದಿತು.[249] ಕೆರೆಯೊಂದಕ್ಕೆ ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿದ್ದ ತಳವೃತ್ತಿಯು ಮಧ್ಯೆ ನಿಂತುಹೋದಾಗ ಅದನ್ನು ಮತ್ತೆ ಹಿಂದಿರುಗಿಸಿ ಕೊಡಿಸಬೇಕೆಂದು ರಾಜನ ಬಳಿ ಹೋದ ವ್ಯಕ್ತಿಗಳಲ್ಲಿ ಆ ಊರಿನ ಗಾವುಂಡುಗಳೂ ಇದ್ದುದನ್ನು ನೋಡಿದರೆ[250] ಊರಿನ ಆಗುಹೋಗುಗಳ ವಿಷಯದಲ್ಲಿ ಗಾವುಂಡುಗಳಿಗಿದ್ದ ಅಪಾರವಾದ ಆಸಕ್ತಿಯು ಸುವಿದಿತವಾಗುತ್ತದೆ. ಒಂದು ಊರಿನಲ್ಲಿ ನಿರ್ಮಾಣವಾದ ದೇವಸ್ಥಾನಕ್ಕೆ ಬೇರೆ ಬೇರೆ ಊರುಗಳು ದತ್ತಿಗಳನ್ನು ಕೊಡಲು ಮುಂದೆ ಬರುತ್ತಿದ್ದುವು. ಅಂತಹ ಸಮಯಗಳಲ್ಲಿ ತನ್ನ ತನ್ನ ಊರಿನ ಕಾಣಿಕೆಯನ್ನು ಆಯಾ ಊರಿನ ಗಾವುಂಡನು ಹೆಸರಿಸಿರುವುದನ್ನು ನೋಡಿದರೆ,[251] ಗಾವುಂಡನು ಊರಿನ ಪ್ರತಿನಿಧಿಯೆಂಬುದು ಮಾತ್ರವಲ್ಲದೆ ಊರಿನ ಜನ ಅವನಲ್ಲಿಟ್ಟಿದ್ದ ದೃಢವಿಶ್ವಾಸವೂ ಗೋಚರವಾಗುತ್ತದೆ.

ಗ್ರಾಮಸಭೆಗಳ ಕರ್ತವ್ಯಗಳಲ್ಲಿ ಇನ್ನೂ ಒಂದೆರಡನ್ನು ಇಲ್ಲಿ ಹೆಸರಿಸಬಹುದು. ಹಳ್ಳಿಯ ರೈತರಿಗೆ ಅತ್ಯಗತ್ಯವಾಗಿ ಬೇಕಾದ ಕಮ್ಮಾರನನ್ನೂ ಕುಲುಮೆಯನ್ನೂ ನಡೆಸುವುದು[252] ಗ್ರಾಮಸಭೆಯ ಕರ್ತವ್ಯಗಳಲ್ಲೊಂದಾಗಿದ್ದಿತು. ಊರ ಹೊರಭಾಗದಲ್ಲಿ ನಿಲ್ಲುತ್ತಿದ್ದ ದನಗಳ ಗೊಬ್ಬರವನ್ನು ಹರಾಜುಹಾಕಿ,[253] ಬಂದ ಹಣವನ್ನು ಊರಿಗಾಗಿ ಬಳಸುವುದು ಗ್ರಾಮಸಭೆ ಕೈಗೊಳ್ಳುತ್ತಿದ್ದ ಮತ್ತೊಂದು ಕಾರ್ಯ. ಪ್ರಾಚೀನ ಭಾರತದಲ್ಲಿ ಒಂದೊಂದು ಊರಿನಲ್ಲೂ ಊರೊಟ್ಟಿನ ಕಣಜವಿರುತ್ತಿದ್ದಿತು (Public granary). ಅಭಾವದ ಕಾಲದಲ್ಲಿ ಇವುಗಳ ಸಹಾಯವು ಎಷ್ಟು ಎಂಬುದು ಸ್ಪಷ್ಟವಾಗಿದೆ. ಇಂತಹ ಕಣಜಗಳ ಉಲ್ಲೇಖವನ್ನು ಜಾತಕಗಳಲ್ಲಿಯೂ, ಅರ್ಥಶಾಸ್ತ್ರದಲ್ಲಿಯೂ ಕಾಣಬಹುದು.[254] ಒಂದೇ ಒಂದು ಶಾಸನದಲ್ಲಿ 'ಕಲಂವ್ಮಾಡದ ಉತ್ತರಮಳಿಗೆ'ಯ ಉಲ್ಲೇಖವಿದೆ.[255]

---

[246] BKI. I. ii. 138, 1093 A.D.

[247] BKI. I. i. 63, 1026 A.D. ; BKI. I. i. 34, 925 A.D.

[248] Altekar : History of Village Communities in Western India, p. 25.

[249] "The village council in the Deccan does not seem to have discharged its functions in a formal and constitutional manner." (ಅದೇ).

[250] BKI. I. ii. 163, 1113 A.D.

[251] EC. VII. Sk. 118, 1054 A.D.

[252] SII. IX. i. 18, 883–4 A.D. ಬೆಳುಗೊಂಪೆಯ ಗಾಮುಂಡರೂ ಇತರರೂ ಸೇರಿ ಕೆರೆಗೆ ಸೇರಿದ್ದ ಭೂಮಿಯಲ್ಲಿ ಸ್ವಲ್ಪ ಭಾಗವನ್ನು ಆದಿತ್ಯಗೃಹಕ್ಕೂ, ಇನ್ನು ಸ್ವಲ್ಪವನ್ನು ಕುಲುಮೆಗೂ ಕೊಡುತ್ತಾರೆ. ಇಲ್ಲಿ ಕುಲುಮೆಗೆ ಕೊಟ್ಟಿದ್ದು ಊರಿನ ಎಲ್ಲರ ಕೆಲಸವನ್ನು ಮಾಡಿಕೊಡಲೆಂದೋ ಅಥವಾ ದೇವಸ್ಥಾನಕ್ಕಾಗಿ ಕೆಲಸಮಾಡಿಕೊಡಲೆಂದೋ ಸ್ಪಷ್ಟವಾಗುವುದಿಲ್ಲ. ಬಹುಶಃ ಎರಡನೆಯದೇ ನಿಜವಿರಬಹುದು.

[253] EC. VIII. 249, 1065 A.D.

[254] Altekar : History of Village Communities in Western India, p. 63

[255] MAR (1927). p. 147, 1107 A.D.

'ಮಳಿಗೆ' ಎಂಬುದು ಮೇಲೆ ಹೇಳಿದ ಸಾರ್ವಜನಿಕ ಧಾನ್ಯಾಗಾರವನ್ನು ಸೂಚಿಸಬಹುದು. ಇಂತಹ ಧಾನ್ಯಾಗಾರಗಳು ಈಗ ಇಲ್ಲವಾದರೂ ಹದಿನೈದು ಇಪ್ಪತ್ತು ವರ್ಷಗಳ ಹಿಂದೆ ಕೆಲವು ಊರುಗಳಲ್ಲಿ ಅವುಗಳಿಗಾಗಿ ಮೀಸಲಾಗಿದ್ದ ಮನೆಗಳನ್ನು ಕಾಣಬಹುದಾಗಿದ್ದಿತು.

ಈಗ ಗ್ರಾಮಸಭೆಯ ಅತ್ಯಂತ ಪ್ರಮುಖ ಕರ್ತವ್ಯವಾದ ನ್ಯಾಯಪರಿಪಾಲನೆಯತ್ತ ಹೊರಳಬಹುದು. ಪೊಸವೂರನ್ನು 'ಏಕಭೋಗ' ದಿಂದ ಆಳುತ್ತಿದ್ದ ನಾಕಿಗವುಂಡನನ್ನು ಒಂದು ಶಾಸನವು ಹೊಗಳುತ್ತ ಅವನಿಂದ ದುಷ್ಟರ ಧ್ವನಿಯು ಅಡಗಿತೆಂದೂ, ಕಳ್ಳರ ಕೊಳ್ಳಿಯ ಬಾಧೆಯು ಕೊಚ್ಚಿಕೊಂಡು ಹೋಯಿತೆಂದೂ, ಮನ್ನೆಯರ ಅನ್ಯಾಯವು ಅಡಗಿತೆಂದೂ ಹೇಳುತ್ತದೆ.[256] ಶಾಸನವೊಂದರಲ್ಲಿ 'ಸಭೆ'ಯ ಉಲ್ಲೇಖವಿದೆ.[257] ಈ ಉಲ್ಲೇಖವು ಬಂದಿರುವ ರೀತಿಯನ್ನು ನೋಡಿದರೆ, ಅದು ಗ್ರಾಮಸ್ಥರ ಕುಂದುಕೊರತೆಗಳನ್ನು ನಿವಾರಿಸಲೋ, ಅವರ ವಿವಾದಗಳನ್ನು ಪರಿಹರಿಸಲೋ ಸೇರುತ್ತಿದ್ದ ಆ ಗ್ರಾಮದ ಹಿರಿಯರ ಸಭೆ ಎಂಬ ಭಾವನೆ ಬರುತ್ತದೆ. ಅಂತಹ ಸಭೆಗಳಲ್ಲಿ ಆಯ್ಚಗಾವುಂಡನೆಂಬಾತನು 'ಕ್ರಮ'ವನ್ನೂ 'ಧರ್ಮವಿಚಾರ'ವನ್ನೂ ವಿಚಾರಮಾಡಿ ಮಾತನಾಡುತ್ತಿದ್ದನೆಂದು ಶಾಸನವು ಹೇಳುತ್ತದೆ. 'ಸತ್ಯಕಾನೀನ', 'ವಿವೇಕ ಬೃಹಸ್ಪತಿ' ಮುಂತಾದ ವಿಶೇಷಣಗಳನ್ನು ನೋಡಿದರೆ ವಿವಾದ ನಿರ್ಣಯಗಳ ಸಭೆಗಳಲ್ಲಿ ಅವನ ಮಾತಿಗೆ ಬಹು ಬೆಲೆಯಿದ್ದಿತೆಂದು ಕಾಣುತ್ತದೆ. ಅನೇಕ ಶಾಸನಗಳಲ್ಲಿ ಇಂತಿಂತಹ ಅಪರಾಧಕ್ಕೆ ಇಷ್ಟಿಷ್ಟು ದಂಡವೆಂದು ರಾಜನೋ ಇತರ ಹಿರಿಯ ಅಧಿಕಾರಿಯೋ ನಿಯಮಿಸುತ್ತಿದ್ದಂತೆ ಉಲ್ಲೇಖಗಳಿವೆ.[258] ಗ್ರಾಮಸಭೆಗಳು ಬಹುಶಃ ಆ ನಿಯಮಗಳನ್ನು ಗಮನದಲ್ಲಿಟ್ಟುಕೊಂಡು ಶಿಕ್ಷೆಗಳನ್ನು ವಿಧಿಸುತ್ತಿದ್ದಿರಬಹುದು. ಆದರೆ ಈ ನಿಯಮಗಳು ಎಲ್ಲ ಊರುಗಳಿಗೂ ಅನ್ವಯಿಸುತ್ತಿದ್ದುವೆಂದಾಗಲಿ, ಎಲ್ಲ ಗ್ರಾಮಸಭೆಗಳೂ ಚಾಚೂ ತಪ್ಪದಂತೆ ಅನುಸರಿಸುತ್ತಿದ್ದರೆಂದಾಗಲಿ ಭಾವಿಸುವುದು ತಪ್ಪಾಗುತ್ತದೆ. ಅಪರಾಧದ ಸ್ವರೂಪ ಮತ್ತು ಪ್ರಮಾಣ, ಅಪರಾಧಿ ಅಪರಾಧವನ್ನು ಮಾಡಲು ಒದಗಿದ ಸನ್ನಿವೇಶ ಇತ್ಯಾದಿಗಳನ್ನು ಗಮನದಲ್ಲಿಟ್ಟುಕೊಂಡು ಗ್ರಾಮಸಭೆಯು ಬಹುಮಟ್ಟಿಗೆ ಲೌಕಿಕಪ್ರಜ್ಞೆಯನ್ನಾಶ್ರಯಿಸಿ ತೀರ್ಪನ್ನು ಕೊಡುತ್ತಿದ್ದಿರಬೇಕು. ಗ್ರಾಮಸಭೆಯ ತೀರ್ಪು ಬಹುಶಃ ಅನುಲ್ಲಂಘನೀಯವಾಗಿದ್ದಿರಬೇಕು. ಅದನ್ನು ಉಲ್ಲಂಘಿಸಿದವನನ್ನು ಊರಿನಿಂದ ಹೊರಗೆ ಹಾಕುತ್ತಿದ್ದರು, ಊರಿನಲ್ಲಿ ಅವನಿಗೆ ಅನ್ನ ನೀರು ಸಿಗದಂತೆ ಕಟ್ಟುಮಾಡುತ್ತಿದ್ದರು. ಇದರ ಸೂಚನೆ ಶಾಸನವೊಂದರಲ್ಲಿದೆ.[259] ಶಾಸನವು ಅಸ್ಪಷ್ಟವಾಗಿದ್ದರೂ ಇಷ್ಟು ಅಂಶವನ್ನು ಗ್ರಹಿಸಬಹುದು. ಯಾವನೋ ಒಬ್ಬನು ಊರಿನವರ ಇಚ್ಛೆಗೆ ವಿರೋಧವಾಗಿ ನಡೆದುಕೊಂಡದ್ದರಿಂದ, ಊರಿನವರ ಅಪ್ಪಣೆಯಿಲ್ಲದೆ ಊರನ್ನು ಹೊಕ್ಕು ಉಣಲಾಗದೆಂದೂ ("ಊರೊಳ್ ಬೆಸನಿಲ್ಲದೆ ಪೊಕ್ಕುಣಲಾಗದು"), ಹಾಗೆ ಉಂಡರೆ ಶಿಕ್ಷೆಯನ್ನನುಭವಿಸಬೇಕಾಗುವುದೆಂದೂ ಆ ಶಾಸನವು ತಿಳಿಸುತ್ತದೆ. ಅಪರಾಧವು ಕೊಲೆಯಂತಹ ದೊಡ್ಡ ಕೃತ್ಯಗಳಿಗೆ ಸಂಬಂಧಿಸಿದ್ದರೆ ಅಲ್ಲಿಯೂ ಗ್ರಾಮಸಭೆಗಳೇ ತೀರ್ಪುಕೊಡುತ್ತಿದ್ದುವೇ, ಇಲ್ಲವೇ ಹಿರಿಯ ಅಧಿಕಾರಿಗಳು ತೀರ್ಪುಕೊಡುತ್ತಿದ್ದರೇ ಎಂಬ ವಿಷಯದಲ್ಲಿ ಶಾಸನಗಳಿಂದ ಹೆಚ್ಚು ಬೆಳಕು ಬರುವುದಿಲ್ಲ. ಅಶೋಕನ ನಾಲ್ಕನೆಯ ಸ್ತಂಭಶಾಸನದಿಂದ ದೊಡ್ಡ ವ್ಯಾಜ್ಯಗಳನ್ನು ಹಿರಿಯ ನ್ಯಾಯಾಲಯಗಳು ಪರಿಹರಿಸುತ್ತಿದ್ದುವೆಂದೂ ಆ ನ್ಯಾಯಾಲಯಗಳ ತೀರ್ಪುಗಳು ವಿಶೇಷ ಅಧಿಕಾರಿಗಳ ಅಂಗೀಕಾರಮುದ್ರೆಯನ್ನು ಪಡೆಯಬೇಕಾಗಿದ್ದಿತೆಂದೂ ತಿಳಿದುಬರುತ್ತದೆ.[260] ಪ್ರಾಚೀನ ಕರ್ನಾಟಕದಲ್ಲೂ ಇಂತಹ

---

[256] BKI. I. ii. 152, 1103 A.D. "ಖಳರ [ರ] ವಂ ಕಳಲ್ಚಿಸುದು ಕಳ್ಳರ ಕೊಳ್ಳಿಯ ಬಾಧೆಯೆಂಬೆಗಲ್ದಳಱಿ ತೆರಳ್ಚಿ ತೂಱಿದ್ದುದು ಮನ್ನೆಯರನ್ನೆಯುಮಂ ನಿರಾಕುಳಂ....ದುದು ಭೀತಿಯಿಂ ಮಱೆಗೆ ವಂದವರಂ ನೆಱೆ ಕಾದುದೆಂದ ಡಾರಳವಿಯೊ ಧಾತ್ರಿಯೊಳ್ ನೆಗಟ್ದ ನಾಕಿ ಗವುಂಡನೆ ಬಾಹುವಿಕ್ರಮಂ."

[257] BKI. I. i. 65, 1029 A.D.

[258] SII. IX. i. 102, 1046 A.D.

[259] EC. VI. Kd. 144, C. 760 A.D.

[260] Altekar : History of Village Communities in Western India, p. 34.

ವ್ಯವಸ್ಥೆಯೊಂದು ಇದ್ದಿರಬಹುದೋ ಏನೋ! ರಾಜರಿಗೆ ಮತ್ತು ಇತರ ಮಂತ್ರಿಗಳಿಗೆ ಇದ್ದ 'ದುಷ್ಟಶಿಕ್ಷಕ' ಮುಂತಾದ ವಿಶೇಷಣಗಳನ್ನು ನೋಡಿದರೆ ಮೇಲಿನ ಊಹೆಯು ಸಾಧಾರವಾದುದೆಂದು ಕಾಣುತ್ತದೆ. ಒಂದೇ ಒಂದು ಶಾಸನದಲ್ಲಿ ತಂದೆಯೊಬ್ಬನು ತನ್ನ ಮಗನನ್ನು ಕೊಲ್ಲಿಸಿ ದಂಡ ತೆತ್ತ ವಿಷಯವೂ, ಮತ್ತೆ 'ತಂದೆಯ ಹೆಗಲಮೆಟ್ಟಿ' ಮಗನು ಸ್ವರ್ಗಕ್ಕೆ ಸಂದ ವಿಷಯವೂ ಇದೆ.[261] ಶಾಸನದ ರೀತಿ ಬಹಳ ಅಸ್ಪಷ್ಟವಾಗಿರುವುದರಿಂದ ಖಚಿತವಾದ ಅಭಿಪ್ರಾಯಗಳನ್ನು ಮೂಡಿಸಿಕೊಳ್ಳುವುದು ಕಷ್ಟವಾಗಿದೆ. ಮಗನ ಕೊಲೆ ಮಾಡಲು ನೂರು ಗದ್ಯಾಣಗಳನ್ನು ಕೊಟ್ಟನೆಂದೂ, ಬಳಿಕ ಐವತ್ತು ಗದ್ಯಾಣಗಳ ದಂಡವನ್ನು ತೆತ್ತನೆಂದೂ ಶಾಸನವು ಹೇಳುತ್ತದೆ. ಈ ದಂಡವನ್ನು ನಿರ್ಧರಿಸಿದವರು ಯಾರು ಎಂಬುದು ಸಂದೇಹಾಸ್ಪದವಾಗಿ ಉಳಿಯುತ್ತದೆ. ಕೊಲೆಯ ಮತ್ತು ದಂಡದ ವಿಚಾರಗಳು ಶಾಸನೋಕ್ತವಾಗಿರುವುದರಿಂದ, ರಾಜ್ಯದ ಹಿರಿಯ ಅಧಿಕಾರಿಗಳಿಂದ ಬಹಿರಂಗ ವಿಚಾರಣೆ ನಡೆಯಿತೆಂದು ಊಹಿಸಬಹುದೆ ? ಊರಿನವರೇ ಸೇರಿ ನ್ಯಾಯನಿರ್ಣಯವನ್ನು ಮಾಡಿದ್ದರೆ ಬಹುಶಃ ಶಾಸನವನ್ನು ಹಾಕಿಸುತ್ತಿರಲಿಲ್ಲ.

ಗ್ರಾಮಾಡಳಿತಕ್ಕೆ ಸಂಬಂಧಿಸಿದ ಇಬ್ಬರ ಹೆಸರುಗಳನ್ನು ಇಲ್ಲಿ ಸೂಚಿಸಬಹುದು. ಒಬ್ಬ—ಸೇನ ಬೋವ (ಈಗಿನ ಶಾನುಬೋಗ), ಮತ್ತೊಬ್ಬ—ತಳವಾರ. ಸೇನಬೋವನು ವಿದ್ಯಾವಂತನಾಗಿದ್ದು ಗ್ರಾಮ ಸಭೆಯ ಲೆಕ್ಕ ಪತ್ರಗಳನ್ನು ನೋಡಿಕೊಳ್ಳುತ್ತಿದ್ದನು. ವಾಸ್ತವವಾಗಿ, ಇವನ ಸ್ಥಾನ ಗ್ರಾಮದ ಗೌಡನಿಗಿಂತ ಕೆಳಗಿನದಾದರೂ ಇವನು ಬಹು ಪ್ರಭಾವಶಾಲಿಯಾದ ವ್ಯಕ್ತಿಯಾಗಿದ್ದಿರಬೇಕು. ಗುಡಿಗೆಱೆ ಎಂಬ ಗ್ರಾಮವನ್ನು 'ಪನ್ನೆರಡುಂ ಗವುಂಡುಗಳ್' ರಕ್ಷಿಸುತ್ತಿರುವಾಗ, ಆ ಊರಿನಲ್ಲಿ ಸೇನಬೋವನಾಗಿದ್ದ ಸಿಂಗಣ್ಣನನ್ನು ಶಾಸನವೊಂದು ಬಹುವಾಗಿ ಹೊಗಳಿದೆ.[262] ಅವನು ಅಕ್ಷರ ಪಕ್ಷಪಾತಿಯಾಗಿದ್ದನೆಂದು ಆ ಶಾಸನವು ಹೇಳುತ್ತದೆ. ಎಷ್ಟೋ ವೇಳೆ ಶಾಸನಗಳ ಪಾಠವನ್ನು ಸಿದ್ಧಪಡಿಸುತ್ತಿದ್ದವನು ಸೇನಬೋವನೇ ಆಗಿದ್ದನು[263] ('ಕುಳಕರಣಿ' ಎಂಬುದು ಸೇನಬೋವನಿಗಿದ್ದ ಮತ್ತೊಂದು ಹೆಸರು). ಊರಿನ ರಕ್ಷಣೆಯ ಹೊಣೆ ತಳವಾರನದು. ತಳವಾರನ ಹೆಸರು ಅನೇಕ ಶಾಸನಗಳಲ್ಲಿ ಬಂದಿದೆ.[264]

ಇವರಲ್ಲಿ ಊರಗಾವುಂಡನ ವೃತ್ತಿಯು ವಂಶಪಾರಂಪರ್ಯವಾದುದು ಎಂಬುದರ ಸ್ಪಷ್ಟಸೂಚನೆ ಶಾಸನ ವೊಂದರಲ್ಲಿದೆ. ಅರಸಿಯಕೆರೆ ಎಂಬ ಊರಿನ ಕಲಿಯಮಗೌಡನ ಮಗಳು ಬಾಚಲದೇವಿಗೆ, ಬಹುಶಃ ಕಲಿಯಮ ಗೌಡನಿಗೆ ಗಂಡುಮಕ್ಕಳಿಲ್ಲದುದರಿಂದಲೋ ಏನೋ, ಆ ಊರಿನ ಗೌಡಿಕೆಯ ಧನ ಭೂಮಿಗಳು ಸೇರಿದ್ದುವು.[265] ಬಹುಶಃ ರಾಜನು ಒಂದೊಂದು ಊರಿನ ಗೌಡನಿಗೂ ಗೌಡಿಕೆಗಾಗಿ ಭೂಮಿಯನ್ನೂ ಹಣವನ್ನೂ ಬಿಟ್ಟುಕೊಟ್ಟಿರುತ್ತಿದ್ದನು. ಸೇನಬೋವ ಮತ್ತು ತಳವಾರ ವೃತ್ತಿಗಳಿಗೂ ಹಾಗೆಯೇ ಭೂಮಿ ಮತ್ತು ಧನಗಳಿದ್ದಿರಬಹುದು. ದೇಶದ ರಾಜನು ಬೇರೆ ಬೇರೆ ಊರುಗಳ ಗಾವುಂಡರಿಗೆ ಪಟ್ಟವನ್ನು ಕಟ್ಟಿ ಅವರಿಗೆ ತನ್ನ ಹೆಸರನ್ನಿಟ್ಟು ಗೌರವಿಸುತ್ತಿದ್ದ ಸಂಪ್ರದಾಯವೊಂದರ ಉಲ್ಲೇಖ ಹಲವು ಶಾಸನಗಳಲ್ಲಿದೆ. ಸುಮಾರು 890 ರಲ್ಲಿ ಗಂಗರಾಜ ಶ್ರೀಮತ್ ಪೆರ್ಮಾನಡಿಗಳು ಜೆಡಲ ಎಱೆಯಂಗ ಗಾವುಂಡನ ಮಗನಿಗೆ 'ಪೆರ್ಮಾಡಿವಟ್ಟಂಗಟ್ಟಿ'ದ ವಿಷಯ ಶಾಸನ ವೊಂದರಲ್ಲಿದೆ.[266] ರಾಷ್ಟ್ರಕೂಟರ ಸಾಮಂತ ಕನ್ನಯ್ಯನು ರಾಚಿಯ ಎನ್ನುವವನಿಗೆ 'ರಟ್ಟಗಾವುಂಡನೆಂದು ಬೊಟ್ಟಿಟ್ಟ' ವಿಷಯವು ಇನ್ನೊಂದು ಶಾಸನದಲ್ಲಿದೆ.[267] ಶ್ರೀ ವೀರಮಹೇಂದ್ರ ನೊಳಂಬನು ಕೀರ್ತಿಗಾಮುಂಡನ

---

261 EC. VIII. Sb. 80, C. 1131 A.D.

262 IA. XVIII. p. 38, 1076 A.D.

263 EC. XI. Dg. 149, 1113 A.D. ; BKI. I. ii. 173, 1124 A.D.

264 EC. XI. Cd. 75, 941 A.D. ; EC. IX. Nl. 34, C. 750 A.D. ; EC. VI. Tk. 63, C. 1124 A.D.

265 SII. IX. i. 145, 1079 A.D.

266 IA. VI. p. 103, C. 885 A.D.

267 EC. XI. Cd. 75, 941 A.D.

ಮಗನಿಗೆ 'ಪಟ್ಟವ ಕಟ್ಟಿ' ಬಹುಶಃ ಅವನಿಗೆ ನೊಳಂಬ ಗಾವುಂಡನೆಂದು ಹೆಸರಿಟ್ಟ ವಿಷಯವು ಒಂದು ಶಾಸನದಲ್ಲಿದೆ.[268] (ಶಾಸನದಲ್ಲಿ ನೊಳಂಬ ಗಾವುಂಡ ಎಂಬ ಹೆಸರಿಟ್ಟ ವಿಷಯ ಉಕ್ತವಾಗಿರದಿದ್ದರೂ ಆ ಹೆಸರನ್ನು ನೋಡಿದರೆ ಮತ್ತು ಆ ಕಾಲದ ಪದ್ಧತಿಯನ್ನು ಗಮನಿಸಿದರೆ ಈ ಹೆಸರು ವೀರಮಹೇಂದ್ರ ನೊಳಂಬನು ಇಟ್ಟ ಹೆಸರೆಂದು ಕಾಣುತ್ತದೆ). ಇಱುವ ನೊಳಂಬನು ಕರವಯ್ಯ ಎಂಬ ವರ್ತಕನಿಗೆ 'ಮುಮ್ಮಡಿ ಗವಱೆ ಪಲ್ಲವಾದಿತ್ಯ ನೊಳಂಬ ಸೆಟ್ಟಿ' ಎಂಬ ಹೆಸರನ್ನು ದಯಪಾಲಿಸಿ ಪಟ್ಟವನ್ನು ಕಟ್ಟಿ ಅನೇಕ ಬಗೆಯಾಗಿ ಸತ್ಕರಿಸಿದ ವಿಷಯ ಇನ್ನೊಂದು ಶಾಸನದಲ್ಲಿದೆ.[269] ಹೀಗೆ ರಾಜನಾದವನು ಗಾವುಂಡ ಪಟ್ಟವನ್ನು ಕಟ್ಟಿ ತನ್ನ ಹೆಸರಿಡುತ್ತಿದ್ದ ಪದ್ಧತಿಯ ಮೂಲವೇನು, ಅದಕ್ಕೆ ಕಾರಣವೇನು ಎಂಬುದರ ಸೂಚನೆಗಳು ಶಾಸನಗಳಲ್ಲಿ ದೊರಕುವುದಿಲ್ಲ. ರಾಜನು ಪಟ್ಟವನ್ನು ಕಟ್ಟಿ ಆ ವ್ಯಕ್ತಿಗೆ ಯಾವುದೋ ಊರನ್ನೋ ಅಥವಾ ತಳಿಗೆ, ಅಡ್ಡಣಿಗೆ ಮುಂತಾದ ವಸ್ತುಗಳನ್ನೋ ಕೊಟ್ಟು ಗೌರವಿಸುವುದನ್ನು ನೋಡಿದರೆ ತನ್ನ ವಿಶೇಷ ಶಕ್ತಿಯಿಂದಲೋ, ತಾನು ಮಾಡಿದ ವಿಶೇಷ ಕಾರ್ಯದಿಂದಲೋ ಅಂತಹ ಗೌರವಕ್ಕೆ ಆ ವ್ಯಕ್ತಿಯು ಪಾತ್ರನಾಗುತ್ತಿದ್ದನು ಎಂದು ಭಾವಿಸಬಹುದು. ವರ್ತಕ ಸಮಾಜದ ಕೆಲವರಿಗೆ ರಾಜನು ಪಟ್ಟವನ್ನು ಕಟ್ಟಿ ಗೌರವಿಸುತ್ತಿದ್ದುದನ್ನು ಇಲ್ಲಿ ನೆನೆಯಬಹುದು. ರಾಜಭಕ್ತಿ ಮತ್ತು ಸೇವಾಮನೋಭಾವಗಳನ್ನು ಉದ್ದೀಪಿಸುವ ವಿಧಾನಗಳಲ್ಲಿ ಇದೂ ಒಂದಾಗಿದ್ದರೆ ಆಶ್ಚರ್ಯಪಡಬೇಕಾಗಿಲ್ಲ.

ಗ್ರಾಮಸಭೆಗಳನ್ನು ಕುರಿತಾದ ಮೇಲಿನ ವಿವೇಚನೆಯನ್ನು ಹೀಗೆ ಸಂಗ್ರಹಿಸಬಹುದು. ಒಂದೊಂದು ಊರಿನಲ್ಲಿಯೂ ಒಂದೊಂದು ಗ್ರಾಮಸಭೆಯಿರುತ್ತಿದ್ದಿತು. ಆ ಸಭೆಗೆ ಮುಖ್ಯಸ್ಥ ಅಲ್ಲಿಯ ಗಾವುಂಡ ಅಥವಾ ಪ್ರಭುಗಾವುಂಡ ; ಗ್ರಾಮಸಭೆಯ ಇತರ ಸದಸ್ಯರು ಆ ಊರಿನ ಸಹಜ ನಾಯಕರಾದ ಹಿರಿಯರು. ಗ್ರಾಮ ಸಭೆಯಮೇಲೆ ರಾಜನ ನೇರವಾದ ಹತೋಟಿ ಇರಲಿಲ್ಲ. ರಾಜ್ಯದಲ್ಲಿ ರಾಜನಿಗೆ ಪರಮಾಧಿಕಾರವಿದ್ದಂತೆ ಗ್ರಾಮ ದಲ್ಲಿ ಗ್ರಾಮಸಭೆಗೆ ಪರಮಾಧಿಕಾರವಿದ್ದಿತು. ಒಂದೊಂದು ಹಳ್ಳಿಯೂ ರಾಜ್ಯದೊಳಗಿನ ಪುಟ್ಟ ರಾಜ್ಯವಿದ್ದಂತೆ. ಕೇಂದ್ರಾಡಳಿತಕ್ಕೆ ಮತ್ತು ಹಳ್ಳಿಗೆ ಸಂಪರ್ಕವನ್ನು ಕಲ್ಪಿಸಲು ಗ್ರಾಮಸಭೆಯು ಮಾಧ್ಯಮವಾಗಿದ್ದರೂ ಅದು ಮುಖ್ಯವಾಗಿ ಜನರ ಪ್ರತಿನಿಧಿ. ರಾಜ್ಯಕ್ಕೆ ಸಲ್ಲಬೇಕಾದ ತೆರಿಗೆಗಳ ವಸೂಲಿಯಲ್ಲಿ, ರಾಜನಿಗೆ ಸೈನಿಕರನ್ನು ಒದಗಿಸುವುದರಲ್ಲಿ ಗ್ರಾಮಸಭೆಯು ಸಹಾಯವನ್ನು ಮಾಡುತ್ತಿದ್ದಿತು. ಗ್ರಾಮದ ವಿವಾದಗಳನ್ನು ಪರಿಹರಿಸಿ ಗ್ರಾಮದ ಅಭಿವೃದ್ಧಿಗಾಗಿ ಸದಾ ಶ್ರಮಿಸುತ್ತಿದ್ದಿತು. ಹೀಗೆ ಗ್ರಾಮಸಭೆಯು ಆಧುನಿಕ ಕಾಲದ ಕಲೆಕ್ಟರ್, ಮ್ಯಾಜಿಸ್ಟ್ರೇಟ್ ಮತ್ತು ಮುನಿಸಿಪಾಲಿಟಿಗಳ ಕರ್ತವ್ಯವನ್ನು ಪರಿಪಾಲಿಸುತ್ತಿದ್ದಿತು.[270] ಈ ಗ್ರಾಮಸಭೆಗಳು ಜನತೆಯವಾದ್ದರಿಂದ ಅವು ಸ್ವರೂಪತಃ ಸಮಾಜವಾದಿ ಸಂಸ್ಥೆಗಳಾಗಿದ್ದು (socialistic in character) ಶುದ್ಧ ಪ್ರಜಾಪ್ರಭುತ್ವದ ತತ್ವಗಳನ್ನು ಅಳವಡಿಸಿಕೊಂಡಿದ್ದುವು.[271]

ಇಂತಹ ಗ್ರಾಮಸಭೆಗಳಿಂದ ರಾಜ್ಯಾಡಳಿತವು ತನ್ನಷ್ಟಕ್ಕೆ ತಾನು ಯಾವ ತೊಂದರೆಯೂ ಇಲ್ಲದೆ ಜರುಗುತ್ತಿದ್ದಿತೆಂದು ಕಾಣುತ್ತದೆ. ಆಂಗ್ಲರು ನಮ್ಮ ದೇಶದ ಪರಿಚಯವನ್ನು ಪಡೆದುಕೊಂಡಾಗ ಅವರ ಮನಸ್ಸನ್ನು ಆಕರ್ಷಿಸಿದ್ದು ಈ ನಮ್ಮ ಗ್ರಾಮಸಭೆಗಳು. ಅವರಿಗೆ, ಕರ್ನಲ್ ವಿಲ್ಕ್ಸನ ಮಾತಿನಲ್ಲಿ ಹೇಳುವುದಾದರೆ, "ಒಂದೊಂದು ಹಳ್ಳಿಯೂ, ಈಗಲೂ ಮತ್ತು ಹಿಂದಿನಿಂದಲೂ, ಒಂದು ಪ್ರತ್ಯೇಕ ಗುಂಪಿನಂತೆ ಅಥವಾ ಒಂದು ಗಣರಾಜ್ಯದಂತೆ ಇದೆ"[272] ಎಂಬ ಭಾವನೆ ಬಂದಿದ್ದರೆ ಆಶ್ಚರ್ಯವೇನಿಲ್ಲ. ಇತ್ತೀಚಿನವರೆಗೆ ಒಂದೊಂದು ಹಳ್ಳಿ ಯಲ್ಲಿಯೂ ಇದ್ದ ಗ್ರಾಮಸಭೆಗಳಲ್ಲಿ ಪ್ರಾಚೀನ ಸಂಸ್ಥೆಯ ರೂಪುರೇಷೆಗಳನ್ನು ಕಾಣಬಹುದಾಗಿದ್ದಿತು.

---

268 SII. IX. i. 39, C. 970 A.D.
269 SII. IX. i. 41 (11 ನೇ ಶತಮಾನ).
270 Majumdar : Corporate life in Ancient India, pp. 153-4.
271 V. R. R. Dixitar : Hindu Administrative Institutions, p. 328.
272 Quoted by Appadorai in his "Economic Conditions in Southern India", p. 266.

# XIII

# ಆರ್ಥಿಕ ವ್ಯವಸ್ಥೆ

ಪ್ರಾಚೀನ ಕರ್ನಾಟಕದ ಆರ್ಥಿಕ ವ್ಯವಸ್ಥೆಯನ್ನರಿಯಲು ಶಾಸನಗಳು ವಿಪುಲವಾದ ಸಾಮಗ್ರಿಯನ್ನು ಒದಗಿಸುತ್ತವೆ. ಶಾಸನಗಳನ್ನು ಆಳವಾಗಿ ಅಭ್ಯಸಿಸುವವರಿಗೆ ಆ ಆರ್ಥಿಕ ವ್ಯವಸ್ಥೆಯ ಒಂದು ಸಮಗ್ರಚಿತ್ರವನ್ನು ರೂಪಿಸಿಕೊಳ್ಳುವುದು ಕಷ್ಟವಾಗಲಾರದು (ಆ ಚಿತ್ರದಲ್ಲಿ ಒಂದೆರಡು ಭಾಗಗಳನ್ನು ನಾವೇ ಕಲ್ಪಿಸಿಕೊಳ್ಳಬೇಕಾಗಿ ಬರಬಹುದು). ಆ ಸಮಗ್ರಚಿತ್ರವು ದೊರೆಯಬೇಕಾದರೆ ಆರ್ಥಿಕವ್ಯವಸ್ಥೆಯ ದೃಷ್ಟಿಯಿಂದಲೇ ಶಾಸನಗಳನ್ನು ಅಧ್ಯಯನಮಾಡಬೇಕು. ಆದರೆ ನಮ್ಮ ಈ ಅಧ್ಯಯನದಲ್ಲಿ ಎರಡು ಸಣ್ಣ ಕೊರತೆಗಳಿವೆ. ಒಂದು–ಪ್ರಾಚೀನ ಕರ್ನಾಟಕದ ಸಂಸ್ಕೃತಿಯ ಹಲವಾರು ಮುಖಗಳನ್ನು ದರ್ಶಿಸಹೊರಟ ನಮ್ಮ ಅಧ್ಯಯನವು ಆರ್ಥಿಕವ್ಯವಸ್ಥೆಯನ್ನರಿಯುವುದಕ್ಕಾಗಿ ಎಷ್ಟು ಆಳಕ್ಕೆ ಹೋಗಬಹುದೋ ಅಷ್ಟು ಆಳಕ್ಕೆ ಹೋಗಿಲ್ಲ, ಹೋಗಲು ಸಾಧ್ಯವೂ ಇಲ್ಲ. ಎರಡು–ನಮ್ಮ ಅಧ್ಯಯನವು ಕ್ರಿ. ಶ. 1150ನ್ನು ಈಚಿನ ಗಡಿಯನ್ನಾಗಿ ಮಾಡಿಕೊಂಡಿದೆ. ಆರ್ಥಿಕವ್ಯವಸ್ಥೆಯನ್ನರಿಯಲು ಬಯಸುವವರಿಗೆ ಕ್ರಿ. ಶ. 1150ರ ಈಚಿನ ಶಾಸನಗಳಲ್ಲಿ ವಿಪುಲ ಸಾಮಗ್ರಿಯು ದೊರೆಯುತ್ತದೆ. ಹೀಗಾಗಿ ಪ್ರಾಚೀನ ಕರ್ನಾಟಕದ ಆರ್ಥಿಕವ್ಯವಸ್ಥೆಯ ಒಂದು ಸ್ಥೂಲ ಚಿತ್ರದಿಂದಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ.

ಆರ್ಥಿಕವ್ಯವಸ್ಥೆಯನ್ನು ಕುರಿತು ಹೊರಟ ಅಧ್ಯಯನದ ಇನ್ನೊಂದು ಕೊರತೆಯನ್ನು ಇಲ್ಲಿ ಹೆಸರಿಸಬಹುದು. ಈಗಿನ 'ರೆವಿನ್ಯೂ' ಸಂಬಂಧದ ಅನೇಕ ಪಾರಿಭಾಷಿಕ ಪದಗಳು ಇತರರಿಗೆ ಹೇಗೆ ಅರ್ಥವಾಗುವುದಿಲ್ಲವೋ ಹಾಗೆ ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಬರುವ ಅನೇಕ ತೆರಿಗೆಗಳ ಪಾರಿಭಾಷಿಕ ಪದಗಳೂ ಸದ್ಯಕ್ಕೆ ಅರ್ಥವಾಗದೆ ಸಮಸ್ಯೆಗಳಾಗಿ ಉಳಿದಿವೆ. ಈ ಕಷ್ಟವನ್ನು ಕರ್ನಾಟಕದ ವಿದ್ವಾಂಸರು ಮಾತ್ರವಲ್ಲ, ಇತರ ಪ್ರಾಂತಗಳ ವಿದ್ವಾಂಸರೂ ಅನಿವಾರ್ಯವಾಗಿ ಎದುರಿಸಬೇಕಾಗಿದೆ.

ಈ ಅಧ್ಯಾಯವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. (1) ಉತ್ಪಾದನೆ, (2) ವ್ಯಾಪಾರ, (3) ರಾಜ್ಯದ ಆಯವ್ಯಯ. ಮೊದಲ 'ಉತ್ಪಾದನೆ' ಎಂಬ ವಿಭಾಗದಲ್ಲಿ ವ್ಯವಸಾಯ, ಕೈಗಾರಿಕೆಗಳನ್ನೂ ಎರಡನೆಯ 'ವ್ಯಾಪಾರ' ಎಂಬ ವಿಭಾಗದಲ್ಲಿ ಉತ್ಪಾದನೆಯಾದ ಸಾಮಗ್ರಿಗಳ ವಿನಿಮಯವನ್ನೂ, ಮೂರನೆಯ 'ರಾಜ್ಯದ ಆಯವ್ಯಯ' ಎಂಬ ವಿಭಾಗದಲ್ಲಿ ಕೇಂದ್ರ ಸರಕಾರಕ್ಕೆ ತೆರಿಗೆ ಇತ್ಯಾದಿಗಳ ಮೂಲಕ ಬರುತ್ತಿದ್ದ ಆದಾಯ, ಅದನ್ನು ಪ್ರಜೆಗಳಿಗಾಗಿ ಸರಕಾರವು ವಿತರಣೆಮಾಡುತ್ತಿದ್ದ ರೀತಿ—ಇವುಗಳನ್ನು ಚರ್ಚಿಸಲಾಗಿದೆ.

## ಉತ್ಪಾದನೆ

### ವ್ಯವಸಾಯ

ಇಂದಿನಂತೆಯೇ ಪ್ರಾಚೀನ ಕರ್ನಾಟಕದಲ್ಲಿಯೂ ವ್ಯವಸಾಯವೇ ಅತಿ ಪ್ರಮುಖವಾದ ಜೀವನೋಪಾಯವಾಗಿತ್ತು.[1] ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿ

[1] ವ್ಯವಸಾಯದ ಜೊತೆಗೆ ಇನ್ನೆರಡು ಉದ್ಯಮಗಳನ್ನು ಹೆಸರಿಸಬಹುದು. ಒಂದು ಕುರಿಸಾಕಣೆ, ಮತ್ತೊಂದು ಪಶುಪಾಲನೆ. ಕುರಿಸಾಕಣೆಯ ವಿಷಯವು ಹೆಚ್ಚಾಗಿ ಶಾಸನಗಳಲ್ಲಿ ಬರುವುದಿಲ್ಲ. ಒಂದು ಶಾಸನದಲ್ಲಿ ಮಾತ್ರ ಕುರಿಸಾಕಣೆಯ ವಿಷಯವೂ ಕುರಿಗಳು ತೋಳಗಳಿಗೆ ಬಲಿಯಾಗುತ್ತಿದ್ದ ವಿಷಯವೂ ಬಂದಿದೆ (EC. VIII. Sb. 175, 1156 A.D.)

ಯೆಂದೂ, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದೂ ಶಾಸನವೊಂದು ಕರೆದಿದೆ ("ಅನ್ನದಾನ ಸಂಪೂರ್ಣರುಂ ಭೂಮಿ ಪುತ್ರಕರುಮಪ್ಪ ಚಂದಗೌಡ").[2] ರೈತರನ್ನು 'ಒಕ್ಕಲ ಮಕ್ಕಳೆಂ'ದೂ ಶಾಸನಗಳು ಕರೆದಿವೆ.[3] ದಾನವನ್ನು ಕೆಡಿಸಿದವನಿಗೆ ಒದಗಬಹುದಾದ ಮಹಾಪಾತಕಗಳಲ್ಲಿ ಅವನ ಭೂಮಿಯು ಬೆಳೆಯದಿರುವುದೂ ಒಂದು—"ಇದಾನ್ ಕೊಳೆ ಈರೆಪ್ಪಿತ್ತಱಳುಂ[4] ಒಕ್ಕಲ್ತನಂ ಕೆಯ್ವೊನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ. ಇದಾನ್ ಕಾದು ಸಲ್ವೊನ್ ಪರಮ ಕಲ್ಯಾಣ ತೀರ್ಥಂಗಳ್ ಆಪ್ಪಾರ್. ನೆಲನುಂ ವೆಳೆಗೆ. ಪಾರ್ವರುಂ ಪ್ರಜೆಯುಂ ತಣಿಗೆ."[5] ರೈತನು ಬೆಳೆದರೆ ಲೋಕವು ಬದುಕುತ್ತದೆ ಎಂಬ ಧ್ವನಿಯು ಈ ಮಾತುಗಳಲ್ಲಿರುವುದನ್ನು ಗುರುತಿಸಬಹುದು. ದಾನವಾಗಿ ಕೊಡುವ ವಸ್ತುಗಳಲ್ಲಿ ಭೂಮಿಯು ಬಹು ಶ್ರೇಷ್ಠವಾದ ವಸ್ತುವೆಂದು ಭಾವಿಸಿದ್ದರು. ದತ್ತಿಗಳನ್ನು ಹೇಳುವ ದಾನ ಶಾಸನಗಳಲ್ಲಿ ಭೂದಾನವನ್ನು ಹೇಳುವ ಶಾಸನಗಳೇ ಹೆಚ್ಚು.

ಸಾಗುವಳಿಯ ಜಮೀನನ್ನು ದೇವಮಾತೃಕ ಮತ್ತು ನದೀಮಾತೃಕಗಳೆಂದು[6] ಸ್ಥೂಲವಾಗಿ ವಿಂಗಡಿಸಬಹುದು. ಕೇವಲ ಮಳೆಯ ನೀರನ್ನೇ ಆಶ್ರಯಿಸಿ ಬೆಳೆಯುವ ಹೊಲಗಳು ದೇವಮಾತೃಕಗಳು. ನದಿ ಕೆರೆ ಮುಂತಾದುವುಗಳನ್ನು ಆಶ್ರಯಿಸಿರುವ ಹೊಲಗಳು ನದೀ ಮಾತೃಕಗಳು. ಈ ವಿಭಜನೆಯನ್ನೇ ಕನ್ನಡ ಶಾಸನಗಳಲ್ಲಿ "ಬೆಟ್ದಲೆ" (=ಬೆದ್ದಲೆ), ಮತ್ತು 'ಗಟ್ದೆ' (=ಗದ್ದೆ)ಗಳೆಂದು ಕರೆದಿರುವುದು. 'ಬೆದೆ ಮಣ್'[7] ಬೆರ್ದಲೆ[8] ಎನ್ನುವ ಪದಗಳೂ ಬೆದ್ದಲೆ ಭೂಮಿಯನ್ನೇ ಸೂಚಿಸುತ್ತವೆ. 'ನೀರ್ಮಣ್ಣು'[9] ಎಂಬುದು ಗದ್ದೆಯನ್ನು ಸೂಚಿಸುತ್ತದೆ. 'ಬೆದೆಗಟ್ದೆ'[10], 'ಬೆದನ್ನೆಲ್ಮಣ್'[11] (ಬೆದೆ+ನೆಲ್+ಮಣ್. ನೆಲ್=ಬತ್ತ)—ಇವು ಮತ್ತೊಂದು ರೀತಿಯ ಜಮೀನುಗಳನ್ನು ಸೂಚಿಸುತ್ತವೆ. ಇವು ಬೆದ್ದಲೆ ಭೂಮಿಗಳಾದರೂ, ಹೊಲದಲ್ಲಿಯೇ ನೀರು ನಿಲ್ಲುವಂತೆ ಕಟ್ಟೆಯನ್ನು ಕಟ್ಟಿ, ಮಳೆಯ ನೀರನ್ನು ಸಂಗ್ರಹಿಸಿ ಬತ್ತವನ್ನು ಬೆಳೆಯಬಹುದಾದ ತಾತ್ಕಾಲಿಕ ಗದ್ದೆಗಳು. ಕಟ್ಟೆಯಿದ್ದರೆ ಅವು ಗದ್ದೆಗಳು ; ಕಟ್ಟೆಯೊಡೆದರೆ ಬೆದ್ದಲುಭೂಮಿಗಳು.[12]

ಮೇಲಿನದು ನೀರಿನ ಆಸರೆ ಮತ್ತು ಬೆಳೆಯುವ ಬೆಳೆಗಳನ್ನು ಆಶ್ರಯಿಸಿ ಮಾಡಿದ ವಿಭಾಗ. ಮಣ್ಣಿನ ಗುಣವನ್ನು ಆಶ್ರಯಿಸಿ ಹೊಲಗಳನ್ನು 'ಎರೆ'[13] ಅಥವಾ 'ಕರಿಯಕೆಯಿ'[14] (=ಕರಿಯ ಮಣ್ಣಿನ ಭೂಮಿ),

---

ಕುರಿಸಾಕಣೆಯಂತೆ ಪಶುಪಾಲನೆಯೂ ಒಂದು ಸ್ವತಂತ್ರವೃತ್ತಿಯೆಂದು ಕರೆಯಿಸಿಕೊಂಡಿರಲಿಲ್ಲವೆಂದು ಕಾಣುತ್ತದೆ. ವ್ಯವಸಾಯದಂತಹ ವೃತ್ತಿಯ ಜೊತೆಗೆ ಆವೆರಡು ವೃತ್ತಿಗಳನ್ನೂ ಇಟ್ಟುಕೊಂಡಿದ್ದರೆಂದು ಊಹಿಸಬಹುದು.

2 EC. VI. Kd. 28, 1153 A.D.

3 BKI. I. ii. 138, 1093 A.D. ; BKI. I. ii. 156, 1105 A.D.

4 ಈರೆಪ್ಪಿತ್ತಱಳುಂ=ನೂರನಲ್ವತ್ತರಲ್ಲಿ. ಎಂದರೆ ನಾಗರಖಂಡ ಎಪ್ಪತ್ತು ಮತ್ತು ಜೆಡುಗೂರ್ ಎಪ್ಪತ್ತು ಎಂಬ ಪ್ರದೇಶಗಳಲ್ಲಿ.

5 IA. XIX. p. 144, C. 685 A.D. ; EC. VII. Sk. 154, C. 685 A.D.

6 ಅಜಿತಪುರಾಣ(1.22)ದಲ್ಲಿ "ದೇವಮಾತೃಕ"ವನ್ನು ಮಾತ್ರ ಹೆಸರಿಸಿದೆ.

7 MAR (1932). p. 240, C. 825 A.D.

8 EC. II. 384, C. 1135 A.D.

9 SII. IX. i. 61, 931–2 A.D. ; EC. IV. Hg. 16, 1021 A.D.

10 EC. IV. Hg. 16, 1021 A.D. ; SII. IX. i. 112, 1053 A.D.

11 MAR (1932). p. 240, C. 825 A.D.

12 ಈಗಲೂ ದಾವಣಗೆರೆಯ ಕಡೆ ಇಂತಹ ಭೂಮಿಗಳಲ್ಲಿ ಬೆಳೆಯುವ ಬತ್ತವನ್ನು 'ಬೆದ್ದಲು ಬತ್ತ' ವೆಂದು ಕರೆಯುತ್ತಾರೆ.

13 SII. IX. i. 61, 931-2 A.D.

14 SII. IX. i. 233, 1139 A.D.

'ಕಿಸುಕಾಡು'[15] ಅಥವಾ 'ಕೆಂಗಾಡು' (=ಕೆಂಗಲು ಅಥವಾ ಕೆಂಪುಮಣ್ಣಿನ ಭೂಮಿ),[16] 'ಮಳಲಕೆಯಿ'[17] (=ಮರಳು ಭೂಮಿ), 'ಹೊಂಗೆ'[18] (=?), 'ಹರಳಕೆಯಿ'[19] (ಕಲ್ಲು ಹರಳುಗಳಿರುವ ಭೂಮಿ ಅಥವಾ ಕಲ್‌ಜರುಗು ಭೂಮಿ)—ಎಂದು ಮುಂತಾಗಿಯೂ ವಿಭಾಗಮಾಡಬಹುದು. 'ಮೊಗೆ' ಎಂಬ ಇನ್ನೊಂದು ಜಾತಿಯ[19.1] ಮಣ್ಣಿನ ಭೂಮಿಯ ಹೆಸರೂ ಶಾಸನದಲ್ಲಿದೆ. (ಮೊಗೆ=yellowish soil. ಹಲಾಯುಧ ಕನ್ನಡ ಟೀಕೆ).

ಪ್ರಾಚೀನ ಕರ್ನಾಟಕದಲ್ಲಿ ಬೆಳೆಯುತ್ತಿದ್ದ ಬೆಳೆಗಳನ್ನೇ ಬಹುಶಃ ಈಗಲೂ ಬೆಳೆಯುತ್ತಿದ್ದಾರೆ. ಗದ್ದೆಗಳಲ್ಲಿ ಮುಖ್ಯವಾಗಿ ಬತ್ತ ಮತ್ತು ಕಬ್ಬುಗಳನ್ನು ಬೆಳೆಯುತ್ತಿದ್ದರು (ಕಬ್ಬಿನ ಗದ್ದೆಗಳಿಗೆ ಆನೆಗಳು ನುಗ್ಗಿ ಹಾಳುಮಾಡುತ್ತಿದ್ದುದರ ಸೂಚನೆ ಒಂದು ಶಾಸನದಲ್ಲಿದೆ.)[20] ಕೆರೆಯ ನೀರಿನ ಆಶ್ರಯದಿಂದಲೂ ಬಾವಿಯ ನೀರಿನ ಆಶ್ರಯದಿಂದಲೂ ಬದುಕುತ್ತಿದ್ದ ತೋಟಗಳಲ್ಲಿ ತೆಂಗು, ವೀಳೆಯದೆಲೆ, ಅಡಕೆ, ಬಾಳೆ ('ಮಯಿಂದವಾಳೆ' ಎಂಬ ಒಂದು ಜಾತಿಯ ಬಾಳೆಯ ಹೆಸರು ಒಂದು ಶಾಸನದಲ್ಲಿದೆ[21]), ಮುಂತಾದುವನ್ನು ಬೆಳೆಯುತ್ತಿದ್ದರು. ಮಾವು, ಹಲಸು, ಈಳೆ, ನಿಂಬೆ, ಮಾದುಪಲ ಮುಂತಾದ ಹಣ್ಣುಗಳನ್ನೂ, ಪಾದರಿ, ಗೊಜ್ಜಗೆ[22] (=ಸೇವಂತಿ), ಸಂಪಗೆ, ಸುರಯಿ, ಜಾದಿ, ಅದಿರ್ಮುತ್ತೆ[23] (ಸಂ. ಅತಿಮುಕ್ತಾ?) ಮುಂತಾದ ಹೂವುಗಳನ್ನೂ ದವನ ಮರುಗಗಳನ್ನೂ ಬೆಳೆಯುತ್ತಿದ್ದರು. ಒಂದೊಂದು ಊರಿನ ಹೊರಭಾಗದಲ್ಲಿಯೂ "ಪುಷ್ಪವಾಟಿ"ಗಳಿದ್ದವೆಂದು ಶಾಸನಗಳು ಬಣ್ಣಿಸುತ್ತವೆ. ಅವುಗಳ ವರ್ಣನೆಯನ್ನು ನೋಡಿದರೆ ಅವು ಸಾರ್ವಜನಿಕರ ವಿಹಾರೋದ್ಯಾನಗಳೆಂಬ ಭಾವನೆಯು ಬರುತ್ತದೆ. ಇಂತಹ ಉದ್ಯಾನವೊಂದನ್ನು ಕಟ್ಟಿಸಿ ಸಾರ್ವಜನಿಕರಿಗಾಗಿ ಬಿಟ್ಟುಕೊಟ್ಟ ವಿಷಯವು ಒಂದು ಶಾಸನದಲ್ಲಿರುವಂತಿದೆ ("ಸ್ವಸ್ತಿ ಶ್ರೀ ಉರಾ ಅಯ್ಯದೇವಪರ ವಿಟ್ಟ ತೊಡಿಕೆ ಅಱವಿಟ್ಟೋರ್").[24] ದೇವಸ್ಥಾನಗಳ ಪಕ್ಕದಲ್ಲಿ ಅವುಗಳಿಗೆ ಮೀಸಲಾದ ಹೂದೋಟ

---

15 SII. IX. i. 60, 931 A.D.

16 SII. IX. i. 196, 1118 A.D.

17 ಅದೇ.

18 "ಯರೆಯ ಮತ್ತರು 4 ಹೊಂಗೆ 4 ಕೆಂಗಾಡು 4 ಅಂತು ಮತ್ತರು 12" (SII. IX. i. 143, 1079 A.D.) ಇಲ್ಲಿ 'ಹೊಂಗೆ' ಎಂದರೆ ಒಂದು ರೀತಿಯ ಹೊಲವೆಂಬುದು ಸ್ಪಷ್ಟ. 'ಹೊಂಗೆಮರಗಳಿರುವ ಭೂಮಿ' ಎಂದು ಅರ್ಥ ಮಾಡಲು ಸಾಧ್ಯವೂ ಏನೋ. ಗದ್ದೆಗಳಿಗೆ ಹೊಂಗೆಯ ಸೊಪ್ಪನ್ನು ಗೊಬ್ಬರವಾಗಿ ಬಳಸುವುದುಂಟು. ಬಹುಶಃ 'ಹೊಂಗೆ' ಎಂಬುದು ಅಂತಹ ಮರಗಳ ತೋಪನ್ನು ಸೂಚಿಸಬಹುದು.

19 KI. I. i. 25, 1186 A.D.— "ಎರೆಯ ಮತ್ತರಿಗೆ ಹಣವೊಂದು ಹರಳ ಮತ್ತರಿಂಗೆ ಅಡ್ಡವಂ ಮಾಡಿತಕ್ಕೆ ನೋಡಿಕೊಂಡು."

19.1 "ಮದ್ದಳೆಕಾಱರಿರ್ವರ್ಗೆ ಎರೆ ಮತ್ತರ 27 ಮೊಗೆ ಮತ್ತ 20 ಹಾಡುವ ನೊಱರಿಗಂ ಬೀಹಳಿಯಿರ್ವರ್ಗಂ ಎರೆ ಮತ್ತ 16 ಮೊಗೆ ಮತ್ತರು 12 ಪಾ. [ಱ]ಗ್ಗೆರೆಯ ಮತ್ತರು 12 ಮೊಗೆಯ ಮತ್ತ 11 ಪಾತ್ರ ನಾಲ್ವರ್ಗಂ ಎರೆಯ ಮತ್ತ 32 ಮೊಗೆ ಮತ್ತ 30 ಕಂಭದ ನಾಲ್ವರ್ಗಂ ಎರೆ ಮತ್ತರು 12 ಮೊಗೆ ಮತ್ತರು 10 ಸೂಳೆವಳಂಗೆ ಮತ್ತರು 4 ಮೊಗೆಯ ಮತ್ತರು 5 ಭಟ್ಟವೃತ್ತಿ ನ್ಯಾಸದೆರೆ ಮತ್ತರು 15 ಪರಳ್ಮತ್ತರು 10 ಪ್ರಭಾಕರದೆರೆ ಮತ್ತ 20 ಪರಳ್ಮತ್ತ 10........"

20 EC. VIII. Sb. 175, 1156 A.D.

21 "ಪಣ್ತು ತಣ್ಮಲೆವ ಮಯಿಂದವಾಳೆ" (BKI. I. ii. 152, 1103 A.D.).

22 BKI. I. ii. 152, 1103 A.D. ಗೊಜ್ಜಗೆ ಕಪ್ಪನೆಯ ಹೂವು ಎಂದು ಪಂಪನ ವರ್ಣನೆ. (ಆದಿಪುರಾಣ, 11. 105).

23 EC. VIII. Sa. 109, 1042 A.D. ಪಂಪ ಈ ಹೂವನ್ನು ಹೆಸರಿಸಿದ್ದಾನೆ (ಆದಿಪುರಾಣ, 11.105).

24 MAR (1934). p. 170, C. 900 A.D. ಈಗಲೂ ಬಳಕೆಯಲ್ಲಿರುವ 'ತೋಟ ತುಡಿಕೆ'ಎಂಬಲ್ಲಿ ತುಡಿಕೆ ಎಂದರೆ ಹೂದೋಟವೆಂದು ಅರ್ಥ.

ಗಳಿರುತ್ತಿದ್ದುವು. ಆ ಹೂದೋಟಗಳನ್ನು ಮಾಡುವವರು ದೇವಸ್ಥಾನಕ್ಕೆ ಇಷ್ಟು ಹೂಗಳನ್ನು ಕೊಡಬೇಕೆಂಬ ನಿಯಮವಿರುತ್ತಿತ್ತು. ಉದಾಹರಣೆಗೆ ಜೀರಗೆ ಹಳ್ಳ ಎಂಬ ಹಳ್ಳದ ದಡದಲ್ಲಿದ್ದ ಒಂದು ಹೂದೋಟವು ನಾಗೇಶ್ವರ ದೇವರಿಗೆ ಸೇರಿದ್ದಿತು. ಆ ತೋಟವನ್ನು ಮಾಡುವ ಮಾಲೆಗಾರನು ದೇವರಿಗೆ ಇಪ್ಪತ್ತು ಕಣಿಗಿಲೆಯ ಗಿಡಗಳ ಹೂಗಳನ್ನೂ, ಉಳಿದ ಗಿಡಗಳಲ್ಲಿ ಐದೈದು ಹೂಗಳನ್ನೂ, ದವನ ಮತ್ತು ಮರುಗಗಳ ಒಂದೊಂದು ಮಡಿಯಲ್ಲಿ ಐದನ್ನೂ ಕೊಡಬೇಕೆಂಬ ನಿಯಮವನ್ನು ಹಾಕಲಾಗಿದ್ದಿತು.[25] ಊರಿನ ಎಲ್ಲ ತೋಟಗಳ ರಕ್ಷಣೆಯನ್ನು ನೋಡಿಕೊಳ್ಳಲು "ತೋಟಿಗ"[26] ಎಂಬ ಕಾವಲಿನವನನ್ನು ನೇಮಿಸಿಕೊಳ್ಳುತ್ತಿದ್ದರು. 'ತೋಟಿಗ ಸಮಯ' ಎನ್ನುವುದು ಆ ತೋಟಿಗನ ಜೀವನಕ್ಕಾಗಿ ಬೇರೆ ಬೇರೆ ತೋಟಗಳವರು ಕೊಡುತ್ತಿದ್ದ ಹಣ ಅಥವಾ ಧಾನ್ಯವನ್ನು ಸೂಚಿಸುತ್ತದೆ.

ಬೆದ್ದಲು ಭೂಮಿಗಳಲ್ಲಿ ಜೋಳ, ಬೇಳೆಗಳು, ಹತ್ತಿ, ಹರಳು, ಸಾಸುವೆ, ಕೊತ್ತುಂಬರಿ, ಸಜ್ಜೆ, ಗೋಧಿ ಮುಂತಾದುವನ್ನು ಬೆಳೆಯುತ್ತಿದ್ದರು. ಇವೆಲ್ಲವೂ ಹೊಲದ ಬೆಳಸುಗಳಾದರೆ ದೊಡ್ಡ ಕೋಡಿನ ಆನೆಗಳು ಅಡವಿಯ ಬೆಳಸುಗಳೆಂದು ಒಂದು ಶಾಸನವು ಹೇಳುತ್ತದೆ ("ಅಡವಿಯ ಬೆಳಸು ಪಿರಿದು ಕೋಡಾನೆಗಳ್").[27] 'ಕಾಡಕ್ಕಿ'-ಎಂಬ ಒಂದು ಧಾನ್ಯದ ಹೆಸರು ಒಂದು ಕಡೆ ಇದೆ.[28] ಇದು ಯಾವ ಧಾನ್ಯವನ್ನು ಸೂಚಿಸುವುದೋ ತಿಳಿಯದು.

## ನೀರಾವರಿ

ನೀರಾವರಿಯು ಮುಖ್ಯವಾಗಿ ನದಿ, ಬಾವಿ, ಕೆರೆಗಳನ್ನು ಅವಲಂಬಿಸಿದ್ದಿತು. ರಾಜರು, ಶ್ರೀಮಂತರು ಮತ್ತು ಗ್ರಾಮಸಂಸ್ಥೆಗಳು ಕೆರೆ, ಬಾವಿಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದರು. ಕಟ್ಟಿಸಿದ ಕೆರೆ ಬಾವಿಗಳನ್ನು ಯಾರೇ ಆಗಲಿ ನಾಶಪಡಿಸುವುದು ಅತ್ಯಂತ ಪಾಪಕರವೆಂಬ ಭಾವನೆಯಿದ್ದಿತು.[29] ನದಿಗಳಲ್ಲಿ ಗೋದಾವರಿ,[30] ಕೃಷ್ಣಾ,[31] ತುಂಗಭದ್ರೆ,[32] ಭೀಮಾ,[33] ಕಾವೇರಿ,[34] ಕಪಿಲಾ ("ಕಪಿಳೆಯ ಹೊಳೆ"),[35]

---

[25] BKI. I. i. 108, 1069 A.D.

[26] BKI. I. i. 52, 1007 A.D.

[27] EC. VIII. Sa. 109 (bis), 1042 A.D. ಹೋಲಿಸಿ : "ಲಳಿತ ವಿಚಿತ್ರ ಪತ್ರ ಫಲ ಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು ದೇವಮಾತೃಕವೆನಿಪ್ಪ ಪೊಲಂ ನವಗಂಧಶಾಳಿಯುಂ ಬೆಳೆವುದು....ನಾಡಕಾಡ ಬೆಳಸಿಂ [ಸೀ]-ಬೆಳಸಾ ವಿಷಯಾಂತರಾಳದೊಳ್"—ಪಂಪಭಾರತ, 1·54.

[28] EC. IV. Kp. 78, C. 1130 A.D.

[29] EC. III. Sr. 134, C. 910 A.D.

[30] BKI. I. i. 76.

[31] ಶಾಸನಗಳಲ್ಲಿ ಬರುವ ಪೆಜತ್ತೊರೆ ಎಂಬುದು ಕೃಷ್ಣೆಯನ್ನೂ, ಕಿಱುದೊರೆ ಎಂಬುದು ತುಂಗಭದ್ರೆಯನ್ನೂ ಸೂಚಿಸುವುದೆಂದು ಫ್ಲೀಟ್ ಅಭಿಪ್ರಾಯಪಡುತ್ತಾರೆ. (EI. VI. p. 259 ; EI. XII. p. 274.)

[32] ಬಾಳೆ ಹೊನ್ನೂರಿನ ಬಳಿ ಭದ್ರಾನದಿಯ ಪಕ್ಕದ ಬಂಡೆಯ ಮೇಲಿನ ಒಂದು ಶಾಸನವಲ್ಲಿ ಭದ್ರಾನದಿಯನ್ನು 'ತುಂಗಾ' ಎಂದು ಕರೆದಿದೆ. (EC. VI. Kp. 1, C. 1070 A.D.)

[33] JA. XIX. p. 272, 1054 A.D.

[34] EC. VII. Sh. 4, 1122 A. D.

[35] EC. IV Ng. 56, C. 1071 A.D.

ವರದಾ,[36] ಪೆಣ್ಣೆ[37] (ಬಹುಶಃ ಪೆನ್ನಾರ್), ಕರ್ಣೇಸಕ[38] (?), ಪಗರೆ (=ಹಗರಿ)[39]—ಈ ನದಿಗಳ ಹೆಸರಿವೆ. ಇವುಗಳಲ್ಲಿ ವರದೆಗೆ ಒಂದು ಮಹಾ ಸೇತುವಿದ್ದಿತು. ಕರ್ಣೇಸಕಕ್ಕೂ ಒಂದು ಸೇತುಬಂಧವಿದ್ದಿತು. ಸೇತುಬಂಧವೆಂದರೆ ಅಡ್ಡಕಟ್ಟೆ ಎಂದರ್ಥ.[40] ("ಸೇತು=ಜಲಪ್ರವಾಹಬಂಧಃ":—ಸೇತು ಎಂದರೆ ಅಡ್ಡಕಟ್ಟೆ ಎಂದು ವಿಜ್ಞಾನೇಶ್ವರನು ಅರ್ಥೈಸುತ್ತಾನೆ–ಯಾಜ್ಞವಲ್ಕ್ಯಸ್ಮೃತಿ, ಪು. 236). ಕಾವೇರಿ ನದಿಗೆ ತೂಬುಗಳೂ ಕಾಲುವೆಗಳೂ ಇದ್ದ ವಿಷಯವು ಶಾಸನವೊಂದರಲ್ಲಿದೆ.[41] ಕಾವೇರಿಯಲ್ಲಿ ಮಹಾಪೂರವು ಬಂದ ವಿಷಯವು ಒಂದೆರಡು ಶಾಸನಗಳಲ್ಲಿದೆ.[42] ತುಂಗಭದ್ರೆ, ಕೃಷ್ಣಾನದಿಗಳ ನೀರನ್ನು ವ್ಯವಸಾಯಕ್ಕೆ ಬಳಸಿಕೊಂಡದ್ದಕ್ಕೆ ಶಾಸನಾಧಾರಗಳಿಲ್ಲ. ಬೆಟ್ಟದಿಂದ ಹರಿದುಬರುವ ಸಣ್ಣ ಹೊಳೆಗಳನ್ನು ಕಾಲುವೆಗಳ ಮೂಲಕ ಹರಿಯಿಸಿಕೊಂಡು ಕಬ್ಬು, ಬತ್ತಗಳನ್ನು ಬೆಳೆಯುತ್ತಿದ್ದರು ("ಗಿರಿ ನಿರ್ಝರದಿಂ ಸಿಂಧುವ ಪರಿಕಾಲಿಂ ಬಳೆದ ಗಂಧಶಾಳಿಯ ವನದಿಂ ವರಪುಂಡ್ರೇಕ್ಷುವಾಟೋತ್ಕರದಿಂ ದ್ರೋಣಾಮುಖಾಖ್ಯೆವದು ಸೊಗಯಿಸುಗುಂ".[43] ಗುತ್ತಿಕಲು ಎಂಬುದೇ ಈ ಶಾಸನದಲ್ಲಿ ವರ್ಣಿತವಾಗಿರುವ ದ್ರೋಣಾಮುಖ).

ತೋಟಗಳಲ್ಲಿ ಬಾವಿಗಳಿರುತ್ತಿದ್ದುವು. ಬೆಳ್ಕಿಯರ ಎಱೆಗ ಎಂಬಾತನು ಸಿರಿಗುಪ್ಪೆಯಲ್ಲಿ 'ಮರಕಟ್ಟಿನ ಪಿಱಿಯ ಬಾವಿ' ಯನ್ನು ಕಟ್ಟಿಸಿದಂತೆ ಒಂದು ಶಾಸನವು ಹೇಳುತ್ತದೆ.[44] ಏತಗಳಿಂದ ಮತ್ತು 'ಘಟೀ ಯಂತ್ರ' ಗಳಿಂದ ತೋಟಕ್ಕೆ ನೀರು ಹಾಯಿಸುತ್ತಿದ್ದರು. ಘಟೀಯಂತ್ರದ ವರ್ಣನೆಯು ಒಂದು ಶಾಸನದಲ್ಲಿ ಬಂದಿದೆ.[45] ಮೇಲುಗಡೆ ಚಕ್ರವು ತಿರುಗುತ್ತಿರುತ್ತದೆ. ಯಂತ್ರಕ್ಕೆ ಎತ್ತುಗಳನ್ನು ಹೂಡಿರುತ್ತಾರೆ. ನೀರನ್ನು ಹೊತ್ತು ಮೇಲಕ್ಕೆ ಒಂದು ಸಾಲು ಕುಂಭಗಳು ಬರುತ್ತಿದ್ದರೆ, ನೀರನ್ನು ಸುರಿದು ಬರಿದಾದ ಕುಂಭಗಳ ಒಂದು ಸಾಲು ಕೆಳಕ್ಕೆ ಇಳಿಯುತ್ತಿರುತ್ತದೆ.

ಕೆರೆಗಳು ಪ್ರಾಚೀನ ಕರ್ನಾಟಕದ ನೀರಾವರಿ ಸಾಧನಗಳಲ್ಲಿ ಅತ್ಯಂತ ಪ್ರಮುಖವಾದುವು. ರಾಜರೂ, ಪೆರ್ಗ್ಗಡೆ ಮುಂತಾದ ಅಧಿಕಾರಿಗಳೂ, ಸನ್ಯಾಸಿಗಳೂ[46] ಕೆರೆಗಳನ್ನು ಕಟ್ಟಿಸಿದ ನಿದರ್ಶನಗಳಿವೆ. ಕಾಕುಸ್ಥವರ್ಮನು

[36] EC. VII. Sk. 117, 1118 A.D.

[37] EC. IX. Dg. 68, 517 A.D.

[38] EC. VI. Kd. 162, C. 450 A.D.

[39] SII. IX. i. 249, 1147 A.D.

[40] ನದಿಗಳನ್ನು ತೆಪ್ಪಗಳಲ್ಲಿ ದಾಟುವ ಸ್ಥಳವನ್ನು 'ಕಡಹು' (ಈಗಿನ 'ಕಡ') ಎಂದು ಕರೆಯುತ್ತಾರೆ. ಇರಾಳಿ ಎಂಬ ಹೊಳೆಯನ್ನು ದಾಟುವ ಕಡಹಿನ ಹೆಸರು ಒಂದು ಶಾಸನದಲ್ಲಿವೆ [EC. VI. Cm. 122, 1140 A.D.]. ಕಡಹುಗಳಲ್ಲಿ ಜನರನ್ನು ತೆಪ್ಪಗಳ ಮೂಲಕ ಸಾಗಿಸುವ ಅಂಬಿಗನಿಗೆ ಹೊಲವನ್ನು ಬಿಟ್ಟುಕೊಡುತ್ತಿದ್ದರು [SII. IX. i. 74, 981 A.D.].

[41] EC. IV. Yd. 25, C. 1060 A.D.

[42] EC. II. 73, 1118 A.D. ; EC. VII. Sh. 4, 1122 A.D. ಕಾವೇರಿಯು ಕಳಸಾಚಳದಲ್ಲಿ ಹುಟ್ಟುತ್ತದೆ ಎಂದು ಒಂದು ಶಾಸನವು ಭಾವಿಸಿದೆ. (SII. IX. i. 233).

[43] SII. IX. i. 226, 1132 A.D. 'ನಿಮ್ನಗಾತಟ ನಿಕಟವರ್ತಿಗಳಪ್ಪ ದ್ರೋಣಾಮುಖಂಗಳುಮಂ' (ಆದಿಪುರಾಣ, 8.63, ವ).

[44] BKI. I. ii. 134, 1087 A.D.

[45] EC. V. Hn. 130, 1147 A.D.—"ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ ಪುಂಗವ ಭ್ರಾಂತಿ ತಳ್ತೊಪ್ಪಿರೆ ತನ್ನುಗ್ರಾಸಿಯಿಂದುಜ್ಜಳಿಸಿ ಧರೆಗುರುಳ್ತಪ್ಪ ವಿದ್ವಿಟ್ಸಿರಂಗಳ್ ತರದಿಂ ಕುಂಭಂಗಳಂ ಪೋಲ್ತೆ । ಸೆಯೆ ನವ ಘಟೀಯಂತ್ರದಿಂ ವಿಷ್ಣು ಯುದ್ಧಾಜಿರವಾಪೀ ವೈರಿ ರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತವಿಪ್ಪಂ॥". ಇದನ್ನು "ಅರಘಟ್ಟ ಘಟೀಯಂತ್ರ"ವೆಂದೂ ಕರೆಯುತ್ತಿದ್ದರು (ಅಜಿತಪುರಾಣ, 4.55).

[46] EC. XII. Si. 9, 1072 A.D.

ಕಟ್ಟಿಸಿದ ತಟಾಕದ ವಿಷಯವು ತಾಳಗುಂದ ಶಾಸನದಲ್ಲಿದೆ ("ಸುಕೃತಿಭಿರವನೀಶ್ವರೈರಾತ್ಮನಿಶ್ರೇಯಸಂ ಪ್ರೇಪ್ಸುಭಿಸ್ಸ್ನಾತಕರ್ಣಾಭಿಶ್ಯ್ರದ್ಧಯಾಭ್ಯರ್ಚಿತೇ ಇದಮುರುಸಲಿಲೋಪಯೋಗಾಶ್ರಯಂ ಭೂಪತಿಃ ಕಾರಯಾಮಾಸಕಾಕುಸ್ಥವರ್ಮಾ ತಟಾಕಂ ಶುಭಂ").[47] ಕೆರೆಯ ತೂಬಿನಿಂದ ಹೊರಟ ನೀರು ಕಾಲುವೆಗಳಲ್ಲಿ('ಬಾಯ್ಕಾಲ್'[48] ಅಥವಾ 'ಕಾಲ್')[49] ಹರಿದು ಗದ್ದೆಗಳನ್ನು ಸೇರುತ್ತಿತ್ತು. ಒಂದು ಊರಿನ ಕೆರೆಯ ನೀರನ್ನು ಇನ್ನೊಂದು ಊರಿನ ಹೊಲಗಳಿಗೆ ಹರಿಸಬೇಕಾದರೆ ನಾಡಿನ ಎಲ್ಲ ಪ್ರಭುಗಾವುಂಡುಗಳ ಒಪ್ಪಿಗೆಯನ್ನು ಪಡೆಯಬೇಕಾಗಿದ್ದಿತು.[50] ಹಂಚಿಧರ್ಮಶೆಟ್ಟಿ ಎಂಬಾತನು ಎಲ್ಲೋ ಹರಿಯುತ್ತಿದ್ದ ಕಾಲುವೆಯನ್ನು ತಿದ್ದಿ ತನ್ನ ಊರಿನ ಬಳಿ ಹರಿಯುವಂತೆ ಮಾಡುತ್ತಾನೆ. ಶಾಸನವು ಅವನ ಧೈರ್ಯಸಾಹಸಗಳನ್ನು ಮೆಚ್ಚಿ ಹೊಗಳುತ್ತದೆ.[51]

ಕೆರೆಯನ್ನು ಯಾರೇ ಕಟ್ಟಿಸಲಿ, ಅದರ ಯೋಗಕ್ಷೇಮದ ಹೊಣೆಯನ್ನು ಆ ಊರಿನ ಜನರು ಹೊರುತ್ತಿದ್ದರು. ಚಾವುಂಡಯ್ಯ ಎನ್ನುವವನು ಮಾಡಿಸಿದ ಕೆರೆಗೆ ಬಿಟ್ಟ ಭೂಮಿಯನ್ನು ಆ ಊರಿನ ಮಹಾಜನರು ಪ್ರತಿಪಾಲಿಸುವರು ಎಂದು ಒಂದು ಶಾಸನದಲ್ಲಿ ಹೇಳಿದೆ.[52] ಇನ್ನೊಂದು ಊರಿನ ಬ್ರಾಹ್ಮಣರು ತಮ್ಮ ಊರಿನ ವಿವಾಹ, ಉಪನಯನ ಮುಂತಾದುವುಗಳಿಂದ ಬರುವ ಹಣವನ್ನೂ, ಪ್ರಾಯಶ್ಚಿತ್ತರೂಪವಾಗಿ ಬರುವ ಹಣವನ್ನೂ ಕೆರೆಗೆ ಬಿಟ್ಟುಕೊಡುತ್ತಾರೆ.[53] ಹೀಗೆ ಭೂಮಿಯನ್ನೂ ಹಣವನ್ನೂ ಕೆರೆಗಳಿಗೆ ಬಿಟ್ಟುಕೊಡುತ್ತಿದ್ದುದನ್ನು ನೋಡಿದರೆ ಕೆರೆಯು ರಕ್ಷಣೀಯವಾದ ಅಮೂಲ್ಯ ವಸ್ತು ಎಂದು ಅವರು ಭಾವಿಸಿದ್ದುದು ವ್ಯಕ್ತವಾಗುತ್ತದೆ. ಆಗಿಂದಾಗ್ಗೆ ಕೆರೆಗಳನ್ನು ದುರಸ್ತು ಮಾಡಿಸಲು ಬಿಟ್ಟುಕೊಡುತ್ತಿದ್ದ ಭೂಮಿಯನ್ನೇ 'ಬಿತ್ತುವಾಟ' ಎಂದು ಶಾಸನಗಳು ಕರೆದಿರುವುದು. (ಇದರ ಚರ್ಚೆಯು ಮುಂದಿನ ಅಧ್ಯಾಯವೊಂದರಲ್ಲಿ ಬರುತ್ತದೆ). ಆಗಾಗ್ಗೆ ಕೆರೆಯಲ್ಲಿ ಸೇರಿಕೊಳ್ಳುತ್ತಿದ್ದ ಮಣ್ಣನ್ನು ಅಥವಾ ಬಂಡನ್ನು ತೆಗೆಯಿಸುವುದೇ ಕೆರೆಗೆ ಮಾಡಬೇಕಾಗಿದ್ದ ಮುಖ್ಯವಾದ ದುರಸ್ತು ಕಾರ್ಯ (ದುರಸ್ತು ಮಾಡುವ ಕಾರ್ಯವನ್ನು 'ಪಡಿಸಲಿಸು'[54] ಎಂದು ಶಾಸನಗಳು ಕರೆಯುತ್ತವೆ.) ಹೊಸದಾಗಿ ಕೆರೆಯನ್ನು ಕಟ್ಟಿಸಿದಾಗ, ಕಾಡು ಕಡಿದು ಉತ್ತು ಹೊಸದಾಗಿ ಪೈರನ್ನು ತೆಗೆಯುತ್ತಿದ್ದರು.[55] ಹೊಸದಾಗಿ ಹೊಲವನ್ನು ಮಾಡುವ ಕ್ರಮವನ್ನು ಒಂದು ಶಾಸನವು ವಿವರಿಸುತ್ತದೆ. ಆ ಪ್ರದೇಶದ ಮುಳ್ಳುಗಿಡಗಳನ್ನೆಲ್ಲ ಮೊದಲು ಕಡಿದು, ಸುತ್ತಲೂ ಬೇಲಿಹಾಕಿ, ಅಲ್ಲಿರುವ ಮರಗಳನ್ನೆಲ್ಲ ಕಡಿದು ಸುಟ್ಟು, ಎತ್ತುಗಳಿಂದ ಉತ್ತು ನೀರನ್ನು ಹಾಯಿಸಿ ಬೀಜವನ್ನು ಬಿತ್ತುತ್ತಿದ್ದರು.[56]

ಒಂದೊಂದು ಊರಿನಲ್ಲೂ ದನಗಳು ಮೇಯಲು ಸಾರ್ವಜನಿಕವಾದ ಹುಲ್ಲುಗಾವಲಿರುತ್ತಿದ್ದಿತು.[57] ಬಹುಶಃ ಈ ಹುಲ್ಲುಗಾವಲು ಕೇಂದ್ರಾಡಳಿತದ ಅಧೀನದಲ್ಲಿರುತ್ತಿದ್ದಿತು. ಸುಗ್ಗಿಯಬ್ಬೆ ಎಂಬ ರಾಣಿಯು 'ಸವಣನ

---

[47] EC. VII. Sk. 176, C. 450 A.D.

[48] SII. IX. i. 145, 1075 A.D.

[49] EC. I. No. 5, 1000 A.D.

[50] EC. VIII. Sb. 359, 1129 A.D.

[51] EC. I. No. 5, 1000 A.D.

[52] BKI. I. ii. 151, 1102 A.D.

[53] IA. XII. p. 222, 929-30 A.D.

[54] KI. I. 24, 1148 A.D.

[55] EC. VIII. Sb. 317, 1071 A.D.

[56] "ಪರನೃಪರಂ ತಡಂ ಸದಿದು ಬೇಲಿಯುಸಿಕ್ಕಿ ಪಟುಪ್ರತಾಪಮುರ್ಬಿರೆ ತಳಕಾಡ ನೀಡುಗಡಿಪು ಅಳುಕುಱ ಸುಟ್ಟು ತುರಂಗಮಾಂಘ್ರಿ ಸಂಚರಣದಿನುರ್ತು ವೀರರಸದೊಳು ಪದನಾದಪೆ ಕೂಡೆ ಬಿತ್ತಿದಂ ಸುರುಚಿರ ಕೀರ್ತಿಯಂ ನೃಪಶಿಖಾಮಣಿ ಸಾಹಸಗಂಗ ಪೊಯ್ಸಳ" (EC. V. Hn. 116, 1123 A.D.).

[57] ಊರಿನವರ ಇಷ್ಟದಂತೆಯೋ ಅಥವಾ ರಾಜನ ಇಷ್ಟದಂತೆಯೋ ಗೋವುಗಳು ತಿರುಗಾಡಲು ಗೋಪ್ರಚಾರ ಭೂಮಿಯನ್ನು ಮೀಸಲಿಡಬೇಕೆಂದು ವಿಜ್ಞಾನೇಶ್ವರನು ಹೇಳುತ್ತಾನೆ. (ಯಾಜ್ಞವಲ್ಕ್ಯ ಸ್ಮೃತಿ, ii. 166).

ಬಿಳಿಲ'ಲ್ಲಿ (ಬಿಳಿಲು=ಬೀಳಿಲು=ಗೋಮಾಳ) ಹನ್ನೆರಡು ಮತ್ತರನ್ನು ಬಿಟ್ಟುಕೊಟ್ಟಿರುವುದು[58] ಮೇಲಿನ ಅಭಿಪ್ರಾಯಕ್ಕೆ ಪೋಷಕವಾಗಿದೆ. ದನಗಳ ಸೆಗಣಿಯ ಗೊಬ್ಬರವನ್ನು ಹೊಲಗಳಿಗೆ ಬಳಸುತ್ತಿದ್ದರು. ದನಗಳನ್ನು ಮೇಯಿಸಲು ಅಟ್ಟಿಕೊಂಡು ಹೋಗುವ ಮುನ್ನ ಊರಿನ ಹೆಬ್ಬಾಗಿಲಿನ ಬಳಿ ಸ್ವಲ್ಪಕಾಲ ನಿಲ್ಲಿಸುತ್ತಿದ್ದರು. ಅಲ್ಲಿನ ಗೊಬ್ಬರವನ್ನು ಸಂಗ್ರಹಿಸುವವರು ಊರಿಗೆ ಹಣವನ್ನು ತೆರಬೇಕಿದ್ದಿತು.[59] ಊರಿನವರು ತಮ್ಮ ಹಸುಗಳಿಗೆ ಬೀಜ ಕಟ್ಟಿಸಲು ಸಾರ್ವಜನಿಕವಾದ 'ವೃಷಭ'[60]ವನ್ನು ಸಾಕುತ್ತಿದ್ದರು. ಅದು ಊರಿನ ಯಾವ ಹೊಲದಲ್ಲಾದರೂ ಯಾರ ನಿರ್ಬಂಧವೂ ಇಲ್ಲದೆ ಮೇಯಬಹುದಿತ್ತು.[61] ಹೊಲಗಳನ್ನು ಉಳಲು, ತೋಟಗಳಲ್ಲಿ ಏತವನ್ನೆಳೆಯಲು, ಸಾಮಾನುಗಳನ್ನು ಸಾಗಿಸಲು ಎತ್ತುಗಳನ್ನು ಬಳಸುತ್ತಿದ್ದರು. ಹೊಲ ಉಳಲು ಕೋಣಗಳನ್ನೂ ಬಳಸುತ್ತಿದ್ದಿರಬಹುದು.

ಭೂಮಿಯು ಉಳುವ ರೈತನದೇ ಅಥವಾ ರಾಜನದೇ?–ಈ ವಿಷಯದಲ್ಲಿ ಪ್ರಾಚೀನ ಭಾರತೀಯರ ಅಭಿಪ್ರಾಯವೇನಿದ್ದಿತು ಎಂಬುದನ್ನು ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಹಾಪ್‌ಕಿನ್ಸ್, ಸ್ಮಿತ್ ಮುಂತಾದ ವಿದ್ವಾಂಸರು ರಾಜನೇ ಭೂಮಿಗೆ ನಿಜವಾದ ಒಡೆಯನೆಂದೂ, ಕಂದಾಯವೆಂಬುದು ರೈತನು ಪ್ರತಿಯಾಗಿ ಕೊಡುವ ಬಾಡಿಗೆಯೆಂದೂ ಭಾವಿಸುತ್ತಾರೆ. ಈ ಅಭಿಪ್ರಾಯವನ್ನೊಪ್ಪದ ಜಯಸ್ವಾಲ್ ಮುಂತಾದ ವಿದ್ವಾಂಸರು ಭೂಮಿಗೆ ನಿಜವಾದ ಒಡೆಯ ರೈತನೇ ಹೊರತು ರಾಜನಲ್ಲವೆಂದೂ, ರೈತನು ಕೊಡುವ ಕಂದಾಯವು ರಾಜನು ದೇಶವನ್ನು ರಕ್ಷಿಸುವುದಕ್ಕಾಗಿ ಕೊಡುವ ಹಣವೇ ಹೊರತು ಮತ್ತೇನೂ ಅಲ್ಲವೆಂದೂ ಅಭಿಪ್ರಾಯಪಡುತ್ತಾರೆ.[62] ವೈದಿಕ ಸಾಹಿತ್ಯದಲ್ಲಿ ಒಂದು ಕಥೆಯಿದೆ. ದೇವತೆಗಳಿಗೂ ರಾಕ್ಷಸರಿಗೂ ಯುದ್ಧವಾದಾಗ ದೇವತೆಗಳು ಸೋತುಹೋಗುತ್ತಾರೆ. ಇದಕ್ಕೆ ಕಾರಣ ತಮಗೊಬ್ಬ ರಾಜನಿಲ್ಲದಿರುವುದು ಎಂಬ ತೀರ್ಮಾನಕ್ಕೆ ದೇವತೆಗಳು ಬರುತ್ತಾರೆ. ದೇಶದ ಸಂರಕ್ಷಣೆಯ ಅಗತ್ಯವೇ ರಾಜತ್ವದ ಉಗಮಕ್ಕೆ ಕಾರಣ ಎನ್ನುವುದು ಮೇಲಿನ ಕಥೆಯಂತಹ ಇನ್ನೂ ಹಲವಾರು ಕಥೆಗಳಿಂದ ಸ್ಪಷ್ಟವಾಗುತ್ತದೆ ಎನ್ನುತ್ತಾರೆ, ಡಾ|| ಅಲ್ಟೇಕರ್ ಅವರು.[63]

ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಎಲ್ಲಿಯೂ ರಾಜನು ರೈತರಿಂದ ಹೊಲಗಳನ್ನು ಕಿತ್ತುಕೊಂಡ ನಿದರ್ಶನಗಳಿಲ್ಲ. ರೈತರಿಗೆ ತಮ್ಮ ಹೊಲಗಳನ್ನು ಮಾರುವ, ದತ್ತಿಯಾಗಿ ಬಿಡುವ ಸಂಪೂರ್ಣ ಸ್ವಾತಂತ್ರ್ಯವಿದ್ದಿತು. ಅಲ್ಲದೆ ಎಷ್ಟೋ ಕಡೆ ರಾಜನೇ ಹಣವನ್ನು ಕೊಟ್ಟು ಭೂಮಿಯನ್ನು ಕೊಂಡು ದತ್ತಿಬಿಟ್ಟ ನಿದರ್ಶನಗಳಿವೆ. ಭೂಮಿಗೆಲ್ಲ ರಾಜನೇ ಒಡೆಯನಾಗಿದ್ದರೆ ಹೀಗೆ ಹಣವನ್ನು ಕೊಟ್ಟು ಭೂಮಿಯನ್ನು ಕೊಂಡುಕೊಳ್ಳುವ ಆವಶ್ಯಕತೆಯಿರುತ್ತಿರಲಿಲ್ಲ. ಆದ್ದರಿಂದ ರೈತನೇ ಭೂಮಿಗೆ ನಿಜವಾದ ಒಡೆಯ. ರಾಜನು ತಮ್ಮನ್ನೆಲ್ಲ ಸಂರಕ್ಷಿಸುತ್ತಿರುವುದರಿಂದ ರಾಜನಿಗೆ ಕೊಡಬೇಕಾದ ಪ್ರತಿಫಲವೇ ಕಂದಾಯವೆಂದು ಭಾವಿಸಿದ್ದರು. ದೇಶದ ರಕ್ಷಣೆ ರಾಜನ ಮುಖ್ಯ

---

ಇಂತಹ ಭೂಮಿಯ ಉಲ್ಲೇಖ ಒಂದು ಶಾಸನದಲ್ಲಿದೆ–"ಸಂಚೆನುಟಂ ಪ್ರಪೆ ಗೋಪ್ರಚಾರ ವಿಶಾಪಸಥ ಮುರಾರಿ ಭವನ ದ್ವಿಜಸತ್ರಂ........" (SII. IX. i. 158, 1090 A.D.)

[58] EC. VIII. Sb. 233, 1139 A.D.

[59] EC. VIII. Sb. 249, 1065 A.D.

[60] ಆಕಳುಗಳಿಗೆ ಗರ್ಭಕಟ್ಟಿಸಲು ಮೀಸಲಿಟ್ಟ ಹೋರಿಯನ್ನು 'ವೃಷ' ಎಂದು ಕರೆಯುತ್ತಾನೆ, ಮಾಧವಾಚಾರ್ಯ ತನ್ನ ಜೈಮಿನೀಯ ನ್ಯಾಯಮಾಲೆಯಲ್ಲಿ (Appadorai : Economic Conditions in South India, p. 247). ಮಿತಾಕ್ಷರವು ಅದನ್ನು 'ಮಹೋಕ್ಷ' ಎಂದು ಕರೆಯುತ್ತದೆ (ಯಾಜ್ಞವಲ್ಕ್ಯ ಸ್ಮೃತಿ, ii. 163). ಹಳ್ಳಿಗಳಲ್ಲಿ ಇದನ್ನು 'ಹೋರಿ' ಎನ್ನುತ್ತಾರೆ.

[61] MAR (1927). p. 53, C. 1040 A.D.

[62] Jayaswal : Hindu Polity, p. 349.

[63] State and Government in Ancient India, p. 75.

ಕರ್ತವ್ಯವೆಂಬುದನ್ನು ಮಹಾಭಾರತವು ಒತ್ತಿ ಹೇಳುತ್ತದೆ. ದೇಶವನ್ನು ರಕ್ಷಿಸದ ರಾಜನನ್ನು ಸಮುದ್ರದಲ್ಲಿ ಒಡೆದ ಹಡಗನ್ನು ತ್ಯಜಿಸುವಂತೆ ತ್ಯಜಿಸಬೇಕೆಂದು ನಿಷ್ಠುರವಾಗಿ ಅದು ನುಡಿದಿದೆ.[64]

ರೈತನು ರಾಜನಿಗೆ ಕೊಡುತ್ತಿದ್ದ ಭೂಕಂದಾಯದ ಪ್ರಮಾಣವನ್ನು ಶಾಸನಗಳ ಸಹಾಯದಿಂದ ನಿರ್ಧರಿಸುವುದು ಕಷ್ಟ. ಪ್ರಾಚೀನ ಭಾರತದಲ್ಲಿ ವ್ಯಾಪಾರ ಸಾಮಗ್ರಿಗಳ ಹತ್ತನೆಯ ಒಂದು ಭಾಗವನ್ನೂ ಹೊಲದಲ್ಲಿ ಬೆಳೆದ ಧಾನ್ಯಗಳ ಆರನೆಯ ಒಂದು ಭಾಗವನ್ನೂ ರಾಜನಿಗೆ ಸಲ್ಲಿಸುವ "ನಿಬಂಧ"ವಿದ್ದಂತೆ ತಿಳಿದು ಬರುತ್ತದೆ. ಇಂತಹ ಒಂದು ಸಂಪ್ರದಾಯ ಕರ್ನಾಟಕದಲ್ಲಿಯೂ ಇದ್ದಿರಬಹುದು. ವ್ಯಾಪಾರದ ಸಾಮಗ್ರಿಗಳ ಮೇಲೆ ಹಾಕುತ್ತಿದ್ದ ಸುಂಕದ 'ದಸವಂದ'ವನ್ನು ಸುಂಕದ ಅಧಿಕಾರಿಗಳು ದೇವಸ್ಥಾನಗಳಿಗೆ ಬಿಟ್ಟ ವಿಷಯವು ಶಾಸನಗಳಲ್ಲಿ ಬರುತ್ತದೆ. "ಆ ಸ್ಥಳದಲು ಪುಟ್ಟಿದ ಪೊನ್ನಲು ಸುಂಕವೆಗ್ಗಡೆಗಳು ದಸವಂದವ ಬಿಟ್ಟರು"[65]; "ತಳಭಂಡದ ಪೆರ್ಜುಂಕದ ದಸವಂದಮಂ ಬಿಟ್ಟರು."[66] ಇದು ಸಂಸ್ಕೃತದ 'ದಶಬಂಧ' ಎಂಬುದರ ತದ್ಭವ. ಇದು ಬಹುಶಃ ಹತ್ತನೆಯ ಒಂದು ಭಾಗವನ್ನು ರಾಜನಿಗೆ ಸಲ್ಲಿಸಬೇಕೆಂಬ ನಿಯಮವನ್ನು ಸೂಚಿಸುತ್ತದೆ. ದಶಬಂಧ ಎಂಬ ಉಕ್ತಿ ಕದಂಬರ ಒಂದು ತಾಮ್ರಪಟದಲ್ಲಿ ಬಂದಿದೆ.[67] ಕದಂಬರಾಜ ಕೃಷ್ಣವರ್ಮ ಎಂಬಾತನು ಭವಸ್ವಾಮಿ ಎಂಬ ವಿದ್ವಾಂಸನಿಗೆ ಪಲ್ಮಡಿ ಗ್ರಾಮದ "ರಾಜಭಾಗ ದಶಬಂಧ"ವನ್ನೂ, ಆರು ನಿವರ್ತನಗಳಷ್ಟು ಭೂಮಿಯನ್ನೂ ಕೊಡುತ್ತಾನೆ. ಸಂಸ್ಕೃತ ಕೋಶಗಳಲ್ಲಿ 'ದಶಬಂಧ' ಎಂದರೆ ಹತ್ತರಲ್ಲೊಂದನೆಯ ಭಾಗವೆಂಬ ಅರ್ಥವಿದೆ. 'ದಶಬಂಧ' ಎಂಬುದಕ್ಕೆ ಸಂವಾದಿಯಾದ ಕನ್ನಡ ಪದ 'ಪತ್ತೊಂದಿ'. ಮೂಲತಃ ಪತ್ತೊಂದಿ ಎಂಬುದು ದಶಬಂಧ ಎನ್ನುವುದು ಸೂಚಿಸುವಂತೆ ಒಂದು ತೆರಿಗೆಯನ್ನು ಸೂಚಿಸುತ್ತಿದ್ದು, ಕ್ರಮೇಣ 'ಹತ್ತರಲ್ಲೊಂದು ಭಾಗ' ಎಂಬ ಸಾಮಾನ್ಯ ಅರ್ಥವನ್ನು ಪಡೆದಂತೆ ಕಾಣಿಸುತ್ತದೆ. ಹಲ್ಮಿಡಿ ಶಾಸನದಲ್ಲಿಯೇ 'ಪತ್ತೊಂದಿ' ಎಂಬ ಪದವು ಕಾಣಿಸಿಕೊಳ್ಳುತ್ತದೆ–"ಭಟ್ಟರ್ಗ್ಗಿಗೀಗಟಿಟ್ಟಿ ಒಡ್ಡಲಿ ಆ ಪತ್ತೊಂದಿ ವಿಟ್ಟಾರ್".[68] ಬಹುಶಃ ಪತ್ತೊಂದಿಯ ಸಾಮ್ಯದ ಮೇಲೆ 'ಅಯ್ದೊಂದಿ' ಎಂಬ ಮಾತು ಹುಟ್ಟಿಕೊಂಡಿದೆ.[69]

ಜಮೀನುದಾರರು ರೈತರಿಗೆ ಹೊಲಗಳನ್ನು ಸಾಗುವಳಿಗೆ ಕೊಟ್ಟು, ಹೊಲದ ಬೆಳಸಿನಲ್ಲಿ ತಾವು ಅರ್ಧ ಭಾಗವನ್ನು ತೆಗೆದುಕೊಳ್ಳುತ್ತಿದ್ದರೆಂದು ಕಾಣಿಸುತ್ತದೆ. (ಈ ಪದ್ಧತಿ ಈಗಲೂ ಇದೆ.) ಇದನ್ನು ಶಾಸನಗಳಲ್ಲಿ ಸ್ಪಷ್ಟವಾಗಿ ಎಲ್ಲಿಯೂ ಹೇಳಿಲ್ಲವಾದರೂ ಒಂದು ಶಾಸನವು ಮಾತ್ರ ಇದನ್ನು ಸೂಚಿಸುತ್ತದೆ.[70] ಯಾವುದೋ

---

64 "ಷಡೇತಾನ್ ಪುರುಷೋ ಜಹ್ಯಾದ್ಭಿನ್ನಾಂ ನಾವಮಿವಾರ್ಣವೇ।
ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಂ ॥
ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಂ।
ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಂ ॥"
[ಜಯಸ್ವಾಲರ "Hindu Polity" ಗ್ರಂಥದ 335ನೇ ಪುಟದಲ್ಲಿ ಉದ್ಧೃತವಾಗಿದೆ.]

65 SII. IX. i. 235, 1141 A.D.

66 EC. XI. Dg. 80, 1099 A.D.

67 EC. V. Bl. 245, C. 420 A.D. 'ದಶಬಂಧ' ಎನ್ನುವ ಮಾತಿಗೆ (1) ಕೆರೆ, ಬಾವಿಗಳ ಜೀರ್ಣೋದ್ಧಾರಕ್ಕೆ ತೆಗೆದಿರಿಸಿದ ಹತ್ತರಲ್ಲೊಂದು ಭಾಗದ ಆದಾಯ, (2) ಅಷ್ಟು ಆದಾಯ ಕೊಡಬೇಕಾದ ಭೂಮಿ (ಕೆರೆಗಾಗಿ ಮೀಸಲಾಗಿಟ್ಟದ್ದು), (3) ನೀರಾವರಿ ಉಪಯೋಗ ಪಡೆದಿರುವ ಭೂಮಿಗಳ ಆದಾಯದಲ್ಲಿ ಹತ್ತರಲ್ಲೊಂದು ಭಾಗವನ್ನು ವಸೂಲು ಮಾಡುವ ಹಕ್ಕು, (4) ಪ್ರಜೆಗಳಿಂದ ಅವರ ಆದಾಯದ ಹತ್ತರಲ್ಲೊಂದು ಭಾಗದ ತೆರಿಗೆ-ಇತ್ಯಾದಿ ಅರ್ಥಮಾಡಲಾಗಿದೆ (Sircar : Indian Epigraphical Glossary, p. 84)

68 MAR (1936). p. 73, C. 450 A.D.

69 MAR (1926). p. 87, C. 800 A.D.

70 BKI. I. i. 52, 1007 A.D.

ಬಸದಿಗೆ ಬಿಟ್ಟುಕೊಟ್ಟ ತೋಟವನ್ನು ಮಾಡುವವರು ಬಸದಿಗೆ ಸಮಭಾಗವಿಕ್ಕಿ ಭೋಗಿಸಬೇಕು ಎಂದು ಆ ಶಾಸನವು ವಿಧಿಸುತ್ತದೆ. ಇದನ್ನು 'ಕೋರು' ಎಂದು ಈಗ ಕರೆಯುತ್ತಾರೆ. (ಜಮೀನಿನ ಉತ್ಪನ್ನದಲ್ಲಿ ಗೇಣಿ ದಾರನು ಭೂಮಾಲೀಕನಿಗೆ ಸಲ್ಲಿಸಬೇಕಾದ ಅರ್ಧಭಾಗವೇ 'ಕೋರು'). ಶಾಸನವೊಂದರಲ್ಲಿ 'ಪತ್ತೊಂದಿಯ ಕೋರು' ಎಂದಿದೆ.[71] ಆ ಶಾಸನವು ಸರಿಯಾಗಿ ಅರ್ಥವಾಗದ ಕಾರಣ 'ಪತ್ತೊಂದಿಯ ಕೋರು' ಎಂಬುದಕ್ಕೆ ಸರಿಯಾಗಿ ಅರ್ಥ ಹೇಳುವುದು ಕಷ್ಟ. 'ಹತ್ತನೇ ಒಂದು ಭಾಗ' ಎಂದು ಅದಕ್ಕೆ ಅರ್ಥವಿರಬಹುದು. ಈಗ ಪ್ರಚಲಿತವಾಗಿರುವ ವಾರ, ಕಟ್ಟುಗುತ್ತಿಗೆ (ತಮಿಳು. ವಾರಂ, ಕಟ್ಟುಗುತ್ತಿಗೈ) ಮುಂತಾದ ಪದಗಳು ಪ್ರಾಚೀನ ಶಾಸನಗಳಲ್ಲಿ ಇರುವಂತೆ ಕಾಣಿಸುವುದಿಲ್ಲ.[72] ಶಾಸನವೊಂದರಲ್ಲಿ 'ಲಾವಣಿಗೆಯ ಪಣ'ವನ್ನು ಹೆಸರಿಸಿದೆ.[73] ಇದು ಈಗ ಲಾವಣಿ ಹಿಡಿಯುವ ಪದ್ಧತಿಯನ್ನು ನೆನಪಿಗೆ ತರುತ್ತದೆ. ಲಾವಣಿ(ಗೆ) ಎಂದರೆ ಸಮೂಹ, ಗುಂಪು ಎಂಬ ಅರ್ಥವೂ ಇದೆ. ಶಾಸನದಲ್ಲಿ 'ಲಾವಣಿಗೆ' ಪದ ಬಂದಿರುವ ಸಂದರ್ಭವನ್ನು ನೋಡಿದರೆ, ಅದರ ಅರ್ಥವನ್ನು ನಿಷ್ಕರ್ಷಿಸುವುದು ಕಷ್ಟವೆಂಬುದು ಮನವರಿಕೆಯಾಗುತ್ತದೆ. ("…………ಅಗ್ರಹಾರಂ ಬಾಳ್ಗುಳಿಯೂರೊಡೆಯ ಪ್ರಮುಖಮಹಾಜನಮಯ್ವದಿಂಬರು ಸ್ವಸ್ತಿ ಸಮಸ್ತ ವಸ್ತು ಗುಣ ಸಕಳಾಗಮ ಕುಶಲರಪ್ಪ ಶ್ರೀಮತ್ ಸಿವಶಕ್ತಿ ಪಂಡಿತರ ಸನ್ನಿಧಾನದೊಳ್ ಶ್ರೀ ಸ್ವಯಂಭು ಕಲಿದೇವಸ್ವಾಮಿಯ ದಿಬ್ಯ ಶ್ರೀ ಪಾದದೊಳ್ ಧಾರಾಪೂರ್ಬಕಮ್ಮಾಡಿ ದೇವರಗ್ರಾಸನದ ಸತ್ರದಲಯ್ವರು ನಿರಂತರಮುಣ್ಬಂತಾಗಿ ಮಿಕ್ಕುದು ಪಿರಿಯ ಕೆಱೆಯ ಕೆಲಸಕ್ಕೆ ನಡವಂತಾಗಿಯರಸುವೇಱಿಂಗೆ ಮುನ್ನನ್ನಡವ ಪಾಗಮುಲ್ಲದೆ ಮತ್ತೊಂದು ಪಾಗಮುಂ ಲಾವಣಿಗೆಯ ಪಣಮುಂ ಮತ್ತಂ ಬ್ರಹ್ಮಜಿನಾಲಯದ ದೇವರ ನಿವೇದ್ಯಕ್ಕೆ……."). ಇದನ್ನು ನೋಡಿದರೆ ಶಾಸನದ 'ಲಾವಣಿಗೆ' ಪದವು ಈಗಿನ ಲಾವಣಿ ಹಿಡಿಯುವ ಪದ್ಧತಿಯನ್ನು ಸೂಚಿಸಬಹುದೇ ಎಂದು ಊಹಿಸುವುದು ಸ್ವಲ್ಪ ಕಷ್ಟವಾಗಿ ಕಾಣುತ್ತದೆ.

## ಕೈಗಾರಿಕೆಗಳು : ವೃತ್ತಿಗಳು

ಶಾಸನಗಳು ಬೇರೆ ಬೇರೆ ಉದ್ಯಮಗಳನ್ನು ಹೆಸರಿಸುತ್ತವೆಯೇ ಹೊರತು ಹೆಚ್ಚು ವಿವರಗಳನ್ನು ಕೊಡುವುದಿಲ್ಲ. ನೆಯ್ಗೆ ಕೈಗಾರಿಕೆಯು ತುಂಬ ಅಭಿವೃದ್ಧಿಯಾಗಿದ್ದಿತು. ನೇಕಾರರು ಹತ್ತಿಯ ವಸ್ತ್ರಗಳನ್ನಲ್ಲದೆ ರೇಷ್ಮೆಯ ವಸ್ತ್ರಗಳನ್ನೂ ನೇಯುತ್ತಿದ್ದರು.[74] ಚೀನ, ಮಹಾಚೀನ, ದುಕೂಲ ಮುಂತಾದ ಅತಿ ನವುರಾದ ವಸ್ತ್ರಗಳನ್ನು ನೇಯುತ್ತಿದ್ದರು.[75] ನೇಯ್ಗೆಯ ಮಗ್ಗಗಳ ಮೇಲೆ ತೆರಿಗೆಗಳನ್ನು ಹಾಕುತ್ತಿದ್ದರು.[76] ('ಮಗ್ಗದೆಱೆ'). ಚಿಪ್ಪಿಗರು ಬಟ್ಟೆಗಳನ್ನು ಬಹುಶಃ ಕೈಸೂಜಿಯಿಂದ ಹೊಲಿಯುತ್ತಿದ್ದರು. ಗದಾಯುದ್ಧದಲ್ಲಿ ಸೂಜಿಯನ್ನೂ, ಸೂಜಿಯನ್ನು ಹಿಂಬಾಲಿಸಿ ಹೋಗುವ ದಾರವನ್ನೂ ಹೆಸರಿಸಿದೆ.[77] ಚಿಪ್ಪಿಗರನ್ನು 'ವಸ್ತ್ರ

---

[71] EC. V. Cn. 251, C. 925 A.D.

[72] ಒಂದು ಹೊಲವನ್ನು ಉತ್ತು ಬೆಳೆಯನ್ನು ತೆಗೆಯುವ ರೈತನು ಆ ಹೊಲದ ಯಜಮಾನನಿಗೆ ಕೊಡಬೇಕಾದ ಧಾನ್ಯದ ಮೊತ್ತವೇ 'ಕಟ್ಟುಗುತ್ತಿಗೆ'. ಬೆಳೆಯಾಗಲಿ ಆಗದಿರಲಿ ಅಷ್ಟು ಧಾನ್ಯವನ್ನು ಕೊಡಲೇಬೇಕು ('ಕೋರಿ'ನಲ್ಲಿ ಹಾಗಲ್ಲ, ಬೆಳೆವದ್ದರಲ್ಲಿ ಅರ್ಧ ರೈತನಿಗೆ, ಇನ್ನರ್ಧ ಹೊಲದ ಒಡೆಯನಿಗೆ. 'ವಾರ' ಎಂಬುದೂ ಕೋರನ್ನು ಸೂಚಿಸುತ್ತದೆ). ಲಾವಣಿ ಎಂಬುದು ಕಟ್ಟುಗುತ್ತಿಗೆಗೆ ಇರುವ ಇನ್ನೊಂದು ಹೆಸರು.

[73] SII. IX. i. 192, 1115 A.D.

[74] 'ಪಟ್ಟಗಾಱರ ಸೇಣಿ'ಯ ಹೆಸರು ಒಂದು ಶಾಸನದಲ್ಲಿದೆ (EI. VI. p. 166, C. 793 A.D.). ಪಟ್ಟೆಗಾಱರು ರೇಷ್ಮೆ ವಸ್ತ್ರಗಳನ್ನು ನೇಯುವವರು ಎಂದು ಭಾವಿಸಬಹುದು.

[75] ಧರ್ಮಾಮೃತ, 8.165, ವ.

[76] EC. V. Hn. 135, C. 1114 A.D.

[77] ಗದಾಯುದ್ಧ, 1.16—"….ಮುನ್ನಮೆಂಬ ಬಟಿಕೆಂಬ ಜನೋಕ್ತಿಯೊಳಾದತ್ತು ಸೂಚಿಶಕ್ತಿಗೆ ನೃಪನಾನೆ ದಾರದವೊಲಾದುವು ರಾಜಕುಮಾರರಾನೆಗಳ್."

ಖಂಡಿತ ಶ್ರಿಂಗಾರ ಚಿತ್ರೋದ್ಭವರ್' ಎಂದು ಒಂದು ಶಾಸನವು ಹೊಗಳುತ್ತದೆ.[78] ಬುಟ್ಟಿ, ಮೊರ ಮೊದಲಾದುವನ್ನು ಬೊಂಬುಗಳಲ್ಲಿ ಹೆಣೆಯುತ್ತಿದ್ದ ಕೈಗಾರಿಕೆಯೂ ಇದ್ದಿತು.[79] ಜೇಡಿಮಣ್ಣನ್ನು ನೀರಿನಲ್ಲಿ ನೆನೆಯಿಸಿ ಚಕ್ರದ (ಕೋವರ ಚಕ್ರ)[80] ಮೇಲಿಟ್ಟು ನಾನಾ ಪಾತ್ರೆಗಳನ್ನು ಮಾಡಿ 'ಆವುಗೆ'ಗಳಲ್ಲಿ ಕುಂಬಾರರು ಸುಡುತ್ತಿದ್ದರು.[81] ತುಂಬ ಪ್ರಚಾರದಲ್ಲಿದ್ದ ಕೈಗಾರಿಕೆಗಳಲ್ಲಿ ಎಣ್ಣೆಯ ಕೈಗಾರಿಕೆಯೂ ಒಂದು. ತೈಲಿಗರು ಎಣ್ಣೆಯ ಬೀಜಗಳನ್ನು ಗಾಣಗಳಲ್ಲಿ ಹಾಕಿ ಎಣ್ಣೆಯನ್ನು ಹಿಂಡುತ್ತಿದ್ದರು. ಎತ್ತುಗಾಣ, ಕೈಗಾಣ ಎಂಬ ಎರಡು ರೀತಿಯ ಗಾಣಗಳಿದ್ದುವು.[82] ಕಬ್ಬನ್ನು ಗಾಣಕ್ಕೆ ಕೊಟ್ಟು ಹಿಂಡಿ ಹಾಲನ್ನು ತೆಗೆದು ಬೆಲ್ಲವನ್ನೂ ಸಕ್ಕರೆಯನ್ನೂ ಮಾಡುತ್ತಿದ್ದರು. ಈ ವಿಷಯವು ನೇರವಾಗಿ ಯಾವ ಶಾಸನದಲ್ಲಿಯೂ ಉಕ್ತವಾಗಿರದಿದ್ದರೂ, ವ್ಯಾಪಾರವಸ್ತುಗಳಲ್ಲಿ ಬೆಲ್ಲ[83] ಮತ್ತು ಸಕ್ಕರೆ[84]ಗಳನ್ನು ಹೆಸರಿಸಿರುವುದರಿಂದ ಆ ಕೈಗಾರಿಕೆಯನ್ನು ಊಹಿಸಬೇಕಾಗಿದೆ. ಗಾಜಿನ ಬಳೆಗಳ ಕೈಗಾರಿಕೆಯನ್ನೂ ಇಲ್ಲಿ ಹೆಸರಿಸಬಹುದು. ಶಾಸನಗಳಲ್ಲಿ ನಮಗೆ ತಿಳಿದಮಟ್ಟಿಗೆ ಈ ಕೈಗಾರಿಕೆಯ ಹೆಸರಿಲ್ಲದಿದ್ದರೂ ಬಳೆಗಳನ್ನು ಗಾಜಿನಿಂದ ತಯಾರಿಸುತ್ತಿದ್ದರೆಂಬುದಕ್ಕೆ ಪಂಪನ ಹೇಳಿಕೆಯೊಂದು ಆಧಾರವಾಗುತ್ತದೆ.[85] ಭೀಮನು ಕೀಚಕನನ್ನು 'ಬಳೆಯ ಪೇಱನಾನೆ ಮೆಟ್ಟಿದಂತೆ', ಎಂದರೆ ಬಳೆಯ ಹೇರನ್ನು ಆನೆ ಮೆಟ್ಟಿದಂತೆ ಮೆಟ್ಟಿದಾಗ ಅವನ ದೇಹ ನುಚ್ಚು ನೂರಾಯಿತು ಎಂದು ವರ್ಣಿಸುತ್ತಾನೆ. ಹೆಂಗಸರು ತಮ್ಮ ಮಾಂಗಲ್ಯಸೂಚಕವಾಗಿ ಬಳೆಗಳನ್ನು ಧರಿಸುತ್ತಿದ್ದರು.[86] ಬಳೆಗಳಷ್ಟೇ ಮಾಂಗಲ್ಯಸೂಚಕ ಕಿವಿಯ ಓಲೆಗಳು.[87] ಗಾಜಿನ ಕೈಗನ್ನಡಿಗಳನ್ನು ಮಾಡುವ ವಿಧಾನವು ಪ್ರಾಚೀನ ಭಾರತೀಯರಿಗೆ ತಿಳಿದಿರಲಿಲ್ಲ.[88] ಕಂಚಿನ ತಟ್ಟೆಗಳನ್ನೇ ಕನ್ನಡಿಯಾಗಿ[89] ಬಳಸುತ್ತಿದ್ದರು. ಕಂಚುಗಾರರು

---

78 EC. V. Bl. 236, 1139 A.D.

79 EC. VII. Sk. 118, 1054 A.D.

80 EC. VIII. Sa. 109, (bis), 1042 A.D.

81 IA. XIV. p. 15, 1123-4 A.D.

82 EC. VII. Hl. 1, 1055 A.D.
EC. XI. Dg. 133, 1071 A.D.

83 BKI. I. ii. 198, 1123 A.D.

84 EC. VII. Sk. 118, 1054 A.D.

85 ಪಂಪಭಾರತ, 8.76, ವ.

86 ಸೈಂಧವನ ಹೆಂಡತಿ ದುಶ್ಶಳೆಯು ಅರ್ಜುನನ ಶಪಥಕ್ಕೆ ಹೆದರಿ ಅಣ್ಣ ದುರ್ಯೋಧನನ ಬಳಿಗೆ ಬಂದು 'ಎನ್ನೋಲೆಯ ಕಡಗವಱಿವನೇಂ ನೋಡಿದಪಾ' ಎಂದು ದುಃಖದಿಂದ ಹೇಳಿಕೊಳ್ಳುತ್ತಾಳೆ.

87 ಪಂಪಭಾರತದಲ್ಲಿ ಯುದ್ಧದ ಹಿಂದಿನ ದಿನ ರಾತ್ರಿ ಒಬ್ಬ ವೀರನು ತನ್ನ ಪ್ರಿಯೆಯೊಡನೆ ಮಾತನಾಡುತ್ತಾ 'ಇದೇ ಕೊನೆಯ ರಾತ್ರಿ. ನಾಳೆ ನಾನು ದೇವಲೋಕದ ಕನ್ನೆಯರೊಡನೆ ಇರುತ್ತೇನೆ' ಎಂದು ಹಾಸ್ಯದ ಮಾತುಗಳಾಡಿದಾಗ, ಅವನ ಪ್ರಿಯೆಯು 'ಇಲ್ಲ, ನೀನು ನಾಳೆ ನನ್ನ ಜೊತೆಗೆ ಇದ್ದೇ ಇರುವೆ' ಎನ್ನುತ್ತಾಳೆ. 'ನಿನಗೆ ಹೇಗೆ ಗೊತ್ತು?' ಎಂದು ಅವನು ಕೇಳಿದಾಗ 'ನನಗೆ ಓಲೆಯ ಭಾಗ್ಯವಿದೆ' ಎನ್ನುತ್ತಾಳೆ ಆ ಮುಗ್ಧೆ.

(ಪಂಪಭಾರತ, 10.44 ವ.)

88 Majumdar : The Socio and Economic History of Northern India, p. 203.

89 "ದರ್ಪಣವು ಬೇರೆ ಕಂಚಲ್ಲ, ಬಟ್ಟಲವು ಬೇರೆ ಕಂಚಲ್ಲ: ಭಾಂಡ ಒಂದೆ, ಭಾಜನ ಬೇರೆ. ಬೆಳಗೆ ಕನ್ನಡಿಯೆನಿಸಿತಯ್ಯ. ಅಱಿದಡೆ ಶರಣನು, ಮಱೆದಡೆ ಮಾನವ, ಮಱೆಯದೆ ಪೂಜಿಸು ಕೂಡಲ ಸಂಗನ."

(ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 226).

ಮಾಡಿದ ವಸ್ತುಗಳಲ್ಲಿ ತಳಿಗೆ, ಕನ್ನಡಿ, ಸಿಪ್ಪು, ಸಟ್ಟುಗ ಇತ್ಯಾದಿಗಳನ್ನು ನಯಸೇನನು ಹೇಳುವುದೂ[90] ಇದನ್ನೇ ಪೋಷಿಸುತ್ತದೆ.

## ಗಣಿಗಳು

ಪ್ರಾಚೀನ ಕನ್ನಡಿಗರಿಗೆ ಕಬ್ಬಿಣ, ಚಿನ್ನ, ಬೆಳ್ಳಿ, ಕಂಚು ಮುಂತಾದ ಲೋಹಗಳೂ, ಅನೇಕ ರೀತಿಯ ರತ್ನಗಳೂ ಗೊತ್ತಿದ್ದುವು. ಇವುಗಳನ್ನು ಯಾವ ಯಾವ ಗಣಿಗಳಿಂದ ತೆಗೆಯುತ್ತಿದ್ದರೆಂಬುದರ ವಿವರಗಳು ಮಾತ್ರ ಶಾಸನಗಳಿಂದ ತಿಳಿದುಬರುವುದಿಲ್ಲ ಒಂದೇ ಒಂದು ಶಾಸನದಲ್ಲಿ ಚಿನ್ನದ ಗಣಿಯನ್ನು ಹೆಸರಿಸಲಾಗಿದೆ ("ಬೆಳಗೆಯ್ಯಿಂ ಪೊಂಗಣಿಯಿಂ ಫಲತರುವಿಂದೊಳ್ಪಯಂಗಳಿಂ ಕುಸುಮರಜಾನಿಳನಿಂ ಪಗರೆಯ ಪರಿಯಿಂ ತಳರದ ಸಿರಿ ಬಲ್ಲಕುಂದೆ ನಾಳ್ಕೆಸೆದಿರ್ಕುಂ").[91] ಕೋಲಾರ ಜಿಲ್ಲೆಯ ಹುನಕುಂದ ಪಟ್ಟಣ, ಬಿಜಾಪುರ ಜಿಲ್ಲೆಯ ಹುನಗುಂದಗಳ ಬಳಿ ಚಿನ್ನದ ಗಣಿಗಳ ಅವಶೇಷಗಳಿವೆ (ಹೆಸರುಗಳೇ ಹೇಳುತ್ತವೆ—ಅಲ್ಲಿ ಚಿನ್ನದ ಗಣಿಗಳಿದ್ದುವೆಂಬುದನ್ನು). ಹುನಕುಂದದ ಬಳಿ ದಿವಾಾಲದಿಣ್ಣೆ ಎಂಬಲ್ಲಿ ಒಂದು ಬೂದಿಯ ರಾಶಿಯಿದೆ. ಚಿನ್ನದ ಅದುರನ್ನು ಕರಗಿಸಿದ ಜಾಗವು ಇದೇ ಇರಬಹುದು.[92] ಜರಗಿನ ತೆಱೆ ಎಂಬ ಹೆಸರಿನ ಒಂದು ತೆರಿಗೆಯ ಹೆಸರು ಶಾಸನಗಳಲ್ಲಿ ಕಂಡುಬರುತ್ತದೆ.[93] 'ಜಲಗಿನಧಿಕಾರಿ' ಎನ್ನುವವನು ಬಹುಶಃ ಈ ತೆರಿಗೆಯನ್ನು ವಸೂಲು ಮಾಡುವ ಅಧಿಕಾರಿಯಿರಬಹುದು. ಇದು ನದಿಯ ಮರಳನ್ನು ಶೋಧಿಸಿ ಚಿನ್ನ ತೆಗೆಯುತ್ತಿದ್ದವರ ಮೇಲೆ[94] ಹಾಕುತ್ತಿದ್ದ ತೆರಿಗೆಯಿರಬೇಕು. 'ಕುಳಿಯ ಸುಂಕ' ಎಂಬ ಹೆಸರಿನ ಒಂದು ತೆರಿಗೆ ಶಾಸನಗಳಲ್ಲಿದೆ. ಇದು ಅದುರುಗಳ ಮೇಲೆ ಹಾಕುತ್ತಿದ್ದ ಸುಂಕವಿರಬಹುದೆಂದು ಕೆಲವರು ಭಾವಿಸುತ್ತಾರೆ.[95] ಆದರೆ ಇದು ತೋಟದ ಭಾವಿಗಳ ಮೇಲೆ ಹಾಕುತ್ತಿದ್ದ ತೆರಿಗೆಯೆಂದು ಇತರ ಶಾಸನಗಳಿಂದ ಸ್ಪಷ್ಟವಾಗುತ್ತದೆ. ("ತೋಂಟಕ್ಕೆ ಕುಳಿಯ ಸುಂಕ").[96] 'ಕುಳಿ' ಎಂದರೆ ಬಾವಿಯೆಂದು ಇನ್ನೊಂದು ಶಾಸನದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.[97] ಉಪ್ಪು ಮಾರಾಟದ

---

90 ಧರ್ಮಾಮೃತ, 2.26—"ತಳಿಗೆ ಕನ್ನಡಿ ಸಿಪ್ಪು ಕಂಚಿನ ಸಟ್ಟುಗಂ ತೆಱುವಟ್ಟಲಗ್ಗದ ಕೈ ಮಳೆ ತಾಳನೊಪ್ಪುವ ಗಿಣ್ಣಲ್ . . . ."

91 SII. IX. i. 249, 1147 A.D. ರಾಯಚೂರು ಜಿಲ್ಲೆಯ ಹಟ್ಟಿ ಗಣಿಗಳೂ ಕೋಲಾರದ ಚಿನ್ನದ ಗಣಿಗಳೂ ಬಹು ಪ್ರಾಚೀನವಾದುವು. ಅವುಗಳಲ್ಲಿ ಹಿಂದಿನವರು ಶ್ರಮಿಸಿ ಚಿನ್ನವನ್ನು ತೆಗೆದಿದ್ದರು. ಆಧುನಿಕ ಕಾಲದಲ್ಲಿ ಅವುಗಳಿಂದ ಚಿನ್ನವನ್ನು ತೆಗೆಯಲು ಹೊರಟಾಗ ಅವುಗಳಲ್ಲಿ ಮಡಕೆಯ ಚೂರುಗಳೂ ಜಾಲಿಯ ಮರದ ತುಂಡುಗಳೂ ಸಿಕ್ಕುವು. ಆಗಾಗ್ಗೆ ತುಂಬುತ್ತಿದ್ದ ನೀರನ್ನು ಮಡಕೆಗಳಿಂದ ಸಾಗಿಸುತ್ತಿದ್ದರೆಂದು ಕಾಣುತ್ತದೆ. ಬಂಡೆಗಳು ಸಿಡಿದು ಅಥವಾ ಕಳಚಿಬಿದ್ದು ಗಣಿ ಕೆಲಸಗಾರರಿಗೆ ಪ್ರಾಣಹಾನಿಯಾಗದಂತೆ ಮರದ ದಿಮ್ಮಿಗಳನ್ನು ಜೋಡಿಸುತ್ತಿದ್ದರು. ಇದನ್ನೆಲ್ಲ ನೋಡಿದರೆ ಪ್ರಾಚೀನರಿಗೆ ಗಣಿ ಉದ್ಯಮದಲ್ಲಿ ವಿಶೇಷ ಪರಿಶ್ರಮವಿದ್ದಿತೆಂದು ತಿಳಿದುಬರುತ್ತದೆ.

[ನೋಡಿ : ಬಿ. ವಿ. ಗೋವಿಂದರಾಜುಲು ಅವರ 'ಚಿನ್ನದ ನಾಡಿದು ಮೈಸೂರು' ಎಂಬ ಲೇಖನ. ಪ್ರಬುದ್ಧ ಕರ್ಣಾಟಕ, 31. 3, 4. 1950]

92 MAR (1941). pp. 57–58.

93 BKI. I. ii. 200, 1126 A.D.

94 "ಜರಗನೊಯ್ಯನೆ ಕರ್ಚಿ ರಾಶಿಯ ಮಜ್ಜೊಳೊಪ್ಪುವ ಪೊನ್ನನಚ್ಚರಿಯೆನಲ್ ನೆಱೆ ಕಾಣ್ಬವೊಲ್...." (ಧರ್ಮಾಮೃತ, 4.33) ನಿಧಿಯನ್ನು ಬಿಟ್ಟು ಜರಗನ್ನು ಆಶ್ರಯಿಸುವವರನ್ನು ಬಸವಣ್ಣನು ಹಾಸ್ಯಮಾಡುತ್ತಾನೆ.

95 S. Chandrashekhara Shastry : 'Economic Conditions under the Hoysaḷas' (The Half Yearly Journal of the Mysore University, II, p. 214).

96 BKI. I. ii. 158, 1109 A.D.

97 EC. VII. Sk. 287, 1012 A.D.

ವಸ್ತುಗಳಲ್ಲೊಂದಾಗಿತ್ತು.[98] ಉಪ್ಪಿನ ಗಣಿಯನ್ನಾಗಲಿ, ಉಪ್ಪಿನ ಕೈಗಾರಿಕೆಯನ್ನಾಗಲಿ ಎಲ್ಲಿಯೂ ಹೆಸರಿಸಿಲ್ಲ. ಕ್ರಿ. ಶ. 1279ರ ಶಾಸನವೊಂದರಲ್ಲಿ 'ಆಕರ ಮಾಂಡಲಿಕ'ನ ಹೆಸರಿದೆ.[99] ಇವನು ಗಣಿಗಳ ಮೇಲ್ವಿಚಾರಕನಿದ್ದರೂ ಇರಬಹುದು. ಈ ಅಧಿಕಾರಿಯ ಕರ್ತವ್ಯಗಳನ್ನು ಅರ್ಥಶಾಸ್ತ್ರವು ವಿವರಿಸುತ್ತದೆ.[100]

ಗಣಿಗಳಿಂದ ರಾಜ್ಯಕ್ಕೆ ತುಂಬಾ ಆದಾಯವು ಬರುತ್ತಿದ್ದಿರಬೇಕು. ಗಣಿಗಳ ಎಲ್ಲ ಉತ್ಪನ್ನವನ್ನು ರಾಜನು ವಹಿಸಿಕೊಳ್ಳಬೇಕೆಂದು ವಿಷ್ಣುವು ಹೇಳಿದರೆ, ರಾಜನು ಅಂತಹ ಉತ್ಪನ್ನದಲ್ಲಿ ಅರ್ಧವನ್ನು ಮಾತ್ರ ತೆಗೆದುಕೊಳ್ಳಬೇಕೆಂದು ಮನುವು ಹೇಳುತ್ತಾನೆ[100.1] ಎಂದರೆ, ಗಣಿಗಳನ್ನು ಸ್ವತಂತ್ರ ಉದ್ಯಮಿಗಳು ನಡೆಯಿಸಲು ಮನುವಿನ ಒಪ್ಪಿಗೆಯಿದೆ. ಮಾನಸೋಲ್ಲಾಸವು ಕೂಡ ಮನುವನ್ನೇ ಅನುಸರಿಸಿ ರಾಜನು ಚಿನ್ನದ ಗಣಿ, ಬೆಳ್ಳಿಯ ಗಣಿ, ರತ್ನಗಳ ಗಣಿಗಳ ಮೇಲೆ ತೆರಿಗೆಯನ್ನು ಹಾಕಬೇಕೆಂದು ವಿಧಿಸುತ್ತದೆ.[101] ಸೋಮೇಶ್ವರನ ಹೇಳಿಕೆಯನ್ನು ನೋಡಿದರೆ ಕರ್ನಾಟಕದ ಕೆಲವು ಗಣಿಗಳನ್ನಾದರೂ ಸ್ವತಂತ್ರ ವ್ಯಕ್ತಿಗಳು ನಡೆಸುತ್ತಿದ್ದಿರಬೇಕು. ಬಳ್ಳಿಗಾವೆಯ ವರ್ತಕರು ಇಂದ್ರನೀಲ, ಚಂದ್ರಕಾಂತ, ಮುತ್ತು, ಮಾಣಿಕ್ಯ, ವಜ್ರ, ವೈಢೂರ್ಯ, ಗೋಮೇಧಿಕ, ಪುಷ್ಯರಾಗ, ಪದ್ಮರಾಗ ಮುಂತಾದ ರತ್ನಗಳ ವ್ಯಾಪಾರವನ್ನು ಮಾಡುತ್ತಿದ್ದರೆಂದು ಒಂದು ಶಾಸನವು ಹೇಳುತ್ತದೆ.[102] ಬೇಲೂರು, ಹಳೆಯಬೀಡು, ವಿಷ್ಣುಸಮುದ್ರಗಳ ಮಣಿಗಾರರು ಅನೇಕ ಮಿತ್ರರಾಷ್ಟ್ರ ಶತ್ರುರಾಷ್ಟ್ರಗಳಲ್ಲಿ ರತ್ನಗಳ ವ್ಯಾಪಾರವನ್ನು ಮಾಡುತ್ತಿದ್ದರು.[103] ಬಳ್ಳಾರಿ ಜಿಲ್ಲೆಯಲ್ಲಿ ವಜ್ರದ ಗಣಿಗಳಿದ್ದುವೆಂದು ಮಾರ್ಕೊ ಪೋಲೋ, ಇಬ್ನ್ ಬಟೂಟ, ತವೆರ್ನಿಯರ್ ಎಂಬ ಪ್ರವಾಸಿಗರಿಂದ ತಿಳಿದುಬರುತ್ತದೆ.[104]

ಲೋಹಾಸನಗಳು ಪ್ರಾಚೀನ ಕರ್ನಾಟಕದಲ್ಲಿ ಬಹು ಜನರು ಬಯಸುತ್ತಿದ್ದ ಆಸನಗಳಿರಬೇಕು. ಲೋಹಾಸನದ ವಿಷಯವು ಎರಡು ಶಾಸನಗಳಲ್ಲಿ ಬರುವುದಲ್ಲದೆ[105] ಪಂಪನಲ್ಲಿಯೂ ಹಲವು ಕಡೆ ಇದರ ಹೆಸರು ಬಂದಿದೆ.[106] ಅದು ರಾಜರು, ಹಿರಿಯ ಅಧಿಕಾರಿಗಳು ಕುಳಿತುಕೊಳ್ಳುತ್ತಿದ್ದ ಪೀಠವಿರಬೇಕು.[106.1] ಹೇಮಕರ್ಮ, ಲೋಹಕರ್ಮ, ರತ್ನ ಕರ್ಮಗಳಲ್ಲಿ ಕುಶಲರಾದ ವಿಶ್ವಕರ್ಮರ ವಿಷಯವು ಒಂದು ಶಾಸನದಲ್ಲಿದೆ.[107]

---

98 EC. VIII. Sb. 170, 1126 A.D.

99 EC. V. Bl. 166, 1279 A.D.

100 Arthaśāstra (Tr. Shamasastry), p. 83.

100.1 Ghoshal : Hindu Revenue System, p. 111.

101 ಅದೇ, ಪು. 111.

102 EC. VII. Sk. 118, 1054 A.D.

103 EC. V. Bl. 117, 1136 A.D.

104 Altekar : The Rāṣṭrakūṭas and their Times, p. 356.

105 SII. IX. i. 67, 984 A.D. ;
EC. VIII. Nr. 35, 1077 A.D.

106 ಪಂಪಭಾರತ, 9.28, ವ ; 10.5, ವ. 'ಹೇಮಾಸನ' ಎಂಬುದಕ್ಕೆ 'ಲೋಹಾಸನ' ಎಂದು ಪಾಠಾಂತರವಿದೆ. ಬಹುಶಃ ಇದೇ ಸರಿಯಾದ ಪಾಠ.

106.1 ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಲೋಹಾಸನದ ವರ್ಣನೆಯಿದೆ–"ಐದು, ಏಳು ಅಥವಾ ಒಂಬತ್ತು ಲೋಹಗಳ ಮಿಶ್ರಣದಿಂದ ರಚಿಸಿದ ಕಾಲುಗಳುಳ್ಳ, ಆ ಲೋಹದ ಪಟ್ಟಿಗಳಿಂದಲೇ ಹೆಣೆಯಲ್ಪಟ್ಟ ಮೇಲ್ಭಾಗವುಳ್ಳ, ಮಧ್ಯ (ಆಸನ) ಭಾಗದಲ್ಲಿ ಹತ್ತಿಯ ಬಟ್ಟೆಯಿಂದ ಹೆಣೆಯಲ್ಪಟ್ಟ ಒಂದು ಪೀಠ ವಿಶೇಷವೇ ಲೋಹಾಸನ...."
(ಎಂ. ಎಂ. ಕಲಬುರ್ಗಿ : ಕನ್ನಡ ಗ್ರಂಥಸಂಪಾದನ ಶಾಸ್ತ್ರ, ಪು. 190 ರಿಂದ ಉದ್ಧೃತ)

107 EC. IV. Kp. 68, 1116 A.D.

## ಸಾಲದ ಮತ್ತು ಮಾರಾಟದ ಸೌಲಭ್ಯಗಳು

ರೈತರಿಗಾಗಲಿ ಇತರ ಉದ್ಯೋಗಿಗಳಿಗಾಗಲಿ ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ಸಾಗಿಸಿಕೊಂಡು ಹೋಗಲು ಆಗಾಗ್ಗೆ ಸಾಲವನ್ನು ಮಾಡುವ ಅವಶ್ಯಕತೆ ಬರುತ್ತದೆ. ಸಾಲವನ್ನು ಪಡೆಯುತ್ತಿದ್ದ ವಿಧಾನದ ಚಿತ್ರವು ಶಾಸನಗಳಲ್ಲಿ ದೊರೆಯುವುದಿಲ್ಲ. ಇಲ್ಲಿ ನಯಸೇನನ ಧರ್ಮಾಮೃತವೂ ಇತರ ಕಾವ್ಯಗಳೂ ಸಹಾಯಕ್ಕೆ ಬರುತ್ತವೆ. ಸಾಲವನ್ನು ಪಡೆಯುವವನು ಸಾಕ್ಷಿಗಳ ಮುಂದೆ[108] ಸಾಲದ ಪತ್ರವನ್ನು ಬರೆದುಕೊಡುತ್ತಿದ್ದನು. ಸಾಲದ ಪತ್ರದ ಒಕ್ಕಣೆಯ ವಿಧಾನವನ್ನು ನಂಬಿಯಣ್ಣನ ರಗಳೆಯು ಚಿತ್ರಿಸುತ್ತದೆ.[109] ಸಾಲವನ್ನು ತೆಗೆದುಕೊಂಡವನು ಕೊಡಬೇಕಾದ ಸಾಲವನ್ನು ಹಿಂದಿರುಗಿಸಿದ ಮೇಲೆ ತಾನು ಬರೆದುಕೊಟ್ಟ ಪತ್ರವನ್ನು ಸೀಳಿಹಾಕುತ್ತಿದ್ದನು.[110] ಸಾಲವನ್ನು ಕೊಟ್ಟವನ ಮತ್ತು ತೆಗೆದುಕೊಂಡವನ ಮಧ್ಯೆ ವಿವಾದವು ಎದ್ದರೆ ಊರಿನ ಹಿರಿಯರೇ ಸಭೆ ಸೇರಿ ತೀರ್ಪನ್ನು ಕೊಡುತ್ತಿದ್ದಂತೆ ನಂಬಿಯಣ್ಣನ ರಗಳೆಯಿಂದ ಊಹಿಸಬಹುದು. ಬಡ್ಡಿಯ ನೆಪದಲ್ಲಿ ಬಡವರನ್ನು ಶ್ರೀಮಂತರು ಹೀರದಂತೆ ನೋಡಿಕೊಳ್ಳುವುದಕ್ಕಾಗಿ ಬಡ್ಡಿಯ ದರದ ಮೇಲೆ ಸರ್ಕಾರದ ಹತೋಟಿಯಿರುವುದು ಮುಖ್ಯ. ಪ್ರಾಚೀನ ಕರ್ನಾಟಕದಲ್ಲಿ ಇಂತಹ ಒಂದು ಹತೋಟಿ ಇತ್ತೇ ಎನ್ನುವುದು ಸಂದೇಹಾಸ್ಪದ.

ಶ್ರೀಮಂತರು ಹಣವನ್ನು ಸಾಲವಾಗಿ ಕೊಡುತ್ತಿದ್ದಿರಬೇಕು.[111] ಈ ವಿಷಯವು ಶಾಸನಗಳಲ್ಲಿ ಎಲ್ಲಿಯೂ ಬಂದಿಲ್ಲ. ಶ್ರೀಮಂತರಂತೆಯೇ ಗ್ರಾಮ ಸಭೆಗಳೂ, ಮಹಾಜನ ಸಮಿತಿಗಳೂ, ದೇವಸ್ಥಾನಗಳೂ ಹಣವನ್ನು ಸಾಲವಾಗಿ ಕೊಡುತ್ತಿದ್ದುವು.[112] ಅವುಗಳು ಕೊಟ್ಟ ಹಣಕ್ಕೆ ತೆಗೆದುಕೊಳ್ಳಬೇಕಾದ ಬಡ್ಡಿಯ ದರವನ್ನು ಮೊದಲೇ ಸಾರ್ವಜನಿಕವಾಗಿ ನಿರ್ಧರಿಸುತ್ತಿದ್ದರು. ದೇವಸ್ಥಾನದ ನಂದಾದೀಪಕ್ಕೋ, ವಿದ್ಯಾಭ್ಯಾಸಕ್ಕೋ, ಚತ್ರಕ್ಕೋ, ಕೆರೆಯ ದುರಸ್ತಿಗೋ ಹಣವನ್ನು ಕೊಟ್ಟವನು ತನ್ನ ಹಣದ ಬಡ್ಡಿಯಿಂದ ಅವು ನಡೆಯಬೇಕೆಂದು ಇಚ್ಛಿಸಿ ದತ್ತಿಯನ್ನು ಬಿಟ್ಟುಕೊಡುತ್ತಿದ್ದನು. ಅದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು— "ತನ್ನಗಳಿಸಿದ ಹೊಕ್ಕರಣೆಗೆ ಬಿಟ್ಟ ಗದ್ಯಾಣ 10 ಈ ಪೊನ್ನ ವೃದ್ಧಿಯಲು ಹೊಕ್ಕರಣೆಯ ಬಂಡಂ ಕಳಸುವರು"[113]; "ದೇವರ್ಗ್ಗೆ ನಂದಾದೀವಿಗೆಗೆ ನಡೆವಂತಾಗೆ ತಿಂಗಳ್ಗೆ ಪೊನ್ನ ಹಾಗವಡ್ಡಿಯಳೂರ್ಗ್ಗೆ ಕಳುಂಗೊಟ್ಟ ಗದ್ಯಾಣಂ ನಾಲ್ಕು"[114]; "ರುಗ್ವೇದ ಬಾಲಸಿಕ್ಷೆಯ ಖಂಡಿಕಕ್ಕೆ ಪೊಂಗೆ ವರಿಶಕ್ಕಿಪ್ಪಣ ವೃದ್ಧಿಯ ಲೆಖ್ಖದೆ ಗದ್ಯಾ[ಣ] 30ಱ ವೃದ್ಧಿಯ ನಾಲ್ಕು ಪೊನ್ನ ಖಂಡಿಕದ ಉಪಾಧ್ಯಾಯಗ್ಗೆ...."[115]; "ಊರೊಡೆಯ ಪ್ರಮುಖ ಮಹಾಜನಮಯ್ವದಿಂವರುಮ ನೆರಪಿ ಊ[ರ]

---

108 ಧರ್ಮಾಮೃತ, 2.68, ವ.

109 ನಂಬಿಯಣ್ಣನ ರಗಳೆ, ಪು. 43.

110 ಧರ್ಮಾಮೃತ, 10.5.

111 ಶ್ರೀಮಂತರು ಹಣವನ್ನು ಹೇಗೆ ರಕ್ಷಿಸುತ್ತಿದ್ದರು ? ಹಣವನ್ನು ವ್ಯಾಪಾರದ ಮೇಲೆ ಹಾಕಿ, ಸಾಲವನ್ನು ಕೊಟ್ಟು ಉಳಿದುದನ್ನು ಮನೆಯಲ್ಲಿಡುತ್ತಿದ್ದರು. ಅಂತಹ ಹಣವು ಕಳ್ಳರಿಂದ, ಬೆಂಕಿಯಿಂದ ನಾಶವಾಗಬಹುದೆಂದು ಒಂದು ಶಾಸನವು ಎಚ್ಚರಿಸಿದೆ (EC. XI Dg. 90, 1128 A.D.). ಅನೇಕರು ಹಣವನ್ನು ನೆಲದಲ್ಲಿ ಹೂಳುತ್ತಿದ್ದರು. [BKI. I. i. 75, 1042 A.D ] ಹಣವನ್ನು ಹೂತಿಟ್ಟು, ಹೂತ ಸ್ಥಳವನ್ನು ಮರೆತು ಬಿಟ್ಟೋ ಅಥವಾ ಹೂತಿಟ್ಟ ಸ್ಥಳವನ್ನು ಯಾರಿಗೂ ಹೇಳದೆಯೆ ಸತ್ತದ್ದರಿಂದಲೋ ಭೂಗರ್ಭದಲ್ಲಿ ಬೇಕಾದಷ್ಟು ಹಣವು ಉಳಿದುಹೋಯಿತು. ಇಂತಹ ನಿಕ್ಷಿಪ್ತ ಹಣವು ದಕ್ಷಿಣ ಭಾರತದಲ್ಲಿ ಎಲ್ಲೆಲ್ಲಿದೆ, ಅದನ್ನು ಪಡೆವ ವಿಧಾನ ಯಾವುದು ಎಂಬುದನ್ನು ತಿಳಿಸುವ 'ಧನವಾಸ್ತು' ಎಂಬ ಗ್ರಂಥವೇ ಹುಟ್ಟಿವೆ [MAR. 1929. p. 35]

112 ಬ್ಯಾಬಿಲೋನಿಯಾ ದೇವಸ್ಥಾನಗಳು ವಸ್ತುರೂಪವಾಗಿ ಸಾಲವನ್ನು [commodity loans] ಕೊಡುತ್ತಿದ್ದುವು. ಯೂರೋಪಿನ ಹತ್ತನೇ ಶತಮಾನದ ವಿಹಾರಗಳಿಗೆ ಬೇಕಾದಷ್ಟು ದತ್ತಿಗಳು ಬರುತ್ತಿದ್ದುವು. ಆ ವಿಹಾರಗಳೂ ಕೂಡ ರೈತರಿಗೆ ಹಣವನ್ನು ಸಾಲವಾಗಿ ಕೊಡುತ್ತಿದ್ದುವು [Encyclopaedia of the Social Sciences. II, p. 434.]

113 BKI. I. ii. 196, 1121 A.D.

114 EC. XI. Dg. 140, 1060 A.D.

115 BKI. I. ii. 173, 1124 A. D.

ಮೇಲೆ ಕರ್ವಣಿ ವೃದ್ಧಿಯಲ್ ಕಲಿದೇವ ಸ್ವಾಮಿಗೆ ವಿಷ್ಣುದೇವರ್ಗೆ ನಂದ ದೀವಿಗೆಗಂ ನಿವೇದ್ಯಕ್ಕಂ ಶ್ರೀಖಂಡಕ್ಕಂ ಧೂಪಕ್ಕಂ ಮೊದಲ್ಗೊಟ್ಟ ಗದ್ಯಾಣಂ ಪದಿನಯ್ದು. ಆ ವೃದ್ಧಿಯಲು ಎಣ್ಬರ್ ಪ್ರವಾಸಿಗರುಣ್ಬ ಸತ್ರಕ್ಕೆ ಕೊಟ್ಟ ಮೊದಲ್ ಗದ್ಯಾಣಮಿರ್ಪತ್ತಯ್ದು. ಸತ್ರದಡುಗೆಯ ಸವಿಧೆಗೆ ಮೊದಲ್ಗೊಟ್ಟ ಗದ್ಯಾಣಮೆರಡು. ಇಂತೀ ಧರ್ಮ–ಮನೂರೊಡೆಯನುಂ ಊರುಂ ನಡೆಯಿಸುವರ್."[116] ಹೀಗೆ ಊರಿನ ಪ್ರಮುಖರು, ವರ್ತಕಶ್ರೇಣಿಗಳು, ಕೊನೆಗೆ ಒಬ್ಬೊಬ್ಬ ವ್ಯಕ್ತಿಯೂ[117] ದತ್ತಿಯ ಹಣದ ಧರ್ಮದರ್ಶಿಯಾಗಿ, ಈಗಿನ ಬ್ಯಾಂಕುಗಳಂತೆ ಹಣವನ್ನು ಬಡ್ಡಿಗೆ ಸಾಲವಾಗಿ ಕೊಡುತ್ತಿದ್ದರು. ಬಡ್ಡಿಯ ದರವನ್ನೂ ನಾವು ಸುಲಭವಾಗಿ ನಿರ್ಧರಿಸಬಹುದು. ಒಂದು ಶಾಸನದಲ್ಲಿ[118] ಬಡ್ಡಿಯ ದರ ಈ ರೀತಿ ಇದೆ–ಒಂದು ಪೊನ್ನಿಗೆ ಒಂದು ತಿಂಗಳಿಗೆ ಒಂದು ಹಾಗ ಬಡ್ಡಿ. ಒಂದು ಪೊನ್ನು ಅಥವಾ ಗದ್ಯಾಣಕ್ಕೆ ಹತ್ತು ಪಣ, ಒಂದು ಪಣಕ್ಕೆ ನಾಲ್ಕು ಹಾಗ. ಎಂದರೆ ಒಂದು ಗದ್ಯಾಣ ಅಥವಾ ನಲವತ್ತು ಹಾಗಗಳಿಗೆ ವರ್ಷಕ್ಕೆ ಹನ್ನೆರಡು ಹಾಗ ಬಡ್ಡಿ. ಎಂದರೆ ವರ್ಷಕ್ಕೆ ಶೇಕಡಾ ಮೂವತ್ತರಷ್ಟು ಬಡ್ಡಿಯೆಂದಾಯಿತು. ಇದೇ ದರದ ಬಡ್ಡಿ ಇನ್ನೊಂದು ಶಾಸನದಲ್ಲಿದೆ.[119] ಇನ್ನೊಂದು ಶಾಸನದಲ್ಲಿ ಒಂದು ಪೊನ್ನಿಗೆ ಒಂದು ವರ್ಷಕ್ಕೆ ಎರಡು ಪಣ ಬಡ್ಡಿ ಎಂದು ಹೇಳಿದೆ.[120] ಎಂದರೆ, ಬಡ್ಡಿಯ ದರ ಶೇಕಡಾ ಇಪ್ಪತ್ತು. ಆದ್ದರಿಂದ ಬಡ್ಡಿಯ ದರ ಶೇಕಡಾ ಇಪ್ಪತ್ತರಿಂದ ಮೂವತ್ತರವರೆಗೆ ಇತ್ತು ಎಂದು ಊಹಿಸಬಹುದು [ಕೌಟಿಲ್ಯನಲ್ಲಿ ವರ್ಷಕ್ಕೆ ಶೇಕಡಾ ಮೂವತ್ತೇಳೂವರೆ ಎಂಬುದು ನ್ಯಾಯವಾದ ಬಡ್ಡಿಯ ದರ ಎಂದಿದೆ[121]]. ಹೀಗೆ ನೋಡಿದರೆ ಬಡ್ಡಿಯ ದರವು ಸ್ವಲ್ಪ ಹೆಚ್ಚಾಗಿಯೇ ಇದ್ದಿತೆಂದು ಊಹಿಸಬಹುದು. ದತ್ತಿಯಾಗಿ ಕೊಟ್ಟಿರುವ ಹಣದ ಬಡ್ಡಿಯನ್ನು ಆಗಾಗ್ಗೆ ಬಲ್ಲವರು ನಿರ್ಧರಿಸಬೇಕೆಂದು ಮೊದಲನೆಯ ಅಮೋಘವರ್ಷನ ಕನ್ಹೇರಿಯ ಶಾಸನವು ತಿಳಿಸುತ್ತದೆ.[122] ಬಹುಶಃ ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ಬಡ್ಡಿಯ ದರವು ಬೇರೆಯಾಗುತ್ತಿದ್ದಿತೆಂದು ಊಹಿಸಬಹುದು. ಶ್ರೀಮಂತರ ಬಳಿ ಬಡ್ಡಿಯ ದರವು ಇದಕ್ಕಿಂತ ಹೆಚ್ಚಿಗೆ ಇರುತ್ತಿತ್ತೋ, ಕಡಿಮೆ ಇರುತ್ತಿತ್ತೋ ಹೇಳುವುದು ಕಷ್ಟ. ಬಡ್ಡಿಯು ಧಾರ್ಮಿಕ ಕಾರ್ಯಗಳಿಗೆ ವಿನಿಯೋಗವಾಗುತ್ತಿದ್ದುದರಿಂದ, ಕೊಡುವವರು ಸ್ವಲ್ಪ ಹೆಚ್ಚಾಗಿಯೇ ಕೊಡಲಿ ಎಂದು ಬಡ್ಡಿಯ ದರವನ್ನು ಏರಿಸಿ ಹೇಳಿರಬಹುದು ಶಾಸನಗಳಲ್ಲಿ. ಶ್ರೀಮಂತರ ಬಳಿ ಬಡ್ಡಿಯ ದರವು ಇನ್ನೂ ಸ್ವಲ್ಪ ಕಡಿಮೆಯಿದ್ದಿತೆಂದು ಊಹಿಸಬಹುದು.

ಸಾಲವಾಗಿ ಹಣವನ್ನು ಪಡೆಯಲು ತಮ್ಮ ಆಸ್ತಿಯ ಒಂದು ಭಾಗವನ್ನು ಒತ್ತೆಯಾಗಿಡುವುದು ರೂಢಿ. ಆದರೆ ತನ್ನ ಹೆಸರಿನ ಒಂದು ಭಾಗವನ್ನೇ ಒತ್ತೆಯಾಗಿಟ್ಟು, ಸಾಲವು ಮುಗಿದ ಮೇಲೆ ಆ ಭಾಗವನ್ನು ಹಿಂದಕ್ಕೆ ಪಡೆದ ಒಂದು ಅತ್ಯಪೂರ್ವ ನಿದರ್ಶನವು ಒಂದು ಶಾಸನದಲ್ಲಿದೆ (ಇದರ ಪ್ರಸ್ತಾಪವು ಹಿಂದೆ ಒಂದು ಅಧ್ಯಾಯದಲ್ಲಿ ಬಂದಿದೆ). ರುದ್ರಭಟ್ಟ ಎಂಬ ವಿದ್ವಾಂಸನು ಒಂದು ನೂರು ಗದ್ಯಾಣಗಳನ್ನು ತನ್ನ ಹೆಸರಿನ ಒಂದು ಭಾಗವನ್ನು ಒತ್ತೆಯಾಗಿಟ್ಟು ಸಾಲವಾಗಿ ಪಡೆಯುತ್ತಾನೆ. ಸಾಲವು ಮುಗಿಯುವವರೆಗೆ ಅವನು ತನ್ನನ್ನು 'ರುದ್ರಟ'ನೆಂದು ಕರೆದುಕೊಳ್ಳುತ್ತಿದ್ದನು. ಸಾಲವು ಮುಗಿದ ಮೇಲೆ ತನ್ನ ಹಿಂದಿನ ಹೆಸರನ್ನು ಮತ್ತೆ ಪಡೆದುಕೊಂಡನು.[123] "ಒಬ್ಬ ವಿದ್ವಾಂಸನ ಹೆಸರನ್ನು ಅಕ್ಷರಶಃ ಗೌರವಿಸುತ್ತಿದ್ದ ದಿನಗಳವು".[124]

116 BKI. I. i. 92, 1054 A.D.

117 EC. VI. Cm. 99, 1116 A.D.

118 EC. XI. Dg. 140, 1060 A.D.

119 EC. III. Tn. 129, 1136 A.D.

120 BKI. I. ii. 173, 1124 A.D.

121 Arthaśāstra, III. XI.

122 Altekar : The Rāṣṭrakūṭas and their Times, p. 371.

123 JBBRAS. X. p. 257. "...ಅದಱಿಕೊಳ್ ನಿಜನಾಮಾಕ್ಷರವಿಡೆ ಸಾಸಿರ ಪೊಂಗೆ ಕೊಟ್ಟದಂ ಬಿಡಿಸನಿತುದಿನಂ ಪಡೆದಂ ರುದ್ರಟನೆಂಬೀ ಪಡೆಮಾತಂ ರುದ್ರಭಟ್ಟನುರ್ಬೀ ಜನದಿಂ" (SII. XX. No. 248, 1228 A.D.)

124 Dixit : An Introduction to Archaeology, p. 90.

ಒಂದೊಂದು ಊರಿನಲ್ಲೂ ಅಂಗಡಿ[125]ಗಳಿರುತ್ತಿದ್ದುವು. ವಾರಕ್ಕೊಮ್ಮೆ ಹತ್ತಾರು ಗ್ರಾಮಗಳ ಮಧ್ಯೆ ಸಂತೆಗಳು ನೆರೆಯುತ್ತಿದ್ದುವು. ಸೂಂಡಿ ಎಂಬಲ್ಲಿ ಭಾನುವಾರ ಸಂತೆಯು ನೆರೆಯುತ್ತಿತ್ತು.[126] ರೈತರು ಮತ್ತು ಉದ್ಯೋಗಿಗಳು ತಮ್ಮ ತಮ್ಮ ಉತ್ಪನ್ನಗಳನ್ನು ಅಂಗಡಿಗಳಿಗೋ, ಸಂತೆಗಳಿಗೋ ಗಾಡಿಗಳ ಮೇಲೆ ಪ್ರಾಣಿಗಳ ಮೇಲೆ ಅಥವಾ ಹೆಗಲ ಮೇಲೆ ಹೊತ್ತು ಮಾರಾಟಮಾಡುತ್ತಿದ್ದರು. ಹಣದ ಚಲಾವಣೆ ಇದ್ದುದ್ದರಿಂದ ತಮ್ಮ ಉತ್ಪನ್ನಗಳನ್ನು ಮಾರಿ ಹಣವನ್ನು ತೆಗೆದುಕೊಳ್ಳುತ್ತಿದ್ದರು. ಅಥವಾ ಈಗಲೂ ಕೆಲವು ಸಂತೆಗಳಲ್ಲಿ ನಡೆಯುವಂತೆ ತಮ್ಮ ತಮ್ಮ ಹತ್ತಿರವಿರುವ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು ('barter system'). ಇಲ್ಲಿ ನಮಗೆ ತಿಳಿಯದೆ ಉಳಿಯುವ ಅಂಶಗಳು ಎರಡು—(i) ವಸ್ತುಗಳ ಧಾರಣೆ ಅಥವಾ 'ನಾಣ್ಯದ ಕೊಳ್ಳುವ ಬೆಲೆ' (the purchasing power of the coins), (ii) ಧಾರಣೆಗಳ ಮೇಲೆ ಸರಕಾರದ ಹತೋಟಿ.[127] ಎರಡನೆಯ ಅಂಶವಂತೂ ಅಜ್ಞಾತವಾಗಿಯೇ ಉಳಿಯುತ್ತದೆ. ಮೊದಲನೆಯ ಅಂಶದ ಮೇಲೆ ಅಲ್ಪಸ್ವಲ್ಪ ಬೆಳಕನ್ನು ಶಾಸನಗಳು ಬೀರುತ್ತವೆ. ಡಾ॥ ಅಲ್ಟೇಕರರು ತಮಿಳುನಾಡಿನ ಅನೇಕ ಶಾಸನಗಳ ಸಹಾಯದಿಂದ ಪ್ರಾಚೀನ ಕಾಲದಲ್ಲಿ ಒಂದೊಂದು ರೂಪಾಯಿಗೆ ಸುಮಾರು ಮೂವತ್ತು ಸೇರು ಅಕ್ಕಿಯೂ, ಸುಮಾರು ಎರಡುವರೆ ಸೇರು ತುಪ್ಪವೂ, ಅಷ್ಟೇ ಪ್ರಮಾಣದ ಎಣ್ಣೆಯೂ, ಇಪ್ಪತ್ತನಾಲ್ಕು ಸೇರುಗಳಷ್ಟು ಮೊಸರೂ, ಇಪ್ಪತ್ತೈದು ಸೇರುಗಳಷ್ಟು ದ್ವಿದಳ ಧಾನ್ಯಗಳೂ, ಎಪ್ಪತ್ತೈದು ಸೇರುಗಳಷ್ಟು ಉಪ್ಪೂ ದೊರೆಯುತ್ತಿದ್ದುವೆಂದು ಅಭಿಪ್ರಾಯಪಡುತ್ತಾರೆ.[128] ಅವರು ಈ ತೀರ್ಮಾನಗಳಿಗೆ ಬರಲು ಬಹಳ ಕಷ್ಟಪಟ್ಟಿದ್ದಾರೆಂದು ಆ ಭಾಗವನ್ನು ಓದಿದರೆ ಗೊತ್ತಾಗುತ್ತದೆ. ಆದರೆ ಪ್ರಾಚೀನ ಕಾಲದ ನಾಣ್ಯಗಳಿಗೂ ಈಗಿನ ರೂಪಾಯಿಗೂ, ಹಿಂದಿನ ಅಳತೆಗಳಿಗೂ ಇಂದಿನ ಅಳತೆಗಳಿಗೂ ಇನ್ನೂ ಸಂಬಂಧವನ್ನು ಸರಿಯಾಗಿ ಕಲ್ಪಿಸಬೇಕಾಗಿದೆ. ಅಲ್ಲದೆ ಅವು ತಮಿಳುನಾಡಿನ ಬೇರೆ ಬೇರೆ ಕಾಲಗಳಲ್ಲಿದ್ದ ಬೆಲೆಗಳು. ಅವುಗಳನ್ನುಕರ್ನಾಟಕಕ್ಕೆ ಎಷ್ಟುಮಟ್ಟಿಗೆ ಅನ್ವಯಿಸಬಹುದೋ ತಿಳಿಯದು.

## ಕೆಲಸಗಾರರು ಮತ್ತು ಕೂಲಿ

ಕೆರೆಗಳನ್ನು ಕಟ್ಟಿಸಲು, ದೇವಸ್ಥಾನಗಳನ್ನು ನಿರ್ಮಿಸಲು ಕೂಲಿಯನ್ನು ಕೊಟ್ಟು ಕೆಲಸಗಾರರನ್ನು ನೇಮಿಸಿಕೊಳ್ಳುತ್ತಿದ್ದರು. ಆದರೆ ಅವರಿಗೆ ಕೊಡುತ್ತಿದ್ದ ಕೂಲಿಯೆಷ್ಟು ಎಂಬುದರ ಪರಿಚಯವು ಶಾಸನಗಳಲ್ಲಿ ದೊರೆಯುವುದಿಲ್ಲ.[129] ಕೂಲಿಯನ್ನು ಮೊದಲೇ ನಿರ್ಧರಿಸದೆ ಕೆಲಸಮಾಡಿಸಿಕೊಂಡಿದ್ದರೆ ಕೆಲಸಗಾರನಿಗೆ ಆ ಕೆಲಸದ ಲಾಭದಲ್ಲಿ ಹತ್ತರಲ್ಲೊಂದು ಭಾಗವು ಸಲ್ಲಬೇಕೆಂದು ಮಿತಾಕ್ಷರವು ಹೇಳುತ್ತದೆ (ii. 194). ಕೂಲಿಯನ್ನಾಗಲಿ ಸಂಬಳವನ್ನಾಗಲಿ ನಿರ್ಧರಿಸಲು ಇದರಿಂದ ಯಾವ ರೀತಿಯ ಸಹಾಯವೂ ಒದಗುವುದಿಲ್ಲ. ಪಟ್ಟಣಸ್ವಾಮಿ ನೊಕ್ಕಯ್ಯ

---

[125] BKI. I. ii. 150, 1102 A.D.

[126] EI. XV. p. 87, 1074 A.D.

[127] ಡಾ॥ ಅಪ್ಪಾದೊರೆಯವರು ಹೇಳುವ ಹಾಗೆ "ವ್ಯವಸಾಯ, ಧಾರಣೆ ಮತ್ತು ಕೂಲಿಗಳನ್ನು ಪದ್ಧತಿಯು ನಿಯಂತ್ರಿಸುತ್ತಿದ್ದಿತು" (Economic Conditions in South India, p. 4). ವಸ್ತುಗಳಿಗೆ ಕಡಮೆ ಬೆಲೆ ಇದ್ದಾಗ ಸರಕಾರವು ಅವುಗಳನ್ನು ಕೊಂಡುಕೊಂಡು, ವ್ಯಾಪಾರಗಾರರು ಬೆಲೆ ಹೆಚ್ಚಿಸಿದಾಗ ಅವುಗಳನ್ನು ಪೇಟೆಗೆ ತಂದು ಬೆಲೆಯನ್ನು ಇಳಿಸಬೇಕೆಂದು ಅರ್ಥಶಾಸ್ತ್ರವು ಹೇಳುತ್ತದೆ [The Wonder that was India, p. 217]. ಇದನ್ನು ಸರಕಾರಗಳು ನಿಜವಾಗಿಯೂ ಅನುಸರಿಸುತ್ತಿದ್ದುವೇ ಎಂಬುದು ಸಂದೇಹಾಸ್ಪದ. ರೈತರಿಗೆ ಕಷ್ಟಕಾಲದಲ್ಲಿ ಬಿತ್ತುವ ಧಾನ್ಯಗಳನ್ನು ಸರ್ಕಾರವು ಒದಗಿಸುತ್ತಿದ್ದಿತು. [S. Chandrashekhara Shastry : 'Economic Conditions under the Hoysaḷas'–Half Yearly Journal of the Mysore University, II, p. 204]. ಆದರೆ ಇದು ಬೇರೆ.

[128] Altekar : The Rāṣṭrakūṭas and their Times, pp. 379–822.

[129] ಶಿಲ್ಪಿಗಳಿಗೆ, ಉಪಾಧ್ಯಾಯರಿಗೆ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. ಆದರೆ ಅಲ್ಲಿ ದತ್ತಿಗಳನ್ನು ಕೊಡುವವನ ಇಷ್ಟದ ಮೇಲೆ, ಅವನ ಮತ್ತು ದತ್ತಿಯನ್ನು ಸ್ವೀಕರಿಸುವವನ ಸಂಬಂಧದ ಮೇಲೆ ದತ್ತಿಯ ಪ್ರಮಾಣವು ಇರುವುದರಿಂದ, ಆ ದತ್ತಿಯು ವ್ಯಕ್ತಿಯ ಶ್ರಮದ ಪ್ರತಿಫಲವನ್ನು ಸರಿಯಾಗಿ ಸೂಚಿಸುವುದೆಂದು ಹೇಳಲು ಬಾರದು.

ಎಂಬ ಶ್ರೀಮಂತನು ನೂರು ಗದ್ಯಾಣಗಳನ್ನು ವ್ಯಯಿಸಿ ಒಂದು ಹಳ್ಳಕ್ಕೆ ಅಡ್ಡ ಕಟ್ಟೆಯನ್ನು ಹಾಕಿಸಿದಂತೆ ಶಾಸನ ವೊಂದು ಹೇಳುತ್ತದೆ.[130] ಗದ್ಯಾಣವು ಕ್ರಿ. ಶ. 1934ರ ಹತ್ತು ರೂಪಾಯಿಗಳಿಗೆ ಹೆಚ್ಚು ಕಡಮೆ ಸಮಾನವೆಂದು ಡಾ|| ಅಲ್ಟೇಕರರು ಭಾವಿಸುತ್ತಾರೆ.[131] ಬಹುಶಃ ಈಗಿನ (1966)ಸುಮಾರು ಅರವತ್ತು ರೂಪಾಯಿಗಳಿಗೆ ಸಮಾನ ವೆಂದು ಭಾವಿಸಿದರೆ ಕೆರೆಯನ್ನು ಕಟ್ಟಿಸಲು ಸುಮಾರು ಆರು ಸಾವಿರ ರೂಪಾಯಿಗಳು ಖರ್ಚಾದುವು ಎಂದು ಭಾವಿಸ ಬಹುದು. ಹಳ್ಳಕ್ಕೆ ಅಡ್ಡಲಾಗಿ ಕಟ್ಟಿದ ಕೆರೆಯಾದುದರಿಂದ ಕೆರೆಯು ಸ್ವಲ್ಪ ದೊಡ್ಡದೇ ಆಗಿತ್ತು ಎಂದಿಟ್ಟುಕೊಂಡರೆ, ಕೆಲಸಗಾರರಿಗೆ ದೊರೆಯುತ್ತಿದ್ದ ಕೂಲಿಯು ಅಷ್ಟೇನೂ ಹೆಚ್ಚಾಗಿರಲಿಲ್ಲವೆಂಬ ಭಾವನೆ ಬರುತ್ತದೆ.

ಕನ್ನಡ ಶಾಸನಗಳಲ್ಲಿ ಕಂಡುಬರುವ ತೆರಿಗೆಗಳಲ್ಲಿ 'ಬಿಟ್ಟಿ'[132] ಎಂಬುದೂ ಒಂದು (ಇದರ ಚರ್ಚೆ ಹಿಂದಿನ ಅಧ್ಯಾಯವೊಂದರಲ್ಲಿ ಬಂದಿದೆ). ರಾಜನು ತನಗೆ ಇಷ್ಟಬಂದಾಗ ತನ್ನ ಅಧೀನದಲ್ಲಿರುವ ಯಾರನ್ನೇ ಆಗಲಿ ಪ್ರತಿ ಫಲವಿಲ್ಲದೆ ಕೆಲಸಮಾಡುವಂತೆ ಆಜ್ಞೆ ಮಾಡಬಹುದಾಗಿತ್ತು. ರಾಜನು ದೇಶದಲ್ಲಿ ಸಂಚರಿಸುತ್ತಿರುವಾಗ ಅವನ ಆನೆ ಕುದುರೆಗಳಿಗೆ ಹುಲ್ಲನ್ನು ಕೊಯ್ದು ಹಾಕುವುದೂ[133] ಒಂದು ರೀತಿಯ ಬಿಟ್ಟಿಯೇ. ಸೈನ್ಯವು ಹೊರಟಾಗ ಅದಕ್ಕೆ ದಾರಿಯನ್ನು ಸಿದ್ಧಪಡಿಸುವುದು, ಆಯುಧಾದಿಗಳನ್ನು ಹೊರುವುದು, ಗಾಯಗೊಂಡವರನ್ನು ಹೊತ್ತುತರುವುದು– ಇತ್ಯಾದಿಗಳೂ ಬಿಟ್ಟಿ ಕೆಲಸಗಳೇ. ರಾಜನು ತನ್ನ ಅಧಿಕಾರವನ್ನು ಬಿಟ್ಟಿಯ ಮೂಲಕ ಚಲಾಯಿಸುತ್ತಿದ್ದನು.[134] ಕೆಲವೊಮ್ಮೆ ಬಿಟ್ಟಿಯು 'ದಾಸ್ಯ'ಕ್ಕೆ (Slavery) ಇರುವ ಇನ್ನೊಂದು ಹೆಸರು. ಪ್ರಾಚೀನ ಕರ್ನಾಟಕದಲ್ಲಿ ಧಾಸ್ಯ ಪದ್ಧತಿಯು ಇದ್ದಿತೆಂಬುದಕ್ಕೆ ಆಧಾರಗಳಿವೆ. ಯುದ್ಧದಲ್ಲಿ ಸೋತವರನ್ನು ಆಳುಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಸಂತೆಯಲ್ಲಿ ಎತ್ತು ಕುದುರೆಗಳ ಮಾರಾಟದ ಜೊತೆಗೆ ತೊತ್ತುಗಳ ಮಾರಾಟವೂ ನಡೆಯುತ್ತಿದ್ದಿತೆಂದು ಬಹು ಈಚಿನ ಶಾಸನವೊಂದರಲ್ಲಿ ಹೇಳಿದೆ.[135] ಆದರೆ ಪ್ರಾಚೀನ ಕರ್ನಾಟಕದಲ್ಲಿ ತೊತ್ತುಗಳ ವ್ಯಾಪಾರವು ನಡೆಯುತ್ತಿತ್ತೆಂಬುದಕ್ಕೆ ಆಧಾರಗಳಿಲ್ಲ.

ಯಶಸ್ತಿಲಕ ಚಂಪುವಿನ ಗೂಢಚಾರನು ಒಬ್ಬ ರಾಜನ ಮಂತ್ರಿಯ ಮೇಲೆ ಆರೋಪಣೆಗಳನ್ನು ಹೊರಿಸುತ್ತ ಅವನು ಬಿತ್ತನೆಯ ಕಾಲದಲ್ಲಿ ವಿಷ್ಟಿಯನ್ನೂ, ತೆನೆಗಳು ಹಾಲೂಡುತ್ತಿರುವ ಕಾಲದಲ್ಲಿ ತೆರಿಗೆಗಳನ್ನು ಕೇಳುತ್ತಿರುವ ನೆಂದೂ, ಸುಗ್ಗಿಯ ಸಮಯದಲ್ಲಿ ಸ್ವಚ್ಛಂದವಾಗಿ ಸೇನೆಯನ್ನು ಓಡಾಡಿಸುತ್ತಿರುವನೆಂದೂ ಹೇಳುತ್ತಾನೆ (3.172). ಯಶಸ್ತಿಲಕ ಚಂಪುವಿಗಿಂತ ಹಿಂದೆಯೇ ಅರ್ಥಶಾಸ್ತ್ರವು ವ್ಯವಸಾಯವನ್ನು ದಂಡ, ವಿಷ್ಟಿ, ತೆರಿಗೆಗಳಿಂದ ರಕ್ಷಿಸಬೇಕೆಂದು ಹೇಳಿದ್ದಿತು.[136] ವಿಷ್ಟಿ ಅಥವಾ ಬಿಟ್ಟಿಯು ಬಡಜನರಿಗೆ ಬಹು ಭಯಂಕರವಾಗಿ ಕಾಣುತ್ತಿದ್ದಿರಬೇಕು.

## ವ್ಯಾಪಾರ

### ವರ್ತಕರು ಮತ್ತು ವರ್ತಕಶ್ರೇಣಿಗಳು

ಪ್ರಾಚೀನ ಕರ್ನಾಟಕದ ಜಾತಿವ್ಯವಸ್ಥೆಯನ್ನು ಕುರಿತು ಮುಂದೆ ಚರ್ಚಿಸುವಾಗ, ಒಂದೊಂದು ವೃತ್ತಿಯ ಅಥವಾ ಜಾತಿಯ ಜನರು ಹೇಗೆ ಒಂದೊಂದು ಸಂಘವೆಂಬಂತೆ ನಡೆದುಕೊಳ್ಳುತ್ತಿದ್ದರೆಂಬುದನ್ನು ಸಂಕ್ಷಿಪ್ತವಾಗಿ

---

[130] EC. VIII. Nr. 58, 1062 A.D.

[131] The Rāṣṭrakūṭas and their Times, p. 367.

[132] BKI. I. i. 15, 873 A.D.–"ನೀರುಣಿಸುಂಕಂ ಬಿಟ್ಟಿ ಮೊದಲಾಗಿ ಎಲ್ಲಮುಂ ಬಿಟ್ಟೋಂ" ; "ಕಿಱುದೆಱೆ ಆಯ ದಾಯ ಬಿಟ್ಟಿ ಬೀಯ" [EC. VIII. Sa. 80, 1096 A.D.]. ಬಿಟ್ಟಿಯು ಶ್ರಮರೂಪದ ತೆರಿಗೆ.

[133] EI. XI. p. 6, C. 958 A.D.

[134] "ಬಿಟ್ಟಿವೆಸಗೆಯ್ಯುದ ಜೆಟ್ಟಿಗರಿಲ್ಲ" [EC. XI. Dg. 85, 1145 A.D.]

[135] EC. X. Bowringpet. 72, 1430 A.D.

[136] Arthaśāstra, II. i.

ವಿಚಾರಮಾಡಲಾಗುತ್ತದೆ. ಈ ಸಂಘಗಳನ್ನೇ ಪಾರಿಭಾಷಿಕವಾಗಿ 'ಶ್ರೇಣಿ'ಗಳೆಂದು ನೀತಿಗ್ರಂಥಗಳು ಕರೆಯುತ್ತವೆ.[137] ಒಂದು ರೀತಿಯ ವೃತ್ತಿಯನ್ನು ಅವಲಂಬಿಸುವವರು ಒಂದು ಶ್ರೇಣಿಗೆ ಸೇರಿದವರೆಂದು ಮಿತಾಕ್ಷರವು ಹೇಳುತ್ತದೆ ("ಏಕಪಣ್ಯಶಿಲ್ಪೋಪಜೀವಿನಃ ಶ್ರೇಣಯಃ,"–II. 192). ಪ್ರಾಚೀನ ಕರ್ನಾಟಕದಲ್ಲಿ ವರ್ತಕರು ಮಾತ್ರವಲ್ಲದೆ ಉಳಿದ ಬೇರೆ ಬೇರೆ ವೃತ್ತಿಗಳವರೂ ಒಟ್ಟಾಗಿ ವ್ಯವಹರಿಸುತ್ತಿದ್ದಂತೆ ತಿಳಿದುಬರುತ್ತದೆ. ಇಂತಹ ಕಡೆಗಳಲ್ಲಿ ಜಾತಿಯು ಅವರನ್ನು ಒಟ್ಟಿಗೆ ಸೇರಿಸುತ್ತಿದ್ದ ಅಂಶವಾಗಿದ್ದಿತು. ಯಾವುದಾದರೂ ಕ್ರಮವನ್ನು ಕೈಗೊಳ್ಳಬೇಕಾದರೆ ಒಂದು ಜಾತಿಯವರು ಒಟ್ಟಿಗೆ ಸೇರಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು. ಈ ಶ್ರೇಣಿ ಅಥವಾ ಸಂಘಗಳಲ್ಲಿ ಮೂರು ರೀತಿಗಳನ್ನು ಗುರುತಿಸಬಹುದು. (i) ಕೇವಲ ಜಾತಿಯ ಆಧಾರದ ಮೇಲೆ ಮಾಡಿಕೊಂಡಿದ್ದ ಅಥವಾ ತಮ್ಮಷ್ಟಕ್ಕೆ ತಾವೇ ರೂಪಿತವಾಗಿದ್ದ ಗುಂಪುಗಳು. ಉದಾ: ಮೇದರು, ತೆಲ್ಲಿಗರು. (ii) ಜಾತಿಯ ಆಧಾರದ ಮೇಲೆ ಒಂದು ಗುಂಪಾಗಿದ್ದರೂ, ತಮ್ಮ ಗುಂಪು ಯಾವುದೋ ಒಂದು ಸಂಖ್ಯೆಯ ಮೂಲಪುರುಷರಿಂದ ಆರಂಭವಾಯಿತೆಂದು ಹೇಳಿಕೊಳ್ಳತಕ್ಕವರು. ಉದಾ: ಉಗುರ ಮೂನೂರ್ವರು. ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಸ್ಥಳಗಳಲ್ಲಿ ರಚಿತವಾದ ಶಾಸನಗಳಲ್ಲಿ 'ಉಗುರ ಮೂನೂರ್ವರು' ಎಂದೇ ಇದೆ.[138] (iii) ಇವರಿಬ್ಬರಿಗಿಂತ ಹೆಚ್ಚು ಸುವ್ಯವಸ್ಥಿತವಾದ ಬಹುಮಟ್ಟಿಗೆ ಎರಡನೆಯ ಗುಂಪನ್ನು ಹೋಲುವ ಗುಂಪು. ಉದಾ: ವರ್ತಕರ ಶ್ರೇಣಿ. ತಮ್ಮ ಮೂಲ ಪುರುಷರು ಅಯ್ಯಾವೊಳೆಯ ಐನೂರ್ವರು ಎಂದು ಇವರು ಭಾವಿಸುತ್ತಾರೆ.

ಮೊದಲ ಎರಡು ಗುಂಪುಗಳನ್ನು ಕುರಿತು ಮುಂದಿನ ಅಧ್ಯಾಯವೊಂದರಲ್ಲಿ ಚರ್ಚಿಸಲಾಗುತ್ತದೆ. ಇಲ್ಲಿ ಮುಖ್ಯವಾಗಿ ವರ್ತಕಶ್ರೇಣಿಗಳನ್ನು ಕುರಿತು ವಿಚಾರಮಾಡಲಾಗುತ್ತದೆ. ವರ್ತಕಶ್ರೇಣಿಗಳ ವಿಷಯವನ್ನು ಹೇಳುವ ಮೊದಲು ವರ್ತಕರನ್ನು ಕುರಿತು ಕೆಲವು ಮಾತುಗಳನ್ನು ಹೇಳುವುದು ಆವಶ್ಯಕ. ಇವರಲ್ಲಿ ಮುಮ್ಮುರಿದಂಡ (=ಮುಮ್ಮುರಿ ತಂಡ), ಗವಱೆ, ಗಾತ್ರಿಗ, ಬೀರ, ಬೀರವಣಿಗ, ಸೆಟ್ಟಿ, ಸೆಟ್ಟಿಗುತ್ತ, ವೇಳೆಕಾಱ—ಮುಂತಾದ ಪಂಗಡಗಳಿದ್ದುವು. ಇವೆಲ್ಲವನ್ನೂ ವಿವರಿಸಿ, ಒಂದೊಂದಕ್ಕೂ ಇರುವ ವ್ಯತ್ಯಾಸಗಳನ್ನು ಹೇಳುವುದು ಸ್ವಲ್ಪ ಕಷ್ಟ. ಮುಮ್ಮುರಿ ಎಂದರೆ ಕಾಯಿಸಿದ ಮರಳು ಎಂಬ ಅರ್ಥವನ್ನು ಕೇಶಿರಾಜನು ಕೊಡುತ್ತಾನೆ.[139] ಈ ಅರ್ಥದ ಸಹಾಯದಿಂದ ಮುಮ್ಮುರಿ ತಂಡವನ್ನು ಹೇಗೆ ವಿವರಿಸುವುದೋ ಗೊತ್ತಿಲ್ಲ. ಗವಱೆ ಎಂಬುದು ವರ್ತಕರಿಗೇ ಇದ್ದ ಸಾಮಾನ್ಯ ಹೆಸರಿನಂತೆ ಕೆಲವು ಕಡೆ ಭಾವನೆ ಬರುತ್ತದೆ.[140] ಗಾತ್ರಿಗ ಎಂಬುದು ಹೆಗಲಮೇಲೆ ಅಥವಾ ತಲೆಯ ಮೇಲೆ ವಸ್ತುಗಳನ್ನು ಹೊತ್ತು ಮಾರುವವನನ್ನು ಸೂಚಿಸುವಂತೆ ಕಾಣುತ್ತದೆ (ಸಂ. ಗಾತ್ರ=ದೇಹ). ಬೀರವಣಿಗ ಎನ್ನುವುದು 'ವೀರಬಣಿಂಜು'ವಿನ ಇನ್ನೊಂದು ರೂಪ (ಸಂ. ವೀರವಣಿಕ). ವರ್ತಕರು ತಮ್ಮ ಜಾತಿಯನ್ನು 'ವೀರಬಣಂಜುಧರ್ಮ' ಎಂದು ಕರೆದುಕೊಳ್ಳುವುದುಂಟು[140.1] ಸೆಟ್ಟಿ ಎಂಬುದು ಸಂಸ್ಕೃತ ಶ್ರೇಷ್ಠಿಯ ತದ್ಭವ.

---

137 'ಶ್ರೇಣಿ' ಎಂಬುದು ಕನ್ನಡ ಶಾಸನಗಳಲ್ಲಿಯೂ ಬಂದಿದೆ ('ಪಟ್ಟಗಾಱರ ಸೇಣಿ'–EI. VI. p. 166). ಕನ್ನಡದಲ್ಲಿ ಶ್ರೇಣಿಯನ್ನು ಕೊತ್ತಳಿ ಎಂದು ಕರೆಯುತ್ತಿದ್ದರು (EI. XII. p. 332). ಕೊತ್ತಳಿ ಎಂದರೆ ಗುಂಪು ಎಂಬರ್ಥ. ತಮಿಳು. ಕೊತ್ತು=ಗೊಂಚಲು, ಸಭೆ; ತೆಲುಗು. ಗುತ್ತಿ, ಗೊತ್ತು=ಗೊಂಚಲು.

138 SII. IX. i. 141, 1079 A.D.; BKI. I. ii. 181, 1094 A.D.; EI. XIII. p. 14, 1107 A.D.; BKI. I. ii. 158, 1109 A.D.

139 ಶಬ್ದಮಣಿದರ್ಪಣ, ಪು. 283.

140 ತಮಿಳಿನಲ್ಲಿ 'ಕವಱೈ' ಎಂಬುದು ತೆಲುಗಿನ ಬಲಿಜ (ಸಂ. ವಣಿಕ್, ವಣಿಜ) ಜಾತಿಗಿರುವ ಹೆಸರು. ಮಲಯಾಳದಲ್ಲಿ ಕವಱ ಎಂದರೆ ಬಳೆಗಳನ್ನು ಬುಟ್ಟಿಗಳನ್ನು ಮಾರುವವನು ಎಂಬರ್ಥ. ಈಚಿನ ಕನ್ನಡದಲ್ಲಿ ಗವಱಿಗ ಎಂದರೆ ಮೋಸಗಾರನು ಎಂಬರ್ಥವಿದೆ. (ಮೇದರ ಕೇತಯ್ಯ ಎಂಬ ವಚನಕಾರನ ಅಂಕಿತ ಗವರೇಶ್ವರ.)

140.1 EC. VII. SK. 118, 1054 A.D. (ಉಳಿದ ಶಾಸನಗಳಲ್ಲಿ ವೀರಬಳಂಜು, ವೀರಬಣಿಂಜು ಎಂಬ ರೂಪಗಳೂ ದೊರಕುತ್ತವೆ).

ಸೆಟ್ಟಿಗುತ್ತ ಎಂಬಲ್ಲಿನ ಉತ್ತರ ಪದವು 'ಕುತ್ತ' (=ಗುಂಪು) ಎಂಬುದಾಗಿರಬಹುದು (ಅಥವಾ ಸಂಸ್ಕೃತದ 'ಗುಪ್ತ'?). ವೇಳೆಕಾಜಿ ಎಂಬುದು ಸಮುದ್ರ ವ್ಯಾಪಾರದೊಡನೆ ಸಂಬಂಧವಿರಿಸಿಕೊಂಡವನನ್ನು ಸೂಚಿಸುವುದೆ? (ವೇಲಾ=ಸಮುದ್ರದ ಅಂಚು). ಇದೆಲ್ಲವೂ ಬರಿಯ ಊಹೆ.

ಇವರದು ವೈಶ್ಯಾನ್ವಯ.[141] ಇವರಲ್ಲಿ ಹಲವರು ಜೈನರಾಗಿದ್ದುದು ನಿಜ. ಪೊಯ್ಸಳನ ರಾಜ ಶ್ರೇಷ್ಠಿಗಳಾಗಿದ್ದ ಪೊಯ್ಸಳ ಸೆಟ್ಟಿ ಮತ್ತು ನೇಮಿಸೆಟ್ಟಿಯರು ಜೈನಧರ್ಮಕ್ಕೆ ಆಶ್ರಯದಾತರಾಗಿದ್ದರು.[142] ಪಟ್ಟಣ ಸ್ವಾಮಿ ನೊಕ್ಕಯ್ಯ ಎಂಬ ಮಹಾ ಶ್ರೀಮಂತನು 'ಜಿನಪಾದಶೇಖರ'ನಾಗಿದ್ದನು.[143] ಮಹಾ ವಡ್ಡ ವ್ಯವಹಾರಿಯಾಗಿದ್ದ ಸಿದ್ದಿಗೆ ಸೆಟ್ಟಿ ಎಂಬಾತನನ್ನು ಒಂದು ಶಾಸನವು 'ಜಿನಧರ್ಮ ಹರ್ಮ್ಯ ತೋರಣ' ಎಂದು ಹೊಗಳಿ, ಆತನು ಮಹಾ ಮಾಂಡಳಿಕ ವೀರಗಂಗರಸನ ಆಪ್ತ ಸ್ನೇಹಿತನಾಗಿದ್ದನೆಂದು ವರ್ಣಿಸುತ್ತದೆ.[144] ವರ್ತಕರೆಲ್ಲ ಸೇರಿ ಕಟ್ಟಿಸಿದ 'ನಖರ ಜಿನಾಲಯ'ದ ಹೆಸರು ಒಂದು ಶಾಸನದಲ್ಲಿದೆ.[145] ಇವೇ ಮುಂತಾದ ನಿದರ್ಶನಗಳು ವರ್ತಕರಲ್ಲಿ ಹಲವರು ಜೈನಮತಾವಲಂಬಿಗಳಾಗಿದ್ದರು ಎಂಬುದಕ್ಕೆ ಸಾಕ್ಷಿಗಳಾಗುತ್ತವೆಯೇ ಹೊರತು ವರ್ತಕರೆಲ್ಲರೂ ಜೈನರಾಗಿದ್ದರು ಎಂಬುದನ್ನು ಸೂಚಿಸುವುದಿಲ್ಲ. ಆದರೆ ವರ್ತಕರೆಲ್ಲರೂ ಜೈನರಾಗಿದ್ದರು ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಅದಕ್ಕೆ ಅವರು ಕೊಡುವ ಆಧಾರ—"ವೀರಬಣಂಜುಗಳ ಧ್ವಜವು ಗುಡ್ಡಧ್ವಜ. ಗುಡ್ಡ ಎಂಬುದು ಜೈನರ ಉಕ್ತಿ. ಅದರ ಅರ್ಥ 'ಸಾಮಾನ್ಯ ಶಿಷ್ಯ' (lay follower) ಎಂದು. ಇಲ್ಲಿ ಬೆಟ್ಟ ಎನ್ನುವ ಅರ್ಥವನ್ನು ಹೇಳುವ ಯತ್ನ ನಡೆದಿದೆ. ಆದರೆ ಆ ಅರ್ಥವು ಇಲ್ಲಿಗೆ ಹೊಂದುವುದಿಲ್ಲ."[146] ಆದರೆ ಗುಡ್ಡ ಎಂಬುದು ಜೈನರ ಪದವಲ್ಲ, ದ್ರಾವಿಡ ಪದ. ತಮಿಳು-ಕುಟ್ಟಂ (=ಚಿಕ್ಕತನ, ಕೋತಿಯ ಮರಿ), ಕುಟ್ಟಿ (ಮರಿ, ಚಿಕ್ಕ ಹುಡುಗಿ); ಮಲಯಾಳ—ಕುಟ್ಟಿ (=ಬಾಲಕ, ಮರಿ); ಕನ್ನಡ-ಗಿಡ್ಡಿ, ಗಿಡ್ಡು ಇತ್ಯಾದಿಗಳನ್ನು[147] ಪರಿಶೀಲಿಸಬಹುದು. ಮೂಲತಃ ಕುಟ್ಟ ಅಥವಾ ಗುಡ್ಡಕ್ಕೆ ಚಿಕ್ಕದು ಎಂಬ ಅರ್ಥವಿದ್ದು, ಚಿಕ್ಕ ಹುಡುಗ ಎಂಬರ್ಥ ಬಂದು, ವಾತ್ಸಲ್ಯದ ಶಿಷ್ಯ ಎಂಬ ಅರ್ಥವು ಮುಂದೆ ಬಂದಿರುವಂತೆ ಕಾಣುತ್ತದೆ. ಗುಡ್ಡ (=ಚಿಕ್ಕ ಬೆಟ್ಟ) ಎಂಬುದೂ ಈ ಶ್ರೇಣಿಗೇ ಸೇರಿದ ಪದ.[148] ಅಲ್ಲದೆ, ಜೈನರಲ್ಲದೆ ಜೈನೇತರರಲ್ಲೂ 'ಗುಡ್ಡು (ಡ್ಡ)' ಎಂಬ ಪದವನ್ನು 'ಶಿಷ್ಯ' ಎಂಬ ಅರ್ಥದಲ್ಲಿ ಬಳಸುತ್ತಾರೆ.[149] ಅನೇಕ ವರ್ತಕರು ಹಿಂದುಗಳಾಗಿದ್ದರೆಂದು ಹೇಳಲು ಅನೇಕ ಆಧಾರಗಳಿವೆ. ಅವರು ತಮ್ಮನ್ನು 'ಭಗವತಿಯ ಮಕ್ಕಳು'[150] ಎಂದೂ 'ಕಾಳಿಕಾದೇವೀ ಲಬ್ಧವರಪ್ರಸಾದರು'[151] ಎಂದೂ ಕರೆದುಕೊಳ್ಳುತ್ತಾರೆ. 'ಬಳಂಜುಧರ್ಮ'ವು ಬ್ರಹ್ಮ ವಿಷ್ಣು ಮಹೇಶ್ವರರ 'ಮಂಥದಿಂದ' ಆದುದೆಂದು ಅನೇಕ ಕಡೆ ಶಾಸನಗಳಲ್ಲಿ ಹೇಳಿದೆ.[152]

---

141 EC. VII. SK. 19, 1066 A.D.

142 EC. II. 134, C. 982 A.D.

143 EC. VIII. Nr. 57, 1077 A.D.

144 EC. VII. Sh. 99, 1127 A.D.

145 EC. XII. Tp. 101, 1078 A.D.

146 Desai : Jainism in South India, pp. 122–3.

147 Burrow and Emeneau : A Dravidian Etymological Dictionary, p. 115.

148 ಬರೋ ಮತ್ತು ಎಮೆನೋ ಅವರು ತಮ್ಮ ಕೋಶದಲ್ಲಿ ತಮಿಳಿನ ಕುಟ್ಟಂ (=ಚಿಕ್ಕದು), ಮತ್ತು ಕನ್ನಡದ ಗುಡ್ಡಗಳನ್ನು (=ಚಿಕ್ಕಬೆಟ್ಟ) ಪ್ರತ್ಯೇಕವಾಗಿ ಪಟ್ಟಿಮಾಡುವ ಆವಶ್ಯಕತೆ ಇಲ್ಲವೆಂದು ಕಾಣುತ್ತದೆ. ಅವೆರಡೂ ಒಂದೇ ಕಡೆ ಬರಬೇಕಾದ ಪದಗಳು.

149 ಸಿದ್ಧರಾಮಚಾರಿತ್ರಸಂಗ್ರಹ, ಪು. 71.

150 IA. X. p. 185, 1095–6 A.D.

151 EC. VII. Sk. 133, 1131 A.D.

152 IA. X. p. 185, 1095–6 A.D.

ಆದ್ದರಿಂದ ಇವರು ಮೂಲತಃ ಹಿಂದುಗಳು.[153] ಕೆಲವರು ಜೈನಧರ್ಮಕ್ಕೆ ಪರಿವರ್ತನೆ ಹೊಂದಿರಬಹುದು. ಅಥವಾ ಜೈನರಾಗಿದ್ದವರು ವ್ಯಾಪಾರವನ್ನಾರಂಭಿಸಿ ವರ್ತಕ ಶ್ರೇಣಿಗೆ ಸೇರಿರಬಹುದು.

ಈ ವೀರಬಣಂಜುಗಳು ಪ್ರಾಚೀನ ಕರ್ನಾಟಕದಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದ ವ್ಯಕ್ತಿಗಳಾಗಿದ್ದರು. ದೇಶದ ಸಮಸ್ತ ವ್ಯಾಪಾರವೂ ಇವರ ಕೈಯಲ್ಲಿದ್ದುದರಿಂದ ಇವರು ಶ್ರೀಮಂತ ಜನಾಂಗವಾಗಿದ್ದುದಲ್ಲದೆ ರಾಜನ ಮೇಲೆ ವರ್ಚಸ್ಸನ್ನು ಬೀರಬಲ್ಲವರಾಗಿದ್ದರು. ಅನೇಕರು ರಾಜಪುರುಷರ ಸ್ನೇಹಿತರಾಗಿದ್ದರು.[154] ಕೆಲವರು ತಮ್ಮ ರಾಜರ ರಾಜ್ಯದ ಅಭ್ಯುದಯಕ್ಕೆ ಕಾರಣರಾಗಿದ್ದರು.[155] ರಾಜನು ಇವರನ್ನು ತನ್ನ ರಾಜಧಾನಿಯ ಮೂಲಸ್ತಂಭವೆಂದು ಭಾವಿಸುತ್ತಿದ್ದನು.[156] ಇವರ ಧರ್ಮಬುದ್ಧಿಯನ್ನೂ ಔದಾರ್ಯವನ್ನೂ ಹಲವು ಶಾಸನಗಳು ಮುಕ್ತಕಂಠದಿಂದ ಪ್ರಶಂಸೆಮಾಡುತ್ತವೆ.[157] ಇಬ್ಬರು ಮಹಾ ಶ್ರೀಮಂತರ ಹೆಸರುಗಳನ್ನು ಇಲ್ಲಿ ಎತ್ತಿ ಆಡಬಹುದು. ಒಬ್ಬ—'ನಖರ ಮುಖ ಮಂಡನ' (ನಖರ=ಶ್ರೇಣಿ) ನಾದ ಪಟ್ಟಣಸ್ವಾಮಿ ನೊಕ್ಕಯ್ಯ. ಇವನು 'ಸಿರಿಗಾವಾಸ'ವಾಗಿದ್ದನು. ಪಟ್ಟಣಸ್ವಾಮಿ ಜಿನಾಲಯವನ್ನೂ, ಅನೇಕ ಪಂಚಲೋಹ ಪ್ರತಿಮೆಗಳನ್ನೂ ಕೆರೆಗಳನ್ನೂ ಮಾಡಿಸಿ ಕೀರ್ತಿಶೇಷನಾಗಿದ್ದಾನೆ.[158] ಇನ್ನೊಬ್ಬ—ಶ್ರೀಮನ್ಮಹಾವಡ್ಡವ್ಯವಹಾರಿ ಕುಲ್ಲಹಣರಾಹುತ ಎನ್ನುವವನು. ಇವನು ದೊಡ್ಡಗದ್ದುಂಬಳ್ಳಿಯಲ್ಲಿ ಲಕ್ಷ್ಮೀ ದೇವಸ್ಥಾನವನ್ನು ಕಟ್ಟಿಸಿ ಆ ಊರನ್ನು ಅಭಿನವ ಕೊಲ್ಲಾಪುರವಾಗಿ ಮಾಡುತ್ತಾನೆ.[159]

ಪ್ರಾಚೀನ ದಕ್ಷಿಣ ಭಾರತದ ವರ್ತಕಶ್ರೇಣಿಗಳಲ್ಲಿ 'ಅಯ್ಯಾವೊಳೆ ಐನೂರ್ವರ್' ಎಂಬ ಹೆಸರಿನದು ಅತ್ಯಂತ ಪ್ರಸಿದ್ಧವಾದುದು. ಈ ಸಂಘದ ಕೇಂದ್ರ ಕಚೇರಿಯು ಬಹುಶಃ ಕನ್ನಡನಾಡಿನ ಐಹೊಳೆಯಲ್ಲಿದ್ದುದರಿಂದ, ಅಥವಾ ಅದಕ್ಕಿಂತ ಹೆಚ್ಚು ಸಮರ್ಪಕವಾದ ಕಾರಣವನ್ನು ಊಹಿಸುವುದಾದರೆ, ಐಹೊಳೆಯ[160] (<ಅಯ್ಯಾವೊಳೆ. ಸಂ. ಆರ್ಯಾಪುರ) ವರ್ತಕರು ತಮ್ಮ ಮೂಲಪುರುಷರೆಂದು ಉಳಿದ ವರ್ತಕರು ಭಾವಿಸಿದ್ದರಿಂದ ಆ ಸಂಘಕ್ಕೆ

---

[153] "........Among the numerous epithets applied to them, there is that of vīra-baṇañju-dharma-pratipāḷa, or 'protectors of vīra baṇañju religion' which suggests the inference that they were a Śaiva guild." —Fleet (IA. VIII. p. 287).
ಆ ಒಂದು ವಿಶೇಷಣವು ಅವರು ಶೈವರೆಂಬುದನ್ನು ಸೂಚಿಸುವುದಾದರೂ ಹೇಗೆ ?.

[154] EC. VII. Sh. 99, 1127 A.D.

[155] EC. VIII. Nr. 57, C. 1077 A.D.

[156] SII. IX. i. 297, 1177 A.D.

"ವರ್ತಕರ ವ್ಯಾಪಾರದ ಅಭಿವೃದ್ಧಿಯಲ್ಲಿ ರಾಜನು ಸದಾ ಆಸಕ್ತನಾಗಿರಬೇಕು. ಏಕೆಂದರೆ ಅವರಿಂದ ರಾಜ್ಯವು ಬಲಿಷ್ಠವಾಗುತ್ತದೆ, ವ್ಯವಸಾಯವು ಊರ್ಜಿತವಾಗುತ್ತದೆ, ಸಂಪತ್ತು ಹೆಚ್ಚುತ್ತದೆ........ರಾಜ್ಯದಲ್ಲಿ ವರ್ತಕರಿಗಿಂತಲೂ ಹೆಚ್ಚಿನ ಐಶ್ವರ್ಯ ಬೇರಾವುದೂ ಇಲ್ಲ" ಎಂದು ಮಹಾಭಾರತವು ಹೇಳುತ್ತದೆ.

[Quoted by, Jayaswal : Hindu Polity, pp. 341–2]

[157] "ಬಲ್ವಲನಪ್ಪ ಪೆರ್ಬ್ಬಸಿಯ ಬಯಿಕೆಗೆ ಭಾಜನಮಾದದೊಳ್ಗೆ ಬೀಳಲ್ವರಿವಂತೆ ನೆಲ್ದ ನಲೆಗಡ್ಡದ ದೊಡ್ಡರ ಬೆಲ್ವ-ವಾತುಗಳ್ಕೊಲ್ಲುಮವಾರ್ಕೆ ಕೆಮ್ಮನೆ ನೆಡೆಯೂಡದಿರೋವೆಲೆ ಶಿಷ್ಟ ಬೇಡಿಕೊಳ್ವೊಲ್ವಡೆ ನಮ್ಮ ಧರ್ಮದ ತವರ್ಮನೆ ಪಟ್ಟಣಸ್ವಾಮಿ ನೊಕ್ಕನಂ." [EC. VIII· Nr. 57, 1062 A.D.]

[158] ಅದೇ.

[159] EC. V. Hn. 149, C. 1113 A.D.

[160] ಐಹೊಳೆ ಬಿಜಾಪುರ ಜಿಲ್ಲೆಯ ಬಾದಾಮಿಯ ಸಮೀಪದಲ್ಲಿದೆ. ಇದರ ಮೂಲರೂಪ 'ಅಯ್ಯಾವೊಳೆ' ಎಂದೇ ಇದ್ದಿರಬೇಕು. ಶಾಸನಗಳಲ್ಲಿ ಬಹುಮಟ್ಟಿಗೆ ಈ ರೂಪವೇ ಇರುವುದು. ಕೆಲವು ಕಡೆ ಇದನ್ನು 'ಆರ್ಯಾಪುರ' ಎಂದು ಸಂಸ್ಕೃತೀಕರಿಸುವುದು ಕಂಡುಬರುತ್ತದೆ. [IA. VIII. p. 287, C. 800 A.D. ; SII. IX. i. 297, 1177 A.D.] 'ಅಯ್ಯಾವೊಬಿ' ಎಂಬ ರೂಪವು ಸು. 1100 ರ ಒಂದು ಶಾಸನದಲ್ಲಿದೆ (EC. X. Mb. 247). 'ಅಯ್ವೊಳೆ' ಎಂಬ ರೂಪವು ಕ್ರಿ. ಶ. 1095–6 ರ ಶಾಸನವೊಂದರಲ್ಲಿದೆ [IA. X. p. 185.].

'ಅಯ್ಯಾವೊಳೆಯ ಐನೂರ್ವರ್' ಎಂಬ ಹೆಸರು ಬಂದಿರಬೇಕು. 'ಬಣಜಿಗರಯ್ನೂರ್ವರ್'[161] ಎಂದರೆ ಮೇಲಿನ ಶ್ರೇಣಿಗೆ ಸೇರಿದ ಬಣಜಿಗ ವರ್ತಕರೆಂದು ಅರ್ಥ. 'ಗವಱೆಗಳಯ್ನೂರ್ವರ್'[162] ಎಂಬುವರು ಅದೇ ಶ್ರೇಣಿಗೆ ಸೇರಿದ ಗವಱೆ ಎಂಬ ವರ್ತಕರು. ಬರಿಯ 'ಐನೂರ್ವರ್'[163] ಎನ್ನುವುದೂ ಮೇಲಿನ ಶ್ರೇಣಿಯನ್ನೇ ಸೂಚಿಸುತ್ತದೆ.

ಈ ವರ್ತಕಶ್ರೇಣಿಯು ಯಾವುದು, ಅದರ ಶಾಖೆಗಳು ಯಾವುವು, ಅದರ ಕರ್ತವ್ಯಗಳೇನು ಎಂಬ ವಿಷಯದಲ್ಲಿ ಶಾಸನಗಳು ಹೆಚ್ಚು ಬೆಳಕನ್ನು ಬೀರುವುದಿಲ್ಲ. ಈ ಸಂಘದ ಹೆಸರು ಕಂಡುಬರುವ ಅತ್ಯಂತ ಪ್ರಾಚೀನ ಶಾಸನವೆಂದರೆ, ಫ್ಲೀಟ್ ಅವರ ಪ್ರಕಾರ, ಸು. 800ರ ಐಹೊಳೆಯ ಶಾಸನ.[164] (ಇದಕ್ಕಿಂತ ಹಿಂದೆಯೂ ವರ್ತಕಶ್ರೇಣಿಗಳಿದ್ದುವು ಎಂಬುದಕ್ಕೆ ಶಾಸನಾಧಾರಗಳಿವೆ.)[165] ಈ ಶಾಸನದಲ್ಲಿ ಬೆಣ್ಣಮ್ಮ ಸೋಮಯಾಜಿ ಎನ್ನುವವನು ಐಹೊಳೆಯ ಐನೂರ್ವರ 'ಚಾತುರ್ವಿದ್ಯ ಸಮುದಾಯ'ಕ್ಕೆ ಕೊಟ್ಟ ದಾನವನ್ನು ಹೇಳಿದೆ. ಅನ್ನಪ್ರಾಶನ, ಪುಂಸವನ, ಮದುವೆ, ಉಪನಯನ, ಸಮಾವರ್ತನ, ಪಶುವಿಧಿ (=ಯಜ್ಞ), ಚಾತುರ್ಮಾಸ್ಯ ಇತ್ಯಾದಿಗಳಿಗಾಗಿ ದಾನವನ್ನು ಕೊಡಲಾಗಿದೆ. ದಾನದ ವಿವರಗಳನ್ನು ನೋಡಿದರೆ ದತ್ತಿಯನ್ನು ಸ್ವೀಕರಿಸಿದವರು ಐಹೊಳೆಯ ಐನೂರ್ವರು ಬ್ರಾಹ್ಮಣರಿರಬೇಕೇ ಹೊರತು, ಐನೂರ್ವರ ವರ್ತಕ ಸಂಘವಿರಲಾರದು. ಇದನ್ನು ಒಪ್ಪಿಕೊಂಡರೆ 'ಅಯ್ಯಾವೊಳೆ ಐನೂರ್ವರ ಹೆಸರನ್ನು ಹೇಳುವ ಅತ್ಯಂತ ಪ್ರಾಚೀನ ಶಾಸನವಿದು' ಎಂಬ ಫ್ಲೀಟರ ಅಭಿಪ್ರಾಯವನ್ನು ಒಪ್ಪಲಾಗುವುದಿಲ್ಲ. ಮುಂದಿನ ಕೆಲವು ಶಾಸನಗಳು ಈ ವರ್ತಕಶ್ರೇಣಿಯ ವಿಷಯದಲ್ಲಿ ಹೆಚ್ಚು ವಿವರಗಳನ್ನು ಕೊಡುತ್ತವೆ. ಈ ಐನೂರ್ವರ ಪ್ರಶಸ್ತಿಯನ್ನು ಐನೂರು ಶಾಸನಗಳು ಕೊಂಡಾಡುತ್ತಿದ್ದುವು ("ಸಮಸ್ತ ಭುವನವಿಖ್ಯಾತ ಪಂಚಶತ ವೀರಶಾಸನಲಬ್ಧಾನೇಕ ಗುಣಾಳಂಕೃತ ಸತ್ಯ ಶೌಚಾಚಾರ ಚಾರು ಚಾರಿತ್ರ ನಯ ವಿನಯ ವಿಜ್ಞಾನ ವೀರ ಬಣಂಜು ಧರ್ಮ ಪ್ರತಿಪಾಳ........").[166] ಇವರು ಪರಿಪಾಲಿಸುತ್ತಿದ್ದ ಧರ್ಮವು 'ವೀರಬಣಂಜು ಧರ್ಮ.' ಇವರು ಮಹಾಶೂರರು ("ಅನೂನ ಸಾಹಸ ಲಕ್ಷ್ಮ್ಯಾಲಿಂಗಿತ ವಕ್ಷಸ್ಥಳ ಭುವನ ಪರಾಕ್ರಮೋನ್ನತರುಂ").[167] ಇವರದು ಗುಡ್ಡಧ್ವಜ.[168] ತಾವು 'ವಾಸುದೇವ ಖಂಡಳಿ ಮೂಲ ಭದ್ರ ವಂಶೋದ್ಭವ'ರೆಂದು ಕರೆದುಕೊಳ್ಳುತ್ತಿದ್ದರು.[169] ಇವರು 'ಭಗವತೀಲಬ್ಧ ವರಪ್ರಸಾದ'ರಾಗಿದ್ದರು.[170] ಮೂವತ್ತೆರಡು ವೇಳಾಪುರಗಳಲ್ಲಿ, ಹದಿನೆಂಟು ಪಟ್ಟಣಗಳಲ್ಲಿ, ಅರವತ್ತು ನಾಲ್ಕು ಯೋಗಪೀಠಗಳಲ್ಲಿ, ಅರವತ್ತು ನಾಲ್ಕು ಘಟಿಕಾಸ್ಥಾನಗಳಲ್ಲಿ ಇವರ ಪ್ರಭಾವವು ವ್ಯಾಪಿಸಿದ್ದಿತು[171] (ಅಲ್ಲಿ ಬರುವ ವಾಕ್ಯಕ್ಕೆ ಸದ್ಯಕ್ಕೆ ಹೀಗೆ ಅರ್ಥಮಾಡಬಹುದು). ಇವರು ದೇಶವಿದೇಶಗಳಲ್ಲಿ ತಮ್ಮ ಸರಕುಗಳನ್ನು ವಾಹನಗಳಲ್ಲಿ ಹೇರಿಯೂ, ತಲೆಯ

161 SII. IX. i. 141, 1079 A.D.

162 SII. IX. i. 165, 1099 A.D.

163 IA. VI. p. 138, 1096 A.D.

164 IA. VIII. p. 287, C. 800 A.D.

165 EC. VI. Kd. 145, C. 750 A.D. ; IA. VIII. p. 285, C. 735 A.D.

166 EC. VII. Sk. 118, 1054 A.D. ; SII. IX. i. 118, 1057 A.D.

167 ಅದೇ.

168 ಅದೇ. ಇಲ್ಲಿ 'ಗುಡ್ಡ' ಎಂದರೆ 'ಚಿಕ್ಕ ಬೆಟ್ಟ' ಎಂದೇ ಅರ್ಥಮಾಡಬೇಕಾಗುತ್ತದೆ. ಈಚಿನ ಒಂದು ಶಾಸನದಲ್ಲಿ ತಮ್ಮದು 'ಚಕ್ರಧ್ವಜ'ವೆಂದು ಹೇಳಿಕೊಂಡಿದ್ದಾರೆ. [SII. IX. i. 297, 1177 A.D.]

169 ಅದೇ.

170 ಅದೇ. ಇವರಲ್ಲಿ ಜೈನರಾದ ಕೆಲವು ವರ್ತಕರು ತಮ್ಮನ್ನು 'ಪದ್ಮಾವತೀಲಬ್ಧ ವರ ಪ್ರಸಾದ'ರೆಂದು ಈಚಿನ ಶಾಸನವೊಂದರಲ್ಲಿ [IA. XIV. p. 14, 1123-4 A.D.] ಕರೆದುಕೊಂಡಿದ್ದಾರೆ.

171 EC. VII. Sk. 118, 1054 A.D ; IA. V. p. 342, 1093-4 A.D.

ಮೇಲೆ ಹೊತ್ತು ಮಾರುತ್ತಿದ್ದರು. ಇವರು 'ಭಲ್ಲುಂಕೆ ದಂಡಹಸ್ತ'ರಾಗಿದ್ದರು.[172] ಇವರು ಬ್ರಹ್ಮ ವಿಷ್ಣು ಮಹೇಶ್ವರರ ಆರಾಧಕರಾಗಿದ್ದರೂ ಒಂದು ಬೌದ್ಧವಿಹಾರಕ್ಕೆ ದತ್ತಿಯನ್ನು ಬಿಟ್ಟುಕೊಟ್ಟಿದ್ದಾರೆ.[173] ಇವರು ತಮ್ಮ ಶಾಸ್ತ್ರವನ್ನು 'ಗುಡ್ಡಶಾಸ್ತ್ರ'ವೆಂದು ಕರೆದುಕೊಂಡಿದ್ದಾರೆ ("ತ್ರೈಲೋಕ್ಯಮುಂ ಸಾಧಿಸುವ ಗುಡ್ಡಶಾಸ್ತ್ರದಪಯುವ ಲಕ್ಷಣಂಗಳನಱಿದು....").[174] ಈ 'ಗುಡ್ಡಶಾಸ್ತ್ರ'ವೆಂದರೇನು, ಈ ಗುಡ್ಡಶಾಸ್ತ್ರಕ್ಕೂ ಅವರ 'ಗುಡ್ಡಧ್ವಜ'ಕ್ಕೂ ಏನಾದರೂ ಸಂಬಂಧವಿದೆಯೋ ತಿಳಿಯದು.

ಈ ಐನೂರ್ವರು ಎಂಬುವರು ವರ್ತಕರ ಪ್ರಾಚೀನ ವಂಶಸ್ಥರೇ ಹೊರತು ಶಾಸನಗಳು ರಚಿತವಾದ ಸಮಯದಲ್ಲಿ ಬಾಳುತ್ತಿದ್ದವರಲ್ಲ. ಏಕೆಂದರೆ ಎಲ್ಲಾ ಶಾಸನಗಳಲ್ಲಿಯೂ ಐನೂರ್ವರ ಪ್ರಶಸ್ತಿ ಬಂದರೂ, ಎಷ್ಟೋ ಊರುಗಳಲ್ಲಿ ನಿಜವಾಗಿ ಇದ್ದ ವರ್ತಕರ ಸಂಖ್ಯೆ ಬೇರೆ ಬೇರೆಯಾಗಿರುತ್ತಿತ್ತು. ಉದಾಹರಣೆಗೆ, ಈ ಐನೂರ್ವರ ಪ್ರಶಸ್ತಿ ಬರುವ ಡಂಬಳಶಾಸನವು ಡಂಬಳದಲ್ಲಿ ಹದಿನಾರು ವರ್ತಕರಿದ್ದರೆಂದು ತಿಳಿಸುತ್ತದೆ.[175] ತಾನು ಅಯ್ನೂರ್ವರ್ ಸ್ವಾಮಿಗಳ ಪುತ್ರನೆಂದು ಒಬ್ಬನು ಹೇಳಿಕೊಂಡಿದ್ದಾನೆ.[176] ಎಂದರೆ ವರ್ತಕರು ವೈಯಕ್ತಿಕವಾಗಿ ಶೈವರಾಗಿರಲಿ, ವೈಷ್ಣವರಾಗಿರಲಿ, ಜೈನರಾಗಿರಲಿ-ಎಲ್ಲರೂ ಈ ಐನೂರ್ವರನ್ನು ಗೌರವದಿಂದ ಸ್ಮರಿಸುತ್ತಿದ್ದರು. ದಾನವನ್ನು ಕೊಡುತ್ತಿರುವ ಸಮಯದಲ್ಲಿ ಈ ಐನೂರ್ವರು ಅಲ್ಲಿ ಪ್ರತ್ಯಕ್ಷವಾಗಿ ಇದ್ದರು ಎಂಬ ಅರ್ಥ ಬರುವಂತೆ ಅನೇಕ ಶಾಸನಗಳು ನಿರೂಪಿಸುತ್ತವೆ. ಈ ಐನೂರ್ವರು ಯಾರೂ ಅಲ್ಲ, ದಾನವನ್ನು ಕೊಟ್ಟ ವರ್ತಕರು. ಅವರ ಸಂಘದ ಹೆಸರು 'ಅಯ್ಯಾವೊಳೆಯ ಐನೂರ್ವರ್' ಎಂದಿರುವುದರಿಂದ ಅವರನ್ನೂ 'ಐನೂರ್ವರ್' ಎಂದೇ ಶಾಸನಗಳು ಕರೆಯುತ್ತವೆ. ದಾನವನ್ನು ಕೊಡುವ ಮೊದಲು ವರ್ತಕರ ಮೂಲಪುರುಷರಾದ ಐನೂರ್ವರಿಗೆ ಗೌರವವನ್ನು ಸಲ್ಲಿಸುತ್ತಿದ್ದರೆಂಬುದರ ಸೂಚನೆಗಳಿವೆ. ("ಶ್ರೀಮದಯ್ಯಾವೊಳೆಯಯ್ನೂರ್ವರ್ ಸ್ವಾಮಿಗಳಿಗೆ ಸಾಷ್ಟಾಂಗವೆಱಗಿ ಪೊಡವಟ್ಟು ಇಕ್ಕಾ ಹಸುಂಬೆಯಂ ನಿಡು ಸಸಿಯಂ ಕುಡು ಸೆಟ್ಟಿ ಶ್ರೀಮದಯ್ಯಾವೊಳೆಯಯ್ನೂರ್ವ ಸ್ವಾಮಿಗಳ್ಗೆ ತಳಿಗೆದಂಬುಲಮಂ ಹೊಯಿ ಜಯಮಂಗಳ.").[177]

ಇದರ ಒಟ್ಟು ಸಾರಾಂಶವನ್ನು ಹೀಗೆ ಸಂಗ್ರಹಿಸಬಹುದು. ಒಂದಾನೊಂದು ಕಾಲದಲ್ಲಿ ಐಹೊಳೆಯು ಅತ್ಯಂತ ಪ್ರಸಿದ್ಧವಾದ ವ್ಯಾಪಾರಕೇಂದ್ರವಾಗಿದ್ದು ಅಲ್ಲಿಯ ಐನೂರ್ವರು ವರ್ತಕರು ದೇಶ ವಿದೇಶಗಳಲ್ಲಿ ವ್ಯಾಪಾರ ಮಾಡುತ್ತಿದ್ದಿರಬೇಕು. ಮುಂದೆ ಬಂದ ವರ್ತಕರು ಅವರು ತಮ್ಮ ಮೂಲಪುರುಷರೆಂದು ಭಾವಿಸಿ ಅವರ ಹೆಸರಿನಲ್ಲಿ ತಮ್ಮ ಸಂಘಗಳನ್ನು ಸ್ಥಾಪಿಸಿಕೊಂಡಿದ್ದಿರಬೇಕು.[178] ಈ ಸಂಘಗಳ ಕೇಂದ್ರವು ಐಹೊಳೆಯಲ್ಲಿದ್ದಿತೆಂದೂ, ಅದು ಇತರ ಶಾಖೆಗಳನ್ನು ನಿಯಂತ್ರಿಸುತ್ತಿದ್ದಿತೆಂದೂ ಊಹಿಸಲು ಮನಸ್ಸಾಗುತ್ತದೆ. ಆದರೆ ಇದಕ್ಕೆ

---

172 EC. VII. Sk. 118, 1054 A.D.

173 IA. X. p. 185, 1095-6 A.D.

174 EC. VII. Sk. 118, 1054 A.D.

ಈ ವಾಕ್ಯದ ಜೊತೆಯಲ್ಲಿ ಇದನ್ನೂ ಗಮನಿಸಬಹುದು—"ವಡ್ಡವ್ಯಾಪಾರದ ನುಡಿದಂದದ್ದವೆ ಪೊಗಳ್ವಂತೆ ಗುಡ್ಡ ಶಾಸ್ತ್ರಾನ್ವಿತ ಸಂಪತ್ತಿಯನೆಂದು ಪೊಗಳ್ವುದು ವಡ್ಡ ಬ್ಯವಹಾರಿ ಮುದ್ದನಂ ಧರೆ ಸತತಂ" [SII. IX. i. 297, 1177 A.D.]

175 IA. X. p. 185, 1095-6 A.D.

176 BKI. I. ii. 169, 1119 A.D.

177 EC. VII. Sk. 118, 1054 A.D.

178 ಐನೂರ್ವರು ಸೇರಿ ಶ್ರೀ ಮಹೇಂದ್ರ ಚತುರ್ವೇದಿ ಮಂಗಲ ಎಂಬ ಊರನ್ನು ಅಯ್ಯಾವೊಳೆಯನ್ನಾಗಿ ಮಾಡಿದರು ಎಂಬ ಹೇಳಿಕೆಗೆ [EC. X. Mb. 247, C. 1100 A.D.] ಆ ಊರಿನಲ್ಲಿ ಕೆಲವರು ವರ್ತಕರು ತಮ್ಮ ಸಂಘವನ್ನು ಸ್ಥಾಪಿಸಿದರು ಎಂದು ವ್ಯಾಖ್ಯಾನ ಮಾಡಬೇಕಾಗುತ್ತದೆ. ಅರಸೀಕೆರೆ [EC. V. AK. 77.] ಮತ್ತು ಕೊಡಗನೂರು [EC. XI Dg. 149 & 161] ಎಂಬುವು ದಕ್ಷಿಣದ ಅಯ್ಯಾವೊಳೆಗಳೆಂದು ಶಾಸನಗಳು ಕರೆದಿವೆ. ಇವು ಪ್ರಸಿದ್ಧ ವ್ಯಾಪಾರಕೇಂದ್ರಗಳಾಗಿದ್ದುದೇ ಹಾಗೆ ಕರೆಯಲು ಕಾರಣವೆಂದು ತೋರುತ್ತದೆ.

ಶಾಸನಾಧಾರಗಳಿಲ್ಲ. ಈ ಹೆಸರಿನ ವರ್ತಕಸಂಘಗಳು ತೆಲುಗು ದೇಶದಲ್ಲಿಯೂ, ತಮಿಳುನಾಡಿನಲ್ಲಿಯೂ ಇದ್ದುವು. ಈ ವರ್ತಕರ ಸಂಘವನ್ನು ರಾಜರು ರಕ್ಷಿಸಬೇಕಾಗಿತ್ತು ಎಂದು ಕಾಣಿಸುತ್ತದೆ. ಇದಕ್ಕೆ ಆಧಾರ–ಮಹಾ ಸಾಮಂತ ಚಟ್ಟಯ್ಯನನ್ನು 'ಐನೂರ್ವರ ಕೋಟೆ' ಎಂದು ಕರೆದಿರುವುದು.[179] ಐನೂರ್ವರು ತಮಗೆ ಬರಬೇಕಾದ ಸುಂಕವನ್ನು ಒಂದು ಕೆರೆಗೆ ಬಿಟ್ಟುಕೊಟ್ಟರು ಎಂದು ಶಾಸನವೊಂದರಲ್ಲಿದೆ.[180] ವರ್ತಕರು ತಮ್ಮ ಸಂಘದ ಖರ್ಚುಗಳಿಗಾಗಿ ಇತರರು ಸುಂಕರೂಪವಾಗಿ ಕೊಡುತ್ತಿದ್ದ ಹಣವನ್ನು ಬಿಟ್ಟುಕೊಟ್ಟರು ಎಂದು ಅದಕ್ಕೆ ಅರ್ಥಮಾಡಬೇಕಾಗುತ್ತದೆ.

ಈ ಸಂಘದ ರಚನೆಯ ವಿಷಯದಲ್ಲಿ ಶಾಸನಗಳು ಹೆಚ್ಚು ಬೆಳಕನ್ನು ಬೀರುವುದಿಲ್ಲ. ಸಂಘದ ಮುಖ್ಯಸ್ಥನನ್ನು 'ಪಟ್ಟಣಸ್ವಾಮಿ' ಎಂಬುದಾಗಿ ಕರೆಯುತ್ತಿದ್ದರು ("ಶ್ರೀಮನ್ಮಹಾಪಟ್ಟಣಂ ರಾಜಧಾನಿ ಬಳ್ಳಿಗ್ರಾಮೆಯ್ಯ ಪಟ್ಟಣಸ್ವಾಮಿ ಹನುಮಂತ ಸೆಟ್ಟಿಯುಂ......................").[181] ಈ ಪಟ್ಟಣಸ್ವಾಮಿಯು ವರ್ತಕರಲ್ಲಿ ಅತಿ ಶ್ರೀಮಂತನೂ, ವೃದ್ಧನೂ ಆಗಿದ್ದಿರಬಹುದು. ಪಟ್ಟಣದ ರಾಜನು ತನಗೆ ವಿವೇಕಿಯೆಂದು ಕಂಡಬಂದ ವ್ಯಕ್ತಿಗೆ ಪಟ್ಟಣಸ್ವಾಮಿ ಪಟ್ಟವನ್ನು ಕೊಡುತ್ತಿದ್ದನು.[182] ಪಲ್ಲವಾದಿತ್ಯನು ಕರವಯ್ಯ ಎಂಬಾತನಿಗೆ 'ಮುಮ್ಮಡಿ ಗವಜಿ ಪಲ್ಲವಾದಿತ್ಯ ನೊಳಂಬ ಸೆಟ್ಟಿ' ಎಂಬ ಹೆಸರನ್ನು ಕೊಟ್ಟು, ಪಟ್ಟವನ್ನು ಕಟ್ಟಿ, ಕುದುರೆ, ಕೊಡೆ, ಕುಂಚ, ತಳಿಗೆ, ಗದ್ದಿಗೆ ಮುಂತಾದುವನ್ನು ರಾಜಮರ್ಯಾದೆಯಾಗಿ ಕೊಡುವ ವಿಷಯವು ಒಂದು ಶಾಸನದಲ್ಲಿದೆ.[183] ಮಲಪರಾಜನು ಒಬ್ಬ ಸೆಟ್ಟಿಗೆ ಸೆಟ್ಟಿಪಟ್ಟವನ್ನು ಕಟ್ಟಿದ ವಿಷಯವು ಶಾಸನವೊಂದರಲ್ಲಿದೆ.[184] ಇದನ್ನು ನೋಡಿದರೆ ವರ್ತಕ ಶ್ರೇಣಿಗಳ ವಿಷಯದಲ್ಲಿ ರಾಜನು ಆಸಕ್ತನಾಗಿದ್ದನೆಂದೂ, ಅವುಗಳ ಮೇಲೆ ಅವನಿಗೆ ಒಂದು ರೀತಿಯ ಹತೋಟಿಯಿದ್ದಿರಬಹುದೆಂದೂ ಊಹಿಸಬಹುದು. ಪಟ್ಟಣಸ್ವಾಮಿಯನ್ನು ಊರಿನ ವರ್ತಕರೇ ಆರಿಸಿಕೊಳ್ಳುತ್ತಿದ್ದುದೂ ಅಸಂಭವವಲ್ಲ. ವರ್ತಕ ಸಂಘದಲ್ಲಿ ಪಟ್ಟಣಸ್ವಾಮಿಯ ಜೊತೆಗೆ ಆರಿಸಿದ ಕೆಲವು ಸದಸ್ಯರಿರುತ್ತಿದ್ದರೆಂಬುದಕ್ಕೆ ಆಧಾರಗಳಿಲ್ಲ. ಯಾವುದಾದರೂ ತೀರ್ಮಾನವನ್ನು ಕೈಗೊಳ್ಳುವಾಗ ಎಲ್ಲ ವರ್ತಕರೂ ಪಟ್ಟಣಸ್ವಾಮಿಯ ನೇತೃತ್ವದಲ್ಲಿ ಸಭೆ ಸೇರಿ ಚರ್ಚಿಸುತ್ತಿದ್ದರೆಂದು ಕಾಣುತ್ತದೆ. ಇದನ್ನೇ ಶಾಸನಗಳು 'ಅಶೇಷ ನಗರಮಿರ್ದು', 'ಮಹಾನಾಡಾಗಿ ಕುಳ್ಳಿರ್ದು',* 'ಐನೂರ್ವರು ನಕರಮುಮಿರ್ದು' ಎಂದು ಹೇಳುವುದು. ಹೀಗೆ ಸಭೆ ಸೇರಿ ಯಾರೋ ಕಟ್ಟಿಸಿದ ದೇವಾಲಯಕ್ಕೆ ತಮ್ಮ ಸಂಘದ ಸದಸ್ಯರಾದ ಬೇರೆ ಬೇರೆ ವರ್ತಕರು ಕೊಡಬಹುದಾದ ದತ್ತಿಯ ಪ್ರಮಾಣವನ್ನು ಕುರಿತು ಚರ್ಚಿಸಿ ಒಂದು ತೀರ್ಮಾನಕ್ಕೆ ಬರುತ್ತಿದ್ದರು. ಅವರ ತೀರ್ಮಾನಕ್ಕೆ ಎಲ್ಲರೂ ತಲೆಬಾಗುತ್ತಿದ್ದರು. ಇದನ್ನೇ "ಸಮಯ ಧರ್ಮಕ್ಕ(ಂ) ಕೂಡಿದ ಸಂಘಾತಕ್ಕಂ ಮಾಡಿದ ಬ್ಯೆ(ವ್ಯ)ವಸ್ಥೆಗಂ ತಪ್ಪುವರಲ್ಲರು'' ಎಂಬುದಾಗಿ ಒಂದು ಶಾಸನವು ಕರೆದಿರುವುದು.[185]

---

179 MAR (1925). p. 50, 1097 A.D.

180 IA. VI. p. 138, 1096 A.D.

181 EC. VII. SK. 94, 1094 A.D. 'ಮಹಾವಡ್ಡ ವ್ಯವಹಾರಿ' ಎಂಬುದು (EC. VII. Sk. 118) 'ಪಟ್ಟಣಸ್ವಾಮಿ'ಯನ್ನೇ ಸೂಚಿಸುತ್ತದೆ. ಆಧುನಿಕ ಕಾಲದ ಅಹಮ್ಮದಾಬಾದಿನ 'ನಗರ್ ಶೇಠ್' ಪದವಿಯೂ ಕೂಡ ಬಹುಮಟ್ಟಿಗೆ ಇದೇ ಎಂಬುದರಲ್ಲಿ ಸಂದೇಹವಿಲ್ಲ. ಇದರೊಡನೆ ಮುದ್ರಾರಾಕ್ಷಸದಲ್ಲಿ ಬರುವ 'ಸರ್ವನಗರಶ್ರೇಷ್ಠಿ'ಯನ್ನು ಹೋಲಿಸಬಹುದು. [ತೀ. ನಂ. ಶ್ರೀಕಂಠಯ್ಯ : ರಾಕ್ಷಸನ ಮುದ್ರಿಕೆ, 1959, ಪು. 108.]

182 EC. VIII. Nr. 57, C. 1077 A.D.

183 SII. IX. i. 41, C. 983 A.D.

184 EC. V. Hn. 45, 1025 A.D.

* ವಿಜಯನಗರಪೂರ್ವ ಶಾಸನಗಳಲ್ಲಿ ಬರುವ 'ಮಹಾನಾಡು' ಪದವು ಒಂದು ವಿಶಿಷ್ಟ ಪ್ರದೇಶದ ವರ್ತಕ ಶ್ರೇಣಿಗಳು ಸಭೆ ಸೇರುವುದನ್ನು ಸೂಚಿಸುತ್ತದೆಯೆಂದು ಡಾ|| ಜಿ. ಎಸ್. ದೀಕ್ಷಿತ್ ಅವರು ಸೂಚಿಸುತ್ತಾರೆ (Śrīkaṇṭhikā, p. 93)

185 EC. VII. Sk. 118, 1054 A.D.

ಪ್ರಾಚೀನ ಗ್ರೀಸಿನಲ್ಲಿ ಸಮಾನ ವೃತ್ತಿಯ ವರ್ತಕರು, ನೌಕಾಸ್ವಾಮಿಗಳು, ಕಸಬುದಾರರು, ಕೂಲಿ ಕೆಲಸಗಾರರು ತಮ್ಮದೇ ಆದ ಸಂಘಗಳನ್ನು ಮಾಡಿಕೊಂಡಿದ್ದರು. ತಮ್ಮ ಸಂಘಗಳ ಕಾರ್ಯಕರ್ತರನ್ನು ಎಲ್ಲರೂ ಸೇರಿ ಚುನಾಯಿಸುತ್ತಿದ್ದರು. ಸಂಘದ ಸದಸ್ಯರ ಸಭೆಯು ನಿಯಮಾವಳಿಗಳನ್ನು ರಚಿಸುತ್ತಿತ್ತು. ಸದಸ್ಯರನ್ನು ಸಂಘಕ್ಕೆ ಸೇರಿಸುವ, ತೆಗೆದುಹಾಕುವ ಕೆಲಸವನ್ನು ನೋಡಿಕೊಳ್ಳುತ್ತಿತ್ತು. ಸದಸ್ಯರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಮೇಲೇರಲು ಯಾವ ಯಾವ ಸಾಧನಗಳನ್ನು ಕೈಗೊಳ್ಳಬೇಕೆಂಬುದನ್ನು ನೋಡಿಕೊಳ್ಳುತ್ತಿದ್ದಿತು. ಕೊನೆಗೆ ನ್ಯಾಯಾಲಯದ ಕೆಲಸಗಳನ್ನೂ ಮಾಡುತ್ತಿತ್ತು. ಕಡೆ ಕಡೆಗೆ ಸದಸ್ಯರ ಒಟ್ಟು ಸಭೆಗಿಂತ, ಸದಸ್ಯರು ಆರಿಸಿದ ಕಾರ್ಯಕರ್ತರ ಅಧಿಕಾರವು ಹೆಚ್ಚಾಯಿತು.[186] ಈ ಸ್ವಯಮಾಡಳಿತವನ್ನು ಪಡೆದು ತಮ್ಮಷ್ಟಕ್ಕೆ ತಾವು ಅಸ್ತಿತ್ವಕ್ಕೆ ಬಂದಿದ್ದ ಈ ಸಂಘ ಅಥವಾ ಶ್ರೇಣಿಗಳು ರೋಮನ್ ಚಕ್ರಾಧಿಪತ್ಯದಲ್ಲಿ ಸರ್ಕಾರದ ನಿಯಂತ್ರಣಕೊಳಪಟ್ಟು ಕಡ್ಡಾಯವಾದ ಸಾರ್ವಜನಿಕ ಸಂಘಗಳಾಗಿ ಪರಿಣಮಿಸಿದುವು. ಸಂಘಗಳ ಸ್ಥಾನಮಾನಗಳೂ, ರಚನೆಯೂ ಚಕ್ರವರ್ತಿಯ ಆಜ್ಞೆಗಳಿಗನುಸಾರವಾಗಿ ರೂಪಿತವಾಗುತ್ತಿದ್ದುವು.[187]

ಈ ದೃಷ್ಟಿಯಿಂದ ನೋಡಿದರೆ ಭರತಖಂಡದ ಅಥವಾ ಕರ್ನಾಟಕದ ಸಮಾನವೃತ್ತಿಯ ಜನರ ಗುಂಪುಗಳನ್ನು 'ಶ್ರೇಣಿ'ಗಳೆಂದು ಕರೆಯುವುದು ಉಚಿತವೇ ಅನುಚಿತವೇ ಎಂಬ ಪ್ರಶ್ನೆ ಏಳುವುದು ಸಹಜವೇ. ಗ್ರೀಸಿನಲ್ಲಿದ್ದಂತೆ ಇಲ್ಲಿಯೂ ಒಂದು ಗುಂಪಿನ ಸದಸ್ಯರು ತಮ್ಮ ಪ್ರತಿನಿಧಿಗಳನ್ನು ಆರಿಸುತ್ತಿದ್ದರೆಂಬುದಕ್ಕೆ ಆಧಾರಗಳಿಲ್ಲ. ರಾಜನು ವರ್ತಕರ ಸಂಘಕ್ಕೆ ಮುಖ್ಯನಾದ ಪಟ್ಟಣಸ್ವಾಮಿಯನ್ನು ಆರಿಸುತ್ತಿದ್ದಂತೆ ಕೆಲವು ಶಾಸನಗಳಿಂದ ತಿಳಿದುಬರುವುದರಿಂದ ವರ್ತಕರ ಸಂಘಗಳ ಮೇಲೆ ರಾಜನಿಗೆ ಸ್ವಲ್ಪ ಅಧಿಕಾರವಿದ್ದಂತೆ ಊಹಿಸಬಹುದು. ತಂಬುಲಿಗರ, ತೈಲಿಗರ, ಅಕ್ಕಸಾಲಿ ಇತ್ಯಾದಿಯವರ ಸಂಘಗಳು ಬಹುಮಟ್ಟಿಗೆ ಜಾತಿಯ ಆಧಾರದ ಮೇಲೆ ನಿರ್ಮಾಣವಾದುವು. ವರ್ತಕರ ಸಂಘಗಳನ್ನು ಶ್ರೇಣಿಗಳೆಂದು ಸ್ಥೂಲವಾಗಿ ಕರೆಯಲು ಅಡ್ಡಿಯಿಲ್ಲ. ಇವು ತಮ್ಮ ಸದಸ್ಯರಿಂದ ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರವನ್ನು ಪಡೆದಿದ್ದುವೆಂಬುದನ್ನು ಹಿಂದೆಯೇ ನೋಡಿದ್ದೇವೆ. ಬೇರೆ ಊರುಗಳಿಂದ, ದೇಶಗಳಿಂದ ಬಂದ ವರ್ತಕರಿಗೆ ವಸತಿ ಇತ್ಯಾದಿ ಸೌಕರ್ಯಗಳ ಏರ್ಪಾಟುಗಳನ್ನು ಈ ಸಂಘಗಳು ಮಾಡುತ್ತಿದ್ದಿರಬಹುದು. ಇವು ನ್ಯಾಯಾಲಯಗಳ ಕೆಲಸಗಳನ್ನೂ ಮಾಡುತ್ತಿದ್ದುವು. ಉದಾಹರಣೆಗೆ, ಬಳ್ಳಿಗಾವೆಯ ವರ್ತಕರು ತಮ್ಮಲ್ಲಿ ಯಾರಾದರೂ ಅಪುತ್ರಕರಾಗಿ ಮಡಿದರೆ ಅವರ ಆಸ್ತಿಯು ಆ ಊರಿನ ದೇವಸ್ಥಾನಕ್ಕೆ ಸಲ್ಲಬೇಕೆಂದು ತೀರ್ಮಾನಿಸುವುದನ್ನು[188] ಇಲ್ಲಿ ನೆನೆಯಬಹುದು. ಅಷ್ಟೇ ಅಲ್ಲದೆ ತಮ್ಮ ಶ್ರೇಣಿಯ ಸದಸ್ಯನು ಮಡಿದು ಅವನ ಸಂಸಾರವು ನಿರ್ಗತಿಕವಾದಾಗ ಅಂತಹ ಸಂಸಾರದ ಹೊಣೆಯನ್ನು ಶ್ರೇಣಿಯು ವಹಿಸುತ್ತಿದ್ದುದು ಅಸಂಭವವಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಸಂಘದ ಸದಸ್ಯರ ಮೇಲೆ ಸರಕಾರವು ಹೊರಿಸುವ ತೆರಿಗೆಗಳು ಅತಿ ಭಾರವಾಗದಂತೆ ನೋಡಿಕೊಳ್ಳುವುದು ಶ್ರೇಣಿಗಳ ಮುಖ್ಯ ಕರ್ತವ್ಯವಾಗಿದ್ದಿತು. ಇದಕ್ಕೆ ನಮಗೆ ನೇರವಾದ ಆಧಾರವಿಲ್ಲದಿದ್ದರೂ, ತಂಬುಲಿಗರ ಒಂದು ಸಂಘವು ರಾಜನ ಬಳಿಗೆ ಹೋಗಿ ತಮ್ಮ ಮೇಲೆ ತೆರಿಗೆ ಹೆಚ್ಚಾದುದನ್ನು ಹೇಳಿಕೊಂಡಂತೆ[189] ಒಂದು ಶಾಸನದಲ್ಲಿದೆ. ಆ ಸಂಘಕ್ಕಿಂತ ಹೆಚ್ಚು ಸುವ್ಯವಸ್ಥಿತವಾದ, ರಾಜನ ನಿಕಟಸಂಪರ್ಕವನ್ನು ಹೊಂದಿದ್ದ ವರ್ತಕಶ್ರೇಣಿಗಳು ಆ ಕರ್ತವ್ಯವನ್ನು ಹೆಚ್ಚು ಯಶಸ್ವಿಯಾಗಿ ವಹಿಸುತ್ತಿದ್ದಿರಬಹುದು.

---

186 Encyclopaedia of the Social Sciences, VII, p. 205.
187 ಅದೇ, ಪು. 206–7.
188 EC. VII. Sk. 118, 1054 A.D.
189 SII. IX. i. 76, 991 A.D.

ಕರ್ನಾಟಕದ ಅಯ್ಯಾವೊಳೆ ಐನೂರ್ವರ ಸಂಘಗಳು ಉತ್ತರ ಕೊಲ್ಲಾಪುರದಿಂದ ದಕ್ಷಿಣದ ತಿನ್ನವೆಲ್ಲಿಯವರೆಗೆ ಹರಡಿದ್ದುವು.[190] ಕ್ರಿ. ಶ. ಎಂಟನೆಯ ಶತಮಾನದಲ್ಲಿ ಮೊದಲು ಕಾಣಿಸಿಕೊಳ್ಳುವ ಈ ಸಂಘದ ಹೆಸರು ಕೊನೆಯ ಬಾರಿ ಕಾಣಿಸಿಕೊಳ್ಳುವುದು ಕ್ರಿ. ಶ. 1680 ರಲ್ಲಿ.[191]

## ಸಾಮುಗ್ರಿಗಳ ವಿನಿಮಯ : ಆಮದು ಮತ್ತು ರಫ್ತು

ಶಾಸನಗಳಲ್ಲಿ ಉಕ್ತವಾಗಿರುವ ವ್ಯಾಪಾರ ಸಾಮುಗ್ರಿಗಳ ಪಟ್ಟಿಯನ್ನು ಕೊಡಬಹುದು. ಇಂದ್ರನೀಲ, ಚಂದ್ರಕಾಂತ, ಮುತ್ತು, ಮಾಣಿಕ್ಯ, ವಜ್ರ ಮುಂತಾದ ರತ್ನಗಳು ; ಆನೆ, ಕುದುರೆಗಳು ; ಏಲಕ್ಕಿ, ಲವಂಗ,[192] ಶ್ರೀಗಂಧ, ಕರ್ಪೂರ, ಕಸ್ತೂರಿ, ಕುಂಕುಮ, ಮೆಣಸು, ಜೀರಿಗೆ, ಸಾಸಿವೆ, ಸದಹುಗೆ (?), ಕೊತ್ತುಂಬರಿ, ಸಕ್ಕರೆ, ಇಂಗು, ಶುಂಠಿ, ಹಿಪ್ಪಲಿ, ಅಕ್ಕಿ, ಅಲ್ಲ (ಹಸಿಶುಂಠಿ), ಅರಿಸಿನ, ನಾರು ಬೇರು (=ಔಷಧಿ ಮೂಲಿಕೆಗಳು) ಮುಂತಾದ ಸಾಮುಗ್ರಿಗಳು ; ಕಿತ್ತಳೆ, ಬಾಳೆ, ತೆಂಗು ಮುಂತಾದ ಫಲಗಳು ; ಗೋದಿ, ಭತ್ತ, ಅಕ್ಕಿ, ಎಲೆ, ಅಡಕೆ, ಎಳ್ಳು, ಎಣ್ಣೆ, ಬೆಲ್ಲ, ಹೆಸರು, ಉಪ್ಪು, ಹತ್ತಿಯ ನೂಲು, ಬಣ್ಣದ ನೂಲು, ವಸ್ತ್ರಗಳು, ಮರದ ಹಲಗೆಗಳು, ಬಿದಿರು, ಲೋಹ ವಿಗ್ರಹಗಳು,[193] ಬರಹದ ಸಾಮುಗ್ರಿಗಳಾದ ಬಳಪ ಮತ್ತು ಓಲೆಗರಿಗಳು[194]—ಇತ್ಯಾದಿಗಳ ವ್ಯಾಪಾರಗಳು ನಡೆಯುತ್ತಿದ್ದಿತು.

ಇವುಗಳಲ್ಲಿ ಯಾವ ವಸ್ತುಗಳನ್ನು ಹೊರದೇಶಗಳಿಂದ ತರಿಸಿಕೊಳ್ಳುತ್ತಿದ್ದರು ಮತ್ತು ಹೊರದೇಶಗಳಿಗೆ ಕಳುಹಿಸಿಕೊಡುತ್ತಿದ್ದರು ಎಂಬುದರ ವಿವರಗಳು ಶಾಸನಗಳಿಂದ ತಿಳಿದುಬರುವುದಿಲ್ಲ. ಕರ್ನಾಟಕದ ವರ್ತಕರು ಭರತಖಂಡದ ಇತರ ಭಾಗಗಳೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದರೆಂಬುದರಲ್ಲಿ ಸಂದೇಹವೇ ಇಲ್ಲ. ಬಳ್ಳಿಗಾವೆಯ ವರ್ತಕರು ಚೇರ, ಚೋಳ, ಪಾಂಡ್ಯ, ಮಗಧ, ಸೌರಾಷ್ಟ್ರ ಮುಂತಾದ ದೇಶಗಳೊಡನೆ ಸಂಪರ್ಕವಿಟ್ಟುಕೊಂಡಿದ್ದರು.[195] ಲಾಟ, ಚೋಳ, ಮಲೆಯಾಳ, ತೆಲುಂಗ ದೇಶಗಳ ವರ್ತಕರ ವಿಷಯವು ಒಂದು ಶಾಸನದಲ್ಲಿದೆ.[196] ಹಿರಿಸಂಗಿಯಲ್ಲಿ ಲಾಳ, ಮಲೆಯಾಳ ಮೊದಲಾದ 'ನಾನಾ ದೇಸಿಗಳು ಮಹಾ ನಾಡಾಗಿ' ಕುಳಿತಿದ್ದರೆಂದು ಒಂದು ಶಾಸನವು ಹೇಳುತ್ತದೆ.[197] ನಮಗೆ ಇದಕ್ಕಿಂತ ಮುಖ್ಯವಾದ ಪ್ರಶ್ನೆಯೆಂದರೆ ಕರ್ನಾಟಕವು ಹೊರ ಜಗತ್ತಿನೊಡನೆ ಎಷ್ಟರಮಟ್ಟಿಗೆ ಸಂಪರ್ಕವನ್ನು ಪಡೆದಿತ್ತು ಎಂಬುದು. ಕ್ರಿ. ಪೂ. ಎರಡನೆಯ ಶತಕದಲ್ಲಿ ಆಳುತ್ತಿದ್ದ ಚೀನಾ ಚಕ್ರವರ್ತಿ ಹನ್-ವ-ತಿ ಎಂಬುವನ ಒಂದು ನಾಣ್ಯವೂ, ಕ್ರಿ. ಶ. 14 ರಲ್ಲಿ ಮಡಿದ ರೋಮನ್ ಚಕ್ರವರ್ತಿ ಅಗಸ್ಟಸನ ಕೆಲವು ನಾಣ್ಯಗಳೂ ಚಿತ್ರದುರ್ಗ ಜಿಲ್ಲೆಯಲ್ಲಿ

---

190 Appadorai : Economic Conditions in South India, p. 391. ಅಯ್ಯಾವೊಳೆ ಐನೂರ್ವರ ಸಂಘಕ್ಕೆ ಸೇರಿದ ವರ್ತಕರು ಉತ್ತರದ ಹಿಮಾಲಯದಿಂದ ದಕ್ಷಿಣದ ಕಂಚಿಯವರೆಗೆ ಹರಡಿದ್ದರೆಂದು ಒಂದು ಶಾಸನವು ಹೇಳುತ್ತದೆ. [SII. IX. i. 223, 1127 A.D.]

191 Economic Conditions in South India, p. 391.

192 ಲವಂಗದ ಹೂತೋಟಗಳನ್ನು ಒಂದು ಶಾಸನವು ಹೆಸರಿಸುತ್ತದೆ. [EC. VII. Sa. 109, 1042 A.D.]

193 JISI. No. 1, 1094 A.D.

194 ಶಾಸನ ಸಾಹಿತ್ಯಸಂಚಯ (ಸಂ. ಎ. ಎಂ. ಅಣ್ಣೀಗೇರಿ ಮತ್ತು ಮೇವುಂಡಿ ಮಲ್ಲಾರಿ), ಪು. 152. EI. XIII. p. 18ರಲ್ಲಿ ಪ್ರಕಟವಾಗಿರುವ ಕ್ರಿ. ಶ. 1024ರ ಈ ಅಮೂಲ್ಯಶಾಸನದಲ್ಲಿ ಆ ಕಾಲದ ಅತ್ಯಂತ ಪ್ರಮುಖ ಲೇಖನ ಸಾಮುಗ್ರಿಯಾದ ಓಲೆಗಳನ್ನು ಮಾರಾಟಕ್ಕಾಗಿ ಹೇರಿಕೊಂಡು ಬರುತ್ತಿದ್ದರೆಂದು ಉಕ್ತವಾಗಿದೆ.

195 EC. VII. SK. 118, 1054 A.D.

196 SII. IX. i. 297, 1177 A.D.

197 KI. I. 25, 1186 A.D.

ದೊರಕಿವೆ.[198] ಎಂದರೆ ಪ್ರಾಚೀನ ಕರ್ನಾಟಕವು ಚೀನಾ, ಗ್ರೀಸ್, ರೋಮ್ ಚಕ್ರಾಧಿಪತ್ಯಗಳೊಡನೆ ವ್ಯವಹಾರ ಸಂಪರ್ಕವನ್ನು ಪಡೆದಿದ್ದಿತು ಎಂಬುದು ಇದರಿಂದ ವೇದ್ಯವಾಗುತ್ತದೆ. ಶಾಸನಗಳಲ್ಲಿ ಪಾರಸ[199] (=ಪರ್ಷಿಯಾ), ತುರುಷ್ಕ (= ತುರ್ಕಿ)[200] ಮುಂತಾದ ದೇಶಗಳ ಹೆಸರುಗಳಿವೆ. ಗೋವೆಯ ಕದಂಬರು ಹಡಗುಗಳನ್ನು ಕಟ್ಟಿ ಸಮುದ್ರದಲ್ಲಿ ಸಂಚರಿಸುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ.[200·1] ತೇರದಾಳಿನ ವರ್ತಕರು ಕತ್ತೆ, ಕೋಣ, ಬಂಡಿ, ಹಡಗುಗಳಲ್ಲಿ ಆನೆ, ಮಾಣಿಕ್ಯ ಮುಂತಾದುವನ್ನು ಹೇರಿ 'ಜಳಸ್ಥಳ-ಯಾತ್ರೆ'ಗಳನ್ನು ಮಾಡುತ್ತಿದ್ದರೆಂದು ಒಂದು ಶಾಸನವು ಸ್ಪಷ್ಟವಾಗಿ ಹೇಳುತ್ತದೆ.[201] ಆದ್ದರಿಂದ ಕರ್ನಾಟಕವು ಕಡಲಾಚೆಯ ದೇಶಗಳ ಜೊತೆಯಲ್ಲಿ ಸಂಪರ್ಕವನ್ನು ಪಡೆದಿದ್ದಿತೆಂಬುದರಲ್ಲಿ ಸಂದೇಹವಿಲ್ಲ. ಪ್ರವಾಸಿಗರ ಬರಹಗಳನ್ನು ಅವಲಂಬಿಸಿ ಹೇಳುವುದಾದರೆ, ದಕ್ಷಿಣ ಭಾರತವು ಹೊರದೇಶಗಳಿಗೆ ಸಾಂಬಾರ ವಸ್ತುಗಳು, ಔಷಧ ಸಾಮುಗ್ರಿಗಳು, ಸುವಾಸನಾ ದ್ರವ್ಯಗಳು, ತೇಗ, ಬೊಂಬು, ಶ್ರೀಗಂಧ ಮುಂತಾದುವನ್ನು ರಫ್ತು ಮಾಡುತ್ತಿದ್ದಿತು.[202] ರತ್ನಗಳು, ಮುತ್ತುಗಳು, ಕುದುರೆಗಳು ಮುಂತಾದುವನ್ನು ಆಮದು ಮಾಡಿ ಕೊಳ್ಳುತ್ತಿದ್ದಿತು.[203]

## ಸಾಗಾಣಿಕೆಯ ಸೌಕರ್ಯಗಳು

ವ್ಯಾಪಾರವು ಮುಖ್ಯವಾಗಿ ಪಾದಮಾರ್ಗ ಮತ್ತು ಜಲಮಾರ್ಗಗಳಲ್ಲಿ ನಡೆಯುತ್ತಿದ್ದಿತು.[204] ಪಾದಮಾರ್ಗ ಅಥವಾ ರಸ್ತೆಗಳನ್ನು ಮಾಡಿಸಿ ಅವುಗಳನ್ನು ಆಗಾಗ್ಗೆ ಸರಿಪಡಿಸುವ ವಿಷಯದಲ್ಲಿ ಸರಕಾರವು ಆಸಕ್ತವಾಗಿದ್ದಿತೇ ಎನ್ನುವ ವಿಷಯವು ಶಾಸನಗಳಿಂದ ತಿಳಿದುಬರುವುದಿಲ್ಲ. ಪ್ರಮುಖ ವ್ಯಾಪಾರ ಕೇಂದ್ರಗಳ ಮಧ್ಯೆ ವಿಶಾಲವಾದ ರಸ್ತೆಗಳಿದ್ದುವು. ಉದಾಹರಣೆಗೆ ಪ್ರಸಿದ್ಧ ವ್ಯಾಪಾರಕೇಂದ್ರವಾಗಿದ್ದ ತೇರದಾಳಿನಿಂದ ಹಲಸಿಗೆಗೆ ಒಂದು 'ಹೆಬ್ಬಟ್ಟೆ'ಯಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[205] ಬಾಗಡಗೆ ಎಪ್ಪತ್ತರಲ್ಲಿದ್ದ 'ರಾಜಪಥ'ದ ಹೆಸರು ಒಂದು ಶಾಸನದಲ್ಲಿದೆ.[206] ಇಂತಹ ದೊಡ್ಡ ಮಾರ್ಗಗಳನ್ನಾದರೂ ಸರಕಾರವು ಸರಿಯಾದ ಸ್ಥಿತಿಯಲ್ಲಿಡಲು ಪ್ರಯತ್ನಿಸುತ್ತಿದ್ದಿರಬೇಕು. ಭೂಮಾರ್ಗಗಳಲ್ಲಿ ವ್ಯಾಪಾರವು ನಡೆಯುತ್ತಿದ್ದುದು

---

198 R. Narasimhachar : 'Karnataka Country' (Quarterly Journal of the Mythic Society, X, p. 251.)

199 EC. VII. SK. 118, 1054 A.D. ಈ ಶಾಸನದಲ್ಲಿ ಬರುವ 'ಕುರುಂಬ'ವು ಕಾಂಬೋಡಿಯದ ಒಂದು ಪಟ್ಟಣ ; ಬರ್ಬರವು ಅರಬ್ಬಿ ದೇಶ. ಕರ್ನಾಟಕವು ಕಾಂಬೋಡಿಯಾ ಮತ್ತು ಜಾವಾ ಮುಂತಾದ ದೂರಪ್ರಾಚ್ಯ ದೇಶಗಳ ಜೊತೆ ವ್ಯಾಪಾರ ಸಂಬಂಧವನ್ನು ಹೊಂದಿತ್ತೆಂಬುದಕ್ಕೆ ಅನೇಕ ಆಧಾರಗಳಿವೆ. ವಿವರಗಳಿಗೆ, ಎಸ್. ನಾಗರಾಜು ಅವರ ಲೇಖನ ವನ್ನು ನೋಡಿ (ಪ್ರಬುದ್ಧ ಕರ್ನಾಟಕ, 51.3, ಪು. 138-61). ಭಾರತಕ್ಕೂ ದೂರಪ್ರಾಚ್ಯ ದೇಶಗಳಿಗೂ ಇದ್ದ ಸಂಬಂಧದ ಬಗ್ಗೆ ತಿಳಿಯಬಯಸುವವರು ಡಾ. ಎ. ವಿ. ನರಸಿಂಹಮೂರ್ತಿಯವರ "ಸಾಂಸ್ಕೃತಿಕ ಬೃಹದ್ಭಾರತ"ವನ್ನೂ ನೋಡಬಹುದು.

200 EC. VII. SK. 197, C. 1182 A.D.

200·1 EI. XIII. p. 301, 1125 A.D.

201 IA. XIV. p. 15, 1182 A.D.

202 Appadorai : Economic Conditions in South India, pp. 488–91

203 S. Chandrashekhara shastry : 'Economic Conditions under the Hoysaḷas,' (The Half-yearly Journal of the Mysore University, II, p. 218).

204 EC. VII. Sk. 118, 1054 A.D.

205 IA. XIV. P. 14, 1123–4 A.D.

206 BKI. I. i. 85, 1049 A.D.

ಮುಖ್ಯವಾಗಿ ಎತ್ತಿನ ಬಂಡಿಗಳ[207] ಮೇಲೆ. ಎತ್ತು, ಕತ್ತೆ, ಕೋಣ, ಕುದುರೆ ಮುಂತಾದ ಪ್ರಾಣಿಗಳ ಮೇಲೆಯೂ ಸಾಮಾನುಗಳನ್ನು ಹೇರಿ ಸಾಗಿಸುತ್ತಿದ್ದರು.[208] ಸಣ್ಣ ಸಣ್ಣ ವಸ್ತುಗಳನ್ನು ತಲೆಯ ಮೇಲೆ ಹಸುಬೆ ಚೀಲಗಳಲ್ಲಿ ಹೊತ್ತು ವ್ಯಾಪಾರಮಾಡುತ್ತಿದ್ದರು. ಹಸುಬೆಯ ಚೀಲದ ವರ್ಣನೆಯು ಒಂದು ಶಾಸನದಲ್ಲಿ ಬಂದಿದೆ.[209] ಎಣ್ಣೆಯನ್ನು ಕೊಡಗಳಲ್ಲಿ ತುಂಬಿ ಮಾರುತ್ತಿದ್ದರು.[210]

ಜಲಮಾರ್ಗವು ಎರಡು ರೀತಿಯಾದುದು. ಮೊದಲನೆಯದು—ಸಣ್ಣ ಹಳ್ಳಗಳನ್ನು, ದೊಡ್ಡನದಿಗಳನ್ನು ದಾಟುವ ಮಾರ್ಗಗಳು. ಇವುಗಳನ್ನು 'ಕಡಹು'ಗಳೆಂದು ಕರೆಯುತ್ತಿದ್ದರು.[210·1] ಇಂತಹ ಕಡೆ ದೋಣಿಗಳಲ್ಲಿ ಸಾಮಾನುಗಳನ್ನು ಸಾಗಿಸುತ್ತಿದ್ದರು. ಸಮುದ್ರದ ಮೇಲೆ 'ಭೈತ್ರ' ಅಥವಾ ದೊಡ್ಡ ಹಡಗುಗಳಲ್ಲಿ ಸಾಗಿಸುತ್ತಿದ್ದರು.

## ನಾಣ್ಯಪದ್ಧತಿ

ಪ್ರಾಚೀನ ಕರ್ನಾಟಕದಲ್ಲಿ ನಾಣ್ಯಗಳು ಚಲಾವಣೆಯಲ್ಲಿದ್ದರೂ ನಿಮಾನ[211] ಪದ್ಧತಿಯೂ (barter system) ಆಚರಣೆಯಲ್ಲಿ ಇದ್ದಿರಬೇಕು. ಶಾಸನಗಳಲ್ಲಿ ನಿಮಾನ ಪದ್ಧತಿಯನ್ನು ಕುರಿತು ಸ್ಪಷ್ಟೋಕ್ತಿ ಇಲ್ಲವಾದರೂ, ಆ ಪದ್ಧತಿಯಿದ್ದಿತೆಂಬುದನ್ನು ಅನುಮಾನಿಸಲು ಆಧಾರಗಳಿವೆ. ಉದಾಹರಣೆಗೆ ಯಾವುದೋ ಊರಿನ ದೇವಸ್ಥಾನಕ್ಕೆ ಒಂದೊಂದು ಅಂಗಡಿಯ ವರ್ತಕನೂ ತನ್ನ ಆದಾಯದಲ್ಲಿ ಒಂದು ಮಾನ ಜೋಳಕ್ಕೆ ಒಂದು ಸೊಂಟಿಗೆ ಜೋಳವನ್ನು ಬಿಟ್ಟುಕೊಡಬೇಕಾದರೆ[212] ಅವನ ಆದಾಯವು ಜೋಳದ ರೂಪದಲ್ಲಿಯೂ ಇದ್ದಿತೆಂದು ಊಹಿಸಬಹುದು. ಎಂದರೆ, ಜನರು ತಾವು ಬೆಳೆದ ಜೋಳವನ್ನು ತಂದು ಅದರ ಪ್ರಮಾಣದ ಬೆಲೆಗನುಗುಣವಾಗಿ ಅಂಗಡಿಯಿಂದ ತಮಗೆ ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ಪದ್ಧತಿಯು ಈಗಲೂ ಹಳ್ಳಿಗಳಲ್ಲಿದೆ ಎಂಬುದನ್ನು ಇಲ್ಲಿ ನೆನೆಯಬಹುದು.

ನಾಣ್ಯಗಳನ್ನು ಟಂಕಿಸುತ್ತಿದ್ದ ಸ್ಥಳಗಳನ್ನು 'ಕಮ್ಮಟ'[213] ಗಳೆಂದೂ, 'ಅಚ್ಚಿನ ಟಂಕಸಾಲೆ'[214] ಗಳೆಂದೂ ಕರೆಯುತ್ತಿದ್ದರು. ವಿಶ್ವಕರ್ಮರೆಂದು ಕರೆದುಕೊಳ್ಳುವ ಅಕ್ಕಸಾಲಿಗಳನ್ನು ರಾಜನು ಕಮ್ಮಟಗಳಲ್ಲಿ ನೇಮಿಸಿಕೊಳ್ಳುತ್ತಿದ್ದನು.[215] ಈ ಅಕ್ಕಸಾಲಿಗಳು ಅಥವಾ 'ಕಮ್ಮಟದೋಜು'ಗಳು[216] ತಾವೇ ಪ್ರತ್ಯೇಕ

---

207 EC. V. Bl. 117, 1136 A.D.

208 IA. XIV. p. 15, 1182 A.D. ; KI. I. 25, 1186 A.D. ; JISI. No. 5, 1138 A.D.

209 "ಪ್ರಿಥ್ವಿಯೆ ಹಸುಂಬೆಯಾಗೆ ಅಷ್ಟಲೋಕಪಾಳಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ ಫಣಿಕುಳಂಗಳೇ ದಾರವಾಗಿ ಚೊಕ್ಕಣವೊಳವಸುಂಬೆಯಾಗಿ ಚಕ್ರಮೇ ಬೆಳವಾಗಿ ಕೂರಸಿಯೇ ಮುರಸುರಿಗೆಯಾಗೆ ಹಸುಂಬೆಯೊಳಮುಳ್ಳ ವಸ್ತುಗಳೇ ವಸ್ತುಗಳಾಗಿ." [EC. VII. Sk. 118, 1054 A.D.]

ವಿಶ್ವವನ್ನೇ ಹಸುಬೆಯಚೀಲವಾಗಿ ಕಲ್ಪಿಸಿಕೊಂಡು ಮಾಡಿರುವ ಈ ವರ್ಣನೆಯಲ್ಲಿ, ಹಸುಬೆಯ ಚೀಲದ ನಾನಾ ಭಾಗಗಳನ್ನು ಅರ್ಥಮಾಡಿಕೊಳ್ಳುವುದು ಸ್ವಲ್ಪ ಕಷ್ಟವಾಗಿದೆ.

210 EC. XI. Cd. 34, 1123 A.D.

210·1 EC. VI. Cm. 122, 1140 A.D.

211 'barter' ಎಂಬ ಅರ್ಥದಲ್ಲಿ 'ನಿಮಾನ' ಎಂಬ ಪದವನ್ನು ಪಾಣಿನಿಯು ಬಳಸಿದ್ದಾನೆ—India as Known to Pāṇini, p. 238.

212 BKI. I. i. 116, 1075 A.D.

213 EC. XII. Si. 37, C. 1040 A.D.

214 SII. IX. i. 228, 1133 A.D.

215 BKI. I. ii. 153, 1103 A.D.

216 EC. XV. Bl. 335, 1138 A.D.

ವಾಗಿ ಶ್ರೇಣಿಗಳನ್ನು ಸ್ಥಾಪಿಸಿಕೊಂಡಿದ್ದರು. ಉದಾಹರಣೆಗೆ ಅಂತಹ ಶ್ರೇಣಿಯೊಂದು ಕಮ್ಮಟೇಶ್ವರ ದೇವಸ್ಥಾನಕ್ಕೆ ಆಯಾ ಕಮ್ಮಟಗಳಲ್ಲಿ ಕೊಡಬೇಕಾದ ಭಾಗವನ್ನು ನಿರ್ಧರಿಸಿದ ವಿಷಯವು ಶಾಸನವೊಂದರಲ್ಲಿದೆ.[217] ("ಆಶೇಷ ಕೊತ್ತಳಿಯುಮಿದ್ದು ಕಮ್ಮಟೇಶ್ವರ ದೇವರ ನಂಪಾದೀವಿಗೆಗೆ ಬಿಟ್ಟ ದತ್ತಿ ಉಂಡಿಗೆಯ ಕಮ್ಮಟದಲು ತಿಂಗಳಿಗೆ ಸ [ಗ] ಒಂದು ಬಿಡಿಗಮ್ಮಟದಲು ತಿಂಗಳಿಗೆ ಹ ಒಂದು"). ಪ್ರಾಚೀನ ಕರ್ನಾಟಕದ ಲೊಕ್ಕಿಗುಂಡಿ[218], ಸೂಂಡಿ[219], ದೋರಸಮುದ್ರ[220] ಮುಂತಾದ ಕಡೆಗಳಲ್ಲಿದ್ದ ಕಮ್ಮಟಗಳು ಪ್ರಸಿದ್ಧವಾಗಿದ್ದುವು. ರಾಜನು ತನ್ನ ಕಮ್ಮಟಗಳ ಮೇಲ್ವಿಚಾರಣೆಗೆ ಅಧಿಕಾರಿಗಳನ್ನು ನೇಮಿಸುತ್ತಿದ್ದನು. ("ಪಸಾಯ್ತಂ ಹೆಗ್ಗಡೆ ಕಮ್ಮಟ ಮಾಚಣ್ಣ."[221]) ದೇವಸ್ಥಾನಗಳೂ ಕೂಡ ನಾಣ್ಯಗಳನ್ನು ಟಂಕಿಸುತ್ತಿದ್ದುವು.[222] ಉದಾಹರಣೆಗೆ, ಬಳ್ಳಾರಿ ತಾಲೂಕಿನ ಕೊಟೆತೊಳೆ (ಈಗಿನ ಕುಡತಿನಿ) ಯಲ್ಲಿ ಪ್ರಸಿದ್ಧವಾಗಿದ್ದ ಕುಮಾರಸ್ವಾಮಿಯ ದೇವಸ್ಥಾನವಿದ್ದಿತು. ಆ ದೇವಸ್ಥಾನದ ಆಶ್ರಯದಲ್ಲಿದ್ದ ಕಮ್ಮಟದಲ್ಲಿ ಕುಮಾರಸ್ವಾಮಿಯ ವಾಹನವಾದ ನವಿಲಿನ ಮುದ್ರೆಯುಳ್ಳ ನಾಣ್ಯಗಳನ್ನು ಟಂಕಿಸುತ್ತಿದ್ದರು. ಈ 'ನವಿಲಚ್ಚಿನ ಪೊನ್ನು'ಗಳು ತೂಕದಲ್ಲಿ ಲೊಕ್ಕಿಗುಂಡಿಯ ಚಿನ್ನದ ನಾಣ್ಯಗಳಿಗೆ ಸಮವಾಗಿರಬೇಕಾಗಿದ್ದಿತು. ಶಾಸನದ[223] ರೀತಿಯನ್ನು ನೋಡಿದರೆ ಕಮ್ಮಟದ ಅಕ್ಕಸಾಲಿಗಳಿಗೆ ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ದೇವಸ್ಥಾನವು ಬಿಟ್ಟುಕೊಟ್ಟು, ಅದಕ್ಕೆ ಪ್ರತಿಯಾಗಿ ಅವರಿಂದ ವರ್ಷಕ್ಕೆ ಹನ್ನೆರಡು ಗದ್ಯಾಣ(= ಪೊನ್)ಗಳನ್ನು ಪಡೆಯುತ್ತಿದ್ದಿತೆಂದು ಕಾಣುತ್ತದೆ.

ನಾಣ್ಯಗಳಲ್ಲಿ ಪ್ರಸಿದ್ಧವಾದುದು ಗದ್ಯಾಣ[224] ಅಥವಾ ಪೊನ್ ಎಂಬ ಹೆಸರಿನ ನಾಣ್ಯ. ಇದರ ತೂಕ ಸುಮಾರು 96 grs. ಎಂದು ಡಾ|| ಅಲ್ಟೇಕರರೂ[225], ಸುಮಾರು 63 grs. ಎಂದು ಡಾ|| ಅಪ್ಪಾದೊರೈ

---

217 EC. XII. Si 37, C. 1040 A.D. ಲೋಹದ ಚೂರುಗಳನ್ನು ನಾಣ್ಯದ ಆಕಾರಕ್ಕೆ ಸಿದ್ಧಪಡಿಸುವ ಸ್ಥಳಕ್ಕೆ ಬಿಡಿಗಮ್ಮಟವೆಂದೂ, ಅವುಗಳ ಮೇಲೆ ಮುದ್ರೆಯನ್ನು ಟಂಕಿಸುವ ಸ್ಥಳಕ್ಕೆ ಉಂಡಿಗೆಯ ಕಮ್ಮಟವೆಂದೂ ಹೆಸರಿರಬಹುದೇ? ಅಥವಾ ಉಂಡಿಗೆ, ಎಂದರೆ ರಹದಾರಿಗಳನ್ನು ಮುದ್ರಿಸುವ ಕಮ್ಮಟವೇ ಉಂಡಿಗೆಯ ಕಮ್ಮಟವೆಂದು ಅರ್ಥ ಮಾಡಬಹುದೇ? ಈ ಶಾಸನದಲ್ಲಿ ಬರುವ 'ಗ' ಎಂಬುದಕ್ಕೆ ಗದ್ಯಾಣವೆಂದೂ 'ಹ' ಎಂಬುದಕ್ಕೆ ಹಣವೆಂದೂ ಅರ್ಥ.

218 ಲೊಕ್ಕಿಗುಂಡಿಯು ಅತ್ಯಂತ ಶ್ರೀಮಂತ ಪಟ್ಟಣವಾಗಿದ್ದಿತು. ಬ್ರಹ್ಮನು ಅಮರಾವತಿಯನ್ನೂ ಲೊಕ್ಕಿಗುಂಡಿಯನ್ನೂ ತೂಗಿದಾಗ ಅಮರಾವತಿಯು ಅಂತರಿಕ್ಷದಲ್ಲಿಯೂ, ಲೊಕ್ಕಿಗುಂಡಿಯು ನೆಲದ ಮೇಲೂ ನೆಲಸಿತೆಂದು ಒಂದು ಶಾಸನವು ಸೂಚ್ಯವಾಗಿ ಹೇಳುತ್ತದೆ. (BKI. I. ii. 202, 1125 A.D.)

219 BKI. I. ii. 153, 1103 A.D.

220 EC. V. Bl. 335, 1138 A.D.

221 EC. XII. Gb. 34, 1134 A.D.

222 Appadorai : Economic Conditions in South India, pp. 726-7. ಪ್ರಾಚೀನ ಭಾರತದಲ್ಲಿ ಮೊದ ಮೊದಲು ವರ್ತಕರು ಮತ್ತು ವರ್ತಕಶ್ರೇಣಿಗಳು ನಾಣ್ಯಗಳನ್ನು ಟಂಕಿಸುತ್ತಿದ್ದರು. ನಾಣ್ಯಗಳನ್ನು ಟಂಕಿಸುವ ಅಧಿಕಾರವನ್ನು ರಾಜನು ಕ್ರಮೇಣ ತಾನೇ ವಹಿಸಿಕೊಂಡನು.(C. J. Brown : The Coins of India, pp.15-16).

223 SII. IX. i 164, 1098 A. D.

224 ಲೊಕ್ಕಿಗುಂಡಿಯಲ್ಲಿ ಟಂಕಿಸಿದ್ದು 'ಲೊಕ್ಕಿಗದ್ಯಾಣ.' [EC. VII. Sk. 191].
ಮೊಕ್ಕೆಯಲ್ಲಿ ಟಂಕಿಸಿದ್ದು 'ಮೊಕ್ಕೆಯ ಗದ್ಯಾಣ' [BKI. I. i. 94, 1059 A.D.]
ಆನೆಯ ಗುರುತಿರುವುದು 'ಆನೆಯ ಪೊನ್' [SII. IX. i. 75, 987 A.D.]
ನವಿಲ ಗುರುತಿರುವುದು 'ನವಿಲಪೊನ್' [SII. IX. i. 53, C. 750 A.D.] ಇದು ಬಹುಶಃ ಕುಡತಿನಿಯಲ್ಲಿ ಕಮ್ಮಟವಾದ ನಾಣ್ಯ.

225 The Rāṣṭrakūṭas and their Times, p. 367.

ಅವರೂ[226] ಅಭಿಪ್ರಾಯಪಡುತ್ತಾರೆ. ಗದ್ಯಾಣಕ್ಕೂ ಉಳಿದ ನಾಣ್ಯಗಳಿಗೂ ಇರುವ ಸಂಬಂಧವನ್ನು ಕೆಳಗೆ ತೋರಿಸಿದೆ.

1 ಗದ್ಯಾಣ = ಹತ್ತು ಪಣ ಅಥವಾ ಹಣ [227]
1 ಪಣ = ಎರಡು ಅಡ್ಡ (ಸಂ ಅರ್ಧ ; ಪಾಲಿ. ಅಡ್ಢ)[228]
1 ಪಣ = ನಾಲ್ಕು ಹಾಗ[229] (ಮುಪ್ಪಾಗ=$\frac{3}{4}$ ಪಣ).
1 ಪಣ = ಹದಿನಾರು ವೀಸ (ಅಥವಾ 20 ವೀಸ ?)[230]
1 ಹಾಗ = ಎರಡು ಬೇಳೆ.

ಗದ್ಯಾಣ, ಪಣ, ಅಡ್ಡ, ಹಾಗ, ಬೇಳೆ, ವೀಸ—ಇವೆಲ್ಲವೂ ಪ್ರತ್ಯೇಕ ನಾಣ್ಯಗಳೆಂದು ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ನಾಣ್ಯಗಳಲ್ಲೆಲ್ಲ ವೀಸವೇ ಅತ್ಯಂತ ಕನಿಷ್ಠವಾದುದು. ಬ್ರಹ್ಮಶಿವನ ಹೇಳಿಕೆಯೂ ಇದನ್ನೇ ಸಮರ್ಥಿಸುತ್ತದೆ. ("ಕೂಸಿಂಗೆ ಕುತ್ತವಾದೊಡೆ | ದೇಶದ ಬಳರಿಯರ್ಗೆ ಕುಡುವರೊಳ್ಳರ್ಚನೆಯಂ | ಶಾಸನ ದೇವತೆಗೆಂದೊಡೆ | ವೀಸದ ಪುಷ್ಪಮುಮನೀಯರಜಿಗುಲಿವೆಂಡಿರ್")[231]

ಇವುಗಳಲ್ಲದೆ ಕಾಕಿಣಿ[232] ಎಂಬ ನಾಣ್ಯವೂ ಪ್ರಚಾರದಲ್ಲಿತ್ತು. ಭಾಸ್ಕರಾಚಾರ್ಯನ ಲೀಲಾವತಿಯ ಪ್ರಕಾರ ಒಂದು ಪಣಕ್ಕೆ ನಾಲ್ಕು ಕಾಕಿಣಿಗಳು.[233] ಗದ್ಯಾಣವಲ್ಲದೆ ನಿಷ್ಕ ಎನ್ನುವ ಚಿನ್ನದ ನಾಣ್ಯವೂ ಪ್ರಚಾರದಲ್ಲಿದ್ದಿತು.[234] ಋಗ್ವೇದದಲ್ಲಿ, ಶತಪಥಬ್ರಾಹ್ಮಣದಲ್ಲಿ, ಜಾತಕಗಳಲ್ಲಿ ಈ ನಾಣ್ಯದ ಹೆಸರಿದೆ. ನಾಲ್ಕು ಸುವರ್ಣಗಳ ತೂಕಕ್ಕೆ ಒಂದು ನಿಷ್ಕವು ಸಮವೆಂದು ಮನುವು ಹೇಳುತ್ತಾನೆ. ನಿಷ್ಕದ ಮಾದರಿಯು

---

[226] Economic Conditions in South India, p. 710.

[227] BKI. I. ii. 189, 1106 A.D. ಈ ಶಾಸನದಲ್ಲಿ ಒಟ್ಟು ಆರು ಗದ್ಯಾಣಗಳ ದತ್ತಿಯನ್ನು ಹೇಳಿ, ದತ್ತಿಯ ವಿವರಣೆಯನ್ನು ಕೊಡುವಾಗ ಐದು ಗದ್ಯಾಣ+ಹತ್ತು ಪಣ ಎಂದು ಹೇಳುತ್ತದೆ. ಆದ್ದರಿಂದ ಒಂದು ಗದ್ಯಾಣವು ಹತ್ತು ಪಣಕ್ಕೆ ಸಮನೆಂಬುದು ಸ್ಪಷ್ಟ.

[228] ಪಾಣಿನಿಯಲ್ಲಿ ಅರ್ಧ ಎಂಬ ನಾಣ್ಯದ ಹೆಸರಿದೆ. ಕಾಶಿಕಾದಲ್ಲಿ ಅದು ಅರ್ಧ ಕಾರ್ಷಾಪಣಕ್ಕೆ ಸಮಾನವೆಂದು ಹೇಳಿವೆ. ಅರ್ಥಶಾಸ್ತ್ರದ ಪ್ರಕಾರ ಕಾರ್ಷಾಪಣವೂ ಪಣವೂ ಒಂದೇ. ಬೌದ್ಧ ಜಾತಕಗಳಲ್ಲಿ ಅರ್ಧವನ್ನು ಅಡ್ಢವೆಂದು ಕರೆದಿದೆ. (India as Known to Pāṇini, p 266).

[229] ಹಾಗ ಅಥವಾ ಪಾಗವು 'ಭಾಗ' (=ನಾಲ್ಕರಲ್ಲೊಂದು ಪಾದ) ದ ತದ್ಭವವೆಂದು ಕಿಟ್ಟೆಲ್ ಕೋಶದಲ್ಲಿ ಹೇಳಿದೆ. ಆದರೆ ಅದು 'ಪಾದ' ಮತ್ತು 'ಭಾಗ' ಗಳ ಜಂಟೀ ರೂಪವಾಗಿರುವಂತೆ ಕಾಣುತ್ತದೆ.

[230] ಕಿಟ್ಟೆಲ್ ಕೋಶದಲ್ಲಿ 1 ಹಣಕ್ಕೆ 16 ವೀಸಗಳು ಎಂದಿದೆ. ತಮಿಳಿನಲ್ಲಿ 'ವೀಶಂ' ಎಂದರೆ $\frac{1}{16}$ ಭಾಗ ಎಂದರ್ಥವಿದೆ; ಮಲೆಯಾಳದಲ್ಲಿ 'ಫನ'ದ (=ಪಣ)$\frac{1}{16}$ ಭಾಗ ಎಂಬರ್ಥವಿದೆ. ತುಳು, ತೆಲುಗುಗಳಲ್ಲೂ $\frac{1}{16}$ ಭಾಗವೆಂದೇ ಅರ್ಥ. ಒಂದು ಶಾಸನದಲ್ಲಿ ಮಾತ್ರ ಒಂದು ಪಣಕ್ಕೆ 20 ವೀಸಗಳು ಎಂಬ ಸೂಚನೆಯಿರುವಂತಿದೆ. ಒಬ್ಬನು ವರ್ಷಕ್ಕೆ 6 ಗದ್ಯಾಣ 7 ಪಣಗಳನ್ನು ದತ್ತಿಯಾಗಿ ಕೊಟ್ಟು (=67 ಪಣ) ಪ್ರತಿ ತಿಂಗಳೂ ಕಂತಿನಂತೆ $5\frac{1}{2}$ ಪಣ ಕೊಡುತ್ತಾ ಬರಲು ಒಪ್ಪುತ್ತಾನೆ (ಇದರಿಂದ ಅವನು ವರ್ಷಕ್ಕೆ 66 ಪಣಗಳನ್ನು ಕೊಟ್ಟಂತಾಗುತ್ತದೆ). ಹಾಗೆಯೇ ಇನ್ನೊಬ್ಬನು ವರ್ಷಕ್ಕೆ 6 ಪಣ ಕೊಟ್ಟು ತಿಂಗಳಿಗೆ 10 ವೀಸದ ಕಂತಿನಂತೆ ಕೊಡಲು ಒಪ್ಪಿಕೊಳ್ಳುತ್ತಾನೆ. (BKI. I. ii 181, 1094). ಎಂದರೆ 120 ವೀಸಗಳು 6 ಪಣಕ್ಕೆ ಸಮಾನ. 1 ಪಣ=20 ವೀಸ.

[231] ಸಮಯ ಪರೀಕ್ಷೆ, 5. 100.

[232] EC. VI. Kd. 96, 1141 A.D.

[233] Jainism in South India, p. 234.

[234] BKI. I. ii. 159, 1111 A.D.

ನಮಗೆ ದೊರಕಿಲ್ಲ.[235] ಪ್ರಾಚೀನ ಕರ್ನಾಟಕದಲ್ಲಿ ಒಂದು ನಿಷ್ಕಕ್ಕೆ ಒಂದು ಖಂಡುಗ ಗದ್ದೆಯು ದೊರೆಯು ತ್ತಿದ್ದಿತು.[236] ಮಂಗರಾಜನ ನಿಘಂಟುವಿನ ಪ್ರಕಾರ ಹತ್ತು ಪಣಗಳ ತೂಕಕ್ಕೆ ಒಂದು ನಿಷ್ಕ ಸಮಾನ.[237] ಅವನ ಹೇಳಿಕೆ ನಿಜವಾದರೆ ನಿಷ್ಕವು ಗದ್ಯಾಣಕ್ಕಿರುವ ಇನ್ನೊಂದು ಹೆಸರೇ ಹೊರತು ಬೇರೆಯಲ್ಲ. 'ಧರಣ' ಎಂಬ ಹೆಸರಿನ ಒಂದು ಚಿನ್ನದ ನಾಣ್ಯದ ಹೆಸರು ಕಂಡುಬರುತ್ತದೆ. ('ಧರಣ ಪೊನ್').[238] ಒಂದು ಧರಣವು ಹೊನ್ನು ಅಥವಾ ಗದ್ಯಾಣದ ಕಾಲುಭಾಗಕ್ಕೆ ಸಮಾನ.[239]

ಈ ನಾಣ್ಯಗಳಲ್ಲದೆ ರೋಮನ್ ನಾಣ್ಯವಾದ 'ದ್ರಮ್ಮ'ದ ಹೆಸರು ಒಂದು ಶಾಸನದಲ್ಲಿದೆ ("ಮುವತ್ತು ಕರಿಯ ದ್ರಮ್ಮ(ಮ್ಮ)ಮಂ ಗೊರವರ್ ತಿರುವರ್").[240] ಇಲ್ಲಿ ಕರಿಯ ದ್ರಮ್ಮವೆಂದರೆ ಏನೊ ತಿಳಿಯದು. ದ್ರಮ್ಮವು ಬಸವಣ್ಣನವರ ಕಾಲಕ್ಕೆ ಖೋಟಾನಾಣ್ಯವೆಂದು ಪರಿಗಣಿತವಾಗಿದ್ದಿತೆಂದು ತೋರು ತ್ತದೆ.[241] ವಡ್ಡಾರಾಧನೆಯಲ್ಲಿ ದ್ರಮ್ಮದ ಜೊತೆಗೆ 'ದೀನಾರ' ಎಂಬ ನಾಣ್ಯದ ಹೆಸರು ಬರುತ್ತದೆ.[242] ಶಾಸನಗಳಲ್ಲಿ ಎಲ್ಲಿಯೂ ದೀನಾರದ ಪ್ರಸ್ತಾಪವಿಲ್ಲ.

## ಅಳತೆಗಳು ಮತ್ತು ತೂಕಗಳು

ಹೊಲಗಳನ್ನು ಎರಡು ರೀತಿಗಳಲ್ಲಿ ಅಳೆಯುತ್ತಿದ್ದರು. ಒಂದು—ಅದರಲ್ಲಿ ಬಿತ್ತಬಹುದಾದ ಬೀಜದ ಪ್ರಮಾಣದ ಮೇಲೆ. ಉದಾಹರಣೆಗೆ–'ಎರಡು ಸಲಗೆ ಗದ್ದೆ',[243] ಎಂದರೆ ಎರಡು ಸಲಗೆಯಷ್ಟು ಬೀಜವನ್ನು ಬಿತ್ತಬಹುದಾದ ಗದ್ದೆ ಎಂದರ್ಥ. ಎರಡು ಖಂಡುಗ ಬೀಜವನ್ನು ಹಿಡಿಸುವ ಹೊಲ 'ಇಕ್ಕಂಡುಗ ಬೆದ್ದಲ್'.[244] ಈ ರೀತಿಯಲ್ಲದೆ ಮತ್ತೊಂದು ರೀತಿಯ ಅಳತೆಯ ವಿಧಾನವೂ ಇದ್ದಿತು.–ಅದೇ ಅಳತೆಗೋಲುಗಳ ಸಹಾಯ ದಿಂದ ಅಳೆಯುತ್ತಿದ್ದ ವಿಧಾನ. ವ್ಯವಹಾರಗಣಿತ ಮತ್ತು ಕ್ಷೇತ್ರಗಣಿತಗಳ ಕರ್ತೃವಾದ ರಾಜಾದಿತ್ಯನು ಹೊಲಗಳನ್ನಳೆಯಲು 'ಗಳೆ'ಗಳನ್ನು ಬಳಸಬೇಕೆಂದೂ ಒಂದೊಂದು ಊರಿಗೂ ಪ್ರತ್ಯೇಕವಾದ ಗಳೆಯಿರ ಬಹುದೆಂದೂ ಹೇಳುತ್ತಾನೆ.[245] ರಾಜಾದಿತ್ಯನ ಅಭಿಪ್ರಾಯಗಳು ಬಹುಮಟ್ಟಿಗೆ ಆ ಕಾಲದ ಆಚರಣೆಯನ್ನು ಪ್ರತಿಬಿಂಬಿಸುವುದೆಂಬುದು ಮುಂದೆ ಸ್ಪಷ್ಟವಾಗುತ್ತದೆ. ದೇಶದ ಆಯಾ ಭಾಗಗಳಿಗೆ, ಆಯಾ ಊರುಗಳಿಗೆ ರಾಜನು ಅಳತೆಗೋಲುಗಳನ್ನು ನಿರ್ಧರಿಸುತ್ತಿದ್ದನು. ಉದಾಹರಣೆಗೆ ಕುಱುಗೋಡು ಎಂಬ ಊರಿನಲ್ಲಿ ಹದಿನೆಂಟು ಗೇಣಿನ ಕೋಲನ್ನು ಉಪಯೋಗಿಸಬೇಕೆಂದು ರಾಜನು ಶಾಸನವನ್ನು ಹೊರಡಿಸಿದ್ದನು.[246] ಇಂತಹ ಕೋಲುಗಳ ಒಂದು ಮಾದರಿಯನ್ನು ಆಯಾ ಊರಿನ ದೇವಸ್ಥಾನಗಳಲ್ಲಿಡುತ್ತಿದ್ದರು ಅಥವಾ ದೇವಸ್ಥಾನದ ಗೋಡೆಯ ಮೇಲೆ ಕೆತ್ತುತ್ತಿದ್ದರು. ಉದಾಹರಣೆಗೆ ಒಂದು ದೇವಸ್ಥಾನದ ಗೋಡೆಯ ಮೇಲೆ

---

235 India as Known to Pāṇini, pp. 258–60.
236 EC. V. Hn. 85, C. 1130 A.D.
237 Kittel's Kannada-English Dictionary, pp. 966-7.
238 IA. XII. p. 255, 971–2 A.D; SII. IX. i. 75, 987 A.D.
239 IA. VIII. p. 287
240 IA. XII. p. 257, 951–2 A.D.
241 ಬಸವಣ್ಣನವರ ಷಟ್ಸ್ಥಲದ ವಚನಗಳು, ಪು. 28.–"ಹಾದರಕ್ಕೆ ಹೋದರೆ ಕಳ್ಳದಮ್ಮವಾಯಿತ್ತು."
242 ವಡ್ಡಾರಾಧನೆ (1955), ಪು. 15.
243 EC. IV. Kp. 56, 1132 A.D.
244 EC. IV. Yd. 6, 1116 A.D
245 Economic Conditions in South India, p.407.
246 SII. IX. i. 53, C. 750 A.D.

ಈ ಶಾಸನವಿದೆ–"ಯೀ ಅಯ್ವತ್ತುಗೇಣು ಗಡಿಬವ ಸಲಿಸದೆ ಕಿತ್ತವಂಗೆ ಕುಂಬೀನರಕ ಸಂತಾನಕ್ಷಯವಕ್ಕುಂ".[247] ತಮಿಳುನಾಡಲ್ಲಿಯೂ ಇದೇ ಆಚರಣೆಯಿದ್ದಿತು.[248]

ಶಾಸನಗಳಲ್ಲಿ ಬೇರೆ ಬೇರೆ ಪ್ರಮಾಣದ ನೂರಾರು ಅಳತೆಗೋಲುಗಳ ಹೆಸರುಗಳು ಕಂಡುಬರುತ್ತವೆ. ಕೆಲವು ಅಳತೆಗೋಲುಗಳ ಪ್ರಮಾಣವನ್ನು ಮಾತ್ರ ಕೆಲವು ಶಾಸನಗಳು ಹೆಸರಿಸುತ್ತವೆ. ಉದಾಹರಣೆಗೆ– 'ಇರ್ಪತ್ತೆಂಟು ಗೇಣ ಗಳೆ'[249], 'ಪದಿನಱುಗೇಣ್ ಕೋಲ್'[250], 'ಐವತ್ತೆರಡು ಗೇಣ ಗಳೆ'[251], 'ಹದಿನಯ್ದು ಮಾರುಂಚೆ ತೋಳು ಘಳೆ'[252] ಇತ್ಯಾದಿಗಳನ್ನು ನೋಡಬಹುದು. ಕೆಲವು ಅಳತೆಗೋಲುಗಳಿಗೆ ಪ್ರತ್ಯೇಕ ಹೆಸರುಗಳಿದ್ದುವು. ಆಯಾ ಊರುಗಳಲ್ಲಿ ಮತ್ತು ಸುತ್ತ ಮುತ್ತ ಪ್ರಚಾರದಲ್ಲಿದ್ದ ಅಳತೆಗೋಲುಗಳಿಗೆ ಆಯಾ ಊರುಗಳ ಹೆಸರುಗಳನ್ನೇ ಕೊಡುತ್ತಿದ್ದರು. ಉದಾಹರಣೆಗೆ–'ಕೋಗಳಿಯ ಗಡಿಂಬ'[253]; 'ಕುಱಿತ ಕೊಂಟೆಯ ಕೋಲ್'[254]; 'ಕತ್ಸವಿಯ ಗಳೆ'[255]ಗಳನ್ನು ಹೆಸರಿಸಬಹುದು. ಕೆಲವು ಅಳತೆಗೋಲುಗಳಿಗೆ ಅವುಗಳನ್ನು ಬಹುಶಃ ಸ್ಥಾಪಿಸಿದ ದೇವಸ್ಥಾನಗಳ ಹೆಸರುಗಳನ್ನು ಕೊಟ್ಟದ್ದರು. ಉದಾಹರಣೆಗೆ ಮುಳು ಗುಂದದ 'ನಗರೇಶ್ವರದ ಗಡಿಂಬದ ಕೋಲ್'[256], 'ಎಳರಾವೆಯ ತೀರ್ಥದ ಗಡಿಂಬ'[257], 'ಭೇರುಂಡ ಗಳೆ'[258] ಇತ್ಯಾದಿಗಳನ್ನು ಹೆಸರಿಸಬಹುದು. ಇನ್ನು ಕೆಲವು ಅವುಗಳನ್ನು ಹೊರಡಿಸಿದ ವ್ಯಕ್ತಿಗಳ ಬಿರುದುಗಳನ್ನು ಪಡೆದಿವೆ. ಉದಾಹರಣೆಗೆ 'ಬಂಟರಭಾವನ ಕೋಲ್',[259] 'ಮಲೆಪರ ಮಾರಿಯ ಕೋಲ್',[260] 'ಮುಳುಗುಂದದ ಮಲ್ಲಹರ ಮಾರಿಯ ಕೋಲ್,'[261] 'ಹದಿಮೂಱು ಗೇಣ ಬೆಂಕೊಳ್ವನ ಕೋಲ್'[262], 'ಅಜಲೂರ

[247] EC. IV. Ng. 14, C. 1200 A.D.

[248] Economic Conditions in South India, p.408.

[249] BKI. I. i. 73, 1040 A.D. ; 63, 1026 A.D.

[250] EC. IX. Nl. 1, 1029 A.D.

[251] EC. VIII. Sa. 108 (bis), 1042 A.D.

[252] EC. XI. Dg. 3, 1121 A. D.

[253] SII. IX. i. 101, 1045 A. D.

[254] BKI. I. i. 81, 1049 A.D.

[255] EC. VII. Sk. 118, 1054 A.D. ; EC. VIII. Sb. 243, 1070 A.D.

[256] BKI. I. i.97, 1062 A.D.

[257] IA. VIII. p. 10, 1078 A.D.

[258] IA. IV. p. 179, 1048–49 A.D. ; EC. VII. Sk. 151, 1047 A.D.
ಬಳ್ಳಿಗಾವೆಯಲ್ಲಿ ಭೇರುಂಡೇಶ್ವರ ಸ್ತಂಭವೂ, ಭೇರುಂಡೇಶ್ವರ ಮಠವೂ ಇದ್ದುವು. ಒಂದು ಶಾಸನದಲ್ಲಿ ಗಂಡ ಭೇರುಂಡನನ್ನು ಈ ರೀತಿ ಹೊಗಳಿದೆ–"ಧರ್ಮೇಣ ಶೌರ್ಯ ಸತ್ಯೇನ ತ್ಯಾಗೇನ ಚ ಮಹೀತಳೇ। ಗಂಡಭೇರುಂಡ ಸಾದೃಶ್ಯೋ (ಸದೃಶೋ) ನ ಭೂತೋ ನ ಭವಿಷ್ಯತಿ" (IA.IV. p. 179).

[259] EC. XII. Si. 40, 1040 A.D.

[260] BKI. I. i. 65, 1029 A.D.

[261] BKI. I. ii. 152, 1103 A.D. ಮುಳುಗುಂದದಲ್ಲಿ ಕ್ರಿ.ಶ. 1062ರಲ್ಲಿ ಮತ್ತು ಕ್ರಿ.ಶ. 1103ರಲ್ಲಿ ಎರಡು ಬೇರೆ ಬೇರೆ ಅಳತೆಗೋಲುಗಳಿದ್ದುವು. ಅಥವಾ ಎರಡು ಹೆಸರುಗಳೂ ಒಂದೇ ಅಳತೆಗೋಲನ್ನು ಸೂಚಿಸಬಹುದು. ತಮಿಳು ನಾಡಿನಲ್ಲಿ ಒಂದೇ ಅಳತೆಗೋಲಿಗೆ ದೇವರ ಹೆಸರೂ, ರಾಜನ ಹೆಸರೂ ಇದ್ದಂತೆ ತಿಳಿದು ಬರುತ್ತದೆ.(Economic Conditions in South India, p. 404). ಬಹುಶಃ 'ಮಲಹರ ಮಾರಿಯ ಕೋಲ್' ಎಂಬುದು ರಾಜನ ಹೆಸರನ್ನೂ, 'ನಗರೇಶ್ವರದ ಗಡಿಂಬದ ಕೋಲ್' ಎಂಬುದು ಅಲ್ಲಿಯ ದೇವಸ್ಥಾನದಲ್ಲಿ ಈ ಅಳತೆಗೋಲು ಇದ್ದ ವಿಷಯವನ್ನೂ ಹೇಳುತ್ತದೆಯೆಂದು ಕಾಣುತ್ತದೆ. ಅಮೃತಾಪುರದ ಅಮೃತೇಶ್ವರ ದೇವಾಲಯದಲ್ಲಿ ಇಂತಹ ಅಳತೆಗೋಲನ್ನು ಕೆತ್ತಿರುವಂತಿದೆ. ಈ ಅಳತೆಗೋಲು ಗಳನ್ನು ಬಹಿರಂಗ ಪ್ರದೇಶಗಳಲ್ಲಿ ಕಲ್ಲಮೇಲೆ ಕೆತ್ತುತ್ತಿದ್ದರು. ಅವುಗಳನ್ನು ಕುಟ್ಟಿ ಹಾಳುಮಾಡಿದರೆ ಪಾಪಕ್ಕೆ ಪಕ್ಕಾಗುತ್ತಾರೆ ಎಂಬಂತಹ ಮಾತುಗಳು ಶಾಸನಗಳಲ್ಲಿವೆ–("....ಗಳೆಯ ಗಡಿಬ ಇ ಗಳೆಯ ಕುಂದು ಕಟ್ಟಿದಡೆ ಗಂಗೆಯ ತಡಿಯ ಕವಿಲೆಯು ಕೊಂದ ಪಾತಕ". C EC. V. ii. p. 549)

[262] EI. XXVII. p. 71, 1114 A.D.

ಪಂದೇಶ್ವರದ ಗಡಿಂಬದ ಗಂಡರಾದಿತ್ಯನ ಪಿರಿಯ ಕೋಲ್’[263] ಇತ್ಯಾದಿಗಳನ್ನು ಹೆಸರಿಸಬಹುದು. ಒಂದೇ ಊರಿನಲ್ಲಿ ಬೇರೆ ಬೇರೆ ಅಳತೆಗೋಲುಗಳು ಪ್ರಚಾರದಲ್ಲಿದ್ದುದರ ಸೂಚನೆಗಳೂ ಇವೆ. ‘ಎಳರಾವೆಯ ತೀರ್ಥದ ಗಡಿಂಬದ ಒಜ್ಮತ್ತರ ಮಲ್ಲನ ಘಳೆ’ ಮತ್ತು ‘ದಾನವಿನೋದನ ಘಳೆ’ಗಳಲ್ಲಿ ಅಳೆದು ಭೂಮಿಯನ್ನು ಬಿಟ್ಟಂತೆ ಒಂದು ಶಾಸನದಲ್ಲಿ ಹೇಳಿದೆ.[264] ಇವುಗಳಲ್ಲಿ ಮೊದಲನೆಯದನ್ನು ಬೆದ್ದಲು ಭೂಮಿಯನ್ನಳೆಯಲೂ, ಎರಡನೆಯದನ್ನು ಗದ್ದೆ ಮತ್ತು ತೋಟಗಳನ್ನಳೆಯಲೂ ಬಳಸುತ್ತಿದ್ದಂತೆ ಆ ಶಾಸನದಿಂದ ಊಹಿಸಬಹುದು. ಈ ಊಹೆಯು ನಿರಾಧಾರವಾದುದೇನೂ ಅಲ್ಲ. ಒಂದು ಶಾಸನದಲ್ಲಿ ‘ಗದ್ದೆ ಗಳೆ’ ಮತ್ತು ‘ಬೆದ್ದಲು ಗಳೆ’ ಗಳನ್ನು ಬೇರೆ ಬೇರೆಯಾಗಿ ಹೇಳಿದೆ.[265] ಎಂದರೆ ಬೆದ್ದಲನ್ನೂ ಗದ್ದೆಯನ್ನೂ ಅಳೆಯಲು ಬೇರೆ ಬೇರೆ ಅಳತೆ ಗೋಲುಗಳು ಇದ್ದುವೆಂದು ಕಾಣುತ್ತದೆ.

ಈ ಅಳತೆಗೋಲುಗಳ ಸಹಾಯದಿಂದ ಹೊಲಗಳನ್ನು ‘ ಮತ್ತರು ’ ಮತ್ತು ‘ ಕಮ್ಮ’ (‘ಕಂಬ’) ಗಳೆಂಬುದಾಗಿ ಅಳೆಯುತ್ತಿದ್ದರು. ಒಂದು ಮತ್ತರಿಗೆ 900 ಕಂಬಗಳು. ಇದಕ್ಕೆ ಆಧಾರ ಕ್ರಿ. ಶ. 1099 ರ ಒಂದು ಶಾಸನ.[266] ಅದರಲ್ಲಿ ಬೇರೆ ಬೇರೆ ಭೂಮಿಗಳ ಪ್ರಮಾಣವನ್ನು ಮತ್ತರು, ಕಮ್ಮಗಳಲ್ಲಿ ಹೇಳಿದೆ. ಅದರ ಮೊತ್ತ ಮತ್ತರು 4+ ಕಮ್ಮ 3100 ಆಗುತ್ತದೆ. ಕೊನೆಯಲ್ಲಿ ಒಟ್ಟು ಮೊತ್ತವನ್ನು ಹೇಳುವಾಗ ಮತ್ತರು 7+ ಕಮ್ಮ 400 ಎಂದು ಹೇಳುತ್ತದೆ. ಎಂದರೆ ಮತ್ತರು 4+ ಕಮ್ಮ 3100=ಮತ್ತರು 7+ ಕಮ್ಮ 400 (1 ಮತ್ತರು=900 ಕಮ್ಮ). ಅದೇ ಶಾಸನದಲ್ಲಿ ‘ಗಟಿದ್ದಿಗುಣಿಗನ ಮತ್ತರ’ನ ಪ್ರಮಾಣವನ್ನು ಹೀಗೆ ಕೊಟ್ಟಿದೆ: ಮತ್ತರ್ 2+ ಕಮ್ಮ 1935= ಮತ್ತರ್ 4+ ಕಮ್ಮ 130. ಭೂಮಿಯ ಪ್ರಮಾಣ ಹೇಳುವಾಗ 5 ಕಮ್ಮದಷ್ಟು ಹೆಚ್ಚು ಕಡಮೆಯಾಗಿದೆಯೆಂದು ಭಾವಿಸಿದರೆ ಒಂದು ಮತ್ತರು 900 ಕಮ್ಮಗಳಿಗೆ ಸಮಾನವೆಂಬುದು ಸ್ಪಷ್ಟವಾಗುತ್ತದೆ.[266.1]

ಮತ್ತರು ಮತ್ತು ಕಂಬಗಳ ಪ್ರಮಾಣವನ್ನು ಖಚಿತವಾಗಿ ನಿರ್ಧರಿಸುವುದು ಸದ್ಯಕ್ಕೆ ಅಸಾಧ್ಯ. ಬುಚನನ್ ಎಂಬುವರು ಒಂದು ಕಂಬವು $4\frac{169}{1000}$ ಎಕರೆಗೆ ಸಮಾನವೆಂದು ಭಾವಿಸುತ್ತಾರೆ.[267] ಇದು ಅಸಾಧ್ಯವೆಂಬುದು ಮೇಲುನೋಟಕ್ಕೇ ಗೊತ್ತಾಗುತ್ತದೆ. 800 ಕಂಬದಷ್ಟು ಎಂದರೆ ಸುಮಾರು 3200 ಎಕರೆಗಳಷ್ಟು ಹೊಲವನ್ನು ಯಾರಾದರೂ ದಾನವಾಗಿ ಕೊಡಲು ಸಾಧ್ಯವೇ ? ಡಾ॥ ಅಲ್ಟೇಕರರ ಪ್ರಕಾರ ಒಂದು ಮತ್ತರು ಸುಮಾರು ಐದು ಎಕರೆಗಳಿಗೆ ಸಮಾನ.[268] ಇದೂ ಬರಿಯ ಊಹೆ. ಸಾವಿರ ಬಳ್ಳಿಗಳ

---

263 JISI. No. 1, 1059 A.D. ಇಲ್ಲಿಯೂ ಕೂಡ ಒಂದೇ ಅಳತೆಗೋಲಿಗೆ ದೇವರ ಹೆಸರೂ, ರಾಜನ ಹೆಸರೂ ಇರುವುದನ್ನು ಗಮನಿಸಬಹುದು.

264 EI. XII. p. 274, 1077 A.D.

265 EC. VII. Sh. 6, C. 1060 A.D.

266 SII. IX. i. 165, 1099 A.D.

266.1 ಸೊರಬತಾಲೂಕಿನ ಒಂದು ಶಾಸನದಲ್ಲಿ (EC. VIII. Sb. 135) ಕೊಟ್ಟಿರುವ ಅಳತೆಗಳು ಹೀಗಿವೆ. 1 ಮತ್ತರು=4 ಹಾದ; 1 ಹಾದ=25 ಕಂಬ; 1 ಮತ್ತರು=100 ಕಂಬ. (ಹಾದ=ಪಾದ=$\frac{1}{4}$. ಮತ್ತರು ಆ ಕಾಲದ ಮುಖ್ಯ ಅಳತೆ; ಅದರ $\frac{1}{4}$ ಭಾಗವೇ ಹಾದ ಎಂಬರ್ಥವು ಸ್ಪಷ್ಟವಾಗಿದೆ).

267 Economic Conditions in South India, p. 410. ಮಾಲಿಂಗೆಯ ಬಳಿಯ ಮೂಗೂರಿನಲ್ಲಿದ್ದ ಒಂದು ಹಳೆಯ ಅಳತೆಯ ಆಧಾರದಿಂದ ಹೇಳುವುದಾದರೆ 1000 ಕಂಬಗಳು $41\frac{1}{2}$ ಎಕರೆಗಳಿಗೆ ಸಮಾನವೆಂದು ಶ್ರೀ ಎಸ್. ಚಂದ್ರಶೇಖರಶಾಸ್ತ್ರಿಯವರ ಅಭಿಪ್ರಾಯ (The Half Yearly Journal of the Mysore University, II, p. 207). ಆದರೆ ಇದೂ ಹೆಚ್ಚು ಎಂದು ನಮ್ಮ ಭಾವನೆ.

268 The Rāṣṭrakūṭas and their Times, p. 220.

ತೋಟವು ಹನ್ನೆರಡು ಮತ್ತರಿನಷ್ಟು ಭೂಮಿಯನ್ನು ಆಕ್ರಮಿಸಿದ್ದಿತು ಎಂದು ಒಂದು ಶಾಸನದಲ್ಲಿದೆ. ("ಪನ್ನಿರ್ಮ್ಮತ್ತರು ಸಾವಿರ ಬಳ್ಳಿಯ ತೋಂಟಮುಮ ಕೊಟ್ಟರು"[269].)

'ನಿವರ್ತನ' ಎಂಬುದೂ ಹೊಲದ ಅಳತೆಗಳಲ್ಲೊಂದು. ಇದು ಸಂಸ್ಕೃತ ಶಾಸನಗಳಲ್ಲಿ ಮಾತ್ರ ಕಾಣಿಸಿಕೊಳ್ಳುವುದರಿಂದಲೂ,[270] ಸಂಸ್ಕೃತ ಶಾಸನಗಳಲ್ಲಿ ಮತ್ತರಿನ ಹೆಸರು ಬರದಿರುವುದರಿಂದಲೂ, ಅರ್ಥ ಶಾಸ್ತ್ರದಲ್ಲಿ ಕೊಟ್ಟಿರುವ ಅದರ ಪ್ರಮಾಣವು ಏನೇ ಇರಲಿ, 'ನಿವರ್ತನ'ವು ಕನ್ನಡ ಶಾಸನಗಳ ಮತ್ತರಿಗೆ ಸಮಾನವಾದುದೆಂದು ಭಾವಿಸಬಹುದು. 'ಮತ್ತರ್' ಎನ್ನುವುದು 'ಮಾತ್ರಾ' (=ಪ್ರಮಾಣ, ಗಾತ್ರ)ದ ತದ್ಭವವಿರಬಹುದೇ ಎಂದು ಪ್ರೊ|| ತೀ. ನಂ. ಶ್ರೀಕಂಠಯ್ಯನವರು ಸೂಚಿಸುತ್ತಾರೆ.

'ಶಿವನೆ' ಎಂಬ ಅಳತೆಯು ಶಾಸನಗಳಲ್ಲಿ ದೊರಕುತ್ತದೆ.[271] ಇದರ ವಿಚಾರವಾಗಿ ಸದ್ಯಕ್ಕೆ ಏನು ಹೇಳಲೂ ಸಾಧ್ಯವಿಲ್ಲ.

ವ್ಯಾಪಾರಸಾಮಗ್ರಿಗಳ ಅಳತೆ ಮತ್ತು ತೂಕಗಳ ವಿಷಯವಾಗಿ ಹೆಚ್ಚು ವಿವರಗಳು ನಮಗೆ ಒದಗಿ ಬರುವುದಿಲ್ಲ. ಕೊಳಗ ಎಂಬುದು ಅಳತೆಯ ಮಾನಗಳಲ್ಲಿ ಒಂದು. ಬೇರೆ ಬೇರೆ ಕಡೆ ಬಳಸುತ್ತಿದ್ದ ಕೊಳಗ ಗಳಿಗೆ ಬೇರೆ ಬೇರೆ ಹೆಸರುಗಳನ್ನಿಡುತ್ತಿದ್ದರು. ಉದಾಹರಣೆಗೆ—'ದೇವಗೊಳಗ', 'ದಮುಗೊಳಗ',[272] 'ಜಕ್ಕಿಗೊಳಗ', 'ಧರ್ಮಗೊಳದನಗೊಳಗ'[273]. ['ದೇವಗೊಳಗ'ದ ಬಗ್ಗೆ ದಕ್ಷಿಣ ಕರ್ನಾಟಕದ ಹಳ್ಳಿಗಳಲ್ಲಿ ಕಂಡು ಬರುವ ಒಂದು ವಿವರಣೆ ಸ್ವಾರಸ್ಯವಾಗಿದೆ—"ಒಂದು ವರ್ಷಕ್ಕೆ ಊರಿನ ಪ್ರತಿಯೊಂದು ಕುಳವೂ ಅರ್ಚಕನಿಗೆ ಬತ್ತ, ರಾಗಿ ಮುಂತಾದ 'ದವಸ ಧಾನ್ಯ' ಕೊಡಬೇಕೆಂದು ಗೌಡರು ನಿಗದಿ ಮಾಡಿರುತ್ತಾರೆ. ಇದಕ್ಕೆ 'ದೇವಗೊಳಗ' ಎಂದು ಹೆಸರು. ಇದನ್ನು ಯಾರೂ ಕೊಡದೆ ತಪ್ಪಿಸಿಕೊಳ್ಳುವಂತಿಲ್ಲ" (ಡಿ. ಲಿಂಗಯ್ಯ: 'ಬೋರೆದೇವರು'—ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, 58. 2, ಪು 16). ಇದು ಹಿಂದಿನ ಕಾಲಕ್ಕೂ ನಿಜವಾದರೆ, 'ದೇವಗೊಳಗ' ಎಂಬುದು ಕೊಳಗದ ಹೆಸರಾಗದೆ ಒಂದು ವ್ಯವಸ್ಥೆಯ ಹೆಸರಾಗುತ್ತದೆ.] ಬೇರೆ ಬೇರೆ ಅಳತೆ ಮತ್ತು ತೂಕಗಳ ಪಟ್ಟಿಯನ್ನು ರಾಜಾದಿತ್ಯನ ವ್ಯವಹಾರ ಗಣಿತವನ್ನಾಶ್ರಯಿಸಿ ಕೆಳಗೆ ಕೊಡಲಾಗಿದೆ.[274]

| | |
|---|---|
| 1 ಖಂಡುಗ = 4 ಪಂಚಕ | 1 ಭಾರ = 20 ತೊಲ |
| 1 ಪಂಚಕ = 5 ಕೊಳಗ | 1 ತೊಲ = 5 ಬೀಸಗೆ |
| 1 ಕೊಳಗ = 4 ಬಳ್ಳ | 1 ಬೀಸಗೆ = 20 ಪಲ. |
| 1 ಬಳ್ಳ = 4 ಮಾನ | 1 ಪಲ = 4 ಕರ್ಷ |
| 1 ಮಾನ = 4 ಸೊಲ್ಲಿಗೆ | 1 ಕರ್ಷ = 4 ಸುವರ್ಣ. |
| 1 ಸೊಲ್ಲಿಗೆ = 4 ಗಿದ್ದಿಗೆ. | |

## ಬೆಲೆ ಮತ್ತು ಅಳತೆಗಳ ಮೇಲೆ ಆಡಳಿತದ ಹತೋಟಿ

ಬಳಕೆಯ ವಸ್ತುಗಳ ಬೆಲೆಗಳ ಮೇಲೆ ಮತ್ತು ಅಳತೆಗಳ ಮೇಲೆ ಆಡಳಿತದ ನಿಯಂತ್ರಣವು ಎಷ್ಟರ ಮಟ್ಟಿಗಿದ್ದಿತು ಎಂಬುದು ಶಾಸನಗಳಿಂದ ತಿಳಿದುಬರುವುದಿಲ್ಲ. ಬಹುಶಃ ಅಂತಹ ನಿಯಂತ್ರಣವು ಇದ್ದಿರ

---

269 EC. XI. Cd. 26, 946 A.D.

270 EI. IV. p. 206, 982 A.D. "ರಾಜಮಾನೇನ ದಂಡೇನ ತ್ರಿಂಶಂ ನಿವರ್ತನಕ್ಷೇತ್ರಂ ದತ್ತವಾನ್."

271 EC. VIII. Sa. 80, 1096 A.D.; ಸಂಭಾವನೆ, ಪು. 208.

272 SII. IX. i. 88, 1034–5 A.D.

273 EC. IV. Ch. 83, 1117 A.D.

274 ವ್ಯವಹಾರಗಣಿತ (ಸಂ. ಎಂ. ಮರಿಯಪ್ಪಭಟ್ಟ), ಮುನ್ನುಡಿ, ಪು. 8.

ಬೇಕು. ವ್ಯಾಪಾರಿಗಳು ತಾವು ಅಳೆಯಲು ಬಳಸುತ್ತಿದ್ದ ಅಳತೆಗಳನ್ನು ಚಿಕ್ಕದು ಮಾಡಿ ಲಾಭವನ್ನು ಸಂಪಾದಿಸುತ್ತಿದ್ದುದರ ಸೂಚನೆಯು ಪಂಪಭಾರತದಲ್ಲಿದೆ.[275] ("ಸಟ್ಟೆಯ ಬಳ್ಳಂ ಕಿಱಿದು"). ಇಂತಹ ಮೋಸ ಕೃತ್ಯಗಳನ್ನು ಬ್ರಹ್ಮಶಿವನು ಕಟುವಾಗಿ ಖಂಡಿಸುತ್ತಾನೆ. ಇನ್ನೊಬ್ಬರಿಂದ ಕೊಂಡುಕೊಳ್ಳುವಾಗ ಹಿರಿಯ ಕೋಲುಗಳನ್ನೂ, ಹಿರಿಯ ಬಳ್ಳಗಳನ್ನೂ ಬಳಸಿದರೆ, ಇನ್ನೊಬ್ಬರಿಗೆ ಕೊಡುವಾಗಲೂ ಅವುಗಳನ್ನೇ ಬಳಸ ಬೇಕೆಂದು ಅವನು ಹೇಳುತ್ತಾನೆ.[276] ಹೊಲವನ್ನು ಅಳೆಯುವಾಗ ಅಧಿಕಾರಿಯೊಬ್ಬನು ನಾಲ್ಕು ಎತ್ತಿನ ಹೊಲವನ್ನು ಆರು ಎತ್ತಿನ ಹೊಲವೆಂದು ನಿರ್ಧರಿಸಿ ಮೋಸಮಾಡಿದನೆಂದೂ, ಅದನ್ನು ತಿಳಿದ ರಾಜನು ಹಿಂದಿನಂತೆಯೇ ಗದ್ದೆಯನ್ನು ಅಳೆದುಕೊಟ್ಟನೆಂದೂ ಒಂದು ಶಾಸನವು ತಿಳಿಸುತ್ತದೆ.[277] ಈ ಶಾಸನದ ಅರ್ಥವಾಗಲಿ, ಉದ್ದೇಶವಾಗಲಿ ಸ್ಪಷ್ಟವಾಗಿ ತಿಳಿಯದೆ ಇದ್ದರೂ ಅಳತೆಗಳ ವಿಷಯದಲ್ಲಿ ಮೋಸವು ನಡೆಯುತ್ತಿತ್ತೆಂದೂ, ಅಂತಹ ಸಮಯಗಳಲ್ಲಿ ರಾಜನೇ ಮುಂದೆ ಬಂದು ಅನ್ಯಾಯಗಳನ್ನು ತಿದ್ದುತ್ತಿದ್ದನೆಂದೂ ಶಾಸನದಿಂದ ಗೊತ್ತಾಗುತ್ತದೆ. ಅಳತೆ ಮತ್ತು ತೂಕದ ಮೇಲೆ ರಾಜ್ಯದ ಮುದ್ರೆಗಳಿರಬೇಕೆಂದು ಅರ್ಥ ಶಾಸ್ತ್ರವು ವಿಧಿಸುತ್ತದೆ.[278]

## ಸಾರ್ವಜನಿಕ ಆಯವ್ಯಯ

### ಆದಾಯ : ತೆರಿಗೆಗಳು ಇತ್ಯಾದಿ

ರಾಜ್ಯಾದಾಯವನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು–(i) ತೆರಿಗೆಗಳು, (ii) ಇತರ ಆಕರಗಳು. ಇವುಗಳಲ್ಲಿ ತೆರಿಗೆಗಳಿಂದ ಬರುತ್ತಿದ್ದ ಆದಾಯವೇ ಹೆಚ್ಚು. ಇತರ ಆಕರಗಳಿಂದ ಬರುತ್ತಿದ್ದ ಆದಾಯವು ಎರಡು ಮೂರು ರೀತಿಯದು. ಉತ್ತರಾಧಿಕಾರಿಗಳಿಲ್ಲದೆ ಮಡಿಯುತ್ತಿದ್ದವರ ಆಸ್ತಿಯು ('ಅಪುತ್ರಕಧನ') ರಾಜನಿಗೆ ಸೇರುತ್ತಿದ್ದಿತು. ಯಾವನೋ ವರ್ತಕನ ಅಪುತ್ರಕ ಧನವನ್ನು ರಾಜಾದಾಯಕ್ಕೆ ಸೇರಿಸಬೇಕು ಎಂದು ಮಂತ್ರಿಯು ಹೇಳಿದಾಗ ದುಷ್ಯಂತನು, ಆ ವರ್ತಕನ ಪತ್ನಿಯರಲ್ಲಿ ಯಾರಾದರೂ ಗರ್ಭಿಣಿಯರಿರುವರೇ ವಿಚಾರಿಸು ಎಂದು ಹೇಳುವುದನ್ನು ಶಾಕುಂತಲ ನಾಟಕದಲ್ಲಿ ಗಮನಿಸಬಹುದು. ರಾಜನೊಬ್ಬನು ಯಾವುದೋ ಧರ್ಮಾರ್ಥವಾಗಿ 'ಅಪುತ್ರಕ ಪೊರಳ'ನ್ನು (ಪುರುಳ್=ಧನ) ಬಿಟ್ಟ ವಿಷಯವು ಶಾಸನವೊಂದರಲ್ಲಿದೆ.[279] ಬಳ್ಳಿಗಾವೆಯ ವರ್ತಕರು ತಮ್ಮ 'ಅಪುತ್ರಿಕ ಧನ'ವು ದೇವರಿಗೆ ಸಲ್ಲಬೇಕೆಂದು ತೀರ್ಮಾನಿಸುತ್ತಾರೆ.[280] ಇವರ ತೀರ್ಮಾನವನ್ನು ಬಹುಶಃ ರಾಜನು ಒಪ್ಪಿಕೊಂಡನೆಂದು ಕಾಣಿಸುತ್ತದೆ. ಅಲ್ಲದೆ ಆಗಾಗ ರಾಜನು, ತನಗೆ ಅವಶ್ಯವೆಂದು ತೋರಿದಾಗ, ಶ್ರೀಮಂತರ ಐಶ್ವರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದುದರ, ಅಥವಾ ಅವರಿಂದ ಹೆಚ್ಚಾಗಿ ಹಣವನ್ನು ಕಿತ್ತುಕೊಳ್ಳುವುದರ ಸೂಚನೆಯು ಒಂದು

---

275 ಪಂಪಭಾರತ, 12. 175.

276 "ಪಿರಿದಪ್ಪ ಕೋಲ್ಗಳಿಂದಂ| ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂ| ತಿರೆ ಪೆಜಿರ್ಗೆ ಕುಡುಗೆ ಕುಂದಿಸಿ| ಪರದುಗೆಯುಲ್ಲಲ್ಲದೆಂದು ನೆಗಳ್ಗಂ ಜೈನಂ||" (ಸಮಯ ಪರೀಕ್ಷೆ, 5.47).

277 EC. VIII. Sb. 10, C. 800 A.D.

278 Arthaśāstra (Eng. Translation), p. 116.

279 IA. XIX. p. 144, C. 685 A.D. "ಶಾಂದಬೊರ್ರ್ ಅಧಿಕಾರಿಗಳಾಗೆ ಪೆರಿಯಾ ಒಸಗೆಯುಂ ಅಳವಣವುಂ ಅಪುತ್ರಕ ಪೊರಳುಮಾನ್ ವಿಟ್ಟಾರ್.."

280 EC. VII. Sk. 118, 1054 A.D.

ಶಾಸನದಲ್ಲಿದೆ ("ಪಡೆದರ್ಥಂ ಕಳ್ಳರಿಂ ದಾಯಿಗರಿನಳಿಪರಿಂ ಭೂಪರಿಂ ಕಿಚ್ಚಿನಿಂದಂ ಕಿಡುಗುಂ").[281] ಅಲ್ಲದೆ ರಾಜನಿಗೇ ಸೇರಿದ ವೈಯಕ್ತಿಕವಾದ ಆಸ್ತಿಯಿಂದಲೂ [282] ಆದಾಯವು ಬರುತ್ತಿದ್ದಿತು.

ರಾಜನ ಆದಾಯದ ಬಹುಭಾಗವು ತೆರಿಗೆಗಳಿಂದ ಬರುತ್ತಿದ್ದಿತು. ರಾಜನು ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಹಿಂದಿರುಗಿ ಕೊಡುವ ಪ್ರತಿಫಲವೇ ತೆರಿಗೆಗಳೆಂದು (ಸಂ. 'ಕರ') ಗೌತಮ ಸಂಹಿತೆ, ನಾರದ ಸಂಹಿತೆ ಮುಂತಾದ ಸ್ಮೃತಿಗಳು ಭಾವಿಸುತ್ತವೆ.[283] ಧರ್ಮದಿಂದ ರಾಜ್ಯವನ್ನಾಳುವ ರಾಜನಿಗೆ ದೇಶದಲ್ಲಿ ಬೆಳೆಯುವ ಬೆಳೆಯ ಆರನೆಯ ಒಂದು ಭಾಗವು ಸಲ್ಲಬೇಕೆಂದು ವಸಿಷ್ಠನು ಅಭಿಪ್ರಾಯಪಡುತ್ತಾನೆ.[284] ಇದು ರಾಜನಿಗೂ ಪ್ರಜೆಗಳಿಗೂ ಮಧ್ಯೆ ಒಂದು ರೀತಿಯ ಒಪ್ಪಂದವಿದ್ದಂತೆ. ರಾಜನು ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದಿದ್ದರೆ ಪ್ರಜೆಗಳಿಂದ ಪಡೆದ ತೆರಿಗೆಗಳನ್ನು ಹಿಂದಿರುಗಿಸಬೇಕೆಂಬ ಅಭಿಪ್ರಾಯವೂ ಇದ್ದಿತು.[285] ಆದರೆ ಇದನ್ನು ಕಾರ್ಯರೂಪಕ್ಕೆ ತಂದಿರುವುದರ ನಿದರ್ಶನಗಳು ಇಲ್ಲವೇ ಇಲ್ಲವೆನ್ನಬಹುದು.

ದಕ್ಷಿಣ ಭಾರತದ ಶಾಸನಗಳನ್ನು ಅಧ್ಯಯನಮಾಡುವಾಗ ಎದ್ದು ಕಾಣುವ ಅಂಶವೆಂದರೆ ಅವುಗಳಲ್ಲಿ ಕಂಡುಬರುವ ಅಸಂಖ್ಯಾತ ತೆರಿಗೆಗಳು. ಇವುಗಳಲ್ಲಿ ಎಷ್ಟೋ ತೆರಿಗೆಗಳು ಅರ್ಥವೇ ಆಗುವುದಿಲ್ಲ. ಅವುಗಳನ್ನು ವಿಂಗಡಿಸಿ ಒಂದೊಂದರ ವಿಷಯವನ್ನೂ ಚರ್ಚಿಸುವುದು ಈ ಅಧ್ಯಯನಕ್ಕೆ ಹೊರಗಾದುದು. ಕೆಳಗೆ ತೆರಿಗೆಗಳ ಅಕಾರಾದಿಯಾದ ಒಂದು ಪಟ್ಟಿಯನ್ನು ಮಾತ್ರ ಕೊಡಲಾಗಿದೆ.

ಅಟ್ಟದೆಱೆ–[286] ಅಟ್ಟವನ್ನು ಹೊಂದಿದ್ದಕ್ಕೆ, ಎಂದರೆ ಬಹುಶಃ ಮನೆಗೆ ಮಹಡಿಯನ್ನು ಹಾಕಿಸಿಕೊಂಡಿದ್ದಕ್ಕೆ ತೆರಿಗೆ.

ಅಡೆಕಲುವಣ–[287] [?]

ಅಡೆಗರ್ಚು–[288] [?]

ಅಡ್ಡದೆಱೆ–[289] [?]

ಅರತೆಱೆ–[290] [?]

ಅರುವಣ–ಈ ಹೆಸರಿನ ತೆರಿಗೆ ಅನೇಕ ಶಾಸನಗಳಲ್ಲಿ ಕಾಣಿಸಿಕೊಳ್ಳುತ್ತದೆ. 'ಅಱುವಣ' ಎಂಬ ರೂಪದಲ್ಲಿಯೂ ಒಂದೆರಡು ಕಡೆ ಕಾಣಿಸಿಕೊಳ್ಳುತ್ತದೆ.[291] ಉಳಿದ ಕಡೆಗಳಲ್ಲೆಲ್ಲಾ 'ಅರುವಣ' ಎಂದೇ ಇರುವುದರಿಂದ ಬಹುಶಃ ಇದೇ ಸರಿಯಾದ ರೂಪ. ದತ್ತಿಯಾಗಿ ಬಿಟ್ಟುಕೊಟ್ಟ ಹೊಲಕ್ಕೋ ತೋಟಕ್ಕೋ ಇಷ್ಟು 'ಅರುವಣ'ವನ್ನು ಕೊಡಬೇಕೆಂದು ನಿಬಂಧಿಸುತ್ತಿದ್ದರು. "ಅಂತು ಮೂಱು ತೋಂಟಕ್ಕೆ ಮೂಱು ಮತ್ತರ್ ಕಿಸುಕಾಡಿಂಗಮರುವಣ-

281 EC. XI. Dg. 90, 1128 A.D.
282 EC. VIII. Sb. 184, C. 1033 A.D.
283 U.N. Ghoshal : Hindu Revenue System, p. 18.
284 ಅದೇ.
285 Jayaswal : Hindu Polity, p. 334.
286 EC. III. Ml. 30, 909 A.D.
287 MAR (1932). p. 171, 1124 A.D.
288 EC. VIII. Nr. 36, 1077 A.D.
289 EC. IX. Cp. 161, 913 A.D.
290 EC. IX. Cg. 33, C. 1115 A.D. [= ಅರಸು + ತೆಱೆ(?)]
291 EI. III. p. 232, 991 A.D.; IA. XII. p. 255, 971–2 A.D.

ಮನಿತ್ತುಣ್ಣರ್ ;"[292] "ಇಂತೀ ವೃತ್ತಿಗೆಲ್ಲಮರುವಣವೆರಡು ಗದ್ಯಾಣ ಪ್ರೊಸ್ತಂ ತೆತ್ತು" ; [293] "ಅಂತಾ ಸಾಯಿರ ಮತ್ತರಿಂಗೆ ಅಱುವಣ ಗದ್ಯಾಣ ಹನ್ನೆರಡು" ; [294] "ಅಂತು ಮತ್ತರ್ ಪನ್ನೆರಡಕ್ಕಂ ಅರುವಣ-ಗದ್ಯಾಣ 1 ಪಣ 3".[295] ಇಲ್ಲೆಲ್ಲಾ 'ಅರುವಣ' ಎಂಬುದಕ್ಕೆ 'ಆಱು ಪಣ' ಎಂದಾಗಲಿ, ಧರ್ಮದ ಹಣ (ಅಱ=ಧರ್ಮ) ಎಂದಾಗಲಿ ಅರ್ಥವಾಗುವುದಿಲ್ಲ. ಡಾ. ಡಿ. ಸಿ. ಸರ್ಕಾರ್ 'ಅರುವಣ' ಮಾನ್ಯಭೂಮಿಗಳ ಮೇಲೆ ಹಾಕುವ ಆರು ಪಣದ ಕಂದಾಯ ಎಂಬರ್ಥವನ್ನು ಹೇಳುವುದು (Indian Epigraphical Glossary, p. 29) ಸಮರ್ಥನೀಯವಲ್ಲ. ದತ್ತಿಯಾಗಿ ಬಿಟ್ಟುಕೊಟ್ಟ ಭೂಮಿಯ ಮೇಲಿನ ತೆರಿಗೆಯನ್ನು ಸಂಪೂರ್ಣವಾಗಿ ತೆಗೆದುಹಾಕಿದ್ದರೆ ಅದಕ್ಕೆ 'ಅರುವಣ' ಮುಂತಾದ ತೆರಿಗೆಗಳಿರುತ್ತಿರಲಿಲ್ಲ. ಡಾ|| ಬಾರ್ನೆಟ್ ಅವರು ಅರುವಣವು 'ಮಾನ್ಯ ಭೂಮಿಗಳ ಮೇಲಿನ ತೆರಿಗೆ' ಎಂದು ಅರ್ಥೈಸುತ್ತಾರೆ.[296]

ಆಯಿಲದೆಱೆ[297]—[?]

ಆಳಿವಸತಾಯ[298]-ಆಳುಗಳ ಎಂದರೆ ಸೈನಿಕರ ವಸತಿಗಾಗಿ ಹಾಕುತ್ತಿದ್ದ ತೆರಿಗೆ(?)

ಉಟ್ಟಸಾಮಂತದೆಱೆ[299]-[?]

ಊರುಟ್ಟಿಗೆ[300]-[?] ಒಟ್ಟು ಊರಿನ ಕೆಲಸಗಳಿಗೆ ಈಗಲೂ 'ಊರೊಟ್ಟಿಗೆ' 'ಊರೊಟ್ಟಿನ ಕೆಲಸ' ಎನ್ನುತ್ತಾರೆ. ಪ್ರಾಯಶಃ ಊರಿನ ಸಾರ್ವಜನಿಕ ಕೆಲಸಗಳಿಗಾಗಿ ಹಾಕುತ್ತಿದ್ದ ತೆರಿಗೆಯಿರಬಹುದೆ ?

ಒಸಗೆ[301]-(?) ಒಸಗೆ= ಹಬ್ಬ.

ಕತ್ತರಿವಣ[302]-ಬಹುಶಃ ಚಿಪ್ಪಿಗರ ಮೇಲೆ ಹಾಕುತ್ತಿದ್ದ ತೆರಿಗೆ.

ಕಂಡಿ[303]-[?]

---

[292] BKI. I. i. 47, 995 A.D.

[293] JISI. No. 2, 1098 A.D.

[294] EI. III. p. 232, 991 A.D.

[295] BKI. I. i. 63, 1026 A.D.

[296] EI. XV. p. 97. ಬಾರ್ನೆಟ್ ಅವರ ಅಭಿಪ್ರಾಯವನ್ನು ಸಮರ್ಥಿಸುವಂತಿದೆ, ಕ್ರಿ. ಶ. 1074ರ ಒಂದು ಶಾಸನ. (SII. XX. No. 47)-"ಅಲ್ಲಿ ಮನ್ನೆಯ ನಿರ್ಬಂಧದ ಕಿಱುದೆಱೆಗಳವಾ ತಿಂಗಳಿನ ಬೇಳೆಯೊಂದಿಂತೀ ನಡೆವ ತೆಱೆಗಳ್ಕಂ ಪೊಳಲ ಮನ್ನೆಯ ದಾಸಿಕೆಯುಳ್ಳ [ದೀಪು]ಮುಂ ದಾಯಪ್ರಮ್ಮದ ಕಿಱುದೆಱೆಗಳುಮಂ ಸರ್ವಬಾಧಾಪರಿಹಾರಮಾಗೆ ಬಿಟ್ಟು ನಡೆಯಿಸಿದ". 'ಅರುವಣ'ಕ್ಕೆ ಕನ್ನಡ ನಿಘಂಟಿನಲ್ಲಿ (ಪು. 388) ನೇಗಿಲು ತೆರಿಗೆ ಎಂಬ ಅರ್ಥವನ್ನು ಕೊಟ್ಟಿದೆ. (<ಆರ್= ನೇಗಿಲು)ಇದು ಬಹುಶಃ ಸರಿಯಾದ ಅರ್ಥ. ದೀರ್ಘಸ್ವರವಿರುವ ಪ್ರಕೃತಿಯ ಮುಂದೆ ಸ್ವರಾದಿಯಾದ ಪ್ರಕೃತಿ ಸಾಧಕ ಪ್ರತ್ಯಯ (derivative Suffix) ಬಂದರೆ ಆಗ ದೀರ್ಘಸ್ವರ ಹ್ರಸ್ವವಾಗುತ್ತದೆಯೆಂಬುದು ಒಂದು ದ್ರಾವಿಡ ಭಾಷೆಗಳಿಗೆಲ್ಲ ಅನ್ವಯ ವಾಗುವ ನಿಯಮ. ಅದರ ಪ್ರಕಾರ ಆರ್ + ಉ→ಅರು ಆಗಿ, ಅದಕ್ಕೆ 'ಪಣ' ಸೇರಿ 'ಅರುವಣ' ಆಗಿರುವಂತೆ ಕಾಣುತ್ತದೆ.

[297] SII. IX. i. 54, C. 860 A.D.

[298] BKI. I. i. 75, 1042 A.D.

[299] EC. III. MI. 30, 909 A.D.

[300] MAR (1932). p. 171, 1124 A.D.

[301] MAR (1932). p. 171, 1124 A.D.

[302] ಅದೇ.

[303] ಅದೇ.

ಕನ್ನಡಿವಣ[304]-ವೇಶ್ಯೆಯರ ಮೇಲೆ ಹಾಕುತ್ತಿದ್ದ ತೆರಿಗೆ. 'ಸೂಳೆದೆಱೆ' ಎಂಬ ಹೆಸರೂ ಉಂಟು.[305] ವೇಶ್ಯೆಯರು ಕನ್ನಡಿ ಇಟ್ಟುಕೊಂಡದ್ದಕ್ಕೆ ಹಾಕಿದ ತೆರಿಗೆ 'ಕನ್ನಡಿವಣ' ಇರಬಹುದೇ ?

ಕವಣಾಯ[306]-ಕವಣೆ ಇಟ್ಟುಕೊಂಡದ್ದಕ್ಕೆ ತೆರಿಗೆ (?).

ಕವರ್ತೆ[307] (?)-ಕವರ್ತೆ= ಕಿತ್ತುಕೊಳ್ಳುವಿಕೆ.

ಕಳ್ಳವಳಿಕೆ[308]-[?] ಕಳ್ಳರನ್ನು ಹಿಡಿದು ಹಾಕುವ ದಂಡ (?).

ಕಾಣಿಕೆ[309]-ರಾಜ ಅಥವಾ ಹಿರಿಯ ಅಧಿಕಾರಿಗಳು ಬಂದಾಗ ಕೊಡಬೇಕಾದುದು (?).

ಕಾಱುದೆಱೆ[310]- [?]

ಕಾಳಗೊಲ್ಚು [?] (SII. XX. No. 47)

ಕಿಱುಕುಳ[311] } ಇವೆರಡೂ ಸಣ್ಣ ತೆರಿಗೆಗಳು. ಇವುಗಳಿಗೆ ಏನು ವ್ಯತ್ಯಾಸವೋ
ಕಿಱುದೆಱೆ[312] } ಹೇಳುವುದು ಕಷ್ಟ.

ಕುಮಾರ ಗದ್ಯಾಣ[313]-ಯುವರಾಜನು ಬಂದಾಗ ಕೊಡಬೇಕಾದ ಕಾಣಿಕೆ (?).

ಕುಂಬಜ ಬಿಟ್ಟಿಕಂ[314]-ಕುಂಬಾರರು ಬಿಟ್ಟಿಯಾಗಿ ಮಡಕೆಗಳನ್ನು ಮಾಡಿಕೊಡಬೇಕೆಂಬ ನಿಬಂಧ (?).

ಕುಱುಂಬದೆಱೆ[315]-'ಕುಱುಂಬ' ಜನರ ಮೇಲಿನ ತೆರಿಗೆ (?).

ಕುಳಿಯ ಸುಂಕ[316]-ತೋಟದ ಬಾವಿಯ ಮೇಲೆ ಹಾಕುತ್ತಿದ್ದ ತೆರಿಗೆ.

ಕೂಟಕ[317]-[?]

ಕೊಡತಿವಣ[318]-ಬಹುಶಃ ಕಮ್ಮಾರ ಮತ್ತು ಬಡಗಿಗಳ ಮೇಲೆ ಹಾಕುತ್ತಿದ್ದ ತೆರಿಗೆ.

---

304 EC. VII. Sk. 295, 1074 A.D.–'ಸೂಳೆಯರಲ್ಲಿಯ ಕನ್ನಡಿವಣಮುಂ'

305 EC. XI. Dg. 133, 1071 A.D.

306 SII. IX. i. 172, 1106 A.D.

307 MAR (1932). p. 171, 1125 A.D. (ನೋಡಿ–"ಕವರ್ದರಱಮೊಳರೆ ಕನಿಯಲ್ಲದರಂ"–ಕವಿರಾಜಮಾರ್ಗ, 1.3.)

308 EI. XXVIII. p. 33, 1082 A.D.

309 EC. VIII. Nr. 36, 1077 A.D.

310 EC. IX. Cp. 161, 913 A.D.

311 EC. VIII. Nr. 36, 1077 A.D.

312 ಅದೇ. } ಹಲ್ಮಿಡಿಶಾಸನದಲ್ಲಿ 'ಕುಱುಂಬಿಡಿ' ಎಂಬ ತೆರಿಗೆಯ ಹೆಸರು ಬರುತ್ತದೆ. ಇದರ ಅರ್ಥವೂ ಅಸ್ಪಷ್ಟ
313 ಅದೇ. } ವಾಗಿದೆ.

314 MAR (1932). p. 171, 1124 A.D.

315 MAR (1933). p. 236, 791 A.D. 'ಕುಱುಂಬ'= ಈಗಿನ 'ಕೊರಮ' (?)

316 BKI. I. ii. 150, 1102 A.D.

317 MAR (1932). p. 171, 1124 A.D.

318 ಅದೇ.

ಕೊಡವೀಸ[319]-[?]

ಕೊಳ್ಳಿ[320]-[?]

ಗಾಣದ ತೆಱೆ[321]-ಗಾಣಗಳ ಮೇಲಿನ ತೆರಿಗೆ.

ಜಲ್ಲಂ[322]-[?]

ಡೊಂಕಿ[323]-[?]

ತಳ[324]-[?]

ತಳಭಂಡದ ಸುಂಕ[325]-ವ್ಯಾಪಾರ ಸಾಮಗ್ರಿಗಳ ಮೇಲಿನ ಸುಂಕ.

ತಳಱ ಸುಂಕ[326]-ತಳವಾರನ ಜೀವಿತಕ್ಕಾಗಿ ವ್ಯಾಪಾರಿಗಳು ಕೊಡಬೇಕಾಗಿದ್ದ ಸುಂಕ.

ತಿಪ್ಪೆಸುಂಕ[327]-ತಿಪ್ಪೆಗಳ ಮೇಲಿನ ಸುಂಕ.

ತುಪ್ಪದೆಱೆ[328]-ತುಪ್ಪದ ಮೇಲಿನ ತೆರಿಗೆ. (='ಕೊಟ್ಟಗೆದೆಱೆ' ?) [328.1]

ತೌದೆ[329]-[?]

ದಂಡದಾಯ[330]-[?]

ದಾಯ[331]-(?) 'ದಾಯದವರ್ಗಳ ತೆಱೆ'[332] ಎಂದು ಒಂದು ಶಾಸನದಲ್ಲಿದೆ

ದೇವಿದೆಱೆ[333]-ರಾಣಿ ಬಂದಾಗ ಕೊಡಬೇಕಾದ ಕಾಣಿಕೆ (?).

ಪನ್ನಾಯ[334]-[?] =ಪಣ್ಯಾಯ (?), ವ್ಯಾಪಾರ ಸಾಮಗ್ರಿಗಳ ಮೇಲೆ ತೆರಿಗೆ; ಅಥವಾ ಪರ್ಣಾಯ (?), ವೀಳೆದೆಲೆ ಮೇಲೆ ತೆರಿಗೆ.

---

319 EC. VIII. Sb. 388, 1089 A.D.
320 EI. XXVII. p. 71, 1114 A.D.
321 EC. VII. Sk. 275, 1086 A.D.
322 EI. XXVIII. p. 33, 1082 A.D.
323 BKI. I. ii. 158, 1109 A.D.
324 SII. IX. i. 172, 1106 A.D.
325 EC. VII. Sh. 97, 1113 A.D.
326 EC. VII. Sk. 137, 1114 A.D.
327 EC. IV. Ng. 103, C. 1120 A.D.
328 EC. VIII. Sb. 83, 941 A.D.
328.1 KI. V. No. 19, 1121 A.D.
329 MAR (1932). p. 171, 1124 A.D.
330 SII. IX. i. 172, 1106 A.D.
331 EC. IX. Cg. 33, 1115 A.D.
332 EC. XII. Si. 40, 1040 A.D.
333 EC. VIII. Nr. 36, 1077 A.D.
334 EC. XI. Hk. 69, C. 1126 A.D.

ಪನ್ನಾಸು[335]-"ನರೆಯಂಗಲ್ಲ ಪನ್ನಾಸುಗಳಾನ್ ಇತ್ತ ಸಮಯಂ ಒರ್ ಮತ್ತರ್ಗೆ ಇರ್ಕುಳ ಜೋಳಂ ಕುಡುವುದು." ಈ ತೆರಿಗೆಯನ್ನು ನೋಡಿಕೊಳ್ಳುತ್ತಿದ್ದ ಅಧಿಕಾರಿಯನ್ನು 'ಪನ್ನಸಿಗ'ನೆಂದು ಕರೆಯುತ್ತಿದ್ದರು.[336]

ಪರಿಪು[337]<br>
ಪಾರಣೆ } --ಇವೆರಡೂ 'ಕಿಱುಕುಳ'ಗಳು, ಎಂದರೆ ಸಣ್ಣ ತೆರಿಗೆಗಳು.

ಪುಲ್ಲುಱ್ಪು[338]-[?]

ಪೆರ್ಜುಂಕ[339]-ದೊಡ್ಡ ಸುಂಕ (ಸುಂಕ < ಸಂ. ಶುಲ್ಕ) ಎಂದು ಅರ್ಥಮಾಡಲು ನಮಗೆ ಮನಸ್ಸಾಗುತ್ತದೆ. ಆದರೆ ಪೇಱು ಅಥವಾ ಹೇರಿನ ಮೇಲೆ ಹಾಕುತ್ತಿದ್ದ ಸುಂಕವೆಂದು ಊಹಿಸಲು ಅವಕಾಶವಿದೆ.[340]

ಪೊಗವೊಗೆ[340.1]-[?]

ಬಣ್ಣಿಗೆ[341]-[?]

ಬಳಂಬೆಯ ತೆಱೆ[342]-ಬಣಬೆಗಳ ಮೇಲೆ ತೆರಿಗೆ.

ಬಾಲವಣ[343]-ಇದು ಬಹುಶಃ ಎತ್ತುಗಳ ಮೇಲೆ ಹಾಕುತ್ತಿದ್ದ ತೆರಿಗೆ. ಇದಕ್ಕೆ ಆಧಾರ–ಶಬ್ದಮಣಿದರ್ಪಣ : "ಬಾಲವಣಂ ಬೇಡುವನೊಂದೆ ಗೊಂದೆಗಮನಂಗಾರಾತಿಯಂ ಹೈಹಯಂ." ಇದು ಕೇಶಿರಾಜನು ಕೊಟ್ಟಿರುವ ಪ್ರಯೋಗ.[344] ಇದರ ಅರ್ಥ "ಹೈಹಯನು ಶಿವನ ಒಂದು ಎತ್ತಾದರೂ ಸರಿಯೇ, ಬಾಲವಣವನ್ನು ಕೇಳದೆ ಬಿಡುವವನಲ್ಲ." ತೆರಿಗೆ ಹಾಕುವಾಗ 'ಒಂದು ಹಸುವಿಗೆ' ಎಂದು ಹೇಳುವ ಬದಲು 'ಒಂದು ಬಾಲಕ್ಕೆ' ಎಂದು ಹೇಳುವ ಸಂಪ್ರದಾಯವು ಈಗಲೂ ಉತ್ತರಭಾರತದಲ್ಲಿದೆ. ಉದಾಹರಣೆಗೆ 'ಪುಚ್ಛೀ' ಎಂಬುದು ದನಗಳು ಹುಲ್ಲುಗಾವಲಿನಲ್ಲಿ ಮೇವನ್ನು ತಿನ್ನುವುದಕ್ಕೆ ತೆರಿಗೆ.[345]

---

335 IA. X. p. 167. 'ಪನ್ನಾಸು' ಎಂಬುದು 'ಪಂಚಾಶತ್' ಎಂಬುದರ ತದ್ಭವವೆಂದೂ, "ಸಾಮಾನ್ಯವಾಗಿ ದತ್ತಿಯಾಗಿ ಕೊಡಲಾದ ಭೂಮಿಗಳನ್ನು ಗುರುತಿಸಲು" ಬಂದ ಪದವೆಂದೂ ಡಾ॥ ಕೆ. ವಿ. ರಮೇಶ್ ಅಭಿಪ್ರಾಯ. 'ಪನ್ನಸು', ಅವರ ಪ್ರಕಾರ, ಮೂಲತಃ ಐನೂರು ಎಂಬರ್ಥವನ್ನು ಹೊಂದಿದ್ದು, ಕ್ರಮೇಣ ಒಂದು ವಿಸ್ತಾರದ ಭೂಮಿ ಎಂಬರ್ಥವನ್ನು ಪಡೆಯಿತು (ಕರ್ಣಾಟಕ ಶಾಸನ ಸಮೀಕ್ಷೆ, ಪು. 38). ಇದು ವಿಚಾರಯೋಗ್ಯವಾದ ಸೂಚನೆ.

336 EI. XV. p. 331, 1028 A.D.

337 BKI. I. i. 78, 1045 A.D.

338 SII. IX. i. 54, C. 860 A.D.

339 EC. VIII. Sb. 299, 1074 A.D.

340 EC. VIII. Sb. 170, 1126 A.D.

340.1 BKI. I. i. 75, 1042 A.D.

341 BKI. I. i. 158, 1109 A.D.

342 SII. IX. i. 172, 1106 A.D.

343 SII. IX. i. 54, C. 860 A.D. ; EC. V. Hn. 94, 1237 A.D. ಕ್ರಿ. ಶ. 1748ರ ಒಂದು ಶಾಸನದಲ್ಲಿ ಇದನ್ನೇ 'ಬಾಲದೆರಿಗೆ' ಎಂದಿದೆ [EC. III. Tn. 63].

344 ಶಬ್ದಮಣಿದರ್ಪಣ (ಸಂ. ಡಿ. ಎಲ್. ನರಸಿಂಹಾಚಾರ್), ಪು. 66.

345 India as Known to Pāṇini, p. 248. ಈ ಅಂಶವನ್ನು ನಾನು ಪ್ರೊ॥ ತೀ. ನಂ. ಶ್ರೀಕಂಠಯ್ಯನವರ ಉಪನ್ಯಾಸವೊಂದರಿಂದ ಗ್ರಹಿಸಿದ್ದೇನೆ.

ಬಿಟ್ಟಜೆಸ[346]-ಬಿಟ್ಟಿ ಕೆಲಸದ ವಿವರಣೆ ಹಿಂದೆಯೇ ಬಂದಿದೆ. ಇದು ದೈಹಿಕಶ್ರಮ ರೂಪವಾದ ತೆರಿಗೆ.

ಬಿರ್ದು[347]-[?]

ಬಿಲ್ಕೊಡೆ[348]-ಇದು ಎರಡು ತೆರಿಗೆಗಳನ್ನು ಅಥವಾ ಸುಂಕಗಳನ್ನು ಸೂಚಿಸುತ್ತದೆ. 'ಎರಡುಂ ಬಿಲ್ಕೊಡೆ' ಎಂದು ಶಾಸನಗಳು ಹೇಳುತ್ತವೆ.[349] ವಡ್ಡರಾವುಳ, ಪೆರ್ಜುಂಕ, ಬಿಲ್ಕೊಡೆ ಎಂಬೀ 'ನಾಲ್ಕು ಸುಂಕಗಳು' ಪ್ರಾಣಿಗಳಮೇಲೆ ಹೇರಿಕೊಂಡು ಬರುತ್ತಿದ್ದ ಸಾಮಾನು ಗಳ ಮೇಲೆ ಹಾಕುತ್ತಿದ್ದ ಸುಂಕಗಳೆಂದು ಊಹಿಸಲವಕಾಶವಿದೆ.[350] (ಅಡಿಟಿಪ್ಪಣಿ 361 ನೋಡಿ).

ಬೀಯ[351]-[?] 'ಹಬ್ಬದ ಬೀಯ' ಎಂದು ಒಂದು ಶಾಸನದಲ್ಲಿದೆ.[352] ಊರಿನಲ್ಲಿ ಹಬ್ಬಮಾಡಲು ಹಾಕುತ್ತಿದ್ದ ತೆರಿಗೆ. (?) 'ಬಿರ್ದು' (=ಔತಣ) ಎಂದರೂ ಇದೇ (?)

ಬೀರವಣ[353]-ಇದು 'ವೀರ ಪಣ'ವೇ ಅಥವಾ 'ವೀರವಣಿಕ್' ಎಂಬುದಕ್ಕೆ ಸಂಬಂಧಿಸಿದುದೇ ಹೇಳುವುದು ಕಷ್ಟ. 'ಬೀರವಣಿಗ' ಎಂಬ ಸಂಗಡದ ವರ್ತಕರಿದ್ದ ವಿಷಯ ಹಿಂದೆಯೇ ಬಂದಿದೆ.

ಮದುವೆದೆಱೆ[354]-ಮದುವೆಗಳ ಮೇಲಿನ ತೆರಿಗೆ. 'ಪಂದರ ಪಣ'[355] ಎಂದರೂ ಇದೇ ಇರಬಹುದು. (ಪಂದರ=ಹಂದರ=ಮದುವೆಯ ಚಪ್ಪರ.)

ಮನಕರೆ[356]-[?]

ಮನೆದೆಱೆ[357]-ಮನೆಗಂಡಾಯ.

ಮನ್ನೆಯದೆಱೆ[358]-[?] ಮನ್ನೆಯ ಅಥವಾ ಮಾನ್ಯರ ಜೀವನೋಪಾಯಕ್ಕೆ ಹಾಕುತ್ತಿದ್ದ ತೆರಿಗೆ?

ಮಱವಿಟ್ಟಿ[359]

ಮೇಗಳ್ವಣ[360]

ಮೇಂಟಿಗಂಡುಗ (SII. XX. No. 47) ಧಾನ್ಯದ ರಾಶಿಗೆ ಹಾಕುತ್ತಿದ್ದ ತೆರಿಗೆ ?

---

346 EC. IX. Cg. 33, C. 1115 A.D.
347 EC. VIII. Nr. 36, 1077 A.D.
348 EC. VIII. Sb. 299, 1074 A.D.
349 EC VIII. Sb. 299, 1074 A.D. ; EI. XIX. p. 189.
350 EI. XXVIII. p. 33, 1082 A.D.
351 EC. VIII. Nr. 36, 1077 A.D.
352 EC. VIII. Tl. 192.
353 EC. VIII. Sb. 390, C. 1141 A.D,; MAR (1932). p. 171, 1124 A.D.
354 MAR (1932). p. 171, 1124 A.D.
355 EC. VII. Sk. 295, 1075 A.D.
356 MAR (1932). p 171, 1124 A.D.
357 ಅದೇ. 'ಮನೆವಣ' ಇದೇ (SII. XX. No. 47)
358 BKI. I. i. 75, 1042 A.D.
359 MAR (1932). p. 171, 1124 A.D.
360 BKI. I. ii. 163, 1113 A.D.

ವಡ್ಡರಾವುಳ[361]-[?] ವ್ಯಾಪಾರಸಾಮಗ್ರಿಗಳ ಮೇಲಿನ ತೆರಿಗೆ (!)

ಸಾದ್ದ[362]-[?]

ಸಾರಿಗೆ[363]-[?] 'ಸಂಬಳ ಸಾರಿಗೆ' ಎಂಬಲ್ಲಿನ ಸಾರಿಗೆ ಯಾವುದು ?

ಸಿದ್ಧಾಯ–ಇದು ಮನೆಯ ಮೇಲೆ ಹಾಕುತ್ತಿದ್ದ ತೆರಿಗೆಯನ್ನು ಒಂದು ಕಡೆ ಸೂಚಿಸುತ್ತದೆ.[364] ಆದರೆ ಇದು ಸಾಮಾನ್ಯವಾಗಿ ಭೂಕಂದಾಯವನ್ನು ಸೂಚಿಸುತ್ತದೆ ("ಕೆಯಿ ಸಿದ್ಧಾಯಂ")[365]. ಭೂಕಂದಾಯದ ಪ್ರಮಾಣವನ್ನು ಶಾಸನಗಳು ಒಂದೆರಡು ಕಡೆ ಸೂಚಿಸಿವೆ. ಕ್ರಿ. ಶ. 951–2 ರಲ್ಲಿ ಹನ್ನೆರಡು ಮತ್ತರು ಭೂಮಿಗೆ ಆರು ಕರಿಯ ದ್ರಮ್ಮಗಳು[366] ; ಕ್ರಿ. ಶ. 1049 ರಲ್ಲಿ[367] ಮೂವತ್ತು ನಿವರ್ತನ ಭೂಮಿಗೆ ಏಳು ಪಣಗಳು, ಇನ್ನೂರು ನಿವರ್ತನಕ್ಕೆ ಒಂದು ಗದ್ಯಾಣ, ಐವತ್ತು ನಿವರ್ತನಕ್ಕೆ ಒಂದು ಗದ್ಯಾಣ, ನೂರು ನಿವರ್ತನಕ್ಕೆ ಎರಡು ಗದ್ಯಾಣ–ಎಂದರೆ, ಭೂಮಿಯ ಸಾರದ ಮೇಲೆ ಆದರ ಕಂದಾಯವನ್ನು ನಿರ್ಧರಿಸುತ್ತಿದ್ದರೆಂದು ಸ್ಪಷ್ಟವಾಗುತ್ತದೆ.

ಸುರಂದು[368]-[?]

ಸೇಸೆ[369]-'ರಾಜನ ಸೇಸೆ',[370] 'ಚಕ್ರವರ್ತಿಯ ಸೇಸೆ'[371] ಎಂದು ಶಾಸನಗಳಲ್ಲಿ ಉಕ್ತವಾಗಿದೆ. ರಾಜ ಅಥವಾ ಚಕ್ರವರ್ತಿಯ ಮದುವೆಯ ಸಮಯದಲ್ಲಿ ಜನರು ಕೊಡುತ್ತಿದ್ದ ತೆರಿಗೆಯಿರಬಹುದೆ (?).

ಹಡವಳೆಯ[372]-[?] ಪಡೆವಳ ಅಥವಾ ಹಡೆವಳ ಎಂದರೆ ಸೈನ್ಯಾಧಿಪತಿ ಎಂದರ್ಥ.

ಹದಿಯಟಾಯ[373]-[?]

---

361 EC. VIII. Sb. 299, 1074 A D. 'ವಡ್ಡರಾವುಳ'ವು ವಾಸ್ತವವಾಗಿ 'ವೃದ್ಧರಾಜಕುಲ'ವೆಂದು (ವಡ್ಡ< ವೃದ್ಧ ; ರಾವುಳ< ರಾಜಕುಲ), ರಾಜಕುಲದವರ ಜೀವನಾಂಶದ ಹಿಡುವಳಿಯನ್ನು ಅದು ಸೂಚಿಸುತ್ತದೆಂದು ಡಾ|| ಕೆ. ವಿ. ರಮೇಶ್ ಹೇಳುತ್ತಾರೆ. 'ಬಿಲ್ಕೊಡೆ'ಯಲ್ಲಿ 'ಬಿಲ್' (ವಿಲ್ = ಮಾರು), 'ಕೊಡೆ' (= ಕೊಡುಗೆ) ಎಂಬ ಎರಡು ಪದಗಳಿವೆಯೆಂದು ಅವರ ಅಭಿಪ್ರಾಯ. 'ಬಿಲ್ಕೊಡೆ'ಯು ಮಾರಾಟ ಮತ್ತು ದಾನಗಳಿಗೆ ಸಂಬಂಧಿಸಿದ ತೆರಿಗೆಗಳನ್ನು ಸೂಚಿಸಿದರೆ, ವಡ್ಡರಾವುಳವು ರಾಜಕುಲದವರ, ಹಿರಿಯ ಅಧಿಕಾರಿಗಳ ಜೀವಿತಕ್ಕಾಗಿ ಹಾಕುತ್ತಿದ್ದ ತೆರಿಗೆಯನ್ನು ಸೂಚಿಸುತ್ತದೆ. ('ವಡ್ಡರಾವುಳ ಮತ್ತು ಬಿಲ್ಕೊಡೆ'. ಸಾಧನೆ, 1.3, ಪು. 189–195)

362 SII. IX. i. 172, 1106 A.D.

363 ಅದೇ.

364 EC. VII. Sk. 112, 1139 A.D.

365 IA. XII. p. 257, 951–2 A.D.

366 ಅದೇ.

367 BKI. I. i. 85, 1049 A.D.

368 MAR (1932). p. 171, 1124 A.D.

369 ಅದೇ.

370 ಅದೇ.

371 ಅದೇ.

372 MAR (1932). p. 171, 1124 A.D.

373 ಅದೇ.

ಹಾರಿಕಾಯ ಸುಂಕ[374]-[?].

ಹಾಲಾವು[375]-ಹಾಲು ಕೊಡುತ್ತಿದ್ದ ಹಸುವಿನ ಮೇಲಿನ ತೆರಿಗೆ (?). ಇದೂ 'ತುಪ್ಪದೆಱೆ'ಯೂ ಒಂದೇ ಇರಬಹುದೆ ?.

ಹೊಗೆದೆಱೆ (?)[375.1]

ಹೊಲೆದೆಱೆ[376]-[?].

ಈ ಪಟ್ಟಿಯಲ್ಲಿ ಉಕ್ತವಾಗಿರುವ ತೆರಿಗೆಗಳಲ್ಲಿ ಬಹುಭಾಗ ಅರ್ಥವಾಗುವುದಿಲ್ಲ. ಅರ್ಥವಾಗುವ ಕಡೆಯೂ ಎಷ್ಟೋ ಕಡೆ ಸಂದೇಹವನ್ನು ಉಳಿಸಿಕೊಳ್ಳಬೇಕಾಗುತ್ತದೆ. ಅರ್ಥವು ಸಂದಿಗ್ಧವಾಗಿರುವಂತೆ ಕಂಡು ಬರುವ ಕಡೆಗಳಲ್ಲಂತೂ ಬಹು ಎಚ್ಚರಿಕೆಯಿಂದ ಇರ ಬೇಕಾಗುತ್ತದೆ. ಅಲ್ಲದೆ ಈ ತೆರಿಗೆಗಳ ಪಟ್ಟಿಯಲ್ಲಿ ಸುಂಕಗಳೂ (Tolls) ಸೇರಿರುವುದು ಗಮನಾರ್ಹ. ಮೇಲಿನ ಪಟ್ಟಿಯಿಂದ ತೆರಿಗೆಗಳ ವಿಪುಲತೆ ಮತ್ತು ವೈವಿಧ್ಯಗಳ ಒಂದು ಪರಿಚಯಮಾತ್ರವಾಗುತ್ತದೆ.

## ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿ ವರ್ಗ

ಮೇಲೆ ನೋಡಿದಂತೆ ತೆರಿಗೆಗಳ ವ್ಯವಸ್ಥೆಯು ತುಂಬ ಜಟಿಲವಾಗಿದ್ದಿತು. ಧಾನ್ಯರೂಪವಾಗಿ ಬರುವ ತೆರಿಗೆಗಳಿಗೆ ಹೇಗೆ ಲೆಕ್ಕವಿಡುತ್ತಿದ್ದರೋ ತಿಳಿಯದು. ಹಾಗೆ ಸಂಗ್ರಹವಾದ ಧಾನ್ಯವನ್ನು ರಕ್ಷಿಸಿಡಲು ಅಲ್ಲಲ್ಲಿ ದೊಡ್ಡ ಉಗ್ರಾಣಗಳಿದ್ದಿರಬೇಕು. ಅವುಗಳ ವಿಷಯವು ಎಲ್ಲಿಯೂ ಬಂದಿಲ್ಲ. ತೆರಿಗೆಗಳನ್ನು ಬರೆದಿಡಲು 'ಕಡಿತ' ಅಥವಾ 'ಕಡತ'ಗಳಿದ್ದಿರಬೇಕು. ತೆರಿಗೆಗಳಂತೆಯೇ ಅವುಗಳನ್ನು ನೋಡಿಕೊಳ್ಳಲು ನಿಯುಕ್ತ ರಾಗಿದ್ದ ಅಧಿಕಾರಿಗಳ ವ್ಯವಸ್ಥೆಯೂ ಸಾಕಷ್ಟು ಜಟಿಲವಾಗಿದ್ದಿರಬೇಕು. ದೇಶದ ಜಿಲ್ಲೆಯಂತಹ ಒಂದೊಂದು ಭಾಗಕ್ಕೆ ಸುಂಕವೆರ್ಗ್ಗಡೆಗಳನ್ನು ರಾಜನು ನೇಮಿಸುತ್ತಿದ್ದನು. ಉದಾಹರಣೆಗೆ ವತ್ಸಯ್ಯ ಎನ್ನುವವನು ಬೆಳ್ವೊಲ ಮುನ್ನೂರರ ಸುಂಕವನ್ನು ಆಳಿಕೊಂಡಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[377] ಬಹುಶಃ ಇಂತಹ ಅಧಿಕಾರಿಯ ಅಧೀನದಲ್ಲಿದ್ದುಕೊಂಡು ತೆರಿಗೆಗಳನ್ನು ಸಂಗ್ರಹಿಸುವ ಕಾರ್ಯಕ್ಕಾಗಿ ದೊಡ್ಡ ದೊಡ್ಡ ವ್ಯಾಪಾರಕೇಂದ್ರಗಳಲ್ಲಿ ಬೇರೆ ಬೇರೆ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಉದಾಹರಣೆಗೆ ಪೆರ್ಜುಂಕದ ವೆಣ್ಣಮಯ್ಯ, ಬಿಲ್ಕೊಡೆಯ ವೆಣ್ಣಮಯ್ಯ, ವಡ್ಡರಾವುಳದ ಪೆರ್ಗಡೆ ಬೇಚಯ್ಯಗಳ ಹೆಸರು ಒಂದು ಶಾಸನದಲ್ಲಿದೆ.[378] ವಡ್ಡರಾವುಳದ ಸುಂಕದವೆರ್ಗಡೆ ದಾಸಯ್ಯನ ಹೆಸರು ಒಂದು ಶಾಸನದಲ್ಲಿದೆ.[379] ಎಂದರೆ ಒಂದೊಂದು ಸುಂಕಕ್ಕೂ, ಕೆಲವು ಸಾರಿ ಹಲವಾರು ಸುಂಕಗಳನ್ನು ಒಟ್ಟಿಗೆ ನೋಡಿಕೊಳ್ಳುವುದಕ್ಕೂ ಪ್ರತ್ಯೇಕ ಅಧಿಕಾರಿಗಳಿರುತ್ತಿದ್ದರು. ಅವರ ವೇತನದ ವಿಧಾನ ಗಮನೀಯವಾದುದು. ಅವರು ಸಂಗ್ರಹಿಸುತ್ತಿದ್ದ ಸುಂಕ ಅಥವಾ ತೆರಿಗೆಗಳ ಒಂದು ನಿರ್ದಿಷ್ಟ ಭಾಗವನ್ನು ಅವರು ತಮ್ಮ ವೇತನವನ್ನಾಗಿ ತೆಗೆದುಕೊಳ್ಳ ಬೇಕೆಂಬ ಪದ್ಧತಿಯಿದ್ದಂತೆ ಕಾಣಿಸುತ್ತದೆ. ಉದಾಹರಣೆಗೆ, ಒಬ್ಬ ಸುಂಕವೆಗ್ಗಡೆಯು ಕೆಲವು ಸುಂಕಗಳನ್ನು ದೇವರಿಗೆ ಬಿಟ್ಟನೆಂದಿಟ್ಟುಕೊಳ್ಳೋಣ. ರಾಜನ ಅಪ್ಪಣೆಯಿಲ್ಲದೆ ಅವನು ಸುಂಕಗಳನ್ನು ಬಿಡುವಂತಿಲ್ಲ. ಅಲ್ಲದೆ, ಹಾಗೆ ರಾಜನ ಒಪ್ಪಿಗೆ ಪಡೆದು ಬಿಟ್ಟನೆಂದಿಟ್ಟುಕೊಳ್ಳೋಣ. ಅದಕ್ಕಾಗಿ ಅವನನ್ನು ಶಾಸನಗಳು

[374] SII. IX. i. 296, 1176 A.D.
[375] EC. VII. Tl. 192, 1103 A.D.
[375.1] KI. V. No. 19, 1121 A.D.
[376] SII. IX. i. 172, 1106 A.D.
[377] BKI. I. i. 27, 904 A.D.
[378] EI. XIX. p. 180, 1045 A.D.
[379] SII. IX. i. 139, 1074 A.D.

ಹೊಗಳಬೇಕಾದ ಪ್ರಮೇಯವೇ ಇಲ್ಲ. ಆದ್ದರಿಂದ ಅವನು ಬಿಟ್ಟುಕೊಟ್ಟ ಸುಂಕಗಳು ಅವನ ವೇತನವೆಂದು ಅಥವಾ ವೇತನದ ಒಂದು ಭಾಗವೆಂದು ತಿಳಿಯಬೇಕು. ತುಂಬುಳ ಎಂಬ ಊರಿನ ಸುಂಕವೆಗ್ಗಡೆಗಳು ಆ ಊರಿನಲ್ಲಿ ಹುಟ್ಟಿದ ಸುಂಕದ 'ದಸವಂದ' ಅಥವಾ ಹತ್ತರಲ್ಲೊಂದು ಭಾಗವನ್ನು ಬಿಟ್ಟುಕೊಟ್ಟರು ಎಂದು ಒಂದು ಶಾಸನದಲ್ಲಿದೆ.[380] ಒಟ್ಟು ಸುಂಕದಲ್ಲಿ ಎಷ್ಟು ಭಾಗವು ಅವರಿಗೆ ಸೇರುತ್ತಿದ್ದಿತೋ ತಿಳಿಯದು. ಆದರೆ ಅವರು ಬಿಟ್ಟುಕೊಟ್ಟ ಭಾಗವು ಅವರ ವೇತನದ ಒಂದು ಭಾಗವೆನ್ನುವುದು ಮಾತ್ರ ಸ್ಪಷ್ಟ. ಇಂತಹುದೇ ವಿಷಯವು ಬಳ್ಳಿಗಾವೆಯ ಶಾಸನವೊಂದರಲ್ಲಿದೆ.[381] ವಡ್ಡರಾವುಳದ ಪನ್ನಾಯದ ಪೆರ್ಗ್ಗಡೆ ಆಲಿಮಯ್ಯನೂ, ಪೆಜ್ಜುಂಕದ ನಂಬಿಯಣ್ಣನೂ 'ತಮ್ಮ ದೆಸೆಯ ಸುಂಕಮಂ' ಬಿಟ್ಟ ವಿಷಯವು ಒಂದು ಶಾಸನದಲ್ಲಿದೆ.[382] ಬಮ್ಮರಸ ಎನ್ನುವವನು ತನ್ನ 'ಪನ್ನೆಯ ಸುಂಕ'ದಲ್ಲಿ ಒಂದು ಭಾಗವನ್ನು ಬಿಟ್ಟನು ಎಂದು ಒಂದು ಶಾಸನದಲ್ಲಿದೆ.[383] ಸುಂಕವೆಗ್ಗಡೆಗಳಿಗೆ ಮಾತ್ರವಲ್ಲ, ಮಹಾಪ್ರಧಾನ ಮತ್ತು ದಂಡನಾಯಕರಂತಹ ಹಿರಿಯ ಅಧಿಕಾರಿಗಳಿಗೂ ವೇತನ ರೂಪವಾಗಿ ಕೆಲವು ಸುಂಕಗಳನ್ನು ಬಿಟ್ಟುಕೊಡುತ್ತಿದ್ದರು.[384] ಊರಿನ ಹಿರಿಯನಾದ ಗಾವುಂಡನಿಗೂ[385] ಆ ಊರಿನ ಹೊಲ ತೋಟಗಳ ತೆರಿಗೆಯ ಒಂದು ಭಾಗವನ್ನು 'ಗಾವುಂಡ ಸುಂಕ'ವೆಂದು ಬಿಟ್ಟುಕೊಡುತ್ತಿದ್ದರು.

ರೈತರಿಂದ ತೆರಿಗೆಗಳನ್ನು ಸಂಗ್ರಹಿಸಲು ಅಧಿಕಾರಿಗಳು ಸುಗ್ಗಿಯ ಕಾಲದಲ್ಲಿ ಬರುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[386] ತೆರಿಗೆಗಳನ್ನು ಸಂಗ್ರಹಿಸುವುದು ಅಂತಹ ಸುಲಭವಾದ ಕಾರ್ಯವೇನೂ ಅಲ್ಲ ಅದರಲ್ಲಿಯೂ ತೆರಿಗೆಗಳನ್ನು ಅನ್ಯಾಯವಾಗಿ ಹೆಚ್ಚಿಸಿದಾಗ, ಕೇಳಬಾರದ ಕಡೆ ಕೇಳಿದಾಗ ಜನತೆಯು ಪ್ರತಿಭಟಿಸಿರುವುದರ ಸ್ಪಷ್ಟ ಕುರುಹುಗಳು ಶಾಸನಗಳಲ್ಲಿವೆ. ತೆರಿಗೆಗಳನ್ನು ಸರಿಯಾದ ಕಾಲ, ದೇಶ, ರೀತಿಗಳಲ್ಲಿ ಸಂಗ್ರಹಿಸಬೇಕೆಂದು ಮಹಾಭಾರತವು ಸೂಚಿಸುತ್ತದೆ.[387] ರಾಷ್ಟ್ರಕೂಟರ ಕಾಲದಲ್ಲಿದ್ದ ತೆರಿಗೆಗಳನ್ನು ಚಾಳುಕ್ಯರು ಹೆಚ್ಚಿಸಿದಾಗ ಬಾಳ್ಗುಳಿ ಎಂಬ ಊರಿನ ಪ್ರತಿನಿಧಿಗಳು ಆಹವಮಲ್ಲ ಚಕ್ರವರ್ತಿಯನ್ನು ಕಂಡು ತಮ್ಮ ಕಷ್ಟಗಳನ್ನು ಹೇಳಿಕೊಂಡು ಹಿಂದಿನ ತೆರಿಗೆಗಳನ್ನೇ ಕೊಡುತ್ತ ಬರುವಂತೆ ಚಕ್ರವರ್ತಿಯಿಂದ ಆಜ್ಞೆಯನ್ನು ಹೊರಡಿಸುತ್ತಾರೆ. ("ಕನ್ನರದೇವನ ಮರ್ಯಾದೆಯಲಾದ ಸುಂಕದ ಮರ್ಯಾದೆಯಂ ತಪ್ಪದೆ ನಡೆಯಿಮೆಂದು ಬಿಟ್ಟನ್").[388] ಅಗ್ರಹಾರಗಳ ಆದಾಯವು ಅಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರಿಗೆ ಸಂದಾಯವಾಗುತ್ತಿದ್ದಿತು. ಇದನ್ನು ನಿರ್ಲಕ್ಷಿಸಿ ಮಹಾಮಂಡಳಿಕ ಬೂತಾರ್ಯನು ರೋಣಕ್ಕೆ ಬಂದು 'ಭತಾಯ'ವನ್ನು (ಬಹುಶಃ ಭತ್ತಾಯ–ಭತ್ತದ ರೂಪವಾಗಿ ಕೊಡಬೇಕಾದ ತೆರಿಗೆ) ಕೊಡಬೇಕೆಂದು ಹಿಂಸಿಸಿದಾಗ ರೋಣದ ಪಂಪಯ್ಯ ಎಂಬ ಕೌಂಡಿನ್ಯ ಗೋತ್ರದ ವೈದಿಕನು ಅಲ್ಲಿನ ಮಹಾಜನರ ಅಪ್ಪಣೆಯನ್ನು ಪಡೆದು 'ನಾನೊಂದಕ್ಷತೆಯನಪ್ಪಂದ–

---

380 SII. IX. i. 235, 1141 A.D.

381 EC. VII. Sk. 118, 1054 A.D.

382 EC. XI. Cd. 78, 1060 A.D.

383 EC. XI. Dg. 12, 1109 A.D.

384 BKI. I. ii. 190, 1106 A.D.

385 EC. XI. Cd. 78, 1060 A.D.

386 "ಸ್ವಸ್ತಿಶ್ರೀ ವಿಕ್ರಮಾದಿತ್ಯರಸಂ ವಡ (ಕರೆ) ನಾಡು ಮೂನೂಱುಮನಾಳುತಿಱ್ದು ಸುಗ್ಗಿಯುಳ್ಳಂದು ಪೊನ್ನಿಟ್ಟ ಧರ್ಮಕೆಡೆವಕ್ಕ...."—MAR. 1933. p. 265, C. 800 A.D. ಯುವರಾಜನೇ ತೆರಿಗೆಗಳನ್ನು ಸಂಗ್ರಹಿಸಲು ಬಂದಿದ್ದುದು ಗಮನಾರ್ಹವಾಗಿದೆ.

387 Jayaswal : Hindu Polity, p. 336.

388 SII. IX. i. 76, 991 A.D.

ಮೀಯೆಸೆಂದು' ನಿಶ್ಚಯಿಸಿ ಬೂತಾರ್ಯನ ವಿರುದ್ಧ ಹೋರಾಡಿ ಮಡಿಯುತ್ತಾನೆ.[389] ಹೀಗೆಯೇ ಇನ್ನೊಂದು ಶಾಸನದಲ್ಲಿದೆ.[390] ಅಧಿಕಾರಿಯೊಬ್ಬನು ತೆರಿಗೆಯನ್ನು ಕೊಡುವಂತೆ ಹಿಂಸಿಸಿದಾಗ ಅದನ್ನು ಪ್ರತಿಭಟಿಸಿ ವೀರನೊಬ್ಬನು ಹೋರಾಡಿ ಮಡಿದಂತೆ ಚಿತ್ರಿತವಾಗಿದೆ. ಎಂದರೆ, ಆಡಳಿತವು ತಮ್ಮ ಹಕ್ಕುಗಳನ್ನು ತುಳಿದು ಅನ್ಯಾಯವೆಸಗಿದಾಗ ಜನತೆಯು ಮೌನವಾಗಿ ಅದನ್ನು ಸಹಿಸಿಕೊಳ್ಳುತ್ತಿರಲಿಲ್ಲ, ಕೆಲವೊಮ್ಮೆ ಬಹಿರಂಗವಾಗಿ ಪ್ರತಿಭಟಿಸುತ್ತಿದ್ದಿತೆಂಬುದಕ್ಕೆ ಇವು ನಿದರ್ಶನಗಳು.

ಒಟ್ಟಿನಲ್ಲಿ ತೆರಿಗೆಗಳು ಜನತೆ ಹೊರಲಾರದಷ್ಟು ಭಾರವಾಗಿದ್ದುವೆ?[391] ಸ್ವಲ್ಪ ಮಟ್ಟಿಗೆ ಹೌದು ಎಂದೇ ಹೇಳಬೇಕು. 'ಕಿಱುಕುಳ'[392] ಎಂಬ ಪದದ ಇತಿಹಾಸವೂ ಅದನ್ನೇ ಪೋಷಿಸುತ್ತದೆ. ಚಿಕ್ಕ ಚಿಕ್ಕ ತೆರಿಗೆಗಳನ್ನು ಸೂಚಿಸುತ್ತಿದ್ದ 'ಕಿಱುಕುಳ' ಪದಕ್ಕೆ ತೊಂದರೆ, ಹಿಂಸೆ ಎಂಬ ಅರ್ಥವು ಕ್ರಮೇಣ ಬಂದದ್ದರಲ್ಲಿ ಆಶ್ಚರ್ಯವಿಲ್ಲ. ತೆರಿಗೆಗಳ ಭಾರವನ್ನು ಹೊರಲಾರದೆ, ಕಾಡಿನಲ್ಲಾದರೂ ಸುಖವಾಗಿರಬಹುದು, ಊರು ಬೇಡ ಎಂದು ಜನರು ಊರುಗಳನ್ನು ತ್ಯಜಿಸಿದ್ದುಂಟು.[393] ಹೊಲಮನೆಗಳ ಮೇಲಿನ ತೆರಿಗೆಗಳನ್ನು ತೆಗೆದು ಹಾಕಿಸಿಕೊಳ್ಳಲು ಜನರು ಉತ್ಸುಕರಾಗಿದ್ದರು. ಎಷ್ಟೋ ಶಾಸನಗಳ ಕೊನೆಯಲ್ಲಿ 'ಈ ಹೊಲದ ತೆರಿಗೆಗಳನ್ನು ತೆಗೆದುಹಾಕಲಾಗಿದೆ. ಇಂತಿಂತಹ ತೆರಿಗೆಗಳನ್ನು ಕೇಳಿದವರು ಚಂಡಾಲರು' ಎಂದು ಬಹಳ ಕಳವಳಿಯಿಂದ ಹೇಳಲಾಗಿದೆ.[394] ಒಂದು ಹೊಲದ ಮೇಲೆ ಹಾಕಬಹುದಾಗಿದ್ದ ತೆರಿಗೆಗಳಿವು—ಸಿದ್ಧಾಯ, ಅರಸರ ಸೇಸೆ, ಕಾಣಿಕೆ, ದಾಯ, ಧರ್ಮ ಇತ್ಯಾದಿಗಳು. ಇವುಗಳಲ್ಲದೆ ಒಬ್ಬ ರೈತನು ಮನೆಗೆ, ತಿಪ್ಪೆಗೆ, ಬಣವೆಗೆ, ಹಸುಗಳಿಗೆ, ಎತ್ತುಗಳಿಗೆ, ತೋಟಕ್ಕೆ, ತೋಟದ ಬಾವಿಗೆ ತೆರಿಗೆಗಳನ್ನು ಕೊಡಬೇಕಾಗಿದ್ದಿತು. ತಾನು ಬೆಳೆದದ್ದನ್ನು ಮಾರಲು ಸಂತೆಗೆ ಕೊಂಡೊಯ್ದರೆ ಅಲ್ಲಿಯೂ ಸುಂಕವನ್ನು ತೆರಬೇಕಾಗಿದ್ದಿತು. ಎಂದರೆ, ತೆರಿಗೆಗಳು ಜನರಿಗೆ ಹೊರಲಾರದ ಭಾರವಾಗಿದ್ದುವು. ಇವು ನೇರವಾದ ತೆರಿಗೆಗಳು (direct taxes) ಎಂಬುದನ್ನೂ ಮರೆಯಬಾರದು. ಅಗ್ರಹಾರಗಳನ್ನು 'ಅಭಟಪ್ರವೇಸ' (=ಅಭಟ ಪ್ರವೇಶ) ವಾಗಿ ಮತ್ತು 'ಅಕರ' (=ತೆರಿಗೆಗಳಿಂದ ಮುಕ್ತ) ವಾಗಿ ರಾಜನು ಪರಿವರ್ತಿಸುತ್ತಿದ್ದನು. ಎಂದರೆ ಜನರು ಹೆದರುತ್ತಿದ್ದುದು ಎರಡಕ್ಕೆ. ಒಂದನೆಯದಾಗಿ, ಸೈನಿಕರು ಮತ್ತು ಬಿಟ್ಟಿ ಕೆಲಸಗಳಿಗೆ ; ಎರಡನೆಯದಾಗಿ, ತೆರಿಗೆಗಳಿಗೆ.

## ಖರ್ಚು

ಕಾಳಿದಾಸನು ರಘುವಂಶದ ಮೊದಲನೆಯ ಸರ್ಗದಲ್ಲಿ ದಿಲೀಪ ಮಹಾರಾಜನನ್ನು ವರ್ಣಿಸುತ್ತ—

ಪ್ರಜಾನಾಮೇವ ಭೂತ್ಯರ್ಥಂ ಸ ತಾಭ್ಯೋ ಬಲಿಮಗ್ರಹೀತ್
ಸಹಸ್ರಗುಣಮುತ್ಸ್ರಷ್ಟುಮಾದತ್ತೇ ಹಿ ರಸಂ ರವಿಃ ॥

[389] BKI. I. i. 36, 942 A.D.

[390] EC. VIII. Sb. 73, C. 1139 A.D.

[391] ತೆರಿಗೆಗಳನ್ನು ಹೆಚ್ಚಾಗಿ ಹಾಕಿದರೆ ಜನರಿಗೆ ಹೊರಲಾರದ ಹೊರೆಯಾಗಿ ಪರಿಣಮಿಸಬಹುದೆಂದು ಮಹಾಭಾರತವು ಸ್ಪಷ್ಟೋಕ್ತಿಗಳಲ್ಲಿ ಎಚ್ಚರಿಸುತ್ತದೆ—"ದೇಶವು ಹಸುವಿದ್ದಂತೆ, ಪ್ರಜೆಗಳು ಕರುಗಳಿದ್ದಂತೆ. ಎಲ್ಲಾ ಹಾಲನ್ನೂ ಸ್ವಂತಕ್ಕೆ ಕರೆದುಕೊಂಡರೆ ಕರುಗಳು ಬಡವಾಗಿ ಮುಂದೆ ಭಾರವನ್ನು ಹೊರಲು ಅಸಮರ್ಥವಾಗುತ್ತವೆ...ಬಳ್ಳಿಗೆ ನೋವಾಗದಂತೆ ದುಂಬಿಯು ಜೇನನ್ನು ಸ್ವೀಕರಿಸುವ ರೀತಿಯಲ್ಲಿ ಜನರಿಂದ ತೆರಿಗೆಗಳನ್ನು ಎತ್ತಬೇಕು. ಸರಿಯಾದ ದೇಶ, ಕಾಲ, ರೀತಿಗಳಲ್ಲಿ ತೆರಿಗೆಗಳನ್ನು ಪಡೆಯಬೇಕು. ಹಾಲನ್ನು ಕರೆಯಲಿ, ಆದರೆ ಕೆಚ್ಚಲಿಗೆ ನೋವಾಗದಿರಲಿ." (Quoted by Jayaswal : Hindu Polity, p 336).

[392] 'ಕಿಱು' ಎಂದರೆ ಚಿಕ್ಕದು. 'ಕಿಱುಕುಳ' ಎಂದರೆ 'ಚಿಕ್ಕ ತೆರಿಗೆ' ಎಂದರ್ಥ.

[393] Economic Conditions in South India, p. 697.

[394] EI. XXVII. p. 71, 1114 A.D.

ಎಂದು ಹೇಳುತ್ತಾನೆ.[395] ಸೂರ್ಯನು ನೀರನ್ನು ಆವಿಯ ರೂಪದಲ್ಲಿ ಪಡೆದು, ಅದನ್ನೇ ಹೆಚ್ಚು ಪ್ರಮಾಣದಲ್ಲಿ ಭೂಮಿಗೆ ಹಿಂದಿರುಗಿಸುತ್ತಾನೆ. ಹಾಗೆಯೇ ದಿಲೀಪನು ಪ್ರಜೆಗಳಿಂದ ತೆರಿಗೆಗಳನ್ನು ತೆಗೆದುಕೊಂಡರೂ, ಅವುಗಳನ್ನು ಅವರಿಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ, ನಾನಾ ರೂಪಗಳಲ್ಲಿ ಹಿಂದಿರುಗಿಸುತ್ತಿದ್ದನು. ಇದೇ ತೆರಿಗೆಗಳನ್ನು ಹಾಕುವ ಉದ್ದೇಶ ಮತ್ತು ಆದರ್ಶ.

ಈ ಆದರ್ಶವನ್ನು ಪ್ರಾಚೀನ ಕರ್ನಾಟಕದ ರಾಜರು ಎಷ್ಟರಮಟ್ಟಿಗೆ ಪ್ರತಿಪಾಲಿಸುತ್ತಿದ್ದರು ಎಂಬುದನ್ನು ಕುರಿತು ಶಾಸನಗಳಿಂದ ಹೆಚ್ಚಿನ ಸಹಾಯವು ಒದಗುವಂತಿಲ್ಲ. ರಾಜ್ಯಾದಾಯವನ್ನು ಕುರಿತು ಎಷ್ಟು ವಿಪುಲವಾದ ಸಾಮಗ್ರಿಯು ದೊರಕುತ್ತದೆಯೋ ಅಷ್ಟು ಆ ಆದಾಯದ ವಿತರಣೆಯ ರೀತಿಯನ್ನು ಕುರಿತ ಸಾಮಗ್ರಿಯು ಲಭಿಸುವುದಿಲ್ಲ. ಇಲ್ಲಿ ಬಹುಮಟ್ಟಿಗೆ ನಮ್ಮ ಊಹೆಯನ್ನವಲಂಬಿಸಬೇಕಾಗಿದೆ. ರಾಜ್ಯಾದಾಯದಲ್ಲಿ ಬಹುಭಾಗವು ರಾಜ್ಯದ ರಕ್ಷಣೆಗಾಗಿ ವಿನಿಯೋಗವಾಗುತ್ತಿದ್ದಿತೆಂದು ಕಾಣುತ್ತದೆ. ಕೋಟೆ, ಸೈನ್ಯ, ಆಯುಧಗಳು—ಇವುಗಳಿಗಾಗಿ ಆದಾಯದ ಬಹುಭಾಗವು ಹೋಗುತ್ತಿದ್ದಿತು. ಅಧಿಕಾರಿಗಳಿಗೆ ವೇತನ ಕೊಡುತ್ತಿದ್ದ ರೀತಿಯನ್ನು ಹಿಂದೆಯೇ ನೋಡಿದ್ದೇವೆ. ಇಷ್ಟಲ್ಲದೆ ರಾಜನ ವೈಯಕ್ತಿಕ ಜೀವನಕ್ಕೂ ಸಾಕಷ್ಟು ಹಣವು ವ್ಯಯವಾಗುತ್ತಿದ್ದಿರಬೇಕು. ಸಾರ್ವಜನಿಕವಾದ ಕೆಲವು ಕೆಲಸಕಾರ್ಯಗಳಿಗೂ ಆದಾಯದ ಒಂದು ಸಣ್ಣ ಭಾಗವು ವಿನಿಯೋಗವಾಗುತ್ತಿದ್ದಿತು. ರಾಜನು ನದಿಗಳಿಗೆ ಅಡ್ಡಕಟ್ಟೆಗಳನ್ನು ಹಾಕಿಸುವುದರ ಮೂಲಕ, ಕೆರೆಗಳನ್ನು ಕಟ್ಟಿಸುವುದರ ಮೂಲಕ, ದೇವಸ್ಥಾನಗಳನ್ನು ಕಟ್ಟಿಸಿ ದತ್ತಿಗಳನ್ನು ಬಿಡುವುದರ ಮೂಲಕ, ರಾಜ್ಯಾದಾಯದ ಒಂದು ಭಾಗವು ಸಾರ್ವಜನಿಕರನ್ನು ತಲುಪುತ್ತಿದ್ದಿತು. ರಾಜನು ಸಾರ್ವಜನಿಕ ಹಣದಿಂದ ರಸ್ತೆಗಳನ್ನು ಮಾಡಿಸುತ್ತಿದ್ದನೆಂಬುದಕ್ಕೆ ಆಧಾರಗಳಿಲ್ಲವಾದರೂ, ಕೆಲವು ದೊಡ್ಡ ರಸ್ತೆಗಳನ್ನಾದರೂ ಆಗಾಗ್ಗೆ ಸರಿಪಡಿಸುತ್ತಿದ್ದನೆಂದು ಊಹಿಸಬಹುದು. ಊರುಗಳನ್ನು ಅಗ್ರಹಾರಗಳಾಗಿ ಪರಿವರ್ತಿಸುವುದರ ಮೂಲಕ ವಿದ್ಯಾಭ್ಯಾಸಕ್ಕೆ ಪರೋಕ್ಷವಾದ ಸಹಾಯವನ್ನು ಮಾಡುತ್ತಿದ್ದನು. ಅನೇಕ ತೆರಿಗೆಗಳನ್ನು ಊರಿನ ದೇವಸ್ಥಾನಕ್ಕೋ, ಸತ್ರಕ್ಕೋ, ಕೆರೆಗೋ ಬಿಟ್ಟುಕೊಡುತ್ತಿದ್ದುದರಿಂದ ಊರಿನ ಆದಾಯದ ಒಂದು ಭಾಗವು ಊರಿಗೆ ನೇರವಾಗಿ ತಲುಪುತ್ತಿದ್ದಿತು. ರಾಜನು ವೈದ್ಯಕೀಯ ಸಹಾಯವನ್ನು ಜನರಿಗೆ ಎಷ್ಟುಮಟ್ಟಿಗೆ ಒದಗಿಸುತ್ತಿದ್ದನೆಂಬ ವಿಷಯದಲ್ಲಿ ಶಾಸನಗಳು ಮೌನವಾಗಿವೆ. ಬಹುಶಃ ಜನರು ತಮ್ಮ ಊರಿನಲ್ಲಿದ್ದ ಸ್ವತಂತ್ರ ವೃತ್ತಿಯ ವೈದ್ಯರನ್ನು ಆಶ್ರಯಿಸುತ್ತಿದ್ದರು. ಇವರು ವೈದ್ಯವೃತ್ತಿಯನ್ನು ಮುಖ್ಯವೃತ್ತಿಯನ್ನಾಗಿ ಮಾಡಿಕೊಂಡಿದ್ದಿರಬಹುದು. ಅಥವಾ ಅದು ಅವರಿಗೆ ಉಪವೃತ್ತಿಯಾಗಿದ್ದಿರಬಹುದು. ಆದರೆ ರಾಜನಿಂದ ಅವರಿಗೆ ಎಷ್ಟರಮಟ್ಟಿಗೆ ಪ್ರತ್ಯಕ್ಷ ಪ್ರೋತ್ಸಾಹವು ದೊರೆಯುತ್ತಿದ್ದಿತೋ ತಿಳಿಯದು. ಪ್ರವಾಹಗಳು ಉಕ್ಕಿಬಂದು ಬೆಳೆಗಳನ್ನು ನಾಶಪಡಿಸಿದಾಗ, ಕ್ಷಾಮವು ಬಂದು ಜನತೆಯು ಕಂಗಾಲಾದಾಗ ಆಡಳಿತವರ್ಗವು ಯಾವ ರೀತಿಯ ಸಹಾಯವನ್ನು ಮಾಡುತ್ತಿದ್ದಿತೆಂಬುದೂ ಶಾಸನಗಳಿಂದ ತಿಳಿದುಬರುವುದಿಲ್ಲ.

ರಾಜನು ಕವಿಗಳಿಗೆ ಮತ್ತು ವಿದ್ವಾಂಸರಿಗೆ ಆಶ್ರಯವನ್ನು ನೀಡಿ ಹಲವರನ್ನು ತನ್ನ ಆಸ್ಥಾನದಲ್ಲಿಟ್ಟುಕೊಳ್ಳುತ್ತಿದ್ದನು. ಪ್ರಾಚೀನ ಕನ್ನಡ ಸಾಹಿತ್ಯವಂತೂ ರಾಜಾಶ್ರಯಕ್ಕೆ ಬಹುವಾಗಿ ಋಣಿಯಾಗಿದೆ. ಕವಿಗಳಿಗೆ ಆಶ್ರಯವನ್ನು ಕೊಟ್ಟ ರಾಜರ ಉದ್ದೇಶ ಕೆಲವು ಕಡೆ ಸ್ವಾರ್ಥದಿಂದಲೂ ಕೂಡಿರಬಹುದು. ಅದೇನೇ ಇರಲಿ, ರಾಜರು ಹೀಗೆ ಆಶ್ರಯದಾತರಾಗಿರದೆ ಇದ್ದಿದ್ದರೆ ಕನ್ನಡ ಸಾಹಿತ್ಯ ಇಷ್ಟು ಪುಷ್ಟವಾಗಿರುತ್ತಿರಲಿಲ್ಲವೆಂದು ನಿಸ್ಸಂಕೋಚವಾಗಿ ಹೇಳಬಹುದು. ಆದಿಕವಿ ಪಂಪನು ತನ್ನ ಪೋಷಕ ಅರಿಕೇಸರಿಯನ್ನೂ ಅರ್ಜುನನನ್ನೂ ಅಭಿನ್ನರೆಂದು ಕಲ್ಪಿಸಿ ಪಂಪ ಭಾರತವನ್ನು ರಚಿಸಿದ್ದಕ್ಕೆ ಧರ್ಮವೊಲಲ್ ಎಂಬ ಅಗ್ರಹಾರವನ್ನೇ ದತ್ತಿಯಾಗಿ ಬಿಟ್ಟುಕೊಡುತ್ತಾನೆ ಅರಿಕೇಸರಿ. ಪೊನ್ನ, ರನ್ನ, ಜನ್ನ ಎಂಬ ಕವಿಗಳಿಗೆ ಬೇಕಾದಷ್ಟು ರಾಜಾಶ್ರಯವೂ ಕವಿ

---

395 ರಘುವಂಶ, 1. 18.

ಚಕ್ರವರ್ತಿ ಎಂಬ ಬಿರುದೂ ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ ಚಕ್ರವರ್ತಿಗಳಿಂದ ಲಭಿಸಿದುವು. ಹೀಗೆ ಕಾವ್ಯ ಕಲೆಗಳ ಅಭಿವೃದ್ಧಿಗೆ ರಾಜರು ಉದಾರವಾಗಿ ಹಣವನ್ನು ವ್ಯಯಿಸಿರುವುದು ಕಂಡುಬರುತ್ತದೆ.

## ಉಪಸಂಹಾರ

ಪ್ರಾಚೀನ ಕರ್ನಾಟಕವು 'ಸುಖೀರಾಜ್ಯ'ವಾಗಿದ್ದಿತೆ? ಎಂದರೆ, ಆ ಜನರು ಸುಖವಾಗಿದ್ದರೆ? ಆರ್ಥಿಕವ್ಯವಸ್ಥೆಯು ಅವರ ಸುಖವನ್ನು ಹೆಚ್ಚಿಸಲು ಸಾಧಕವಾಗಿದ್ದಿತೆ?—ಈ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ. ಇಂತಹ ಪ್ರಶ್ನೆಯನ್ನು ಕುರಿತು ಚರ್ಚಿಸದಿರುವುದೇ ಒಳ್ಳೆಯದು. ಏಕೆಂದರೆ ಇಲ್ಲಿ ಹಲವಾರು ತೊಂದರೆಗಳು ಹುಟ್ಟಿಕೊಳ್ಳುತ್ತವೆ. ನಮ್ಮ ಅಧ್ಯಯನದ ಅವಧಿ ಏಳು ಶತಮಾನಗಳಷ್ಟು ದೀರ್ಘವಾದುದು. ಆ ಅವಧಿಯಲ್ಲಿ ಎಷ್ಟೋ ರಾಜಮನೆತನಗಳು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಆಡಳಿತವನ್ನು ನಡೆಸಿದುವು. ಒಂದು ಕಾಲದ ಒಂದು ಭಾಗದ ಜನರು ಯಾವನೋ ರಾಜನ ಆಳಿಕೆಯಲ್ಲಿ ತುಂಬಾ ಸುಖವಾಗಿದ್ದಿರಬಹುದು. ಅದೇ ಸಮಯದಲ್ಲಿ ಇನ್ನೊಂದೆಡೆ ಜನರು ಬಹು ಕಷ್ಟಗಳನ್ನನುಭವಿಸುತ್ತಿದ್ದಿರಬಹುದು. ಅಲ್ಲದೆ ಶಾಸನಗಳು ಜನಜೀವನದ ಒಂದು ಮುಖವನ್ನು ಮಾತ್ರ ಚಿತ್ರಿಸುತ್ತವೆ. ಶ್ರೀಮಂತರ ಶ್ರೀಮಂತಿಕೆಯನ್ನು, ದಾನಿಗಳ ಔದಾರ್ಯವನ್ನು ಮುಕ್ತಕಂಠದಿಂದ ಕೊಂಡಾಡುವಂತೆ ದರಿದ್ರರ ಸಮಸ್ಯೆಗಳನ್ನೂ, ಅವರ ಕಷ್ಟಗಳನ್ನೂ ಚಿತ್ರಿಸುವುದಿಲ್ಲ. ಆದರೂ ಅಪ್ಪಿತಪ್ಪಿ, ಅಲ್ಲಿ ಇಲ್ಲಿ ಆಡಳಿತದ ಅವ್ಯವಸ್ಥೆಯಿಂದ, ಕ್ರೂರಿಗಳಾದ ಅಧಿಕಾರಿಗಳಿಂದ ಜನರು ಅನುಭವಿಸುತ್ತಿದ್ದ ಕಷ್ಟಗಳ ಸುಳುಹು ಒಂದೆರಡು ಶಾಸನಗಳಲ್ಲಿ ಕಾಣಿಸಿಕೊಂಡಿರುವುದುಂಟು. ರಾಜರೇನೋ ಬಹುಮಟ್ಟಿಗೆ ಪ್ರಜಾವತ್ಸಲರಾಗಿದ್ದರು. (ಆದರೂ ಹೆಸರಿಗೆ ಮಾತ್ರ ರಾಜ ಎನ್ನಿಸಿಕೊಳ್ಳುತ್ತಿದ್ದ ರಾಜರೂ ಇದ್ದರು.) ಅವರು ಪ್ರಜೆಗಳ ಯೋಗಕ್ಷೇಮವನ್ನು ವಿಚಾರಿಸಲು ದೇಶದಲ್ಲಿ ಸಂಚರಿಸುತ್ತಿದ್ದುದಕ್ಕೆ ಸೂಚನೆಗಳು ಇವೆ. ಆದರೂ ಅವರು ವೈಯಕ್ತಿಕವಾಗಿ ಪ್ರಜೆಗಳ ಕುಂದು ಕೊರತೆಗಳನ್ನು ಎಷ್ಟರಮಟ್ಟಿಗೆ ನಿವಾರಿಸಲು ಸಾಧ್ಯ?

ಅಲ್ಲದೆ, ಆಧುನಿಕ ತತ್ವಗಳನ್ನು ಪ್ರಾಚೀನಕಾಲಕ್ಕೆ ಅನ್ವಯಿಸುವುದಾಗಲಿ, ಈಗಿನ ವ್ಯವಸ್ಥೆಯನ್ನು ಆ ಕಾಲದಲ್ಲಿ ಕಾಣಲು ಪ್ರಯತ್ನಿಸುವುದಾಗಲಿ ಶುದ್ಧಾಂಗವಾಗಿ ಅನುಚಿತವಾದುದು. ಉದಾಹರಣೆಗೆ—ಶ್ರೀಮಂತರು ಹಣವನ್ನು ಗಳಿಸಿ ಶ್ರೀಮಂತರಾಗುತ್ತಾ ಹೋಗುವುದನ್ನು ನಿಲ್ಲಿಸಲು ಹಿಂದಿನವರು ಯಾವ ಕ್ರಮವನ್ನು ಕೈಗೊಂಡಿದ್ದರು ಎಂಬ ಪ್ರಶ್ನೆ ಹಾಕಿದರೆ ಅದಕ್ಕೆ ಉತ್ತರ ಹೇಳುವುದು ಕಷ್ಟವಾಗುತ್ತದೆ. ಬಹುಶಃ ಅಂತಹ ವಿಷಯವೇ ಪ್ರಾಚೀನರಿಗೆ ಹೊಳೆದಿರಲಾರದು.

ಅಲ್ಲದೆ 'ಸುಖ'ದ ಕಲ್ಪನೆ ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ಭಿನ್ನವಾಗುತ್ತದೆ. ಯಾವುದೋ ಉದ್ದೇಶಕ್ಕಾಗಿ ದೇಹತ್ಯಾಗವನ್ನು ಮಾಡಿದ ವೀರನಿಗೆ ಅತ್ಯುನ್ನತ ಗೌರವವು ಸಲ್ಲುತ್ತಿದ್ದ ಕಾಲ ಅದು. ಒಡೆಯನಿಗಾಗಿ ಹೋರಾಡುವುದರಲ್ಲಿಯೇ ನಿಜವಾದ ಸುಖವನ್ನು ಅವರು ಕಂಡಿದ್ದರು. ಹೀಗಿರುವಾಗ ಆಧುನಿಕ ಅರ್ಥಶಾಸ್ತ್ರದ 'ಸುಖ'ದ ಕಲ್ಪನೆಯ ಸಹಾಯದಿಂದ ಪ್ರಾಚೀನ ವ್ಯವಸ್ಥೆಯನ್ನಳೆಯುವುದು ತಪ್ಪಾಗುತ್ತದೆ. ಆದ್ದರಿಂದ ಪ್ರಾಚೀನ ಕರ್ನಾಟಕವು ಸುಖೀರಾಜ್ಯವಾಗಿದ್ದಿತೆ ಎಂಬ ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿಯುತ್ತದೆ.

# XIV

# ಸಾಮಾಜಿಕ ವ್ಯವಸ್ಥೆ

ಈ ಅಧ್ಯಾಯವನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದೇವೆ. (i) ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನ, (ii) ಜಾತಿಯ ಪದ್ಧತಿ, (iii) ಕೆಲವು ಸಾರ್ವಜನಿಕ ಕಾರ್ಯಗಳು. ಮೊದಲನೆಯ ಭಾಗದಲ್ಲಿ ಸ್ತ್ರೀಯರನ್ನು ಪ್ರಾಚೀನ ಕರ್ನಾಟಕವು ಕಂಡಿರುವ ರೀತಿ, ಅವರನ್ನು ನಡೆಯಿಸಿಕೊಂಡ ಬಗೆ, ಕರ್ನಾಟಕ ಸಂಸ್ಕೃತಿಗೆ ಅವರಿಂದಾಗಿರುವ ಉಪಕಾರ ಇತ್ಯಾದಿಗಳನ್ನು ಸ್ವಲ್ಪ ವಿಸ್ತಾರವಾಗಿ ಚರ್ಚಿಸಲಾಗಿದೆ. ಎರಡನೆಯ ಭಾಗದಲ್ಲಿ ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ಜಾತಿಗಳನ್ನು ಹೆಸರಿಸಿ ಸಾಧ್ಯವಾದ ಕಡೆ ಆ ಜಾತಿಗಳ ಸ್ವರೂಪವನ್ನು ಶಾಸನಗಳ ಆಧಾರದಿಂದಲೇ ಸ್ಪಷ್ಟಪಡಿಸಿ, ಜಾತಿಗಳ ಸಾಮಾನ್ಯ ಸ್ವರೂಪವನ್ನು ಸಂಕ್ಷಿಪ್ತವಾಗಿ ವಿವೇಚನೆ ಮಾಡಲಾಗಿದೆ. ಮೂರನೆಯ ಭಾಗದಲ್ಲಿ ಸಾರ್ವಜನಿಕವಾದ ಅಥವಾ ಸಾಮಾಜಿಕವಾದ ಕೆಲವು ಚಟುವಟಿಕೆಗಳನ್ನು ಕುರಿತು ಪ್ರಸ್ತಾಪಿಸಿದ್ದೇವೆ. ಒಟ್ಟು ಸಮಾಜಕ್ಕೆ ಅನ್ವಯವಾಗುವಂತಹ, ಎಲ್ಲರಿಗೂ ಅನುಕೂಲವಾಗುವಂತಹ ಕೆಲವು ಕಾರ್ಯಗಳನ್ನು ಅಲ್ಲಿ ಪ್ರಸ್ತಾಪಿಸುವುದರ ಉದ್ದೇಶವಿಷ್ಟೆ–ಪ್ರಾಚೀನ ಕರ್ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯು ಎಚ್ಚತ್ತಿದ್ದಿತೆಂಬುದನ್ನೂ, ವ್ಯಕ್ತಿಯು ತನ್ನಷ್ಟಕ್ಕೆ ತಾನು ಬಾಳದೆ ಇತರರಿಗಾಗಿಯೂ ಬಾಳಬೇಕೆಂಬ ಅರಿವು ಅವರಿಗೆ ಸಂಪೂರ್ಣವಾಗಿ ಇದ್ದಿತೆಂಬುದನ್ನೂ ತೋರಿಸುವುದೇ ಆಗಿದೆ.

ಈ ಒಟ್ಟು ಅಧ್ಯಾಯದಲ್ಲಿ ಬರಬೇಕಾದ ಅನೇಕ ವಿಷಯಗಳ ವಿಸ್ತಾರವಾದ ಚರ್ಚೆ ಹಿಂದಿನ ಬೇರೆ ಬೇರೆ ಅಧ್ಯಾಯಗಳಲ್ಲಿ ಬಂದಿದೆ. ಅಂತಹ ಕಡೆಗಳಲ್ಲಿ ಆಯಾಯಾ ಅಧ್ಯಾಯಗಳನ್ನು ಸೂಚಿಸಲಾಗಿದೆ. ಕೆಲವು ಕಡೆ ಬೇರೆ ಅಧ್ಯಾಯಗಳಲ್ಲಿ ಬಂದಿರುವ ವಿಷಯಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

## ಸಮಾಜದಲ್ಲಿ ಸ್ತ್ರೀಯರಿಗಿದ್ದ ಸ್ಥಾನ

### ಬಾಲ್ಯ

ವೈದಿಕಯುಗದಲ್ಲಿ ಸ್ತ್ರೀಯರಿಗೆ ಅತ್ಯಂತ ಗೌರವದ ಸ್ಥಾನವಿದ್ದಂತೆ ತಿಳಿದುಬರುತ್ತದೆ. ಪುರುಷರಂತೆಯೇ ಅವರೂ ವಿದ್ಯಾಭ್ಯಾಸಕ್ಕೆ ಅರ್ಹರಾಗಿದ್ದರು. ಋಗ್ವೇದದ ಮಂತ್ರದ್ರಷ್ಟಾರರ ಪಟ್ಟಿಯಲ್ಲಿ ಹಲವು ಮಂದಿ ಸ್ತ್ರೀ ದ್ರಷ್ಟಾರರ ಹೆಸರುಗಳೂ ಕಂಡುಬರುತ್ತವೆ. (ದ್ರಷ್ಟಾರ=ಮಂತ್ರಗಳನ್ನು ಕಂಡವನು ಅಥವಾ ರಚಿಸಿದವನು). ಉದಾಹರಣೆಗೆ ಲೋಪಾಮುದ್ರಾ, ವಿಶ್ವವಾರಾ, ಸಿಕತಾನಿವಾವರಿ ಮತ್ತು ಘೋಷಾ ಎಂಬುವರು ಕ್ರಮವಾಗಿ ಋಗ್ವೇದದ I. 179, V. 28, VIII. 91, IX. 81.10-20 ಮತ್ತು X. 39-40 —ಈ ಮಂತ್ರಗಳನ್ನು ರಚಿಸಿರುವರೆಂದು ಪ್ರತೀತಿಯಿದೆ. ಋಗ್ವೇದದಿಂದ ಈಚಿನ ಸ್ತ್ರೀಯರ ಇತಿಹಾಸವೆಂದರೆ ಅವರಿಗೆ ಇದ್ದ ಗೌರವ ಮತ್ತು ಸ್ವಾತಂತ್ರ್ಯಗಳು ಕ್ಷಯಿಸಿಹೋದ ಇತಿಹಾಸವೇ ಆಗಿದೆ. ಏಕೆ ಕ್ಷಯಿಸಿತು, ಹೇಗೆ ಕ್ಷಯಿಸಿತು ಎಂಬುದರ ನಿರೂಪಣೆ ಇಲ್ಲಿ ಅನವಶ್ಯಕ. ಕ್ರಿಸ್ತಶಕದ ಆರಂಭದ ಹೊತ್ತಿಗೆ ಸ್ತ್ರೀ ಎನ್ನುವವಳು ವೇದಾಧ್ಯಯನಕ್ಕೆ ಮತ್ತು ಉಪನಯನಕ್ಕೆ ಅನರ್ಹಳಾಗಿ,[1] ಸಂಸಾರದಲ್ಲಿ ಒಂದು ಅಲಂಕಾರವಾಗಿ, ಬಹುಮಟ್ಟಿಗೆ ಸ್ವಾತಂತ್ರ್ಯವನ್ನೂ ವ್ಯಕ್ತಿತ್ವವನ್ನೂ ಕಳೆದುಕೊಂಡ ವ್ಯಕ್ತಿಯಾಗಿ ಪರಿಣಮಿಸಿದ್ದಳು.

---

[1] ಈ ದೃಷ್ಟಿಯಲ್ಲಿ ಅವಳು ಶೂದ್ರನಿಗೆ ಸಮಾನ.

ಪ್ರಾಚೀನ ಕರ್ನಾಟಕದ ಆದರ್ಶ ಸಂಸಾರದಲ್ಲಿ ಒಳ್ಳೆಯ ಹೆಂಡತಿಗೂ ಒಳ್ಳೆಯ ಸೊಸೆಗೂ ಸ್ಥಾನ ವಿದ್ದರೂ,[2] ಪ್ರಾಚೀನ ಭಾರತದಲ್ಲಿನಂತೆಯೇ ಕರ್ನಾಟಕದಲ್ಲಿಯೂ ಮಗಳು ಎನ್ನುವವಳು ಬಯಸಿ ಪಡೆಯಬೇಕಾದ ಮಗುವಾಗಿರಲಿಲ್ಲ (ಈ ಪರಿಸ್ಥಿತಿ ಆಧುನಿಕ ಯುಗದಲ್ಲಿ ಕೂಡ ಅಷ್ಟೇನೂ ಬದಲಾಗಿಲ್ಲ). ಇದಕ್ಕೆ ಸಾಮಾಜಿಕವಾದ ಹಲವಾರು ಕಾರಣಗಳಿರಬಹುದು. ಹೆಣ್ಣು ಹೇಗಿದ್ದರೂ 'ಪೆರಸೊಡವೆ'[3]ಯಲ್ಲವೆ? ಅವಳು ಎಂದಿದ್ದರೂ ಮನೆಯನ್ನು ಬಿಟ್ಟುಹೋಗುವವಳು.[4] ಮನೆಯಲ್ಲಿದ್ದು ತಮ್ಮ ದುಡಿಮೆಯಿಂದ ತಾಯಿ ತಂದೆಗಳನ್ನು ಪೋಷಿಸುವವರು ಗಂಡುಮಕ್ಕಳು. ಹೆಣ್ಣು ಮನೆಯಲ್ಲಿರುವವರೆಗೆ ರಕ್ಷಣೀಯಳು (ಹೆಣ್ಣು ಮಕ್ಕಳು ಎಲ್ಲ ಕಷ್ಟಗಳಿಗೂ ಮೂಲವೆಂದೂ, ಗಂಡು ಮಗನೊಬ್ಬನೇ ಸಂಸಾರದ ಆಶಾಜ್ಯೋತಿಯೆಂದೂ ಐತರೇಯ ಬ್ರಾಹ್ಮಣವು -VII. 18- ಹೇಳುತ್ತದೆ). ಮದುವೆಯಾದ ಮೇಲೆ ಅವಳು ವಿಧವೆಯಾಗುವ, ಸಹ ಗಮನವನ್ನು ಮಾಡುವ ಭಯವು ತಾಯ್ತಂದೆಗಳಿಗೆ ಇದ್ದೇ ಇರುತ್ತದೆ. ತಮ್ಮ ಸಾವಿನ ನಂತರ ತಮಗೂ ತಮ್ಮ ಪಿತೃಗಳಿಗೂ ಪಿಂಡವನ್ನು ಹಾಕುವ ಅಧಿಕಾರ ಪುತ್ರನಿಗೆ ಮಾತ್ರ.[5] ಅಲ್ಲದೆ ತಂದೆ ಮಾಡಿದ ಧರ್ಮವನ್ನು ಕಾಪಾಡಿಕೊಂಡು ಬರುವವನು ಗಂಡುಮಗನೇ.[6] ಹೀಗಾಗಿ ಅನೇಕ ಶಾಸನಗಳು ಗಂಡುಮಕ್ಕಳಿಗಾಗಿ ಹಂಬಲಿಸಿ ದೇವರಿಗೆ ಹರಕೆ ಹೊತ್ತ ವಿಷಯವನ್ನು ಮಾತ್ರ ಹೇಳುತ್ತವೆಯೇ ಹೊರತು,[7] ಹೆಣ್ಣುಮಕ್ಕಳಿಗಾಗಿ ಹಂಬಲಿಸಿದ ವಿಷಯವು ಯಾವ ಶಾಸನದಲ್ಲಿಯೂ ಬಂದಿಲ್ಲ. ಸುಪುತ್ರನನ್ನು 'ಕುಲದೀಪಕ' ಎಂದು ಶಾಸನ

---

[2] ಸಂಬುವೆ ದೆಯ್ವವಬ್ಜಜ ಕುಳಂ ಕುಳಮುತ್ತಮೆಯಾದ ರೇವಕ ।
ಬ್ಬಾಂಬಿಕೆ ಪತ್ನಿ ವಾಮನನುಜಂ ಕುಳದೀಪಕನಾದ ವಿಶ್ವ ವಿ ।
ದ್ಯಾಂಬುಧಿ ಚಂದ್ರನಗ್ರತನಯಂ ಸೊಸೆ ಜಕ್ಕಣಬ್ಬೆಯೆಂದಡಾ ।
ರಂ ಬಗೆಗೊಳ್ಳದಗ್ಗಳಿಕೆವೆತ್ತ ಕೃತಾರ್ಥತೆ ಮಾದಿರಾಜನಾ ॥

[BKI. I. ii. 147, 1099 A.D.]

[3] ಅಭಿಜ್ಞಾನ ಶಾಕುಂತಲ, 42.1–"ಅರ್ಥೋ ಹಿ ಕನ್ಯಾ ಪರಕೀಯ ಏವ."

[4] ಕರ್ನಾಟಕದ ಪಶ್ಚಿಮ ತೀರದಲ್ಲಿ ಕೆಲವು ಜಾತಿಗಳಲ್ಲಾದರೂ ಅಳಿಯಸಂತಾನ ಪದ್ಧತಿ ಇತ್ತೆಂಬುದಕ್ಕೆ ಒಂದು ಶಾಸನಾಧಾರವಿದೆ.–"ಊರ್ವೆ ಜೋಗವ್ವೆಯ ವಂಶದೊಳ್ಪೆಣ್ಗೂಸುಗಳಲ್ಲವೆ ಗಂಡುಗೂಸುಗಳ ವಂಶಕ್ಕಡಿಹಾರವಲ್ಲದೆ ಸಲ್ಲದು. ಪೆಣ್ಗೂಸುಗಳಿಲ್ಲದೊಡೆ ಗಂಡು ಮಕ್ಕಳ್ಗೆ ಸಲ್ಗುಂ'' (EI. XXIX. p. 203). ಇದು ಹತ್ತನೇ ಶತಮಾನದ ಶಾಸನ. ಅಳಿಯಸಂತಾನದ ಪ್ರಕಾರ ಆಸ್ತಿ ಮಗಳಿಗೆ ಸೇರುತ್ತದೆ; ಅಳಿಯ ತನ್ನ ಹೆಂಡತಿಯ ಮನೆಗೆ ಬಂದು ವಾಸಿಸುತ್ತಾನೆ. ಇತ್ತೀಚಿನವರೆಗೆ ಕೇರಳದಲ್ಲಿ ಈ ಪದ್ಧತಿಯಿತ್ತು.

[5] ಹಿರಿಯ ಮಗನು ಹುಟ್ಟಿದಾಗ ತಂದೆಯು ತನ್ನ ಪಿತೃಗಳ ಋಣದಿಂದ ಮುಕ್ತನಾಗುವನೆಂದು ಮನುಸ್ಮೃತಿಯು (ix. 106) ಹೇಳುತ್ತದೆ. ತಂದೆಯು ಹಿರಿಯ ಮಗನಿಗೆ ಋಣವನ್ನು ಹೊರಿಸಿ, 'ಆನಂತ್ಯ'ವನ್ನು ಪಡೆಯುವನೆಂದೂ, ಆ ಕಾರಣದಿಂದ ಹಿರಿಯ ಮಗನು ಮಾತ್ರ ಧರ್ಮಜನೆಂದೂ (''ಸ ಏವ ಧರ್ಮಜಃ ಪುತ್ರಃ''), ಉಳಿದ ಮಕ್ಕಳು 'ಕಾಮಜ'ರೆಂದೂ ಅದೇ ಮನುಸ್ಮೃತಿಯು ಹೇಳುತ್ತದೆ (ix. 107). ಭಾವಶಿವದೇವ ಎಂಬುವನು ನಾಗಸ್ವಾಮಿ ಎಂಬುವನನ್ನು ಸಾಕಿ ಅವನಿಗೆ ಮದುವೆ ಮಾಡಿ, ತಾನು ಸಾಯುವುದಕ್ಕೆ ಮುಂಚೆ ತನ್ನ ಪಿಂಡವನ್ನು ಗಂಗೆಯಲ್ಲಿ ಸಮರ್ಪಿಸಬೇಕೆಂದು ಸಾಕುಮಗನನ್ನು ಕೇಳಿಕೊಂಡ ವಿಷಯವನ್ನು ಒಂದು ಶಾಸನವು [BKI. I. i. 64, 1028 A.D.] ಹೇಳುತ್ತದೆ. ಎಚಿಗಾರಿ ಎಂಬ ವೀರನು ಕಾಳಗದಲ್ಲಿ ಸತ್ತಾಗ ಅವನ ಸಾಕುಮಗನು ("ನಟೆವಿದ ಮಗ'' = ನಡಪಿದ ಮಗ) ಕಲ್ಲನ್ನು ನಿಲ್ಲಿಸಿದ ವಿಷಯವು ಶಾಸನವೊಂದರಲ್ಲಿದೆ. [EC. V. Ch. 262, 971 A.D.]

[6] EC. VII. Sk. 287, 1012 A.D.

[7] ಆ ವಿಭು ಕೊಪ್ಪದೀಶ್ವರ ಪದಾಂಬುಜಮಂ ಸುತಕಾಮ್ಯೆಯಿಂದೆ ಸಂ
ಭಾವಿತ ಚಿತ್ತನಾಗಿ ನಿಯಮವ್ರತದಿಂದಮುಪಾಸ್ತಿಗೆಯ್ದು ತ
ದ್ದೇವ ವರಪ್ರಸಾದದಿನುದಾತ್ತ ಗುಣಂ ಪಡೆದಂ ತನೂಜನಂ
ಶ್ರೀವನಿತಾ ಮನೋನಯನವಲ್ಲಭನಂ ಗುಣಿ ಕೊಪ್ಪದೇವನಂ ॥

[EI. XII. p. 274, 1077 A.D.]

ಗಳು ಕರೆದಿವೆ.[8] ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ಅವಳ ತಾಯ್ತಂದೆಗಳು ಧರ್ಮೇಶ್ವರ ಲಿಂಗದ ಕರುಣೆಯಿಂದ ಪಡೆದಂತೆ ಶಾಸನಗಳು ಹೇಳುತ್ತವೆ.[9] ಬಹುಶಃ ಅವರು ಮಗನಿಗಾಗಿ ಹರಕೆ ಹೊತ್ತಿರಬೇಕು. ಮಗನ ಬದಲು ಮಗಳು ಹುಟ್ಟಿದುದರಿಂದ ಅವಳನ್ನೇ ಅತಿ ಪ್ರೀತಿಯಿಂದ ಸಾಕಿ ಸಲಹಿದರು. ಗರ್ಭಿಣಿಗೆ ವಿಧಿಸಿರುವ ಸಂಸ್ಕಾರಗಳಲ್ಲಿ ಗಂಡುಮಗನಾಗಲೆಂಬ ಬಯಕೆಯಿಂದ ಮಾಡುವ ಪುಂಸವನ ಕರ್ಮವೂ ಒಂದು.

## ವಿದ್ಯಾಭ್ಯಾಸ

ಸ್ತ್ರೀಯರ ವಿದ್ಯಾಭ್ಯಾಸವನ್ನು ಕುರಿತು ಹಿಂದಿನ ಅಧ್ಯಾಯವೊಂದರಲ್ಲಿ ಸಂಕ್ಷಿಪ್ತವಾಗಿ ವಿವೇಚನೆ ಮಾಡಲಾಗಿದೆ. ಇಲ್ಲಿ ಅದನ್ನೇ ಕುರಿತು ಒಂದೆರಡು ಅಂಶಗಳನ್ನು ಚರ್ಚಿಸುತ್ತೇವೆ. ವೈದಿಕಯುಗದಲ್ಲಿ ಸ್ತ್ರೀಯರು ಶಾಸ್ತ್ರಾಧ್ಯಯನಕ್ಕೆ ಅಧಿಕಾರಿಗಳಾಗಿದ್ದರೆಂದೂ, ಅವರಲ್ಲಿ ಕೆಲವರು ಮಂತ್ರಗಳನ್ನು ರಚಿಸಿರುವರೆಂದೂ ಹಿಂದೆಯೇ ನೋಡಿದ್ದೇವೆ. ಉಪನಿಷತ್ತುಗಳಲ್ಲಿಯೂ ಗಾರ್ಗಿಯಂತಹ ಮೇಧಾವಿಗಳನ್ನು ಕಾಣುತ್ತೇವೆ. ಕ್ರಮೇಣ ಸ್ತ್ರೀಯರು ವಿದ್ಯಾಭ್ಯಾಸಕ್ಕೆ ಅನರ್ಹರೆಂದೂ, ಅವರು ತಮ್ಮ ಜೀವನದುದ್ದಕ್ಕೂ ಪೋಷ್ಯರಾಗಿಯೇ ಬಾಳಬೇಕೆಂದೂ ಸ್ಮೃತಿಗಳು ವಿಧಿಸಿದುವು. ಉದಾಹರಣೆಗೆ, ಸ್ತ್ರೀಯಾದವಳು ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿಯೂ ಯೌವನದಲ್ಲಿ ಗಂಡನ ಪೋಷಣೆಯಲ್ಲಿಯೂ, ವೈಧವ್ಯವು ಪ್ರಾಪ್ತವಾದರೆ ತನ್ನ ಮಕ್ಕಳ ಪೋಷಣೆಯಲ್ಲಿಯೂ ಇರಬೇಕೆಂದು ಮನುಸ್ಮೃತಿಯು ವಿಧಿಸುತ್ತದೆ.[10] ಅವಳು ಬಾಲ್ಯದಲ್ಲಿಯಾಗಲಿ, ಯೌವನದಲ್ಲಾಗಲಿ, ಮುಪ್ಪಿನಲ್ಲಾಗಲಿ ತನ್ನ ಮನೆಯಲ್ಲೇ ಯಾವ ಕೆಲಸವನ್ನೂ ಸ್ವಾತಂತ್ರ್ಯವಹಿಸಿ ಮಾಡಕೂಡದೆಂದು ಅದೇ ಸ್ಮೃತಿಯು ವಿಧಿಸುತ್ತದೆ.[11] ಅವರು ಶಾಸ್ತ್ರಾಧ್ಯಯನಕ್ಕೆ ಅನಧಿಕಾರಿಗಳಾಗಿರುವ ಕಾರಣ, ಶಾಸ್ತ್ರಾಧ್ಯಯನದಿಂದ ಒದಗುವ ಧರ್ಮಾಧರ್ಮ ಪರಿಜ್ಞಾನವನ್ನು ಅವರು ಪಡೆಯಲಸಾಧ್ಯವಾಗಿರುವುದರಿಂದ ಅವರು ಸ್ವಾತಂತ್ರ್ಯಕ್ಕೆ ಅನರ್ಹರೆಂದು ನಾರದ ಸ್ಮೃತಿಯ ವ್ಯಾಖ್ಯಾನಕಾರನಾದ ಅಸಹಾಯನು ಹೇಳುತ್ತಾನೆ.[12] ಈ ವಿಧಿಗಳನ್ನು ಭರತಖಂಡದ ಸಮಾಜವು ಬಹುಮಟ್ಟಿಗೆ ಒಪ್ಪಿಕೊಂಡಿತು.

ಪ್ರಾಚೀನ ಕರ್ನಾಟಕವೂ ಮೇಲಿನ ಭಾವನೆಗಳನ್ನೇ ಒಪ್ಪಿಕೊಂಡಿದೆ. ನಮಗೆ ತಿಳಿದ ಮಟ್ಟಿಗೆ ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಯಾವ ಮಹಿಳೆಯೂ ಶಾಸ್ತ್ರಗಳಲ್ಲಿ ಪಾರಂಗತಳಾಗಿರಲಿಲ್ಲ. ಇದಕ್ಕೆ ಬಹುಶಃ ಒಂದೇ ಒಂದು ಅಪವಾದವೆಂದರೆ ಸು. 900 ರ ಶಾಸನವೊಂದರಲ್ಲಿ ಕಂಡುಬರುವ ಸಾಮಿನಿರ್ಮಡಿ ಎಂಬ ಹೆಸರಿನ ಮಹಿಳೆ. "ಸ್ವಸ್ತಿಶ್ರೀ ನಾಗಾರ್ಜುನಯ್ಯ ನಂದಿಂಗೆಯಬೀಯ ಮಗಳ್ ಸಾಮಿ-

---

ತನ್ನ ಒಡೆಯನಿಗೆ ಗಂಡುಮಗನಾಗಬೇಕೆಂದು ಹರಕೆ ಹೊತ್ತು, ಆ ಹರಕೆ ಸಫಲವಾಗಲು ತಮ್ಮನ್ನು ತಾವು ಆತ್ಮಬಲಿಯಾಗಿ ಕೊಟ್ಟುಕೊಂಡ ನಿದರ್ಶನಗಳನ್ನು ಹಿಂದೆಯೇ ನೋಡಿದ್ದೇವೆ.

8 EC. VI. Cm. 94, C. 1060 A.D. ರಾತ್ರಿಗೆ ಚಂದ್ರನು ದೀಪಕ. ಪ್ರಾತಃಕಾಲಕ್ಕೆ ಸೂರ್ಯನು ದೀಪಕ. ಮೂರು ಲೋಕಗಳಿಗೂ ಧರ್ಮವು ದೀಪಕ. ಕುಲಕ್ಕೆ ಸುಪುತ್ರನು ದೀಪಕ.

9 EC. V. Hn. 116, 1123 A.D.

10 ಮನುಸ್ಮೃತಿ (ಬಿ. ಶ್ರೀನಿವಾಸಭಟ್ಟ ಅವರ ಕರ್ಣಾಟಕ ಟೀಕಾ ಸಹಿತ), 5. 148. "ಬಾಲ್ಯೇ ಪಿತೃರ್ವಶೇ ತಿಷ್ಠೇತ್ ಪಾಣಿಗ್ರಾಹಸ್ಯ ಯೌವನೇ ಪುತ್ರಾಣಾಂ ಭರ್ತರಿ ಪ್ರೇತೇ ನ ಭಜೇತ್ ಸ್ತ್ರೀ ಸ್ವತಂತ್ರತಾಂ॥" ಅದೇ ಸ್ಮೃತಿಯ ಇನ್ನೊಂದು ಶ್ಲೋಕವು ಹೆಚ್ಚು ಪ್ರಸಿದ್ಧವಾದುದು–"ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ। ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ॥ (9.3)

11 ಅದೇ, 5. 147.

12 "ಶಾಸ್ತ್ರಾಧ್ಯಯನಾನಧಿಕಾರಿತ್ವಾತ್ ಶಾಸ್ತ್ರಮಾತ್ರೋಪಜೀವಿಧರ್ಮಾಧರ್ಮ ಜ್ಞಾನಾಭಾವಾತ್ ಅಸ್ವಾತಂತ್ರ್ಯಂ" (ನಾರದ ಸ್ಮೃತಿಯ x. 30ನೇ ಶ್ಲೋಕದ ಮೇಲೆ ವ್ಯಾಖ್ಯಾನ). (Quoted by A. S. Altekar : The Position of Women in Hindu Civilization, p. 20).

ನಿರ್ಮುಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ"[13] (=ನಾಗಾರ್ಜುನಯ್ಯ ಮತ್ತು ಸಂದಿಂಗೆಯಬ್ಬೆಯ ಮಗಳು ಸಾಹಿ-ನಿರ್ಮುಡಿಯು ಸರ್ವಶಾಸ್ತ್ರಗಳಲ್ಲಿ ಪ್ರಸಿದ್ಧಳು). ಈ ಶಾಸನವು ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲ್ಲೂಕಿನ ಕಾರುಬೆಲೆ ಗ್ರಾಮದ ರಕ್ತಕೊಡಗೆ ಇನಾಮತೀ ಹೊಲದಲ್ಲಿದೆ. ಈ ನಿದರ್ಶನವನ್ನು ಬಿಟ್ಟರೆ ಸ್ತ್ರೀಯರು ದೊಡ್ಡ ವಿದ್ವಾಂಸರಾಗಿದ್ದುದಕ್ಕೆ ಇನ್ನೆಲ್ಲಿಯೂ ಆಧಾರಗಳಿಲ್ಲ. ವಡ್ಡಾರಾಧನೆಯ ಸುಕುಮಾರಸ್ವಾಮಿಯ ಕಥೆಯಲ್ಲಿ ಬರುವ ನಾಗಶ್ರೀ ಎನ್ನುವವಳು ರಾಜನ ಪುರೋಹಿತ ಸೋಮಶರ್ಮನ ಮಗಳಾಗಿ ಹುಟ್ಟಿದ್ದರೂ ಅವಿದ್ಯಾವಂತಳಾಗಿಯೇ ಬೆಳೆಯುತ್ತಾಳೆ (ಸೂರ್ಯಮಿತ್ರ ಭಟಾರ ಎಂಬ ಜೈನ ಸನ್ಯಾಸಿಗಳ ಕೃಪೆಯಿಂದ ಅವಳು ಇದ್ದಕ್ಕಿದ್ದಂತೆಯೇ ವಿದ್ಯಾವಂತಳಾಗುತ್ತಾಳೆ[14]). ಸ್ತ್ರೀಯರು ಒಳ್ಳೆಯ ಗೃಹಿಣಿಯರಾದರೆ ಸಾಕು ಎಂಬ ಭಾವನೆ ಆ ಕಾಲದಲ್ಲಿದ್ದಂತೆ ಕಾಣುತ್ತದೆ. ಒಳ್ಳೆಯ ಗೃಹಿಣಿಯ ಯೋಗ್ಯತೆಗಳಲ್ಲಿ ಶಾಸ್ತ್ರಾಧ್ಯಯನವೂ, ವಿದ್ಯೆಯೂ ಒಂದು ಎಂಬ ಭಾವನೆ ಇರಲಿಲ್ಲ. ಇದು ಸಾಮಾನ್ಯ ಜನರ ಮನೆಗಳ ಸ್ತ್ರೀಯರಿಗೆ ಅನ್ವಯಿಸುತ್ತದೆ. ಸಮಾಜದ ಮೇಲ್ತರಗತಿಯ ಜನಗಳಲ್ಲಿ, ಎಂದರೆ ಅರಮನೆಗಳಲ್ಲಿ, ದೊಡ್ಡ ದೊಡ್ಡ ಅಧಿಕಾರಿಗಳ ಮನೆಗಳಲ್ಲಿ ಹೆಣ್ಣುಮಕ್ಕಳಿಗೆ ಬಾಲ್ಯದಲ್ಲಿ ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಮಾಡಿಸುತ್ತಿದ್ದರು. ಅವರ ವಿದ್ಯಾಭ್ಯಾಸದಲ್ಲಿ ನರ್ತನ ಸಂಗೀತ ಮುಂತಾದ ಕಲೆಗಳಿಗೆ ಹೆಚ್ಚು ಪ್ರಾಧಾನ್ಯವಿದ್ದಂತೆ ಕಾಣುತ್ತದೆ. ಇದಕ್ಕೆ ಕೆಲವು ನಿದರ್ಶನಗಳನ್ನು ಕೊಡಬಹುದು. ಮಹಾಸಾಮಂತ ಶೂದ್ರಕಾಂಕನ ಹೆಂಡತಿಯಾದ ಜಕ್ಕಿ ಸುಂದರಿಯನ್ನು 'ಸಹಜ ಸರಸ್ವತಿ' ಎಂದು ಶಾಸನವೊಂದರಲ್ಲಿ ಕರೆದಿದೆ.[15] ಮಂಡಳಿಕ ಉದಯಾದಿತ್ಯನ ಪತ್ನಿ ಲಚ್ಚಲದೇವಿಯ ನರ್ತನವನ್ನು ಶಾಸನವೊಂದು ಬಣ್ಣಿಸುತ್ತದೆ.[16] ತ್ರಿಭುವನಮಲ್ಲದೇವನ ಪಟ್ಟದ ರಾಣಿ ಚಂದಲದೇವಿಯು 'ಶ್ರೀ ನೃತ್ಯ ವಿದ್ಯಾಧರಿ' ಎನ್ನಿಸಿಕೊಂಡಿದ್ದಳು.[17] ಇವಳು ಅನೇಕ ದತ್ತಿಗಳನ್ನು ಕೊಡುವುದರ ಮೂಲಕ ವೈದಿಕ-ವಿದ್ಯಾಭ್ಯಾಸಕ್ಕೆ ನೆರವಾಗಿದ್ದಾಳೆ.[18] ಪಿರಿಯ ಕೇತಲದೇವಿಯನ್ನು ಅಭಿನವಸರಸ್ವತಿಯೆಂದೂ, ಅನೇಕ ದೇಶಭಾಷಾ ಸಂಗೀತ ವಿದ್ಯಾಧರಿ ಎಂದೂ ಒಂದು ಶಾಸನವು ಹೊಗಳುತ್ತದೆ.[19] ರವಿದೇವ ಎಂಬ ದಂಡನಾಯಕನ ಪತ್ನಿ ರೆಬ್ಬಲ ದೇವಿಯು ಪ್ರತಿಭಾಸರಸ್ವತಿ ಎಂದು ಕರೆಯಿಸಿಕೊಂಡಿದ್ದುದಲ್ಲದೆ, ಅಜ್ಞಾನವೆಂಬ ಕಲ್ಮಷವನ್ನು ಕಳೆದುಕೊಂಡವಳೆಂದು ಹೊಗಳಿಸಿಕೊಂಡಿದ್ದಳು ("ತಿರಸ್ಕೃತಾಜ್ಞಾನ ಕಾಳಿಕೆ"). ಅವಳನ್ನು ಸರಸ್ವತಿಯ ಕೈಯಲ್ಲಿರುವ ವೀಣೆ ಎಂದು ಶಾಸನವು ಹೊಗಳುತ್ತದೆ.[20] ಕದಂಬ ವಂಶದ ರಾಜ ದಯಸಿಂಹನ ರಾಣಿ ಚೆಲುವೆ ಮೇಚಲದೇವಿಯು ಅತಿ ಚತುರೋಕ್ತಿಯಲ್ಲಿ ಸರಸ್ವತಿಗೂ ಮಿಗಿಲೆನ್ನಿಸಿಕೊಂಡಿದ್ದಳು. ಅವಳು 'ಪುಣ್ಯ ಕಥನ ಪುರಾಣ ಪ್ರಸಂಗೆ'ಯೂ ಆಗಿದ್ದಳು.[20.1] ಮಹಾ ಮಂಡಲೇಶ್ವರ ಗಂಗಪೆರ್ಮಾಡಿಯ ಪತ್ನಿ ಬಾಚಲದೇವಿಯು ತನ್ನ ನೃತ್ಯಕೌಶಲವನ್ನು ಪ್ರದರ್ಶಿಸಿ ತನ್ನ ಗಂಡನಿಂದ 'ಪಾತ್ರ ಜಗದಳೆ' ಎಂಬ ಬಿರುದನ್ನು ಸಂಪಾದಿಸಿದ್ದಳು. ಈ ಬಿರುದನ್ನು "[ಪ]ಡೆಯ ಕಡೆಯ ಬಡವು"ಗಳಿಂದ ಪಡೆಯಲಿಲ್ಲವೆಂದೂ,

---

13 EC. X. Bp. 65, C. 900 A.D.

14 ವಡ್ಡಾರಾಧನೆ (1949). ಪು. 23.

15 EC. XI. Cd. 74, 968 A.D.

16 "ಪೊಚ್ಚ ಪೊಸದೇಸೆ ಮಾರ್ಗದೊಳಚ್ಚರಿ ರಸಭಾವವೋಜೆ ಬಹುವಿಧಗತಿಯೂ....ಗದೊಳ್ ನಚ್ಚಧಿ ಸಿಬರ್ಪ್ಪಣ ಪಾತ್ರಮೆನಿಸಿದ ಪಾತ್ರ....ದಗತಿಯೊಳ್ ವಳನ ನರ್ತನ...." [EC. VII. Sk. 109, C. 1070 A.D.]

17 EI. XXVIII. p. 33, 1082 A.D.

18 BKI. I. ii. 142, 1096 A.D.

19 SII. IX. i. 159, C. 1090 A.D.

20 SII. IX. i, 158, 1090 A.D.

20.1 EC. V. Mj. 18, 1095 A.D.

ರಾಜನಾದ ಅವಳ ಗಂಡನೇ ಒಪ್ಪಿ ಕೊಟ್ಟನೆಂದೂ ಶಾಸನವು ಹೊಗಳುತ್ತದೆ.[21] ಅವಳು ತನ್ನ ಗಂಡನ ಸಾಹಸ ಪರಾಕ್ರಮಾದಿಗಳನ್ನು 'ನಾಟಕ'ವಾಗಿ ಮಾಡಿ ನರ್ತಿಸಿದ ಸೂಚನೆಯಿದೆ ಶಾಸನದಲ್ಲಿ.[22] ಸಂಗೀತದಲ್ಲಿ ಯಾರಾದರೂ ಅವಳಿಗೆ ಪ್ರತಿಪಕ್ಷವಾಗಿ ನಿಂತು ಸವಾಲು ಹಾಕಿದ್ದರೆ ಅವರ ಮಾನವನ್ನು ಅವಳು ಖಂಡಿಸದೆ ಬಿಡುತ್ತಿರಲಿಲ್ಲವೆಂದು ಅದೇ ಶಾಸನವು ಹೇಳುತ್ತದೆ.[23] ವಿಷ್ಣುವರ್ಧನನ ರಾಣಿ ಶಾಂತಲೆಯ ಕಲಾ ಪ್ರೌಢಿಮೆಯನ್ನಂತೂ ಅನೇಕ ಶಾಸನಗಳು ಹೊಗಳಿ ಹೊಗಳಿ ತಣಿದಿವೆ.—

"ಆ ನೆಗರ್ದ ವಿಷ್ಣು ನ್ರಿಪನ ಮನೋನಯನ ಪ್ರಿಯೆ ಚಳಾಕ ನೀಳಾಳಕಿ ಚಂದ್ರಾನನೆ ಕಾಮನ ರತಿಯಲು ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವಿ||[24] ಶಾಂತಲ ದೇವಿಯ ಗುಣಮಂ ಶಾಂತಲ ದೇವಿಯ ಸಮಸ್ತ ದಾನೋನ್ನತಿಯಂ ಶಾಂತಲ ದೇವಿಯ ಶೀಳಮಚಿಂತ್ಯಂ ಭುವನಯ್ಕ ಚಿಂತಾಮಣಿಯಂ || ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸತ ಸಹಸ್ರ ಫಳ ಭೋಗ ಭಾಗಿಣೀ ದ್ವಿತೀಯ ಲಕ್ಷ್ಮೀ ಸಮಾನೆಯುಂ | ಸಕಳ ಕಳಾಗಮಾನೂನೆಯು | ಮಭಿನವ ರುಗ್ಮಿಣೀ ದೇವಿಯುಂ | ಪತಿಹಿತ ಸತ್ಯಭಾಮೆಯುಂ | ವಿವೇಕಯ್ಕ ಬೃಹಸ್ಪತಿಯುಂ | ಪ್ರತ್ಯುತ್ಪನ್ನ ವಾಚಸ್ಪತಿಯುಂ | ಮುನಿಜನ ವಿನೇಯ ಜನ ವಿನೀತೆಯುಂ | ಪತಿಬ್ರತಾ ಪ್ರಭಾವ ಪ್ರಸಿದ್ಧ ಶೀತೆಯುಂ | ಸಕಳ ವಂದಿ ಜನ ಚಿಂತಾಮಣಿಯುಂ | ಉದ್ವೃತ್ತ ಸವತಿ ಗಂಧವಾರಣೆಯುಂ | ಚತುಸ್ಸಮಯ ಸಮುದ್ಧರಣ ಕಾರಣೆಯುಂ | ಗೀತವಾದ್ಯ ನೃತ್ಯ ಸೂತ್ರಧಾರೆಯುಂ | ಜಿನಸಮಯ ಸಮುದಿತ ಪ್ರಾಕಾರೆಯುಂ ......."[25] ಇತ್ಯಾದಿ.

ಇನ್ನೊಂದು ಶಾಸನವು ಅವಳನ್ನು ವಿದ್ಯೆಯಲ್ಲಿ ವಾಗ್ದೇವತೆಯೇ ಸರಿ ಎಂದು ಹೊಗಳುತ್ತದೆ.[26] ಭವ್ಯರಾಜನ ಪತ್ನಿ ಗಂಗಾದೇವಿಯು ತನ್ನ ವಿದ್ಯಾ ಪರಿಣತಿಯಿಂದ ಸರಸ್ವತಿಯ ಸಹಚರಿಯಾಗಿದ್ದಳೆಂದು ಒಂದು ಶಾಸನವು ಹೊಗಳುತ್ತದೆ.[27]

ಹೀಗೆ ಸ್ತ್ರೀಯರ ವಿದ್ಯಾಭ್ಯಾಸವು ಮುಖ್ಯವಾಗಿ ಕಲೆಗಳ ಕಡೆ ಒಲಿದಿತ್ತೆಂದೂ, ಸಾಮಾನ್ಯವರ್ಗದ ಸ್ತ್ರೀಯರು ಸಾಮಾನ್ಯವಾಗಿ ಅವಿದ್ಯಾವಂತರಾಗಿಯೇ ಉಳಿಯುತ್ತಿದ್ದರೆಂದೂ ಸ್ಥೂಲವಾಗಿ ಹೇಳಬಹುದು. ಸಾಮಾನ್ಯವರ್ಗದ ಸ್ತ್ರೀಯರಲ್ಲಿ ದೇವದಾಸಿಯರು ಗೀತ, ನರ್ತನ ಮುಂತಾದ ಕಲೆಗಳಲ್ಲಿ ಪರಿಣತರಾಗಿದ್ದರು. ಇವರ ವಿಷಯವನ್ನು ಹಿಂದೆಯೇ ಒಂದು ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ವಿದ್ಯಾವಂತರಾದ ಪುರುಷರ ಸಂಖ್ಯೆಯು ಶೇಕಡಾ ಮೂವತ್ತರಷ್ಟಿತ್ತೆಂದೂ ಸ್ತ್ರೀಯರ ಸಂಖ್ಯೆಯು ಶೇಕಡಾ ಹತ್ತರಷ್ಟಿತ್ತೆಂದೂ ಡಾ|| ಅಲ್ಟೇಕರರು ಊಹಿಸುತ್ತಾರೆ.[28]

---

21 "....ಡೆಯು ಕಡೆಯ ಬಡವುಗಳಿಯಲ್ಪಡೆದಳ್" ಎಂದು ಅಚ್ಚಾಗಿದೆ. ಅದನ್ನು "ಪಡೆಯ ಕಡೆಯ ಬಡವುಗಳೀಯಲ್ಪಡೆದಳ್" ಎಂದು ಸುಲಭವಾಗಿ ತಿದ್ದಬಹುದು. ರನ್ನನ ಈ ಪದ್ಯವನ್ನು ಹೋಲಿಸಿ ನೋಡಿ : "ಪಡೆಯೆಡೆಯ ಕಡೆಯ ಬಡವರ್ | ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ | ಪಡೆದಂ ಮಹಿಮೋನ್ನತಿಯಂ | ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ||" (ಗದಾಯುದ್ಧ, 1. 37).

22 EC. VII. Sh. 97, 1113 A.D.

23 ಅದೇ.

24 ಹೋಲಿಸಿ : "ಆ ನರಸಿಂಹ ಮಹೇಶನು | ನೋನಯನ ಪ್ರಿಯೆ ವಿಳೋಳ ನೀಳಾಳಕೆ ಚಂ | ದ್ರಾನನೆ ಜಾಕವ್ವೆದಲಾ | ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ ||" (ಪಂಪಭಾರತ, 1. 39).

25 EC. II. 132, 1123 A.D. ; EC. II. 143, 1131 A.D.

26 EC. V. Hn. 89, 1135 A.D.

27 EI. XIII. p. 301, 1125 A.D.

28 A. S. Altekar : Education in Ancient India, p. 239.

ಈ ಊಹೆಗೆ ಖಚಿತವಾದ ಆಧಾರಗಳಿಲ್ಲ. ಕರ್ನಾಟಕದ ಶಾಸನಗಳನ್ನು ಓದಿದ ಮೇಲೆ ಮನಸ್ಸಿನಲ್ಲಿ ಮೂಡುವ ಭಾವನೆಯನ್ನವಲಂಬಿಸಿ ಹೇಳುವುದಾದರೆ ಮೇಲಿನ ಸಂಖ್ಯೆಗಳು, ಅದರಲ್ಲೂ ಸ್ತ್ರೀಯರಿಗೆ ಸಂಬಂಧಿಸಿದ ಸಂಖ್ಯೆಯು ತುಂಬಾ ಹೆಚ್ಚೆಂದು ಕಾಣುತ್ತದೆ.

## ವಿವಾಹ

ಹೆಣ್ಣುಮಕ್ಕಳಿಗೆ ಸಾಮಾನ್ಯವಾಗಿ ಎಷ್ಟನೆಯ ವಯಸ್ಸಿನಲ್ಲಿ ಮದುವೆ ಮಾಡುತ್ತಿದ್ದರೆಂಬುದನ್ನು ಊಹಿಸಲು ಹೆಚ್ಚು ಶಾಸನಾಧಾರಗಳಿಲ್ಲ. ವೈದಿಕಯುಗದಲ್ಲಿ ಬಾಲ್ಯವಿವಾಹವು ಇರಲಿಲ್ಲವೆಂಬುದಕ್ಕೂ, ಗಂಡು ಹೆಣ್ಣುಗಳು ಪ್ರಾಪ್ತವಯಸ್ಕರಾದಮೇಲೆ ಮದುವೆಯಾಗುತ್ತಿದ್ದರೆಂಬುದಕ್ಕೂ ಆಧಾರಗಳಿವೆ.[29] ಕ್ರಿಸ್ತಶಕದ ಆರಂಭದಿಂದೀಚೆಗೆ ಬಂದ ಯಾಜ್ಞವಲ್ಕ್ಯ ಮುಂತಾದ ಸ್ಮೃತಿಕಾರರು ಹುಡುಗಿಯು ಋತುಮತಿಯಾಗುವ ಮೊದಲೇ ಅವಳ ವಿವಾಹವನ್ನು ನೆರವೇರಿಸಬೇಕು ಎಂದು ವಿಧಿಸುತ್ತಾರೆ.[30] ಸರಿಯಾದ ವರ ಸಿಕ್ಕದಿದ್ದರೂ ಚಿಂತೆಯಿಲ್ಲ, ಹುಡುಗಿಯು ಪ್ರಾಯಕ್ಕೆ ಬರುವ ಮುನ್ನವೇ ಸಿಕ್ಕಿದ ವರನಿಗೆ ಕೊಟ್ಟು ಮದುವೆ ಮಾಡಬೇಕು ಎನ್ನುತ್ತಾನೆ ಯಮ ಎಂಬ ಮತ್ತೊಬ್ಬ ಸ್ಮೃತಿಕಾರ.[31] ಮನುವು ಕೂಡಾ ಹುಡುಗಿಯರನ್ನು ಪ್ರಾಯಕ್ಕೆ ಬರುವ ಮೊದಲೆ ಮದುವೆ ಮಾಡಬೇಕೆನ್ನುವವರ ಗುಂಪಿಗೆ ಸೇರಿದ್ದರೂ ಅನುರೂಪನಾದ ವರ ಸಿಗದಿದ್ದರೆ ಅವಳು ಕೊನೆಯವರೆಗೆ ಮದುವೆಯಾಗದೆ ತಂದೆಯ ಮನೆಯಲ್ಲಿಯೇ ಉಳಿಯುವುದು ಒಳ್ಳೆಯದು ಎಂದು ಅಭಿಪ್ರಾಯ ಪಡುತ್ತಾನೆ.[32] ಒಟ್ಟಿನಲ್ಲಿ ಬಾಲ್ಯವಿವಾಹವನ್ನು ಎತ್ತಿಹಿಡಿದಿರುವವರೇ ಹೆಚ್ಚು.[33]

ಹಿಂದೂಗಳು ಚಿಕ್ಕವಯಸ್ಸಿನಲ್ಲಿಯೇ ಮದುವೆಮಾಡಿಕೊಳ್ಳುತ್ತಾರೆ ಎಂದು ಅಲ್ಬೆರೂನಿಯು ಹೇಳುತ್ತಾನೆ.[34] ಬಹುಶಃ ಪ್ರಾಚೀನ ಕರ್ನಾಟಕಕ್ಕೂ ಈ ವಿಷಯವು ಅನ್ವಯಿಸುತ್ತದೆಯೆಂಬುದನ್ನು ಶಾಸನಾಧಾರಗಳಿಂದ ಸಮರ್ಥಿಸಬಹುದು. ವಿಷ್ಣುವರ್ಧನದೇವನು ಸಾಕಿ ಸಲಹಿದ ಬಿಟ್ಟಿಯಣ್ಣನು ಹದಿನೈದನೆಯ ("ಸಪ್ತಾಷ್ಟ ಸಂವತ್ಸರದೊಳ್") ವಯಸ್ಸಿಗೆ ಸಮಸ್ತ ಶಸ್ತ್ರಶಾಸ್ತ್ರಪ್ರವೀಣನಾಗಲು, ಆವನಿಗೆ ಪ್ರಧಾನ ದಂಡನಾಥನ ಮಗಳನ್ನು ತಂದುಕೊಂಡು ವಿವಾಹವನ್ನು ನೆರವೇರಿಸಿದಂತೆ ಶಾಸನವೊಂದು ತಿಳಿಸುತ್ತದೆ.[35] ಮದುವೆಯಾಗಲಿರುವ ಹೆಣ್ಣಿನ ವಯಸ್ಸು ಗಂಡಿಗಿಂತ ಮೂರು ವರ್ಷ ಕಡಿಮೆಯಿರಬೇಕೆಂದು ಕಾಮಶಾಸ್ತ್ರವು ಹೇಳುತ್ತದೆ.[36] (ವಿಷ್ಣುಪುರಾಣದ ಪ್ರಕಾರ ಗಂಡಿನ ವಯಸ್ಸಿನ ಮೂರನೇ ಒಂದು ಭಾಗದಷ್ಟು ಹೆಣ್ಣಿನ ವಯಸ್ಸಿರಬೇಕು.[37] ಎಂದರೆ ಗಂಡಿಗೆ ಹದಿನೈದಾಗಿದ್ದರೆ ಹೆಣ್ಣಿಗೆ ಐದು ವರ್ಷ. ಇದು ಬಹುಮಟ್ಟಿಗೆ

---

[29] Indra : The status of Women in Ancient India, p. 43

[30] Altekar : The Position of Women in Hindu Civilization (1938), p. 67.

[31] ಅದೇ.

[32] The Ordinances of Manu (Tr. Burnell), IX. 89.

[33] ಬಾಲ್ಯವಿವಾಹಕ್ಕೆ ಉಗ್ರ ಪ್ರತಿಭಟನೆಯು ಒಂದು ವೈದ್ಯ ಗ್ರಂಥದಲ್ಲಿ ಕಂಡುಬಂದಿದೆ. ಸುಶ್ರುತನು ತನ್ನ ಸಂಹಿತೆಯಲ್ಲಿ (ಶರೀರಸ್ಥಾನ, X. 47-48) ಹೀಗೆ ಹೇಳುತ್ತಾನೆ—"ಹುಡುಗಿಯನ್ನು ಹದಿನಾರನೇ ವಯಸ್ಸಿಗಿಂತ ಮೊದಲು ಮದುವೆ ಮಾಡಬಹುದು. ಆಕೆಗೆ ಆ ವಯಸ್ಸಿಗೆ ಮುಂಚೆ ಮದುವೆಯಾಗಿ ಗರ್ಭಿಣಿಯಾದರೆ ಮಗುವು ಗರ್ಭದಲ್ಲೇ ಸಾಯುತ್ತದೆ. ಹುಟ್ಟಿದರೂ ಬಹಳ ಕಾಲ ಬದುಕುವುದಿಲ್ಲ. ಬದುಕಿದರೂ ರೋಗಪೀಡಿತವಾಗಿರುತ್ತದೆ." ಧಾರ್ಮಿಕ ಗ್ರಂಥಗಳ ಆರ್ಭಟದಲ್ಲಿ ಈ ಲೌಕಿಕ ಗ್ರಂಥದ ವಿವೇಕದ ಉಪದೇಶವು ಮರೆಯಾಗಿ ಹೋಗಿರಬೇಕು.

[34] Sachau : Alberuni's India, II, p. 154.

[35] EC. V. Bl. 17, 1136 A.D.

[36] Chakladar : Social life in Ancient India, p. 87. (ವಾತ್ಸ್ಯಾಯನನ ಕಾಮಶಾಸ್ತ್ರವನ್ನಾಧರಿಸಿ ಬರೆದ ಗ್ರಂಥವಿದು).

[37] ಅದೇ, ಪು. 91.

ಅಸಂಭವ, ಅಸಹಜ). ಆದ್ದರಿಂದ ಬಿಟ್ಟಿಯಣ್ಣನು ಕೈಹಿಡಿದ ಕನ್ಯೆಯ ವಯಸ್ಸು ಹನ್ನೆರಡಕ್ಕೆ ಮೀರಿರ ಲಾರದು ಎಂದು ಊಹಿಸಬಹುದು. ಇದು ಅಲ್ಬೆರೂನಿಯ ಹೇಳಿಕೆಯನ್ನು ಸಮರ್ಥಿಸುತ್ತದೆ. ತ್ರಿಭುವನ ಮಲ್ಲದೇವನ ಅಳಿಯ ಜಯಕೇಶಿಯ ವಿವಾಹದ ಕಾಲದಲ್ಲಿ, ಜಯಕೇಶಿಯು ಪ್ರಬುದ್ಧನಾಗಿದ್ದಂತೆ ಶಾಸನ ವೊಂದರಿಂದ ಊಹಿಸಬಹುದು.[38] ಇನ್ನೊಂದು ಶಾಸನವು ವಿವಾಹದ ವಯಸ್ಸಿನ ಮೇಲೆ ಒಳ್ಳೆಯ ಬೆಳಕನ್ನು ಬೀರುತ್ತದೆ. ಶಾಂತಿವರ್ಮನೆಂಬ ರಾಜನ ಆನೆ ಮತ್ತು ಕುದುರೆಗಳಿಗೆ ಹುಲ್ಲು ಕೊಯ್ಯಲು ಪರಲೂರಿನ 'ಕೊಡಗೂಸು'ಗಳು (ಕೊಡಗೂಸು=ಕನ್ಯೆ) ಹೊಲಗಳಿಗೆ ಹೋದಾಗ ಅಲ್ಲಿಗೆ ಬಂದ ಅಲ್ಲಗುಂದ ಎಂಬಾತನು 'ನಾನು ಹುಲ್ಲನ್ನು ಕೊಯ್ದು ಕೊಟ್ಟರೆ ನೀವು ಏನನ್ನು ಕೊಡುತ್ತೀರಿ' ಎಂದು ಕೇಳುತ್ತಾನೆ. 'ನೀನು ನಮ್ಮಲ್ಲಿ ಮೆಚ್ಚಿದವರನ್ನು ವರಿಸು' ಎಂದು ಅವರು ಹೇಳುತ್ತಾರೆ.[39] ಅವನು ಹುಲ್ಲನ್ನು ಕೊಯ್ದು ಕೊಟ್ಟನು ನಿಜ, ಆದರೆ ಯಾರನ್ನಾದರೂ ವರಿಸಿದನೇ ಇಲ್ಲವೇ ಎಂಬ ವಿಷಯವನ್ನು ಶಾಸನವು ಹೇಳುವುದಿಲ್ಲ. ಆದರೂ ಆ 'ಕೊಡಗೂಸು'ಗಳು ತಮ್ಮ ಮದುವೆಯ ಕನಸನ್ನು ಕಾಣುತ್ತಿದ್ದವರು, ಮದುವೆಯ ವಿಷಯವನ್ನು ಮಾತನಾಡುವ ವಯಸ್ಸಿನಲ್ಲಿದ್ದ ಚತುರೆಯರು ಎಂಬುದು ಮುಖ್ಯ. ಅವರು ಹನ್ನೆರಡು ಅಥವಾ ಹದಿನಾಲ್ಕನೇ ವಯಸ್ಸನ್ನು ದಾಟಿದ್ದರು ಎಂಬುದಂತೂ ಸ್ಪಷ್ಟ. ಹೀಗೆ ಕರ್ನಾಟಕದಲ್ಲಿ ಬಾಲ್ಯವಿವಾಹವಿದ್ದರೂ, ಅದು ಅತಿರೇಕಕ್ಕೆ ಹೋಗಿರಲಿಲ್ಲ ಎಂದು ಸ್ಥೂಲವಾಗಿ ಹೇಳಬಹುದು. ಮದುವೆಯಾಗಲಿರುವ ಗಂಡಿನ ವಯಸ್ಸು ಹದಿನೈದರಿಂದ ಇಪ್ಪತ್ತು, ಹೆಣ್ಣಿನ ವಯಸ್ಸು ಹನ್ನೆರಡರಿಂದ ಹದಿನಾರು ಎಂದು ಭಾವಿಸಬಹುದು.[40]

ಈಗಿನಂತೆಯೇ ಆಗಲೂ ಅಂತರ್ಜಾತೀಯ ವಿವಾಹಗಳಿಗೆ ಪ್ರೋತ್ಸಾಹವಿರಲಿಲ್ಲ. ಗಂಗವಂಶದ ಪೂರ್ವಜ ರಾದ ದಡಿಗ, ಮಾಧವರಿಗೆ ಸಿಂಹನಂದ್ಯಾಚಾರ್ಯರೆಂಬ ಜೈನಗುರುಗಳು 'ಅಕುಲೀನರಪ್ಪವರ ಕೊಳ್ಕೊಡೆ'ಯಾದರೆ ಕುಲಕ್ರಮವು ಕೆಡುತ್ತದೆಯೆಂದು ಬುದ್ಧಿವಾದವನ್ನು ಹೇಳಿದಂತೆ ಇತ್ತೀಚಿನ ಒಂದು ಶಾಸನವು ನಿರೂಪಿಸುತ್ತದೆ.[41] ವಿಷ್ಣುವರ್ಧನನು ಬಿಟ್ಟಿಯಣ್ಣನಿಗೆ ಒಳ್ಳೆಯ ಕುಲದಲ್ಲಿ ಹುಟ್ಟಿದ ("ಅಭಿಜಾತೆಯುಮಪ್ಪ ನಿಜಪ್ರಧಾನ ದಂಡನಾಥ ಪುತ್ರಿಯಂ ಕನ್ಯಾರತ್ನಮಂ ತಂದು") ಕನ್ಯೆಯನ್ನು ತಂದು ಮದುವೆ ಮಾಡಿದಂತೆ ಶಾಸನವು ಹೇಳುತ್ತದೆ.[42] (ಇಲ್ಲಿ 'ಕುಲ'ವೆಂದರೆ 'ಜಾತಿ' ಎಂದೇ ಆಗಬೇಕಿಲ್ಲ, 'ವಂಶ' ಎಂದೂ ಆಗಬಹುದು). ಆದರೂ ರಾಜಮನೆತನಗಳಲ್ಲಿ ಶೈವರು, ವೈಷ್ಣವರು, ಜೈನರು ಪರಸ್ಪರ ವಿವಾಹವಾಗುತ್ತಿದ್ದುದುಂಟು (ಇದರ ಪ್ರಸ್ತಾಪ ಹಿಂದಿನ ಅಧ್ಯಾಯವೊಂದರಲ್ಲಿದೆ). ಶಾಂತಲೆಯ ತಂದೆ ಹರಭಕ್ತ, ತಾಯಿ ಜಿನಭಕ್ತೆ, ಗಂಡ ವಿಷ್ಣುಭಕ್ತ. ಸಾಮಾನ್ಯ ಜನರಲ್ಲಿಯೂ ಜೈನರು ಜೈನೇತರರ ಮನೆಗಳಲ್ಲಿಯೂ,[43] ಶೈವರು ಶೈವೇತರರ ಮನೆಗಳಲ್ಲಿಯೂ[44] ಮದುವೆಯಾಗುತ್ತಿದ್ದುದುಂಟು. ಇವುಗಳನ್ನು ಆಯಾ ಮತೀಯನಾಯಕರು ಖಂಡಿಸಿದ್ದಾರೆ. ಆಯಾ ಜಾತಿಗಳವರು ತಮ್ಮ ಜಾತಿಯ, ತಮ್ಮ ವೃತ್ತಿಯ, ಬಹುಶಃ ತಮ್ಮ ಸಮಾನದ ಮನೆಗಳಲ್ಲಿ ಮದುವೆಯಾಗುತ್ತಿದ್ದರು. ಉದಾಹರಣೆಗೆ,ವಿಷ್ಣುವರ್ಧನನ ನಚ್ಚಿನಾಳಾದ ಬೇಂಟೆಯ

[38] BKI. I. ii. 154, 1104 A.D.

[39] EI. XI. p. 6, C. 958 A.D.

[40] ಈ ಊಹೆಯನ್ನು ಸೋಮದೇವನ ಹೇಳಿಕೆಯು ಪುಷ್ಟೀಕರಿಸುತ್ತದೆ. ಹದಿನಾರು ವರ್ಷದ ಯುವಕ ಮತ್ತು ಹನ್ನೆರಡು ವರ್ಷದ ಯುವತಿಯರ ಪ್ರೇಮವು ಸ್ವರ್ಗಸದೃಶವಾದುದು ಎಂದು ಅವನು ಹೇಳುತ್ತಾನೆ.

[Yaśastilaka and Indian Culture, p. 122]

[41] EC. VII. Sh. 4, 1122 A.D.

[42] EC. V. Bl. 17, 1136 A.D.

[43] ಸಮಯಪರೀಕ್ಷೆ, 4.125—"ಪೆಂಡತಿ ಮಾಹೇಶ್ವರಿ ಗಡ। ಗಂಡಂ ಜೈನಂ ಗಡವನ ಮಕ್ಕಳ್ಗಡ ಮಾ। ರ್ತಂಡಂಗೆ ಭಕ್ತರೆನಿಪಾ। ಭಂಡಂಗುತ್ತಮದ ಜೈನವೆಸರೆಂತೆಸೆಗುಂ॥"

[44] ಬಸವಣ್ಣನವರ ಷಟ್‌ಸ್ಥಲದ ವಚನಗಳು, ಪು. 26—"ಗಂಡ ಶಿವಲಿಂಗದೇವರ ಭಕ್ತ ಹೆಂಡತಿ ಮಾರಿ ಮಸಣಿಯ ಭಕುತೆ......"

ತಿಪ್ಪೆಯ ನಾಯಕನಿಗೆ ಸೋವೆ ನಾಯಕಿತಿ, ಮಾಚವೆ ನಾಯಕಿತಿ ಎಂಬ ಹೆಂಡಿರಿದ್ದರು.[45] (ಮದುವೆಯಾದ ಮೇಲೆ ಅವರು 'ನಾಯಕಿತಿ' ಎಂದು ಹೆಸರ ಮುಂದೆ ಸೇರಿಸಿಕೊಂಡಿರಲೂ ಸಾಧ್ಯ.) ಮಾಚಗಾವುಂಡನ ನಾಲ್ಕನೆಯ ಹೆಂಡತಿಯ ಹೆಸರು ಮಾಚಗಾವುಂಡಿ ಎಂದು.[46]

ಇಲ್ಲಿ ಕನ್ಯಾಶುಲ್ಯ ಮತ್ತು ವರದಕ್ಷಿಣೆಗಳ ವಿಷಯವನ್ನು ಕುರಿತು ಒಂದೆರಡು ಮಾತುಗಳನ್ನಾಡ ಬಹುದು. ಮೊನ್ನೆ ಮೊನ್ನೆಯವರೆಗೆ ಹೆಣ್ಣುಮಕ್ಕಳ ಮದುವೆಯು ತಾಯ್ತಂದೆಗಳಿಗೆ ದೊಡ್ಡ ಸಮಸ್ಯೆಯೇ ಆಗಿರಲಿಲ್ಲ. ಗಂಡಿನ ಕಡೆಯವರು ಹೆಣ್ಣುಗಳನ್ನು ಹುಡುಕಿಕೊಂಡು ಬರುತ್ತಿದ್ದರು. ಗಂಡಿನವರು ಕನ್ಯಾಶುಲ್ಕ ವನ್ನು ' ತೆರು 'ತ್ತಿದ್ದರು. (ಕನ್ಯಾಶುಲ್ಕ= ತೆರ). ಗಂಡಿನಿಂದ ಹಣವನ್ನು ತೆಗೆದುಕೊಂಡು ಮಗಳನ್ನು ಕೊಡುವ ಸಂಪ್ರದಾಯವನ್ನು ಬೌಧಾಯನನು ಕಟುವಾಗಿ ವಿರೋಧಿಸಿದ್ದಾನೆ. ಹಣವನ್ನು ಕೊಟ್ಟು ಕೊಂಡು ಕೊಂಡ ಸ್ತ್ರೀಯನ್ನು ಪತ್ನಿಯೆಂದು ಕರೆಯಲಾಗುವುದಿಲ್ಲ. ಅವಳು ದಾಸಿಯೇ ಸರಿ. ಹಣದ ಆಸೆಗಾಗಿ ಹೆಣ್ಣು ಮಕ್ಕಳನ್ನು ಮಾರುವವರು ಘೋರ ನರಕದಲ್ಲಿ ಬೀಳುತ್ತಾರೆ ಎಂದು ಅವನು ಹೇಳಿದ್ದಾನೆ.[47] ವರ ದಕ್ಷಿಣೆಯ ಪ್ರಸ್ತಾಪವು ಸ್ಮೃತಿಗಳಲ್ಲಾಗಲಿ, ನಾಟಕಗಳಲ್ಲಾಗಲಿ ಎಲ್ಲಿಯೂ ಇಲ್ಲ.[48]

ಪ್ರಾಚೀನ ಕರ್ನಾಟಕದಲ್ಲಿ ಕನ್ಯಾಶುಲ್ಕ ಮತ್ತು ವರದಕ್ಷಿಣೆಗಳನ್ನು ಕೊಡುವ ಅಥವಾ ತೆಗೆದು ಕೊಳ್ಳುವ ಪದ್ಧತಿಯಿತ್ತೇ ಎಂಬುದನ್ನು ತಿಳಿಯಲು ಶಾಸನಾಧಾರಗಳಿಲ್ಲ.[49] ಇತ್ತೀಚಿನವರೆಗೆ ಸಮಾಜದ ಕೆಳವರ್ಗದ ಜನರಲ್ಲಿ ಕನ್ಯಾಶುಲ್ಕವನ್ನು ತೆಗೆದುಕೊಳ್ಳುವ ಪದ್ಧತಿಯಿದ್ದುದನ್ನು ನೋಡಿದರೆ ಆ ಪದ್ಧತಿಯು ಹಿಂದೆಯೂ ಇದ್ದಿರಬೇಕು ಎಂದು ಊಹಿಸಬಹುದು.[49.1] ಮದುವೆಯಾದ ಮೇಲೆ ಗಂಡಿಗೆ ಉಡುಗೊರೆಗಳನ್ನು ಕೊಡುತ್ತಿದ್ದರು. (ಇದನ್ನು ವರದಕ್ಷಿಣೆ ಎಂದು ಕರೆಯಲಾಗುವುದಿಲ್ಲ). ಮುಮ್ಮುರಿ ಎಂಬ ರಾಜನು ಚಟ್ಟಯ ದೇವನೆಂಬ ಕದಂಬ ವಂಶದ ರಾಜಕುಮಾರನಿಗೆ ವಿವಾಹವಾದ ಮೇಲೆ ಐದು ಲಕ್ಷ ಸುವರ್ಣಗಳನ್ನು ಕೊಟ್ಟ ವಿಷಯವು ಒಂದು ಶಾಸನದಲ್ಲಿದೆ.[50] ಚಟ್ಟಯ ದೇವನ ಮಗ ಜಯಕೇಶಿದೇವನು ತನ್ನ ಅಳಿಯ ಪೆರ್ಮಾಡಿ ದೇವನಿಗೆ ಭಂಡಾರವನ್ನೂ ಲೆಕ್ಕವಿಲ್ಲದಷ್ಟು ಉಡುಗೊರೆಯನ್ನೂ ಕೊಟ್ಟಂತೆ ಅದೇ ಶಾಸನದಲ್ಲಿ ಹೇಳಿದೆ. "ಇದಿರ್ವಂದಾಗಡೆ ಕೂರ್ಪ ತನ್ನ ಮಗಳಂ ಧಾರಾನ್ವಿತಂ ಕೊಟ್ಟು ಪೆರ್ಚಿದಲಂಪಂ ಪಲವ....ಯಂ

[45] MAR (1937). p. 176, 1140 A.D.

[46] EC. V. Bl. 202, 1138 A.D.

[47] ಕ್ರೀತಾ ದ್ರವ್ಯೇಣ ಯಾ ನಾರೀ ಸಾ ನ ಪತ್ನೀ ವಿಧೀಯತೇ
ಸಾ ನ ದೈವೇ ನ ಸಾ ಪಿತ್ರ್ಯೇ ದಾಸೀಂ ತಾಂ ಕವಯೋ ವಿದುಃ
ಶುಲ್ಕೇನ ಯೇ ಪ್ರಯಚ್ಛಂತಿ ಸ್ವಸುತಾಂ ಲೋಭಮೋಹಿತಾಃ
ಪತಂತಿ ನರಕೇ ಘೋರೇ ಘ್ನಂತಿ ಚಾಸಪ್ತಮಾತ್ ಕುಲಂ ॥

(I. ii. 20-1.)

[48] Altekar : The Position of Women in Hindu Civilization (1934), p. 84.

[49] ತಮಿಳು ನಾಡಿನ ಈಚಿನ ಶಾಸನವೊಂದರಲ್ಲಿ ಅನೇಕ ನಾಡುಗಳ ಬ್ರಾಹ್ಮಣರು ಸಭೆ ಸೇರಿ ತಮ್ಮ ಮನೆತನಗಳಲ್ಲಿ ವಿವಾಹವು 'ಕನ್ಯಾದಾನ'ದ ಮೂಲಕ ಎಂದರೆ ಯಾವ ರೀತಿಯ ಪ್ರತಿ ಫಲವನ್ನೂ ತೆಗೆದುಕೊಳ್ಳದೆ ಕನ್ಯೆಯನ್ನು ಮದುವೆ ಮಾಡಿಕೊಡುವುದರ ಮೂಲಕ ನಡೆಯಬೇಕೆಂದೂ ಹಣವನ್ನು ಕೊಟ್ಟವರನ್ನೂ ಕೊಂಡವರನ್ನೂ ರಾಜನು ಶಿಕ್ಷಿಸಬೇಕೆಂದೂ, ಅವರನ್ನು ಜಾತಿಯಿಂದ ಹೊರಗಟ್ಟಬೇಕೆಂದೂ ತೀರ್ಮಾನಿಸಿದ ಒಂದು ಸಂಗತಿ ಬರುತ್ತದೆ.
(T. V. Mahalingam : Administration and Social life under Vijayanagara, pp. 22-3)

[49.1] ಭರತಖಂಡದಲ್ಲಿ ಗಂಡು ತನಗೆ ಉಚಿತವೆಂದು ತೋರುವ ಉಡುಗೊರೆಯನ್ನು ಹೆಣ್ಣಿಗೆ ಕೊಡುವನೆಂದೂ, ಅದನ್ನು ಅವನು ಹಿಂದಕ್ಕೆ ಪಡೆಯಲು ಸಾಧ್ಯವಿಲ್ಲವೆಂದೂ ಹೆಣ್ಣು ಇಷ್ಟಪಟ್ಟರೆ ಮಾತ್ರ ಹಿಂದಕ್ಕೆ ಕೊಡಬಹುದೆಂದೂ ಅಲ್ಬೆರೂನಿಯು ಹೇಳುತ್ತಾನೆ. (Sachau : Alberuni's India, p. 156)

[50] EI. XIII. p. 301, 1125 A.D.

ಕುದುರೆಯಂ ಭಂಡಾರಮುಂ ಲೆಕ್ಕವಿಲ್ಲದೆ ತೆಲ್ಲಂಟೆಯನಾರ್ತು ಕೊಟ್ಟು ನೆಗಳ್ದಂ ಲೋಕೈಕ ಕಲ್ಪದ್ರುಮಂ"[51] (ತೆಲ್ಲಂಟೆ= ಉಡುಗೊರೆ). ಇನ್ನೊಂದು ಶಾಸನದಲ್ಲಿ ದೇವಸೆಟ್ಟಿ ಮತ್ತು ಗೌರಮ್ಮ ಎಂಬುವರಿಗೆ ನಡೆದ ವಿವಾಹದಲ್ಲಿ ಅವರಿಗೆ ಬೇರೆ ಬೇರೆಯವರು ಉಡುಗೊರೆಯಾಗಿ 'ಪರದನಪಟ್ಟಿಗೆ'ಯನ್ನೂ (= ಶೆಟ್ಟಿ ಪಟ್ಟ ?) ಮುಟ್ಟಿವಾಳ ಎಂಬ (ಗ್ರಾಮವನ್ನೂ ?) ಕೊಟ್ಟಂತೆ ಹೇಳಿದೆ.[52] ಶ್ರೀ ತ್ರಿಭುವನಮಲ್ಲದೇವನು ತನ್ನ ಅಳಿಯ ಜಯಕೇಶಿದೇವನ ವಿವಾಹದ ಸಮಯದಲ್ಲಿ ಕನಕಾಪುರವನ್ನು ಸೌರಾಷ್ಟ್ರದ ಸೋಮೇಶ್ವರನ ಧೂಪಕ್ಕಾಗಿ ಬಿಟ್ಟು, ಆ ದಾನವನ್ನು ಅಳಿಯನ ಕೈಯಲ್ಲಿ ಕೊಡಿಸುತ್ತಾನೆ.[53] ತಂದೆಯ ಮನೆಯಿಂದ ಪತಿಗೃಹಕ್ಕೆ ಹೋಗುವಾಗ ತಂದೆ ತಾಯ್ಗಳು ಮಗಳಿಗೆ ಕೇಳಿ ಕೇಳಿದುದನ್ನು ಕೊಟ್ಟಂತೆ ಪಂಪನು ಹೇಳುತ್ತಾನೆ.[54]

## ಬಹುಪತ್ನೀಕತ್ವ

ಬಹುಪತ್ನೀಕತ್ವಕ್ಕೆ ಮನುವಿನ ಒಪ್ಪಿಗೆಯಿದೆ. ಆದರೆ ಅವನ ನಿಬಂಧನೆಗಳು ಮಾತ್ರ ವಿಚಿತ್ರವಾಗಿವೆ. ಆಯಾ ವರ್ಣದವರು ತಮ್ಮ ವರ್ಣದ ಒಬ್ಬ ಸ್ತ್ರೀಯನ್ನು ಮದುವೆ ಮಾಡಿಕೊಳ್ಳಬೇಕು. ಅವಳೇ ಅವನ ಧರ್ಮಪತ್ನಿ. ಅವನು ಇಷ್ಟಪಟ್ಟರೆ ಕೆಳಗಿನ ವರ್ಣಗಳಿಗೆ ಸೇರಿದ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳಬಹುದು. ಹೀಗೆ ಬ್ರಾಹ್ಮಣನಾದವನು ತನ್ನ ಧರ್ಮಪತ್ನಿಯಲ್ಲದೆ ಕೆಳಗಿನ ವರ್ಣಗಳಿಂದ ಮೂವರನ್ನೂ, ಕ್ಷತ್ರಿಯನು ಇಬ್ಬರನ್ನೂ, ವೈಶ್ಯನು ಒಬ್ಬಳನ್ನೂ ಮದುವೆಯಾಗಬಹುದು. ಶೂದ್ರನು ಎರಡನೆಯ ಪತ್ನಿಯನ್ನು ಪಡೆಯಲು ಅವಕಾಶವಿಲ್ಲ[55] (ಇದನ್ನೇ 'ಅನುಲೋಮವಿವಾಹ'ವೆಂದು ಕರೆಯುವುದು).

ಪ್ರಾಚೀನ ಕರ್ನಾಟಕದಲ್ಲಿ ಬಹುಪತ್ನೀಕತ್ವದ ಪದ್ಧತಿಯು ತುಂಬಾ ಪ್ರಬಲವಾಗಿದ್ದಂತೆ ತೋರುತ್ತದೆ. ರಾಜರಂತೂ ಯಾವಾಗಲೂ 'ಬಹುವಲ್ಲಭ'ರು. ರಾಜನ ಪತ್ನಿಯರಲ್ಲಿ ಹಿರಿಯವಳೇ 'ಅಗ್ರಮಹಿಷಿ' ಅಥವಾ 'ಪಿರಿಯರಸಿ'. ಅವಳಿಗೂ ಉಳಿದ ರಾಣಿಯರಿಗೂ ಸಾಕಷ್ಟು ತಿಕ್ಕಾಟ ನಡೆಯುತ್ತಿದ್ದಿರಬೇಕು. ಏಕೆಂದರೆ ಅನೇಕ ಶಾಸನಗಳಲ್ಲಿ ಪಿರಿಯರಸಿಯರನ್ನು 'ಸವತಿಮದ ಭಂಜನೆ' ಎಂಬುದಾಗಿ ಕರೆದಿರುವುದುಂಟು.[56] ಸೋಮೇಶ್ವರ ಎಂಬ ರಾಜನಿಗೆ ಒಟ್ಟು ನಾಲ್ವರು ಪತ್ನಿಯರಿದ್ದರು.[57] ಧವಳಶಂಖ, ಉದ್ದಂಡ, ಪುಂಡರೀಕ, ಕನಕದಂಡ, ಚಾಮರಸ್ತೋಮಗಳು ಪಟ್ಟದ ರಾಣಿಯ ಚಿಹ್ನಗಳಾಗಿದ್ದುವು.[58] (ಬಹುಶಃ ಉಳಿದವರಿಗೆ ಈ ಗೌರವಗಳಿದ್ದಿಲ್ಲವೆಂದು ಕಾಣುತ್ತದೆ.) ರಾಜರಲ್ಲದೆ ಉಳಿದವರಲ್ಲಿಯೂ ಬಹುಪತ್ನೀಕತ್ವದ ಸಂಪ್ರದಾಯವಿದ್ದಿತು. ನಾಗದೇವ ಎನ್ನುವವನು ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಎಂಬ ಸೋದರಿಯರನ್ನು, ಬಹುಶಃ ಒಂದೇ ಹಸೆಯಮೇಲೆ, ಮದುವೆ ಮಾಡಿಕೊಂಡಿದ್ದಂತೆ ರನ್ನನು ಹೇಳುತ್ತಾನೆ.[59] ಪೊಲೆಯಮ್ಮ ಎನ್ನುವವನ

---

[51] EI. XIII. p. 301, 1125 A.D.

[52] MAR (1936). p. 140, 1054 A.D.

[53] BKI. I. ii. 154, 1104 A.D.

[54] ಆದಿಪುರಾಣ, 4.57—"ಪೊಡೆನಡುವಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ..........."

[55] The Ordinances of Manu (Tr. Burnell.), III. pp. 12–13.

[56] BKI. I. i. 83, 1049 A.D. ಶಾಂತಲೆಯನ್ನು 'ಉದ್ವೃತ್ತ ಸವತಿ ಗಂಧವಾರಣೆ' ಎಂದು ಒಂದು ಶಾಸನದಲ್ಲಿ (EC. II. 132, 1123 A.D.) ಕರೆದಿದೆ.

[57] IA. XIX. p. 272, 1054 A.D.

[58] EC. XII. Gb. 13, 1140 A.D.

[59] ಅಜಿತ ಪುರಾಣ, 1.38, ವ –"ನಾಗದೇವನೆಂಬ ಪುರುಷ ರತ್ನಕ್ಕೆ...ಮಹಾಸತೀ ಕುಲತಿಲಕೆಯುಮೆನಿಸಿದತ್ತಿಮಬ್ಬೆಯುಂ ಪತಿವ್ರತಾಗುಣಮಂಡನಮಂಡಿತೆಯೆನಿಸಿದ ಗುಂಡಮಬ್ಬೆಯುಮೆಂಬ ಕನ್ಯಾರತ್ನದ್ವಯಮಂ ಕೊಟ್ಟು—"

ಕಾಳಿಯಬ್ಬೆ ಮತ್ತು ಮಲ್ಲಿಯಬ್ಬೆ ಎಂಬ ಸೋದರಿಯರನ್ನು ಮದುವೆ ಮಾಡಿಕೊಂಡಿದ್ದನು.[60] ಜೀಂಟಿಂಯ ತಿಪ್ಪೆಯ ನಾಯಕ ಎನ್ನುವವನಿಗೆ ಸೋವೆ ನಾಯಕಿತಿ ಮತ್ತು ಮಾಚವೆ ನಾಯಕಿತಿ ಎಂಬ ಇಬ್ಬರು ಪತ್ನಿಯರಿದ್ದರು.[61] ಎಡೆವರದೇವ ಎಂಬ ಸಾಮಂತನಿಗೆ ಮೂವರು ಪತ್ನಿಯರಿದ್ದರು.[62] ಮಾಚಗಾವುಂಡ ಎನ್ನುವವನ ನಾಲ್ಕನೆಯ ಹೆಂಡತಿ ಮಾಚಗಾವುಂಡಿಗೆ ಕಾಳಗಾವುಂಡ ಮತ್ತು ಲೆಂಕರಾಯರೆಂಬ ಮಕ್ಕಳಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[63]

ಮದುವೆಯ ಸಮಯದಲ್ಲಿ ಒಂದು ರೀತಿಯ ತೆರಿಗೆಯನ್ನು ಹಾಕುತ್ತಿದ್ದರೆಂದು ಕಾಣುತ್ತದೆ. (ಇದನ್ನು 'ತೆರಿಗೆ' ಎಂದು ಕರೆಯುವುದಕ್ಕಿಂತ ಊರಿನವರೇ ಮಾಡಿಕೊಂಡ ವ್ಯವಸ್ಥೆ ಎಂದು ಕರೆಯುವುದು ಉಚಿತ.) ಹಾಗೆ ಬಂದ ಹಣವನ್ನು ಊರಿನ ಕೆರೆಗೋ ದೇವಸ್ಥಾನಕ್ಕೋ ಬಿಟ್ಟುಕೊಡುತ್ತಿದ್ದರು. ಉದಾಹರಣೆಗೆ ಯಾವುದೋ ಊರಿನಲ್ಲಿ ಬ್ರಾಹ್ಮಣರ ಮದುವೆಯಾದರೆ ಮೂರು ಪಣಗಳನ್ನೂ, ಉಪನಯನವಾದರೆ ಎರಡು ಪಣಗಳನ್ನೂ, ಶೂದ್ರರ ಮದುವೆಯಾದರೆ ಒಂದು ಪಣವನ್ನೂ ಕೊಡಬೇಕೆಂದು ನಿಯಮವನ್ನು ಮಾಡಿ ಹಾಗೆ ಬಂದ ಹಣವೆಲ್ಲವನ್ನೂ ಆ ಊರಿನ ಕೆರೆಗೆ ಬಿಟ್ಟುಕೊಡುತ್ತಾರೆ.[64] ಮದುವೆಯ ಸಮಯದಲ್ಲಿ ಮದುವಣಿಗ ಮತ್ತು ಮದುವಣಿಗೆಯರು ತಲಾ ಒಂದು ಪಣವನ್ನು ಕೊಡಬೇಕೆಂದು ಬಳ್ಳಿಗಾವೆಯ ಸಿಪ್ಪಿಗರ ಸಂಘವು ತೀರ್ಮಾನಿಸಿ ಆ ಹಣವನ್ನು ಕುಸುಮೇಶ್ವರ ದೇವಸ್ಥಾನಕ್ಕೆ ಕೊಡಬೇಕೆಂದು ನಿರ್ಧರಿಸುತ್ತಾರೆ.[65] ಇದನ್ನೇ 'ಮದುವೆಯ ಪಂದರ ಪಣ'ವೆಂದು ಶಾಸನಗಳಲ್ಲಿ ಕರೆದಿರುವುದು.[66] (ಪಂದರ್ = ಮದುವೆಯ ಚಪ್ಪರ).[67] ಈ 'ಮದುವೆಯ ಪಂದರ ಪಣ'ವನ್ನು ಶ್ರೀ ರಾಮೇಶ್ವರ ದೇವರಿಗೆ ಕೊಡಬೇಕೆಂದು ಪಟ್ಟದ ರಾಣಿಯು ಆಜ್ಞೆ ಮಾಡುತ್ತಾಳೆ.

ಬಡವರ ಮದುವೆಗಳಿಗೆ, ಅದರಲ್ಲಿಯೂ ಬಡವರಾದ ಬ್ರಾಹ್ಮಣರ ಮದುವೆಗಳಿಗೆ ಧನ ಸಹಾಯವನ್ನು ಮಾಡುವುದು ಪುಣ್ಯದ ಕೆಲಸವೆಂದು ಭಾವಿಸಿದ್ದರು.[68] ಇದನ್ನೇ ಶಾಸನಗಳು "ಕನ್ಯಾದಾನ"[69]ವೆಂದು ಕರೆಯುವಂತೆ ಕಾಣಿಸುತ್ತದೆ.

## ಗೃಹಿಣೀ

"ಗೃಹ್ಯ ಸೂತ್ರಗಳ ಪ್ರಕಾರ ಮದುವೆ ಎನ್ನುವುದು ಗಂಡು ಮತ್ತು ಹೆಣ್ಣುಗಳು ಮಾಡಿಕೊಂಡ ಒಂದು ಕರಾರು ಅಲ್ಲ. ಅದು ಆತ್ಮ ಸಂಬಂಧಿಯಾದ ಒಂದು ಪವಿತ್ರ ಮಿಲನ. ಸಪ್ತಪದಿಯಾದ ಮೇಲೆ ವಧುವನ್ನು ಕುರಿತು ವರನು ಈ ರೀತಿ ಹೇಳುತ್ತಾನೆ—'ಮಮ ವ್ರತೇ ತೇ ಹೃದಯಂ ದಧಾನಿ, ಮಮ ಚಿತ್ತಂ ಅನುಚಿತ್ತಂ ತೇ ಅಸ್ತು' (= ನಿನ್ನ ಹೃದಯವನ್ನು ನನ್ನ ಹೃದಯದಲ್ಲಿ ಧರಿಸುತ್ತೇನೆ. ನಿನ್ನ ಚಿತ್ತವು ನನ್ನ

---

60 EC. VII. Sh. 10, C. 1085 A.D.

61 MAR (1937). p. 176, 1140 A.D.

62 EC. VII. Ci. 39, 1149 A.D.

63 EC. V. Bl. 202, 1138 A.D.

64 IA. XII. p. 223, 929–30 A.D.

65 EC. VII. Sk. 112, 1139 A.D.

66 EC. VII. Sk. 295, 1074 A.D.

67 ಈಗಲೂ ಈ ಪದ್ಧತಿಯು ಕೆಲವು ಹಳ್ಳಿಗಳಲ್ಲಿ ಜೀವಂತವಾಗಿದೆ. 'ಚಪ್ಪರದ ಹಣ'ವೆಂದು ಕರೆಯುವ ಅದನ್ನು ಊರಿನ ದೇವಸ್ಥಾನಕ್ಕೆ ಬಿಟ್ಟುಕೊಡುತ್ತಾರೆ.

68 EC. VIII. Sb. 138, 1145 A.D. ; EC. VIII. Sa. 109 (bis), 1042 A.D.

69 EC. VIII. Sb. 9, c. 800 A.D.

ಚಿತ್ತವನ್ನು ಅನುಸರಿಸಲಿ)."[70] ಪುರುಷನು ಆದಿಯಲ್ಲಿ ಒಬ್ಬೊಂಟಿಗನಾಗಿದ್ದನೆಂದೂ, ಏಕಾಂತವನ್ನು ಸಹಿಸಲಾರದೆ ಎರಡಾಗಿ ಒಡೆದನೆಂದೂ, ಅವರೇ ಗಂಡ ಹೆಂಡಿರಾದರೆಂದೂ ಯಾಜ್ಞವಲ್ಕ್ಯನು ಬೃಹದಾರಣ್ಯಕದಲ್ಲಿ ಹೇಳುತ್ತಾನೆ. ಈ ಹೇಳಿಕೆಯಲ್ಲಿ ಯಾಜ್ಞವಲ್ಕ್ಯನು "ಗಂಡು ಹೆಣ್ಣುಗಳ ಮಾನಸಿಕವಾದ ಐಕ್ಯವನ್ನು ಸ್ಪಷ್ಟಪಡಿಸಿದ್ದಾನೆ."[71] ಈ ದಾಂಪತ್ಯದ ಆದರ್ಶವನ್ನು ನೋಡಬೇಕಾದರೆ ರಘುವಂಶ ಕಾವ್ಯದ ಅಜನ ಮಾತುಗಳಿಗೆ ಹೋಗಬೇಕು. ದಿವಂಗತಳಾದ ತನ್ನ ಪತ್ನಿ ಇಂದುಮತಿಯನ್ನು ಕುರಿತು ಪ್ರಲಾಪಿಸುತ್ತಾ— "ನೀನು ನನ್ನ ಗೃಹಿಣಿ, ಸಚಿವೆ, ಏಕಾಂತದಲ್ಲಿ ಸಖಿ, ಕಲಾವಿಧಿಗಳಲ್ಲಿ ಪ್ರಿಯ ಶಿಷ್ಯೆ. ಕಠಿಣ ಮನಸ್ಕನಾದ ಮೃತ್ಯುವು ನಿನ್ನನ್ನು ಅಪಹರಿಸಿ ಏನನ್ನು ತಾನೆ ಅಪಹರಿಸದೆ ಬಿಟ್ಟಿತು ?" ಎಂದು ಹೇಳುತ್ತಾನೆ.[72]

ಕರ್ನಾಟಕದ ಶಾಸನಗಳು ಈ ಆದರ್ಶದಾಂಪತ್ಯವನ್ನು ಎತ್ತಿಹಿಡಿಯುತ್ತವೆ. ಹೆಂಡತಿಯು ಗಂಡನ ವಿಷಯದಲ್ಲಿ ಏಕನಿಷ್ಠೆಯನ್ನು ತಾಳಬೇಕೆಂದು ಒತ್ತಿಹೇಳುವುದರ ಜೊತೆಯಲ್ಲಿ[73] ಗಂಡನೂ ಕೂಡ ತನ್ನ ಪತ್ನಿಯ ವಿಷಯದಲ್ಲಿ ಅಷ್ಟೇ ಪ್ರಾಮಾಣಿಕತೆಯನ್ನು ತೋರಿಸಬೇಕೆಂದು ಹೇಳುತ್ತವೆ.[74] ಸ್ತ್ರೀಯಾದವಳು ಹುಟ್ಟಿದ ಕುಲ ಮತ್ತು ಕೊಟ್ಟ ಕುಲಗಳೆರಡರ ಮರ್ಯಾದೆಯನ್ನು ಕಾಪಾಡಬೇಕೆಂಬುದು ಆ ಕಾಲದ ಆದರ್ಶವಾಗಿದ್ದಿತು.[75] ಸಂಸಾರದಲ್ಲಿ ಗೃಹಿಣಿಯ ಸ್ಥಾನವೇನು ಎಂಬುದನ್ನು ನಿರ್ಧರಿಸಲು ನಮಗೆ ಶಾಸನಗಳು ಅಷ್ಟಾಗಿ ಸಹಾಯ ಮಾಡುವುದಿಲ್ಲ. ಪತಿಯು ಮಡಿದಾಗ ದುಃಖವನ್ನು ತಾಳಲಾರದೆ ಸ್ತ್ರೀಯರು ಸಹಗಮನ ಮಾಡಿದ ನಿದರ್ಶನಗಳನ್ನು ಹಿಂದೆಯೇ ನೋಡಿದ್ದೇವೆ. ಆದರೆ ಸತಿಯು ಮಡಿದಾಗ ಪತಿಗೆ ಬಹುದುಃಖವಾಗಿ, ಅವಳ ಸ್ಮಾರಕವಾಗಿ ಒಂದು ಕಲ್ಲನ್ನು ನಿಲ್ಲಿಸಿದ ಅತ್ಯಪೂರ್ವ ನಿದರ್ಶನವೊಂದಿದೆ. ಕೊಲ್ಹಾಪುರ ಜಿಲ್ಲೆ[76]ಯ ಸಂಗ್ಲಿ ಎಂಬ ಹಳ್ಳಿಯ ಒಂದು ಹೊಲದಲ್ಲಿ ಶಿಲ್ಪವಿರುವ ಒಂದು ಕಲ್ಲು ಸಿಕ್ಕಿತು. ಅದರ ಮೇಲೆ ಚಿತೆಯ ಮೇಲೆ ಮಲಗಿರುವ ಒಬ್ಬ ಸ್ತ್ರೀಯ ಚಿತ್ರವಿದ್ದದ್ದರಿಂದ ಅದು ಮಾಸ್ತಿಕಲ್ಲೆಂಬ ಭಾವನೆ ಬಂದು ಅದರ ಮೇಲೆ ಒಂದು ದೇವಾಲಯವೂ ಬೆಳೆಯಿತು. ವಾಸ್ತವವಾಗಿ ಅದು ಮಾಸ್ತಿಕಲ್ಲಲ್ಲ. ಆ ಕಲ್ಲಿನ ಮೇಲೆ ಒಂದು ಸಂಸ್ಕೃತ ಶಾಸನವೂ ಇದೆ. ಹಾಲೀದೇವಿ ಎಂಬ ಪ್ರೀತಿಯ ರಾಣಿಯು (ಅವಳ ಗಂಡನ ಹೆಸರು ಅಳಿಸಿ ಹೋಗಿದೆ) ತನ್ನ ಚಿಕ್ಕ ವಯಸ್ಸಿನಲ್ಲೇ, ಸ್ವರ್ಗದಲ್ಲಿ ತನ್ನ ಸದ್ಗುಣಗಳನ್ನು ಕಾಪಿಡುವ ಉದ್ದೇಶದಿಂದಲೋ ಏನೋ ಎಂಬಂತೆ, ಮಡಿಯುತ್ತಾಳೆ. ಅವಳ ಮರಣದ ಸ್ಮಾರಕ

---

70 V.M. Apte : Social and Religious life in the Gṛhyasūtras (1954), p. 39.

71 P. N. Prabhu : Hindu Social Organisation, p. 228.

72 ರಘುವಂಶ, VIII. 67. "ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ। ಕರುಣಾವಿಮುಖೇನ ಮೃತ್ಯುನಾ ಹರತಾ ತ್ವಾಂ ವದ ಕಿಂ ನ ಮೇ ಹೃತಂ ॥"

73 EC. VIII. Nr. 47, 1062 A.D. ಈ ಶಾಸನದಲ್ಲಿ ಚಾಗಿಯಬ್ಬರಸಿ ಎಂಬ ಸಾಧ್ವಿಯ ಗುಣಕಥನವೂ, ದುಷ್ಟ ಸ್ತ್ರೀಯರ ವಿಡಂಬನವೂ ಸ್ವಲ್ಪ ವಿಸ್ತಾರವಾಗಿ ಬಂದಿವೆ.

74 EC. VIII. Sk. 287, 1012 A.D. ಮಾದಿಮಯ್ಯ ಎನ್ನುವವನನ್ನು 'ಸ್ವದಾರರತಿಧರ್ಮನಿರತನ್' ಎಂದು ಶಾಸನವು ಕರೆಯುತ್ತದೆ.

75 EC. IV. Hg. 18,1057 A.D. ಸಹಗಮನವನ್ನು ಮಾಡಿದ ದೇಕಬ್ಬೆಯ ಈ ಮಾತುಗಳನ್ನು ನೋಡಿ : "ನುಗುನಾಡಧಿಪತಿ ರವಿಗನ ಮಗಳಾಗಿಯುಮಂತೆ ನಸಿಲೆ ನಾಡಧಿಪತಿಗಾಂ ನೆಗಳೆ ಸತಿಯಾಗಿ ಬಾಳ್ವುದು ಬಗೆದರ್ಪನೆ ಕೊಟ್ಟ ಕೊಂಡ ಮನೆಯೆಸಮಟಿಯಲ್."

76 ಕೊಲ್ಹಾಪುರವು ಹಿಂದೆ ಕನ್ನಡ ಪ್ರದೇಶವಾಗಿದ್ದಿತು ಎಂಬುದಕ್ಕೆ ಅಲ್ಲಿ ದೊರಕಿರುವ ನೂರಾರು ಕನ್ನಡ ಶಾಸನಗಳೇ ಆಧಾರವಾಗಿವೆ. ಪ್ರೊ॥ ಕೆ. ಜಿ. ಕುಂದಣಗಾರ ಅವರು ಸಂಪಾದಿಸಿರುವ ಕೊಲ್ಹಾಪುರದ ಸುತ್ತಮುತ್ತಣ ಶಾಸನಗಳ ಸಂಪುಟವನ್ನು ನೋಡಿ.

ವಾಗಿ, ಮತ್ತು ತನ್ನ ಪ್ರೀತಿಯ ಸ್ಮಾರಕವಾಗಿ ಅವಳ ಗಂಡನು ಶಿಲೆಯ 'ಚೈತ್ಯಕ'ವನ್ನು ನಿಲ್ಲಿಸುತ್ತಾನೆ.[77] ನಮಗೆ ತಿಳಿದಮಟ್ಟಿಗೆ ಕರ್ನಾಟಕದಲ್ಲಿ ಈ ರೀತಿಯ ಸ್ಮಾರಕಗಳು ಅತ್ಯಪೂರ್ವ. ಈ ರಾಣಿಯರಲ್ಲಿ ಕೆಲವರಾದರೂ ರಾಜ ತಂತ್ರದಲ್ಲಿ ಪ್ರವೀಣರಾಗಿದ್ದು ಆಡಳಿತ ವಿಷಯದಲ್ಲಿ ರಾಜರು ಅವರ ಸಲಹೆಗಳನ್ನು ಪಡೆಯುತ್ತಿದ್ದಂತೆ ಊಹಿಸ ಬಹುದು. ಶಾಂತಲೆಯನ್ನು 'ವಿವೇಕೈಕ ಬೃಹಸ್ಪತಿ'ಯೆಂದು ಶಾಸನಗಳು ಹೊಗಳುತ್ತವೆ.[78] ಗಂಗಸೇನಾಪತಿಯ ಹೆಂಡತಿ ಲಕ್ಷ್ಮೀದೇವಿಯನ್ನು 'ಕಾರ್ಯೇ ನೀತಿವಧೂ' ಎಂದು ಒಂದು ಶಾಸನವು ಹೊಗಳಿದೆ.[79]

ಗೃಹಿಣಿಯಾದವಳಿಗೆ 'ಮಹಾಸತಿ'[80] ಎಂದು ಕರೆಯಿಸಿಕೊಳ್ಳುವುದರಲ್ಲಿ ಎಷ್ಟು ಹೆಮ್ಮೆಯೋ 'ಪುತ್ರವತಿ'[81] ಎಂದು ಕರೆಯಿಸಿಕೊಳ್ಳುವುದರಲ್ಲಿಯೂ ಅಷ್ಟೇ ಹೆಮ್ಮೆ. ತಾಯಿಯೇ ಮಗುವಿನ ಮೊದಲ ಉತ್ತಮ ಬೋಧಕಳೆಂದು ಕೆಲವು ಶಾಸನಗಳು ಅಭಿಪ್ರಾಯಪಡುತ್ತವೆ.[82]

## ವಿಧವೆ

ವಿಧವೆಯರು ಇಲ್ಲವೇ ಸಹಗಮನವನ್ನು ಮಾಡುತ್ತಿದ್ದರು, ಅಥವಾ ಉಳಿದ ಜೀವನವನ್ನು ಕಠಿಣ ವ್ರತಗಳಲ್ಲಿ ಕಳೆಯುತ್ತಿದ್ದರು. ಇದಕ್ಕೆ ಸೋದರಿಯರಾದ ಗುಂಡಮಬ್ಬೆ ಮತ್ತು ಅತ್ತಿಮಬ್ಬೆಯರೇ ನಿದರ್ಶನ. ಇವುಗಳನ್ನು ಹಿಂದಿನ ಅಧ್ಯಾಯವೊಂದರಲ್ಲಿ ವಿಸ್ತಾರವಾಗಿ ಪರಿಶೀಲಿಸಲಾಗಿದೆ. ಕೆಲವರು ತಮ್ಮ ಗಂಡನ ಸಾವಿನ ನಂತರ ಗಂಡನಂತೆಯೇ ನಾಡಪ್ರಭುತ್ವವನ್ನು ವಹಿಸಿ ನಾಡನ್ನು ಆಳಿದಂತೆ ತಿಳಿದುಬರುತ್ತದೆ.[83] ವಿಧವೆಯರ ಪುನರ್ವಿವಾಹಕ್ಕಾಗಲಿ, 'ನಿಯೋಗ'[84]ಕ್ಕಾಗಲಿ ಅವಕಾಶವಿರಲಿಲ್ಲ.

## ಸ್ತ್ರೀಯರು ಮತ್ತು ಧರ್ಮ

ಜೈನಧರ್ಮದಲ್ಲಿ ಹಲವರು ಸ್ತ್ರೀಯರು ಕಂತಿ ಅಥವಾ ಸನ್ಯಾಸಿನಿಯರಾಗಿ ಸನ್ಯಸನ ವಿಧಿಯಿಂದ ಮರಣ ವನ್ನು ಹೊಂದಿದಂತೆ ಅನೇಕ ಶಾಸನಗಳು ತಿಳಿಸುತ್ತವೆ.[85] ಕಂತಿಯರಲ್ಲದ ಹಲವರೂ ಜೈನ ಧರ್ಮಕ್ಕಾಗಿ ಶ್ರಮಿಸಿ,

---

[77] EI. XXVIII. p. 132, C. 500 A.D. "ಓಂ ಶ್ರಿ [ೀಪು]....[ಲಾ]ಂಛನಸ್ಯ ನೃಪತೇರ್ಯಾ ಹಾಲೀ ದೇವೀತ್ಯಭೂತ್ ಭಾರ್ಯಾ ಸಚ್ಚರಿತೇನ ಭ[ರ್]ತೃ....ಪುಣ್ಯಾ [ನಾ]ಂ ಪರಿರಕ್ಷಣಾರ್ಥಮುಜರನ್ ತಸ್ಯಾ ಗತಾಯಾ [ದಿ]ವಂ ಪ್ರೀತ್ಯಾ ಶೈಲಮಿದಂ ಸ್ವಯಂ(ಯ)ನ್ ನೃಪತಿನಾ ಸಂಸ್ಥಾಪಿತಂ ಚ್ [ಐತ್ಯಕಂ]."

[78] EC.II. 132, 1123 A.D.

[79] EC. II. 130, C. 1118 A.D.

[80] BKI. I. ii. 177, 1125 A.D.

[81] ಅದೇ.

[82] "ನುಡಿವುದು ಸತ್ಯದೊಳು ನಡೆವುದುತ್ತಮ ಧರ್ಮದೊಳ್ ಒಳ್ಪನೇಳ್ಗೆಯಂ ಪಿಡಿ ಪಿಡಿದಂತುಟಂ ಬಿಡದಿರೆಂದಿರುಗಂ ಮೊಲೆಯುಣ್ಬ ಕಾಲದೊಳು ತಡೆಯದೆ ಕೇಳುದಾತ್ತ ಗುಣಸಿಂ ತಿಳಿಯುಮ್ಮಪನೆಂದು ಗಲ್ಲಮಂ ಮಿಡಿಮಿಡಿದಂದು ತಾಯ್ಕಲಿಸೆ ಕಲ್ತನಖಂಡಿತ ಚಂಡವಿಕ್ರಮು." —(EC. VII. Ci. 61, 1125 A.D.) ಇದರೊಡನೆ ಹಂಪೆಯ ಲಕ್ಷ್ಮೀಧರಾಮಾತ್ಯನ ಶಾಸನವನ್ನು ಹೋಲಿಸಬಹುದು.

[83] EC. VII. Sk. 918 A.D

[84] 'ನಿಯೋಗ' ಎಂದರೆ ಮಡಿದ ಗಂಡನ ಸೋದರನ ಸಂಬಂಧದಿಂದ ಮಕ್ಕಳನ್ನು ಪಡೆಯುವುದು. ಕ್ರಿ. ಪೂ. ದ ಶತಮಾನಗಳಲ್ಲಿ ಈ ಪದ್ಧತಿಯಿತ್ತು. ವಿಧವಾ ವಿವಾಹಕ್ಕೆ ವೇದಗಳ ಒಪ್ಪಿಗೆಯಿದೆ. ಇತ್ತೀಚಿನ ಸ್ಮೃತಿಗಳು ವಿಧವಾ ವಿವಾಹವನ್ನು ಖಂಡಿಸುತ್ತವೆ. ವಿವಾಹವು ನಿಶ್ಚಯವಾಗಿ ಮದುವೆ ಆಗುವ ಮೊದಲೇ ವರನು ತೀರಿಹೋದರೂ ಹುಡುಗಿ ಯನ್ನು ವಿಧವೆಯೆಂದೇ ಭಾವಿಸಬೇಕೆನ್ನುವಷ್ಟು ದೂರ ಕೆಲವರು ಹೋಗುತ್ತಾರೆ [Altekar : The Position of Women in Hindu Civilization, pp. 144–155].

[85] EC. II. 76, C. 700 A.D.; EC. II. 97, C. 700 A.D.

ಕೊನೆಯಲ್ಲಿ ಸನ್ಯಸನ ವಿಧಿಯಿಂದ ಪ್ರಾಣವನ್ನು ಬಿಟ್ಟರು.[86] ಉಳಿದ ಎಲ್ಲ ಧರ್ಮಗಳಿಗಿಂತ ಹೆಚ್ಚಾಗಿಯೇ ಜೈನಧರ್ಮವು ಸ್ತ್ರೀಯರಿಂದ ಉಪಕೃತವಾಗಿದೆ. ಜಕ್ಕಮವ್ವೆ ಎನ್ನುವವಳು 'ನಯಣದ ದೇವರ'ನ್ನು ಮಾಡಿಸಿದಂತೆ ಒಂದು ಶಾಸನವು ತಿಳಿಸುತ್ತದೆ. ಪೋಚಿಕಬ್ಬೆ ಎನ್ನುವವಳು ತನ್ನ ಸಮಸ್ತವನ್ನೂ ಜೈನಧರ್ಮಕ್ಕೆ ಮೀಸಲಿಟ್ಟು ಹಲವಾರು ಚೈತ್ಯಾಲಯಗಳನ್ನು ಮಾಡಿಸಿದಳು.[87] ಅವಳ ಸಲ್ಲೇಖನ ವ್ರತವನ್ನು ನಿರೂಪಿಸುವುದು ರೋಮಾಂಚನವನ್ನು ತರುತ್ತದೆಯೆಂದು ಅದೇ ಶಾಸನವು ವರ್ಣಿಸುತ್ತದೆ.[88] ಅವರಲ್ಲಿ ಹಲವರು ಬಹು ಉದಾರಬುದ್ಧಿಯುಳ್ಳವರಾಗಿದ್ದರು. ಚಾಗಲದೇವಿ ಎಂಬಾಕೆಯು ಸ್ವತಃ ಜೈನಳಾಗಿದ್ದರೂ, ಬಳ್ಳಿಗಾವೆಯಲ್ಲಿ ಚಾಗೇಶ್ವರವೆಂಬ ಶಿವದೇವಾಲಯವನ್ನು ಕಟ್ಟಿಸಿ ಹಲವಾರು ಬ್ರಾಹ್ಮಣರಿಗೆ ಕನ್ಯಾದಾನ ಮುಂತಾದ ದಾನಗಳನ್ನು ಮಾಡುತ್ತಾಳೆ.[89] (ಕನ್ಯಾದಾನವೆಂದರೆ ಬಹುಶಃ ಮದುವೆಗೆ ಧನಸಹಾಯ ಮಾಡುವುದೆಂದರ್ಥ.) ಶಾಂತಲೆಯ ಒಲವು ಜೈನಧರ್ಮದ ಕಡೆಗಿದ್ದರೂ ಅವಳು ಎಲ್ಲ ಧರ್ಮಗಳಿಗೂ ಸಮಾನ ಪ್ರೋತ್ಸಾಹವನ್ನಿತ್ತಿದ್ದಳು[90]. ಹೀಗೆ ಪ್ರಾಚೀನ ಕರ್ನಾಟಕದ ಸ್ತ್ರೀಯರಲ್ಲಿ ಜೈನಧರ್ಮದ ಅನುಯಾಯಿಗಳು ಹೆಚ್ಚು ಜಾಗ್ರತರಾಗಿದ್ದಂತೆ, ಧಾರ್ಮಿಕ ವಿಷಯಗಳಲ್ಲಿ ಇತರರಿಗಿಂತ ಹೆಚ್ಚಾಗಿ ಭಾಗವಹಿಸಿದಂತೆ ಕಾಣುತ್ತದೆ. ಪ್ರಾಚೀನ ಕರ್ನಾಟಕವು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದ ಅತ್ತಿಮಬ್ಬೆ ಮತ್ತು ಶಾಂತಲೆಯರಿಬ್ಬರೂ ಜೈನಧರ್ಮದ ಕೊಡುಗೆಗಳು.

ಜೈನಧರ್ಮದಲ್ಲಿದ್ದಂತೆ ಹೆಚ್ಚು ಸಂಖ್ಯೆಯಲ್ಲಿ ಹಿಂದೂ ಧರ್ಮದಲ್ಲಿ ಸನ್ಯಾಸಿನಿಯರಿದ್ದಿಲ್ಲವೆಂದು ಕಾಣುತ್ತದೆ. ರೇವಬ್ಬೆಗೊರವಿ ಎಂಬ ಒಬ್ಬ ಸನ್ಯಾಸಿನಿಯ ಹೆಸರು ಮಾತ್ರ ಒಂದು ಶಾಸನದಲ್ಲಿ ದೊರೆಯುತ್ತದೆ.[91] ಹಿಂದೂಧರ್ಮದ ಧಾರ್ಮಿಕ ಚಟುವಟಿಕೆಗಳಲ್ಲಿಯೂ ಸ್ತ್ರೀಯರು ಗಮನಾರ್ಹ ಪಾತ್ರವನ್ನು ವಹಿಸಿದ್ದಾರೆ. ಮಾಚಕ್ಕ ಎನ್ನುವವಳು ಸ್ವಯಂಭೂ ಕಲಿದೇವ ಸ್ವಾಮಿಯ ನೈವೇದ್ಯಕ್ಕೆ ಬಿಟ್ಟ ದಾನವನ್ನು ಇಲ್ಲಿ ಹೆಸರಿಸಬಹುದು.[92] ವಿಷ್ಣುವರ್ಧನನ ಪತ್ನಿ ಬಮ್ಮಲದೇವಿಯು ನಾಗಮಂಗಲದಲ್ಲಿ ಶಂಕರನಾರಾಯಣ ದೇವಸ್ಥಾನವನ್ನು ಮಾಡಿಸಿದಳು.[93] ಎಲ್ಲ ಧರ್ಮಗಳಿಗೂ ಪ್ರೋತ್ಸಾಹವನ್ನಿತ್ತಿದ್ದ ಅಕ್ಕಾದೇವಿಯು ತ್ರಿಮೂರ್ತಿಗಳ ದೇವಸ್ಥಾನವನ್ನು ಕ್ರಿ. ಶ. 1022ರಲ್ಲಿ ಮಾಡಿಸಿದುದನ್ನು ಒಂದು ಶಾಸನವು ನಿರೂಪಿಸುತ್ತದೆ.[94]

ಹತ್ತನೆಯ ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಕನ್ನಡ ನಾಡನ್ನು ಬೆಳಗಿದ ಇಬ್ಬರು ಮಹಿಳೆಯರ ಸಾಧನೆ ಸಿದ್ಧಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸುವುದು ಅನುಚಿತವಾಗಲಾರದು. ಅವರಲ್ಲಿ ಮೊದಲನೆಯವಳು ಮತ್ತು ಅಗ್ರಗಣ್ಯಳು ಅತ್ತಿಮಬ್ಬೆ. ಇವಳ ಪರಿಚಯವನ್ನು ಕನ್ನಡಲೋಕಕ್ಕೆ ಮೊತ್ತಮೊದಲು ಮಾಡಿಕೊಟ್ಟವರು ಪ್ರೊ|| ತೀ. ನಂ. ಶ್ರೀಕಂಠಯ್ಯನವರು.[95] ಅವರ ಲೇಖನಕ್ಕೆ ಬಹುಮಟ್ಟಿಗೆ ಆಧಾರ ರನ್ನನ ಅಜಿತ ಪುರಾಣ ಮತ್ತು ಲಕ್ಕುಂಡಿಯ ಎರಡು ಶಾಸನಗಳು. ಅತ್ತಿಮಬ್ಬೆಗೆ ಸಂಬಂಧಿಸಿದ ಸಂಗತಿಗಳನ್ನು ಹೀಗೆ

---

86 EC. II. 129, 1120 A.D.

87 EC. II. 118, 1120 A.D.—"ತನುವಂ ಜಿನಪತಿನುತಿಯಿಂ ಧನಮಂ ಮುನಿಜನದ ತೃಪ್ತಿಯಿಂ ಸಫಳಮಿದಿಂನೆನಗೆಂಬೀ ನಂಬುಗೆಯೊಳ್ಮನಮಂ ಜಗದೊಳಗೆ ಪೂಚಿಕಬ್ಬೆಯೆ ನಿಱಿಪಳ್."

88 ಅದೇ.

89 EC. VIII. Nr. 47, 1062 A.D.

90 "ಚತುಸ್ಸಮಯ ಸಮುದ್ಧರಣ ಕಾರಣೆಯುಂ" [EC. II. 132, 1123 A.D.]

91 BKI. I. i. 50, 1005 A.D.

92 SII. IX. i. 90, 1113 A.D.

93 EC. IV. Ng. 3, 1135 A.D.

94 IA. XVIII. p. 273, 1022 A.D.

95 'ಸಮಾಲೋಕನ'ದಲ್ಲಿ 'ದಾನಚಿಂತಾಮಣಿ ಅತ್ತಿಮಬ್ಬೆ' ಎಂಬ ಲೇಖನವನ್ನು ನೋಡಿ. ಈ ಲೇಖನವು 1948ರಲ್ಲಿ ಪ್ರಬುದ್ಧ ಕರ್ಣಾಟಕದಲ್ಲಿ ಮೊದಲು ಪ್ರಕಟವಾಯಿತು.

ಸಂಗ್ರಹಿಸಬಹುದು. ಚಾಳುಕ್ಯ ರಾಜ್ಯದಲ್ಲಿ ಹಿರಿಯ ಅಧಿಕಾರಿಯಾಗಿದ್ದ ಮಲ್ಲಪಯ್ಯ ಇವಳ ತಂದೆ. (ಇವನೂ, ಇವನ ತಮ್ಮ ಪೊನ್ನಮಯ್ಯನೂ ಸೇರಿ ಪೊನ್ನನಿಂದ ಶಾಂತಿಪುರಾಣವನ್ನು ಬರೆಯಿಸಿದರು.) ಅತ್ತಿಮಬ್ಬೆಯನ್ನೂ ಅವಳ ತಂಗಿ ಗುಂಡಮಬ್ಬೆಯನ್ನೂ ಚಾಳುಕ್ಯರಲ್ಲಿ ಚಮೂಪತಿಯಾಗಿದ್ದ ನಾಗದೇವನಿಗೆ ಕೊಟ್ಟಿದ್ದರು. ಅವರನ್ನು ಕೊಟ್ಟ ಮತ್ತು ತಂದುಕೊಂಡ ಕುಲಗಳೆರಡೂ ಶೌರ್ಯಕ್ಕೆ ಔದಾರ್ಯಕ್ಕೆ ಪ್ರಸಿದ್ಧವಾದುವು. ಅತ್ತಿಮಬ್ಬೆಗೆ ಅಣ್ಣಿಗದೇವನೆಂಬ ಚಿಕ್ಕವಯಸ್ಸಿನ ಮಗನಿದ್ದನು. ಅವಳ ಗಂಡ ನಾಗದೇವನು ಸ್ವರ್ಗವಾಸಿಯಾದಾಗ ಅವಳ ತಂಗಿ ಗುಂಡಮಬ್ಬೆಯು ಅಕ್ಕನನ್ನು ಒಪ್ಪಿಸಿ ಸಹಗಮನವನ್ನು ಮಾಡುತ್ತಾಳೆ.[96] ಗುಂಡಮಬ್ಬೆಯನ್ನು ಲೋಕವೆಲ್ಲ ಹೊಗಳಿತು. "ಆ ಮಹಾಸತೀತ್ವದ ಗೌರವವನ್ನು ತಂಗಿಗೆ ಬಿಟ್ಟುಕೊಟ್ಟು, ಪುತ್ರಪಾಲನೆಗಾಗಿ ಕುಂತಿಯಂತೆ ಅತ್ತಿಮಬ್ಬೆ ನಿಂತಳು; ಸನ್ಯಾಸವನ್ನು ಸ್ವೀಕರಿಸದೆ ಶ್ರಾವಕಿಯಾಗಿದ್ದುಕೊಂಡೇ ಜೈನ ವ್ರತನಿಷ್ಠೆಯ ಉಗ್ರದೀಕ್ಷೆಯನ್ನು ವಹಿಸಿದಳು.''[97] ಅವಳ ಉಗ್ರನಿಷ್ಠೆಯನ್ನೂ ತಪಸ್ಸನ್ನೂ ಔದಾರ್ಯವನ್ನೂ ರನ್ನಕವಿ ತನ್ನ ಅಜಿತಪುರಾಣದಲ್ಲಿ ಮನತುಂಬಿ ಹೊಗಳಿದ್ದಾನೆ. ಅವನೇ ಬರೆದಿರಬಹುದಾದ[98] ಲಕ್ಕುಂಡಿಯ ಶಾಸನದಲ್ಲಿಯೂ ಇದೇ ಪ್ರಶಂಸೆ ಬಂದಿದೆ.

ಅವಳು ರನ್ನನಿಂದ ಅಜಿತಪುರಾಣವನ್ನು ಹೇಳಿಸಿದಳು; ಮಣಿಕನಕ ಖಚಿತವಾದ ಸಾವಿರದ ಐನೂರು ಜಿನ ಪ್ರತಿಮೆಗಳನ್ನು ಮಾಡಿಸಿ ದಾನಮಾಡಿದಳು; ತನ್ನ ತಂದೆಯು ಪೊನ್ನನಿಂದ ಹೇಳಿಸಿದ್ದ ಶಾಂತಿಪುರಾಣದ ಪ್ರಾಶಸ್ತ್ಯವು ಕಡಮೆಯಾಗುತ್ತಿದ್ದುದನ್ನು ಗಮನಿಸಿ ಅದರ ಸಾವಿರ ಪ್ರತಿಗಳನ್ನು ಮಾಡಿಸಿ ಶಾಸ್ತ್ರದಾನವನ್ನು ಮಾಡಿದಳು; ಲಕ್ಕುಂಡಿಯಲ್ಲಿ ಕ್ರಿ. ಶ. 1007ರಲ್ಲಿ ಒಂದು ಸುಂದರವಾದ ಬಸದಿಯನ್ನು ಮಾಡಿಸಿದಳು. ಅವಳು ತನ್ನ ಜೀವಿತದ ಕಾಲದಲ್ಲಿಯೇ ಅನೇಕ ಮಹಿಮೆಗಳನ್ನು ಮೆರೆದಳು. ಜಿನನನ್ನು ಹೊತ್ತು ಬಂದ ಅತ್ತಿಮಬ್ಬೆಗೆ ಗೋದಾವರಿಯು ತನ್ನ ಪ್ರವಾಹವನ್ನು ನಿಲ್ಲಿಸಿತು; ಮದಿಸಿದ ಒಂದು ಆನೆ ಅವಳಿಗೆ ಶರಣಾಗಿ ಪದಕ್ಕೆರಗಿತು; ನದಿಯಲ್ಲಿ ಅಕಸ್ಮಾತ್ ಬಿದ್ದುಹೋದ ಜಿನಬಿಂಬವು ಎಂಟು ದಿನಗಳಲ್ಲಿ ಅವಳ ಕೈಗೆ ಬಂದಿತು; ಹೊತ್ತಿ ಉರಿಯುತ್ತಿದ್ದ ಅಗ್ನಿಯು ಇವಳ ಕೈಯ ಜಿನಗಂಧೋದಕ ಸೇಚನೆಯಿಂದ ತಣ್ಣಗಾಯಿತು–ಇತ್ಯಾದಿಗಳು ಅವಳು ಮೆರೆದ ಪವಾಡಗಳು. ಉನ್ನತ ಕುಕ್ಕುಟೇಶ್ವರನನ್ನು, ಎಂದರೆ ಬಹುಶಃ ಶ್ರವಣಬೆಳಗೊಳದ ಗೊಮ್ಮಟನನ್ನು ಕಾಣುವವರೆಗೆ ಆಹಾರವನ್ನು ಮುಟ್ಟುವುದಿಲ್ಲವೆಂದು ಅವಳು ಪ್ರತಿಜ್ಞೆ ಮಾಡಿ ದರ್ಶನಕ್ಕಾಗಿ ಬೆಟ್ಟವನ್ನೇರಿದಾಗ ಅವಳ ಆಯಾಸದ ಪರಿಹಾರಕ್ಕಾಗಿಯೋ ಏನೋ ಎಂಬಂತೆ ಅಕಾಲ ವೃಷ್ಟಿಯಾದ ಪವಾಡವನ್ನು ರನ್ನನು ಅಜಿತಪುರಾಣದಲ್ಲಿ ನಿರೂಪಿಸಿದ್ದಾನೆ. ಅದೇ ಪದ್ಯವು ಲಕ್ಕುಂಡಿ ಶಾಸನದಲ್ಲಿಯೂ ಉದ್ಧೃತವಾಗಿದೆ. ಅವಳ ಪವಾಡಗಳಲ್ಲಿ ಗೋದಾವರಿಯ ಪ್ರವಾಹವು ಇಳಿದುಹೋದದ್ದೂ ಅಷ್ಟೇ ಪ್ರಸಿದ್ಧವಾಗಿದೆ. ಏಕೆಂದರೆ ಈ ಪವಾಡವನ್ನು ಬ್ರಹ್ಮಶಿವನೂ ಹೇಳುತ್ತಾನೆ, ಮತ್ತೊಂದು ಶಾಸನವೂ ನಿರೂಪಿಸುತ್ತದೆ. (ಮುಂದೆ ನೋಡಿ).

---

[96] "ಎರಡೆ ವಲಂ ಕುಲವಧುಗಾ। ಚರಿಸಲ್ ಪತಿಯಿಂ ಪರೋಕ್ಷದೊಳ್ ಜಿನದೀಕ್ಷಾ। ಚರಣಂ ಮೇಣ್ ಶುಭ ಚರಿತದೆ। ಮರಣಂ ಮೇಣಳಿಪಿನಿಂದೆ ಬಾಳ್ವುದು ದೊರೆಯೆ॥ ಎಂದು ಪರಿಚ್ಛೇದಿಸಿ ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬದ್ಧಾಂಜಲಿಯಾಗಿ—

ನಿನಗೆ ಮಗಂ ಜಗತ್ತಿಳಕನಿರ್ದಪನಕ್ಕ ಮಗಂ ಸಮರ್ಥನ
ಪ್ಪಿನಮಿರು ನಾಗದೇವನೊಡನಾಂ ಬೆಸ [ಕೇ] ಳ್ದಪೆನೆಂದು ಬೇಡಿಕೊಂ
ಡಿನಿಯನನಪ್ಪಿಕೊಂಡುಚಿತಮಾಗೆಚಿತಾಗ್ನಿಯೊಳಣ್ಮಿಸತ್ತ ಸ
ಜ್ಜನಿಕೆಯ ಪೆಂಪು ಸಜ್ಜನಕೆ ಬಣ್ಣಿಸೆ ಸಂದುದು ಗುಂಡಮಬ್ಬೆಯಾ॥"

—ಅಜಿತಪುರಾಣ, 1. 46–7.

[97] ಸಮಾಲೋಕನ, ಪು. 145.

[98] ಇದು ಪ್ರೊ॥ ತೀ. ನಂ. ಶ್ರೀಕಂಠಯ್ಯನವರ ಸಾಧಾರವಾದ ಊಹೆ (ಅದೇ, ಪು. 154).

ಅತ್ತಿಮಬ್ಬೆಯ ಸಾಧನೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಒಂದು, ವೈಯಕ್ತಿಕವಾದ ತಪಸ್ಸು, ಕಠೋರ ನಿಯಮಾನುಸರಣೆ, ಜೈನಧರ್ಮದಲ್ಲಿ ಅದ್ಭುತವಾದ ವಿಶ್ವಾಸ. ಎರಡನೆಯದು, ಜೈನಧರ್ಮದ ಏಳಿಗೆಗಾಗಿ ಅವಳು ಪಟ್ಟ ಶ್ರಮ, ಮಾಡಿದ ತ್ಯಾಗ. ಮೂರನೆಯದು, ಕನ್ನಡ ಸಾಹಿತ್ಯಕ್ಕಾಗಿ ಅವಳು ಮಾಡಿರುವ ಸೇವೆ. ಇವುಗಳ ಜೊತೆಗೆ ಅವಳು ಚಾಳುಕ್ಯಚಕ್ರವರ್ತಿಯ ಗೌರವ, ಆರಾಧನೆಗಳಿಗೆ ಪಾತ್ರಳಾಗಿದ್ದಳು. ಹೀಗಾಗಿ ಅವಳು ತನ್ನ ಕಾಲದಲ್ಲಿಯೇ ಒಬ್ಬ ಅದ್ಭುತ ವ್ಯಕ್ತಿಯಾಗಿ ಪರಿಣಮಿಸಿದ್ದಲ್ಲದೆ ಮುಂದೆ ಇನ್ನೂರು ಮುನ್ನೂರು ವರ್ಷಗಳವರೆಗೆ ಕರ್ನಾಟಕದ ಜನಜೀವನದ ಮೇಲೆ ತುಂಬು ಪ್ರಭಾವವನ್ನು ಬೀರಿದಳು; ತಪಸ್ಸು, ಔದಾರ್ಯ, ಸತೀತ್ವಗಳಿಗೆ ಸಂಕೇತವಾಗಿ ಪರಿಣಮಿಸಿದಳು. "ನಮ್ಮ ನಾಡಿನಲ್ಲಿ ಹಿಂದೆ ಪ್ರಖ್ಯಾತಿಯಿಂದ ಬಾಳಿದ ಅನೇಕ ಮಹನೀಯರ ಹೆಸರುಗಳು ಮಾತ್ರ ಈಗ ಉಳಿದಿವೆ; ಅವರ ಬಾಳ್ವೆಯ ವಿವರಗಳು ಕನಸಿಗೂ ನಿಲುಕದಂತೆ ಅಳಿದಿವೆ. ಹೀಗಿರುವಲ್ಲಿ ಅತ್ತಿಮಬ್ಬೆಯಂಥ ಪಾವನ ಮಹಿಳೆಯ ಮೂರ್ತಿ ಹಿಂದಿನ ಕಾವ್ಯ ಶಾಸನಗಳಲ್ಲಿ—ಬಲುಮಟ್ಟಿಗೆ ರನ್ನ ಮಹಾಕವಿಯ ಕೃಪೆಯಿಂದ ಸ್ಫುಟವಾಗಿ ರೇಖೆಗೊಂಡಿರುವುದು ಕನ್ನಡಿಗರ ಪುಣ್ಯ. ಬಿಚ್ಚುಗೈಯ ಆಕೆಯ, ವಿವಿಧ ಮಹಾದಾನಗಳಿಂದ ಸಾರ್ಥಕವಾದ 'ದಾನ ಚಿಂತಾಮಣಿ'ಯೆಂಬ ಯಶೋಘೋಷ ಇಂದಿಗೂ ನಮ್ಮ ಕಿವಿಗಳಲ್ಲಿ ಮೊಳಗುತ್ತಿದೆ; ವ್ರತೋಪವಾಸಾದಿಗಳಿಂದ ತಾರಿದ ಆಕೆಯ ದೇಹದಲ್ಲಿ ದೀಪವರ್ತಿಯಂತೆ ಹೊಳೆದ ಧಾರ್ಮಿಕ ತೇಜಸ್ಸು ಒಂದು ಸಹಸ್ರಮಾನದವರೆಗೂ ತನ್ನ ಪ್ರಭೆಯನ್ನು ಬೀರಿದೆ".[99]

ಇಷ್ಟು ಪ್ರಭಾವಶಾಲಿಯಾದ ಅತ್ತಿಮಬ್ಬೆಯ ಪ್ರಭಾವವು ಮುಂದಿನ ಪೀಳಿಗೆಯ ಮೇಲೆ ಬಿದ್ದಿರುವುದಕ್ಕೆ ಶಾಸನಾಧಾರಗಳೂ, ಕಾವ್ಯಾಧಾರಗಳೂ ಹೇರಳವಾಗಿವೆ. ಶಾಸನಗಳಲ್ಲಿ 'ದಾನಚಿಂತಾಮಣಿ' ಎಂಬ ವಿಶೇಷಣವು ಬಂದಾಗಲೆಲ್ಲ[100] ಅತ್ತಿಮಬ್ಬೆಯ ನೆನಪಾಗುತ್ತದೆ. ಅವಳಿಂದ ಆ ವಿಶೇಷಣಕ್ಕೆ ಒಂದು ಸಾರ್ಥಕ್ಯ ಬಂದಿತೋ ಏನೋ! ಮುಂದಿನ ಶತಮಾನಗಳಲ್ಲಿ ದಾನಗುಣವನ್ನು ಹೊಗಳುವಾಗ ಅತ್ತಿಮಬ್ಬೆಯ ಆದರ್ಶವನ್ನು ಶಾಸನಗಳು ಎತ್ತಿಹಿಡಿಯುತ್ತವೆ. ಏಚಿಕಬ್ಬೆ ಎನ್ನುವವಳು ಅತ್ತಿಮಬ್ಬೆಯಂತೆ ದಾನವನ್ನು ಕೊಡುತ್ತಿದ್ದಳೆಂದು ಒಂದು ಶಾಸನವು ಪ್ರಶಂಸೆಮಾಡುತ್ತದೆ—"ದಾನದೊಳಭಿಮಾನದೊಳೀ ಮಾನಿನಿಗೆಣೆಯಿಲ್ಲ ಸತಿಯ....ಕೇನಾರ್ತ್ಥಿಯೆಂದು ಕುಡುವಳೆ ದಾನಮನೇಚಬ್ಬೆಯತ್ತಿಮಬ್ಬರಸಿಯವೋಲ್".[101] ಮಾಚಲೆ ಎನ್ನುವವಳು ತನ್ನ ನಾನಾ ಸದ್ಗುಣಗಳಿಂದ ರತಿ, ಸೀತೆ, ರೇವತಿ, ಅರುಂಧತಿ, ಅತ್ತಿಮಬ್ಬೆಯರಿಗೆ ಸದೃಶಳಾಗಿದ್ದಳು.—"ಮಾರನ ಸತಿಗಂ ಸೀತೆಗೆ ರೇವತಿಗನು(ರು)ಂಧತಿಗೆ ಅತ್ತಿಮಬ್ಬೆಗೆ ಸದೃಶಂ ಪೇಳು ಸಾರಗುಣಂ ಸೋಮನ ಸತಿಗುದಾರಗುಣಂ ನಿನ್ನನ್ನೆಯರಾರುಮಾರಯ್ವೆ ಧಾರಣಿಯೊಳು".[102] ಸುಮಾರು ನೂರಮೂವತ್ತೈದು ವರ್ಷಗಳಲ್ಲಿ ಅತ್ತಿಮಬ್ಬೆಯು ಪೌರಾಣಿಕ ವ್ಯಕ್ತಿಯಾಗಿ ಪರಿಣಮಿಸಿ ಸೀತೆ ಅರುಂಧತಿ ಮುಂತಾದ ಪತಿವ್ರತೆಯರ ಸಾಲಲ್ಲಿ ಸೇರಿಹೋಗಿದ್ದಳು. ಕ್ರಿ.ಶ. 1147ರ ಶಾಸನವೊಂದರಲ್ಲಿ ಬಾಚಲದೇವಿಯನ್ನು 'ನೂತನಾತ್ತಿಮಬ್ಬೆ' ಎಂದು ಕರೆದಿದೆ. ಅವಳು ಒಂದೇ ತಿಂಗಳಲ್ಲಿ ಬಸದಿಯ ದಕ್ಷಿಣ ಪಟ್ಟಶಾಲೆ

---

99 ಅದೇ, ಪು. 157.

100 EI.XV.p. 101, 1084 A.D.; EC.II. 132, 1123 A.D.; JISI.p. 229, 1094 A.D.

101 EC. II. 384, C. 1135 A.D.

102 EC. IV. Ng. 94, 1142 A.D.

ಯನ್ನು ಮಾಡಿಸುತ್ತಾಳೆ.[103] ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ನಿಂತು ತನ್ನ ಕಾಲದ ಜೈನಧರ್ಮವನ್ನೂ ಉಳಿದ ಧರ್ಮಗಳನ್ನೂ ಸಮೀಕ್ಷಿಸಿರುವ ಬ್ರಹ್ಮಶಿವನು ಅತ್ತಿಮಬ್ಬೆಯನ್ನು ಮನಸಾರೆ ಹೊಗಳಿದ್ದಾನೆ—

ಗುಣದ ಕಣಿ ದಾನಚಿಂತಾ
ಮಣಿ ವಿಮಳಚರಿತ್ರ ಜೈನಶಾಸನರಕ್ಷಾ
ಮಣಿ ಸಜ್ಜನೈಕಚೂಡಾ
ಮಣಿಯೆಂದೆಂದತ್ತಿಮಬ್ಬೆಯಂ ಪೊಗಳದರಾರ್ ॥

ಭರದಿಂ ಬಂದೊತ್ತೆ ಮುಂದೆಮ್ಮ ಸಕದೆಸಕದಿಂ ತೀವಿ ಮುಂದೊತ್ತೆ ಗೋದಾ
ವರಿ[104]ಭೂಪಂ ತೈಲಪಂ ನಿಸ್ತರಿಸು ಕಟಕಮಂ ಬೇಗಮಿನ್ನಬ್ಬ ನೀನೆಂ
ದೆರೆಯಲ್ಸರ್ವಜ್ಞನಂ ಪೊತ್ತಗಿಯದೆ ಪೊಕ್ಕೊಡಾ ವಾರಿ ಪೂರಂ
ಬಿರಿದತ್ತಾ ಚಕ್ರಿ ಪಾಯ್ದಂ ತೊರೆಯನಮಳ ಸಮ್ಯಕ್ತ್ವ ವಿಖ್ಯಾತಿಯಿಂದಂ ॥

ಅಕಳಂಕ ಚರಿತೆ ಜಿನಚರ
ಣಕಂಜಕಿಂಜಲ್ಕ ಪುಂಜ ರಂಜಿತತನು ಸ
ರ್ವಕಳಾವಿದೆ ಶೌಚಿ ಘಟಾಂ
ತಿಕೆ ದಾನವಿನೋದೆಯೆಂಬ ಬಿರುದಿಂ ನೆಗಳ್ದಳ್ ॥[105]

ಕ್ರಿ. ಶ. 1182ರ ಶಾಸನವೊಂದರಲ್ಲಿ ಅತ್ತಿಮಬ್ಬೆಯ ಹೆಸರಿದೆ. "ಗಿರಿಸುತೆಗೆ ಜಹ್ನುಕನ್ನೆಗೆ ಧರಣೀಸುತೆಗತ್ತಿಮಬ್ಬೆಗನುಪಮಗುಣದೊಳೊರೆಯೆನಲಿಂತೀ ಸಕಳೋರ್ವರೆಯೊಳ್ ಬಾಚವ್ವೆ ಶೀಲವತಿ ನೆಗಳ್ದಳ್."[106] ಇನ್ನೂ ಹಲವಾರು ಶಾಸನಗಳು ಅತ್ತಿಮಬ್ಬೆಯನ್ನು ಕೊಂಡಾಡುತ್ತವೆ.[107] ಪ್ರಾಚೀನ ಕರ್ನಾಟಕದ ಸಾಮಾಜಿಕ ಇತಿಹಾಸದಲ್ಲಿ ಕೆಲವು ಸನ್ಯಾಸಿವರ್ಗದ ವ್ಯಕ್ತಿಗಳನ್ನು ಬಿಟ್ಟರೆ ಮುಂದಿನ ಪೀಳಿಗೆಯ ಮೇಲೆ ಇಷ್ಟು ಪ್ರಭಾವವನ್ನು ಬೀರಿದ ವ್ಯಕ್ತಿಗಳು ಇಲ್ಲವೇ ಇಲ್ಲವೆನ್ನಬಹುದು.

ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳ ಸಾಮ್ರಾಜ್ಯವನ್ನು ಅಲಂಕರಿಸಿ ಕನ್ನಡ ನಾಡನ್ನು ಬೆಳಗಿದ ವ್ಯಕ್ತಿಯೆಂದರೆ ವಿಷ್ಣುವರ್ಧನನ ಪಟ್ಟದ ರಾಣಿಯಾಗಿದ್ದ ಶಾಂತಲೆ. ಅವಳು ಬಲಿಪುರ ಅಥವಾ ಬಳ್ಳಿಗಾವೆಯಲ್ಲಿ ಹುಟ್ಟಿದಳೆಂದು ಕಾಣುತ್ತದೆ ("ಬಲಿಪುರ ವರಕ್ಷೀರವಾರಾಶಿಜನಿತ ಕಮಳೆಯುಂ"[108]). ತಂದೆ ಶಿವಭಕ್ತನಾದ ಮಾರಸಿಂಗಮಯ್ಯ, ತಾಯಿ ಜಿನಭಕ್ತೆಯಾದ ಮಾಚಿಕಬ್ಬೆ. ಇವಳ ತಂದೆಯು ಕಟ್ಟಿಸಿದ ಧರ್ಮೇಶ್ವರನ ದೇವಸ್ಥಾನಕ್ಕೆ ಬಿಟ್ಟುಕೊಟ್ಟ ದತ್ತಿಯ ವಿಷಯವು ಬಂದಿರುವ ಶಾಸನದಲ್ಲಿ ಶಾಂತಲೆಯನ್ನು "ಧರ್ಮೇಶ್ವರ ವರಪ್ರಸಾದ ಪುತ್ರಿ" ಎಂದು ಕರೆದಿದೆ.[109] ಇದು ಹಾಸನ ತಾಲ್ಲೂಕಿನ ಗ್ರಾಮ ಎಂಬ ಊರಿನ

103 EC. VIII. Nr. 37, 1147 A.D.

104 ಅತ್ತಿಮಬ್ಬೆಯು ಸಮೀಪಿಸಿದಾಗ ಗೋದಾವರಿಯು ಪ್ರವಾಹವನ್ನು ನಿಲ್ಲಿಸಿದ ಪವಾಡವನ್ನು ಹಿಂದೆ ನೋಡಿದ್ದೇವೆ. ಬ್ರಹ್ಮಶಿವನೂ ಇದನ್ನು ಹೇಳುತ್ತಾನೆ; ಶ್ರವಣಬೆಳಗೊಳದ ಒಂದು ಶಾಸನವೂ ಇದನ್ನೇ ಒಂದು ಕಡೆ ನಿರೂಪಿಸುತ್ತದೆ.... "ಜಿನಧರ್ಮಾಗ್ರಣಿಯತ್ತಿಮಬ್ಬರಸಿಯಂ ಲೋಕಂ ಗುಣಂಗೊಳ್ವುದೇಕೆನೆ ಗೋದಾವರಿ ನಿಂದ ಕಾರಣದಿನ್ ಈಗಳು ಗಂಗ ದಂಡಾಧಿನಾಥನುಮಂ ಕಾವೇರಿ ಪೆರ್ಚ್ಚಿ ಸುತ್ತಿ ಪಿರಿದುಂ ನೀರೊತ್ತಿಯುಂ ಮುಟ್ಟಿತಿಲ್ಲೆನೆ ಸಮ್ಯಕ್ತ್ವದ ಪೆಂಪನೇ ನೆಱಿಯೆ ಬಣ್ಣಿಪ್ಪಣ್ಣನೇವಣ್ಣಿಪಂ" [EC. II. 73, 1118 A.D.] ಜೈನಧರ್ಮಕ್ಕೆ ಬಹುವಾಗಿ ಶ್ರಮಿಸಿರುವ ಮಹಾವ್ಯಕ್ತಿಗಳಲ್ಲಿ ಗಂಗರಾಜನೂ ಒಬ್ಬ. ಅವನೂ ಕೂಡ ಪ್ರವಾಹ ತುಂಬಿ ಬಂದ ಕಾವೇರಿಯನ್ನು ನಿಲ್ಲಿಸಿ ಅತ್ತಿಮಬ್ಬೆಯಂತೆಯೇ ಮಹಿಮೆಯನ್ನು ಮೆರೆದನೆಂದು ಶಾಸನವು ಹೇಳುತ್ತದೆ.

105 ಸಮಯಪರೀಕ್ಷೆ, 1. 38-40.

106 EC. II. Sb. 124, 1182 A.D.

107 EC. VIII. Sa. 159 ; Sb. 140 ; Sb. 345.

108 EC. V. Bl. 58, 1117 A.D.

109 EC. V. Hn. 116, 1123 A.D.

ಧರ್ಮೇಶ್ವರ ದೇವಸ್ಥಾನದ ಶಾಸನ. ಶಾಂತಲೆ ಹುಟ್ಟಿದ್ದು ಈ ಧರ್ಮೇಶ್ವರ ದೇವರ ವರಪ್ರಸಾದದಿಂದ ಅಲ್ಲ, ಬಳ್ಳಿಗಾವೆಯಲ್ಲಿದ್ದ ಧರ್ಮೇಶ್ವರ ದೇವರ ವರಪ್ರಸಾದದಿಂದ. ಬಳ್ಳಿಗಾವೆಯಲ್ಲಿ ಧರ್ಮೇಶ್ವರ ದೇವರ ದೇವಸ್ಥಾನ ವಿದ್ದಿತು ಎಂಬುದಕ್ಕೆ ಶಾಸನಾಧಾರವಿದೆ.[110] ಮಗಳ ಮೇಲಿನ ಪ್ರೀತಿಯಿಂದ, ಇಂತಹ ಮಗಳನ್ನು ಅನುಗ್ರಹಿಸಿದ ಧರ್ಮೇಶ್ವರ ದೇವರ ಮೇಲಿನ ಭಕ್ತಿಯಿಂದ ಮಾರಸಿಂಗಮಯ್ಯನು ಗ್ರಾಮದಲ್ಲಿ ಧರ್ಮೇಶ್ವರ ದೇವಸ್ಥಾನವನ್ನು ಕಟ್ಟಿಸಿರಬೇಕು. ಬಳ್ಳಿಗಾವೆಯು ಅವಳ ತಾಯಿ ಮಾಚಿಕಬ್ಬೆಯ ತವರೂರೆಂದೂ, ಮಾರಸಿಂಗಮಯ್ಯನ ಹುಟ್ಟೂರು ಗ್ರಾಮವೆಂದೂ ಇಷ್ಟರಿಂದ ಊಹಿಸಬಹುದೆ?

ಶಾಂತಲೆಯು ತನ್ನ ತಾಯ್ತಂದೆಯರಿಗೆ ಒಬ್ಬಳೇ ಮಗಳಾದುದರಿಂದ ಅವಳಿಗೆ ಬಾಲ್ಯದಲ್ಲಿ ಅತ್ಯುತ್ತಮ ವಿದ್ಯಾಭ್ಯಾಸವನ್ನು ಕೊಡಿಸಿರಬೇಕು. ಮುಂದೆ ಅವಳು ವಿಷ್ಣುವರ್ಧನನ ಕೈಹಿಡಿದು ಅವನ ಪಟ್ಟಮಹಿಷಿಯಾಗಿ[111] ಅವನ 'ಮನೋನಯನ ಪ್ರಿಯೆ'ಯಾದಳು. ಅವಳ ಸೌಂದರ್ಯವೂ ಕಲಾಪ್ರೌಢಿಮೆಯೂ ಅಸದೃಶವಾಗಿದ್ದುವು.[112] ಅವಳ ಪತಿಭಕ್ತಿಯೂ ಅಷ್ಟೆ. ವಿಷ್ಣುವರ್ಧನ ಮತ್ತು ಶಾಂತಲೆಯರ ದಾಂಪತ್ಯವು ಆದರ್ಶದ ಚರಮ ಸೀಮೆಯನ್ನು ಮುಟ್ಟಿದ್ದಿತು.[113] ಆ ಕಾಲಕ್ಕೆ ಅವಳ ಯಶಸ್ಸು ದಿಕ್ಕುಗಳ ತುಂಬೆಲ್ಲಾ ಹರಡಿ ದಿಕ್ಕುಗಳೆಲ್ಲಾ ಬೆಳ್ಳಗಾಗಿದ್ದು ವೆಂದು ಶಾಸನವೊಂದು ಬಣ್ಣಿಸುತ್ತದೆ (''ಯಶಃ ಪ್ರಸರ ಪಾಂಡುರಿತ ದಿಕ್ಪಾಳ ಚೂಡಾಮಣಿಯು".[114]) ಅವಳು ಎಲ್ಲಾ ಧರ್ಮಗಳಿಗೂ ಪ್ರೋತ್ಸಾಹವಿತ್ತಿದ್ದರೂ ಅವಳ ವಿಶೇಷ ಒಲವು ಇದ್ದದ್ದು ಜೈನಧರ್ಮದ ಕಡೆ ಎಂಬುದರಲ್ಲಿ ಸಂದೇಹವಿಲ್ಲ. ಶ್ರವಣಬೆಳಗೊಳದಲ್ಲಿ ಬಸದಿಯೊಂದನ್ನು ಕಟ್ಟಿಸಿ ವಿಷ್ಣುವರ್ಧನನನ್ನು ಬೇಡಿಕೊಂಡು ಅದಕ್ಕೆ ದತ್ತಿಯನ್ನು ಬಿಡಿಸುತ್ತಾಳೆ. ಮತ್ತು ಅದಕ್ಕೆ 'ಸವತಿಗಂಧವಾರಣಜಿನಾಲಯ'ವೆಂದು ಹೆಸರಿಡುತ್ತಾಳೆ.[115] ("ಉದ್ವೃತ್ತ ಸವತಿ ಗಂಧವಾರಣೆ" ಎಂಬುದು ಶಾಂತಲೆಯ ವಿಶೇಷಣಗಳಲ್ಲೊಂದು). ವಿಷ್ಣುವರ್ಧನನು ಚೋಳರ ಮೇಲಿನ ವಿಜಯದ ಸ್ಮಾರಕವಾಗಿ ಕ್ರಿ. ಶ. 1117ರಲ್ಲಿ ಚೆನ್ನಕೇಶವ ದೇವಾಲಯವನ್ನು ಕಟ್ಟಿಸಿದಾಗ, ಅವಳೂ

---

110 ''ಸ್ವಸ್ತಿ ಶ್ರೀಮತು ಬಳ್ಳಿಗ್ರಾಮೆಯ ದಮ್ಮೇಸ್ವರ ದೇವರ ಪಾದಪಂಕಜ ಭ್ರಮರ ದಾಸೋಜನ ಪುತ್ರ ಚಾವಣನ ಗೆಯ್ದ ನೃತ್ಯ ಸರಸ್ವತೀ ಗಣದಾಸಿ ಮಚ್ಚರಿಪರು ವಾದಿಸ್ವರಭ ಭೇರುಂಡ'' [EC. XV. Bl. 257, C. 1140 A.D.]. ಬೇಲೂರಿನ ಚೆನ್ನಕೇಶವ ದೇವಾಲಯವನ್ನು ಕಟ್ಟಿಸಲು ಬಳ್ಳಿಗಾವೆಯಿಂದ ಶಿಲ್ಪಿಗಳು ಬಂದರು. ಅವರು ಬರಲು ಶಾಂತಲೆಯ ತಾಯ್ತಂದೆಯರೂ, ಅವಳೂ ಕಾರಣವಿರಬಹುದೆ?

111 ''ಪತಿಭಕ್ತಿ ಭವದ್ವಯಕ್ಕಂ ಹಿತಮೆಂಬುದನಱಿದು ವಿನಯದಿಂ ವಿಷ್ಣು ಮಹೀಪತಿಯಂ ಮೆಚ್ಚಿಸುತೆ ಮಹಾಸತಿ ಶಾಂತಲೆದೇವಿ ಪಟ್ಟಮಂ ಧರಿಯಿಸಿದಳ್.'' [EC. V. Hn. 116, 1123 A.D.]

112 ''ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರ ಫಳ ಭೋಗಭಾಗಿನೀ ದ್ವಿತೀಯ ಲಕ್ಷ್ಮೀ ಸಮಾನೆಯುಂ.... ಕೇತಕದಳಾಪಹಾಸಿ ಕೇಕರಕಳಾಪ ಕಮನೀಯ ನೇತ್ರೆಯುಂ....ಭುವನಜನ ಪುಣ್ಯ ಪುಷ್ಪ ಕಳ್ಪಕುಜ ಶಾಖೆಯುಂ... ಶ್ಯಾಮಳ ಕೋಮಳ ಭ್ರೂವಿಡಂಬ ಜಿತಶಚಿಯು ಅಗಣ್ಯಲಾವಣ್ಯ ಸಂಪನ್ನೆಯುಂ ಮೃದು ಮಧುರ ವಚನ ಪ್ರಸನ್ನೆಯು ಶ್ರೀ ವಿಷ್ಣುವರ್ಧನ ಹೊಯ್ಸಳ ಮಹೀಪಾಳ ಪಾದಾಬ್ಜ ಭಕ್ತೆಯು ಸಂಗೀತ ವಿದ್ಯಾ ಸರಸ್ವತಿಯುಂ ...'' [E.C. V. Hn. 116, 1123 A.D.]

113 ''ಪತಿಭಕ್ತಿ ಭವದ್ವಯಕ್ಕಂ ಹಿತಮೆಂಬುದನಱಿದು ವಿನಯದಿಂ ವಿಷ್ಣುಮಹೀಪತಿಯಂ ಮೆಚ್ಚಿಸುತೆ ಮಹಾಸತಿ ಶಾಂತಲದೇವಿ ಪಟ್ಟಮಂ ಧರಿಯಿಸಿದಳ್ ॥ ಗಿರಿಜೆಯ ಪಾದಪದ್ಮ ವಿಗಳಜ್ಜಳದಿಂದಮೆ ಕೊರ್ಬ್ಬಿ ನೀತಿ ವಿಸ್ತರಿಸಿರೆ ಸೊಂಪುವೆತ್ತು ಪುರುಷಬ್ರತದಿಂ ದಳಮೇಱಿ ಭಾಗ್ಯಮಂಜರಿಗಳನಾಂತು ರಂಜಿಸುವ ಶಾಂತಲದೇವಿಯ ರೂಪುಕಲ್ಪವಲ್ಲರಿಯ-ಡರ್ದತ್ತು ವಿಷ್ಣುನೃಪನೆಂಬ ಸಮುನ್ನತ ಕಲ್ಪವೃಕ್ಷಮಂ." [EC. V. Hn. 116, 1123 A.D.].

114 ಅದೇ.

115 EC. II. 132, 1123 A.D.

ಆದರ ಪಕ್ಕದಲ್ಲಿ ಕಪ್ಪೆ ಚೆನ್ನಿಗರಾಯ ದೇವಸ್ಥಾನವನ್ನು ಕಟ್ಟಿಸುತ್ತಾಳೆ.[116] ಚೆನ್ನಕೇಶವ ದೇವಾಲಯದ ಮುಂದಿನ ಬಾಗಿಲ ಮೇಲೆ ವಿಷ್ಣುವರ್ಧನ ಮತ್ತು ಶಾಂತಲೆಯರು ಒಡ್ಡೋಲಗದಲ್ಲಿ ಕುಳಿತಿರುವ ಚಿತ್ರವಿದೆ. ಆ ದೇವಸ್ಥಾನದ ಸುತ್ತ ಮುತ್ತ ಇರುವ ಶಿಲಾಬಾಲಿಕೆಯರ ವಿಗ್ರಹಗಳಲ್ಲಿ ಕೆಲವಾದರೂ ನರ್ತನದ ನಾನಾ ಭಂಗಿಗಳಲ್ಲಿದ್ದ ಶಾಂತಲೆಯ ಪ್ರತಿರೂಪಗಳಿರಬಹುದೆಂದು ಕೆಲವರು ಭಾವಿಸುತ್ತಾರೆ.

ಶಾಂತಲೆಯು ಕ್ರಿ. ಶ. 1131ರಲ್ಲಿ ಶಿವಗಂಗೆಯ ತೀರ್ಥದಲ್ಲಿ ಸನ್ಯಸನವಿಧಿಯಿಂದ ಮಡಿಯುತ್ತಾಳೆ.[117] ಮುದ್ದುಮಗಳ ಸಾವಿನಿಂದ ಇಹಲೋಕದ ವಿಷಯದಲ್ಲಿ ಜುಗುಪ್ಸೆ ಹುಟ್ಟಿದ ಅವಳ ತಂದೆ ಮಾರಸಿಂಗಮಯ್ಯನು ಪರಲೋಕವಾಸಿಯಾಗುತ್ತಾನೆ; ಅವಳ ವೃದ್ಧಮಾತೆ ಮಾಚಿಕಬ್ಬೆಯೂ ಅದೇ ವರ್ಷ ಮಗಳಂತೆಯೇ ಸನ್ಯಸನವಿಧಿಯಿಂದ ಪ್ರಾಣವನ್ನು ತ್ಯಜಿಸುತ್ತಾಳೆ.[118] ತುಂಬುಯೌವನದಲ್ಲಿ, ತನ್ನ ಕೀರ್ತಿಯ ಪರಾಕಾಷ್ಠೆಯಲ್ಲಿ ಶಾಂತಲೆಯು ಸನ್ಯಸನವಿಧಿಯನ್ನಂಗೀಕರಿಸಿ ಪ್ರಾಣತ್ಯಾಗವನ್ನು ಮಾಡಲು ಯಾವ ಸನ್ನಿವೇಶಗಳು ಕಾರಣವಾದುವು ಎಂಬುದು ಅಜ್ಞಾತವಾಗಿಯೇ ಉಳಿದಿದೆ. ಶಿವಗಂಗೆಯಂತಹ ಶೈವಕ್ಷೇತ್ರದಲ್ಲಿ ಅವಳು ಸನ್ಯಸನ ವಿಧಿಯಿಂದ ಮಡಿಯಬೇಕಾದರೆ ಅವಳಿಗೆ ಅಲ್ಲಿ ಅನಿರೀಕ್ಷಿತವಾಗಿ ಕ್ಷಿಪ್ರಗತಿಯಲ್ಲಿ ಸಾವು ಒದಗಿರಬೇಕು.

ಅತ್ತಿಮಬ್ಬೆಯ ಕಾರ್ಯಕ್ಷೇತ್ರವು ಧರ್ಮವಾದರೆ ಶಾಂತಲೆಯ ಕಾರ್ಯಕ್ಷೇತ್ರವು ಮುಖ್ಯವಾಗಿ ಕಲೆಯಾಗಿತ್ತು. ಒಬ್ಬಳು ಗಂಡನ ಸಾವಿನ ನಂತರ 'ಮಹಾಸತಿ'ಯಾದರೆ ಮತ್ತೊಬ್ಬಳು ಮುತ್ತೈದೆಯಾಗಿಯೇ ಮಹಾಸತಿಯಾದಳು. 'ಶಾಂತಲದೇವಿಯು ಕರ್ನಾಟಕ ಸಂಸ್ಕೃತಿಯು ಹೊಮ್ಮಿಸಿರುವ ಹೂವು'[119] ಎಂಬ ವಿದ್ವಾಂಸರೊಬ್ಬರ ಉದ್ಗಾರವು ಸಾಧುವಾದುದು. ಶಾಂತಲೆಯು ಕರ್ನಾಟಕ ಸಂಸ್ಕೃತಿಯು ಹೊಮ್ಮಿಸಿರುವ ಹೂವಾದರೆ, ಅತ್ತಿಮಬ್ಬೆಯು ಕರ್ನಾಟಕ ಸಂಸ್ಕೃತಿಯು ಇತ್ತಿರುವ ಪಕ್ವಫಲ.

## ಸ್ತ್ರೀಯರು ಮತ್ತು ರಾಜಕೀಯ

ಮನು ಮುಂತಾದ ಸ್ಮೃತಿಕಾರರು ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ಕೊಡಕೂಡದೆಂದು ವಾದಿಸಿದ್ದರೂ ("ನ ಸ್ತ್ರೀ ಸ್ವಾತಂತ್ರ್ಯಮರ್ಹತಿ") ಪ್ರಾಚೀನ ಕರ್ನಾಟಕವು ಸ್ತ್ರೀಯರ ವಿಷಯದಲ್ಲಿ ಹೆಚ್ಚು ಉದಾರವಾಗಿ ನಡೆದುಕೊಂಡಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.[120] ಕರ್ನಾಟಕದ ಮೇಲುವರ್ಗದ ಸ್ತ್ರೀಯರು ದೇವಸ್ಥಾನಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟುಕೊಟ್ಟಿದ್ದಾರೆ; ವಿದ್ಯಾಭ್ಯಾಸಕ್ಕೆ ಧನಸಹಾಯವನ್ನು ಮಾಡಿದ್ದಾರೆ; ಬೇರೆ

---

116 ಈ ದೇವಸ್ಥಾನಗಳನ್ನು ಕಟ್ಟಲು ಬಳ್ಳಿಗಾವೆಯಿಂದ ಹಲವರು ಶಿಲ್ಪಿಗಳನ್ನು ಕರೆಯಿಸಿಕೊಂಡಂತೆ ತಿಳಿದು ಬರುತ್ತದೆ. ದಾಸೋಜ, ಅವನ ಮಗ ಚಾವಾಣ ಮುಂತಾದವರು ಬಳ್ಳಿಗಾವೆಯವರು. [EC. V. Bl. 17, C. 1120 A.D.; EC. XV. Bl. 256, 1140 A.D.] ಬಳ್ಳಿಗಾವೆಯು ಶಿಲ್ಪಿಗಳಿಗೆ ಪ್ರಸಿದ್ಧವಾಗಿತ್ತೆಂದು ಶಾಸನಗಳಿಂದ ತಿಳಿದು ಬರುತ್ತದೆ. (EC. VII. Sk. 293, 1080 A.D.). ಹಿಂದೆ ನಾವು ನೋಡಿದಂತೆ ಬಳ್ಳಿಗಾವೆಯಲ್ಲಿ ಹುಟ್ಟಿದ ಶಾಂತಲೆಯು ಅವರ ಬರವಿಗೆ ಕಾರಣವಿರಬಹುದೆ?

117 EC. II. 143, 1131 A.D.

118 ಅದೇ—"ಅರಸಿ ಸುರಗತಿಯನೆಯ್ದಿದಳಿರಲಾಗೆನಗೆಂದು ಬಂದು ಬೆಳುಗೊಳದಲು ದುರ್ಧರ ಸನ್ಯಾಸನದಿಂ ಪರಿಣತೆ ತಾಯಿ ಮಾಚಿಕಬ್ಬೆ ತಾನುಂ ತೊಱೆದಳು."

119 C.B. Seetharam: 'Queen Śāntaladēvi' (Quarterly Journal of the Mythic Society, Vol. 38), p. 143.

120 ಸ್ತ್ರೀಯರ ವಿಷಯದಲ್ಲಿ ಬಹು ಉದಾರವಾದ ಭಾವನೆಯನ್ನು ವ್ಯಕ್ತಪಡಿಸಿರುವವರಲ್ಲಿ ಬೃಹತ್ಸಂಹಿತೆಯ ಕರ್ತೃ ವರಾಹಮಿಹಿರನು ಅಗ್ರೇಸರನು. ಅವನ ಪ್ರಕಾರ, ಸ್ತ್ರೀಯರು ಭೂಷಣಗಳನ್ನೇ ಅಲಂಕರಿಸಿರುತ್ತಾರೆ. ಏಕೆಂದರೆ ಮೈಮೇಲೆ ಭೂಷಣಗಳಿಲ್ಲದೆಯೂ ಅವರು ಪುರುಷರನ್ನು ಆಕರ್ಷಿಸಬಲ್ಲರು. ಗಂಡಸರು ಮಾಡದ ಯಾವ ತಪ್ಪುಗಳನ್ನು ಅವರು ಮಾಡಿದ್ದಾರೆ? ಹೆಂಗಸರ ತಪ್ಪುಗಳಿಗೆಲ್ಲ ಬಹುಮಟ್ಟಿಗೆ ಗಂಡಸರೇ ಕಾರಣ. ಒಟ್ಟಿನಲ್ಲಿ ಅವರು ಗಂಡಸರಿಗಿಂತ

ಬೇರೆ ಭಾಗಗಳಲ್ಲಿ ರಾಜ್ಯಗಳನ್ನು ಆಳಿದ್ದಾರೆ ; ಯುದ್ಧಗಳಲ್ಲೂ ಭಾಗವಹಿಸಿದ್ದಾರೆ. ಕೆಳವರ್ಗದ ಸ್ತ್ರೀಯರ ವಿಷಯವಾಗಿ ನಮಗೆ ಹೆಚ್ಚು ಅಂಶಗಳು ತಿಳಿದುಬರುವುದಿಲ್ಲ. ಅವರೂ ಕೂಡ ದೇವಸ್ಥಾನಗಳಿಗೆ ದತ್ತಿಗಳನ್ನು ಬಿಟ್ಟುಕೊಟ್ಟಿರುವುದು ಕಂಡುಬರುತ್ತದೆ.[121] ಯಾವ ಶಾಸನದಲ್ಲಿಯೂ ಸ್ತ್ರೀಯರನ್ನು ಅವಹೇಳನ ಮಾಡಿಲ್ಲ. ಅವರನ್ನು ದಾಸಿಯರಂತೆ ಕಡೆಗಣಿಸಿಲ್ಲ. ಪ್ರಾಚೀನ ಕರ್ನಾಟಕದ ಈ ಉದಾರ ವೃತ್ತಿಗೆ ಕೆಳಗೆ ನಿದರ್ಶನಗಳನ್ನು ಕೊಡಲಾಗಿದೆ.

ಕ್ರಿ. ಶ. 837ರಲ್ಲಿ ಮೊದಲನೆಯ ಅಮೋಘವರ್ಷನ ಮಗಳು ರೇವಕನಿರ್ಮಟಿ(ಡಿ)ಎಂಬುವಳು ಎಡದೊರೆನಾಡನ್ನು ಆಳುತ್ತಿದ್ದಳು. ಅವಳ ಪಾದೋಪಜೀವಿಗಳಾಗಿದ್ದ ಕೆಲವು ಗ್ರಾಮುಗಳ ಹಿರಿಯರು ಒಂದು ಚತ್ರವನ್ನು ಸ್ಥಾಪಿಸಿದ ವಿಷಯವು ಒಂದು ಶಾಸನದಲ್ಲಿದೆ.[122] ಪಲ್ಲವರ ಮಹೇಂದ್ರಾಧಿರಾಜನ ಮೂವರು ರಾಣಿಯರು ಮೂರು ಊರುಗಳನ್ನು ಆಳುತ್ತಿದ್ದಂತೆ ಶಾಸನವೊಂದರಲ್ಲಿದೆ.[123] ನಾಗರಖಂಡ ಎಪ್ಪತ್ತಕ್ಕೆ 'ನಾಳ್ಗಾವುಂಡ'ನಾಗಿ ಆಳುತ್ತಿದ್ದ ನಾಗಾರ್ಜುನನು ಕಾಲಾತೀತನಾಗಲು ಅವನ ಪತ್ನಿಯು 'ನಾಳ್ಗಾವುಂಡು' ಪದವಿಯನ್ನು ವಹಿಸಿಕೊಂಡು ಬಹು ಸಾಮರ್ಥ್ಯದಿಂದ ಆಳುತ್ತಾಳೆ.[124] ಅವಳ ಸಾಮರ್ಥ್ಯವನ್ನು ವರ್ಣಿಸುವ ಪದ್ಯವಿದು—

" ಉತ್ತಮ ಪ್ರಭುಶಕ್ತಿಯುಕ್ತೆ ಜಿನೇಂದ್ರ ಶಾಸನ ಭಕ್ತೆ ಕಾಂ
ತ್ಯಾತ್ತ ವಿಭ್ರಮೆ ಜಕ್ಕಿಯಬ್ಬೆ ಸಮಂತು ನಾಗರಖಂಡಮೆ
ಪ್ಪಿತ್ತುಮಂ ವಧುವಾಗಿಯುಂ ನಿಜವೀರ ವಿಕ್ರಮಗರ್ಭದಿಂ
ಪೆತ್ತವಂ ಪ್ರತಿಪಾಲಿಸುತೊಸದಿಪ್ಪಳ್....... "

ಅವಳು ಸ್ತ್ರೀಯಾಗಿದ್ದರೂ ಬಹು ಧೈರ್ಯದಿಂದ ನಾಡನ್ನು ಆಳಿದಳೆಂದು ಶಾಸನವು ಹೊಗಳುತ್ತದೆ. ಬೂತುಗನ ರಾಣಿ ಸರಮಬ್ಬೆಯು ಕುರ್ಗಲ್ಲನ್ನು ಆಳುತ್ತಿದ್ದಂತೆ ಒಂದು ಶಾಸನವು ತಿಳಿಸುತ್ತದೆ.[125] ಹೀಗೆ ಆಳಿದವರಲ್ಲೆಲ್ಲ ಅತ್ಯಂತ ಪ್ರಸಿದ್ಧಳಾದವಳೆಂದರೆ ಚಕ್ರವರ್ತಿ ಜಯಸಿಂಹನ ಸೋದರಿ ಅಕ್ಕಾದೇವಿ. ಇವಳ ಪ್ರಸ್ತಾಪ ಹಿಂದೆಯೇ ಬಂದಿದೆ. ಕಿಸುಕಾಡು ಎಪ್ಪತ್ತನ್ನು ಆಳುತ್ತಿದ್ದ ಇವಳು ಎಲ್ಲ ಧರ್ಮಗಳಿಗೂ ಸಮಾನವಾಗಿ ಪ್ರೋತ್ಸಾಹವಿತ್ತಿದ್ದಳು.

---

ಹೆಚ್ಚು ಗುಣವಂತರು. ಯಾವನು ತನ್ನ ಹೆಂಡತಿಯನ್ನು ಅಲಕ್ಷಿಸಿ ಅವಳನ್ನು ಮೋಸಗೊಳಿಸುವನೋ ಅವನು ದೊಡ್ಡ ಪಾಪಿ. ಅವನು ಕತ್ತೆಯ ಚರ್ಮವನ್ನು ಹೊದಲು ಮೇಲಾಗಿ ಹೊದೆದು ಆರು ತಿಂಗಳು ಭಿಕ್ಷೆ ಎತ್ತಿದರೆ ಆಗ ಪಾಪದಿಂದ ನಿರ್ಮುಕ್ತನಾಗಬಹುದು.

" ರತ್ನಾನಿ ವಿಭೂಷಯಂತಿ ಯೋಷಾ ಭೂಷ್ಯಂತೇ ವನಿತಾ ನ ರತ್ನಕಾಂತ್ಯಾ
ಚೇತೋ ವನಿತಾ ಹರಂತ್ಯರತ್ನಾ ನೋ ರತ್ನಾನಿ ವಿನಾಂಗನಾಂಗಸಂಗಂ ॥
........
ಪ್ರಬ್ರೂತ ಸತ್ಯಂ ಕತರೋಽಂಗನಾನಾಂ ದೋಷೋಽಸ್ತಿ ಯೋ ನಾಚರಿತೋ ಮನುಷ್ಯೈಃ
ಧಾರ್ಷ್ಟ್ಯೇನ ಪುಂಭಿಃ ಪ್ರಮದಾ ನಿರಸ್ತಾ ಗುಣಾಧಿಕಾಸ್ತಾ ಮನುನಾತ್ರ ಚೋಕ್ತಃ ॥
.......
ಬಹಿರ್ಲೋಮ್ನಾ ತು ಷಣ್ಮಾಸಾನ್ ವೇಷ್ಟಿತಃ ಖರಚರ್ಮಣಾ
ದಾರಾತಿಕ್ರಮಣೇ ಭಿಕ್ಷಾಂ ದೇಹೀತ್ಯುಕ್ತ್ವಾ ವಿಶುಧ್ಯತಿ ॥

—Bṛhatsamhita (Ed. V. Subrahmanya Shastri), II, p. 591, 593, 595.

121 ದುಗ್ಗಗವುಡಿ ಎನ್ನುವವಳು ಬಹಳ ಉದಾರಿಯಾಗಿದ್ದಳು. " ಆರು ಬಂದು ಬೇಡಿದಡಿಲ್ಲೆನ್ನಳು. " (EC. VI. Tk. 65, C. 1141 A. D.) ಮಾಚಕ್ಕ ಎಂಬುವಳು ಒಂದು ದೇವಾಲಯಕ್ಕೆ ಇಪ್ಪತ್ತು ಗದ್ಯಾಣಗಳನ್ನು ಬಿಟ್ಟುಕೊಟ್ಟ ವಿಷಯ ಒಂದು ಶಾಸನದಲ್ಲಿದೆ (SII. IX. i. 190, 1113 A. D.).

122 BKI. I. i. 7, 837 A.D.

123 EC. XII. Si. 24, C. 900 A.D.

124 EC. VII. Sk. 219, 918 A.D.

125 EC. IV. Hs. 92, C. 920 A.D.

ಅವಳಿಗೆ ಶಾಸನಗಳಲ್ಲಿ[126] ಕೊಟ್ಟಿರುವ ವಿಶೇಷಣಗಳನ್ನು ನೋಡಿದರೆ ಅವಳೇ ಸ್ವತಃ ಯುದ್ಧರಂಗಕ್ಕೆ ಹೋಗಿ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದಂತೆ ಕಾಣುತ್ತದೆ. ಮಹಾಸಾಮಂತನೊಬ್ಬನ ಪತ್ನಿ ಚಾಗಲದೇವಿಯು ಯಾವುದೋ ಊರಿನ ಮೇಲೆ 'ಧಾಳಿಯಿಟ್ಟ' ವಿಷಯವು ಶಾಸನವೊಂದರಲ್ಲಿದೆ.[127]ಸ್ತ್ರೀಯರು ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರೆಂಬುದಕ್ಕೆ ಇದು ಸ್ಪಷ್ಟವಾದ ಆಧಾರ. ಗಂಗಸೇನಾಪತಿಯ ಹೆಂಡತಿ ಲಕ್ಷ್ಮೀದೇವಿಯು ರಾಜಕಾರ್ಯಗಳಲ್ಲಿ ಗಂಡನಿಗೆ ಸಲಹೆಗಳನ್ನು ಕೊಡುತ್ತಿದ್ದಳು. ಯುದ್ಧಗಳಲ್ಲಿ ಜಯವಧುವಿನಂತೆ ಇದ್ದಳು ಎಂದು ಒಂದು ಶಾಸನವು ಹೊಗಳುತ್ತದೆ ("ಕಾರ್ಯೇ ನೀತಿವಧೂ ರಣೇ ಜಯವಧೂ")[128] ಕಾಶ್ಮೀರದಲ್ಲಿ ದಿದ್ದಾ ಮುಂತಾದ ರಾಣಿಯರು ರಾಜ್ಯಗಳನ್ನಾಳುತ್ತಿದ್ದರೆಂದೂ ಯುದ್ಧಗಳಲ್ಲಿ ಭಾಗವಹಿಸುತ್ತಿದ್ದರೆಂದೂ ಹೇಳುವ ಕಲ್ಹಣನ ಹೇಳಿಕೆಯನ್ನು[129] ಈ ನಿದರ್ಶನಗಳು ನೆನಪಿಗೆ ತರುತ್ತವೆ.

ಕರ್ನಾಟಕದ ಸ್ತ್ರೀಯರಿಗೆ ಹೆಚ್ಚು ಸ್ವಾತಂತ್ರ್ಯವು ಲಭಿಸಿದ್ದಿತೆಂಬುದಕ್ಕೆ ಇನ್ನೊಂದು ಆಧಾರವನ್ನು ಕೊಡಬಹುದು. ಸ್ತ್ರೀಯರು ಸ್ವಭಾವತಃ ಸುಳ್ಳು ಹೇಳುವವರಾದ್ದರಿಂದ ಅವರನ್ನು ಯಾವುದಕ್ಕೂ ಸಾಕ್ಷಿಗಳಾಗಿ ಅಂಗೀಕರಿಸಬಾರದೆಂದು ಸ್ಮೃತಿಗಳು ಅಭಿಪ್ರಾಯಪಡುತ್ತವೆ. ಗೌತಮ, ನಾರದ, ಮನು ಮುಂತಾದವರು ಹೇಳುವ 'ಅಸಾಕ್ಷಿ'ಗಳ (=ಸಾಕ್ಷ್ಯಕ್ಕೆ ಅನರ್ಹರು) ಪಟ್ಟಿಯಲ್ಲಿ ಕೊಲೆಗಡುಕರು, ಹಾವಾಡಿಗರು, ಹುಚ್ಚರು, ಬಾಲಕರು, ಸ್ತ್ರೀಯರು ಸೇರಿದ್ದಾರೆ. [130] ಸ್ತ್ರೀಯರನ್ನು ಸಾಕ್ಷಿಗಳಾಗಿ ತೆಗೆದುಕೊಳ್ಳಲು ಯಾಜ್ಞವಲ್ಕ್ಯನೂ ವಿರೋಧವನ್ನು ವ್ಯಕ್ತಪಡಿಸಿದ್ದಾನೆ.[131] ಆದರೆ ಸು. 1156ರ ಶಾಸನವೊಂದರಲ್ಲಿ ಭೂಮಿಯ ಕ್ರಯಪ್ರಮಾಣ ಶಾಸನಕ್ಕೆ ಸಾಕ್ಷಿಗಳಾಗಿ ನಿಂತಿರುವವರ ಪಟ್ಟಿಯಲ್ಲಿ ಒಬ್ಬ ಹೆಂಗಸಿನ ಹೆಸರಿರುವುದು ಗಮನಾರ್ಹ—"ಕ್ರಯಶೇಷವುಳಿಯದೆ ಕೊಟ್ಟು ಕೊಂಡ ಕ್ರಯಪ್ರಮಾಣ ಶಾಸನ.... ಅಂತಪ್ಪುದಕ್ಕೆ ಸಾಖಿ (=ಸಾಕ್ಷಿ)ಶ್ರೀಮನ್ ಮಹಾ ವಡ್ಡವ್ಯವಹಾರಿ ಗೊಲೆಹನಾಯಕರ ತಂಗಿ ಸಿರಿಯಾದೇವಿಯಕ್ಕ ಮಾಯಿದೇವ ಭೂತಯ್ಯ ಅಶೇಷ ಮಹಾಜನಂಗಳು ಸಮಸ್ತ ಗೌಡುಗಳು ಮಂಗಳ ಮಹಾ ಶ್ರೀ ಶ್ರೀ."[132] ನಮ್ಮ ಪ್ರಾಚೀನ ಸ್ಮೃತಿಗ್ರಂಥಗಳು ಇಕ್ಕಟ್ಟಾದ, ಉಸಿರು ಕಟ್ಟುವ ಕೋಣೆಯು ಸ್ತ್ರೀಯರ ವಾಸಸ್ಥಾನವೆಂದು ನಿರ್ಬಂಧಿಸಿವೆ. ಆದರೆ ಅದಕ್ಕಿಂತ ವಿಶಾಲವಾದ, ಹೆಚ್ಚು ಗಾಳಿ ಬೆಳಕುಗಳಿಂದ ಕೂಡಿದ ಸ್ಥಳದಲ್ಲಿ ವಾಸಿಸುತ್ತಿರುವಂತೆ ಕಾಣುತ್ತದೆ ಪ್ರಾಚೀನ ಕರ್ನಾಟಕದ ಸ್ತ್ರೀಯರು.

## ದೇವದಾಸಿ ಪದ್ಧತಿ

ದೇವದಾಸಿ ಪದ್ಧತಿಯನ್ನು ಕುರಿತ ಚರ್ಚೆಯು ಹಿಂದಿನ ಅಧ್ಯಾಯವೊಂದರಲ್ಲಿ ಬಂದಿದೆ. ದೇವದಾಸಿಯರನ್ನೂ ವೇಶ್ಯಾವೃತ್ತಿಯನ್ನು ಅವಲಂಬಿಸಿದ್ದ ಸಾಮಾನ್ಯ ವೇಶ್ಯೆಯರನ್ನೂ ಕನ್ನಡ ಶಾಸನಗಳು ಗೌರವದಿಂದ

---

126 EI. XV. p. 76, 1010 A.D.; IA.XVIII. p. 273, 1022 A.D.; BKI. I. i. 86, 1050 A.D.

127 BKI. I. ii. 188, 1106 A.D.

128 EC. II. 130, C. 1118 A.D.

129 Rājataraṅgiṇi(River of Kings. Tr. R. S. Pandit), VIth Taraṅga.

130 Julius Jolly : Hindu Law and Custom (Tr. Balakrishna Ghosh), p. 305.

131 ಸ್ತ್ರೀ ಬಾಲ ವೃದ್ಧ ಕಿತವ ಮತ್ತೋನ್ಮತ್ತಾಭಿಶಸ್ತಕಾಃ
ರಂಗಾವತಾರಿ ಪಾಖಂಡಿ ಕೂಟಕೃದ್ವಿಕಲೇಂದ್ರಿಯಾಃ ॥
ಪತಿತಾಪ್ತಾರ್ಥಸಂಬಂಧಿ ಸಹಾಯ ರಿಪು ತಸ್ಕರಾಃ ।
ಸಾಹಸೀ ದೃಷ್ಟದೋಷಶ್ಚ ನಿರ್ಧೂತಾದ್ಯಾಸ್ತ್ವಸಾಕ್ಷಿಣಃ ॥
—ಯಾಜ್ಞವಲ್ಕ್ಯಸ್ಮೃತಿ (1909), ಪು. 166.

132 EC. V. Hn. 151, C. 1156 A.D.

ಕಂಡಿವೆ. ಅನೇಕ ಪುರುಷರು ತಮ್ಮನ್ನು 'ವೇಶ್ಯಾಭುಜಂಗ' (ಭುಜಂಗ=ವಿಟ)ರೆಂದು,[133] 'ವಿಟಚಕ್ರವರ್ತಿ'ಗಳೆಂದು[134] ಕರೆದುಕೊಳ್ಳಲು ಎಲ್ಲಿಯೂ ಸಂಕೋಚಪಟ್ಟುಕೊಂಡಿಲ್ಲ. ಎಷ್ಟೋ ಕಡೆ ಹೆಮ್ಮೆಯ ಛಾಯೆಯೂ ಇದೆ. ಬಹುಶಃ ಧರ್ಮಪತ್ನಿಯ ಜೊತೆಯಲ್ಲಿ ಒಬ್ಬ ವೇಶ್ಯೆಯೊಡನೆ ಸಂಪರ್ಕವಿಟ್ಟುಕೊಳ್ಳುವುದು ಅವಮಾನಕರವೆಂದು ಜನರು ಭಾವಿಸಿರಲಿಲ್ಲ. ವೇಶ್ಯೆಯರ ಮಕ್ಕಳಿಗೆ ಸಮಾಜದಲ್ಲಿ ಸ್ಥಾನವಿತ್ತೆಂದು ಕಾಣಿಸುತ್ತದೆ. ಯಾವುದೋ ಯುದ್ಧದಲ್ಲಿ 'ಆಳ್ತನವ ಮಾಡಿ' ಮಡಿದ ನಾಲ್ವರು ವೀರರಲ್ಲಿ ಸೂಳೆ ಕಾಳಿಯ ಮಗ ಹಡೆವಳನೂ ಒಬ್ಬ.[135] ಒಬ್ಬ ವೇಶ್ಯೆಯ 'ಧರ್ಮಸಂತತಿ'ಯ ಪಟ್ಟಿಯೇ ಒಂದು ಕಡೆ ಬರುತ್ತದೆ— "ಮಯ್ದುಮರಸರ ಸೂಳೆ ಕಾಡಚ್ಚಿ ಕಾಡಚ್ಚಿಯ ಮಗಳ್ ಕಾಡಬ್ಬೆ ಕಾಡಬ್ಬೆ ಮಗಳ್ ಅಯ್ಬಬ್ಬೆ ಅಯ್ಬಬ್ಬೆ ಮಗಳ್ ಕಳಿಂಗಬ್ಬೆ ಕಳಿಂಗಬ್ಬೆಗಳಯ್ಯ ಪಲ್ಲ ಹಾರಕಿ ಪರಕಿಯ ಮಗಳ್ ಕಳಿಂಗಬ್ಬೆ ಕಳಿಂಗಬ್ಬೆಯ ಮಗಂ ಪರಕಯ್ಯ ನಿ(ಇ)ಂತು ಪಾರಂಪರ್ಯ್ಯಯಮೆ ಡೆವಜೀಯದೆ ಬಂದ ಧರ್ಮಸಂತತಿ."[136] ಆದರೂ ಸೂಳೆಯರ ಹಾವಭಾವಾದಿಗಳನ್ನು ಅವಹೇಳನ ಮಾಡಿರುವ ಶಾಸನಗಳೂ ಇವೆ.[137]

ವೇಶ್ಯಾವೃತ್ತಿಯನ್ನು ನಡೆಸಲು ಸರ್ಕಾರದ ಒಪ್ಪಿಗೆ ಪಡೆಯಬೇಕಿತ್ತೆಂದು ಕಾಣುತ್ತದೆ. ಅವರ ಮೇಲೆ ಸರ್ಕಾರವು ತೆರಿಗೆಯನ್ನು ಹಾಕುತ್ತಿತ್ತು ('ಸೂಳೆದೆಱೆ').[138] ಅವರು ಕನ್ನಡಿಗಳನ್ನು ಇಟ್ಟುಕೊಂಡಿದ್ದಕ್ಕೂ ತೆರಿಗೆಗಳನ್ನು ಕೊಡಬೇಕಾಗಿತ್ತೆಂದು ಕಾಣುತ್ತದೆ ('ಸೂಳೆಯರಲ್ಲಿಯ ಕನ್ನಡಿವಣಮುಮಂ').[139]

## ಸ್ತ್ರೀಯರು ಮತ್ತು ಸಾಹಿತ್ಯ

ಕ್ರಿ. ಶ.1150ರ ವರೆಗೆ ಕನ್ನಡದಲ್ಲಿ ಯಾವ ಸ್ತ್ರೀಯೂ ಗ್ರಂಥರಚನೆ ಮಾಡಿರುವಂತೆ ತಿಳಿದುಬರುವುದಿಲ್ಲ. ಕಂತಿ ಎಂಬ ಕವಯಿತ್ರಿಯು ಹನ್ನೆರಡನೆಯ ಶತಮಾನದ ಆರಂಭದಲ್ಲಿದ್ದ ಅಭಿನವಪಂಪ ಅಥವಾ ನಾಗಚಂದ್ರನ ಸಮಕಾಲೀನಳಾಗಿದ್ದಳೆಂದೂ, ಅವಳಿಗೂ ಅವನಿಗೂ ಕಾವ್ಯಸ್ಪರ್ಧೆಗಳು ನಡೆದುವೆಂದೂ ಈಚಿನ ಗ್ರಂಥಗಳು ತಿಳಿಸುತ್ತವೆ. ಇದು ಕೇವಲ ಕತೆ ಎಂದು ಅನ್ನಿಸುತ್ತದೆ. ಸ್ತ್ರೀಯರಿಗೆ ದೊರಕುತ್ತಿದ್ದ ವಿದ್ಯಾಭ್ಯಾಸವನ್ನು ನೋಡಿದರೆ ಅವರು ಸಾಹಿತ್ಯವನ್ನು ಸೃಷ್ಟಿಸಿರುವುದು ಅಸಂಭವವೆನ್ನಿಸುತ್ತದೆ. ಪ್ರಾಚೀನ ಕರ್ನಾಟಕದ ಒಬ್ಬಿಬ್ಬರು ಸ್ತ್ರೀಯರು ಸಾಹಿತ್ಯಸೃಷ್ಟಿಗೆ ಕೈಹಾಕಿ ಯಶಸ್ವಿಯಾಗಿರುವುದು ಕಂಡುಬರುತ್ತದೆ. ಏಳನೇ ಶತಮಾನದ ಎರಡನೆಯ ಪುಲಿಕೇಶಿಯ ಮಗ ಚಂದ್ರಾದಿತ್ಯದೇವನ ರಾಣಿ ವಿಜಯ ಮಹಾದೇವಿ ಅಥವಾ ವಿಜ್ಜಿಕೆಯು ಸಂಸ್ಕೃತದಲ್ಲಿ ಅನೇಕ ಪದ್ಯಗಳನ್ನು ಬರೆದಿದ್ದಾಳೆ. ತನ್ನ ಕಾವ್ಯಶಕ್ತಿಯ ವಿಷಯದಲ್ಲಿ ಅಗಾಧವಾದ ವಿಶ್ವಾಸವಿದ್ದ ಅವಳು ತನ್ನನ್ನು ಕಪ್ಪು ಬಣ್ಣದ ಸರಸ್ವತಿ ಎಂದು ಹೊಗಳಿಕೊಂಡಿದ್ದಾಳೆ.[140] ವೈದರ್ಭೀ ರೀತಿಗೆ ಕಾಳಿದಾಸನಾದ ಮೇಲೆ ಕರ್ನಾಟಕದ ವಿಜಯಾಂಕಳೇ ಮಾದರಿಯೆಂದು ರಾಜಶೇಖರನು ಹೊಗಳಿದ್ದಾನೆ.[141] ಆದರೂ ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಅಕ್ಕಮಹಾದೇವಿ ಮುಂತಾದ ವಚನಕಾರ್ತಿಯರು ಬರುವವರೆಗೆ ಸ್ತ್ರೀಯರು ಹೆಚ್ಚಾಗಿ ಸಾಹಿತ್ಯ ಸೃಷ್ಟಿಗೆ ಕೈ ಹಾಕಲಿಲ್ಲವೆಂದು ಕಾಣಿಸುತ್ತದೆ. ಆದರೆ ಅವರು ಧಾರ್ಮಿಕ, ಸಾಮಾಜಿಕ, ರಾಜಕೀಯ, ಮತ್ತು

133 EC. VI. Mg. 22, 1129 A.D.
134 SII. IX. i. 118, 1057 A.D.
135 EC. XI. Dg. 115, C. 1148 A.D.
136 EC. XI. Dg. 17, 889 A.D.
137 EC. VIII, Nr. 38, C. 1077 A.D.
138 EC. XI. Dg. 133, 1071 A.D.
139 EC. VII. Sk. 295, 1074 A.D.
140 N. Lakshminarayana Rao : 'The Chālukyas.' (Karṇāṭaka Darśana, p.40).
141 ಅದೇ.

ಕಲೆಯ ಕ್ಷೇತ್ರಗಳಲ್ಲಿ ಶ್ರಮಿಸಿ ತಮ್ಮದೇ ಆದ ಉಜ್ವಲ ಕಾಣಿಕೆಯನ್ನು ಕರ್ನಾಟಕ ಸಂಸ್ಕೃತಿಗೆ ಸಲ್ಲಿಸಿದ್ದಾರೆ ಎಂಬುದನ್ನು ಈ ಅಧ್ಯಾಯದ ಉದ್ದಕ್ಕೂ ನೋಡಿದ್ದೇವೆ.

## ಜಾತಿ ಪದ್ಧತಿ

ಕರ್ನಾಟಕದ ಶಾಸನಗಳಲ್ಲಿ ಒಂದೆರಡು ಕಡೆ ವರ್ಣಗಳ (ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ) ಹೆಸರು ಬಂದಿದೆ.[142] ರಾಜನು ವರ್ಣಾಶ್ರಮಧರ್ಮವನ್ನು ಸಂರಕ್ಷಿಸುವುದು ಅವನ ಪವಿತ್ರ ಕರ್ತವ್ಯಗಳಲ್ಲೊಂದು ಎಂದೂ ಒಂದೆರಡು ಕಡೆ ಉಕ್ತವಾಗಿದೆ.[143] ಆದರೂ ಅವು ಹಿಂದಿನ ಪದ್ಧತಿಯನ್ನನುಸರಿಸಿ ಬಂದ ಉಕ್ತಿಗಳೇ ಹೊರತು ಜೀವಂತ ಸಂಪ್ರದಾಯವನ್ನು ಅವು ಸೂಚಿಸುವುದಿಲ್ಲ. ಪ್ರಾಚೀನ ಕರ್ನಾಟಕದಲ್ಲಿ ವರ್ಣಪದ್ಧತಿಯು ಬಹುಮಟ್ಟಿಗೆ ಕುಸಿದುಹೋಗಿತ್ತೆಂದು ಹೇಳಬಹುದು. ಇದು ಅರ್ಥವಾಗಬೇಕಾದರೆ ವರ್ಣವ್ಯವಸ್ಥೆಯ ಇತಿಹಾಸವನ್ನವಲೋಕಿಸಬೇಕಾಗುತ್ತದೆ.

ಋಗ್ವೇದದ ಪುರುಷಸೂಕ್ತದಲ್ಲಿ (ಋಗ್ವೇದ, X, 90, 12) ಬ್ರಾಹ್ಮಣನು ಪುರುಷನ ಮುಖದಿಂದಲೂ ಕ್ಷತ್ರಿಯನು ಬಾಹುವಿನಿಂದಲೂ ವೈಶ್ಯನು ತೊಡೆಯಿಂದಲೂ ಶೂದ್ರನು ಪಾದಗಳಿಂದಲೂ ಹುಟ್ಟಿದನೆಂದು ಹೇಳಿದೆ (ಈ ಹೇಳಿಕೆಯಲ್ಲಿ ಸಾಂಕೇತಿಕವಾದ ಅರ್ಥವಿರುವುದನ್ನು ಗಮನಿಸಬಹುದು).[143.1] ಪುರುಷ ಸೂಕ್ತವು ಋಗ್ವೇದದ ಅತ್ಯಂತ ಪ್ರಾಚೀನ ಭಾಗಕ್ಕೆ ಸೇರಿದುದಲ್ಲವೆಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ.[144] ಆದರೂ ಋಗ್ವೇದದ ಉಳಿದ ಅನೇಕ ಮಂತ್ರಗಳಲ್ಲಿ ಸಮಾಜವನ್ನು ಬ್ರಹ್ಮ, ಕ್ಷತ್ರ, ವೈಶ್ಯ, ಶೂದ್ರರೆಂದು ವಿಭಾಗಿಸಿರುವುದು ಕಂಡು ಬರುತ್ತದೆ.[145] ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ವರ್ಗವ್ಯವಸ್ಥೆಯಲ್ಲಿ ಅಂತಹ ಕಠೋರ ನಿಯಮಗಳೇನೂ ಇರಲಿಲ್ಲ. ಶೂದ್ರರನ್ನು ಬಿಟ್ಟರೆ ಯಾರು ಯಾವ ವರ್ಗವನ್ನು ಬೇಕಾದರೂ ಸೇರುವ ಸೌಲಭ್ಯವಿದ್ದಿತು. ಹೀಗೆ ಸೇರಿರುವುದು ವಿರಳವಾದರೂ ಕೆಲವರು ಕ್ಷತ್ರಿಯರೂ, ಒಬ್ಬಿಬ್ಬರು ವೈಶ್ಯರೂ ಬ್ರಾಹ್ಮಣರಾಗಿರುವುದು[146] ಈ ಊಹೆಯನ್ನು ದೃಢಪಡಿಸುತ್ತದೆ. ಈ ವರ್ಗ ವಿಭಜನೆಯು ಜನ್ಮಕ್ಕಿಂತ ಹೆಚ್ಚಾಗಿ ವೃತ್ತಿಯನ್ನವಲಂಬಿಸಿ ಮೂಡಿತು. ಮೊದಲ ಮೂರು ವರ್ಗಗಳ (ಬ್ರಹ್ಮ, ಕ್ಷತ್ರಿಯ, ವೈಶ್ಯ) ಪರಸ್ಪರ ವಿವಾಹದ ವಿಷಯಗಳಲ್ಲಿ ಖಚಿತ ನಿರ್ಬಂಧಗಳೇನೂ ಇರಲಿಲ್ಲ.[147] ಋಗ್ವೇದದಲ್ಲಿ ಆರ್ಯರ 'ವರ್ಣ' (=ಬಣ್ಣ) ಮತ್ತು ದಸ್ಯುಜನರ 'ವರ್ಣ'(=ಬಣ್ಣ) ಗಳಿಗಿರುವ ವ್ಯತ್ಯಾಸಗಳನ್ನು ತೋರಿಸುವ ಉಕ್ತಿಗಳಿದ್ದರೂ ಮೇಲೆ ಹೇಳಿದ ನಾಲ್ಕು ವರ್ಗಗಳನ್ನು ವರ್ಣಗಳೆಂದು ಅಲ್ಲಿ ಕರೆದಿಲ್ಲ.[148] ಬ್ರಾಹ್ಮಣಗಳ ಕಾಲದಲ್ಲಿ ವರ್ಗವ್ಯವಸ್ಥೆಯನ್ನು ವರ್ಣ ವ್ಯವಸ್ಥೆಯೆಂದು ಕರೆದು ಅದನ್ನು ಬಿಗಿಗೊಳಿಸಲಾಯಿತು. ನಾಲ್ಕು ವರ್ಣಗಳ ಜನರ ಮೈಬಣ್ಣಗಳು ಬೇರೆ ಬೇರೆ ; ನಾಲ್ವರೂ ಬೇರೆ ಬೇರೆ ಗಾತ್ರದ ಪಿಂಡಗಳನ್ನು ಹಾಕಬೇಕು; ನಾಲ್ವರನ್ನೂ ಸಂಬೋಧಿಸುವ ವಿಧಾನ ಬೇರೆ ಬೇರೆ ; ಮೊದಲ ಮೂರು ವರ್ಣಗಳವರು ಯಾಗಗಳನ್ನು ಮಾಡಬೇಕಾದ ಋತುಗಳು ಬೇರೆ ಬೇರೆ—ಇತ್ಯಾದಿಯಾಗಿ ಶತಪಥ ಬ್ರಾಹ್ಮಣವು

---

[142] MAR (1930). p. 113, C. 500 A.D. ; EC. V. Ak. 110, C. 1142 A.D.

[143] EI. XXVIII. p. 62, 578 A.D.

[143.1] ಕ್ರಿ.ಶ. 1142 ರ ಒಂದು ಶಾಸನದಲ್ಲಿ " ಆದಿಬ್ರಹ್ಮನ ತೊಡೆಯಿಂದಾದ ಶ್ವೇತ ಕುಲವೈಶ್ಯರ" ಉಲ್ಲೇಖವಿದೆ (SII. XV. No. 24). ವೈಶ್ಯರಲ್ಲಿ 'ಶ್ವೇತಕುಲ' ವಿದ್ದಂತೆ 'ಕೃಷ್ಣಕುಲ' ವೂ ಇದ್ದಿತೋ ಏನೋ ತಿಳಿಯದು.

[144] N. K. Dutt : Origin and Growth of Caste in India, p. 37.

[145] ಅದೇ, ಪು. 38.

[146] ಅದೇ, ಪು. 46, 57–58.

[147] ಅದೇ, ಪು. 68.

[148] Ghurye : Caste and Class in India, p. 46.

ವಿಧಿಸುತ್ತದೆ.[149] ಬ್ರಾಹ್ಮಣಗಳ ಕಾಲದಲ್ಲಿ ವ್ಯಕ್ತಿಯ ವರ್ಣವನ್ನು ನಿರ್ಣಯಿಸುತ್ತಿದ್ದುದು ಅವನ ಹುಟ್ಟೇ ಹೊರತು ವೃತ್ತಿಯಲ್ಲ.

ವರ್ಣವ್ಯವಸ್ಥೆಯನ್ನು ಆದರ ಶುದ್ಧರೂಪದಲ್ಲಿ ಉಳಿಸುವುದು ಕ್ರಮೇಣ ಕಷ್ಟವಾಗುತ್ತ ಬಂದಿರಬೇಕು. ಬೇರೆ ಬೇರೆ ವರ್ಣಗಳವರು ಬೇರೆ ಬೇರೆಯವರ ವೃತ್ತಿಗಳನ್ನವಲಂಬಿಸಿದರು. ಬೇರೆ ಬೇರೆ ವರ್ಣಗಳ ಸ್ತ್ರೀಯರ ಸಂಪರ್ಕವನ್ನು ಪಡೆದರು. ಇದರಿಂದ ವರ್ಣಸಾಂಕರ್ಯವುಂಟಾಯಿತು. ಇದರ ಫಲವಾಗಿ ಬೇರೆ ಬೇರೆ 'ಜಾತಿ'ಗಳು ಹುಟ್ಟಿದುವು ಎಂದು ಮನುವು ಅಭಿಪ್ರಾಯಪಡುತ್ತಾನೆ.[150] ಋಗ್ವೇದದಲ್ಲಿಯೇ ಕರ್ಮಾರ, ನಾವಿದ, ವೈದ್ಯ, ರಥಕಾರ ಮುಂತಾದ ವೃತ್ತಿಕಾರರ ಹೆಸರುಗಳಿವೆ. ಇವರನ್ನು ಯಾವ ವರ್ಗಗಳಿಗೆ ಸೇರಿಸ ಬೇಕೋ ತಿಳಿಯದು. ಹೀಗೆ ಜಾತಿವ್ಯವಸ್ಥೆಯ ಮೂಲ ಬಹು ಪ್ರಾಚೀನವಾದುದು. ಯಾವಾಗ ಒಂದು ವರ್ಣದವರು ಇನ್ನೊಂದು ವರ್ಣದವರ ವೃತ್ತಿಯನ್ನು ಕೈಗೊಂಡರೋ ಆಗಲೇ ವರ್ಣವ್ಯವಸ್ಥೆಯು ಕುಸಿಯಿತೆಂದು ಹೇಳಬಹುದು. ಜಾತಿಪದ್ಧತಿಯು ಹೇಗೆ ಉದಯವಾಗಿರಬಹುದೆಂಬುದರ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಪರಂಪರೆಯಿಂದ ಬಂದು ಬೇರೆ ಬೇರೆ ವೃತ್ತಿಗಳನ್ನು ಅನುಸರಿಸುತ್ತ ಆ ವೃತ್ತಿಗಳ ರಹಸ್ಯಗಳನ್ನು ಕಾಪಾಡಲು ಮಾಡಿದ ಪ್ರಯತ್ನದಲ್ಲಿ, ತನ್ನ ಗುಂಪಿನಲ್ಲಲ್ಲದೆ ಬೇರೆ ಗುಂಪಿನಲ್ಲಿ ಮದುವೆಯಾಗಲು ಇಷ್ಟಪಡದ ಮನುಷ್ಯಸ್ವಭಾವದಲ್ಲಿ ಜಾತಿ ಪದ್ಧತಿಗೆ ಮೂಲವನ್ನು ಹುಡುಕಬೇಕಾಗುತ್ತದೆ.

ಪ್ರಾಚೀನ ಕರ್ನಾಟಕದಲ್ಲಿ ವರ್ಣಪದ್ಧತಿಯ ಪರಿಪಾಲನೆಯು ಬಹುಮಟ್ಟಿಗೆ ಕುಸಿದುಹೋಗಿದ್ದಿತು. ಬ್ರಾಹ್ಮಣರು ತಮ್ಮ ವರ್ಣದ ವೃತ್ತಿಗಳಾದ ಯಜನ, ಯಾಜನ, ಅಧ್ಯಯನ, ಅಧ್ಯಾಪನಾದಿಗಳನ್ನು ಮಾಡಿಕೊಂಡಿದ್ದರೂ ಅವರಲ್ಲಿ ಹಲವರು ಕ್ಷತ್ರಿಯರಂತೆ ಕತ್ತಿಯನ್ನು ಹಿಡಿದು ರಾಜ್ಯಗಳನ್ನು ಸ್ಥಾಪಿಸಿದ್ದುಂಟು. ಇದಕ್ಕೆ ಅತ್ಯುತ್ತಮ ಉದಾಹರಣೆ ಕದಂಬರ ಮೂಲಪುರುಷನಾದ ಮಯೂರಶರ್ಮ. ಕಂಚಿಯಲ್ಲಿ ಅಭ್ಯಾಸ ಮಾಡುತ್ತಿದ್ದ ಬ್ರಾಹ್ಮಣ ಮಯೂರಶರ್ಮನಿಗೂ ಪಲ್ಲವರಿಗೂ ಒಂದು ಅಶ್ವಸಂಸ್ಥೆಯ ವಿಷಯದಲ್ಲಿ ಕಲಹವು ಬಂದು ಮಯೂರಶರ್ಮನು ಹೀಗೆ ಅಂದುಕೊಳ್ಳುತ್ತಾನೆ.–"ಅಹೋ! ಕಲಿಯುಗದಲ್ಲಿ ಕ್ಷತ್ರಿಯರು ಬ್ರಾಹ್ಮಣರನ್ನು ಹುಲ್ಲಿಗಿಂತ ಕಡೆಯಾಗಿ ಕಾಣುತ್ತಾರೆ. ಬ್ರಾಹ್ಮಣರು ಎಲ್ಲ ಶಾಖೆಗಳನ್ನೂ ಗುರುಗಳ ಬಳಿ ಅಭ್ಯಾಸ ಮಾಡಿದರೂ 'ಬ್ರಹ್ಮಸಿದ್ಧಿ' ಇನ್ನೂ ಕ್ಷತ್ರಿಯರ ಕೈಯುಲ್ಲೇ ಇದೆ." ಈ ರೀತಿ ಅವನು ದುಃಖಿಸಿ ಕುಶ, ಸಮಿತ್ತು, ಆಜ್ಯ, ಚರುಗಳನ್ನು ಹಿಡಿಯುತ್ತಿದ್ದ ಕೈಯಲ್ಲಿ ಹೊಳೆಯುವ ಆಯುಧಗಳನ್ನು ಹಿಡಿದು ದುರ್ಗಮವಾದ ವನದುರ್ಗವೊಂದರಲ್ಲಿ ರಕ್ಷಣೆಯನ್ನು ಪಡೆದು ಯುದ್ಧದಲ್ಲಿ ಜಯವನ್ನು ಹೊಂದಿ ಕದಂಬರ ವಂಶಕ್ಕೆ ಮೂಲಪುರುಷನಾಗುತ್ತಾನೆ.[151] ಬ್ರಾಹ್ಮಣರಲ್ಲಿ ಹಲವರು ಸಮರಧುರಂಧರರೂ ಆಗಿದ್ದರು.[152] ಕರ್ನಾಟಕದ ಬೇರೆ ಬೇರೆ ಭಾಗಗಳನ್ನಾಳುತ್ತಿದ್ದ ಹಲವು ರಾಜರು ತಮ್ಮನ್ನು ಕ್ಷತ್ರಿಯರೆಂದು ಕರೆದುಕೊಂಡಿದ್ದರೂ, ಹಾಗೆ ಕರೆದುಕೊಳ್ಳುವುದರಲ್ಲಿ ಅಂತಹ ಉತ್ಸಾಹವನ್ನು ತೋರಿಲ್ಲ. ವ್ಯಾಪಾರಿಗಳು ತಮ್ಮನ್ನು ವೈಶ್ಯರೆಂದು ಕರೆದುಕೊಂಡಿದ್ದರೂ, ವ್ಯವಸಾಯವನ್ನೂ ಪಶುಪಾಲನೆಯನ್ನೂ ಮಾಡುತ್ತಿದ್ದ ಇತರರು ತಮ್ಮನ್ನು ವೈಶ್ಯರೆಂದು ಕರೆದುಕೊಂಡಿಲ್ಲ. ಶೂದ್ರ ಎನ್ನುವ ಪದವು ಬಹಳ ಸಡಿಲವಾದ ಅರ್ಥದಲ್ಲಿ ಬಳಕೆಯಾಗಿದೆ. ಕೆಳವರ್ಗದ ವೃತ್ತಿಗಳನ್ನನುಸರಿಸಿದವರು ಶೂದ್ರರೆಂದು ಕರೆಯಿಸಿಕೊಳ್ಳುತ್ತಿದ್ದರು. ಹೀಗೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಪದಗಳು ಬಳಕೆಯಾಗಿದ್ದರೂ ಅವು ಹಿಂದಿನ ಅರ್ಥವನ್ನು ಬಹುಮಟ್ಟಿಗೆ ಕಳೆದುಕೊಂಡಿದ್ದುವೆಂಬುದು ಇದರಿಂದ ಸೂಚಿತವಾಗುತ್ತದೆ. ಆದ್ದರಿಂದ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಕೆಲವು ಜಾತಿ

---

149 Origin and Growth of Caste in India, pp. 85–6.

150 The Ordinances of Manu (Tr. Burnell), pp. 306–8.

151 EC. VII. Sk. 176, C. 450 A.D.

152 BKI. I. i. 139, 1095 A.D.

ಗಳನ್ನೂ, ಆಯಾ ಜಾತಿಯವರ ವೃತ್ತಿಗಳನ್ನೂ ಪ್ರಸ್ತಾಪಿಸುತ್ತೇವೆ. ರಾಜರ ಮತ್ತು ವರ್ತಕರ ಪ್ರಸ್ತಾಪವು ಬೇರೆ ಅಧ್ಯಾಯಗಳಲ್ಲಿ ವಿಸ್ತಾರವಾಗಿ ಬಂದಿರುವುದರಿಂದ ಅವರ ವಿಷಯವನ್ನು ಇಲ್ಲಿ ಚರ್ಚಿಸುವುದಿಲ್ಲ.

## ಬ್ರಾಹ್ಮಣರು

ಶಿಕಾರಿಪುರದ ಈಚಿನ ಒಂದು ಶಾಸನದ ಪ್ರಕಾರ[153] ಮುಕ್ಕಣ್ಣಕದಂಬನ ಕಾಲದಲ್ಲಿ ದಕ್ಷಿಣದಲ್ಲಿ ಬ್ರಾಹ್ಮಣರೇ ಇರಲಿಲ್ಲ. ಅವರಿಗಾಗಿ ಹುಡುಕಿ, ಇಲ್ಲಿ ಯಾರೂ ಇಲ್ಲದುದನ್ನು ಕಂಡು ಮುಕ್ಕಣ್ಣಕದಂಬನು ಉತ್ತರಕ್ಕೆ ಹೋಗಿ ಅಹಿಚ್ಛತ್ರ ಅಗ್ರಹಾರದಿಂದ (ಇದು ಬರೈಲಿ ಜಿಲ್ಲೆಯಲ್ಲಿದೆ ಎಂದು ಹೇಳುತ್ತಾರೆ) ಅನೇಕ ಬ್ರಾಹ್ಮಣ ಸಂಸಾರಗಳನ್ನು ಕರೆತಂದು ಶಿವಮೊಗ್ಗ ಜಿಲ್ಲೆಯ ಸ್ಥಾನಕುಂದೂರ್ ಅಥವಾ ತಾಳಗುಂದದಲ್ಲಿ ಅವರು ನೆಲಸುವಂತೆ ಮಾಡಿದನು. ಆದರೆ ಕ್ರಿಸ್ತಶಕದ ಎರಡನೆಯ ಶತಮಾನದ ಮಳವಳ್ಳಿಯ ಪ್ರಾಕೃತ ಶಾಸನದಲ್ಲಿ[154] ಒಬ್ಬ ಬ್ರಾಹ್ಮಣ ವಿದ್ವಾಂಸನಿಗೆ ದತ್ತಿಕೊಟ್ಟಿರುವ ವಿಷಯವು ಬಂದಿರುವುದರಿಂದ ಕ್ರಿ. ಶ. 3ನೆಯ ಶತಮಾನಕ್ಕಿಂತ ಹಿಂದೆಯೇ ಇಲ್ಲಿ ಬ್ರಾಹ್ಮಣರಿದ್ದರೆಂದೂ, ಅವರು ಕ್ರಿ. ಶ. 3ನೇ ಶತಕದ ಹೊತ್ತಿಗೆ ದೇಶವನ್ನು ಬಿಟ್ಟುಹೋಗಿದ್ದಿರಬಹುದೆಂದೂ ರೈಸ್ ಅವರು ಊಹಿಸುತ್ತಾರೆ.[155] ಹನ್ನೊಂದನೆಯ ಶತಮಾನದಲ್ಲಿ ದಕ್ಷಿಣದ ದ್ರಾವಿಡ ದೇಶದಿಂದ ಮುನ್ನೂರ್ವರು ಬ್ರಾಹ್ಮಣರು ವಲಸೆ ಬಂದು ಕರ್ನಾಟಕದಲ್ಲಿ ನೆಲಸಿದ ವಿಷಯವು ಶಾಸನವೊಂದರಲ್ಲಿದೆ.[156]

ಪ್ರಾಚೀನ ಕರ್ನಾಟಕದಲ್ಲಿ ಬ್ರಾಹ್ಮಣರು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಜಾತಿಗಳಲ್ಲೆಲ್ಲ ಬ್ರಾಹ್ಮಣ ಜಾತಿಯೇ ಉತ್ತಮವಾದುದು ಎಂಬುದು ಪಂಪನ ಹೇಳಿಕೆ.[157] ಶಾಸನದಲ್ಲಿಯೂ ಇಂತಹ ಉಕ್ತಿ ಹಲವೆಡೆ ಬಂದಿದೆ ("ಭುವನಕಾರಾಧ್ಯವಿಪ್ರೋತ್ತಮಕುಳತಿಳಕಂ").[158] ವಿದ್ಯಾಕ್ಷೇತ್ರದಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಅಗ್ರಸ್ಥಾನದಲ್ಲಿದ್ದವರು ಅವರು (ಇದರ ವಿವರಗಳು ಆಯಾ ಅಧ್ಯಾಯಗಳಲ್ಲಿ ಬಂದಿವೆ). ಅಶನ ವಸನಾದಿಗಳ ಚಿಂತೆಯಿಲ್ಲದೆ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲೆಂದು ರಾಜರು

---

153 EC. VII. Sk. 186, C. 1200 A.D.

154 EC. VII. Sk. 263, C. 150 A.D.

155 Mysore and Coorg from Inscriptions, pp. 204–5.

ಕದಂಬ ವಂಶವು ಸ್ಥಾಪಿತವಾದ ಆರು-ಏಳು ಶತಮಾನಗಳ ಬಳಿಕ ಹುಟ್ಟಿರುವ ಶಾಸನಗಳು ಮಯೂರಶರ್ಮನಿಗಿಂತ ಹಿಂದೆ ತ್ರಿನೇತ್ರ ಕದಂಬ (ಮುಕ್ಕಣ್ಣ ಕದಂಬ), ಮಧುಕೇಶ್ವರ, ಮಲ್ಲಿನಾಥ, ಚಂದ್ರವರ್ಮ ಎಂಬುವರು ಆಳಿದರೆಂದು ಹೇಳುತ್ತವೆ. ಇವರು ಇದ್ದುದು ನಿಜವಾದರೆ ಮುಕ್ಕಣ್ಣ ಕದಂಬನ ಕಾಲ 3ನೆಯ ಶತಮಾನವಾಗುತ್ತದೆ. ಆದರೆ "ಈ ಅರಸರ ಹೆಸರುಗಳು ಕದಂಬ ರಾಜ್ಯಸ್ಥಾಪನಾನಂತರ 6-7 ಶತಮಾನಗಳವರೆಗೆ ಎಲ್ಲಿಯೂ ಕಾಣಬರುವುದಿಲ್ಲವಾದ್ದರಿಂದ ಇವುಗಳಲ್ಲಿ ತಥ್ಯಾಂಶವು ಎಷ್ಟಿದೆಯೆಂಬುದನ್ನು ಹೇಳಲು ಸಾಧ್ಯವಿಲ್ಲ". (ಎನ್. ಲಕ್ಷ್ಮೀನಾರಾಯಣರಾವ್ ಮತ್ತು ಆರ್. ಎಸ್. ಪಂಚಮುಖಿ: ಕರ್ನಾಟಕದ ಅರಸುಮನೆತನಗಳು, ಪು. 7). ವಸ್ತುಸ್ಥಿತಿ ಹೀಗಿರುವುದರಿಂದ, ಮುಕ್ಕಣ್ಣನು ಉತ್ತರ ಭಾರತದಿಂದ ಬ್ರಾಹ್ಮಣರನ್ನು ಕರೆತಂದನೆಂಬ 11ನೇ ಶತಮಾನದ ಶಾಸನದ ಉಕ್ತಿಯನ್ನು ನಂಬುವುದು ಕಷ್ಟವಾಗುತ್ತದೆ.

156 EI XII. p. 150, 1087 A.D.

157 ಪಂಪಭಾರತ, 14.48–"ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ನಂಬಲೇ | ಮಾತೊ ಜಿನೇಂದ್ರಧರ್ಮನೆ ವಲಂ ದೊರೆ ಧರ್ಮದೊಳೆಂದು ತ | ಜ್ಜಾತಿಯುಮುತ್ತರೋತ್ತರದಿಂ ಮಾಡಿ ನೆಗೞ್ದವನಿಂತಿರಾತ್ಮನಿ | ಖ್ಯಾತಿಯುಮಾಂತನಾತನ ಮಗಂ ನೆಗಳ್ದಂ ಕವಿತಾಗುಣಾರ್ಣವಂ ||"

158 BKI. I. ii. 133, 1087 A.D.

ನೂರಾರು ದತ್ತಿಗಳನ್ನು ಬ್ರಾಹ್ಮಣರಿಗೆ ಬಿಟ್ಟುಕೊಟ್ಟಿದ್ದಾರೆ. ಅವುಗಳನ್ನು 'ಬ್ರಹ್ಮದೇಯ'[159]ಗಳೆಂದು ಕರೆಯುತ್ತಾರೆ. ಊರುಗಳನ್ನು ಅಗ್ರಹಾರಗಳನ್ನಾಗಿ ಪರಿವರ್ತಿಸಿ ಬ್ರಾಹ್ಮಣರಿಗೆ ದಾನಮಾಡುತ್ತಿದ್ದರು. ಸಯ್ಯಡಿ ಎಂಬ ಅಗ್ರಹಾರದ ಬ್ರಾಹ್ಮಣರ ಪ್ರಶಸ್ತಿ ಈ ರೀತಿಯಿದೆ—"ಸಯಿಡಿಯ ನಾಲ್ನೂರ್ವರ ಪೆರ್ಮೆಯೆಂತೆನೆ—ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯಾನವರತಾಧ್ಯಯನಾಧ್ಯಾಪನ ಯಜನ ಯಾಜನ ದಾನ ಪ್ರತಿಗ್ರಹ ಕ್ರಿಯಾಸ[ಕ್ತ]ರ್ ಮನು ಯಾಜ್ಞವಲ್ಕಿ ಪ್ರಣೀತ ಸ್ಮೃತಿ ವಿಹಿತ ಧರ್ಮ್ಮಾ[ನುರ]ಕ್ತರುಂ ರಾಮಾಯಣ ಭಾರತಾದಿ ಪುರಾ[ಣಾ]ರ್ಥ ವಿಚಾರಕೋ[ವಿ]ದರ್ ವ್ಯಾಕರಣ ವೇದಾಂಗ ವಿದ್ಯಾವಿಶಾರದರ್ ಪರೋಪಕಾರಾರ್ತ್ಥ ಸಂಪಾದಿತಾ [ರ್ಥ]ರುಂ ದುಷ್ಟನಿಗ್ರಹ ವಿಶಿಷ್ಟ ಪ್ರತಿಪಾಳನ ಸಮೇತರು ಶ್ರೀ ಮೂಲಸ್ಥಾನ ದೇವ ಪಾದಾರಾಧಕರು ಶ್ರೀಮತು ಸಯ್ಯಡಿಯ ಊರೊಡೆಯ ಪ್ರಮುಖ ಮಹಾಜನಂ ಧರ್ಮಂಗಳ ಸ್ವಧರ್ಮದಿಂ ಸುರಕ್ಷಿತಮಾಗಿ ರಕ್ಷಿಸುತ್ತಮಿರೆ."[160] ಬೇಗೂರಿನ ಬ್ರಾಹ್ಮಣರ ಪ್ರಶಸ್ತಿ ಈ ರೀತಿ ಇದೆ–"ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧ್ಯಾದಿ ಸಂಪಂನರು ಮೀಮಾಂಸಕ ಲೋಕಾಯತ ಬೌದ್ಧ ಸಾಂಖ್ಯ ವೈಶೇಷಿಕಾದಿ ಶಾಸ್ತ್ರಾಗಮ ಕುಶಲರಗ್ನಿಷ್ಟೋಮಾದಿ ವಿಶಿಷ್ಟೇಷ್ಟ ವಿದ್ವಜ್ಜನ ಪೂಜಿತರು ದ್ವಾತ್ರಿಂಶತ್ಸಹಸ್ರ ಸಮಯಾಗ್ರಗಣ್ಯರನೇಕ ಶ್ರುತಿ ಸ್ಮೃತಿ ಶೃತ್ಯಾರ್ಥ ಕೀರ್ತಿತ್ರಯ ಸಂಪಂನರಪ್ಪ ಶ್ರೀಮದಗ್ರಹಾರ ಬೇಗೂರ ಮಹಾಜನಂ"[161] ಇವರಿಂದ ಅಗ್ರಹಾರ ಮತ್ತು ಬ್ರಹ್ಮಪುರಿಗಳು ಪ್ರಾಚೀನ ಕರ್ನಾಟಕದ ಅತಿಮುಖ್ಯ ವಿದ್ಯಾಕೇಂದ್ರಗಳಾಗಿ ಪರಿಣಮಿಸಿದುವೆಂಬುದನ್ನು ಹಿಂದಿನ ಅಧ್ಯಾಯವೊಂದರಲ್ಲಿ ನೋಡಿದ್ದೇವೆ.

ಬ್ರಾಹ್ಮಣರು ರಾಜಕೀಯ ಕ್ಷೇತ್ರದಲ್ಲಿಯೂ ಬಹುಮುಖ್ಯರಾಗಿದ್ದರು. ರಾಜರು ನೇಮಿಸಿಕೊಂಡಿದ್ದ ಹಲವು ಮಂತ್ರಿಗಳು ಬ್ರಾಹ್ಮಣರಾಗಿದ್ದರು, ರಾಜ್ಯದ ಅಭಿವೃದ್ಧಿಗೆ ಬಹುವಾಗಿ ಕಾರಣರಾಗಿದ್ದರು. ವಿಪ್ರಕುಳ ತಿಳಕನಾಗಿದ್ದ ಏಚಣ ಎಂಬ ದಂಡನಾಯಕನನ್ನು 'ಹೊಯ್ಸಳ ರಾಜ್ಯ ಸಮುದ್ಧರಣ'ನೆಂದು ಒಂದು ಶಾಸನದಲ್ಲಿ ಕರೆದಿದೆ.[162] 'ವಿಪ್ರಕುಳ ಕುಮುದ ಕೌಮುದೀ ವಿಳಾಸ'ನಾಗಿದ್ದ ದಂಡನಾಯಕ ಭೀವಣಯ್ಯ ಎನ್ನುವವನು ನಿಯೋಗಧುರಂಧರನೂ ಸಮರಧುರಂಧರನೂ ಶ್ರೀಮನ್ಮಹಾಪ್ರಧಾನನೂ ಆಗಿದ್ದನು.[163] ಬ್ರಾಹ್ಮಣರ ಮೇಧಾಶಕ್ತಿಯನ್ನೂ ಶಾಸ್ತ್ರ ಪರಿಜ್ಞಾನವನ್ನೂ ರಾಜರು ಒಳ್ಳೆಯ ಆಡಳಿತಕ್ಕಾಗಿ ಬಳಸಿಕೊಂಡಿದ್ದರಲ್ಲಿ ಆಶ್ಚರ್ಯವಿಲ್ಲ.

ಬ್ರಾಹ್ಮಣರನ್ನು 'ಷಟ್ಕರ್ಮನಿರತರು'[164] ಎಂದು ಶಾಸನಗಳು ಬಣ್ಣಿಸುತ್ತವೆ. ಅಧ್ಯಯನ, ಅಧ್ಯಾಪನ (=ಪಾಠವನ್ನು ಬೋಧಿಸುವುದು), ಯಜನ (=ಯಾಗವನ್ನು ಮಾಡುವುದು), ಯಾಜನ (=ಯಾಗವನ್ನು ಮಾಡಿಸುವುದು), ದಾನ, ಪ್ರತಿಗ್ರಹ (=ದಾನವನ್ನು ಸ್ವೀಕರಿಸುವುದು)–ಇವೇ ಆ ಷಟ್ಕರ್ಮಗಳು. ಇವುಗಳಲ್ಲಿ ಯಜನ, ಯಾಜನಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ರಾಜರುಗಳಿಗೆ ಯಾಗಗಳನ್ನು ಮಾಡಿಸಬೇಕೆಂಬ ಹಂಬಲವು ಬಹುವಾಗಿ ಇದ್ದಿತು. ಒಂದನೆಯ ಪುಲಿಕೇಶಿಯು ಅಶ್ವಮೇಧಾದಿ ಯಾಗಗಳನ್ನು

---

159 EC. VII. Sk. 263, C. 150 A.D. (ಈ ಪ್ರಾಕೃತ ಶಾಸನದಲ್ಲಿ 'ಬ್ರಹ್ಮದೇಯ'ವನ್ನು 'ಬ್ರಹ್ಮದೆಜ್ಜ'ವೆಂದು ಕರೆದಿದೆ.); EC. XI. Hr. 1. 975 A.D.; EC. IV. Hg. 4, C. 750 A.D.–"ಬಿನಾಮ್ಮಂಗೆ ಧಣ್ಣಗನಾಡಿಯಂ ಬ್ರಹ್ಮಾದೇಯಂಗೊಟ್ಟರ್."; "ಕೆಸುಗೊಳಮೊಡೆಯ ಮಹಾಜನಕ್ಕೆ ಪೆರ್ನಟ್ಟಯೊರುಂ ಮದರ್ೂರುಂ ಬ್ರಹ್ಮಾದೇಯಂ ಪೊಯ್ದರ್." [ಪೊಯ್ದರ್= ಧಾರಾಪೂರ್ವಕವಾಗಿ ಕೊಟ್ಟರು (?), ಪೊಯ್—ಹೊಯ್= ಸುರಿ.]

160 BKI. I. ii. 129, 1083 A.D. ಸಯ್ಯಡಿಯ ಇಂತಹ ವಿದ್ವಾಂಸರ ಮಧ್ಯೆ ಬಾಳಿದ ಒಂದನೆಯ ನಾಗವರ್ಮನು (ಸು. 990) ಬಾಣನ ಕಾದಂಬರಿಯನ್ನು ಕನ್ನಡಕ್ಕೆ ಬಹು ಸುಂದರವಾದ ಚಂಪೂಕಾವ್ಯವಾಗಿ ಪರಿವರ್ತಿಸಿದುದರಲ್ಲಿ ಆಶ್ಚರ್ಯವಿಲ್ಲ. ಕನ್ನಡ ಪಂಚತಂತ್ರವನ್ನು (1031) ಬರೆದ ದುರ್ಗಸಿಂಹನೂ ಈ ಅಗ್ರಹಾರದವನೇ.

161 EC. VII. Sk. 14, 1089 A.D.

162 EC. IV. Ng. 28, C. 1125 A.D.

163 BKI. I. ii. 139, 1095 A.D.

164 SII. IX. i. 142, 1079 A.D.

ಮಾಡಿದಂತೆ ಇತಿಹಾಸವು ಹೇಳುತ್ತದೆ.[165] ಎರಡನೆಯ ಪುಲಿಕೇಶಿಯು ತನ್ನ ತಾಯ್ತಂದೆಯರ ಪುಣ್ಯಕ್ಕಾಗಿ ಪಂಚ ಮಹಾಯಜ್ಞಗಳನ್ನು (ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞ) ಮಾಡಲು ಜ್ಯೇಷ್ಠಾಶರ್ಮ ಎಂಬ ಬ್ರಾಹ್ಮಣನಿಗೆ ಮಕರಪ್ಪಿ ಎಂಬ ಗ್ರಾಮವನ್ನು ಕೊಟ್ಟಂತೆ ಶಾಸನವೊಂದು ತಿಳಿಸುತ್ತದೆ.[166] ರಣವಿಕ್ರಮ ಎಂಬ ರಾಜನನ್ನು "ಅಗ್ನಿಷ್ಟೋಮಾಗ್ನಿಚಯನ ವಾಜಪೇಯ ಬಹುಸುವರ್ಣ ಪುಂಡರೀಕಾಶ್ವಮೇಧಾವಭೃಥ ಸ್ನಾನ ಪವಿತ್ರೀಕೃತ ಶರೀರ" ನೆಂದು ಒಂದು ಶಾಸನವು ಕರೆದಿದೆ.[167] ಬ್ರಾಹ್ಮಣರೇ ತಮ್ಮ ತಮ್ಮ ಗೃಹಗಳಲ್ಲಿ ಸಣ್ಣ ಇಷ್ಟಿಗಳನ್ನು ನಡಸುತ್ತಿದ್ದರು. ಇಟ್ಟಗೆ ಎಂಬ ಅಗ್ರಹಾರವನ್ನು ವರ್ಣಿಸುತ್ತ ಅಲ್ಲಿಯ ಹೋಮಧೂಮವು ಗಗನವನ್ನು ಮುಟ್ಟಿದ್ದಿತೆಂದೂ, ಅಲ್ಲಿಯ ಬ್ರಾಹ್ಮಣರಿಂದ ಜಗತ್ತು ವೇದೋಕ್ತಮಾರ್ಗಾನುವರ್ತಿಯಾಯಿತೆಂದೂ, ದೇವತೆಗಳು ಅವರು ಕೊಡುತ್ತಿದ್ದ ಹವಿಸ್ಸುಗಳನ್ನೇ ಕಾದುಕೊಂಡಿರುತ್ತಿದ್ದರೆಂದೂ ಒಂದು ಶಾಸನವು ಬಣ್ಣಿಸುತ್ತದೆ.[168]

ಯಾಗಗಳಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದ ಸಂಪ್ರದಾಯದ ಸೂಚನೆಗಳು ಕೆಲವು ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಕಂಡುಬರುತ್ತವೆ. ಚಿಕ್ಕಮಗಳೂರು ತಾಲ್ಲೂಕಿನ ಹಿರೇಮಗಳೂರಿನಲ್ಲಿ ಒಂದು ಪ್ರಾಚೀನ ಕಾಲದ ಯೂಪಸ್ತಂಭವಿದೆ.[169] ಹಿರೇಮಗಳೂರು ಬಹು ಪ್ರಾಚೀನಕಾಲದಿಂದಲೂ ಯಜ್ಞಯಾಗಾದಿಗಳಿಗೆ ಪ್ರಸಿದ್ಧವಾಗಿದ್ದಿತು. ಅಲ್ಲಿ ಜನಮೇಜಯನು ಸರ್ಪಯಜ್ಞವನ್ನು ಮಾಡಿದನೆಂದು ಸ್ಥಳಪುರಾಣವು ಹೇಳುತ್ತದೆ. ಆ ಯೂಪಸ್ತಂಭದ ಪಶ್ಚಿಮ ಮುಖದ ಮೇಲೆ ಈ ಶಾಸನವಿದೆ[170]–"... ಗುಳವಮ....ರ....ಹ....ಅಶ್ವಯೂಪ ಶ....ಮ". ಇದು ಕ್ರಿ. ಶ. 2 ಅಥವಾ 3ನೇ ಶತಕಕ್ಕೆ ಸೇರಿದ ಶಾಸನ. ಈ ಶಾಸನದ ಭಾಷೆಯನ್ನು ನಿರ್ಧರಿಸುವುದು ಬಹಳ ಕಷ್ಟ. ಅದೇ ಯೂಪಸ್ತಂಭದ ಪೂರ್ವ ಮುಖದ ಮೇಲೆ ಕ್ರಿ. ಶ. 10ನೇ ಶತಕದ ಈ ಶಾಸನವಿದೆ.[171]–"ಶ್ರೀ [ಅ]ಣ್ಣಯ್ಯ ಡಿಸಿದ ಬಲಿ ಲಕಿಗ". "ಅಶ್ವಯೂಪ" ಎಂಬ ಮಾತನ್ನು ನೋಡಿದರೆ ಕ್ರಿಸ್ತಪೂರ್ವದಲ್ಲಿಯೇ ಅಲ್ಲಿ

---

165 EI. XXVIII. p. 8, 543 A.D.

166 IA. VI. p. 73, 612 A.D.

167 EI. XXVIII. p. 62, 578 A.D.

168 "ಕಲಿಮಲಶಕಾರ್ಥ ಧೂಮಮೆಸಿಸಿರ್ಪ್ಪ ನೆಗರ್ತೆಯ ಹೋಮಧೂಮಮುಗ್ಗಳಿಸಿ ನಚ(ಭ)ಂಬರಂ ಮಿಳಿರ್ದು ನಾಕನದೀ ಪ್ರಚುರ ಪ್ರವಾಹ ಸಂಪ್ಲವನ ವಿಳಾಸ ಯಾಮುನ ಜಳೊದ್ಗಮಂ ಮಿಗೆ ಜನ್ನವಿರ್ಪ ಭೂವಳಿಯು ವಿನೂತ ವಿಪ್ರವರರಿಂದೆಸೆದಿರ್ಪುದದೆತ್ತ ನೋರ್ಪಡಂ॥ ಅವರಿಂದಂ ವೇದ ವಿದ್ಯಾಲತಿಕೆ ನಿಮಿರ್ದುದಾ ಬ್ರಾಹ್ಮಣ ಜ್ಯೇಷ್ಠರಿಂ ಭೂಭುವನಂ ವೇದೋಕ್ತ ಮಾರ್ಗಾನುಗಂ ಎಸಿಸಿದುದಾ ಭೂಮಿದೇವರ್ಕಳ್ ಒಲ್ದಿಕ್ಕುವ ನಾನಾ ಹವ್ಯಸಂಪೋಹಮನೆ ಸುರಗಣಂ ಪಾರ್ದುಕೊಂಡಿರ್ಪುದಾ ವಿಪ್ರವರರ್ಪೆಚರ್ಚಲ್ಕೆ ಪೆರ್ಚ್ಚಿತ್ತವಿದಿತ ಪರಬ್ರಹ್ಮಮಾ ಬ್ರಹ್ಮವಂಶ"॥

—(EI. XIII. p. 41, 1112 A.D.)

169 "The Yūpastambha has a high cubical base, then a short octoganal moulding and then again another cubical moulding overlaid by a square abacus baring a long lotus bud. On the east and west sides of the bud, there are three incised lines suggestive of a trident. On the east face of the base of the pillar was discovered a Kannada inscription of about the 10th Century A.D." (MAR. 1942. p. 47). ಈ ಶಾಸನವು ತುಂಬಾ ಸವೆದು ಹೋಗಿರುವುದರಿಂದ ಮೊದಮೊದಲು ರೈಸ್, ಆರ್. ನರಸಿಂಹಾಚಾರ್ಯರಂತಹ ಸೂಕ್ಷ್ಮದರ್ಶಿಗಳ ಕಣ್ಣಿಗೂ ಅದು ಬಿದ್ದಿರಲಿಲ್ಲ. ಯೂಪಸ್ತಂಭವಿರುವ ಈಶ್ವರ ದೇವಸ್ಥಾನದ ಬಳಿ ನಾಲ್ಕು ಕೈ, ಎಂಟು ಕಾಲುಗಳಿರುವ ಒಂದು ವಿಚಿತ್ರ ಜಡೆಮುನಿಯ ಶಿಲ್ಪವಿದೆ. ಯೂಪಗಳ ಬಗ್ಗೆ ಹೆಚ್ಚಿನ ವಿವರಗಳಿಗೆ, ನೋಡಿ-ಎಂ. ಚಿದಾನಂದಮೂರ್ತಿ: 'ಯೂಪಸ್ತಂಭಗಳು' (ಸಂಶೋಧನ ತರಂಗ, II. ಪು. 269-83).

170 MAR(1945). p. 110.

171 ಅದೇ, ಪು. 111.

ಯಾಗಗಳು, ಅಶ್ವಬಲಿಗಳು ನಡೆಯುತ್ತಿದ್ದುವೆಂಬುದು ಸೂಚಿತವಾಗುತ್ತದೆ. ಪೂರ್ವ ಮುಖದ ಶಾಸನವನ್ನು ಅಣ್ಣಯ್ಯ ಎನ್ನುವವನು ಕೊರೆಸಿರಬೇಕು. 'ಬಲಿ' ಎನ್ನುವ ಮಾತನ್ನು ನೋಡಿದರೆ ಅವನು ಯಾವುದೋ ಯಾಗವನ್ನು ಮಾಡಿಸಿ ಬಲಿಯನ್ನು ಕೊಟ್ಟನೆಂದು ಊಹಿಸಬೇಕಾಗುತ್ತದೆ. ಲಕಿಗ ಎಂಬಾತ ಶಾಸನವನ್ನು ಕೊರೆದವನು. ಬಹುಶಃ ನೊಳಂಬರಾಜ ಅಣ್ಣಿಗ ಅಥವಾ ವೀರನೊಳಂಬನು ಜೀರ್ಣವಾಗಿ ಹೋಗಿದ್ದ ಆ ಸ್ತಂಭವನ್ನು ಮತ್ತೆ ನೆಡಿಸಿರಬೇಕು ಎಂದು ಸಂಪಾದಕರು ಊಹಿಸುತ್ತಾರೆ. 'ಡಿಸಿದ' ಎಂಬುದನ್ನು '[ಮಾ]ಡಿಸಿದ' ಎಂದೂ ಓದಲು ಸಾಧ್ಯ. ಅಂತೂ ಪ್ರಾಚೀನ ಕರ್ನಾಟಕದಲ್ಲಿ ಯಜ್ಞಗಳನ್ನು ಮಾಡುವಾಗ ಬಲಿಯನ್ನು ಕೊಡುತ್ತಿದ್ದರೆಂಬುದು ಇದರಿಂದ ಸೂಚಿತವಾಗುತ್ತದೆ. ಸು. 800ರ ಶಾಸನವೊಂದರಲ್ಲಿ ಬೆಣ್ಣಮ್ಮ ಸೋಮಯಾಜಿಗಳು ಐನೂರ್ವರು ಬ್ರಾಹ್ಮಣರಿಗೆ ಕೊಟ್ಟ ದಾನದಲ್ಲಿ 'ಪಶುವಿಧಿ'ಯ ಹೆಸರಿದೆ ("ಶ್ರೀ ಮಹಾ ಚಾತುರ್ವಿದ್ಯ ಸಮುದಯಮೈನೂರ್ವರ್ಕಂ ಬೆಣ್ಣಮ್ಮ ಸೋಮಯಾಜಿಗಳ ಕೊಟ್ಟ ದಾನಂ || ಅನ್ನ ಪ್ರಾಶನಕ್ಕಂ ಪೂಸವನಕ್ಕಂ (=ಪುಂಸವನಕ್ಕಂ) ಚೌಲಕ್ಕಂ ಧರಣಂ ಉಪನಯ[ನಕ್ಕ]ಂ ಸಮಾವರ್ತನಕ್ಕಂ ಗದ್ಯಣಂ ಮದುವೆಗಂ ಆಧಾನಕ್ಕಂ ಪಶು[ವಿ]ಧಿಗಂ ಎರಡು ಗದ್ಯಣಂ ಚಾತುರ್ಮಾಸ್ಯಕ್ಕೆ ಮೂಱು ಗದ್ಯಣಂ ಅಗ್ನಿಷ್ಟೋಮಕ್ಕೆ ಚೆ(ಅ)ಯ್ದು ಗದ್ಯಣಂ").[172] ಇಲ್ಲಿಯ ಪಶುವಿಧಿ ಎಂಬುದು ಬಲಿಯನ್ನು ಸೂಚಿಸುವಂತೆ ಕಾಣುತ್ತದೆ. ಕ್ರಿ. ಶ. 1031ರಲ್ಲಿ ಕನ್ನಡ ಪಂಚತಂತ್ರವನ್ನು ಬರೆದ ದುರ್ಗಸಿಂಹನು ಯಜ್ಞಗಳಲ್ಲಿ ಪ್ರಾಣಿಬಲಿಯನ್ನು ಕೊಡುವುದನ್ನು ಸಮರ್ಥಿಸಿದ್ದಾನೆ[173]-"ನೀವೆಂದಂತೆ ಬ್ರಾಹ್ಮಣರುಂ ಕ್ಷತ್ರಿಯರುಂ ವೇದವಿಹಿತ ಕರ್ಮಾನುಷ್ಠಾನ ತತ್ಪರರಪ್ಪುದಱಿಂ ಯಾಗಾತಿಥಿ ಪಿತೃ ದೇವತಾ ನಿಮಿತ್ತಂ ವಿಧಿ ಪೂರ್ವಕಂ ಪ್ರಾಣಿವಧೆಗೆಯ್ವರಲ್ಲದೆ ವೃಥಾವಧೆಗೆಯ್ವರಿಲ್ಲ. ಅವರ್ಗಮಾ ಕರ್ಮಂ ಪುಣ್ಯಫಲಮೀವುದೊಂದುಂ ಸಂದೆಯಮಿಲ್ಲ.'' ಬಸವಣ್ಣನವರು ತಮ್ಮ ವಚನವೊಂದರಲ್ಲಿ ಯಜ್ಞಕ್ಕಾಗಿ ಕೊಂಡೊಯ್ಯುತ್ತಿದ್ದ ಹೋತವನ್ನು ಕುರಿತು ಪ್ರಸ್ತಾಪಿಸುತ್ತಾರೆ.[174] ಸು. 450ರ ತಾಳಗುಂದ ಶಾಸನದಲ್ಲಿಯೂ ಪಶುಬಲಿಯ ಸೂಚನೆಯಿದೆ.[175]

ಸಾಮಾಜಿಕವಾಗಿಯೂ ಬ್ರಾಹ್ಮಣರು ಎಲ್ಲರಿಂದಲೂ ಗೌರವಿತರಾಗಿದ್ದರು ಎಂದು ಹಿಂದೆಯೇ ಸೂಚಿಸಲಾಗಿದೆ. ಶಾಸನವೊಂದು ಅವರನ್ನು ''ಕ್ಷತ್ರಿಯ ವೈಶ್ಯ ಶೂದ್ರತ್ರಯ ಲಲಾಟ ಘಟ್ಟಿತಗುಂ'' ಎಂದು ಕರೆದಿದೆ.[176] ಸಮಾಜದಲ್ಲಿ ದುರ್ಮಾರ್ಗದಲ್ಲಿ ನಡೆದವರಿಗೆ ಪ್ರಾಯಶ್ಚಿತ್ತವನ್ನು ವಿಧಿಸುತ್ತಿದ್ದವರು ಇವರೇ. ಇದರಿಂದ ಬರುವ ಹಣವನ್ನೇ ''ಪ್ರಾಯಶ್ಚಿತ್ತ ದಕ್ಷಿಣೆ'' ಎಂದು ಶಾಸನವೊಂದರಲ್ಲಿ ಕರೆದಿರುವುದು.[177] ಹೀಗೆ ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ಪ್ರತಿಷ್ಠೆಯನ್ನು ಪಡೆದು ಎಲ್ಲರಿಂದಲೂ ಗೌರವವನ್ನು ಸಂಪಾದಿಸಿದ್ದ ಬ್ರಾಹ್ಮಣರು ಜೈನಧರ್ಮ ಮತ್ತು ಜೈನಮುನಿಗಳಿಗೆ ಗೌರವವನ್ನು ತೋರಿಸಿ ದೊಡ್ಡತನವನ್ನು ಮೆರೆದಿದ್ದಾರೆ. ಬೇಹೂರಿನ ಬ್ರಾಹ್ಮಣರು ಜಿನಪೂಜೆಗಾಗಿ ಅಷ್ಟೋಪವಾಸಿ ಮುನಿಗಳ ಕೈಯಲ್ಲಿ ದಾನವನ್ನು ಕೊಟ್ಟ ಸಂಗತಿಯನ್ನು ಇಲ್ಲಿ ನೆನೆಯಬಹುದು.[178] ಪಟ್ಟಮಹಾದೇವಿಯೂ ಅಗ್ರಹಾರ ಕುಪ್ಪಟೂರಲ್ಲಿ ಪಾರ್ಶ್ವ

---

172 IA. VIII. p. 287, C. 800 A.D.

173 ಕನ್ನಡ ಪಂಚತಂತ್ರ (ಸಂ. : ಎಂ. ಎ. ರಾಮಾನುಜ ಅಯ್ಯಂಗಾರ್), ಪು. 62. ದುರ್ಗಸಿಂಹನ ಈ ವಾಕ್ಯಗಳಿಗೆ ಮೂಲ ವಸುಭಾಗಭಟ್ಟನ ಸಂಸ್ಕೃತ ಪಂಚತಂತ್ರದಲ್ಲಿ ಇದ್ದಿರಬಹುದು. ವಸುಭಾಗಭಟ್ಟನ ಕೃತಿ ಈಗ ಅನುಪಲಬ್ಧವಾಗಿದೆ.

174 ಬಸವಣ್ಣನವರ ಷಟ್ಸ್ಥಲದ ವಚನಗಳು (1954), ಪು. 147.—" ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು ಎಲೆ ಹೋತೇ ಅಳು ಕಂಡಾ, ವೇದವನೋದಿದವರ ಮುಂದೆ ಅಳು ಕಂಡಾ, ಶಾಸ್ತ್ರವ ಕೇಳಿದವರ ಮುಂದೆ ಅಳು ಕಂಡಾ, ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ."

175 " ಅಕೃಶ ಚಾತುರ್ಮಾಸ್ಯ ಹೋಮೇಷ್ಟಿ ಪಶು ಪಾರ್ವಣ ಶ್ರಾದ್ಧ ಪೌಷ್ಟಿಕಂ"

[EC. VII. SK. 176, C. 450 A.D.]

176 EC. V. Ak. 110, C. 1142 A.D.

177 EI. XIII. p. 329, 929 A.D. ; IA. XII. p. 223, 929-30 A.D.

178 SII. IX. i. 115, 1054 A.D.

ಬಸದಿಯನ್ನು ಸರಿಪಡಿಸಿದಾಗ ಆ ಊರಿನ ಬ್ರಾಹ್ಮಣರು ಆ ಬಸದಿಗೆ 'ಬ್ರಹ್ಮಜಿನಾಲಯ' ವೆಂದು ಹೆಸರಿಡಲು ಸೂಚನೆಯನ್ನು ಕೊಟ್ಟದ್ದೂ ಉಲ್ಲೇಖನೀಯವಾಗಿದೆ.[179] ತಮ್ಮ ಬ್ರಹ್ಮನಿಗೂ ಜೈನರ ಬ್ರಹ್ಮಜಿನನಿಗೂ ವ್ಯತ್ಯಾಸವಿಲ್ಲವೆಂದು ಲಕ್ಕುಂಡಿಯ ಸಾವಿರ ಬ್ರಾಹ್ಮಣರು ಅತ್ತಿಮಬ್ಬೆ ಕಟ್ಟಿಸಿದ ಜಿನಾಲಯಕ್ಕೆ ಬ್ರಹ್ಮ ಜಿನಾಳಯ ವೆಂದು ಹೆಸರಿಟ್ಟ ವಿಷಯವೂ ಅಷ್ಟೇ ಉಲ್ಲೇಖನೀಯವಾಗಿದೆ.[180]

ಅರಸಿಮಯ್ಯನ ಮಗ 'ಪೆರ್ಬಾರ್ವ' ಮಾಧವಯ್ಯನ ಹೆಸರು ಒಂದು ಕಡೆ ಬಂದಿದೆ.[181] 'ಪೆರ್ಬಾರ್ವ' ಎಂಬುದು ಈಗಿನ 'ಹೆಬ್ಬಾರ'ರನ್ನು ನೆನಪಿಗೆ ತರುತ್ತದೆ.

## ಶಿಲ್ಪಿಗಳು

ಇವರು ಸಾಮಾನ್ಯವಾಗಿ ತಮ್ಮ ಮೂಲಪುರುಷ ವಿಶ್ವಕರ್ಮನೆಂದು ಹೇಳಿಕೊಳ್ಳುತ್ತಾರೆ. ವಿಶ್ವಕರ್ಮ, ವಿಶ್ವಕರ್ಮನಿಂದ ನಿರ್ಮಿತವಾದ ಗವಜಿಾಚಾರ್ಯ, ಅವನ ಮಗನ ಕುಲದಲ್ಲಿ ಹುಟ್ಟಿದವನು ಕ್ರಿ.ಶ. 1116ರಲ್ಲಿ ದೇವಸ್ಥಾನವನ್ನು ನಿರ್ಮಿಸಿದ ಹೊಯ್ಸಳಾಚಾರಿ ಎಂದು ಒಂದು ಶಾಸನವು ಹೇಳುತ್ತದೆ.[182] ಈ ಜಾತಿಯ ರಕ್ತದಲ್ಲೇ ಕಲೆಯ ಬೀಜಗಳು ಹುದುಗಿರುವಂತೆ ಕಾಣುತ್ತದೆ. ವಾಸ್ತುವಿದ್ಯೆ[183], ಶಿಲ್ಪ,[184] ಲೋಹವಿಗ್ರಹಗಳ ಕೆತ್ತನೆ (=ಕಾಂಸ ವಿದ್ಯೆ),[185] ಪತ್ರಚ್ಛೇದಾದಿ[186] ಕುಶಲಕಲೆಗಳಲ್ಲಿ ಇವರು ನಿಷ್ಣಾತರಾಗಿದ್ದರು. ಇವರು ಚಿತ್ರಕಲೆಯಲ್ಲಿಯೂ ನಿಷ್ಣಾತರಾಗಿದ್ದರು. ಒಂದು ಶಾಸನದಲ್ಲಂತೂ ಚಿತ್ರಕಲೆಯೇ ಎಲ್ಲ ಕಲೆಗೂ ಮೂಲಭೂತವಾದ ಕಲೆ ಎಂದು ಹೇಳಿದೆ. ("ಸರ್ವಕಲಾಧಾರಭೂತ ಚಿತ್ರಕಲಾಭಿಜ್ಞೇಯ ವಿಶ್ವಕರ್ಮಾಚಾರ್ಯೇಣ....").[187] ಇವರು

---

[179] EC. VIII. Sb. 262, 1077 A D.

[180] BKI. I. i. 52, 1007 A.D.— "ಬ್ರಹ್ಮನೆ [ದ]ಲ್ನಮಗಾದೀ ಬ್ರಹ್ಮಜಿನಂ ತಾನೆನುತ್ತೆ ಸಾಸಿರ್ವರುಮೀ ಬ್ರಹ್ಮಜಿನನಿಳಯಕಿತ್ತರ್ ವ್ರಹ್ಮಜಿನಾಳಯಮೆನಿಪ್ಪ ಪೆಸರಂ ಮುದದಿಂ".

[181] EC. VII. Sk. 53, 1027 A.D.

[182] EC. IV. Kp. 68, 1116 A.D. ವಿಶ್ವಕರ್ಮಾಚಾರ್ಯನು "ಹೇಮಕರ್ಮ ಲೋಹಕರ್ಮ ಶಿಲಾಕರ್ಮ ರತ್ನಕರ್ಮ ಕಾಷ್ಟಕರ್ಮ ಚಿತ್ರಕರ್ಮ ಪತ್ರಕರ್ಮ ಪ್ರತಿಮಾಲಕ್ಷಣ" ಮುಂತಾದುವುಗಳಲ್ಲಿ ಹಸ್ತಕೌಶಲವುಳ್ಳವನೆಂದು ಶಾಸನವು ಬಣ್ಣಿಸುತ್ತದೆ.

[183] "ಜಂಬು ದ್ವೀಪಾಂತರೇ ಕಶ್ಚಿತ್ ವಾಸ್ತು ಪ್ರಾಸಾದ ತದ್ಗತಃ ನರಸೊಬ್ಬ ಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ." (IA. IX. p. 74, C 750 A.D.); "ಸ್ವಸ್ತಿ ವಿಕ್ರಮಾದಿತ್ಯ ಶ್ರೀ ಪೃಥ್ವೀವಲ್ಲಭ ಮಹಾದೇವಿಯರಾ ದೇಗುಲಮಾನ್ ಮಾಡಿದ ಸೂತ್ರಧಾರಿ ಶ್ರೀ ಗುಂಡನನಿವಾರಿತಾಚಾರಿಗೆ ಮೂಮೆ ಪೆರ್ಜೆಱೆಪು ಪಟ್ಟಮುಂ ತ್ರಿಭುವನಾಚಾರಿಯೆಂದು ಪೆಸರಿತ್ತು ........" (IA. X. p. 164, C. 750 A.D.). ಈ ಶ್ರೀಗುಂಡನು ಬಹು ಪ್ರಸಿದ್ಧ ಶಿಲ್ಪಿಗಳಲ್ಲಿ ಒಬ್ಬನಾಗಿರಬೇಕು. ಪಟ್ಟದ ಕಲ್ಲಿನ ಲೋಕೇಶ್ವರ ದೇವಸ್ಥಾನವನ್ನು ಕಟ್ಟಿದ್ದಕ್ಕೆ ಅವನಿಗೆ ಮೂರುಬಾರಿ ಉತ್ಸವವನ್ನು ಮಾಡಲಾಯಿತು. ('ಮೂಮೆ ಪೆರ್ಜೆಱೆಪು'); 'ತ್ರಿಭುವನಾಚಾರಿ' ಎಂಬ ಬಿರುದನ್ನು ಕೊಟ್ಟು ಪಟ್ಟವನ್ನು ಕಟ್ಟಲಾಯಿತು. ಇದೇ ವಿಷಯವು ಅದೇ ಸ್ಥಳದ ಇನ್ನೊಂದು ಶಾಸನದಲ್ಲಿಯೂ ಬಂದಿದೆ. (IA. X. p. 164). ಈ ದೇವಸ್ಥಾನವನ್ನು ಕಟ್ಟಿಸಿದವಳು ವಿಕ್ರಮಾದಿತ್ಯ IIನ ರಾಣಿ ಲೋಕಮಹಾದೇವಿ; ಕಟ್ಟಿಸಲು ಕಾರಣ, ವಿಕ್ರಮಾದಿತ್ಯನು ಕಂಚಿಯನ್ನು ಮೂರು ಬಾರಿ ಗೆದ್ದ ವಿಜಯದ ಸ್ಮಾರಕವಾಗಿ.

[184] EC. V. Bl. 17, C. 1120 A.D.

[185] BKI. I. i. 48, 1002 A.D.

[186] BKI. I. ii. 151, 1102 A.D. ಗಿಡಗಳಲ್ಲಿ ಬೇರೆ ಬೇರೆ ಆಕಾರಗಳು ಬರುವಂತೆ ಎಲೆಗಳನ್ನು ಕೊಂಬೆಗಳನ್ನು ಕತ್ತರಿಸುವುದೇ ಪತ್ರಚ್ಛೇದ್ಯವೆಂಬ ಕಲೆ. ಸಮವಾಯ ಸೂತ್ರ, ಲಲಿತವಿಸ್ತರ ಮುಂತಾದ ಗ್ರಂಥಗಳಲ್ಲಿ ಈ ಕಲೆಯ ಹೆಸರಿದೆ (A. Venkatasubbaiah : The Kalās, p. 16, 25).

[187] EC. IX. Nl. 60, 797 A.D.

ತಮ್ಮನ್ನು 'ಸರಸ್ವತಿ ಗಣದಾಸಿ'ಗಳೆಂದು ಕರೆದುಕೊಳ್ಳುತ್ತಾರೆ.[188] 'ಸರಸತಿ ಗಣಮಿತ್ರ'ರೆಂದೂ ಕರೆದುಕೊಂಡಿರುವುದುಂಟು.[189] ಈ ವಿನಯದ ಜೊತೆಗೆ ತಮ್ಮ ಮತ್ತು ತಮ್ಮ ಕಲೆಯ ವಿಷಯದಲ್ಲಿ ಅವರಿಗೆ ಅತ್ಯಭಿಮಾನವೂ ಹೆಮ್ಮೆಯೂ ಇದ್ದಿತು. ಈ ವಿಶೇಷಣಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ.—"ಮಲವರ ಗಂಡ ಬಿರುದರೂವಾರಿಗಿರಿ ವಜ್ರದಂಡ ರೂವಾರಿ ಕಾಳಿದಾಸಿ ಗೆಯ್ದ ಮಕರ ತೋರಣ"[190] ; "ಬಳ್ಳಿಗ್ರಾಮೆಯ ರೂವಾರಿ ದಾಸೋಜ ಬಿರುದರ ಬಡಿವ ಗೊಂದಳ ಬಡಿವ"[191] ; "ಸರಸ್ವತೀ ಗಣದಾಸಿ ಮಚ್ಚರಿಪರು[ರ] ವಾದಿಸ್ವ(ಶ)ರಭ ಭೇರುಂಡ".[192]—ಇದನ್ನು ನೋಡಿದರೆ ಅವರವರಲ್ಲಿಯೇ ತೀವ್ರವಾದ ಸ್ಪರ್ಧೆಯಿದ್ದಿತೆಂದು ಊಹಿಸಬಹುದು. ಈ ಸವಾಲು ಹಾಕುವ ಮನೋಧರ್ಮವು ಕಲಾವಿದರ ರಕ್ತಗತವಾದ ಸ್ವಭಾವ.

ಶಾಸನಗಳಲ್ಲಿ ಎಲ್ಲಿಯೂ ಯಾವ ಶಿಲ್ಪಶಾಸ್ತ್ರವನ್ನೂ ಹೆಸರಿಸಿಲ್ಲ. ಪ್ರಸಿದ್ಧ ಶಿಲ್ಪಗ್ರಂಥವಾದ ಮಾನಸಾರದ ಹೆಸರೂ ಇಲ್ಲ. ಒಂದೇ ಒಂದು ಕಡೆ 'ಗುಣಪಾ....ರ್ಯ್ಯ' ಎಂಬುವನ 'ಶಾಸ್ತ್ರ'ವನ್ನು ತಾನು ಶಾಸನವನ್ನು ಕೆತ್ತುವುದರಲ್ಲಿ ಅನುಸರಿಸಿರುವುದಾಗಿ ಒಬ್ಬ ಶಿಲ್ಪಿಯು ಹೇಳಿದ್ದಾನೆ.[193] ಈ 'ಗುಣಪಾ....ರ್ಯ'ನ ವಿಷಯದಲ್ಲಿ ನಮಗೆ ಏನೂ ತಿಳಿಯದು.

ಶಿಲ್ಪಿಗಳ ಕಲೆಯು ತಲೆಯಿಂದ ತಲೆಗೆ, ತಂದೆಯಿಂದ ಮಗನಿಗೆ ಹರಿದುಕೊಂಡು ಬರುತ್ತಿದ್ದಿತು. ಒಂದೇ ದೇವಸ್ಥಾನದ ರಚನೆಯಲ್ಲಿ ತಂದೆ ಮಕ್ಕಳಿಬ್ಬರೂ ನಿಯುಕ್ತರಾಗಿದ್ದುದು ಕಂಡುಬರುತ್ತದೆ.[194] ಆದರೂ ಶಿಲ್ಪದಲ್ಲಿ ನಿಷ್ಣಾತರಾದವರ ಬಳಿಗೆ ವಿದ್ಯಾರ್ಥಿಗಳು ಶಿಷ್ಯವೃತ್ತಿಯನ್ನವಲಂಬಿಸಿ ಬರುತ್ತಿದ್ದುದರ ಸೂಚನೆಗಳಿವೆ. ಮಾಚೋಜ ಎಂಬ ಶಿಲ್ಪಿಯನ್ನು 'ಕಲುಕಣಿನಾಡ ಆಚಾರ್ಯ'[195] ಎಂದು ಕರೆದಿರುವುದೂ, ಇನ್ನೊಂದೆಡೆ ಒಬ್ಬ ಶಿಲ್ಪಿಯು ತಾನು ನಾಗವರ್ಮನ ಶಿಷ್ಯನೆಂದು ಕರೆದುಕೊಂಡಿರುವುದೂ[196] ಮೇಲಿನ ಊಹೆಗೆ ಆಧಾರಗಳಾಗಿವೆ. ಇವರಲ್ಲಿ ಕೆಲವರು ತಾವು ಶಿವೋಪಾಸಕರೆಂದೂ,[197] ಇನ್ನು ಕೆಲವರು ಜಿನೋಪಾಸಕರೆಂದೂ[198] ಕರೆದುಕೊಂಡಿದ್ದಾರೆ. ಬಹುಶಃ ಇವರು ಎಲ್ಲ ದೈವಗಳಲ್ಲಿಯೂ ಸಮಾನವಾದ ಭಕ್ತಿಯನ್ನಿಟ್ಟುಕೊಂಡಿದ್ದರು. ಇವರ ಹೆಸರುಗಳು ಆಚಾರ್ಯ (ರಿ),ಓಜ(<ಉಪಾಧ್ಯಾಯ) ಮುಂತಾಗಿ ಕೊನೆಗೊಳ್ಳುತ್ತವೆ. ಅದರಲ್ಲಿಯೂ ಅವರಿಗೆ ಓಜ ಎಂಬುದರ ವಿಷಯದಲ್ಲಿ ಹೆಚ್ಚು ಅಭಿಮಾನವಿದ್ದಂತೆ ಕಾಣುತ್ತದೆ. ("ಕಲ್ಲ ಬೆಸಂಗಳನರಿವವರೆಲ್ಲಂ ಕೈಕೊಂಡು ಪೊಗ....ನೆ ಚಾವುಂಡೋಜಂಗಲ್ಲದೆ ಪೆಱರ್ಗೋವಜವೆಸರದೇನೊಪ್ಪುಗುಮೇ").[199] ಶಾಸನಗಳನ್ನು ಕೆತ್ತುತ್ತಿದ್ದ

---

188 EC. XI. Dg. 155, 1124 A.D.

189 BKI. I. ii. 151, 1102 A.D.

190 EC. V. Bl. 239, C. 1140 A.D. ರೂವಾರಿ < ರೂಪಕಾರಿ = ಶಿಲ್ಪಿ.

191 EC. V. Bl. 17, 1136 A.D.

192 EC. XV. Bl. 256, C. 1140 A.D.

193 "ಗುಣಪಾ . . ರ್ಯ ಪ್ರಣೀತ ಶಾಸ್ತ್ರೋಕ್ತಿಯಿಂದೆ ಕಲುವೆಸನಂ ಲಕ್ಷಣಯುಕ್ತಮಾಗಿರಲು ಧಾರಿಣಿಯೊಳು ಗುಲುಗೋಜನಱುವನೆಂದೆಳೆ ಪೊಗಟ್ಟುಂ" –(SII. IX. i. 165, 1099 A.D.)

194 EC. V. Bl. 17, C. 1120 A.D.

195 EC. IV. Ng. 95, C. 1142 A.D.

196 BKI. I. i. 97, 1062 A.D.

197 EC. XV. Bl. 256, C. 1140 A.D.

198 EC. VII. Sk. 293, 1080 A.D. "ಶಿಲ್ಪಿಕ ಲಲಾಟ ಪಟ್ಟಂ ಸರಸ್ವತೀಗಣ ಪಾದ ಪಂಕಜ ಭ್ರಮರಂ ಜಿನ ಪಾದಾರಾಧಕಂ ಪದ್ಮೋಜನ ಶಿಲ್ಪಿಕಾಕರ್ಮ". ಇವು ಬ್ರಾಹ್ಮಣರ ಶಾಸನದ ಕೊನೆಯಲ್ಲಿ ಬಂದಿರುವ ಮಾತುಗಳು.

199 SII. IX. i. 102, 1046 A.D. ಇಲ್ಲಿಯ 'ಓಜ' ಮತ್ತು 'ಓವಜ' ಎಂಬ ರೂಪಗಳು ಗಮನಾರ್ಹವಾದುವು. ಸಂ. ಉಪಾಧ್ಯಾಯ > ಪ್ರಾ. ಉವಜ್ಝಾಅ > ಉವಜ್ಝ > ಒವಜ್ಝ > ಓವಜ > ಓಜ. (ಈಗ ಹಳ್ಳಿಗರ ಬಾಯಲ್ಲಿ 'ಓಜಯ್ಯ' ಆಗಿದೆ. ಓಜ + ಅಯ್ಯ > ಓಜಯ್ಯ > ಓಜಯ್ಯ.)

ಶಿಲ್ಪಿಗಳನ್ನು ಕೆಲವು ಶಾಸನಗಳಲ್ಲಿ 'ಕಲ್ಕುಟಿಕ'ರೆಂದೂ ಕರೆದಿರುವುದುಂಟು ("ರೂವಾರಿ ಕಲ್ಕುಟಿಕ ಕೇತೋಜ ಖಂಡಣಿಸಿದ").[200]

ಶಿಲ್ಪಿಗಳು ತಮ್ಮದೆ ಆದ ಸಂಘಗಳನ್ನು (guilds) ಸ್ಥಾಪಿಸಿಕೊಂಡಂತೆ ಕಾಣುತ್ತದೆ. ಕ್ರಿ.ಶ. 1116ರ ಒಂದು ಶಾಸನದಲ್ಲಿ ಶಿಲ್ಪಿಗಳ ಒಂದು ಸಂಘವು ("ಕುಲಾನ್ವಯ ಕೊತ್ತಳಿ")[201] ಕಮ್ಮಟೇಶ್ವರ ದೇವಸ್ಥಾನಕ್ಕೆ ದತ್ತಿಗಳನ್ನು ಬಿಟ್ಟುಕೊಟ್ಟಂತೆ ಹೇಳಿದೆ.[202] ಶಿಲ್ಪಿಗಳ ಕುಲಕ್ಕೆ ಬಂದ ಕಳಂಕವನ್ನು ಹೋಗಲಾಡಿಸುವುದಕ್ಕಾಗಿ ಬಾವಣ ಮತ್ತು ರಾವಣ ಎಂಬ ಇಬ್ಬರು ಶಿಲ್ಪಿಕುಲದ ಸಹೋದರರು ಕುಸುಮೇಶ್ವರ ದೇವಸ್ಥಾನವನ್ನು ಕಟ್ಟಿಸಿದರೆಂದು ಒಂದು ಶಾಸನವು ಹೇಳುತ್ತದೆ.[203] ಶಿಲ್ಪಿಗಳು ಇತರರ ಹಣದಿಂದ ದೇವಸ್ಥಾನವನ್ನು ಕಟ್ಟುವರೇ ಹೊರತು, ತಾವೇ ಹಣವನ್ನು ವ್ಯಯಿಸಿ ಕಟ್ಟುವವರಲ್ಲ ಎಂಬುದೇ ಆ 'ಶಿಲ್ಪಿಕುಲಕಳಂಕ'ವಿರಬಹುದೇ ?

ಕಮ್ಮಾರರೂ, ಅಕ್ಕಸಾಲಿಗಳೂ, ಬಡಗಿಗಳೂ, ಕಂಚಗಾರರೂ ಇದೇ ವಿಶ್ವಕರ್ಮ ಕುಲಕ್ಕೆ ಸೇರಿದವರು. ಇವರಲ್ಲಿ ಅಕ್ಕಸಾಲಿಗಳು ಚಿನ್ನದ ಕೆಲಸವನ್ನು ಮಾಡುವವರು; ಅಪರೂಪವಾಗಿ ಶಾಸನಗಳನ್ನು ಕೆತ್ತುತ್ತಿದ್ದುದೂ ಉಂಟು.[204] ರಾಜರು ಇವರನ್ನು ಕಮ್ಮಟಗಳಲ್ಲಿ ನಾಣ್ಯಗಳನ್ನು ತಯಾರಿಸಲು ನೇಮಿಸಿಕೊಳ್ಳುತ್ತಿದ್ದರು.[205] ರಾಜರು ಇವರಿಗೆ ವಾರ್ಷಿಕ ವೇತನವನ್ನು ಕೊಡುತ್ತಿದ್ದಂತೆ ಒಂದು ಶಾಸನದಿಂದ ಊಹಿಸಬಹುದು.[206] ಕಬ್ಬಿಣದ ಕೆಲಸಗಳನ್ನು ಮಾಡುತ್ತಿದ್ದವರು ಕಮ್ಮಾರರು(<ಕರ್ಮ+ಕಾಱ). ಇವರ ಹೆಸರುಗಳು ಹಲವಾರು ಶಾಸನಗಳಲ್ಲಿವೆ.[207] ಇವರು ಬಳಸುತ್ತಿದ್ದ ತಿದಿ ಕಬ್ಬಿಣದ ಮೂತಿಯಿರುವ ಚರ್ಮದ ಚೀಲ. ಈ ಚೀಲವನ್ನು ಒತ್ತಿದರೆ ಗಾಳಿ ಬಂದು ಬೆಂಕಿಯನ್ನು ಏಳಿಸುತ್ತದೆ.[208] ಮರದ ಕೆಲಸಗಳನ್ನು ಮಾಡುವವನು ಬಡಗಿ (ಸಂ. ವರ್ಧಕಿ). ದೇವಸ್ಥಾನಕ್ಕೆ ಸಂಬಂಧಿಸಿದ ಮರಗೆಲಸಗಳನ್ನು ಮಾಡಲು, ಮುರಿದುಹೋದ ಸಾಮಾನುಗಳನ್ನು ಸರಿಪಡಿಸಲು ಇವರಿಗೆ ಶಾಶ್ವತವಾದ ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು.[209] ಇವರೂ ಅನೇಕ ಶಾಸನಗಳನ್ನು ಕೆತ್ತಿದ್ದಾರೆ.[210]

---

200 EC. IV.Ng. 65, 1138 A.D.

201 'ಕೊತ್ತಳಿ' ಎಂದರೆ ಕಾಗೆಗಳ ಸಮೂಹ, 'ಜೆಸದವರ' (ಎಂದರೆ ಕೆಲಸಗಾರರ)ಸಮೂಹ ಎಂಬ ಅರ್ಥಗಳನ್ನು ಕೇಶಿರಾಜ ಕೊಡುತ್ತಾನೆ(ಶಬ್ದಮಣಿದರ್ಪಣ, 1959, ಪು. 22). ಇದರ ಮೂಲಾರ್ಥ ಗುಂಪು ಅಥವಾ ಸಮೂಹ ಎಂದು. ನೋಡಿ– ತಮಿಳು. ಕೊತ್ತು = ಸಮೂಹ, ಗೊನೆ; ಮಲೆಯಾಳ. ಕೊತ್ತು = ಹೂಗಳ ಗೊನೆ; ತೆಲುಗು. ಗುತ್ತಿ, ಗೊತ್ತು = ಗೊನೆ.

202 EC. IV. Kp. 68, 1116 A.D.

203 EC. VII. Sk. 112, 1139 A.D.

204 EC. XII. Tp. 104, 1130 A.D.

205 BKI. I. ii. 153, 1103 A.D.

206 EC. VII. Sk. 118, 1054 A.D.

207 EC. VI. Cm. 7, 1061 A.D.; EC. VII. Sk. 307, 1016 A.D.

208 ಭೀಮ ಆನೆಯನ್ನು ಒಂದು ಕೈಯಲ್ಲಿ ಎತ್ತಿಹಿಡಿದು ಒತ್ತಿದಾಗ ಅದರ ಬಾಯಿಂದ ಬಂದ ರಕ್ತ ಕೆಂಪಗೆ ಉರಿಯಂತೆ ಇದ್ದಿತು; ತಿದಿಯನ್ನೊತ್ತುತ್ತಿರುವ ಕಮ್ಮಾರನಂತೆ ಭೀಮ ಇದ್ದ ಎಂದು ಪಂಪ ವರ್ಣಿಸುತ್ತಾನೆ– "ಮದಗಜವೆರಡಱ ಬಾಲದ | ಮೊದಲಂ ಪಿಡಿದೆತ್ತಿಯೊತ್ತಿ ನುರ್ಗುರ್ತ್ತಿರೆಯಾ | ಸ್ಯದಿನುಗುವ ರಕ್ತಮುರಿಯೆನೆ | ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ||". ಕಮ್ಮಾರರು ಬಾಣಗಳನ್ನು ಮಾಡಿಕೊಡುತ್ತಿದ್ದರು. ಕಮ್ಮಾರನ ಬಾಣ ಕಮ್ಮಾರನಿಗೆ ಎಂಬರ್ಥದ ಗಾದೆ ಹನ್ನೆರಡನೇ ಶತಮಾನದಲ್ಲಿ ಬಳಕೆಯಲ್ಲಿತ್ತು.– "ಕಮ್ಮಱನಂಬು ಕಮ್ಮಱಂಗೆ ...." (ಕಾವ್ಯಾವಲೋಕನ, ಪದ್ಯ. 329)

209 BKI. I. i. 68, 1032 A. D.; EC. VIII. Sa. 109, 1042 A.D. -"ದೇಗುಲಂಗಳ ಬಡಗಿವೆಸದೊಳ್ ಹಡಿಸಲಿಸುವ ಮಂಡಲಿಕ ಮಾಣಿಕಾಚಾರಿ ಹೊನ್ನೊಜ."

210 MAR (1931). p. 191, C. 1053 A.D.

ಇದನ್ನು ನೋಡಿದರೆ ಶಿಲ್ಪಿ, ಕಮ್ಮಾರ, ಅಕ್ಕಸಾಲೆ ಮತ್ತು ಬಡಗಿಗಳು ಪರಸ್ಪರರ ವೃತ್ತಿಗಳನ್ನವಲಂಬಿಸಲು ಅವಕಾಶವಿದ್ದಿತೆಂದು ಊಹಿಸಬಹುದು.

ರೈತರು ತಾವು ಬೆಳೆದುದರಲ್ಲಿ ಒಂದು ಭಾಗವನ್ನು ತಮ್ಮ ಉಪಕರಣಗಳನ್ನು ಸಿದ್ಧಪಡಿಸಿಕೊಟ್ಟ ಅಥವಾ ಸರಿಪಡಿಸಿಕೊಟ್ಟ ವೃತ್ತಿಕಾರರಿಗೆ ಕೊಡಬೇಕು. ಇದನ್ನು 'ಆಯ'ದ ಪದ್ಧತಿಯೆಂದು ಕರೆಯುತ್ತಾರೆ. ಈ ಪದ್ಧತಿಯು ಪ್ರಾಚೀನ ಕರ್ನಾಟಕದಲ್ಲಿದ್ದಿತೆಂಬುದಕ್ಕೆ ಒಂದು ಶಾಸನಾಧಾರವಿದೆ. ಕ್ರಿ.ಶ. 1035ರ ಒಂದು ಶಾಸನದಲ್ಲಿ ಅಕ್ಕಸಾಲಿಯ ಆಯದ ಹೆಸರಿದೆ ("ಅಕ್ಕಸಾಲಿಯಾಂ‌ು ಉಪ್ಪೊಳಗಾಗಿ ಧಾನ್ಯಂಗಳೊಳೆಲ್ಲಂ").[211] ಕ್ರಿ.ಶ. 1098-9ರ ಶಾಸನದಲ್ಲಿ "ಅಕ್ಕಸಾಲಿ ಖಾವೊಜನ ಭಾಗದಾಯ"ದ ಹೆಸರಿದೆ.[212] ಈ ಶಾಸನಗಳ ಅಕ್ಕಸಾಲಿಗಳು ಬಡಗಿಯ ಅಥವಾ ಕಮ್ಮಾರನ ಕೆಲಸಗಳನ್ನು ಮಾಡುತ್ತಿದ್ದಿರಬೇಕು. ಏಕೆಂದರೆ ಪ್ರತಿವರ್ಷವೂ ಅಥವಾ ವರ್ಷದುದ್ದಕ್ಕೂ ಅಕ್ಕಸಾಲಿಯ ಹತ್ತಿರ ಚಿನ್ನದ ಕೆಲಸವನ್ನು ಮಾಡಿಸುವುದು ಅಸಂಭವ. ಈಗಲೂ ಹಳ್ಳಿಗಳಲ್ಲಿ ಬಡಗಿ, ಕಮ್ಮಾರರಿಗೆ ಆಯವನ್ನು ಕೊಟ್ಟಂತೆ ಅಕ್ಕಸಾಲಿಗಳಿಗೆ ಕೊಡುವುದಿಲ್ಲ. ಅಲ್ಲದೆ ಅಕ್ಕಸಾಲಿಗಳು ಬಡಗಿ, ಕಮ್ಮಾರರ ಕೆಲಸಗಳನ್ನು ಮಾಡುವುದನ್ನು ಈಗಲೂ ನೋಡಬಹುದು. ಸು. 1130ರ ಶಾಸನವೊಂದರಲ್ಲಿನ[213] 'ಅಕ್ಕಸಾಲೆ ಕಮ್ಮಾಱ'ನಾಗಿದ್ದ ಕದಿಟ್ಟಯ ನಾಥಾಚಾರಿಯ ಹೆಸರನ್ನು ನೋಡಿದರೆ ಮೇಲಿನ ಊಹೆ ನಿಜವಿರಬಹುದೆಂದು ಅನ್ನಿಸುತ್ತದೆ.

ಕಂಚುಗಾರರು ಕಂಚು ಮುಂತಾದ ಲೋಹಗಳಲ್ಲಿ ಪಾತ್ರೆಗಳನ್ನು ಮಾಡುತ್ತಿದ್ದವರು. ಇವರು ವಿಶ್ವಕರ್ಮ ಜಾತಿಗೆ ಸೇರಿದವರಾದರೂ ಉಳಿದವರು ಇವರನ್ನು ಪ್ರತ್ಯೇಕಿಸಿದ್ದಂತೆ ಒಂದು ಶಾಸನವು ಸೂಚನೆಯನ್ನು ಕೊಡುತ್ತದೆ.[214] ಬಡಗಿ, ಕಮ್ಮಾರ, ಅಕ್ಕಸಾಲಿಗಳು ಪರಸ್ಪರ ಕೊಳು-ಕೊಡೆಗಳನ್ನಿಟ್ಟುಕೊಂಡಿದ್ದರೂ ಆ ವಿಷಯದಲ್ಲಿ ಕಂಚುಗಾರರನ್ನು ಮಾತ್ರ ಬೇರೆ ಇಟ್ಟಿದ್ದಿರಬಹುದು.

## ಇತರ ಜಾತಿಗಳು

ಬೇರೆ ಬೇರೆ ವೃತ್ತಿಗಳನ್ನವಲಂಬಿಸಿ ಹುಟ್ಟಿಕೊಂಡ ಬೇರೆ ಬೇರೆ ಜಾತಿಗಳನ್ನು ಇಲ್ಲಿ ಹೆಸರಿಸಬಹುದು. ಜನರ ಬಟ್ಟೆಗಳನ್ನು ಶುಭ್ರಗೊಳಿಸುತ್ತಿದ್ದವನು ಅಗಸ(<ಅಸಗ). ಇವರಲ್ಲಿಯೂ ಒಂದು ಶ್ರೇಣಿಯಿದ್ದಂತೆ ಊಹಿಸಬಹುದು("ಪಟ್ಟಣದಸಗರು ವರ್ಷಕ್ಕೆ ಪ್ರತ್ಯೇಕ ವೀಸ ಹತ್ತಂ ಕೊಟ್ಟರು").[215] ಇವರ 'ಕೊತ್ತಳಿ'ಯ ಹೆಸರು ಶಾಸನವೊಂದರಲ್ಲಿದೆ.[216] ಕ್ಷೌರದ ಕೆಲಸವನ್ನು ಮಾಡುವವನು ನಾವಿದ. ಅಗ್ರಹಾರಗಳಲ್ಲಿ ಬ್ರಾಹ್ಮಣರ ಉಗುರುಗಳನ್ನು ತೆಗೆಯಲು ನಾವಿದರನ್ನು ನೇಮಿಸಿಕೊಳ್ಳುತ್ತಿದ್ದರು[217] (ಇದು ಆಯ ಪದ್ಧತಿಯನ್ನು ಹೋಲುತ್ತದೆ). ಇವರಲ್ಲಿ ದಾಸ ಎಂಬಾತನು ಕುಱಿತ ಕೊಂಟೆಯಲ್ಲಿ (ಈಗಿನ ಕುರ್ತುಕೋಟೆ) ದೇವಸ್ಥಾನವನ್ನು ಕಟ್ಟಿಸಿದ ವಿಷಯವನ್ನು ಒಂದು ಶಾಸನವು ಬಹುವಾಗಿ ಪ್ರಶಂಸಿಸಿದೆ.[218] ಅವನ ತಮ್ಮ ಸಿಂಗ ಎಂಬಾತನು ದೊಡ್ಡ

---

211 SII. IX. i. 89, 1035 A.D.

212 BKI. I. ii. 145, 1098-9 A.D.

213 EC. IV. Kp. 78, C. 1130 A.D.

214 EC. IV. Kp. 68, 1116 A.D.

215 EC. VII. Sk. 118, 1054 A.D.

216 EC. VII. Sk. 11, 1063 A.D. "ಅಸಗರ ಪಾವನ ಮೂಕನು ಜಾಜನು ಕೊತಳಿ ಎಲ್ಲರುಂ ಕೂಡಿ ವಿನಾಯಕಂಗಂ ಸೊಡರೆಣ್ಣೆಗಂ ಸಿರಿಖಂಡಕೆ ಒಕ್ಕಲಲು 1 ಪಣವ ಕೊಡುವರು."

217 EC. VII. Sk. 185, 1158 A.D. "ಸೋಮವಾರದಲು 30 ಮನುಶ್ಯ ಬ್ರಾಹ್ಮಣರುಗುರ ಕಳವ ನಾವಿದನ ಜೀವಿತಂ ಗದ್ಯಾಣ 5."

218 BKI. I. ii. 133, 1087 A.D.

ಶೂರನಾಗಿ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು.[219] ಐನೂರ್ವರನ್ನು ಸದಸ್ಯರನ್ನಾಗಿ ಉಳ್ಳ ನಾವಿದರ ಒಂದು ಶ್ರೇಣಿಯಿದ್ದಂತೆ ಅದೇ ಶಾಸನದಿಂದ ತಿಳಿದುಬರುತ್ತದೆ. ನಾವಿದ ದಾಸನು ದೇವಸ್ಥಾನವನ್ನು ಕಟ್ಟಿಸುವಷ್ಟು ಶ್ರೀಮಂತನಾಗಿರಬೇಕಾದರೆ ಅವನು ನಾವಿದ ವೃತ್ತಿಯಲ್ಲದೆ ಬೇರೆ ವೃತ್ತಿಗಳನ್ನೂ ಅವಲಂಬಿಸಿದ್ದಿರಬಹುದು. ನಾವಿದರ ಮೇಲೂ ಅವರ ವೃತ್ತಿಗೆ ಸಂಬಂಧಿಸಿದಂತೆ ತೆರಿಗೆಗಳನ್ನು ಹಾಕುತ್ತಿದ್ದರು.[220] ಬಟ್ಟೆಗಳನ್ನು ನೇಯುತ್ತಿದ್ದವರು ನೇಕಾರರುಅಥವಾ'ಜೇಡ'ರು.[221] ಬಳ್ಳಿಗಾವೆಯ ಗವರೇಶ್ವರ ದೇವರಿಗೆ ಅಲ್ಲಿಯ ಜೇಡರು ಒಂದೊಂದು ಮುಗ್ಗಕ್ಕೆ ವರ್ಷಂಪ್ರತಿ ಐದು ವೀಸಗಳಂತೆ ಕೊಡಲು ಒಪ್ಪಿದಂತೆ ಒಂದು ಶಾಸನವು ತಿಳಿಸುತ್ತದೆ("ಜೇಡರು ವರ್ಷಕ್ಕಂ ಕೊಟಗೆ ವೀಸವಯ್ದು ಕೊಟ್ಟರು.").[222] 'ಪಟ್ಟಗಾರರ ಸೇಣಿ'ಯ ಹೆಸರು ಶಾಸನವೊಂದರಲ್ಲಿದೆ.[223] ರೇಷ್ಮೆ ಮುಂತಾದ ನಯವಾದ ವಸ್ತ್ರಗಳನ್ನು ನೇಯುವವರೇ ಪಟ್ಟಗಾರರು. ನೇಕಾರರ ಮಗ್ಗಗಳಿಗೆ 'ಮಗ್ಗದೆರೆ' ಎಂಬ ತೆರಿಗೆಯನ್ನು ಹಾಕುತ್ತಿದ್ದರು.[224] ಬಟ್ಟೆಗಳನ್ನು ಕತ್ತರಿಸಿ ಹೊಲಿಯುತ್ತಿದ್ದವರು ಚಿಪ್ಪಿಗರು (ಸಂ. ಶಿಲ್ಪಿಕ). ಚಿಪ್ಪಿಗ ಕೊತ್ತಳಿ ಅಥವಾ ಚಿಪ್ಪಿಗರ ಶ್ರೇಣಿಯ ಹೆಸರು ಅನೇಕ ಶಾಸನಗಳಲ್ಲಿದೆ.[225] ಇವರನ್ನು "ವಸ್ತ್ರ ಖಂಡಿತ ಶೃಂಗಾರ ವಿದ್ಯಾಪ್ರವೀಣ"ರೆಂದು ಒಂದು ಕಡೆ ಕರೆದಿದೆ.[226] ಗಾಣದಿಂದ ಎಣ್ಣೆಯನ್ನು ತೆಗೆಯುತ್ತಿದ್ದವರು ತೈಲಿಗರು ಅಥವಾ ತೆಲ್ಲಿಗರು. 'ತೆಲ್ಲಿಗನಖರ' ಅಥವಾ ತೈಲಿಗರ ಶ್ರೇಣಿಯ ಹೆಸರು ಒಂದು ಶಾಸನದಲ್ಲಿದೆ.[227] ಈ ಶ್ರೇಣಿಯು ನಖರೇಶ್ವರ ದೇವಸ್ಥಾನವನ್ನು ಕಟ್ಟಿಸಿತು.[228] ಗಾಣಗಳಲ್ಲಿ ಎತ್ತುಗಾಣ ಮತ್ತು ಕೈಗಾಣಗಳೆಂದು ಎರಡು ಬಗೆ.[229] ಕ್ರಿ. ಶ. 1145ರಲ್ಲಿ ಆಸಕ್ಕ ಗಾವುಂಡ ಎನ್ನುವವನು ಮಾಡಿಸಿದ ಒಂದು ಕಲ್ಲು ಗಾಣವು ಈಗಲೂ ಇದೆ. ("ಗಣಿಗನೂರ ತೆನ್ನ ಪಕ್ಷರ ಚಂಡಗಾವುಂಡನ ಮಗಂ ಆಸಕ್ಕ ಗಾವುಂಡಂ ಮಾಡಿಸಿದ ಕಲ್ಲಗಾಣಂ ಇಂತಪ್ಪುದಕ್ಕೆ

---

219 ಇವನನ್ನು "ಕಿಸುವಾಯಾಮ್ನಾಯಭಾಳಸ್ಥಳೀವರ ಶೋಭಾಕರ ಲಲಾಮ" ನೆಂದು ಶಾಸನವು ಕರೆಯುತ್ತದೆ. 'ಕಿಸುವಾಯಾಮ್ನಾಯ' ವು ನಾವಿದ ಜಾತಿಯನ್ನು ಸೂಚಿಸುವುದೋ ಅಥವಾ ಸಿಂಗನ ಕುಲವನ್ನು ಸೂಚಿಸುವುದೋ ಹೇಳುವುದು ಕಷ್ಟ.

220 ವಿಜಯನಗರದ ದೊರೆಗಳಾದ ಸದಾಶಿವ ಮತ್ತು ರಾಮರಾಯರು ಕೊಂಡೋಜ ಎಂಬ ನಾವಿದನ ಮೇಲೆ ಎಷ್ಟು ಸುಪ್ರೀತರಾದರೆಂದರೆ ಅವರು ಬಿಟ್ಟಿ, ಭೂಕಂದಾಯ ಮುಂತಾದುವನ್ನು ನಾವಿದರು ಕೊಡಬೇಕಾಗಿಲ್ಲವೆಂದು ಆಜ್ಞೆ ಮಾಡಿದರು. ಈ ಸಂಗತಿಯನ್ನು ತಿಳಿಸುವ ಅನೇಕ ಶಾಸನಗಳ ಮೇಲೆ ನಾವಿದರ ಸಾಧನಗಳಾದ ಕತ್ತಿ, ಕನ್ನಡಿ, ಕತ್ತರಿ ಮುಂತಾದುವುಗಳನ್ನು ಕೆತ್ತಲಾಗಿದೆ (K. A. Nilakantha Sastri : A History of South India, p. 310).

221 EC. VII. Sk. 118, 1054 A.D. 'ಜೇಡ' ಪದದ ಇನ್ನೊಂದು ರೂಪ ದೇಡ. ಇದು ಹನ್ನೆರಡನೆಯ ಶತಮಾನದ ಶಾಸನದಲ್ಲಿ ಹೀಗೆ ಉಲ್ಲೇಖವಾಗಿದೆ– "ಬಡಗಿ ಕಮ್ಮಾಱ ಅಕ್ಕಸಾಲೆ ಅಗಸ ಸಂಮಗಾಱ ದೆ[ೀ]ಡ ಹೊಲೆಯರ ಕೊಡೆ ಒಳಗಾಗಿ.... " (SII. XX. No. 299.)

222 'ಕುಂಟೆ' ಎಂಬುದಕ್ಕೆ ಕನ್ನಡ ತುಳುಗಳಲ್ಲಿ ಮಗ್ಗದ ಅಡ್ಡಪಟ್ಟಿ ಎಂಬ ಅರ್ಥವೂ ಇರುವುದನ್ನು ಗಮನಿಸಬಹುದು (A Dravidian Etymological Dictionary, p. 117).

223 EI. VI. p. 166, C. 793 A.D.

224 EC. V. Hn. 135, C. 1114 A.D.

225 EC. V. BL. 236, 1139 A.D. ; EC. III. Sk. 112, 1139 A.D.

226 EC. V. Bl. 236, 1139 A.D.

227 EC. VI. Kd. 99, 1143 A.D.

228 ಅದೇ.

229 SII. IX. i. 107, 1050 A.D. ; EC. XI. Dg. 20, 1045 A.D.

ಮಂಗಳ ಮಹಾಶ್ರೀ".[230]). ಇವರು ರೈತರ ಎಣ್ಣೆಯ ಬೀಜಗಳನ್ನು ಗಾಣಕ್ಕೆ ಹಾಕಿ ಎಣ್ಣೆಯನ್ನು ಹಿಂಡಿಕೊಟ್ಟು ಜೀವಿಸುತ್ತಿದ್ದರು. ಎಣ್ಣೆಗಳನ್ನು ಡಬ್ಬಗಳಲ್ಲಿ ತೆಗೆದುಕೊಂಡು ಹೋಗಿ ಮಾರಾಟಮಾಡಿಯೂ ಜೀವಿಸುತ್ತಿದ್ದರು. ಇವರನ್ನೇ 'ಹೊಱಗೆ ಬಂದು ಮಾಱುವವರು' ಎಂದು ಒಂದು ಶಾಸನವು ಕರೆದಿರುವುದು.[231] ದಂಬಳದ ಐವತ್ತು ಒಕ್ಕಲಿನ ತೈಲಿಗರನ್ನು ಒಂದು ಶಾಸನವು 'ಬುಧ ಬಾಂಧವ'ರೆಂದೂ, 'ಸಾಕ್ಷರಿಕ'ರೆಂದೂ ವರ್ಣಿಸುತ್ತದೆ.[232] ತೈಲಿಗರಲ್ಲಿ ಕೆಲವರಾದರೂ ವಿದ್ಯಾವಂತರಿದ್ದಿರಬಹುದೆಂದು ಇದರಿಂದ ಊಹಿಸಬಹುದು. ಆ ಊರಿನಲ್ಲಿ ಸಂಗವ ಸೆಟ್ಟಿಯರು ಮಾಡಿಸಿದ ಬೌದ್ಧವಿಹಾರಕ್ಕೆ ಒಂದೊಂದು ಗಾಣದಲ್ಲೂ ಒಂದೊಂದು ಸೊಂಟಿಗೆ ಎಣ್ಣೆಯ ಪ್ರಕಾರ ದಾನ ವನ್ನು ಮಾಡುತ್ತಾರೆ.[233] ಕುಱಿತ ಕೂಂಟೆಯಲ್ಲಿದ್ದ ತೈಲಿಗರು 'ಕೋಣೆಯ ಅನ್ವಯ'ಕ್ಕೆ ಸೇರಿದವರು.[234] ಮಣ್ಣಿನ ಮಡಕೆಗಳನ್ನು ಮಾಡುವವರು ಕುಂಬಾರರು (ಸಂ. ಕುಂಭಕಾರ). ಕ್ರಿ. ಶ. 1123–4ರಲ್ಲಿ ಜಿನಾಲಯದ ದಾನ ಶಾಲೆಯೊಂದಕ್ಕೆ ಕುಂಬಾರರು ಆವುಗೆಗಳನ್ನು ಬಿಟ್ಟುಕೊಟ್ಟಂತೆ ಒಂದು ಶಾಸನದಲ್ಲಿದೆ.[235] ಇದೇ ಜಾತಿಯ ಬಮ್ಮಣ ಎನ್ನುವವನು ವೀರವ್ರತವನ್ನು ಕೈಗೊಂಡು ಕುಂಭೇಶ್ವರ ದೇವಸ್ಥಾನವನ್ನು ಕಟ್ಟಿಸಿದಂತೆ ಒಂದು ಶಾಸನ ದಲ್ಲಿದೆ.[236] ಬಳೆಗಳನ್ನು ಮಾಡಿ ಮಾರುತ್ತಿದ್ದವರು ಬಳೆಗಾರರು.[237] ಕನ್ನಡದ ಸುಪ್ರಸಿದ್ಧ ಕವಿ ರನ್ನನು ಜೈನ ಬಳೆ ಗಾರರ ಕುಲಕ್ಕೆ ಸೇರಿದವನು. ಬುಟ್ಟಿಗಳನ್ನು ಹೆಣೆಯುತ್ತಿದ್ದವರು ಮೇದರು. ತಮ್ಮ ಒಂದೊಂದು ಕತ್ತಿಗೂ ಐದು ವೀಸಗಳನ್ನು ಅವರು ಗವಱೇಶ್ವರ ದೇವರಿಗೆ ಬಿಟ್ಟುಕೊಟ್ಟರೆಂದು ಒಂದು ಶಾಸನವು ಹೇಳುತ್ತದೆ.[238] ವೀಳೆ ಯದೆಲೆಗಳನ್ನು ಮಾರಾಟ ಮಾಡುತ್ತಿದ್ದವರು ತಂಬುಲಿಗರು. ಇವರಿಗೆ ಸಂಬಂಧಿಸಿದ ಒಂದು ಸ್ವಾರಸ್ಯಕರವಾದ ವಿಷಯವಿದೆ. ಬಾಳ್ಗುಳಿ ಎಂಬ ಊರಿನ ತಂಬುಲಿಗರು ಒಂದು ಹೇರು ಎಲೆಗೆ ಎರಡು ಪಣ ಮತ್ತು ಒಂದು ಅಡ್ಡ ದಂತೆ ಸುಂಕವನ್ನು ಕೊಡಬೇಕೆಂದು ರಾಷ್ಟ್ರಕೂಟ ಚಕ್ರವರ್ತಿ ಕನ್ನರ(ಕೃಷ್ಣ)ನು ವಿಧಿಸಿದ್ದನು. ಇದು ನ್ಯಾಯ ಸಮ್ಮತವಾಗಿದ್ದಿತು. ರಾಷ್ಟ್ರಕೂಟರಾದ ಮೇಲೆ ಬಂದ ಚಾಳುಕ್ಯರ ಕಾಲದಲ್ಲಿ ತೆರಿಗೆಯನ್ನು ಹೆಚ್ಚಿಸಿದರು. ಆಗ ಆ ಊರಿನ ತಂಬುಲಿಗರೂ ಇತರರೂ ಹೋಗಿ ನೇರವಾಗಿ ಚಾಳುಕ್ಯ ಚಕ್ರವರ್ತಿ ಆಹವಮಲ್ಲನನ್ನು ಕಂಡು ತಮ್ಮ ಅಸಂ ತೋಷವನ್ನು ವ್ಯಕ್ತಪಡಿಸಿದಾಗ ಅವನು ರಾಷ್ಟ್ರಕೂಟ ಕನ್ನರನ ಕಾಲದ ಸುಂಕವನ್ನೇ ಮತ್ತೆ ಜಾರಿಗೆ ತರುತ್ತಾನೆ. ("ಕನ್ನರ ದೇವನ ಮರ್ಯಾದೆಯಲಾದ ಸುಂಕದ ಮರ್ಯಾದೆಯಂ ತಪ್ಪದೆ ನಡೆಯಿಮೆಂದು ಬಿಟ್ಟನ್").[239] ಮೀನನ್ನು ಹಿಡಿದು ಜೀವಿಸುತ್ತಿದ್ದವರು ದೀವರು. 'ದೀವರ ಬಮ್ಮ'ನ ಹೆಸರು ಒಂದು ಶಾಸನದಲ್ಲಿದೆ.[240]

ಇವಲ್ಲದೆ ಇನ್ನೆರಡು ಜಾತಿಗಳಿವೆ.-- 'ಉಗುರ'ರು ಮತ್ತು ಹಿಟ್ಟುಗಳು. ಇವರ ಸ್ವರೂಪವೇನೆಂಬುದು ಮಾತ್ರ ಗೊತ್ತಾಗುವುದಿಲ್ಲ. 'ಉಗುರ' ಎಂಬುದು ವೃತ್ತಿಯನ್ನು ಸೂಚಿಸುವುದೋ ಅಥವಾ ಅವರು ಮೊದಲು ವಾಸವಾಗಿದ್ದ ಯಾವುದೋ ಊರನ್ನು ಸೂಚಿಸುವುದೋ ಹೇಳುವುದು ಕಷ್ಟ. ಇವರು ಮಹಾ ಶೂರರಾಗಿದ್ದರೆಂದು

---

[230] EC. III. Nj. 150, 1145 A.D.
[231] EC. V. Bl. 147, 1121 A.D.
[232] BKI. I. ii. 144, 1098 A.D.
[233] ಅದೇ.
[234] BKI. I. ii. 133, 1087 A.D.
[235] IA. XIV. p. 15, 1123–4 A.D.
[236] EC. XI. Hk. 68, 1126 A.D. "ಕುಂಬಾಱ ಬಮ್ಮಣಂ ತಲೆಪೂಸದ ಅನ್ನಮುಣದ ವೀರಬ್ರತಮ ಕಯ್ಕೊಂಡು ಪ್ರತಿಷ್ಠೆಯುಂ ಮಾಡಿಸಿದ ಕುಂಭೇಸ್ವರ ದೇವರ ..."
[237] EC. III. Sr. 34, 1126 A.D. ; EC. VIII. Sb. 530, 979 A.D.
[238] EC. VII. Sk. 118, 1054 A.D.
[239] SII. IX. i. 76, 991 A.D.
[240] EC. VI. Mg. 22, 1129 A.D.

ಶಾಸನಗಳು ಬಣ್ಣಿಸುತ್ತವೆ.[241] "ಪರಸೈನ್ಯಾರ್ಣವ ಬಾಡವಾನಳರ್" ಎಂದೂ "ಜಾವಸ್ನ ಪೀರರ್ಕಳನ್ನರ್" (ಯಾರಿವರು ಈ 52 ಶೂರರು?) ಎಂದೂ ಒಂದು ಶಾಸನವು ಹೊಗಳುತ್ತದೆ.[242] ಇದನ್ನು ನೋಡಿದರೆ ಅವರು ಲೆಂಕರಂತೆ ಯೋಧಜನಾಂಗಕ್ಕೆ ಸೇರಿದವರೆಂಬ ಭಾವನೆಯುಃ ಬರುತ್ತದೆ. ಮನುವು ನಾಲ್ಕು ವರ್ಣಗಳ ಸಾಂಕರ್ಯ ದಿಂದ ಹುಟ್ಟಿದ ಬೇರೆ ಬೇರೆ ಜಾತಿಗಳನ್ನು ಹೆಸರಿಸುವಾಗ ಕ್ಷತ್ರಿಯನಿಗೂ ಶೂದ್ರ ಸ್ತ್ರೀಗೂ ಹುಟ್ಟಿದ 'ಉಗ್ರ' ಎಂಬ ಜಾತಿಯ ಜನರನ್ನು ಹೆಸರಿಸುತ್ತಾನೆ.[243] 'ಉಗ್ರ'ರೇ 'ಉಗುರ'ರಾಗಿರುವುದು ಅಸಂಭವ. ಒಮ್ಮೊಮ್ಮೆ ಇವರು ತಂಬುಲಿಗರಿರಬಹುದೇ ಎಂಬ ಸಂದೇಹವೂ ಸುಳಿಯುತ್ತದೆ. ಉಗುರರು ಒಂದು ಏಣಿಗೆ ಒಂದು ಪಣದಂತೆ ದೇವ ರಿಗೆ ದಾನವನ್ನು ಕೊಟ್ಟರು ಎಂದು ಕೆಲವು ಶಾಸನಗಳು ಹೇಳುತ್ತವೆ.[244] ವೀಳೆಯದೆಲೆಯ ಒಂದು ಹೇರಿಗೆ ಎರಡು ವೀಸಗಳಂತೆ, ಒಂದು ಭಂಡಿ ಹೊರೆಗೆ ಒಂದು ಬೇಳೆಯಂತೆ ದೇವರಿಗೆ ಬಿಟ್ಟುಕೊಟ್ಟರು ಎಂದು ಒಂದು ಶಾಸನವು ಹೇಳುತ್ತದೆ.[245] ವೀಳೆಯದೆಲೆ ಕೊಯ್ಯುವವರು ಹೆಬ್ಬೆರಳಿನ ಉಗುರಿಗೆ ಹೊಂದಿಕೊಳ್ಳುವಂತೆ ಒಂದು ಕಬ್ಬಿಣದ ಪುಟ್ಟ ಹರಿತ ಸಾಧನವನ್ನು ಹಾಕಿಕೊಳ್ಳುವುದರಿಂದ ತಂಬುಲಿಗರಿಗೆ 'ಉಗುರ'ರೆಂದು ಹೆಸರು ಬಂದಿರಬಹುದೇ ಎಂದು ಊಹಿಸಬಹುದು. ಶಾಸನಗಳಲ್ಲಿ ತಂಬುಲಿಗರನ್ನೂ ಉಗುರರನ್ನೂ ಪ್ರತ್ಯೇಕವಾಗಿ ಹೆಸರಿಸಿರುವುದರಿಂದ[246] ಅವೆ ರಡೂ ಪ್ರತ್ಯೇಕ ಜಾತಿಗಳೆಂಬುದು ಸ್ಪಷ್ಟ. ಉಗುರರೂ ತಂಬುಲಿಗರೂ ವೀಳೆಯದೆಲೆಗೆ ಸಂಬಂಧಿಸಿದವರೆನ್ನಲು ಆಧಾರಗಳಿವೆ. ಒಂದು ಶಾಸನದಲ್ಲಿ ಹೀಗಿದೆ—"ಸಮಸ್ತ ತೋಟಿಗರುಂ ಕೊನೆಕಾಱರುಂ ವುಳಿಯಮೂನೂರ್ಬರು ಮಿರ್ದು ದೇವರ್ಗೆ ನಿವೇದ್ಯಕ್ಕಂ ನಂದಾದೀವಿಗೆಗೆ ಬಿಟ್ಟ ಧರ್ಮವಪ್ಪುದು ಉಳಿಗೆ ಪಾಗ ಸಮಸ್ತ ಕೊಯ್ಲಾಳಿಗಳೆಲ್ಲರು ಮೆ(ಮೊ)ತ್ತಕಾಱರು ದೇವರ್ಗೆ ನಂದಾದೀವಿಗೆಗೆ ಬಿಟ್ಟ ಧರ್ಮ ಎಣಿಗೆ ಪಾಗ.... ".[247] ಇಲ್ಲಿಯ 'ಉಳಿಯ ಮೂನೂರ್ಬರು' ಬಹುಶಃ ಉಗುರ ಮೂನೂರ್ವರಿರಬೇಕು. ಏಕೆಂದರೆ ಉಳಿ ಎಂದರೆ ವೀಳೆಯದ ಎಲೆ ಕತ್ತರಿಸಲು ಉಗುರಿಗೆ ಹಾಕಿಕೊಳ್ಳುವ ಸಾಧನ ಎಂದೂ ಅರ್ಥವಾಗುತ್ತದೆ. ಅದನ್ನು ಕನ್ನಡದಲ್ಲಿ 'ಉಗುರುಳಿ' ಎಂದೂ[248] ತೆಲುಗಿನಲ್ಲಿ 'ಗೋರುಲಿ' ಎಂದೂ[249] ಕರೆಯುತ್ತಾರೆ. ತಂಬುಲಿಗರು ವೀಳೆಯದೆಲೆಯ ತೋಟಗಾರರೂ ಮಾರಾಟ ಗಾರರೂ ಆಗಿದ್ದರೆ, ಉಗುರರು ಆ ಎಲೆಗಳನ್ನು ಕೊಯ್ಯುವ ವೃತ್ತಿಯವರಿರಬಹುದು. ಆದರೆ ಆದೇ ಶಾಸನದಲ್ಲಿ ಬಂದಿರುವ 'ಕೊಯ್ಲಾಳಿ'ಗಳು ಯಾರು ? ಉಗುರರೂ ಅವರೂ ಒಂದೆಯೇ ಅಥವಾ ಬೇರೆ ಬೇರೆಯೆ?

'ಹಿಟ್ಟು' ಎಂಬ ಜಾತಿಯ ವ್ಯಕ್ತಿಗಳ ಹೆಸರು ಕೆಲವು ಶಾಸನಗಳಲ್ಲಿದೆ. "ಪ್ರಭುಗಾವುಂಡುಗಳುಂ ಮೂಲ(ಲಿ)ಗರುವೆಂಟು ಹಿಟ್ಟುಗಳು ಸಹಿತ"; "ಮೂಲಿಗ ಹಂಪಗೌಡನುಂ ಎಂಟು ಹಿಟ್ಟುಗಳುವಿರ್ದು ಕು(ಕೂ)ಡಿ ಹಡೆದ ವ್ರಿತ್ತಿ."[250] 'ಹಿಟ್ಟು'ಎನ್ನುವುದು ಏನನ್ನು ಸೂಚಿಸುವುದೋ ಹೇಳುವುದು ಕಷ್ಟ.

---

241 BKI. I ii. 158, 1109 A.D. ; 172, 1121 A.D.

242 BKI. I. ii. 181, 1094 A.D.—"ತವಗೆತ್ತಾನುಂ ಮೊಗಂಕ್ಕೊಂದಿನಿಸು ಮುಳಿಸು ಬಂದಂದು ಗೋತ್ರಾದ್ರಿ ಸಂಘಾತವನೆತ್ತಂ ಪತ್ತಿ ಕಿರ್ತ್ತಿತ್ತುವರುಱಿ ಪಿಡಿದುದ್ಧದ್ದಿಶಾನೇಕಪಾನೀಕವನಾದೊರ್ಂದೊಂದೆ ತೋಳ್ತಾಗಿಪದವಯುವದಿಂ ಸುಱಿತ್ತಿಸಲ್ ತಾಯ್ನೆಲಂದೋಱುವಿನಂ ಮೂನೂರ್ಬರುಂ ವಾರ್ಧಿಗಳನಿತುವನಾಳಾಪದಿಂ ಪೀರ್ದು ತೋರ್ಪರ್."

243 The Ordinances of Manu (Tr. Burnell), X. 9.

244 BKI. I. ii. 158, 1109 A.D. ; 152, 1103 A.D.

245 BKI. I. ii. 181, 1094 A.D.

246 BKI. I. ii. 145, 1098–9 A.D.

247 SII. IX. i. 141, 1079 A.D.

248 Kittel : A Kannada–English Dictionary, p. 212.

249 Brown's Telugu–English Dictionary, p. 290.

250 SII. IX. i. 253, 1149 A.D.

ಊರಿನ ಹೊರಗೆ ವಾಸಿಸುತ್ತಿದ್ದವರು ಹರಿಜನರು ("ಪೊಱಗೆ ಚಂಡಾಲಾಲಯಂ"[251]). ಇವರು ಊರಿನ ಸತ್ತ ದನಗಳನ್ನು ಎತ್ತುವವರು, ಜನರಿಗೆ ಚರ್ಮದ ವಸ್ತುಗಳನ್ನು ಮಾಡಿಕೊಡುವವರು. ಇವರನ್ನು 'ಸಮ್ಮಗಾಱ' (ಸಂ. ಚರ್ಮಕಾರ) ರೆಂದು ಶಾಸನಗಳು ಕರೆಯುತ್ತವೆ.[252] ಬಾದಾಮಿಯ ಮಹಾಜನರು ಆ ಊರಿನ ಚರ್ಮಕಾರರ ತೆರಿಗೆಗಳನ್ನು ತೆಗೆದುಹಾಕಿದಂತೆ ಒಂದು ಶಾಸನವು ಹೇಳುತ್ತದೆ.—"ಸ್ವಸ್ತಿ ವಿಜಯವಾತಾಪ್ಯಧಿಷ್ಠಾನದಾ ಶ್ರೀಮಹಾಚಾತುರ್ವಿದ್ಯ ಸಮುದಯಮಿರ್ಚಾಸಿರ್ವರುಂ ಈ ಊರ ಸಮ್ಮಗಾಱರಾ ಕವಟಿತ್ತಿಯಾನ್ ವಿಟ್ಟಾರ್"[253] (ಕವಟಿತ್ತಿ = ಕವರ್ತೆ ಎಂದರೆ ಕಿತ್ತುಕೊಳ್ಳುವುದು ಎಂದು ಅರ್ಥ. ಆದ್ದರಿಂದ ಕವಟಿತ್ತಿ ಎಂದರೆ ಒಂದು ರೀತಿಯ ತೆರಿಗೆ ಎಂದು ಅರ್ಥೈಸಬಹುದು. 'ಪೊಲೆದೆಱೆ' ಎಂಬ ಹೆಸರಿನ ಒಂದು ತೆರಿಗೆಯಿದ್ದಿತು. ಅದನ್ನು ಚರ್ಮಕಾರರ ಮೇಲೆ ಹಾಕುತ್ತಿದ್ದರೆಂದು ಕಾಣಿಸುತ್ತದೆ.) ಸಾಮಾಜಿಕವಾಗಿ ಬಹು ಕೆಳಗಿದ್ದ ಇವರು ಇತರರ ನಿರ್ಲಕ್ಷ್ಯ ಅವಹೇಳನಕ್ಕೆ ತುತ್ತಾಗಿದ್ದ ಅದೃಷ್ಟಹೀನರು.

ಬೇರೆ ಬೇರೆ ಜಾತಿಗಳವರು ಊರಿನ ಬೇರೆ ಬೇರೆ ಭಾಗಗಳಲ್ಲಿ ಒಟ್ಟೊಟ್ಟಿಗೆ ವಾಸಿಸುತ್ತಿದ್ದರು (ಈಗಲೂ ಹಳೆಯ ಕಾಲದ ಹಳ್ಳಿಗಳಲ್ಲಿ ಈ ವ್ಯವಸ್ಥೆಯನ್ನು ನೋಡಬಹುದು). ಕಮ್ಮಾರರು ಕಮ್ಮಾರರ ಬೀದಿಯಲ್ಲಿ,[254] ಬ್ರಾಹ್ಮಣರು ಬ್ರಹ್ಮಪುರಿಗಳಲ್ಲಿ ಇತ್ಯಾದಿ. ಪುಲಿಗೆಱೆಯಲ್ಲಿ ಪಟ್ಟಗಾಱರು ಮೂರು ಕೇರಿಗಳಲ್ಲಿ ವಾಸಿಸುತ್ತಿದ್ದರೆಂದು ಒಂದು ಶಾಸನವು ಹೇಳುತ್ತದೆ.[255] ಹರಿಜನರು ಊರ ಹೊರಗಡೆ ಹೊಲೆಗೇರಿಯಲ್ಲಿ ವಾಸಿಸುತ್ತಿದ್ದರು.[256]

ಮೇಲೆ ಹೇಳಿದ ಜಾತಿಗಳಲ್ಲದೆ ಇನ್ನೂ ಹಲವು ಜಾತಿಗಳಿದ್ದಿರಬೇಕು (ಉದಾಹರಣೆ: ಡೊಂಬರು[257]) ಇವುಗಳೆಲ್ಲವನ್ನೂ ಪ್ರತ್ಯೇಕಜಾತಿಗಳೆಂದು ಕರೆಯುವುದು ಕಷ್ಟ. ಒಂದೇ ಜಾತಿಯವರು ಬೇರೆ ಬೇರೆ ವೃತ್ತಿಗಳನ್ನವಲಂಬಿಸಿದ್ದರೂ ಒಂದೇ ಜಾತಿಯವರೆಂದು ಕರೆಯಿಸಿಕೊಳ್ಳುತ್ತಿದ್ದಿರಬಹುದು. ನಮಗೆ ದೊರಕುವ ಸಾಮಗ್ರಿ ಬಹು ಪರಿಮಿತವಾದುದರಿಂದ ಅಂತಹ ಸೂಕ್ಷ್ಮ ಅಂಶಗಳನ್ನು ಚರ್ಚಿಸಲು ಸಾಧ್ಯವಿಲ್ಲ. ಒಂದೇ ಜಾತಿಯ ಬೇರೆ ಬೇರೆ ವೃತ್ತಿಯ ಜನರಲ್ಲಿ ಅಥವಾ ಭಿನ್ನವಾದ ಬೇರೆ ಬೇರೆ ಜಾತಿಗಳಲ್ಲಿ ಎಷ್ಟು ಸ್ವವಂಶವಿವಾಹದವು (Endogamous), ಎಷ್ಟು ಭಿನ್ನವಂಶ ವಿವಾಹದವು (Exogamous) ಎಂಬುದನ್ನು ನಿರ್ಧರಿಸುವುದು ಕಷ್ಟ. ಅಷ್ಟೇ ಅಲ್ಲ, ಭಿನ್ನ ಭಿನ್ನ ಜಾತಿಗಳವರು ಸಾಮಾಜಿಕವಾಗಿ ಯಾವ ಯಾವ ಹಂತದಲ್ಲಿದ್ದರು ಎಂಬುದನ್ನು ಹೇಳುವುದೂ ಕಷ್ಟವೇ. ಎಲ್ಲರಿಗಿಂತ ಬ್ರಾಹ್ಮಣರು ಮೇಲಿನ ಹಂತದಲ್ಲಿದ್ದರೆಂಬುದು ನಿರ್ವಿವಾದವಾದುದು. ಬಹು ಕೆಳಗಿನ ಹಂತದಲ್ಲಿದ್ದವರು ಹರಿಜನರು ಎಂಬುದೂ ನಿರ್ವಿವಾದವಾದುದು. ಇವರ ಮಧ್ಯೆ ರಾಜಕುಲದವರಿಗೂ, ಶ್ರೀಮಂತರಾದ ವರ್ತಕ ಸಂಗಡದವರಿಗೂ ಸಾಮಾಜಿಕವಾಗಿ ಉನ್ನತಸ್ಥಾನವಿದ್ದಿತು. ಇಷ್ಟು ಮಾತ್ರ ಸ್ಥೂಲವಾಗಿ ಹೇಳಲು ಸಾಧ್ಯ. ಉಳಿದ ಜಾತಿಗಳ ಸಾಮಾಜಿಕವಾದ ಸ್ಥಾನಮಾನಗಳನ್ನು ನಿರ್ಧರಿಸುವುದು ಬಹು ಕಷ್ಟ.

ಮೇಲೆ ನಾವು ನೋಡಿದ ಎಲ್ಲಾ ಜಾತಿಗಳಲ್ಲೂ ಸಾಮಾನ್ಯವಾಗಿ ಎದ್ದು ಕಾಣುವ ಅಂಶವೆಂದರೆ ಅವರ ಒಗ್ಗಟ್ಟು, ಸಾಂಘಿಕವಾದ ಸಂಘಟನೆ. ಈ ಸಂಘಟನೆಯು ಅವರು ಪ್ರಯತ್ನಪೂರ್ವಕವಾಗಿ ಮಾಡಿಕೊಂಡದ್ದಲ್ಲ, ಅಪ್ರಯತ್ನಪೂರ್ವಕವಾಗಿ ಮೂಡಿಬಂದದ್ದು. ಭಾರತದಲ್ಲಿ "ಧರ್ಮದ ಕಟ್ಟುಪಾಡುಗಳಿಗಿಂತಲೂ ಜಾತಿಯ ಕಟ್ಟುಪಾಡುಗಳು ಹೆಚ್ಚು ಬಿಗಿಯಾದುವು. ಒಬ್ಬ ವ್ಯಕ್ತಿಯು ಧಾರ್ಮಿಕವಾದ ಆಚರಣೆಗಳ ದೃಷ್ಟಿಯಿಂದ ಕೆಟ್ಟ

---

[251] BKI. I. ii 201, C. 1125 A.D.

[252] SII. VII. No. 271.

[253] KI. I. 4, C. 750 A.D.

[254] EC. VII. Hl. 64, 974 A.D.

[255] EI. VI. p. 166, C. 793 A.D.

[256] BKI. I. i. 50, 1005 A.D.

[257] EI. VI. p. 163, C. 780 A.D. ಡೊಂಬರ ಜಾತಿಯ ಕಾಡವ ಎಂಬಾತನು ತುರುಗೋಳಲ್ಲಿ ಸತ್ತ ವಿಷಯವು ಈ ಶಾಸನದಲ್ಲಿದೆ.

ಹಿಂದುವಾಗಿರಬಹುದು. ಆದರೆ ಜಾತಿಯ ನಿಯಮುಗಳನ್ನು ಪರಿಪಾಲಿಸಲೇ ಬೇಕು. ಇಲ್ಲದಿದ್ದರೆ ಇತರರ ಔದಾಸೀನ್ಯದ ಫಲಗಳನ್ನು ಅನುಭವಿಸಬೇಕಾಗುತ್ತದೆ. ಅನೇಕ ಹಿಂದುಗಳ ಪ್ರಕಾರ ಜಾತಿಯ ನಿಯಮುಗಳ ಪರಿಪಾಲನೆಯೇ ಅತ್ಯುತ್ತಮ ಧಾರ್ಮಿಕ ಜೀವನ. ಪಾಪವೆಂದರೆ ಜಾತಿಯ ಕಟ್ಟುಪಾಡುಗಳನ್ನು ಮುರಿಯುವುದೇ ಹೊರತು ನೈತಿಕ ನಿಯಮುಗಳನ್ನಲ್ಲ ಎಂಬ ಭಾವನೆ ಅವರಲ್ಲಿ ಹೆಚ್ಚುಕಡಿಮೆ ಎಲ್ಲರಿಗೂ ಇದೆ."[258] ಡಾ॥ ಷೆರ‍್ರಿಂಗ್ ಎಂಬ ವಿದ್ವಾಂಸರ ಈ ಅಭಿಪ್ರಾಯವು ಸಾಧುವಾದುದು. ಒಂದು ದೇವಸ್ಥಾನವು ಹೊಸದಾಗಿ ನಿರ್ಮಾಣವಾದಾಗ ಆಯಾ ಜಾತಿಯ ಜನರು ಸೇರಿ ತಾವು ದೇವಸ್ಥಾನಕ್ಕೆ ಸಲ್ಲಿಸಬಹುದಾದ ಸೇವೆಯ ಪ್ರಮಾಣವನ್ನು ಕುರಿತು ಚರ್ಚಿಸಿ ಒಂದು ತೀರ್ಮಾನಕ್ಕೆ ಬರುತ್ತಿದ್ದರು. ಆ ಸಭೆಯ ತೀರ್ಮಾನಕ್ಕೆ ಎಲ್ಲರೂ ತಲೆಬಾಗುತ್ತಿದ್ದರು. ಜಾತಿಯ ನಿಯಮುಗಳನ್ನುಲ್ಲಂಘಿಸಿ ಆ ಜಾತಿಯ ಜನರ ಸಭೆಯ ತೀರ್ಮಾನಗಳನ್ನು ಅಲಕ್ಷಿಸಿದರೆ ಅಂಥವನನ್ನು ಜಾತಿಯಿಂದ ಹೊರಹಾಕುತ್ತಿದ್ದರು.[259] ಈಗಿನ ಭಾಷೆಯಲ್ಲಿ ಹೇಳುವುದಾದರೆ 'ಬೆಂಕಿ ನೀರನ್ನು ಕಟ್ಟುಮಾಡುತ್ತಿದ್ದರು' (=ಉತ್ತರಭಾರತದ 'ಹುಕ್ಕಾ ಪಾನೀ ಬಂದ್'). ಹೀಗೆ ಜಾತಿಯ ಅಥವಾ ಸಮಾಜದ ಭಯವು ವ್ಯಕ್ತಿಗೆ ಇದ್ದೇ ಇರುತ್ತದೆ. ಎಷ್ಟೋ ಸಾರಿ ದಾನಕಾರ್ಯದಲ್ಲಿ ಭಾಗವಹಿಸಲು ಇಷ್ಟವಿಲ್ಲದಿದ್ದರೂ ಸಮಾಜದ ಬಹಿಷ್ಕಾರಕ್ಕೆ ಹೆದರಿ ಒಪ್ಪಿಕೊಳ್ಳಬೇಕಾಗುತ್ತಿದ್ದಿತು.

ತಮ್ಮ ಜಾತಿಗೆ ಕೇಂದ್ರಾಡಳಿತದಿಂದ ಅನ್ಯಾಯವಾದಾಗ ಎಲ್ಲರೂ ಸಾಮೂಹಿಕವಾಗಿ ಪ್ರತಿಭಟಿಸಿ ನ್ಯಾಯವನ್ನು ದೊರಕಿಸಿಕೊಳ್ಳುತ್ತಿದ್ದುದನ್ನು ಹಿಂದೆಯೇ ನೋಡಿದ್ದೇವೆ. ಆಯಾ ಜಾತಿಗಳವರು ತಮ್ಮ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದದ್ದರಿಂದ ತಮ್ಮ ತಮ್ಮ ವೃತ್ತಿಗಳಲ್ಲಿ ಕೌಶಲವನ್ನು ಬೆಳೆಯಿಸಿಕೊಂಡು ಬರಲು ಸಾಧ್ಯವಾಯಿತು. ಸುಖದಲ್ಲಿ, ಕಷ್ಟದಲ್ಲಿ ಪಾಲುದಾರರಾಗಲು ಆ ಜಾತಿಯ ಉಳಿದ ಜನರು ಸಿದ್ಧವಾಗಿರುತ್ತಿದ್ದರು (ಜಾತಿಯ ವ್ಯವಸ್ಥೆಯಲ್ಲಿ ದೋಷಗಳೂ ಇವೆಯೆಂದು ಒಪ್ಪಿಕೊಳ್ಳಬಹುದು). ಒಟ್ಟಿನಲ್ಲಿ "ಒಂದೊಂದು ಜಾತಿಯೂ ತನಗೆ ತಾನೇ ಒಂದು ಸಾಮಾಜಿಕ ಘಟಕ"[260] ವಾಗಿದ್ದಿತು. "ಜಾತಿಗಳು ದೊಡ್ಡ ಸಮಾಜದಲ್ಲೇ ಇದ್ದರೂ ಸ್ಪಷ್ಟವಾದ ಗೆರೆಗಳಿಂದ ಪ್ರತ್ಯೇಕಗೊಂಡ ಚಿಕ್ಕ ಸ್ವತಂತ್ರ ಸಾಮಾಜಿಕ ಪ್ರಪಂಚಗಳು."[261]

## ಕೆಲವು ಸಾರ್ವಜನಿಕ ಚಟುವಟಿಕೆಗಳು

ಜೀವನವು ಕ್ಷಣಿಕವಾದುದು. ದಿನ ದಿನವೂ ಆಯುಸ್ಸು ಕ್ಷೀಣಿಸುತ್ತಾ ಹೋಗುತ್ತದೆ. ಹೀಗಿರುವಾಗ ಮನುಷ್ಯನು ಧರ್ಮವನ್ನು ಅವಲಂಬಿಸಿ ಸದ್ಗತಿಯನ್ನು ಸಂಪಾದಿಸಿಕೊಳ್ಳಬೇಕು.[262] ಧರ್ಮವು ಮೂರು

---

[258] "The ties of caste are stronger than those of religion. A man may be a bad Hindu so far as the practice of his religious duties goes ; but caste rules must be minutely observed, or he will have to reap the consequence of neglect. With many Hindus the highest form of religious observance is the complete fulfilment of the claims of caste; and most of them conceive of sin as of breach of caste discipline rather than of moral law . " –Sherring (Quoted by Hutton in his "Caste in India," p. 125).

[259] ಇದಕ್ಕೆ ಶಾಸನಾಧಾರವೂ ಉಂಟು. ಎಲ್ಲರೂ ಸೇರಿ ಕೆರೆಗೆ ಬಿಟ್ಟ ದಾನವನ್ನು ಕೆಡಿಸಿದ ಪಾತಕಿಯನ್ನು ಊರಿನಿಂದ ಓಡಿಸಬೇಕೆಂದೂ, ಅವನೊಡನೆ ಯಾರೂ ಸಂಪರ್ಕವಿಟ್ಟುಕೊಳ್ಳಬಾರದೆಂದೂ ಒಂದು ಶಾಸನವು ಹೇಳುತ್ತದೆ ("ಆ ಪಂಚ ಮಹಾಪಾತಕನ ಊರಿಂ ಕಳೆವುದು ಊರಾತನೆಂದಾತಂ ಪುದುವಾಟಿ ಸಲ್ಲಂ"). ಇದು ಆ ಊರ ಜನರ ಸಭೆಯ ನಿರ್ಣಯ.

[260] Hutton : Caste in India, p. 2.

[261] Ghurye : Caste and Class in India, p. 5.

[262] "ಕಾಲಕ್ಷೇಪೋ ನ ಕರ್ತಬ್ಯಂ ಆಯಿ ಕ್ಷೀಣೇ ದಿನೇ ದಿನೇ। ಯಮಸ್ಯ ಕರುಣಾ ನಾಸ್ತಿ ದಂಮಸ್ಯ ತುರಿತಾಗತ" —EC. VI. Kd. 102, 1141 A.D. ಪಾಠವನ್ನು ತಿದ್ದುವ ಗೋಜಿಗೆ ಹೋಗಿಲ್ಲ.

ಲೋಕಗಳನ್ನೂ ಬೆಳಗುತ್ತಿರುವ ದೀಪ ("ತ್ರೈಲೋಕ್ಯದೀಪಕೋ ಧರ್ಮಃ").[263] ಕಲಿಯುಗವು ಬಹು ಕೆಟ್ಟದ್ದು ; ನಿಜವಾದ ಬಂಧುಗಳು ಈ ಕಾಲದಲ್ಲಿ ಸಿಗುವುದು ದುರ್ಲಭ. ಆದ್ದರಿಂದ ಧರ್ಮವೊಂದೇ ನಿಜವಾದ ಬಂಧು ("ನಾಸ್ತಿ ಧರ್ಮಸಮೋ ಬಂಧುಃ").[264] ನಾವು ಮೊದಲು ಚಿಂತಿಸಬೇಕಾದುದು ಧರ್ಮವನ್ನೇ ("ಧರ್ಮಂ ಪ್ರಾಗೇವ ಚಿಂತಯೇತ್").[265]—ಇವು ಪ್ರಾಚೀನ ಕನ್ನಡಿಗರ ಮನಸ್ಸಿನಲ್ಲಿ ಬೇರೂರಿದ್ದ ಕೆಲವು ಭಾವನೆಗಳು. ಇಲ್ಲೆಲ್ಲ ಧರ್ಮವೆಂದರೆ ಶೈವ,ಜೈನ, ವೈಷ್ಣವ ಧರ್ಮಗಳಲ್ಲ ; ಎಲ್ಲರಿಗೂ ಸಮಾನವಾದ, ಎಲ್ಲ ಧರ್ಮಗಳೂ ಒತ್ತಿ ಹೇಳುವ ದಾನ, ಕೆರೆಯನ್ನು ಕಟ್ಟಿಸುವುದು, ದೇವಸ್ಥಾನ ನಿರ್ಮಾಣ ಇತ್ಯಾದಿ ಪುಣ್ಯ ಕಾರ್ಯಗಳು.[266] ಚಟ್ಟಲದೇವಿ ಎಂಬಾಕೆಯು "ಧರ್ಮಂ ಪ್ರಾಗೇವ ಚಿಂತಯೇತ್" ಎಂಬುದನ್ನು ಸ್ಮರಿಸಿ ಕೆರೆ, ಬಾವಿ, ಬಸದಿ, ದೇಗುಲ, ಅರವಂಟಿಗೆ, ತೀರ್ಥ, ಚತ್ರ, ಆರವೆ(=ತೋಪು)' 'ಮೊದಲಾದಱಿಕೆಯ ಧರ್ಮಾದಿಗಳ'ನ್ನು ಮಾಡಿಸಿದಂತೆ ಒಂದು ಶಾಸನವು ಹೇಳುತ್ತದೆ.[268] ನಾಲ್ಕು ಯುಗಗಳಲ್ಲಿ ಕೊನೆಯದಾದ ಕಲಿಯುಗದಲ್ಲಿ ಧರ್ಮ ಎನ್ನುವ ವೃಷಭವು ಕೆಸರಲ್ಲಿ ಹೂತುಹೋಗಿದೆ ಎಂದು ನಂಬಿದ್ದರು.[268] ಉದಾರಿಗಳು ದಾನವನ್ನು ಮಾಡಿ ಔದಾರ್ಯವನ್ನು ಪ್ರಕಟಿಸಿದಾಗ 'ಕಾಳಂ ಕೃತಯುಗಮುಮಾಯ್ತು' ಎಂಬ ಉದ್ಗಾರವನ್ನು ಕೆಲವೆಡೆ ತೆಗೆದಿರುವುದುಂಟು.[269]

ಪುಣ್ಯಾರ್ಜನೆಗಾಗಿ ರಾಜರೂ ಶ್ರೀಮಂತರೂ ಉದಾರವಾಗಿ ದತ್ತಿಗಳನ್ನು ಬಿಟ್ಟುಕೊಟ್ಟಿದ್ದಾರೆ. ತುಲಾಪುರುಷ[270], ಹಿರಣ್ಯಗರ್ಭ[271], ಕಲ್ಪವೃಕ್ಷ,[272] ಗೋಸಹಸ್ರ[273] —ಮುಂತಾದ ಮಹಾದಾನಗಳನ್ನು ಮಾಡಿದ್ದಾರೆ. ಅವು ವೈಯಕ್ತಿಕ ಪುಣ್ಯಕಾರ್ಯಗಳು. ಅವುಗಳನ್ನು ಇಲ್ಲಿ ಚರ್ಚಿಸಿಲ್ಲ. ದೇವಸ್ಥಾನ ನಿರ್ಮಾಣದಂತಹ ಸಾರ್ವಜನಿಕ ಕಾರ್ಯದ ವಿಸ್ತಾರವಾದ ಚರ್ಚೆ ಹಿಂದಿನ ಒಂದು ಅಧ್ಯಾಯದಲ್ಲಿ ಬಂದಿದೆ. ಈ ಭಾಗದಲ್ಲಿ ಆರಾಮ, ತಟಾಕ ಅಥವಾ ಕೆರೆ, ಅಗ್ನಿಷ್ಟಕೆ, ಪ್ರಪೆ, ಸತ್ರ ಎಂಬ ಐದು ಶೀರ್ಷಿಕೆಗಳಲ್ಲಿ ಐದು ಸಾರ್ವಜನಿಕ ಕಾರ್ಯಗಳನ್ನು ವಿವರಿಸಿದೆ. ಪರಮಸಿದ್ಧಿಯನ್ನು ಬಯಸುವವನು ಅಗ್ನಿಷ್ಟಕೆ, ಪ್ರಪೆ, ಸತ್ರಮತ್ತು ಆರಾಮಗಳನ್ನು ಮಾಡಿಸಬೇಕೆಂದು ಅಭಿಲಷಿತಾರ್ಥ ಚಿಂತಾಮಣಿಯು ಹೇಳುತ್ತದೆ.[274]

## ಆರಾಮ (ಸಾರ್ವಜನಿಕ ಉದ್ಯಾನ)

ಪ್ರಾಚೀನ ಕರ್ನಾಟಕದ ಊರುಗಳ ಹೊರಗೆ 'ಬಹಿರ್ವನ'[275] ಗಳಿದ್ದುವೆಂದು ಶಾಸನಗಳು ಬಣ್ಣಿಸುವುದನ್ನು ನೋಡಿದರೆ ಅವು ಸಾರ್ವಜನಿಕರ ಉಪಯೋಗಕ್ಕಾಗಿ ಇದ್ದ ವಿಹಾರೋದ್ಯಾನಗಳು ಎಂಬ ಭಾವನೆ ಬರುತ್ತದೆ. ಇಂತಹ 'ಆರವೆ' (ಸಂ. ಆರಾಮ) ಗಳನ್ನು ಧರ್ಮಾರ್ಥವಾಗಿ ಬಿಟ್ಟುಕೊಟ್ಟ ಉಲ್ಲೇಖಗಳು

[263] EC. VI. Cm. 94, C. 1060 A.D.

[264] EC. VII. Sk. 131, 1104 A.D.

[265] EC. VIII. Nr, 35, 1077 A.D.

[266] "ಕೆಱೆ ಬಾವಿ ಬಸದಿ ದೇಗುಲ। ಮಱವಂಟಗೆ ಸತ್ರವೆಂಬ ಧರ್ಮಮವಿನಿತುಂ। ನೆಱೆದುವು ಮುಗುಂದ ಮೂವ। ತ್ತಱ ವಿಭು ಚಾವುಂಡರಾಯನಿಂದಂ ಜಗದೊಳ್" (BKI. I. ii. 177, 1125 A.D.)

[267] EC. VIII. Nr. 35, 1077 A.D.

[268] EC. VI. Mg. 36, 749 A.D.

[269] EC. VII. Sk. 136, 1068 A.D.

[270] EI. XIII. p. 329, 925 A.D. ; EC. VIII. Nr. 35, 1077 A.D.

[271] EI, XXIII. p. 8, 543 A.D.

[272] EI. XIII. p. 329, 925 A.D.

[273] BKI. I. i. 6, C. 800 A.D.

[274] ಅಭಿಲಷಿತಾರ್ಥ ಚಿಂತಾಮಣಿ, 1.72—"ಅಗ್ನಿಷ್ಟಿಕಾಂ ಪ್ರಪಾಂ ಸತ್ರಮಾರಾಮಾಂಶ್ಚ ಪ್ರವರ್ತಯೇತ್."

[275] SII. IX. i. 249, 1147 A.D.

ಕೆಲವು ಶಾಸನಗಳಲ್ಲಿವೆ. ಚಟ್ಟಲದೇವಿಯು ಕೆರೆ, ಬಾವಿ, ದೇಗುಲ ಮುಂತಾದುವುಗಳ ಜೊತೆಯಲ್ಲಿ 'ಆರವೆ'ಯನ್ನೂ ಮಾಡಿಸಿದಳೆಂದು ಒಂದು ಶಾಸನದಲ್ಲಿ ಉಕ್ತವಾಗಿದೆ.[276] ನಾಣಿಮಯ್ಯ ಎಂಬಾತನು ತನ್ನ 'ಆರವೆ'ಯಲ್ಲಿ ಅರವಟ್ಟಿಗೆಯನ್ನಿಟ್ಟದ್ದನೆಂದು ಒಂದು ಕಡೆ ಹೇಳಿದೆ.[277] ಈ 'ಆರವೆ'ಯು ಬಹುಶಃ ಸಾರ್ವಜನಿಕರಿಗಾಗಿ ಬಿಟ್ಟುಕೊಟ್ಟಿದ್ದ ಉದ್ಯಾನವಿರಬೇಕು. ಇನ್ನೊಂದು ಶಾಸನದಲ್ಲಿ ಹೀಗಿದೆ[278] —"ಸ್ವಸ್ತಿ ಶ್ರೀಊರಾ ಅಯ್ಯಪದೇವಪರ ವಿಟ್ಟ ತೊಡಿಕೆ ಅಜಪಿಟ್ಟೋರ್." ತೊಡಿಕೆ ಎಂಬುದು ಸಾರ್ವಜನಿಕರ ಬಳಕೆಗಾಗಿ ಇದ್ದ ಸಣ್ಣ ತೋಟವೆಂದೂ, ಅದನ್ನು ಅಯ್ಯಪದೇವನು ಧರ್ಮಾರ್ಥವಾಗಿ ಬಿಟ್ಟುಕೊಟ್ಟನೆಂದೂ ಶಾಸನದ ಸಂಪಾದಕರು ಅರ್ಥೈಸಿದ್ದಾರೆ. (ಈಗಲೂ 'ತೋಟ–ತುಡಿಕೆ' ಎಂಬಲ್ಲಿ ಈ ಮಾತು ಹುದುಗಿದೆ. ತುಡಿಕೆಯು ಮುಖ್ಯವಾಗಿ ಹೂದೋಟವನ್ನು ಸೂಚಿಸುತ್ತದೆ.) ದಾರಿಗಳ ಪಕ್ಕಗಳಲ್ಲಿ ಸಾಲುಮರಗಳನ್ನು ನಡಿಸುತ್ತಿದ್ದುದಕ್ಕೆ ಉಲ್ಲೇಖಗಳು ನಮಗೆ ತಿಳಿದಮಟ್ಟಿಗೆ ಶಾಸನಗಳಲ್ಲಿ ಎಲ್ಲಿಯೂ ಬಂದಿಲ್ಲ.

## ಅಗ್ಗಿಷ್ಟಗೆ (ಸಂ. ಅಗ್ನಿಷ್ಠಿಕಾ)

ಪ್ರಾಚೀನ ಕಾಲದಲ್ಲಿ ಚಕಮಕಿ ಕಲ್ಲಿನಿಂದಲೂ ಎರಡು ಮರದ ತುಂಡುಗಳನ್ನು ಉಜ್ಜುವುದರಿಂದಲೂ ಬೆಂಕಿಯನ್ನು ಸೃಷ್ಟಿಸಿಕೊಳ್ಳುತ್ತಿದ್ದುದು ಎಲ್ಲರಿಗೂ ತಿಳಿದ ಸಂಗತಿ. ಆದರೆ ಪ್ರತಿನಿತ್ಯವೂ, ಪ್ರತಿಮನೆಯಲ್ಲೂ, ಪ್ರತಿಸಲವೂ ಹೀಗೆ ಬೆಂಕಿಯನ್ನು ಮಾಡಿಕೊಳ್ಳುತ್ತಿದ್ದರೆಂದಾಗಲಿ, ಅಥವಾ ಒಮ್ಮೆ ಹೊತ್ತಿಸಿದ ಬೆಂಕಿಯು ಆರದಂತೆ ಪ್ರತಿ ಮನೆಯಲ್ಲಿಯೂ ಏನಾದರೂ ಏರ್ಪಾಟು ಮಾಡಿಕೊಂಡಿದ್ದರೆಂದಾಗಲಿ ಕಲ್ಪಿಸಿಕೊಳ್ಳುವುದು ಕಷ್ಟ. ಹಾಗಾದರೆ ಪ್ರತಿನಿತ್ಯವೂ ಬಳಸುವ ಬೆಂಕಿಗೆ ಯಾವ ಏರ್ಪಾಟನ್ನು ಮಾಡಿಕೊಂಡಿದ್ದರು ? ಅದಕ್ಕೆ ಉತ್ತರ–ಅಗ್ಗಿಷ್ಟಗೆ. ಒಂದೊಂದು ಊರಿನಲ್ಲೂ, ಮಠ, ದೇವಸ್ಥಾನಗಳಂತಹ ಸ್ಥಳಗಳಲ್ಲಿ, ಶ್ರದ್ಧಾವಂತ ವೈದಿಕರ ಮನೆಗಳಲ್ಲಿ ಬೆಂಕಿ ಆರದೆ ಸದಾ ಉರಿಯುತ್ತಿರುವಂತೆ ನೋಡಿಕೊಳ್ಳಲು ಊರಿನ ಜನರು ದತ್ತಿಗಳನ್ನು ಬಿಟ್ಟುಕೊಡುತ್ತಿದ್ದರು. ಅಂತಹ ಸ್ಥಳಗಳಿಂದ ಪ್ರತಿದಿನವೂ ಬೆಂಕಿಯು ಮನೆಯಿಂದ ಮನೆಗೆ ಹೋಗುತ್ತಿದ್ದಿತು. ಊರಿನಲ್ಲಿ ಒಂದೆಡೆ ಅಗ್ನಿಯನ್ನು ಆರದಂತೆ ನೋಡಿಕೊಳ್ಳುತ್ತಿದ್ದರೆಂಬುದಕ್ಕೆ ಶಾಸನಾಧಾರಗಳಿವೆ. ಕ್ರಿ. ಶ. 1010ರ ಶಾಸನದಲ್ಲಿ ಈ ರೀತಿ ಇದೆ.[279]— "ಅಗ್ನಿಷ್ಟಗೆಯ ಧರ್ಮಕ್ಕೆಂದು ಬಿಟ್ಟ ಕಲ್ದಲೆಯ ಕೆಯಿ ಕಮ್ಮ ಮೂವತ್ತು. ಅಗ್ನಿಷ್ಠಗೆಯುಂ ಮಠಮುಮಂ ರಕ್ಷಿಸಿದವರ್ಗೆ ಅನಂತಪುಣ್ಯ. ಅಗ್ನಯೇ ನಮಃ". ಶಾಸನದ ಒಕ್ಕಣಿಕೆಯನ್ನು ನೋಡಿದರೆ ಅಗ್ಗಿಷ್ಟಗೆಯು ಸಾರ್ವಜನಿಕರ ಸೊತ್ತು ಎಂಬ ಭಾವನೆಯು ಬರುತ್ತದೆ. ಇನ್ನೊಂದು ಶಾಸನದಲ್ಲಿ ಮುದ್ದಲದೇವಿ ಎಂಬಾಕೆ ಶಿವಪುರ ಎಂಬ ಅಗ್ರಹಾರದ ಮಹಾಜನಗಳ ಕೈಯಲ್ಲಿ ಆರು ಗದ್ಯಾಣಗಳನ್ನು ಕೊಟ್ಟಳೆಂದೂ, ಅವರು ಆ ಹಣದ ಬಡ್ಡಿಯಿಂದ 'ಅಗ್ನಿಷ್ಠೆ' ಯನ್ನು ನಡೆಸುವರೆಂದೂ ಹೇಳಿದೆ.[280] ತುಂಬುಳ ಎಂಬ ಅಗ್ರಹಾರದಲ್ಲಿ ವಿದ್ಯಾದಾನಕ್ಕೆ ಕೊಟ್ಟ ದತ್ತಿಯ ಜೊತೆಯಲ್ಲಿ 'ಅಗ್ನಿಷ್ಟಗೆಯ ಬ್ರಾಹ್ಮಣ' ನಿಗೂ ಎರಡು ಗದ್ಯಾಣಗಳನ್ನು ಬಿಡಲಾಗಿದೆ.[281] ಮತ್ತೊಂದು ಶಾಸನದಲ್ಲಿ ಅಗ್ರಹಾರದ ಎರಡು

---

[276] EC. VIII. Nr. 35, 1077 A.D.

[277] BKI. I. ii. 196, 1121 A.D.

[278] MAR (1934). p. 170, C. 900 A.D. ಇನ್ನೊಂದು ಶಾಸನದ ಮಾತುಗಳೂ ಗಮನಾರ್ಹ— "ಕೆಱೆಯುಂ ಕಟ್ಟಿಸುತಿರ್ಪುದುಮಱವಂಟಿಗೆಯಿಡಿಸುತಿರ್ಪುದೆಸವಾರವೆಯುಂ ನೆಱೆ ಮಾಡಿಸುವನುವಲ್ಲಪೆ ಪೆಜತಿಲ್ಲದು ಆದಿ ಗಾಡನುಜ್ಜುಗವೆಂದುಂ" (EC. V. Bl. 137). ಕೆರೆ, ಅರವಟ್ಟಿಗೆಗಳಂತೆ 'ಆರವೆ' ಗಳನ್ನೂ ಸಾರ್ವಜನಿಕರಿಗಾಗಿ ಮಾಡಿಸುತ್ತಿದ್ದುದಕ್ಕೆ ಈ ಶಾಸನ ಸ್ಪಷ್ಟಾಧಾರವಾಗಿದೆ.

[279] EC. VII. Sk. 74, 1010 A.D.

[280] EI. XII. p. 273, C. 1080 A.D.

[281] SII. IX. i. 175, 1107, A.D.

ಮಠಗಳ ಅಗ್ಗಿಷ್ಟಿಕೆಗೆ (' ಅಗ್ಗೆಷ್ಟೈಗೆ ' ಎಂದೂ ಇದೆ) ಕೆಲವು ಗದ್ಯಾಣಗಳನ್ನು ಕೊಟ್ಟ ವಿಷಯ ಬಂದಿದೆ.[282] ಮತ್ತೊಂದು ಶಾಸನದಲ್ಲಿ ' ಅಗ್ನಿಷ್ಠಗೆ 'ಗೆ ಕೊಟ್ಟ ಗದ್ಯಾಣಕ್ಕೆ ಬರುವ ಬಡ್ಡಿಯಲ್ಲಿ ಅಗ್ಗಿಷ್ಟಗೆಯನ್ನು ನಡೆಯಿಸ ಬೇಕೆಂದು ಹೇಳಿದೆ.[283] ಹೀಗೆ ಅಗ್ಗಿಷ್ಟಗೆ (< ಸಂ. ಅಗ್ನಿಷ್ಠಿಕಾ)[284] ಎಂಬುದು ಗ್ರಾಮದ ಜನರ ಸಾಮೂಹಿಕ ಪ್ರಯತ್ನದ ಫಲ. ಅದನ್ನು ಆರದಂತೆ ನೋಡಿಕೊಳ್ಳಲು, ಮತ್ತು ಬಹುಶಃ ಬೆಂಕಿಯನ್ನು ವಿತರಣಮಾಡಲು ಪ್ರತ್ಯೇಕವಾಗಿ ಒಬ್ಬ ವ್ಯಕ್ತಿಯನ್ನು ನೇಮಿಸುತ್ತಿದ್ದರು. ಒಂದು ಅಗ್ಗಿಷ್ಟಗೆಯನ್ನೂ ಒಂದು ಕೋಳಿಯನ್ನೂ ಇಟ್ಟುಕೊಂಡು, ತನ್ನ ಅಗ್ಗಿಷ್ಟಗೆಯ ಬೆಂಕಿಯಿಂದಲೇ ಊರಿನ ಜನ ಅಡುಗೆಮಾಡಿಕೊಳ್ಳು ವರು, ತನ್ನ ಕೋಳಿಯಿಂದಲೇ ಬೆಳಗಾಗುವುದು ಎಂದು ಜಂಬಪಟ್ಟುಕೊಳ್ಳುತ್ತಿದ್ದ ಮುದುಕಿಯ ಕತೆಯನ್ನು ಇಲ್ಲಿ ನೆನೆಯಬಹುದು. ಆ ಮುದುಕಿ ತನ್ನ ಅಗ್ಗಿಷ್ಟಗೆಯನ್ನೂ ಕೋಳಿಯನ್ನೂ ತೆಗೆದುಕೊಂಡು ಊರುಬಿಟ್ಟು ಹೋದಾಗ ಆ ಊರಿನವರು ಬೇರೆ ಊರಿಂದ ಬೆಂಕಿ ತಂದು ಅಡುಗೆ ಮಾಡಿಕೊಂಡಂತೆ ಕತೆ ಹೇಳುತ್ತದೆ. ಬೆಂಕಿ ಪೊಟ್ಟಣಗಳು ಬರುವುದಕ್ಕೆ ಮುಂಚೆ ಊರಿನ ಯಾವುದಾದರೂ ಒಂದು ಮನೆಯಲ್ಲಿ ಬೆರಣಿಗಳ ಸಹಾಯದಿಂದ ಬೆಂಕಿಯನ್ನು ಆರದಂತೆ ನೋಡಿಕೊಳ್ಳುತ್ತಿದ್ದರಂತೆ. ಅದನ್ನು ಕಂಡವರು ಈಗ ಬಹುಶಃ ಯಾರೂ ಇಲ್ಲವಾದರೂ, ತಮ್ಮ ಅಜ್ಜ ಮುಂತಾದ ಹಿರಿಯರು ಆ ರೀತಿ ಹೇಳಿದ್ದನ್ನು ಈಗಲೂ ಕೆಲವರು ಸ್ಮರಿಸಿಕೊಳ್ಳುತ್ತಾರೆ.

ಶಾಸನಗಳಲ್ಲಿ ಅಗ್ಗಿಷ್ಟಗೆಗಾಗಿ ಕೊಟ್ಟಿರುವ ದಾನಗಳು ಬ್ರಾಹ್ಮಣರು ತಮ್ಮ ಮನೆಗಳಲ್ಲೇ ಸಣ್ಣ ಇಷ್ಟಿ ಅಥವಾ ಹೋಮಗಳನ್ನು ಮಾಡಿಕೊಳ್ಳಲು ಕೊಟ್ಟಿರುವ ದಾನಗಳಿರಬಹುದೇ ಎಂಬ ಸಂದೇಹವು ಬರಬಹುದು. ಮೊದಲನೆಯದಾಗಿ ' ಅಗ್ನಿಷ್ಠಿಕಾ ' ಎಂಬ ರೂಪದಲ್ಲಿ ಮಹಾಪ್ರಾಣವೂ ' ಇಷ್ಟಿ ' ಎಂಬಲ್ಲಿ ಅಲ್ಪಪ್ರಾಣವೂ ಇರುವುದು ಗಮನಾರ್ಹ. ಎರಡೂ ಬೇರೆ ಬೇರೆ. ಅಲ್ಲದೆ ಅಗ್ಗಿಷ್ಟಗೆಗೆ ಕೊಟ್ಟಿರುವ ದಾನಗಳ ರೀತಿಯನ್ನು ನೋಡಿದರೆ ಅಗ್ಗಿಷ್ಟಗೆಗಳು ಎಲ್ಲರಿಗೂ ಸೇರಿದಂಥ ವಸ್ತುಗಳು, ಅವುಗಳನ್ನು ಆರದಂತೆ ನೋಡಿಕೊಳ್ಳಲು ಯಾವನೋ ಒಬ್ಬ ವ್ಯಕ್ತಿಯನ್ನು ನೇಮಿಸುತ್ತಿದ್ದರು ಎಂಬ ಭಾವನೆ ಬರುತ್ತದೆ. ಹೆಚ್ಚಾಗಿ ಅಗ್ರಹಾರಗಳಲ್ಲಿ, ಮಠಗಳಲ್ಲಿ ಅಗ್ಗಿಷ್ಟಗೆಗಳನ್ನು ಸ್ಥಾಪಿಸಿ ಅವುಗಳನ್ನು ನೋಡಿಕೊಳ್ಳಲು ದತ್ತಿಗಳನ್ನು ಬಿಟ್ಟು ಕೊಟ್ಟಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಅಗ್ರಹಾರಗಳಲ್ಲದೆ ಬೇರೆ ಕಡೆಗಳಲ್ಲೂ ಅಗ್ಗಿಷ್ಟಗೆಯ ಏರ್ಪಾಟು ಇದ್ದಿರಬೇಕು.

## ಅರವಟ್ಟಿಗೆ

ಊರಿಂದ ಊರಿಗೆ ದೇಶದಿಂದ ದೇಶಕ್ಕೆ ಸಂಚರಿಸುವ ಪ್ರಯಾಣಿಕರಿಗೆ ಅಥವಾ ಪ್ರವಾಸಿಗರಿಗೆ ಬಾಯಾರಿಕೆಯನ್ನು ಇಂಗಿಸಲು ದಾರಿಗಳ ಪಕ್ಕದಲ್ಲಿ ಅರವಟ್ಟಿಗೆಗಳಿರುತ್ತಿದ್ದುವು. ಇವು ಸತ್ರಗಳಿಗೆ, ದೇವಸ್ಥಾನ ಗಳಿಗೆ ಹೊಂದಿಕೊಂಡಂತೆಯೂ ಇರುತ್ತಿದ್ದುದುಂಟು. ಸ್ವತಂತ್ರವಾಗಿಯೂ ಇರುತ್ತಿದ್ದುದುಂಟು. ಅಲ್ಲಿ ನೀರೆರೆಯಲು ಬಾಲಕರನ್ನು ನೇಮಿಸುತ್ತಿದ್ದಂತೆ ಶಾಸನಗಳು ತಿಳಿಸುತ್ತವೆ.[285] ಸು. 700ರ ಶಾಸನದಲ್ಲಿ ಬರುವ

---

282 EC. III. Tn. 129, 1136 A.D.

283 EC. VII. Sk. 164, 1149 A.D.

284 ಸಂಸ್ಕೃತದಲ್ಲಿ ಅಗ್ನಿಷ್ಠಿಕಾ ಅಥವಾ ಅಗ್ನಿಷ್ಠ ಎಂದರೆ ಅಗ್ನಿಯನ್ನು ಇಡುವ ಸ್ಥಳ ಅಥವಾ ಅದನ್ನು ಇಡುವ ಲೋಹದ ಸಾಧನ ಎಂದರ್ಥ. ಹೊಸ ಕನ್ನಡದಲ್ಲಿ ಅಗ್ಗಿಷ್ಟಿಗೆ, ಅಗ್ಗಿಷ್ಟಗೆ, ಅಗ್ಗಿಷ್ಟೆ ಮುಂತಾದ ರೂಪಗಳುಂಟು.

285 ಅರವಟ್ಟಿಗೆಗಳಲ್ಲಿ ಪಥಿಕರಿಗೆ ನೀರೆರೆಯುತ್ತಿದ್ದ ಜವ್ವನೆಯರೂ ಬಾಯಾರಿಕೆಯ ಜೊತೆಗೆ ಕಣ್ಣಿನ ಬಾಯಾರಿಕೆ ಯನ್ನೂ ಹಿಂಗಿಸಿಕೊಳ್ಳುತ್ತಿದ್ದ ಪಥಿಕರೂ ನಮ್ಮ ಹಿಂದಿನ ಕಾವ್ಯಗಳಲ್ಲಿ ವರ್ಣಿತರಾಗಿದ್ದಾರೆ.

'ಅಜಿಮಂಟ' ಎಂಬುದು ಅರವಟ್ಟಿಗೆಯನ್ನು ಸೂಚಿಸುತ್ತದೆ.[286] ಪೆರ್ಗಡೆ ನೊಕ್ಕಯ್ಯ ಎಂಬಾತನು 'ಅಜಿವಂಟಗೆ'ಗಳನ್ನಿಡಿಸಿದಂತೆ ಶಾಸನವೊಂದು ತಿಳಿಸುತ್ತದೆ.[287] ತಾಳಗುಂದ ಅಗ್ರಹಾರದಲ್ಲಿ 'ಅರವಂಟಿಗೆಯು-ಲಂಬಲಿಗ[ಂ] ನೀರೆಱಿವ ಮಾಣಿಗಂ' ದಾನಗಳನ್ನು ಕೊಡಲಾಗಿದೆ.[288] ಇಲ್ಲಿ ಅರವಟ್ಟಿಗೆ ಮತ್ತು ಸತ್ರಗಳು ಒಟ್ಟಿಗೆ ಇದ್ದುವು ಎಂಬುದು ಸೂಚಿತವಾಗುತ್ತದೆ. ಮತ್ತೊಂದು ಶಾಸನದಲ್ಲಿ ನಾಣಿಮಯ್ಯನಾಯಕ ಎಂಬಾತನು ತನ್ನ ತಂದೆ ತೀಕಿಮಯ್ಯನಾಯಕರಿಗೆ ಪುಣ್ಯವಾಗಲಿ ಎಂದು ಮಾಳಿಯಗೇರಿಯ 'ಅಜಿವಂಟಿಗೆ'ಗೆ ಐದು ಗದ್ಯಾಣಗಳನ್ನು ಬಿಟ್ಟ ವಿಷಯವಿದೆ.[289] ಈ ಹಣದ ಬಡ್ಡಿಯಲ್ಲಿ ಅರವಟ್ಟಿಗೆಯನ್ನು ಮೂರು ತಿಂಗಳು ನಡಸು ತ್ತಿದ್ದರು. ಅದೇ ವ್ಯಕ್ತಿಯು ತನ್ನ ತಾಯಿ ರನ್ನಿಕವ್ವೆಗೆ ಪುಣ್ಯವಾಗಲೆಂದು ತನ್ನ 'ಆರವೆ'ಯಲ್ಲಿನ 'ಅಜಿವಂಟಿಗೆ'ಗೆ ಐದು ಗದ್ಯಾಣಗಳನ್ನು ಬಿಡುತ್ತಾನೆ.[290] ಇದರ ಬಡ್ಡಿಯಲ್ಲಿ ಅರವಟ್ಟಿಗೆಯನ್ನು ಮೂರು ತಿಂಗಳು ನಡೆಸುತ್ತಿದ್ದರು. ಅವನ ಈ ಎರಡು ಅರವಟ್ಟಿಗೆಗಳು ಬೇಸಗೆಯಲ್ಲಿ ಮೂರು ತಿಂಗಳು ಕೆಲಸಮಾಡು ತ್ತಿದ್ದುವೆಂದು ಊಹಿಸಬಹುದು. ಬಹುಶಃ ಎಲ್ಲ ಅರವಟ್ಟಿಗೆಗಳ ಅವಧಿಯು ಅದೇ ಎಂದು ಕಾಣುತ್ತದೆ. ಚೈತ್ರದಿಂದಾರಂಭಿಸಿ ಮೂರು ಅಥವಾ ನಾಲ್ಕು ತಿಂಗಳು, ಎಂದರೆ ಬೇಸಿಗೆಯಲ್ಲಿ, ಪ್ರವಾಸಿಗರಿಗೆ ನೀರನ್ನು ಕೊಡಲು ಮಂಟಪಗಳನ್ನು ಕಟ್ಟುವುದು ಶ್ರೇಯಸ್ಕರವೆಂದು ಭವಿಷ್ಯೋತ್ತರ ಪುರಾಣವು ಹೇಳುತ್ತದೆ.[290.1] ಅರವಟ್ಟಿಗೆ ಎಂಬುದು 'ಅಜಿಮಂಟ' ಎಂಬ ರೂಪದಲ್ಲಿ ಸಿಕ್ಕಿದರೂ ಅದರ ನಿಜವಾದ ರೂಪ 'ಅಜಿವಂಟಿಗೆ' ಎಂದು ಕಾಣಿಸುತ್ತದೆ (ಸಂ. ಪ್ರಪಾ). ಅಜಿ (=ಧರ್ಮ)+ವಾಟಿಕಾ (=ಸ್ಥಳ) > ಅಜಿವಟ್ಟಿಗೆ, ಅರವಂಟಿಗೆ. ಇದನ್ನು ತಮಿಳಿನಲ್ಲಿ 'ಅಜಿಚ್ಚಾಲೈ' ಎನ್ನುತ್ತಾರೆ. ಚಾಲೈ ಎಂಬುದು ಸಂಸ್ಕೃತ ಶಾಲೆಯ (<ಶಾಲಾ) ತದ್ಭವ. 'ಅಜಿ' ಎಂಬುದು ಅಚ್ಚ ದ್ರಾವಿಡ ಪದ.

## ಸತ್ರ

ಪ್ರವಾಸಿಗರಿಗೆ ಅರವಟ್ಟಿಗೆಗಳಲ್ಲಿ ನೀರು ಸಿಕ್ಕರೆ ಸತ್ರಗಳಲ್ಲಿ ಆಹಾರವೂ, ವಿಶ್ರಾಂತಿ ತೆಗೆದುಕೊಳ್ಳಲು ವಸತಿಯೂ ದೊರೆಯುತ್ತಿದ್ದಿತು. ಸತ್ರಗಳಿಲ್ಲದೆಡೆ ಊರಿನ ಉದಾರಿಗಳು ಪ್ರವಾಸಿಗರನ್ನು ಅತಿಥಿಗಳಂತೆ[291]

---

[286] EC. VIII. Sb. 411, C. 700 A.D.

[287] EC. VII. Sh. 10, C. 1085 A.D.

[288] EC. VII. Sk. 192, 1107 A.D.

[289] BKI. I. ii. 196, 1121 A.D.

[290] ಅದೇ

[290.1] History of Dharmaśāstra, II. ii, p. 882.

[291] ಆಧುನಿಕ ಕಾಲದ ಪದವೀದಾನ ಸಮಾರಂಭದ ಭಾಷಣಗಳನ್ನು ಹೋಲುವ ಕೆಲವು ಉಕ್ತಿಗಳು ತೈತ್ತಿರೀಯ ಉಪನಿಷತ್ತಿನಲ್ಲಿ ಬಂದಿವೆ. (1.11)-"ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ। ಅತಿಥಿದೇವೋ ಭವ..." ಅತಿಥಿಯು ದೇವರಿಗೆ ಸಮಾನನೆಂದು ಪ್ರಾಚೀನ ಭಾರತವು ಭಾವಿಸಿದ್ದಿತು. ಅಭಿಲಷಿತಾರ್ಥ ಚಿಂತಾಮಣಿಯು (1. 111) ಅತಿಥಿಯನ್ನು ಹೀಗೆ ವರ್ಣಿಸುತ್ತದೆ.

ಅಜ್ಞಾತಕುಲನಾಮಾನಮನ್ಯದೇಶಾದುಪಾಗತಂ
ಕ್ಷುಧಾರ್ತಂ ಪಾಂಸುಕೀರ್ಣಾಂಘ್ರಿಮತಿಥಿಂ ತಂ ವಿದುರ್ಬುಧಾಃ।

(ಕುಲ, ಹೆಸರು ಗೊತ್ತಿಲ್ಲದ, ದೇಶಾಂತರದಿಂದ ಬಂದಿರುವ, ಹಸಿದಿರುವ, ಪಾದಗಳಲ್ಲಿ ಧೂಳು ತುಂಬಿರುವ ವ್ಯಕ್ತಿಯನ್ನು ಅತಿಥಿಯೆಂದು ಕರೆಯುತ್ತಾರೆ). ಇಂತಹ ಅತಿಥಿಯನ್ನು ಯಾರು ಪೂಜಿಸುವುದಿಲ್ಲವೋ ಅವನ ಪುಣ್ಯಗಳೆಲ್ಲವೂ ಅವನನ್ನು ಬಿಟ್ಟು ಅತಿಥಿಯನ್ನು ಸೇರುತ್ತವೆಂದು ಅದು ಹೇಳುತ್ತದೆ. (1.112). ಮಕ್ಕಳು, ಮುದುಕರು, ಗರ್ಭಿಣಿಯರು, ಅತಿಥಿಗಳು ಮತ್ತು ಭೃತ್ಯರು ಊಟಮಾಡಿದಮೇಲೆ ದಂಪತಿಗಳು ಊಟಮಾಡಬೇಕೆಂದು ಯಾಜ್ಞವಲ್ಕ್ಯ ಸ್ಮೃತಿಯು ವಿಧಿಸುತ್ತದೆ (ಗೃಹಸ್ಥ ಧರ್ಮ ಪ್ರಕರಣಂ, ಶ್ಲೋಕ 105).

ಗೌರವಿಸಿ ಆದರಿಸುತ್ತಿದ್ದರೆಂದು ಊಹಿಸಬಹುದು. ನಾಗ ಎಂಬಾತನನ್ನು "ದೇಸಿಗರ್ಗೆಯ್ದೆ ತಾಯ್" ಎಂದು, ಮುದ್ದ ಎಂಬಾತನನ್ನು "ಅಖಿಳದೇಸಿಗರ್ಗೆಲ್ಲಂ ಭುವನದೊಳೆಂದುಂ ತಾಯ್"[292] ಎಂದು ಚಂದಗೌಡ ಎಂಬಾತನನ್ನು "ಅನ್ನದಾನ ಸಂಪೂರ್ಣ"[293]ನೆಂದು ಕರೆದಿರುವುದು ನಮ್ಮ ಮೇಲಿನ ಊಹೆಗೆ ಆಧಾರಗಳಾಗಿವೆ.

ಅತಿಥಿಸತ್ಕಾರದ ವಿಸ್ತೃತ ರೂಪವೇ ಸತ್ರ. ಭೂದಾನ ವಿದ್ಯಾದಾನಗಳಿಗಿಂತ ಅನ್ನದಾನವೇ ಶ್ರೇಷ್ಠ ವೆಂದು ಜನರು ನಂಬಿದ್ದರು. ಅನ್ನದಾನದ ಮಹಿಮೆಯನ್ನು ಒಂದು ಶಾಸನವು ಹೀಗೆ ಕೊಂಡಾಡುತ್ತದೆ—

ಅನ್ನಾತ್ಪರತರಂ ಲೋಕೇ ನ ಭೂತೋ ನ ಭವಿಷ್ಯತಿ
ಅನ್ನಮೂಲಂ ಭವೇತ್ಸರ್ವಂ ಸರ್ವಮನ್ನೇ ಪ್ರತಿಷ್ಠಿತಂ
ಅನ್ನದಃ ಪ್ರಾಣದಃ ಪ್ರೋಕ್ತ [ಃ] ಪ್ರಾಣದಶ್ಚಾಪಿ ಸರ್ವದಃ
ತಸ್ಮಾದನ್ನಪ್ರದಾನೇನ ಸರ್ವದಾನಫಲಂ ಲಭೇತ್ ||[294]

ಈ ಮಾತುಗಳಿಂದ ಪ್ರೇರಿತನಾದ ಕೇಶವದಂಡನಾಯಕನು ತಾಣಗುಂದೂರಿನ (=ತಾಳಗುಂದ) ದೇವಸ್ಥಾನಕ್ಕೆ ಭೂದಾನಾದಿಗಳನ್ನು ಮಾಡಿ ಆ ದೇವಸ್ಥಾನದ ಅಂಗವಾಗಿದ್ದ ಸತ್ರಕ್ಕೂ ಭೂಮಿಯನ್ನು ಬಿಡುತ್ತಾನೆ. ಇನ್ನೊಂದು ಶಾಸನದಲ್ಲಿ[295] ಜಕ್ಕಿಯಬ್ಬೆ ಎಂಬಾಕೆಯು "ದಾನದೊಳನ್ನಮೆ ಸಾರಂ ದೀನಾನಾಥರ್ಗೆ ತುಷ್ಟಿ ದಾನಂ" ಎಂಬುದನ್ನು ತಿಳಿದು ಸತ್ರವೊಂದನ್ನು ಮಾಡಿಸಿ, ಅದಕ್ಕೆ ಭೂಮಿಯನ್ನು ಬಿಟ್ಟಳು ಎಂದು ಹೇಳಿದೆ.

ಸತ್ರಗಳು ಬಹುಮಟ್ಟಿಗೆ ದೇವಸ್ಥಾನಗಳ ಅಥವಾ ಮಠಗಳ ಅಂಗಗಳಾಗಿದ್ದುವು. ಕೇಶವದಂಡ ನಾಯಕನು ತಾಣಗುಂದೂರಿನಲ್ಲಿ ದತ್ತಿಯನ್ನು ಬಿಟ್ಟುಕೊಟ್ಟ ಸತ್ರವು ಅಲ್ಲಿಯ ದೇವಸ್ಥಾನದ ಅಂಗ ವಾಗಿದ್ದಿತು.[296] ಅಗ್ರಹಾರ ಪೊಂಬುಲ್ಚದಲ್ಲಿ (ಗದಗ್ ತಾಲೂಕಿನ ಹೊಂಬಳ) ನಾಗವರ್ಮಯ್ಯ ಎಂಬಾತನು ಬ್ರಹ್ಮಸಭೆಗೆ ವಿಜ್ಞಾಪಿಸಿಕೊಂಡು, ಅವರ ಒಪ್ಪಿಗೆ ಪಡೆದು ಅವರಿಗೆ ದ್ರವ್ಯವನ್ನು ನಿವೇದಿಸಿ ತಾನಾಗಲೇ ಕಟ್ಟಿಸಿದ್ದ ವಿಷ್ಣುಗೃಹಕ್ಕೆ ಹೊಂದಿಕೊಂಡಂತೆ ಒಂದು ಸತ್ರವನ್ನು ಮಾಡಿಸಿದನೆಂದು ಒಂದು ಕಡೆಗೆ ಉಕ್ತವಾಗಿದೆ.[297] ಮಾಂಡಲಿಕ ಬೂತಾರ್ಯನ ಪತ್ನಿ ಪದ್ಮಬ್ಬರಸಿಯು ತಾನು ಕಟ್ಟಿಸಿದ ಬಸದಿಗೆ ಹೊಂದಿ ಕೊಂಡಂತೆ ಒಂದು ದಾನಶಾಲೆಯನ್ನು ಕಟ್ಟಿಸಿದಳೆಂದು ಶಾಸನವೊಂದರಲ್ಲಿದೆ.[298] ಲೊಕ್ಕಿಗುಂಡಿಯ ಕಪ್ಪಚರ- ದೇವರ ಮಠದಲ್ಲಿ ಭೋಜನಕ್ಕಾಗಿ ಹತ್ತು ಗದ್ಯಾಣಗಳನ್ನೂ, ಆ ಮಠದಲ್ಲಿ ಪುರಾಣವನ್ನು ಕೇಳುವ ಮಹಾ ಜನಕ್ಕೆ ಗಂಧಕ್ಕಾಗಿ ಎರಡು ಗದ್ಯಾಣಗಳನ್ನೂ ನಾಣಿಮಯ್ಯನು ಬಿಟ್ಟಂತೆ ಇನ್ನೊಂದು ಶಾಸನದಲ್ಲಿದೆ.[299] ಸತ್ರಗಳು ದೇವಸ್ಥಾನಗಳಿಂದ ಬೇರೆಯಾಗಿ ಅವುಗಳಿಗೆ ಮೀಸಲಾಗಿದ್ದ ಮನೆಗಳಲ್ಲಿಯೂ ಇರುತ್ತಿದ್ದುದುಂಟು.[300]

---

292 BKI. I. ii. 133, 1087 A.D.

293 EC. VI. Kd. 28, 1153 A.D.

294 EC. VII. Sk. 185, 1158 A.D.—ಇವೇ ಮುಂತಾದ ಮಾತುಗಳನ್ನು ಕೇಶವ ದಂಡನಾಯಕನ ಆಸ್ಥಾನದಲ್ಲಿ 'ಅಶೇಷಧರ್ಮಜ್ಞ'ನಾದ ರೇಜರಸನು ನುಡಿದನೆಂದೂ ಆ ಮಾತುಗಳಿಂದ ಕೇಶವದಂಡನಾಯಕನ ಮನಸ್ಸು ಉತ್ತೇಜನಗೊಂಡು ದಾನದತ್ತ ತಿರುಗಿತೆಂದೂ ಶಾಸನವು ಹೇಳುತ್ತದೆ.

295 BKI. I. ii. 137, 1092 A.D.

296 EC. VII. Sk. 185, 1158 A.D.

297 BKI. I. i. 84, 1049 A.D.

298 BKI. I. i. 38, 950 A.D.

299 BKI. I. ii. 196, 1121 A.D.

300 EC. IV. Kp. 3, C. 1125 A.D.; EC. VII. Sk. 16, 1085 A.D.

ಸತ್ರಗಳಲ್ಲಿ 'ದೇಸಿಗ ಪ್ರವಾಸಿಗ'ರಿಗೆ[301] ಮಾತ್ರವಲ್ಲದೆ ಕೆಲವಡೆ ಅಲ್ಲಿಯ ಮಠದಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳಿಗೂ ಊಟದ ಏರ್ಪಾಟು ಇರುತ್ತಿದ್ದಿತು.[302] ಸತ್ರಕ್ಕೆ ಬಿಟ್ಟಿರುವ ದತ್ತಿಯ ಆದಾಯದ ಮಿತಿಯನ್ನು ನೋಡಿಕೊಂಡು ಆ ಸತ್ರದಲ್ಲಿ ಊಟಮಾಡಬೇಕಾದವರ ಸಂಖ್ಯೆಯನ್ನು ನಿರ್ದಿಷ್ಟ ಗೊಳಿಸುತ್ತಿದ್ದರು. ಕೆಲವು ಸತ್ರಗಳಲ್ಲಿ ಇಬ್ಬರಿಗೆ,[303] ಕೆಲವೆಡೆ ನಾಲ್ವರಿಗೆ,[304] ಕೆಲವೆಡೆ ಎಂಬತ್ತು ಜನರಿಗೆ[305] ಹೀಗೆಲ್ಲಾ ಅವಕಾಶಗಳನ್ನು ಕಲ್ಪಿಸಿರುತ್ತಿದ್ದರು. ಮಾಣಿಕಸೆಟ್ಟಿ ಎಂಬಾತನು ಕೊಟ್ಟ ಅರವತ್ತು ಗಳೆಯ ಗದ್ದೆಯ ಬತ್ತದಿಂದ ಐದು ಹಬ್ಬಗಳೂ ಕೂಡಿ ವರ್ಷದಲ್ಲಿ ಒಟ್ಟು ಸಾವಿರದಿನ್ನೂರು ಜನರಿಗೆ ಸತ್ರದಲ್ಲಿ ಊಟದ ಅವಕಾಶವಿದ್ದಿತು.[306] ಇಂದ್ರಶಿವಜೀಯರ ಮಗ ರಾಜಾದಿತ್ಯ ಎನ್ನುವವನು ಅಮ್ಮಯನ ಬಾವಿಯ ಸತ್ರಕ್ಕೆ ಐದು ತಳಿಗೆಗಳನ್ನೂ, ಹಂಪಗಾವುಂಡ ಮತ್ತು ಬಾಡಸದೇವಣ್ಣ ಎನ್ನುವವರು ತಲಾ ಮೂರು ಮೂರು ತಳಿಗೆಗಳನ್ನೂ ಕೊಟ್ಟ ವಿಷಯವು ಶಾಸನವೊಂದರಲ್ಲಿದೆ.[307] ಇನ್ನೊಂದು ಶಾಸನವು[308] ಸತ್ರದಲ್ಲಿ ಊಟಮಾಡುವ ಒಬ್ಬೊಬ್ಬ ಬ್ರಾಹ್ಮಣನಿಗೂ ಸಲ್ಲಬೇಕಾದ ವಸ್ತುಗಳ ವಿವರಗಳನ್ನು ಕೊಡುತ್ತದೆ (ಅದನ್ನು 'ಪಡಿ' ಎಂದು ಕರೆದಿದೆ. ಈಗಲೂ ಇದೇ ಅರ್ಥದಲ್ಲಿ ಈ ಪದವು ಬಳಕೆಯಲ್ಲಿದೆ). ಒಬ್ಬೊಬ್ಬ ಬ್ರಾಹ್ಮಣನಿಗೂ ಅಕ್ಕಿ ಐದು ಮಾನ, ಹೆಸರು ಒಂದು ಮಾನ, ತುಪ್ಪ ಎರಡು ಸೊಳಸಿಗೆ, ಮೊಸರು ಒಂದು 'ಬ', ಮಜ್ಜಿಗೆ ಒಂದು 'ಬ' ('ಬ' ಎಂದರೆ ಬಟ್ಟಲು ಎಂದು ಅರ್ಥೈಸಬೇಕಾಗುತ್ತದೆ), ಅಡಕೆ ಎರಡು, ಎಲೆ ನಾಲ್ಕು—ಹೀಗೆ ಪ್ರತಿನಿತ್ಯ ಹದಿನಾರು ಬ್ರಾಹ್ಮಣರಿಗೆ ಪಡಿಯು ಸಲ್ಲಬೇಕೆಂದು ಅಲ್ಲಿ ಉಕ್ತ ವಾಗಿದೆ. ಇಂತಹ ಸತ್ರಗಳಲ್ಲಿ ಊರಿನವರೂ ಬಂದು ಊಟಮಾಡುತ್ತಿದ್ದರೆಂದು ಕಾಣುತ್ತದೆ (ಪ್ರತಿನಿತ್ಯ ಪ್ರವಾಸಿಗರಾದ ಹದಿನಾರು ಬ್ರಾಹ್ಮಣರನ್ನು ನಿರೀಕ್ಷಿಸುವುದು ಅಸಾಧ್ಯ). ಕೆಲವು ಸತ್ರಗಳು ಬ್ರಾಹ್ಮಣರಿಗೆ ಮಾತ್ರ ಮೀಸಲಾಗಿದ್ದರೆ, ಇನ್ನು ಕೆಲವು ಸತ್ರಗಳಲ್ಲಿ ಎಲ್ಲ ಜಾತಿಯ ಜನರಿಗೂ ಅವಕಾಶವಿದ್ದಿತು. ಸತ್ರದಲ್ಲಿ ದವಸ ಧಾನ್ಯದ ಏರ್ಪಾಟನ್ನು ನೋಡಿಕೊಳ್ಳುತ್ತಿದ್ದವನನ್ನು 'ದವಸಿಗ'ನೆಂದು ಒಂದು ಕಡೆ ಕರೆದಿದೆ. ಅಲ್ಲಿಯೇ ಸತ್ರದಲ್ಲಿ ಅಡುಗೆ ಮಾಡುವ ಹೆಂಗಸರ ಜೀವನೋಪಾಯಗಳಿಗೆ ಮತ್ತು ಅವರ ವಸ್ತ್ರಗಳಿಗೆ ಗದ್ಯಾಣಗಳನ್ನು ಬಿಟ್ಟುಕೊಟ್ಟ ವಿಷಯವಿದೆ.[309] ಉತ್ತರ ಭಾರತದಲ್ಲಿಯೂ ಸತ್ರಗಳು ದೇವಸ್ಥಾನಗಳಿಗೆ ಹೊಂದಿಕೊಂಡಂತೆ ಇದ್ದು ಪ್ರವಾಸಿಗರಿಗೂ, ಸಂಚಾರಿಗಳಾಗಿದ್ದ ವಿದ್ವಾಂಸರಿಗೂ, ಕುರುಡರಿಗೂ, ಅನಾಥರಿಗೂ ಅನ್ನವನ್ನೂ ರಕ್ಷಣೆಯನ್ನೂ ಕೊಡುತ್ತಿದ್ದುವು.[310]

ಮೇಲಿನ ಮೂರು ವ್ಯವಸ್ಥೆಗಳು (ಅಗ್ಗಿಷ್ಟಗೆ, ಅರವಟ್ಟಿಗೆ, ಸತ್ರ) ನಮ್ಮ ಆಧುನಿಕ ಕಾಲದಲ್ಲಿ ಕುಸಿದು ಬಿದ್ದಿವೆ. ಬೆಂಕಿಯ ಪೊಟ್ಟಣಗಳ ಸೌಕರ್ಯವಿರುವ ಈಗ ಅಗ್ಗಿಷ್ಟಗೆಯ ಆವಶ್ಯಕತೆ ಏನೇನೂ ಇಲ್ಲ. ಬೇಸಗೆ ಕಾಲದಲ್ಲಿ ತುಮಕೂರು ಜಿಲ್ಲೆಯ ಮತ್ತು ಅದರ ಸುತ್ತುಮುತ್ತಿನ ಜಿಲ್ಲೆಗಳ ಕೆಲವು ಭಾಗಗಳ ಜನರು

301 EC. VII. Sk. 14, 1089 A.D.
302 EC. VII. Sk. 185, 1158 A.D.
303 EC. VI. Mg. 19, C. 1025 A.D.
304 EC. VIII. Sa. 118, 1063 A.D.
305 EC. VII. Sk. 185, 1158 A.D.
306 EC. VII. Sk. 294, 1108 A.D.
307 BKI. I. ii. 191, 1112 A.D.
308 SII. IX. i. 245, 1146 A.D.
309 EC. VII. Sk. 185, 1158 A.D.
310 B. P. Mazumdar : The Socio-economic History of Northern India, pp. 262-3.

ಅರವಟ್ಟಿಗೆಗಳನ್ನಿಡುವರೆಂದು ತಿಳಿದುಬಂದಿದೆ. ಈಗ ಸತ್ರಗಳು ಸಾಕಷ್ಟು ಸಂಖ್ಯೆಯಲ್ಲಿದ್ದರೂ ಬರಿಯ ವಸತಿಯನ್ನು ಕೊಡುವ ಸತ್ರಗಳೇ ಹೆಚ್ಚು.

## ತಟಾಕ ನಿರ್ಮಾಣ

ಬಹುಶಃ ಸಾರ್ವಜನಿಕ ಕಾರ್ಯಗಳಲ್ಲೆಲ್ಲ ಬಹು ಮುಖ್ಯವಾದುದು ತಟಾಕ ನಿರ್ಮಾಣ. ಸತ್ತವನ ಪ್ರೇತವು ಬಹಳ ಬಾಯಾರಿಕೆಯಿಂದ ಬಳಲುವುದೆಂದೂ, ತಟಾಕ ನಿರ್ಮಾಣ ಮುಂತಾದ ಧರ್ಮಕಾರ್ಯಗಳಿಂದ ಆದರ ಬಾಯಾರಿಕೆ ಹಿಂಗುವುದೆಂದೂ ಹಿಂದಿನ ಜನರು ನಂಬಿದ್ದರು.[311] ಮಹಾಭಾರತದ ಪ್ರಕಾರ ಯಾವ ವ್ಯಕ್ತಿಯು ಕಟ್ಟಿಸಿದ ಕೆರೆಯಲ್ಲಿ ಹಸುಗಳು, ಪ್ರಾಣಿಗಳು, ಪಕ್ಷಿಗಳು, ಮನುಷ್ಯರು ನೀರನ್ನು ಕುಡಿದು ತೃಪ್ತ ರಾಗುವರೋ ಅವನು ಅಶ್ವಮೇಧಯಾಗದ ಫಲವನ್ನು ಪಡೆಯುತ್ತಾನೆ.[312] ಹಳೆಯಬೀಡಿನ ಕೆರೆಯ ತೂಬಿನ ಮೇಲಿನ ಶಾಸನದಲ್ಲಿ ಆ ತೂಬನ್ನಿಕ್ಕಿಸಿದ ವಿನಯಾದಿತ್ಯ ಪೊಯ್ಸಳನನ್ನು 'ಜೀವದಯೋಪೇತನ್'[313] ಎಂದು ಕರೆದಿರುವುದು ಬಹು ಸಹಜವೇ ಆಗಿದೆ.

ಕನ್ನಡಿಗರ ಔದಾರ್ಯ ಮುಖ್ಯವಾಗಿ ಪ್ರಕಟವಾಗಿರುವುದು ಎರಡು ಕಡೆ—ಒಂದು, ದೇವಸ್ಥಾನ ನಿರ್ಮಾಣದಲ್ಲಿ; ಮತ್ತೊಂದು, ತಟಾಕ ನಿರ್ಮಾಣದಲ್ಲಿ. ಕೆರೆಯನ್ನು ಕಟ್ಟಿಸಿದರೆ ತನಗೆ ಮಾತ್ರವಲ್ಲ, ತನ್ನ ತಾಯಿ ತಂದೆಗಳಿಗೂ ಪುಣ್ಯವು ಲಭಿಸುತ್ತದೆಯೆಂದು ನಾಣಿಮಯ್ಯನಾಯಕನು ಕೆರೆಗಳನ್ನು ಕಟ್ಟಿಸಿದ್ದಲ್ಲದೆ ಒಂದು ಹೊಕ್ಕರಣೆಯನ್ನೂ (ಸಂ. ಪುಷ್ಕರಿಣಿ) ಅಗೆಯಿಸಿದ ವಿಷಯವು ಒಂದು ಶಾಸನದಲ್ಲಿದೆ.[314] ಇಲ್ಲಿ ಒಂದು ಘಟನೆಯು ಉಲ್ಲೇಖನೀಯ. ರಾಜಿಗಾವುಂಡನ ಹೆಂಡತಿ ಸೋರಿಗಾವುಂಡಿ ಎಂಬಾಕೆಯು ತನ್ನ ಮೂವರು ಮಕ್ಕಳನ್ನು ಕರೆದು 'ಎನಗೊಂದು ಪುಣ್ಯಮಪ್ಪಂತಾಗಿ' ಏನಾದರೂ ಧರ್ಮವನ್ನು ಮಾಡಿ ಎಂದು ಕೈ ಮುಗಿದು ಬೇಡಿಕೊಳ್ಳುತ್ತಾಳೆ. ಆಗ ಅವರಿಗೆ ತಕ್ಷಣ ಹೊಳೆದ ಧಾರ್ಮಿಕ ಕಾರ್ಯವೆಂದರೆ ಜೀರ್ಣವಾಗಿದ್ದ ಕೆರೆಯೊಂದರ ಜೀರ್ಣೋದ್ಧಾರ ಕಾರ್ಯ. ತಾವು ಆ ಕೆರೆಯನ್ನು ಸರಿಪಡಿಸುವುದಾಗಿಯೂ, ಅದರ ಉದಕದಾನದ ಫಲವು ನಿಮಗೆ ಸಿಗುವುದೆಂದೂ ತಮ್ಮ ತಾಯಿಗೆ ಭರವಸೆ ಕೊಡುತ್ತಾರೆ.[315].

ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದವರು ತಮ್ಮ ಹೆಸರನ್ನೇ ದೇವಸ್ಥಾನಗಳಿಗಿಡುತ್ತಿದ್ದಂತೆ ಕೆರೆಗಳನ್ನು ಕಟ್ಟಿಸುತ್ತಿದ್ದವರು ತಮ್ಮ ಹೆಸರನ್ನೇ ಕೆರೆಗಳಿಗೆ ಇಡುತ್ತಿದ್ದರು. ಪಟ್ಟಣಸ್ವಾಮಿ ನೊಕ್ಕಯ್ಯ ಎಂಬಾತನು ಕಟ್ಟಿಸಿದ ಐದು ಕೆರೆಗಳಲ್ಲಿ ''ಪಟ್ಟಣಸ್ವಾಮಿಗೆಱೆ'ಯೂ'' ಒಂದು[316] (ಈ ಐದು ಕೆರೆಗಳಲ್ಲಿ ಅವನು ನೂರು ಗದ್ಯಾಣಗಳನ್ನು

---

311 Economic Conditions in South India, II, p, 738.

312 ಅದೇ.

313 MAR (1929). p. 73, 1062 A.D.

314 BKI. I. ii. 196, 1121 A.D. ಅಭಿಲಷಿತಾರ್ಥಚಿಂತಾಮಣಿಯ ಪ್ರಕಾರ (1.70–2) ದ್ವಾರಹೀನವಾದುದು ಕೂಪ, ಒಂದು ದ್ವಾರವಿರುವುದು ವಾಪಿ, ಅನೇಕ ದ್ವಾರಗಳಿರುವುದು ಪುಷ್ಕರಿಣಿ, ಅದರ ದೀರ್ಘಾಕಾರವೇ ದೀರ್ಘಿಕೆ. ನದಿಗೆ ಅಥವಾ ಹಳ್ಳಕ್ಕೆ ಅಡ್ಡಕಟ್ಟೆಯನ್ನು ಹಾಕಿ ನಿರ್ಮಿಸಿರುವುದೇ ತಟಾಕ ಅಥವಾ ಕೆರೆ.

.... .... .... .... .... ....

ದ್ವಾರಹೀನೋ ಭವೇತ್ ಕೂಪೋ ದ್ವಾರೇಣೈಕೇನ ವಾಪಿಕಾ ॥
ನೈಕದ್ವಾರಾ ಪುಷ್ಕರಿಣೀ ದೀರ್ಘಾಕಾರಾ ತು ದೀರ್ಘಿಕಾ
ಕುಲ್ಯಾ ವಿಸ್ತೃತತೋಯಶ್ಚ ತಟಾಕಃ ಪರಿಕೀರ್ತಿತಃ ॥

ಯುದ್ಧಮಲ್ಲ ಎಂಬ ರಾಜನು ಎಣ್ಣೆಗಳಿಂದ ತುಂಬಿದ ದೀರ್ಘಿಕೆಗಳಲ್ಲಿ ಆನೆಗಳನ್ನು ಮೀಯಿಸುತ್ತಿದ್ದನೆಂದು ಪಂಪನ ಹೇಳಿಕೆ. (ಪಂಪಭಾರತ, 1.17).

315 KI. I. 24, 1148 A.D.

316 EC. VIII. Nr. 58, 1062 A.D.

ಕೊಟ್ಟು ಉಗುರೆ ಎಂಬ ಹಳ್ಳಕ್ಕೆ ಅಡ್ಡಗಟ್ಟೆಯನ್ನು ಹಾಕಿಸಿ ಕಟ್ಟಿಸಿದ ಸೌಳಂಗದ 'ಆಪಾಗಿಮಗಳ'ವೆಂಬ ದೊಡ್ಡ ಕೆರೆಯೂ ಒಂದು). ರಟ್ಟ ವಂಶೋದ್ಭವನಾದ ಸಾಮಂತ ಎಱೆಯಮ್ಮನ ಹೆಸರಲ್ಲಿ ರಟ್ಟ ಸಮುದ್ರವೆಂಬ ಕೆರೆಯು ನಿರ್ಮಾಣವಾಯಿತು.[317] ಗಂಗಸಮುದ್ರ[318]ವೆನ್ನುವುದೂ ಕಟ್ಟಿಸಿದ ವ್ಯಕ್ತಿಯ ಹೆಸರಿನಲ್ಲಿರುವ ಕೆರೆಯೇ. ಕೆರೆಯನ್ನು ಕಟ್ಟಿಸಬೇಕಾದರೆ ಅಪಾರವಾದ ಹಣವು ಬೇಕಾದ್ದರಿಂದ ರಾಜರೂ, ಸಾಮಂತರೂ, ಶ್ರೀಮಂತರೂ, ಅಥವಾ ಪ್ರಭಾವಶಾಲಿಗಳಾದ ಸನ್ಯಾಸಿಗಳೂ ಮಾತ್ರವೇ ಅಂತಹ ಕಾರ್ಯಗಳಿಗೆ ಮುಂದೆ ಬರುತ್ತಿದ್ದರು. ಚಿಲ್ಲುಕಭಟಾರ ಎಂಬ ಸುಪ್ರಸಿದ್ಧ ಶೈವ ಸನ್ಯಾಸಿಗಳು ಐದು ಕೆರೆಗಳನ್ನು ಕಟ್ಟಿಸಿದರೆಂದು ಒಂದು ಶಾಸನವು ತಿಳಿಸುತ್ತದೆ.[319] ಊರಿನ ಜನ ಒಗ್ಗಟ್ಟಾಗಿ ಸೇರಿ ಕೆರೆಯನ್ನು ಕಟ್ಟಿಸಿದ ನಿದರ್ಶನಗಳೂ ಇವೆ.[320] ಅನೇಕ ಶಾಸನಕವಿಗಳೂ ಕೆರೆಗಳನ್ನು ಸುಂದರವಾಗಿ ವರ್ಣಿಸಿರುವುದುಂಟು. ಅಂತಹ ವರ್ಣನೆಗಳಲ್ಲಿ ಕೆಳಗಿನ ಕಡಲೆಗೆಱೆಯ ವರ್ಣನೆಯೂ ಒಂದು[321]—

ಅತಿಮಧುರಂ ಪ್ರಸನ್ನ ಕವಿ ನಿರ್ಮಿಸಿದುನ್ನತ ಕಾವ್ಯದಂತೆ ನಿ
ರ್ವೃತಿಯುತಮೆಯ್ದೆ ಮೋಕ್ಷದವೊಲ್ ಚಿತ್ತಜನಪ್ಪನ ಚಿತ್ತದಂತೆ ಸಂ-
ತತಮತಿ ನಿರ್ಮಳಂ ಪೆಱರನೆನ್ದುಮಪೇಕ್ಷಿಸುತಿರ್ಪನಂತೆ ತಾ-
ನತಿಲಘುವೆನ್ನದೀ ಚಣಕದುದ್ಗತಟಾಕಮನಾರೊ ಬಣ್ಣಿಪರ್ ॥
ಬಾವಿಸೆ ಮೂರ್ತಿ ಸೋಮುಕಳೆಯಂದದೆ ಸೋಭಿಸುತಿರ್ಪುದೀ ಜಗ-
ತ್ಪಾವನಮಂಬುಜೋದರನಿವಾಸಪಯೋನಿಧಿಯಂತೆ ತೀವಿ ಸೇ-
ವ್ಯಾವಹಮಾಗಿ ರಂಜಿಪುದು ಜೀವನದಿಂ ನರಜೀವರಾಸಿಗಳ್
ಜೀವಿಪುವೆಂದಡುನ್ನತಿಯನಾರ್ ಪೊಗಳರ್ ಧರಣೀತಳಾಗ್ರದೊಳ್ ॥
ಪೊಡವೀಪತಿ ಕಾವೇರಿಯ
ತಡಿಯೊಳ್ ಬಿಟ್ಟಿರ್ದ್ದ ತನ್ನದೀಜಳಮುಮನೀ
ಕಡಲೆಗೆಱೆಯಮೃತ ಜಳಮುಮ-
ನೊಡಮೊಯ್ಕನೆ ತೂಗಿ ನೋೞ್ಪನಭಿವರ್ಣಿಸಿದ [ಂ] ॥
ರಂಗತ್ತರಂಗಮಾಳಾ
ಭಂಗುರದಿಂದೆಸೆವ ಕಡಲೆಗೆಱೆ ನೋೞ್ಪ ಜನ
ಕ್ಕಿಂಗಡಲಂ ದಿಕ್ಕರಿಪುದ-
ದಂ ಗಡ ಪೊಗಳಲ್ಕೆ ಕಮಳಭವನುಂ ನೆಱೆಯ [ಂ] ॥

ಈ ಪದ್ಯಗಳಲ್ಲಿ ಕವಿಯ ಸೌಂದರ್ಯದೃಷ್ಟಿಯು ರೂಪುಗೊಂಡಿದೆ ನಿಜ. ಅದಕ್ಕಿಂತಲೂ ಹೆಚ್ಚಾಗಿ ಅನೇಕರಿಗೆ ಜೀವನಾಧಾರವಾಗಿರುವ ತಟಾಕದ ವಿಷಯದಲ್ಲಿ ಜನತೆಗಿರುವ ಕೃತಜ್ಞತಾಭಾವಕ್ಕೆ ಇಲ್ಲಿ ಅಭಿವ್ಯಕ್ತಿಯನ್ನು ನೀಡಿದ್ದಾನೆ, ಕವಿ.

---

[317] BKI. I. i. 74, 1041 A.D. ಈಗ ಅನೇಕ ಊರುಗಳ ಹೆಸರುಗಳ ಮುಂದಿರುವ 'ಸಂದ್ರ' ಎಂಬುದು 'ಸಮುದ್ರ'ದ ತದ್ಭವ. ಮಾಯಸಂದ್ರ <ಮಾಯಸಮುದ್ರ ಇತ್ಯಾದಿ.

[318] EC. II. 132, 1123 A.D.

[319] EC. XII. Si. 9, 1072 A.D.

[320] ಹಣವನ್ನಿತ್ತು ಕೆರೆಗಳನ್ನು ಕಟ್ಟಿಸಿದ ದಾನಿಗಳ ಹೆಸರುಗಳು ಶಾಸನಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಆದರೆ ಕೆರೆಯು ನಿರ್ಮಾಣವಾಗಬೇಕಾದರೆ ಬರಿಯ ಹಣ ಸಾಲದು ತಾನೇ: ನಿವೇಶನದ ಆಯ್ಕೆ, ಕಟ್ಟೆಯ ನಿರ್ಮಾಣ, ಆ ಕೆರೆಗೆ ಬರಬಹುದಾದ ನೀರಿನ ಪ್ರಮಾಣ, ಅದಕ್ಕೆ ಸರಿಯಾದ ಕೋಡಿ, ತೂಬು–ಇತ್ಯಾದಿಗಳನ್ನು ನಿರ್ಣಯಿಸಬೇಕಾದವನು ತಾಂತ್ರಿಕ ಪರಿಜ್ಞಾನವುಳ್ಳ ಪರಿಣತ ಶಿಲ್ಪಿ. ಆದರೆ ಈ ಶಿಲ್ಪಿಗಳ ಹೆಸರುಗಳು ಬಹು ವಿರಳವಾಗಿ ಕಾಣಿಸಿಕೊಳ್ಳುತ್ತವೆ, ಶಾಸನಗಳಲ್ಲಿ. ಅಬ್ಬೋಜ ಎನ್ನುವವನಿಗೆ ಕೆರೆಯ ನಿರ್ಮಾಣದಲ್ಲಿ ಅವನ 'ಸೂತ್ರಧಾರಿತನ'ಕ್ಕಾಗಿ ಗದ್ದೆಯೊಂದನ್ನು ಬಿಟ್ಟುಕೊಟ್ಟಿರುವ ವಿಷಯ ಶಾಸನವೊಂದರಲ್ಲಿದೆ. [EC. XI. Jl. 10, 1054 A.D.]

[321] BKI. I. ii. 127, 1082 A.D.

ಕೆರೆ ಬಹಳ ಕಾಲ ಉಳಿಯಬೇಕಾದರೆ ಆಗಾಗ್ಗೆ ಅದರ ಯೋಗಕ್ಷೇಮಕ್ಕೆ ಗಮನವೀಯಬೇಕಾಗುತ್ತದೆ. ಅದರ ಕಟ್ಟೆ ಒಡೆಯಬಹುದು, ತೂಬು ಹಾಳಾಗಬಹುದು, ಮರಳಿನಿಂದ ಕೆರೆ ಹೂತುಹೋಗಬಹುದು. ಇವುಗಳಿಗೆ ಗಮನ ಕೊಡಲು ಹಣವು ಬೇಕಾಗುತ್ತದೆ. ಅದಕ್ಕಾಗಿ ಊರಿನ ಜನ ಸೇರಿ ಕೆರೆಗಾಗಿ ಒಂದು ಜಮೀನನ್ನು ಬಿಡುತ್ತಿದ್ದರು. ಬಹುಶಃ ಇದನ್ನೇ 'ಬಿತ್ತುವಾಟ' ಅಥವಾ 'ಬಿತ್ತುವಟ್ಟ' ಎಂದು ಶಾಸನಗಳಲ್ಲಿ ಕರೆದಿರುವುದು. ಈ ಗದ್ದೆಯಿಂದ ಬರುವ ಆದಾಯವನ್ನು ಕೆರೆಗಾಗಿ ಮೀಸಲಿಡುತ್ತಿದ್ದರು. ಅಯ್ಯಪದೇವ ಎಂಬಾತನು ಆಳುತ್ತಿರುವಾಗ ಚೋರಯ್ಯ ಮುಂತಾದವರು ಸೇರಿ ಅಯ್ಯಪದೇವನಿಂದ ಕೆರೆಗೆ 'ಬಿತ್ತುವಾಟ'ವನ್ನು ಪಡೆದ ವಿಷಯವು ಒಂದು ಶಾಸನದಲ್ಲಿದೆ.[322] ('ಕೆಜಿಗೆ ಬಿತ್ತುವಾಟವ ಪಡದ ಅರಮುಣ್ ಮೊದಲಾಗಿ....''). ಇನ್ನೊಂದು ಶಾಸನದಲ್ಲಿ ಬಿತ್ತುವಾಟದ ಬತ್ತವನ್ನು ಕೆರೆಗೆ ಉಪಯೋಗಿಸುವ ತನಕ ಅದು ರೈತನ ಕೈಯಲ್ಲಿಯೇ ಇರುತ್ತದೆ ಎಂದು ಹೇಳಿದೆ[323] (ಈ ಶಾಸನದಲ್ಲಿನ 'ಬಿತ್ತಲಟ್ಟಿ' ಎಂಬುದರ ಸರಿಯಾದ ರೂಪ 'ಬಿತ್ತುವಟ್ಟ' ಎಂದು ಗ್ರಹಿಸಿದ್ದೇವೆ.). ಸಿಗುಣೂರಿನ ಎಪ್ಪತ್ತಿಬ್ಬರು ಆ ಊರಿಗೆ ದಕ್ಷಿಣದಲ್ಲಿದ್ದ ತಾವರೆಗೆರೆಯ ಏರಿಯ ಮೇಲೆ ಸೇರಿ ಕೆರೆಯ ಕೆಳಗಿದ್ದ ಗದೆಯಲ್ಲಾದ ಬಿತ್ತುವಟ್ಟವನ್ನು ಆಚಂದ್ರಾರ್ಕವಾಗಿ ಕೆರೆಗೆ ಕೊಟ್ಟರೆಂದು ಶಾಸನವೊಂದು ಹೇಳುತ್ತದೆ.[324] ಮಹಾಸಾಮಂತ ಮಾರ್ತಂಡಯ್ಯ ಎಂಬಾತನು ಕೆರೆಗೆ ಬಿಟ್ಟ ಗದ್ದೆಯ ವಿಷಯದಲ್ಲಿ 'ಸೀಮಾಬ್ಯಾಜ'ವಾಗದಿರಲಿ ಎಂದು ಶಿಲಾಶಾಸನವನ್ನು ಬರೆಯಿಸಿ ಕೆರೆಗೆ ಮೂವತ್ತು ಕೈ ಉದ್ದದ ಇಪ್ಪತ್ತುನಾಲ್ಕು ಕೈ ಅಗಲದ ಗದ್ದೆಯನ್ನು ಬಿಡುತ್ತಾನೆ.[325] ಈ ಧರ್ಮವನ್ನು ಅರಸರೂ, ಅರುವತ್ತೊಕ್ಕಲೂ 'ಕಾದೂಡುವರ್' ಎಂದಿದೆ. ಅಷ್ಟೇ ಅಲ್ಲ. ಕೆರೆಗೆ ಬಿಟ್ಟ ಗದ್ದೆಯ ಆದಾಯದಲ್ಲಿ 'ಕಾಗಿಣಿ ಯನ್ನಾದರೂ ತೆಗೆದುಕೊಂಡವನು ಲಿಂಗವನ್ನು ಒಡೆದ ಪಾಪವನ್ನು ಪಡೆಯುತ್ತಾನೆ, ಆ ದೊಡ್ಡ ಕೆರೆಯಲ್ಲಿ ನೀರುಣ್ಣುವ ಗೋವುಗಳನ್ನು ಕೊಂದ ಪಾಪವನ್ನು ಪಡೆಯುತ್ತಾನೆ ಎಂಬ ಶಾಪವನ್ನೂ ಹಾಕಿದೆ.[326] ನಾಗವರ್ಮ ಎಂಬಾತನು ಕಟ್ಟಿಸಿದ 'ದೇವಿಕೆರೆ'ಗೂ ಹಿರಿಯ ಕೆರೆಗೂ ಎಲ್ಲರೂ ಸೇರಿ ಬಿತ್ತುವಟ್ಟವನ್ನು ಕೊಟ್ಟ ವಿಷಯವು ಶಾಸನವೊಂದರಲ್ಲಿದೆ.[327] ಇನ್ನೊಂದು ಶಾಸನದಲ್ಲಿ ''ಬಿತ್ತುವಟ್ಟಮುಳಸಿಯಲ್ಲದ ಕೊರ ಕೊಳಲಾಗ" ಎಂದಿದೆ.[328] ಬಹುಶಃ ಇದಕ್ಕೆ ''ಕೆರೆಯ ಬಿತ್ತುವಟ್ಟದ ಧಾನ್ಯವನ್ನು ಪೂರ್ತಿ ಅಳಸಿ ತೆಗೆದುಕೊಳ್ಳಬೇಕೇ ಹೊರತು ಅದರಲ್ಲಿ ಅರ್ಧವನ್ನು ('ಕೋರು') ತೆಗೆದುಕೊಳ್ಳಬಾರದು"—ಎಂದು ಅರ್ಥೈಸಬೇಕು. ಎಂದರೆ ಬಿತ್ತುವಾಟದ ಭೂಮಿಯಲ್ಲಿ ಎಲ್ಲರೂ ಸೇರಿ ಬೆಳೆ ತೆಗೆಯಬೇಕೇ ಹೊರತು ಕೋರಿಗೆ ಕೊಡಬಾರದೆಂದು ಅದರ ಅಭಿಪ್ರಾಯವಿರಬಹುದು. ಅಥವಾ, ಬಿತ್ತುವಾಟದ ಹೊಲವನ್ನು ಉಳುವ ರೈತನಿಂದ ನಿಗದಿಯಾದ ಧಾನ್ಯವನ್ನು ವಸೂಲು ಮಾಡಬೇಕೆಂದೂ, ಕೋರನ್ನು ತೆಗೆದುಕೊಳ್ಳಬಾರದೆಂದೂ ಇದರ ಅರ್ಥವಿರಬಹುದು. 'ಬಿತ್ತುವಾಟ' ಎಂಬ ರೂಪವೂ ಹಲವೆಡೆ ಸಿಗುತ್ತದೆ.[329] (ತಮಿಳು ಶಾಸನಗಳಲ್ಲಿ 'ವಿತ್ತುಪ್ಪಾಡು' ಎಂಬ ರೂಪವಿದೆ.) ಬಿತ್ತುವಟ್ಟ ಎಂಬುದಕ್ಕೆ ಶಾಸನಗಳ ಸಂಪಾದಕರು "a tax collected on the produce of the irrigated lands"[330] ಎಂದೂ, 'ಬಿತ್ತುವಟ್ಟಮಂ ಬಿಟ್ಟರ್' ಎಂಬುದಕ್ಕೆ 'relinquished

[322] SII. IX. i. 20, C. 850 A.D.
[323] SII. IX. i. 27, C. 950 A.D.
[324] EI. XV. p. 331, 1028 A.D.
[325] BKI. I. ii. 177, 1125 A.D.
[326] ಅದೇ.
[327] EC. III. Nj. 192, 968 A.D.
[328] EC. XII. Tp. 105, 1107 A.D.
[329] EC. IV. Ch. 141, C. 900 A.D.
[330] MAR (1929). p. 73.

the payment on account of seed for sowing'[331] ಎಂದೂ ಅರ್ಥಮಾಡಿದ್ದಾರೆ. ಬಹುಶಃ ಇವೆರಡೂ ಸರಿಯಾದ ಅರ್ಥಗಳಲ್ಲ. 'ಬಿತ್ತುವಾಟ' ಎಂದರೆ (ಕೆರೆಗೆ ಸೇರಿದ) ಬಿತ್ತುವ ಭೂಮಿ[332] ಎಂದರ್ಥ. ವಾಟ, ವಾಟಿ ಎಂದರೆ ಸಂಸ್ಕೃತದಲ್ಲಿ ಪ್ರದೇಶ, ಸ್ಥಳ ಎಂದರ್ಥ.

ಕೆರೆಯ ರಕ್ಷಣೆಗಾಗಿ ಮತ್ತೊಂದು ರೀತಿಯ ಆದಾಯವನ್ನು ಒದಗಿಸುತ್ತಿದ್ದುದು ಬಹಳ ಸ್ವಾರಸ್ಯವಾಗಿದೆ. ಕಂಠಮುಗೆಱೆ ಎಂಬ ಕೆರೆಗೆ ಊರಿನ ಜನರು ತಮ್ಮ ಕುಲದ ಮದುವೆಯ ಸಮಯದಲ್ಲಿ, ಉಪನಯನದ ಸಮಯದಲ್ಲಿ, ಶೂದ್ರರ ಮದುವೆಯ ಸಮಯದಲ್ಲಿ ಬರುವ 'ಒಸಗೆದ್ರಮ್ಮ'ವನ್ನು ಕೆರೆಗೆ ಬಿಟ್ಟುಕೊಡುತ್ತಾರೆ. ಅಷ್ಟೇ ಅಲ್ಲ, ಜನರು ಪ್ರಾಯಶ್ಚಿತ್ತ ರೂಪವಾಗಿ ಕೊಡುತ್ತಿದ್ದ ಹಣವನ್ನೂ ಕೆರೆಗೆ ಬಿಡುತ್ತಾರೆ. ಮನೆವೆರ್ಗ್ಗಡೆ ದಂಡನಾಯಕ ವಾಮದೇವಯ್ಯನು ಊರಿನ ದಂಡವೆಲ್ಲವೂ ಅದೇ ಕೆರೆಗೆ ಸೇರುವಂತೆ ಮಾಡುತ್ತಾನೆ. ಇರಿದರೆ ಹನ್ನೆರಡು ಹಣ, ಕದ್ದು ಬಂದು ಹೊಯ್ದರೆ ಆರು ಹಣ, ಬಯ್ದರೆ ಮೂರು ಹಣ--ಇವೇ ದಂಡದ ವಿವರಗಳು. "ಕೆಱೆಗೆಂದುಂ ದಂಡವಾಗಿ ನಡೆವುದು ನಿಯತ" ಎಂದು ಶಾಸನವು ಹೇಳುತ್ತದೆ.[333]

ಇನ್ನೊಂದು ಶಾಸನವೂ ಕೆರೆಗೆ ಸಂಬಂಧಿಸಿದ ಇಷ್ಟೇ ಸ್ವಾರಸ್ಯವಾದ ವಿಷಯವನ್ನು ಹೇಳುತ್ತದೆ. ಬನ್ನಿಯೂರೆಂಬ ಅಗ್ರಹಾರದ ಕೆರೆಯು ಪದೇ ಪದೇ ಒಡೆದು ಹೋಗುತ್ತಿದ್ದಿತು. ಬಹುಶಃ ಆ ಕೆರೆಯನ್ನು ದುರಸ್ತುಪಡಿಸುವ ಶಕ್ತಿ ಆ ಊರಿಗೆ ಇರಲಿಲ್ಲ. ಆಗ ಅಲ್ಲಿಯ ಮಹಾಜನರೆಲ್ಲರೂ ಒಟ್ಟಾಗಿ ಸೇರಿ ರಾಜನ ಬಳಿ ಬಂದು–ಹಿಂದಿನ ಹಲವು ರಾಜರು ಎಷ್ಟು ಸಾರಿ ಕಟ್ಟಿಸಿದರೂ ಅದು ನಿಲ್ಲಲಿಲ್ಲ. ಅದು ನಿಲ್ಲಬೇಕಾದರೆ ಧರ್ಮ–ರಾಜನಾದ ನಿನ್ನ ಹೆಸರಲ್ಲಿ ಕಟ್ಟಿಸಬೇಕು. ಊರಿನ ಜನ ಸುಖವಾಗಿದ್ದರೆ ಅದರ ಪುಣ್ಯ ನಿನಗೆ ಬರುತ್ತದೆ ಎಂದು ಹೇಳಿಕೊಳ್ಳುತ್ತಾರೆ. ಆಗ ರಾಜನು 'ಅದೇನು ಮಹಾ' ಎಂದು ಜಕ್ಕಗೋಸಿಯ ಕೈಯಲ್ಲಿ ಹಣವನ್ನು ಕೊಟ್ಟು ಕೆರೆಯನ್ನು ಕಟ್ಟಿಸಿ ಅದಕ್ಕೆ 'ತುಂಬಸಮುದ್ರ'ವೆಂದು ಹೆಸರಿಡುತ್ತಾನೆ.[334] ಕೆರೆಯ ವಿಷಯದಲ್ಲಿ ಊರಿನ ಜನಕ್ಕೆ, ಅದಕ್ಕಿಂತ ಹೆಚ್ಚಾಗಿ ರಾಜನಿಗೆ ಇದ್ದ ಆಸಕ್ತಿಯು ಇಲ್ಲಿ ರೂಪುಗೊಂಡಿದೆ. ಪಂಪನು ಪಾಂಡವರ ಪ್ರಯಾಣವನ್ನು ವರ್ಣಿಸುತ್ತ ಅವರು 'ಅಲ್ಲಿಗಲ್ಲಿಗೊಡೆದ ಕೆಱೆ'ಗಳಿಗೆ ಹಣವನ್ನು ಕೊಟ್ಟು ಜೀರ್ಣೋದ್ಧಾರ ಮಾಡಿಸುತ್ತಿದ್ದರೆಂದು ಹೇಳುತ್ತಾನೆ. ಪಂಪನು ಇಲ್ಲಿ ಅರಿಕೇಸರಿಯು ತನ್ನ ರಾಜ್ಯದಲ್ಲಿ ಕೈಗೊಳ್ಳುತ್ತಿದ್ದ ಸಂಚಾರವನ್ನೇ ವರ್ಣಿಸಿರುವಂತೆ ಕಾಣುತ್ತದೆ.

'ಕೆರೆಗೆ ಹಾರ' ಎಂಬ ಶೀರ್ಷಿಕೆಯಲ್ಲಿ ಬಹು ಸುಂದರವೂ ಹೃದಯವಿದ್ರಾವಕವೂ ಆದ ಜಾನಪದ ಗೀತೆಯೊಂದು ಪ್ರಕಟವಾಗಿದೆ.[335] ಗೌಡನೊಬ್ಬನು ಕಟ್ಟಿಸಿದ ಕೆರೆಯು ಮತ್ತೆ ಮತ್ತೆ ಕಿತ್ತುಹೋಗುತ್ತಿದ್ದಿತು. ಅದು ನಿಲ್ಲಬೇಕಾದರೆ ಒಂದು ನರಬಲಿಯಾಗಬೇಕೆಂದು ಆದೇಶವಾಯಿತು. ಆಗ ಗೌಡನ ಕಿರಿಸೊಸೆಯು ತಾನಾಗಿಯೇ ಮುಂದೆ ಬಂದು 'ಕೆರೆಗೆ ಹಾರ'ವಾಗುತ್ತಾಳೆ. ಎಂದರೆ ಕೆರೆಗೆ ತನ್ನನ್ನು ಆಹಾರವಾಗಿ ಅಥವಾ ಬಲಿಯಾಗಿ

---

331 EC. IV. Ch. 141, C. 900 A D. (ಶಾಸನದ ಇಂಗ್ಲಿಷ್ ಅನುವಾದವನ್ನು ನೋಡಿ).

332 "ನಿಳ್ಪೇಸ್ವರಜೀಯ್ಯ ಪಡುವಣ ತೂಬಂ ಮಾಡಿಸಿ ಇ ಬಯಲ ಬಿತ್ತುವಟಮ ಬಿಟ್ಟರ್'' (EC. XI. Cl. 40, C. 1100 A.D.)—ತೂಬನ್ನು ಮಾಡಿಸಿ ಯಾವುದೋ ಬಯಲನ್ನು ಬಿತ್ತುವಾಟವಾಗಿ ಬಿಟ್ಟರು ಎಂಬಲ್ಲಿ ಬಿತ್ತುವಾಟವು ಕೆರೆಗೆ ಸೇರಿದ ಭೂಮಿ ಎಂಬ ಅರ್ಥವು ಸ್ಪಷ್ಟವಾಗುತ್ತದೆ.

333 IA. XII. p. 222, 929–30 A.D.

334 MAR (1930). p. 235, 1080 A.D.

335 ಕನ್ನಡದ ಬಾವುಟ (ಎರಡನೆಯ ಮುದ್ರಣ)

ಅರ್ಪಿಸಿಕೊಳ್ಳುತ್ತಾಳೆ.[336] ಶಾಸನವೊಂದರಲ್ಲಿ[337] ಬಂದಿರುವ "ಕೆಱೆಗೆ ಹಾರಂಗೊಟ್ಟರ್" ಎಂಬ ಉಕ್ತಿಯು ನಮ್ಮ ಆಸಕ್ತಿಯನ್ನು ಹೊಡೆದೆಬ್ಬಿಸಿದರೂ ಸ್ವಲ್ಪ ನಿರಾಸೆಯನ್ನು ಉಂಟುಮಾಡುತ್ತದೆ. ಏಕೆಂದರೆ ಅದರ ಹಿಂದೆ 'ಪಣಮುಂ' ಎಂಬ ಮಾತು ಇದೆ. ಹಣವನ್ನು ಕೆರೆಗೆ ಆಹಾರವಾಗಿ, ಎಂದರೆ ಅದರ ದುರಸ್ತಿಗೆ, ಬದುಕಿಗೆ ಬಿಟ್ಟುಕೊಟ್ಟರು ಎಂದು ತಿಳಿಯಬೇಕು. ಹೊಸದಾಗಿ ನಿರ್ಮಾಣಗೊಂಡ ಅನೇಕ ಕೆರೆಗಳೂ ಕೋಟೆಗಳೂ ನಿಲ್ಲಬೇಕಾದರೆ ನರಬಲಿಯನ್ನಪೇಕ್ಷಿಸುತ್ತವೆ ಎಂದು ಈಗಲೂ ಹಳ್ಳಿಯ ಜನರು ನಂಬಿದ್ದಾರೆ. ಹಾಗೆ ಕೊಟ್ಟಿರುವುದೂ ಬಹು ಸಂಭವನೀಯ. ಆದರೆ ಈ ವಿಷಯವನ್ನು ಕುರಿತ ಉಲ್ಲೇಖವು ಯಾವ ಶಾಸನದಲ್ಲಿಯೂ ಬಂದಿಲ್ಲವೆಂದು ಮಾತ್ರ ಹೇಳಬಹುದು. ವಿಜಯನಗರದ ಬಳಿ ಕೃಷ್ಣದೇವರಾಯನು ಕಟ್ಟಿಸಿದ ಕೆರೆಗಾಗಿ ಅರವತ್ತು ಜನರನ್ನು ಬಲಿಕೊಡಲಾಯಿತೆಂದು ಇಬ್ಬರು ಪ್ರವಾಸಿಗರ ಹೇಳಿಕೆಗಳಿವೆ.[338] ಹೊಸದಾಗಿ ಕಟ್ಟಿದ ಮಂದಿರಕ್ಕಾಗಿ ಅಥವಾ ಸೇತುವೆಗಾಗಿ ಬಲಿಯಾದ ವ್ಯಕ್ತಿಯು ಅಲ್ಲಿಗೆ ರಕ್ಷಕ ದೇವತೆಯಾಗುತ್ತಾನೆ ಎಂಬ ನಂಬಿಕೆ ಅನೇಕ ದೇಶಗಳಲ್ಲಿದೆ. ಆಧುನಿಕಯುಗದಲ್ಲಿಯೂ ಬಂಧಿತರನ್ನು ಅಥವಾ ಗುಲಾಮರನ್ನು ಸೇತುವೆಗಳ ಕೆಳಗೆ, ಪಟ್ಟಣದ ಹೆಬ್ಬಾಗಿಲಿನ ಕೆಳಗೆ ಅಥವಾ ಸಾರ್ವಜನಿಕ ಮಂದಿರಗಳ ಕೆಳಗೆ ಹೂಳುತ್ತಿದ್ದ ಸಂಪ್ರದಾಯವು ಈಚಿನವರೆಗೆ ಚೀನಾದಲ್ಲಿತ್ತೆಂದು ತಿಳಿದುಬರುತ್ತದೆ.[339]

---

336 ಈ ಜಾನಪದ ಗೀತೆಯ ಸೊಗಸಿಗೆ, ಪ್ರೊ॥ ತೀ. ನಂ. ಶ್ರೀ ಕಂಠಯ್ಯನವರ 'ಕೆರೆಗೆ ಹಾರ' ಎಂಬ ಲೇಖನವನ್ನು ನೋಡಿ. (ಸಮಾಲೋಕನ, ಪು. 87–95). "ಈ ಕೃತಿಯನ್ನು ಕಟ್ಟಿದ ಹಳ್ಳಿಯ ಅಜ್ಞಾತ ವ್ಯಕ್ತಿ ಒಬ್ಬ ಶ್ರೇಷ್ಠ ಕವಿ. 'ಕೆರೆಗೆ ಹಾರ' ಕನ್ನಡ ಕಾವ್ಯಶ್ರೀಯ ಕಂಠದ ಹಾರ" (ಅದೇ, ಪು. 95)

337 EC. X. Ct. 34 (a), 955 A.D.

338 Sewell : A Forgotten Empire, p. 163.

339 Encyclopaedia of Religion and Ethics, VI. p. 843, 846.

ಈ ಭಾಗದಲ್ಲಿ ಅನೇಕ ಸಾರ್ವಜನಿಕ ಚಟುವಟಿಕೆಗಳನ್ನು ಕುರಿತು ಪ್ರಸ್ತಾಪಿಸಲಾಯಿತು. ತೆಲುಗು ಶಾಸನ, ಕಾವ್ಯಗಳಲ್ಲಿ ಬರುವ 'ಸಪ್ತ ಸಂತಾನ'ದ ಕಲ್ಪನೆಯೂ ಇಂತಹುದೇ ಉಪಯುಕ್ತ ಕಾರ್ಯಗಳನ್ನು ಒಳಗೊಂಡಿದೆ. ಅಗ್ರಹಾರ, ಪುತ್ರ, ದೇವಾಲಯ, ತಟಾಕ, ಧರ್ಮನಿಧಿ, ಹೂದೋಟ, ಕಾವ್ಯ–ಇವೇ ಸಪ್ತಸಂತಾನ ಅಥವಾ ಸಪ್ತ ಸಂತತಿ. ಧರ್ಮನಿಧಿ ಎಂಬುದು ಸತ್ರ, ವಿದ್ಯೆ ಇತ್ಯಾದಿಗಳಿಗೆ ಕೊಡುತ್ತಿದ್ದ ಧನರೂಪದ ನಿಧಿ ಅಥವಾ ದತ್ತಿಯನ್ನು ಹೇಳುತ್ತದೆ. 'ಕಾವ್ಯ'— ಈ ಏಳು ಸಂತಾನಗಳಲ್ಲೆಲ್ಲ ಅತ್ಯುತ್ತಮವಾದುದೆಂದು ಹಲವರ ಅಭಿಪ್ರಾಯವಾಗಿದ್ದಿತು. 'ಪುತ್ರ' ಅಥವಾ ಮಗನನ್ನು ಪಡೆಯುವುದು ಸಮಾಜದ ಮುಂದುವರಿಕೆಗೇ ತಾನೇ ? ಎಂದರೆ ಮೇಲಿನ ಏಳೂ ಕಾರ್ಯಗಳು ಸಾಮಾಜಿಕ ಸೇವೆಗಳೇ. ಹೀಗೆ ಸಾರ್ವಜನಿಕ ಚಟುವಟಿಕೆಗಳನ್ನು ಒಂದು ವರ್ಗವಾಗಿ ವ್ಯವಸ್ಥೆಗೊಳಿಸಿದ್ದು ಕರ್ನಾಟಕದಲ್ಲಿ ಇದ್ದಿಲ್ಲವಾದರೂ, ಆ ಚಟುವಟಿಕೆಗಳ ಪ್ರಶಸ್ತಿ ಮಾತ್ರ ಶಾಸನಗಳಲ್ಲಿ ಮೇಲಿಂದ ಮೇಲೆ ಬಂದಿರುವುದನ್ನು ಗಮನಿಸಬಹುದು.

# ಅನುಬಂಧ

## ಕಲೆಗಳು*

ಪ್ರಾಚೀನ ಕರ್ನಾಟಕವು ಕಲೆಗಳ ತವರೂರಾಗಿದ್ದಿತು. ರಾಜರು ತಾವೇ ಸ್ವತಃ ಕಲಾವಿದರಾಗಿದ್ದು ಕಲೆಗಳಿಗೆ ಕಲಾವಿದರಿಗೆ ಪ್ರೋತ್ಸಾಹವಿತ್ತಿದ್ದರು. ಈ ಅನುಬಂಧದಲ್ಲಿ ಕರ್ನಾಟಕದ ಆ ಎಲ್ಲ ಕಲೆಗಳ ಪರಿಚಯುವನ್ನು ಮಾಡಿಕೊಡುವ ಉದ್ದೇಶವಿಲ್ಲ. ಅಂತಹ ಕಾರ್ಯವು ಈ ನಿಬಂಧದ ಯೋಜನೆಗೆ ಸಂಪೂರ್ಣವಾಗಿ ಹೊರಗಾದುದು. ಶಾಸನಗಳಲ್ಲಿ ಉಲ್ಲೇಖವಾಗಿರುವ ಕಲೆಗಳ, ಕಲಾವಿದರ, ಕಲಾಕೃತಿಗಳ ಪರಿಚಯುವನ್ನು ಮಾತ್ರ ಮಾಡಿಕೊಡುವುದು ನಮ್ಮ ಉದ್ದೇಶವಾಗಿದೆ. ಶಾಸನಗಳಲ್ಲಿ ಇವುಗಳಿಗೆ ಸಂಬಂಧಿಸಿದ ಉಲ್ಲೇಖಗಳು, ವಿವರಗಳು ಹೆಚ್ಚು ದೊರೆಯುವುದಿಲ್ಲ. ಅಲ್ಲಿ ದೊರಕುವ ಪರಿಮಿತ ಸಾಮಗ್ರಿಯನ್ನೇ ಕೆಳಗೆ ಒಂದು ವ್ಯವಸ್ಥಿತರೂಪದಲ್ಲಿ ಕೊಡಲಾಗಿದೆ. ಇಲ್ಲಿ ನಿರೂಪಿಸಿರುವ ಕೆಲವು ಸಂಗತಿಗಳು ಹಿಂದಿನ ಅಧ್ಯಾಯಗಳಲ್ಲಿ ಬೇರೆ ಬೇರೆ ಕಡೆಗಳಲ್ಲಿ ಬಂದಿವೆ. ಇಂತಹ ಪುನರಾವರ್ತನೆಗಳನ್ನು ಈ ನಿಬಂಧದಲ್ಲಿ ಅಲ್ಲಲ್ಲಿ ಕಾಣಬಹುದು.

### ಅರವತ್ತುನಾಲ್ಕು ಕಲೆಗಳು

ಸೇಡಿಂಬ ಎಂಬ ಅಗ್ರಹಾರದ ಮುನ್ನೂರ್ವರು ಮಹಾಜನರನ್ನು ಒಂದು ಶಾಸನದಲ್ಲಿ "ಚವುಷಷ್ಟಿ ಕಳಾನ್ವಿತ ವಸುಮತೀ ಗೀರ್ವಾಣರುಂ", ಎಂದರೆ ಅರುವತ್ತುನಾಲ್ಕು ಕಲೆಗಳಲ್ಲಿ ಶ್ರೇಷ್ಠ ಪರಿಣತಿಯನ್ನು ಪಡೆದವರೆಂದು ಹೇಳಿದೆ.[1] ಅರುವತ್ತುನಾಲ್ಕು ಕಲೆಗಳ ಉಲ್ಲೇಖ ಇನ್ನೂ ಹಲವೆಡೆ ಬಂದಿದೆ. ಮಂಡಳೇಶ್ವರ ಕಲಿಗಭೂಪನನ್ನು "ಚತುಸ್ಸಷ್ಟಿಕಳಾವಿಳಾಸಿನೀ ಭುಜಂಗಂ" ಎಂದಿದೆ ಒಂದು ಕಡೆ.[2] ಇನ್ನೊಂದು ಶಾಸನದಲ್ಲಿ ಒಂದು ಅಗ್ರಹಾರದ ವೈದಿಕರನ್ನು "ಚತುರ್ದಶ ವಿದ್ಯಾಸ್ಥಾನ ಪಾರಾವಾರ ಪಾರಗರು" ಎಂದು ಹೊಗಳಿದೆ.[3] ಇಲ್ಲಿ ಹದಿನಾಲ್ಕು ವಿದ್ಯೆಗಳನ್ನು ಸೂಚಿಸಲಾಗಿದೆ.

ಕಲೆಗಳ ಸಂಖ್ಯೆ ಅರುವತ್ತುನಾಲ್ಕು ಎಂಬುದು ಭರತಖಂಡವು ಬಹಳ ಹಿಂದಿನಿಂದಲೂ ಒಪ್ಪಿಕೊಂಡು ಬಂದಿರುವ ಒಂದು ಪದ್ಧತಿ. ವಾತ್ಸ್ಯಾಯನನ ಕಾಮಸೂತ್ರದಲ್ಲಿರುವ ಅರುವತ್ತುನಾಲ್ಕು ಕಲೆಗಳು ಕೆಳಗಿನಂತಿವೆ.

| | | |
|---|---|---|
| ಗೀತಂ | ಕೌಚುಮಾರಾಶ್ಚಯೋಗಾಃ | ವೃಕ್ಷಾಯುರ್ವೇದಯೋಗಾಃ |
| ವಾದ್ಯಂ | ಹಸ್ತಲಾಘವಂ | ಮೇಷಕುಕ್ಕುಟಲಾವಕಯುದ್ಧ ವಿಧಿಃ |
| ನೃತ್ಯಂ | ವಿಚಿತ್ರಶಾಕಯೂಷಭಕ್ಷ್ಯವಿಕಾರಕ್ರಿಯಾ | ಶುಕಸಾರಿಕಾಪ್ರಲಾಪನಂ |
| ಆಲೇಖ್ಯಂ | ಪಾನಕರಸರಾಗಾಸವಯೋಜನಂ | ಉತ್ಸಾದನೇ ಸಂವಾಹನೇ |
| ವಿಶೇಷಕಚ್ಛೇದ್ಯಂ | ಸೂಚೀವಾನಕರ್ಮಾಣಿ | ಕೇಶಮರ್ದನೇ ಚ ಕೌಶಲಂ |
| ತಂಡುಲಕುಸುಮಬಲಿವಿಕಾರಾಃ | ಸೂತ್ರಕ್ರೀಡಾ | ಅಕ್ಷರಮುಷ್ಟಿಕಾಕಥನಂ |

---

* ಈ ಭಾಗವು ಮೂಲ ನಿಬಂಧಕ್ಕೆ ಸೇರಿದಂತೆ ಬರೆದುದಲ್ಲ. ಈ ನಿಬಂಧದ ಪರೀಕ್ಷಕರಾಗಿದ್ದ ವಿದ್ವಾಂಸರೊಬ್ಬರು ಕಲೆಗಳನ್ನು ಕುರಿತಾದ ಪ್ರತ್ಯೇಕ ಅಧ್ಯಾಯುವಿಲ್ಲದಿರುವುದು ಒಂದು ಕೊರತೆ ಎಂಬರ್ಥ ಬರುವಂತೆ ಅಭಿಪ್ರಾಯುಪಟ್ಟಿದ್ದರು. ಅವರ ಸೂಚನೆಯು ಪ್ರಕಾರ ಈ ಭಾಗವನ್ನು ಬರೆಯಲಾಗಿದೆ. ಇದು ಒಂದು ಪ್ರತ್ಯೇಕ ಅಧ್ಯಾಯುವಾಗುವುದೋ ಇಲ್ಲವೋ ಎಂದು ಸಂದೇಹ ಬಂದು, ಇದನ್ನು ಒಂದು ಅನುಬಂಧದ ರೂಪದಲ್ಲಿ ಕೊಡಲಾಗಿದೆ.

1 JISI. No. 3, 1124 A.D.

2 SII. IX. i. 161, 1092 A.D.

3 SII. IX. i. 207, 1124 A.D.

ಪುಷ್ಪಾಸ್ತರಣಂ
ದಶನವಸನಾಂಗರಾಗಃ
ಮಣಿಭೂಮಿಕಾಕರ್ಮ
ಶಯನರಚನಂ
ಉದಕವಾದ್ಯಂ
ಉದಕಘಾತಃ
ಚಿತ್ರಾಶ್ಚಯೋಗಾಃ
ಮಾಲ್ಯಗ್ರಥನವಿಕಲ್ಪಾಃ
ಶೇಖರಕಾಪೀಡಯೋಜನಂ
ನೇಪಥ್ಯಪ್ರಯೋಗಾಃ
ಕರ್ಣಪತ್ರಭಂಗಃ
ಗಂಧಯುಕ್ತಿಃ
ಭೂಷಣಯೋಜನಂ
ಐಂದ್ರಜಾಲಯೋಗಾಃ
ವೈನಯಿಕೀನಾಂ ವಿದ್ಯಾನಾಂ ಜ್ಞಾನಂ
ಬಾಲಕ್ರೀಡನಕಾನಿ

ವೀಣಾಡಮರುಕವಾದ್ಯಾನಿ
ಪ್ರಹೇಲಿಕಾ
ಪ್ರತಿಮಾಲಾ
ದುರ್ವಾಚಕಯೋಗಾ
ಪುಸ್ತಕವಾಚನಂ
ನಾಟಕಾಖ್ಯಾಯಿಕಾದರ್ಶನಂ
ಕಾವ್ಯಸಮಸ್ಯಾಪೂರಣಂ
ಪಟ್ಟಿಕಾವೇತ್ರವಾನವಿಕಲ್ಪಾಃ
ತಕ್ಷಕರ್ಮಾಣಿ
ತಕ್ಷಣಂ
ವಾಸ್ತುವಿದ್ಯಾ
ರೂಪ್ಯರತ್ನಪರೀಕ್ಷಾ
ಧಾತುವಾದಃ
ಮಣಿರಾಗಾಕರಜ್ಞಾನಂ
ವೈಜಯಿಕೀನಾಂ ವಿದ್ಯಾನಾಂ ಜ್ಞಾನಂ

ಮ್ಲೇಚ್ಛಿತವಿಕಲ್ಪಾಃ
ದೇಶಭಾಷಾವಿಜ್ಞಾನಂ
ಪುಷ್ಪಶಕಟಿಕಾ
ನಿಮಿತ್ತಜ್ಞಾನಂ
ಯಂತ್ರಮಾತೃಕಾ
ಧಾರಣಮಾತೃಕಾ
ಸಂಪಾಠ್ಯಂ
ಮಾನಸೀ
ಕಾವ್ಯಕ್ರಿಯಾ
ಅಭಿಧಾನಕೋಶ ಛಂದೋವಿಜ್ಞಾನಂ
ಕ್ರಿಯಾಕಲ್ಪಃ
ಛಲಿತಕಯೋಗಾಃ
ವಸ್ತ್ರಗೋಪನಾನಿ
ದ್ಯೂತವಿಶೇಷಾಃ
ಆಕರ್ಷಕ್ರೀಡಾ
ವ್ಯಾಯಾಮಿಕೀನಾಂ ವಿದ್ಯಾನಾಂ ಜ್ಞಾನಂ

ಕಲೆಗಳ ಸಂಖ್ಯೆಯನ್ನು ಬಹುತೇಕ ಎಲ್ಲರೂ ಒಪ್ಪಿಕೊಂಡಿದ್ದರೂ, ವಿವರಗಳಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿವೆ. ಜೈನಗ್ರಂಥಗಳು ಮಾತ್ರ ಎಪ್ಪತ್ತೆರಡು ಕಲೆಗಳನ್ನು ಹೆಸರಿಸುತ್ತವೆ.[4]

ಶಾಸನವೊಂದರಲ್ಲಿ "ತರ್ಕವ್ಯಾಕರಣ ಚಿತ್ರ ಪತ್ರ ಭರತಾದ್ಯನೇಕ ಚೌಷಷ್ಟಿ ಕಳಾ ಸಮಗ್ರಚಾತುರ್ಯ ಚತುರಾನನ" ಎಂದು ಒಬ್ಬನನ್ನು ಹೊಗಳಿದೆ.[5] ಇಲ್ಲಿ ಬರುವ 'ಪತ್ರ' ಎಂಬುದು 'ಪತ್ರಚ್ಛೇದ' ಎಂಬ ಕಲೆಯನ್ನು ಸೂಚಿಸುತ್ತದೆ. ಇನ್ನೊಂದು ಶಾಸನದಲ್ಲಿ 'ಪತ್ರಚ್ಛೇದ' ದ ಹೆಸರಿದೆ.[6] ಇದು ಗಿಡದ ಎಲೆಗಳನ್ನು ಕೊಂಬೆಗಳನ್ನು ಗಿಡದಲ್ಲಿ ಬೇರೆ ಬೇರೆ ಆಕಾರಗಳಾಗಿ ಕಾಣುವಂತೆ ಕತ್ತರಿಸುವ ಕಲೆ.[7]

ಇನ್ನೊಂದು ಶಾಸನದಲ್ಲಿ[8] ಕೊಟ್ಟಿರುವ ಹದಿನಾರು ಕಲೆಗಳು ಇಂತಿವೆ: ವ್ಯಾಕರಣ, ನಿಘಂಟು, ಗಣಿತ, ವಾತ್ಸ್ಯಾಯನ, ಜ್ಯೋತಿಷ, ಶಕುನ, ಛಂದ, ಮನು, ಗಾಂಧರ, ಅಳಂಕಾರ, ಮಹಾಕಾವ್ಯ, ನಾಟಕ, ಅಧ್ಯಾತ್ಮ, ಅರ್ಥಶಾಸ್ತ್ರ, ಸಿದ್ಧಾಂತ, ಪ್ರಮಾಣ. ಹಲವು ಕಲೆಗಳಲ್ಲಿ ಪ್ರವೀಣನಾಗಿದ್ದವನನ್ನು ಅರುವತ್ತುನಾಲ್ಕು ಕಲೆಗಳಲ್ಲಿಯೂ ಪ್ರವೀಣ ಎಂದು ಹೊಗಳುವುದು ಒಂದು ಪದ್ಧತಿಯಾಗಿತ್ತೇ ಹೊರತು, ಅಂತಹ ಮಾತುಗಳನ್ನು ಅಕ್ಷರಶಃ ನಿಜವೆಂದು ತೆಗೆದುಕೊಳ್ಳಬೇಕಾಗಿಲ್ಲ.

## ಸಂಗೀತ ಮತ್ತು ನರ್ತನ

ಹಲ್ಮಿಡಿ ಶಾಸನದಲ್ಲಿ ಕಾಕುಸ್ಥವರ್ಮನ ವೈಭವವನ್ನು ವರ್ಣಿಸುತ್ತ ಅವನ ಮನೆಗಳು ಸಂಗೀತದ ಧ್ವನಿಯಿಂದ ತುಂಬಿಹೋಗಿದ್ದವು ಎಂದು ಹೇಳಿದೆ ("ನಾನಾವಿಧದ್ರವಿಣಸಾರ ಸಮುಚ್ಚಯೇಷು ದ್ವಿಪೇಂದ್ರ

[4] A. Venkatasubbiah : The Kalās, p. 8, 25.
[5] EC. V. Mj. 18, 1095 A.D.
[6] BKI. I. ii. 151, 1102 A.D.
[7] The Kalās, p. 16, 25, 36, 41, 59.
[8] BKI. I. i. 61, 1024 A.D.

ಮುದವಾಸಿತ ಗೋಪುರೇಷು ಸಂಗೀತವಲ್ಗುನಿನದೇಷು ಗೃಹೇಷು").[9] ಕಯ್ದ್ಯಾಳ ಎಂಬ ಗ್ರಾಮವನ್ನು ವರ್ಣಿಸುತ್ತ ಒಂದು ಶಾಸನವು "ನಾನಾಗೇಯ ಚಾತುರ್ಯದಿಂ ನವದೇಸೀಯ ವಿಳಾಸದಿಂ" ಅದು ಕೂಡಿದ್ದಿತು ಎಂದು ಹೇಳುತ್ತದೆ.[10] ಹಲವು ದೊರೆಗಳು, ರಾಣಿಯರು, ಅಧಿಕಾರಿಗಳು, ಸನ್ಯಾಸಿಗಳು ಸಂಗೀತವಿದ್ಯೆಯಲ್ಲಿ ಕುಶಲರಾಗಿದ್ದ ಸಂಗತಿ ಹಲವು ಶಾಸನಗಳಲ್ಲಿದೆ. ಪಿರಿಯಕೇತಲದೇವಿ ಎಂಬಾಕೆಯು ದೇಶಭಾಷಾಸಂಗೀತ ವಿದ್ಯಾಧರಿ ಎನ್ನಿಸಿಕೊಂಡಿದ್ದಳು.[11] ಹನ್ನೊಂದನೆಯ ಶತಮಾನದಲ್ಲಿ ಕನ್ನಡದಲ್ಲಿ ಸಂಗೀತಕೃತಿಗಳು ರಚಿತವಾಗಿದ್ದವು ಎಂಬುದು ಇದರಿಂದ ಸೂಚಿತವಾಗುತ್ತದೆ. ಮುಗುಂದ ಮೂವತ್ತರ ನಾರ್ಗಾವುಂಡ ಚಾವುಂಡನು "ತತವಿತತ ಘನಶುಷಿರ ವಾದ್ಯವಿದ್ಯಾವಾಚಸ್ಪತಿ" ಯಾಗಿದ್ದನು.[12] ತತ, ವಿತತ, ಘನ, ಶುಷಿರಗಳ ಉಲ್ಲೇಖ ಇನ್ನೊಂದು ಶಾಸನದಲ್ಲಿಯೂ ಬಂದಿದೆ.[13] ಸಾಮಂತ ಎಱೆಯಮ್ಮನು "ವಾದ್ಯವಿದ್ಯಾಧರಂ ಸಕಳಕಳಾಧರಂ" ಆಗಿದ್ದನು.[14] ವಿಷ್ಣುವರ್ಧನನು "ಸಂಗೀತಪ್ರಸಂಗ ಭಂಗೀ ಸಂಗತ ಚತುರ ಭರತ" ನಾಗಿದ್ದನು.[15] ಕ್ರಿ. ಶ. 1054 ರ ಒಂದನೆಯ ಜಯಕೇಶಿಯ ಶಾಸನದಲ್ಲಿ ಅಣ್ಣಯ್ಯ ಎಂಬ ರಸಿಕ ಅಧಿಕಾರಿಯನ್ನು "ಗೀತವಾದ್ಯ ನೃತ್ಯ ಕರ್ಣಾವಲೋಕನ ಶೀಳ" ಎಂದು ಹೊಗಳಿದೆ.* ಅವನು ಸಂಗೀತ ಮತ್ತು ನೃತ್ಯಗಳನ್ನು ಕಿವಿ ಮತ್ತು ಕಣ್ಣುಗಳಿಂದ ಆಸ್ವಾದಿಸುತ್ತಿದ್ದ ಕಲಾ ಪ್ರೇಮಿಯಾಗಿದ್ದನು.

ಸಂಗೀತದಂತೆಯೇ ನರ್ತನವೂ ಜನಪ್ರಿಯವಾಗಿದ್ದ ಕಲೆಯಾಗಿದ್ದಿತು. ವಾರವಿಲಾಸಿನಿಯರು, ರಾಣಿಯರು ಸಂಗೀತ ನರ್ತನಾದಿಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದಿದ್ದರು (ಈ ವಿವರಗಳು ಹಿಂದೆ ಬಂದಿವೆ.) ಪಟ್ಟದಕಲ್ಲಿನ ಒಂದು ದೇವಸ್ಥಾನದ ಕಂಬದ ಮೇಲಿನ ಶಾಸನವೊಂದರಲ್ಲಿ ಒಬ್ಬ ಶ್ರೇಷ್ಠನಟನ ಪ್ರಶಂಸೆಯಿದೆ. "ಭರತನುತವಚನಾವಿರಚಿತ ನತು(ಟ)ಸೇವ್ಯಸಿಂಘನಾದೇನ ಪರನಟವು ದಾಂಧಹಸ್ತೀ ಪರಿಹೀನಮದೋ ಭವತ್ಯೇವ ॥ ನಟಸೇವ್ಯ ಭರತಮತಯುತ ಪಟುತರವಚನಾಶನಿ ಪ್ರತಾಪೇನ ಕುಟಿಲೋನ್ನತ ನಟಶೈಲಃ ಸ್ಫುಟಿತಾನತಮಸ್ತಕಃ ಪತತಿ ॥ ಅಚಲದ ॥"[16]. ಭರತನ ನಾಟ್ಯಶಾಸ್ತ್ರದಲ್ಲಿ ಸಂಪೂರ್ಣಪರಿಣತಿಯನ್ನು ಪಡೆದಿದ್ದ ಈ ಶಾಸನೋಕ್ತ ನಟನ ಗರ್ಜನೆಯನ್ನು ಕೇಳಿದರೆ ಸಾಕು ಉಳಿದ ನಟರು ತಮ್ಮ ಅಹಂಕಾರವನ್ನು ಉಡುಗಿಕೊಂಡು ತೆಪ್ಪಗಾಗುತ್ತಿದ್ದರಂತೆ. ಇಲ್ಲಿಯ ನಟ ಒಬ್ಬ ನರ್ತಕ. ಕದಂಬ ರವಿವರ್ಮನ ಗುದ್ನಾಪುರದ ಶಾಸನದ ಪ್ರಕಾರ (6 ನೇ ಶ.) ಆ ಊರಿನಲ್ಲಿ ಅವನು ಕಟ್ಟಿಸಿದ 'ಕಾಮಜಿನಾಲಯ' (=ಬಾಹುಬಲಿ ಬಸದಿ ? ) ದ ಬಲಗಡೆ ಅರಮನೆಯಿದ್ದಿತೆಂದೂ, ಎಡಗಡೆಯ ಅಂತಃಪುರದ ಮುಂಭಾಗದಲ್ಲಿ ಎರಡು ನಾಟ್ಯಶಾಲೆಗಳಿದ್ದವೆಂದೂ ತಿಳಿಯುತ್ತದೆ. ಅವನ ರಾಣಿಯರು ನರ್ತನ ವಿಶಾರದೆಯಾಗಿದ್ದರೆಂಬುದು ಸ್ಪಷ್ಟವಿದೆ.(Śrīkaṇṭhikā, p. 67). ದೇವಸ್ಥಾನದ ಒಂದು ಭಾಗ 'ನಾಟ್ಯಶಾಲೆ' ಯಾಗಿದ್ದು (ಈಗಿನ 'ನವರಂಗ') ಅಲ್ಲಿ ನರ್ತನ ನಡೆಯುತ್ತಿದ್ದಿತು. ("....ಅನೇಕ ಕೂಟ ಕೋಟೀ ವಿಶಾಲ ಶಾಳಭಂಜಿಕಾರಂಜಿತಮುಂ ನಾಟ್ಯಶಾಳಾಳಂಕ್ರಿತಮುಂ"–ನಾಗಾವಿ ಶಾಸನ. Inscriptions of Andhra Pradesh, Gb.3)

---

[9] EC. VII. Sk. 176, C. 450 A.D.

[10] EC. XII. Tm. 9, 1151 A.D.

[11] SII. IX. i. 159, C. 1090 A.D.

[12] BKI. I. i. 78, 1045 A.D.

[13] EC. V.Ak. 44, 1150 A.D. 'ತತ' ಎಂದರೆ ತಂತಿವಾದ್ಯ ; 'ಶುಷಿರ' (ಸುಶಿರ) ಎಂದರೆ ಗಾಳಿಯ ವಾದ್ಯ ; 'ಘನ' ಎಂದರೆ ಗಟ್ಟಿಯಾದ ವಾದ್ಯ ; 'ವಿತತ' ಎಂದರೆ ಚರ್ಮವಾದ್ಯ. ಇದು ವಾದ್ಯಗಳ ಸಾಂಪ್ರದಾಯಿಕ ವಿಂಗಡಣೆ.

[14] BKI. I. i. 74, 1041 A.D.

[15] EC. IV. Ng. 3, 1135 A.D.

* EI. XXXVII. p. 284.

[16] IA. X.p. 167, C. 850 A.D.

## ಚಿತ್ರಕಲೆ

ಶಿಲ್ಪಿಗಳು ವಾಸ್ತುಶಿಲ್ಪದಲ್ಲಿ ಮಾತ್ರವಲ್ಲದೆ ಚಿತ್ರಕಲೆಯಲ್ಲೂ ಪರಿಣತರಾಗಿದ್ದರು. (ಇದರ ವಿವರಗಳು ಹಿಂದೆಯೇ ಬಂದಿದೆ.) ಕೆಲವು ಕಡೆಗಳಲ್ಲಂತೂ ಚಿತ್ರಕಲೆಯನ್ನು ಸರ್ವಕಲೆಗಳಿಗೂ ಆಧಾರಭೂತವಾದು ದೆಂದು ಹೊಗಳಲಾಗಿದೆ. ("ಸರ್ವ ಕಲಾಧಾರಭೂತ ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯೇಣೇದಂ ಶಾಸನಂ ಲಿಖಿತಂ").[17] ಕದಂಬವಂಶದ ದಯಾಸಿಂಹನು ಚಿತ್ರಕಲೆಯಲ್ಲೂ ಪರಿಣತನಾಗಿದ್ದನು.[18] ರಾಷ್ಟ್ರಕೂಟರ ದೊರೆ ಕೊಟ್ಟಿಗನನ್ನು ಒಂದು ಶಾಸನವು "ಚಿತ್ರವೆಡೆಂಗಂ" ಎಂಬುದಾಗಿ ಹೊಗಳಿದೆ. ತ್ರೈಳೋಕ್ಯಮಲ್ಲ ನನ್ನಿನೊಳಂಬಪಲ್ಲವ ಪೆರ್ಮಾನಡಿಗಳನ್ನು "ಚಿತ್ರವೆಡಂಗಂ" ಎಂದು ಒಂದು ಶಾಸನ ಹೊಗಳಿದೆ. ರಾಜಾಲಯಗಳ, ದೇವಾಲಯಗಳ ಒಳಗೋಡೆಗಳು ಚಿತ್ರಗಳಿಂದ ತುಂಬಿರುತ್ತಿದ್ದುವು. ಏಚ ದಂಡಾಧೀಶನು ದಕ್ಷಿಣದ ಬೆಳ್ಗೊಳದಲ್ಲಿ ಉತ್ತರದ ಕೊಪ್ಪಳದಲ್ಲಿ "ಬಹುಚಿತ್ರ ಭಿತ್ತಿಯಿಂ ನೋಡಿದರಂ ಮನಂ ಗೊಳಿಸುವ" ಬಸದಿಗಳನ್ನು ಕಟ್ಟಿಸಿದಂತೆ ಶಾಸನಗಳು ಹೇಳುತ್ತವೆ.[19] ದೇವಸ್ಥಾನಗಳ ಒಳಗೆ, ಹೊರಗೆ, ವಿಗ್ರಹಗಳ ಮೇಲೆ ಬಣ್ಣಗಳ ಲೇಪನವನ್ನು ಮಾಡುತ್ತಿದ್ದರು. "ವರ್ಣಲೇಖ್ಯಕಲೆ ಪ್ರತಿಮಾ ಶಿಲ್ಪಕಲೆಗೆ ಅಡಿಯಾಳಾಗಿದ್ದಿತು."[19.1] ವಾಸದ ಮನೆಯ ಒಳಭಾಗಗಳನ್ನು ಚಿತ್ರಗಳಿಂದ ಅಲಂಕರಿಸುತ್ತಿದ್ದರು.[20] ಹಾಸನ ತಾಲ್ಲೂಕು ಜಕ್ಕನಹಳ್ಳಿಯ ಕಾಲೇಶ್ವರ ದೇವಸ್ಥಾನ, ಶ್ರವಣಬೆಳಗೊಳದ ಶಾಂತಿನಾಥನ ಬಸದಿ ಇತ್ಯಾದಿ ಕಡೆಗಳಲ್ಲಿ ಇಂದಿಗೂ ಚಿತ್ರಗಳಿವೆ.

## ಶಿಲ್ಪ ಮತ್ತು ವಾಸ್ತು

ಮೂರ್ತಿಶಿಲ್ಪವನ್ನು ಕೊರೆಯುತ್ತಿದ್ದ ಮತ್ತು ದೇವಸ್ಥಾನಗಳನ್ನು ಕಟ್ಟುತ್ತಿದ್ದ ಕಲಾವಿದರನ್ನು 'ಶಿಲ್ಪಿ' ಗಳೆಂದು 'ರೂವಾರಿ' ಗಳೆಂದು ಕರೆಯುತ್ತಿದ್ದರು (ಶಿಲ್ಪಿಗಳ ವಿವರಗಳಿಗೆ-ಹಿಂದೆ ನೋಡಿ).[20.1] ಇವರಲ್ಲಿ ಹಲವರು "ಹೇಮಕರ್ಮ ಲೋಹಕರ್ಮ ಶಿಲಾಕರ್ಮ ರತ್ನಕರ್ಮ ಕಾಷ್ಟಕರ್ಮ ಚಿತ್ರಕರ್ಮ ಪತ್ರಕರ್ಮ (=ಪತ್ರಚ್ಛೇದ) ಪ್ರತಿಮಾಲಕ್ಷಣ ಹಸ್ತಕುಶಲತೆ" ಯುಳ್ಳವರಾಗಿದ್ದರು.[21] 'ಗುಣಪಾ....ರ್ಯ' ಎಂಬ ಒಬ್ಬ ಶಿಲ್ಪಶಾಸ್ತ್ರದ ಗ್ರಂಥಕರ್ತೃವಿನ ಹೆಸರು ಶಾಸನದಲ್ಲಿದೆ.[22] ಇವನ ಗ್ರಂಥದ ಹೆಸರು ತಿಳಿಯದು. ಶಿಲ್ಪಶಾಸ್ತ್ರಕ್ಕೆ ಸಂಬಂಧಿಸಿದ ಯಾವ ಕೃತಿಯ ಹೆಸರೂ ಶಾಸನಗಳಲ್ಲಿ ಉಕ್ತವಾಗಿಲ್ಲ.

---

[17] EC. IV. Ng. 87, 776 A.D.; EC. IX. Nl. 60, 797 A.D. ಕ್ರಿ. ಶ. 749ರ ತಾಮ್ರಪಟಗಳಲ್ಲಿ ಬಂದಿರುವ ವಿಶ್ವಕರ್ಮಾಚಾರ್ಯನೇ ಮೇಲಿನ ತಾಮ್ರಪಟಗಳನ್ನು ಬರೆದ ವ್ಯಕ್ತಿಯಾಗಿರಬೇಕು. ಈ ತಾಮ್ರಪಟಗಳಲ್ಲಿ ಹೀಗಿದೆ—"ಸರ್ವಕಲಾಂತಜ್ಞಾಪ್ತಿ ಚಿತ್ರಕಲಾಭಿಜ್ಞೇನ ವಿಶ್ವಕರ್ಮಾಚಾರ್ಯೇಣೇದಂ ಶಾಸನಂ ಲಿಖಿತಂ"

[18] EC. V. Mj. 18, 1095 A.D.

[19] EC. II. 384, C. 1135 A.D.; EC. V. Cn. 248, C. 1134 A.D.

[19.1] ಎಂ. ಎಚ್. ಕೃಷ್ಣ: ಕರ್ಣಾಟಕ ಕಲೆಗಳು (ಕನ್ನಡ ನಾಡಿನ ಚರಿತ್ರೆ, III), ಪು. 37.

[20] EC. VIII. Sb. 262, 1077 A.D.

[20.1] ಕ್ರಿ. ಶ. 1185ರ ಲಕ್ಕುಂಡಿ ಶಾಸನದಲ್ಲಿ (SII. XV. No. 67) ಶಿಲ್ಪಿಗಳಿಗೆ ಸಂಬಂಧಿಸಿದ ಅನೇಕ ವಿವರಗಳಿವೆ. ಆ ಊರಲ್ಲಿ ಅವರ 'ಕೊತ್ತಳಿ' ಯೇ (guild) ಇದ್ದಿತೆಂದು ಕಾಣುತ್ತದೆ. ಅಲ್ಲಿಯ ನೂರಿಪ್ಪತ್ತು ಶಿಲ್ಪಿಗಳಲ್ಲಿ 'ಅಚ್ಚಿನ ಮೊಳೆಯವರು,' 'ಜೆಳ್ಳಿಗಮ್ಮಟ' ದವರು ಬಡಗಿ, ಕಮ್ಮಾರರು ಇದ್ದರು. 'ಪತ್ರಚಿತ್ರಕುಶಳ' ರಾಗಿದ್ದ ಅವರು 'ಕಮ್ಮಟಜಿನಾಲಯ' ಕ್ಕೆ ದತ್ತಿ ಕೊಡುತ್ತಾರೆ. "ರೂವಾರಿಗಳು ಪ್ರತುಮೆಗಳ ಮಾಡುವ ಬೆಲೆ ಕಟ್ಟಿದಲಿ ಹೊನ್ನ ಬಳಿಯ ಬೀಳೆಯ ಕುಡುವರು 2" ಎಂದು ಅಲ್ಲಿದೆ. ರೂವಾರಿಗಳು ಪ್ರತಿಮೆಗಳನ್ನು ಮಾಡಿ ಮಾರಿದಾಗ ಬರುವ ಹೊನ್ನಿನಲ್ಲಿ ಒಂದು ಭಾಗವನ್ನು ಕೊಡಬೇಕೆಂಬ ಅರ್ಥ ಇರುವಂತಿದೆ.

[21] EC. IV. Kp. 68, 1116 A.D.

[22] SII.IX. i. 165, 1099 A.D.

ಶಿಲ್ಪಿಗಳ ವಿಶೇಷಣಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದದ್ದು ಎರಡು. ಒಂದು–ವಿನಯ ಸೂಚಕವಾದ "ಸರಸ್ವತೀಗಣ ಪಾದಪಂಕಜ ಭ್ರಮರಂ"[23] ಅಥವಾ ಅದೇ ಅರ್ಥದ "ಸರಸ್ವತೀಗಣ ದಾಸಿ"[24] ಎಂಬುದು. ಇನ್ನೊಂದು—ಪ್ರತಿಸ್ಪರ್ಧಿಗಳಿಗೆ ಸವಾಲು ಹಾಕುವಂತಿರುವ "ಬಿರುದ ರೂವಾರಿ" ಅಥವಾ "ರೂವಾರಿ ಭೈರವ" ಎಂಬುದು.[25] ಇದರಲ್ಲಿ ಹಲವಾರು ತಾವು 'ವಿದ್ಯಾವಂತ'ರೆಂಬುದನ್ನು ಹೇಳಿಕೊಂಡಿದ್ದಾರೆ. ಉದಾಹರಣೆಗೆ—"....ವಿದ್ಯಾವಂತ ಪೊಯ್ಸಳಾಚಾರಿ ಆತನ ಮಗಂ ಪೊಯ್ಸಳಾಚಾರಿ ಆತಂ ಮಾಡಿದ ಬಸದಿ ಉಳಿಬಳ್ಳಿಡಿವರ ಚಟ್ಟಂ"[26]. "ವಿದ್ಯಾವಂತ ರೂವಾರಿಪುಲಿ ಮಚ್ಚರಿಪ ಕುಮಾರಮಾಚಾರಿ ಗಿರಿವಜ್ರದಂಡ"[27]; ಮರುಳೋಜ ಎಂಬ ಶಿಲ್ಪಿ ತನ್ನನ್ನು 'ಪ್ರಾಸಾದ ಚಕ್ರವರ್ತಿ' ಎಂದು ಒಂದು ಶಾಸನದಲ್ಲಿ ಕರೆದುಕೊಂಡಿದ್ದಾನೆ.[27.1]

ಇವರು ಲೋಹದಲ್ಲಿ ಮತ್ತು ಶಿಲೆಯಲ್ಲಿ ಮಾಡಿದ ಮೂರ್ತಿಗಳ ಉಲ್ಲೇಖ ಹಲವು ಶಾಸನಗಳಲ್ಲಿದೆ. ಜೈನಧರ್ಮದ ಏಳಿಗೆಗಾಗಿ ಬಹುಧನವನ್ನು ವ್ಯಯಿಸಿದ ಪಟ್ಟಣಸ್ವಾಮಿ ನೊಕ್ಕಯ್ಯನು ಮಾಹುರ ಎಂಬ ಊರಲ್ಲಿ ದೇವರ ವಿಗ್ರಹಗಳನ್ನು ಎರಕಹೊಯ್ಯಿಸಿ ಅವುಗಳಿಗೆ ರತ್ನಗಳನ್ನು ಖಚಿಯಿಸಿ, ಚಿನ್ನದ ಬೆಳ್ಳಿಯ ಹವಳದ ಮಹಾಮಣಿಯ ಪಂಚಲೋಹಗಳಲ್ಲಿ ಪ್ರತಿಮೆಗಳನ್ನು ಮಾಡಿಸಿದ ಸಂಗತಿ ಒಂದು ಶಾಸನದಲ್ಲಿದೆ. ("ಸಮ್ಯಕ್ತ್ವ ವಾರಾಸಿಯುಮೆನಿಸಿದ ಪಟ್ಟಣಸ್ವಾಮಿ ನೊಕ್ಕಯ್ಯಂ ಮಾಹುರದೊಳು ದೇವರವಲ್ಲಭರನೆಱಗಿಸಿ ರತ್ನಂಗಳಂ ಖಚಿಯಿಸಿ ಪೊನ್ನ ಬೆಳ್ಳಿಯ ಪವಳದ ಮಹಾಮಣಿಯ ಪಂಚಲೋಹದೊಳಂ ಪ್ರತಿಮೆಗಳಂ ಮಾಡಿಸಿದಂ"[28]. ಅತ್ತಿಮಬ್ಬೆಯು ಮಣಿಖಚಿತವಾದ ಸಾವಿರದ ಐನೂರು ಜೈನಪ್ರತಿಮೆಗಳನ್ನು ಮಾಡಿಸಿದ ಸಂಗತಿ ಲಕ್ಕುಂಡಿ ಶಾಸನದಲ್ಲಿದೆ.[29] ಅನೇಕ ಶಿಲಾವಿಗ್ರಹಗಳ ಪೀಠಗಳ ಮೇಲೆ ಅವುಗಳನ್ನು ಕೆತ್ತಿದ ಶಿಲ್ಪಿಗಳ ಹೆಸರುಗಳು ಲಿಖಿತವಾಗಿರುವುದುಂಟು. ಕೊಪ್ಪಳದ ಬೆಟ್ಟದ ಮೇಲಿನ ಒಂದು ವಿಗ್ರಹದ ಪೀಠದಲ್ಲಿ "ಶ್ರೀ ಮೂಲ ಸಂ ದ ಬಲಾತ್ಕಾರ ಗ ದ ಪುಷ್ಪದಂತ ತೀರ್ಥಕರ ಸೌದದಲಿ ಬೊಮ್ಮಿ [ಸ] ಮಗ ಸಾಮ್ಯಜ ಮಾಡಿದ ಪ್ರತಿಮೆ"[30] (ಸಂ=ಸಂಘ, ಗ=ಗಣ). ಬೇಲೂರಿನ ಚನ್ನಕೇಶವ ದೇವಸ್ಥಾನದ ಮದನಿಕಾ ವಿಗ್ರಹಗಳ ಪೀಠಗಳ ಮೇಲೆ ಶಿಲ್ಪಿಗಳ ಹೆಸರುಗಳಿವೆ. ಚಿಕ್ಕಹಂಪ, ದಾಸೋಜ, ಮಲ್ಲಿಯಣ್ಣ, ಮಲ್ಲೋಜ, ಕೆಂಚ ಮಲ್ಲಿಯಣ್ಣ, ಕುಮಾರಮಾಚಾರಿ, ನಾಗೋಜ, ಚಾವಣ—ಇವರು ಆ ಶಿಲ್ಪಿಗಳಲ್ಲಿ ಕೆಲವರು.[31] ಗೊಮ್ಮಟನ ವಿಗ್ರಹವನ್ನು ಚಾವುಂಡರಾಯನು ಹತ್ತನೇ ಶತಮಾನದ ಉತ್ತರಾರ್ಧದಲ್ಲಿ ಕೊರೆಯಿಸಿದನು. ಈ ಸಂಗತಿ

---

[23] EC. VII. Sk. 293, 1080 A.D.

[24] EC. XV. Bl. 257, C. 1140 A.D.

[25] BKI. I. i. 48, 1002 A.D.

[26] EC. VI. Mg. 13, 1063 A.D. ಎರಡನೆಯ ಪೊಯ್ಸಳಾಚಾರಿಯು ತಾನು "ಉಳಿಬಳ್ಳಿಡಿವರ ಚಟ್ಟಂ" ಎಂದು ಕರೆದುಕೊಂಡಿದ್ದಾನೆ. ಅವನು ಉಳಿಯನ್ನು 'ಬಳ್ಳಿ'ಯನ್ನು ಹಿಡಿಯುವವರ, ಎಂದರೆ ಬಹುಶಃ ಶಿಲ್ಪಿಗಳ ಶಿಷ್ಯ ನಾನು ಎಂದು ವಿನಯದಿಂದ ಹೇಳಿಕೊಂಡಿದ್ದಾನೆ. ಇತರ ಶಿಲ್ಪಿಗಳ ವಿಷಯದಲ್ಲಿ ವ್ಯಕ್ತವಾಗಿರುವ ಇಂತಹ ವಿನಯವು ಶಾಸನಗಳಲ್ಲಿ ಅಪೂರ್ವ.

[27] EC. V. Bl. 17, C. 1120 A.D.

[27.1] EI. XVI. p. 28, 1010 A.D.

[28] EC. VIII. Nr. 58, 1062 A.D.

[29] BKI. I. i 52, 1007 A.D.—"ಪರಮ ಶ್ರೀ ಜಿನನಾಥಗೇಹ ವಿಳಸಚ್ಚಂದೋಹ ಸಂದೋಹ ಭಾಸುರ ಜೈನಪ್ರತಿಮಾ ವಿಚಿತ್ರಮಣಿ ಘಂಟಾಮಾಳಿಕಾ ಸಂಖೆ ಸಾಯಿರದಯ್ನೂಱುವು ಬೇಱವೇಱನಿಪಿನಂ ನಿರ್ಮಾಪಣಂಗೆಯ್ದು ಭೂಭರದೊಳ್ ಧರ್ಮಮನತ್ತಿಮಬ್ಬೆವೊಲಿನ್ನಾರುಜ್ವಳಂ ಮಾಡಿದರ್"

[30] JISI. No. 25, C. 1100 A.D.

[31] EC. V. Bl. 17; EC. XV. Bl. 256, C. 1140 A.D.

ಆ ವಿಗ್ರಹದ ಪಾದಗಳ ಬಳಿ ಮೂರು ಭಾಷೆಗಳಲ್ಲಿ ಉಕ್ತವಾಗಿದೆ.[32] ಭರತೇಶ್ವರ ದಂಡಾಧಿನಾಥನು ಭುಜಬಲಿಯ ವಿಗ್ರಹವನ್ನು ಮಾಡಿಸಿದ ಸಂಗತಿ ಶಾಸನವೊಂದರದಲ್ಲಿದೆ.[33]

ಐಹೊಳೆ, ಪಟ್ಟದ ಕಲ್ಲುಗಳು ಚಾಳುಕ್ಯ ಶೈಲಿಯ ದೇವಸ್ಥಾನಗಳಿಗೆ ಅತ್ಯಂತ ಪ್ರಸಿದ್ಧ ಕೇಂದ್ರಗಳಾಗಿವೆ. ಅಲ್ಲಿ ದೊರಕಿರುವ ಶಾಸನಗಳಲ್ಲಿ ಮೂವರು ವಾಸ್ತುಶಿಲ್ಪಿಗಳ ಹೆಸರುಗಳು ಕಂಡುಬರುತ್ತವೆ. ಅವರು ಆ ಕಾಲಕ್ಕೆ ಅತ್ಯಂತ ಪ್ರಸಿದ್ಧರು. ಇಡೀ ಜಂಬೂದ್ವೀಪದಲ್ಲಿ ನರಸೊಬ್ಬನಂತಹ ವಾಸ್ತು ವಿದ್ಯಾಕುಶಲಿ ಹಿಂದೆಯೂ ಇರಲಿಲ್ಲ, ಮುಂದೆಯೂ ಬರಲಾರರು ಎಂದು ಐಹೊಳೆಯ ಒಂದು ಶಾಸನವು ಹೊಗಳುತ್ತದೆ.[34] ಇನ್ನೊಬ್ಬ ಶಿಲ್ಪಿಯ ಹೆಸರು ಗುಂಡ. ವಿಕ್ರಮಾದಿತ್ಯ ಸತ್ಯಾಶ್ರಯನ ರಾಣಿ ಲೋಕಮಹಾದೇವಿಯು ಪಟ್ಟದಕಲ್ಲಿನಲ್ಲಿ ಲೋಕೇಶ್ವರ (ಈಗಿನ ವಿರೂಪಾಕ್ಷ) ದೇವಾಲಯವನ್ನು ಕಟ್ಟಿದ್ದಕ್ಕೆ ಅವನಿಗೆ ಮೂರು ಬಾರಿ ಉತ್ಸವವನ್ನು ಮಾಡಿ ಪಟ್ಟವನ್ನು ಕಟ್ಟಿ 'ತ್ರಿಭುವನಾಚಾರಿ' ಎಂದು ಹೆಸರಿಟ್ಟ ವಿಷಯವು ಒಂದು ಶಾಸನದಲ್ಲಿದೆ.[35] ಅವನಿಗೆ ದೇವಸ್ಥಾನ ನಿರ್ಮಾಣದಲ್ಲಿ ಸಹಾಯಮಾಡಿದ ಕುಶಲಕರ್ಮಿಗಳಿಗೆ ('ಬಿನ್ನಾಣಿಗಳ್') ಕೆಲವು ಸೌಲಭ್ಯಗಳನ್ನು ರಾಣಿ ಬಿಟ್ಟುಕೊಟ್ಟಿದ್ದಾಳೆ. ಅದೇ ಪಟ್ಟದಕಲ್ಲಿನ ಇನ್ನೊಂದು ಶಾಸನದಲ್ಲಿ ಸರ್ವಸಿದ್ಧಿ ಆಚಾರ್ಯ ಎಂಬ ಶಿಲ್ಪಿಯ ಹೆಸರಿದೆ. ಇವನು ವಾಸ್ತುಶಿಲ್ಪದಲ್ಲಿ ಮಾತ್ರವಲ್ಲದೆ ಪುರನಿರ್ಮಾಣ ವಿದ್ಯೆಯಲ್ಲೂ ಪ್ರೌಢಿಮೆಯನ್ನು ಸಂಪಾದಿಸಿದ್ದನು. ಇವನು ವಾಸ್ತುಪ್ರಾಸಾದ, ಯಾನ, ಆಸನ, ಶಯನ, ಮಣಿಮಕುಟ ಇವುಗಳನ್ನು ಕಟ್ಟುವುದರಲ್ಲಿ ಕೆತ್ತುವುದರಲ್ಲಿ ಬಹು ಕೌಶಲವನ್ನು ಸಂಪಾದಿಸಿದ್ದನು. ಇವನು 'ತೆಂಕಣದಿಶೆಯಾ ಸೂತ್ರಧಾರಿ', ಎಂದರೆ ಬಹುಶಃ ದಕ್ಷಿಣ ಭಾರತದಿಂದ, ತಮಿಳುನಾಡಿನಿಂದ ಬಂದವನು.[36] ಇವನ ಶಿಷ್ಯ ರೆವಡಿ ಒವಜ್ಜ, ಪಟ್ಟದಕಲ್ಲಿನ ಪಾಪನಾಥದೇವಾಲಯವನ್ನು ಕಟ್ಟಿದ ಶಿಲ್ಪಿ.[37] ಇವರೆಲ್ಲ ಬಹುಶಃ ತಮಿಳುನಾಡಿನಿಂದ ಬಂದ

---

[32] ಕನ್ನಡದಲ್ಲಿ—"ಶ್ರೀ ಚಾಮುಂಡರಾಜಂ ಮಾಡಿಸಿದಂ" (EC. II. 175); ತಮಿಳಲ್ಲಿ— "ಶ್ರೀ ಚಾಮುಂಡರಾಜನ್ ಶೆಯ್ವಿತ್ತಾನ್" (EC.II. 176); ಮರಾಠಿಯಲ್ಲಿ–"ಶ್ರೀ ಚಾಮುಂಡರಾಜೇಂ ಕರವಿಯಲೇಂ" (EC. II. 179). ಗೊಮ್ಮಟನ ವಿಗ್ರಹವನ್ನು ಕುರಿತು ಜೇಮ್ಸ್ ಫರ್ಗೂಸನ್ ಹೀಗೆ ಹೇಳುತ್ತಾರೆ—"Nothing grander or more imposing exists anywhere out of Egypt, and even there no known statue surpasses in height though, it must be confessed, they do excell in the perfection of art they exhibit (History of Indian and Eastern Architecture, II. p. 72).

[33] EC. II. 265, C. 1145 A.D.

[34] IA. IX. p. 74, C. 750 A.D.–"ಜಂಬುದ್ವೀಪಾಂತರೇ ಕಶ್ಚಿತ್ ವಾಸ್ತುಪ್ರಾಸಾದ ತದ್ಗತಃ। ನರಸೊಬ್ಬ ಸಮೋ ವಿದ್ವಾನ್ ನ ಭೂತೋ ನ ಭವಿಷ್ಯತಿ ॥"

[35] IA. X. p. 164, C. 750 A.D.–"ಸ್ವಸ್ತಿ ಶ್ರೀ ವಿಕ್ರಮಾದಿತ್ಯ ಶ್ರೀ ಪೃಥ್ವೀವಲ್ಲಭ ಮಹಾದೇವಿಯರಾ ದೇಗುಲಮಾನ್ ಮಾಡಿದ ಸೂತ್ರಧಾರಿ ಶ್ರೀ ಗುಂಡನನಿವಾರಿತಾಚಾರಿಗೆ ಮೂಮೆ ಪೆರ್ಜೆಱಪು ಪಟ್ಟಮು ತ್ರಿಭುವನಾಚಾರಿಯೆಂದು ಪೆಸರಿಟ್ಟು ಪ್ರಸಾದಂಗೆಯ್ದಾ ಪೃಥಿವಿಯಾ ಬಿನ್ನಾಣಿಗಳಾ ಬಳ್ಳಿಗವಾರ್ತೆ ಇಲ್ಲ ದೋಸಿಗನ ಕವದ್ದುಬಿದೊರ್ಗೆ ಪರಿಹಾರಂ."

[36] ಅದೇ,–"ಸ್ವಸ್ತಿ ಶ್ರೀ ಸರ್ವಸಿದ್ಧಿ ಆಚಾರಿ ಸಕಲಗುಣಾಶ್ರಯ ಅನೇಕ ರಪು (=ಪುರ) ವಾಸ್ತು ಪಿತಾಮಹನ್ ಸಕಲ ನಿಷ್ಕಲ ಸೂಕ್ಷ್ಮಾತಿಭಾಷಿತನ್ ವಾಸ್ತು ಪ್ರಾಸಾದ ಯಾನಾಸನ ಶಯನ ಮಣಿಮಕುಟ ರತ್ನ ಚೂಡಾಮಣಿ ತೆಂಕಣ ದಿಶೆಯಾ ಸೂತ್ರಧಾರಿ."

[37] IA. X. p. 170.–"ಸ್ವಸ್ತಿ ಶ್ರೀ ಶಿಲೇಮುಂದ್ದರ ಮರ್ಮಾನ್ ಸರ್ವಸಿದ್ಧಿ ಆಚಾರ್ಯರ ಚಟ್ಟರ್ ರೆವಡಿ ಒವಜ್ಜರ್ ತೆಂಕಣದಿಶೆ ಮಾಡಿಪೊರ್." ಮರ್ಮಾನ್=ನೊಮ್ಮಗ. ಒವಜ್ಜ<ಸಂ. ಉಪಾಧ್ಯಾಯ. ಶಿಲ್ಪಿಗಳ ಹೆಸರುಗಳ ಮುಂದೆ ಬರುವ 'ಓಜ' ಎಂಬ ಭಾಗದ ಹಿಂದಿನರೂಪವೇ 'ಒವಜ್ಜ'. [ಸರ್ವಸಿದ್ಧಿ ಆಚಾರಿಯು ವಿರೂಪಾಕ್ಷ ದೇವಸ್ಥಾನದ ದಕ್ಷಿಣ ಭಾಗದ ಸೂತ್ರಧಾರಿ ಎಂದೂ, ಅವನ ಶಿಷ್ಯ ರೇವಡಿ ಒವಜ್ಜ ಪಾಪನಾಥ ದೇವಾಲಯದ ದಕ್ಷಿಣ ಭಾಗವನ್ನು ಮಾಡಿದ ಶಿಲ್ಪಿ ಎಂದೂ ವ್ಯಾಖ್ಯಾನಿಸಬಹುದು. ಇದು ಸರಿಯಾದರೆ, ಇವರು ತಮಿಳು ನಾಡಿನವರು ಎಂಬ ಮೇಲಿನ ವಾದವನ್ನು ಮಾರ್ಪಡಿಸ ಬೇಕಾಗುತ್ತದೆ.]

ಶಿಲ್ಪಿಗಳು. ಈ ಊಹೆಯನ್ನು ದೃಢಪಡಿಸುವಂತೆ ಅಲ್ಲಿಯ ಅನೇಕ ವಿಗ್ರಹಗಳ ಹೆಸರುಗಳು ತಮಿಳು ಭಾಷೆಯ ಉಚ್ಚಾರಣೆಯಲ್ಲಿವೆ. ಈ ಶಾಸನಗಳಲ್ಲಿ ಬರುವ ' ಸೂತ್ರಧಾರಿ ' ಎಂಬುದು ಶಿಲ್ಪಿಗಳ ಮುಖ್ಯಸ್ಥನನ್ನು ಸೂಚಿಸುತ್ತದೆ. ಅವನು ಈಗಿನ 'architect' ಇದ್ದಂತೆ. ಸೂತ್ರಧಾರಿಯಾಗಿದ್ದ ಬರ್ಮ ಎಂಬ ಹೆಸರಿನ ಶಿಲ್ಪಿಯ ಹೆಸರು ಒಂದು ಶಾಸನದಲ್ಲಿದೆ.[38]

ಶಾಸನಗಳಲ್ಲಿ ದೇವಸ್ಥಾನಗಳ ವರ್ಣನೆಗಳು ಬಹಳ ಕಡಿಮೆ. ವರ್ಣನೆಗಳು ಬಂದರೂ ಅವು ವಾಸ್ತವ ಚಿತ್ರವನ್ನು ಕೊಡುವುದಿಲ್ಲ; ಉತ್ಪ್ರೇಕ್ಷೆಗಳಿಂದ ಕೂಡಿರುತ್ತವೆ. ಅತ್ತಿಮಬ್ಬೆ ಲಕ್ಕುಂಡಿಯಲ್ಲಿ ಕಟ್ಟಿಸಿದ ಜಿನಭವನವು ಎತ್ತರದಲ್ಲಿ ಸ್ವರ್ಗವನ್ನು ಮೀರಿದ್ದಿತು ; ಅದರ ಅಡಿಪಾಯವು ನಾಗಲೋಕವನ್ನು ದಾಟಿ ಹೋಗಿದ್ದಿತೆಂದು ಶಾಸನವು ಬಣ್ಣಿಸುತ್ತದೆ.[39] ಕುಪ್ಪಟೂರಿನ ಕೋಟೀಶ್ವರ ದೇವಾಲಯವು ವಿಶ್ವಕರ್ಮನೇ ಭಕ್ತಿಭಾವದಿಂದ ತಾನೇ ಬಂದು ದೇವಸ್ಥಾನವನ್ನು ಕಟ್ಟಿದನೋ ಏನೋ ಎಂಬಂತೆ ಅನೇಕ ಚಿತ್ರಗಳಿಂದ, ಭದ್ರ ಪ್ರಾಕಾರಗಳಿಂದ, ಚಿನ್ನದ ಮಣಿಖಚಿತವಾದ ಕಳಶಗಳಿಂದ ಮೇಘವನ್ನು ಚುಂಬಿಸುತ್ತ ಶೋಭಿಸುತ್ತಿದ್ದಿತು.[40] ಕಲ್ಲಿನಲ್ಲಿ ಬಾವಿಯನ್ನು ಕಟ್ಟಿಸಿ, ಅದರಲ್ಲಿ ಒಂದು ಮನೋಹರವಾದ ಶಿವದೇವಾಲಯವನ್ನು ( ' ಚಾರುಶಿವಗೃಹ ') ನಿರ್ಮಿಸಿದ ವಿಷಯ ಕ್ರಿ. ಶ. 1147 ರ ಒಂದು ಶಾಸನದಲ್ಲಿದೆ.[40.1] ದೇವಸ್ಥಾನ ನಿರ್ಮಾಣಕ್ಕೆ ಬಹುವಾದ ಹಣವು ವ್ಯಯವಾಗುತ್ತಿದ್ದಿತು ; ಸಾವಿರಾರು ಜನರು ಕಷ್ಟಪಟ್ಟು ದುಡಿಯುತ್ತಿದ್ದರು. ಅದರ ಒಂದು ಚಿತ್ರ ಶಾಸನವೊಂದರಲ್ಲಿದೆ. ಆ ದೇವಸ್ಥಾನದ ಇಟ್ಟಿಗೆಗಾಗಿ ಅಗೆದ ಗುಂಡಿಗಳು ಕೆರೆಯಾದವು, ಕಲ್ಲುಗಳಿಗಾಗಿ ಒಡೆದ ಪರ್ವತಗಳು ನೆಲಸಮವಾದುವು, ಸುಣ್ಣದ ಬಂಡಿಗಳು ಓಡಾಡಿದ ದಾರಿಗಳು ಹಳ್ಳಗಳಾದುವು ಎಂದು ಆ ಶಾಸನವು ಬಣ್ಣಿಸುತ್ತದೆ.[41] ಸು. 1142ರ ಒಂದು ಶಾಸನದಲ್ಲಿ ಜಿನಾಲಯವೊಂದನ್ನು ಕಟ್ಟಿಕೊಟ್ಟದ್ದಕ್ಕೆ ಮಾಚೋಜ ಎಂಬ ಶಿಲ್ಪಿಗೆ ' ಕಲುಕಣಿನಾಡ ಆಚಾರ್ಯ ಕಲಿಯುಗ ವಿಸ್ವಕರ್ಮ ' ಎಂಬ ಹೆಸರು ಕೊಟ್ಟ ಸಂಗತಿ ಶಾಸನವೊಂದರಲ್ಲಿದೆ.[42] (' ತ್ರಿಭುವನಾಚಾರಿ ' ಎಂಬ ಹೆಸರನ್ನು ಗುಂಡನಿಗೆ ಕೊಟ್ಟದ್ದನ್ನು ಇಲ್ಲಿ ಸ್ಮರಿಸಬಹುದು). ದೇವಸ್ಥಾನದ ನಿರ್ಮಾಣ ಮುಕ್ತಾಯಕ್ಕೆ ಬರುತ್ತಿದ್ದುದು ' ಕಳಸನಿರ್ಬಾಣ ' ವಾದಾಗ.[43]

ಕ್ರಿ. ಶ. 1112ರಲ್ಲಿ ಇಟ್ಟಗಿಯಲ್ಲಿ ಮಹಾದೇವ ದಂಡನಾಯಕನು ಮಹಾದೇವ ದೇವಾಲಯವನ್ನು ಕಟ್ಟಿಸಿದನು. ಇದೊಂದು ಅತ್ಯಂತ ಸುಂದರವಾದ ದೇವಸ್ಥಾನ. ಇದನ್ನು ಹೇಳುವ ಶಾಸನವು ದೇವಾಲಯವನ್ನು

[38] BKI. I. ii. 151, 1102 A.D.

[39] BKI. I. i. 52, 1007 A.D.

[40] EC. VIII. Sb. 276, 1070 A.D.

[40.1] SII. IX. i. No. 249. ಇಂತಹ ಬಾವಿಯೊಳಗಿನ ದೇವಾಲಯವನ್ನು ಲಕ್ಕುಂಡಿಯಲ್ಲಿ ನೋಡಿದ ನೆನಪು ಈ ಲೇಖಕನಿಗಿದೆ.

[41] EC. II. 142, 1139 A.D.–" ಇಟ್ಟಗೆಗೆಂದಗಳ್ದ ಕುೞಿಗಳ್ ಕೆಱೆಯಾದುವು ಕಲ್ಲುಗೆಗೊಂಡ ಪೆರ್ವೆಟ್ಟು ಧರಾತಳಕ್ಕೆ ಸರಿಯಾದವು ಸುಣ್ಣದ ಭಂಡಿ ಪೋದ ಪೆರ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ ನೆಟ್ಟನೆ ಪೊಯ್ಸಳನೆನೆ ಬಣ್ಣಿಪರಾರ್ ಮಲೆರಾಜ ರಾಜನಂ".

[42] EC. IV. Ng. 25, C. 1142 A.D.

[43] EI. XV. p. 87, 1058 A.D. ಹದಿನೈದನೇ ಶತಮಾನದ ಶಾಸನವೊಂದರಲ್ಲಿ (KI. I. p. 93, 1419 A.D.) ಬಸದಿಗೆ ಅಡಿಪಾಯವನ್ನು ಹಾಕಿ ಕೆಲಸವನ್ನು ಆರಂಭಿಸು ಎಂಬರ್ಥದಲ್ಲಿ ' ಕೆಸಱುಗಲ್ಲನಿಕ್ಕು ' ಎಂಬ ಮಾತು ಬಂದಿದೆ. ' ಕಳಸನಿರ್ವಾಣ ಮಾಡು ' ಎಂಬುದು ದೇವಸ್ಥಾನನಿರ್ಮಾಣಕಾರ್ಯ ಮುಗಿದದ್ದನ್ನು ಹೇಳುತ್ತದೆ. (KI. IV. No. 3, 1114, A.D. ಇಲ್ಲಿಯ ' ಕಳಶ ನಿರ್ಮಾಣ ' ಎಂಬುದು ' ಕಳಶ ನಿರ್ವಾಣ ' ಎಂದಿರಬೇಕು.) ನೋಡಿ—" ಶ್ರೀ ಮದಗ್ರಹಾರ ಕಬ್ಬೂರ ವಾಯುವ್ಯದ ಭಾಗದ ಭೂಮಿಯಲಿ ಶ್ರೀಮದವಿಮುಕ್ತೇಶ್ವರ ದೇವರ ದೇಗುಲವಂ ಮಾಡಿಸಿ ಕಳಸ ನಿರ್ವಾಣ ಮಾಡಿಸಿ ..." (EC. XI. Dg. 156, 1114 A.D.)[ನಿರ್ವಾಣ= ಕೊನೆ, ಬಿಡುಗಡೆ, unveiling (?)]

[44] EI. XIII. p. 41, 1112 A.D.

ನಾನಾವಿಧವಾಗಿ ಬಣ್ಣಿಸಿದೆ. ದೇವಸ್ಥಾನವನ್ನು 'ದೇವಾಲಯ ಚಕ್ರವರ್ತಿ' ಎಂದು ಕರೆದಿದೆ.[44] ದೇವಸ್ಥಾನದ ಭಾರವನ್ನು ಹೊರುವ ಕಂಬಗಳನ್ನು 'ತಳಗಂಬ' ಗಳೆಂದು ಕರೆದಿದೆ. ಶಿಲಾವಿಗ್ರಹಗಳಿಗೆ ಬಣ್ಣಗಳ ಲೇಪನವನ್ನು ಮಾಡುತ್ತಿದ್ದುದಕ್ಕೆ ಇಲ್ಲಿ ಸೂಚನೆಯಿದೆ.[45] ಈ ದೇವಸ್ಥಾನವು ಅಪೂರ್ವವಾದುದು; ಬ್ರಹ್ಮನೂ ಇಂತಹುದನ್ನು ನಿರ್ಮಿಸಲಾರ; ವಿಶ್ವಕರ್ಮನ ಕರ್ಮಕ್ಕೆ ಇದು ಗುರು ಎಂದು ನೋಡಿದವರೆಲ್ಲರೂ ಆಶ್ಚರ್ಯಪಡುತ್ತಿದ್ದರು. ಹೀಗೆ ಶಾಸನವು ಅದರ ಚೆಲುವನ್ನು ಬಣ್ಣಿಸಿದೆ.[46] ಇಷ್ಟೇ ಪ್ರಸಿದ್ಧ ದೇವಾಲಯ ಸು. 1113 ರಲ್ಲಿ ಕುಲ್ಲಣ ರಾವುತ ಮತ್ತು ಅವನ ಪತ್ನಿ ಸಹಜಾದೇವಿಯರು ದೊಡ್ಡಗದ್ದವಳ್ಳಿಯಲ್ಲಿ ಕಟ್ಟಿಸಿದ ಮಹಾಲಕ್ಷ್ಮೀ ದೇವಸ್ಥಾನ. ಇದರ ಶಿಲ್ಪಿಗಳು ಮಲ್ಲೋಜ ಮಾಣಿಯೋಜರು. ಶಾಸನದ ಕೊನೆಯಲ್ಲಿ ಈ ವಾಕ್ಯವಿದೆ-''ವಿಮಾನ ಸರ್ವತೋಭದ್ರ ವ್ರಿಸ್ವಭಾವಳಿ ಶಿಕ್ತಂ ಉತ್ತುಂಗ ವೈರಾಜ ಗರುಡ ವರ್ಧಮಾನ ಶಂಖ ವ್ರಿತ್ತ ಪುಷ್ಪಕ ಗ್ರಿಹ ರಾಜ ಸ್ವಸ್ತಿ"[47] ಇವು ಯಾವುದೋ ಶಿಲ್ಪಶಾಸ್ತ್ರದ ಉಕ್ತಿಗಳಿರಬೇಕು. ಕ್ರಿ. ಶ. 1117ರಲ್ಲಿ ವಿಷ್ಣುವರ್ಧನನು ಕಟ್ಟಿಸಿದ ಬೇಲೂರಿನ ಚನ್ನಕೇಶವ ದೇವಾಲಯವು ಕರ್ನಾಟಕದ ಅತ್ಯಂತ ಸುಂದರ ದೇವಾಲಯಗಳಲ್ಲೊಂದು. ಇದನ್ನು ಬೇಲೂರಿನ ಶಾಸನವು[48] ಚಮತ್ಕಾರವಾದ ರೀತಿಯಲ್ಲಿ ವರ್ಣಿಸುತ್ತದೆ-'' ಸ್ವಸ್ತಿ ಮಂಗಳಾಭ್ಯುದಯ-ಕರ ಲಕ್ಷಣ ಲಕ್ಷಿತಮುಂ । ಶಬ್ದವಿದ್ಯೆಯಂತೆ ಸೂತ್ರಮುಖಸಿದ್ಧಮುಂ । ಶ್ರುತಿ ಕದಂಬದಂತೆ ಪದಕ್ರಮಾನುವಿದ್ಧಮುಂ । ತ್ರಿವಿಕ್ರಮಾವತಾರದಂತಿರುಪಕ್ರಮುಪ್ರವೃದ್ಧಮುಂ । ಚತುರ್ಮುಖನಂತೆ ಕಮಳೋದ್ಭವಮುಂ । ಶಶಿಖಂಡಮಂಡನನಂತೆ ಶಿಳಾಪುತ್ರಿಕಾಳಂಕೃತಮುಂ । ಶತಕ್ರತುವಿನಂತೆ ನಯನಾಭಿರಾಮಮುಂ । ಕುಳಗಿರಿಯಂತೆ ದೃಢಮೂಳಬಂಧಮುಂ । ಜಳಾಶಯದಂತೆ ಕುಮುದೋಲ್ಲಾಸಿಯುಂ । ಮೇರುಗಿರಿಯಂತೆ ಬಹು ಕನಕಘಟಿತಮುಂ । ಹರಗಿರಿಯಂತೆ ವೃಷಭ ಪದಾಂಕಿತಮುಂ । ಗುರುವರಣಮಾಗಿಯುಂ ತಮೋಗುಣಮಲ್ಲದೆಯುಂ । ಸ್ತಂಭ ಸಂಭೃತಮಾಗಿಯುಂ ರಜೋಗುಣಮಲ್ಲದೆಯುಂ । ಹರ್ಷೋತ್ಕರ್ಷಕಾರಿಯಾಗಿಯುಂ ಸತ್ವಗುಣಮಲ್ಲದೆಯುಂ । ಸಿಂಹಗಜಾವಳಿಯನುಳ್ಳುದಾಗಿಯುಂ ಗಹನಮಲ್ಲದೆಯಂ । ಜಳನಿಧಿಯಂತೆ ಗಂಭೀರಾಂತರಂಗಮುಂ । ಕನಕ ಶಿಖರಿಯಂತೆ ಧ್ರುವಗತಿ ನಿರತಮುಂ । ಚಂದ್ರಮಂಡಲದಂತೆ ಸುಧಾವಳಂಬಿಯುಂ । ರವಿಮಂಡಲದಂತೆ ವಿಯತ್ಪಥವರ್ತಿಯುಂ । ಗಗನಮಂಡಲದಂತೆ ಭಗಣಸಂಕ್ರಾಂತಮುಂ । ಬಹುಕೂಟ ಕೋ....ಮಿಕಾದ್ಭಾಸಿತ ಶ್ರೀ ಮುಖದ್ವಾರಮುಂ । ಉತ್ತಂಭಿತಧ್ವಜಪಟಪಲ್ಲ....ವಾನಗಗನ ವಳಯಮುಂ । ಧರಾಭಾರಧೀರ ನಾಗರಾಜ ಹೃದಯದರ್ಶಿತ ಗುರುತ್ವಮುಂ । ಲಬ್ಧ ಮಹತ್ವ....ಮಪ್ಪ ಶ್ರೀಮನ್ಮಹಾಪ್ರಾಸಾದ...."

ಇಲ್ಲಿ ಸೌಂದರ್ಯಾನುಭವಕ್ಕಿಂತ ಶಬ್ದಜಾಲವೇ ಪ್ರಬಲವಾಗಿದೆ.

---

[44] EI. XIII. p. 41, 1112 A.D.

[45] ಅದೇ-'' ಧರೆ ರಂಗಂ ಕುಳಪರ್ವತಾಳಿ ತಳಗಂಬಂಗಳು ದಿಶಾಭಿತ್ತಿ ಭಿತ್ತಿರಸಾಲಂಕೃತ ಚಿತ್ರ ಪುತ್ರಿಕೆಯುರಾ ಬಿಗ್ದೇವಿಯರ್ ದೇಗುಲಂ ಗಿರಿರಾಜಂ ಕನಕಾದ್ರಿ ಪೊಂಗಳಸಂ...."

[46] ಈ ದೇವಸ್ಥಾನವನ್ನು ಹೊಗಳುತ್ತ ಮೆಡೋಸ್ ಟಯ್ಲರ್ ಎಂಬುವರು ಹೀಗೆ ಹೇಳಿದ್ದಾರೆ-''....The carving on some of the pillars and of the lintels and architraves of the door is quite beyond description. No chased work in silver or gold could possibly be finer.... By what tools this very hard, tough stone could have been wrought and polished as it is, is not at all intelligible at the present day; nor indeed from whence the large blocks of greenstone rock were brought" (James Fergusson: History of Indian and Eastern Architecture, I, p. 424). ಹಳೆಯಬೀಡಿನ ದೇವಸ್ಥಾನವನ್ನು ಬಿಟ್ಟರೆ ಕರ್ನಾಟಕದಲ್ಲೆಲ್ಲ ಈ ದೇವಸ್ಥಾನವೇ ಬಹು ಸುಂದರವೆಂದು ಹೆನ್ರಿ ಕಸೆನ್ಸ್ ಹೇಳುತ್ತಾರೆ (The Chalukyan Architecture, p. 124)

[47] EC. V. Hn. 149, 1113 A.D.

[48] EC. V. Bl. 58, 1117 A.D.

ಗುಹಾದೇವಾಲಯವನ್ನು ಬಾದಾಮಿಯ ಶಾಸನವು ' ಕಲ್ಮನೆ ' ಎಂದು ಕರೆದಿದೆ. ' ಪರಮಭಾಗವತ ' ನಾದ ಮಂಗಲೀಶನು ಕ್ರಿ. ಶ. 578 ರಲ್ಲಿ ವಿಷ್ಣುಗುಹೆಯನ್ನು ಬಾದಾಮಿಯ ಬೆಟ್ಟದ ಮೇಲೆ ಕೊರೆಯಿಸಿದನು.[49] ಈ ಗುಹಾದೇವಾಲಯಕ್ಕೆ ಲಂಜಿಗೇಶ್ವರ ಎಂಬ ಹಳ್ಳಿಯನ್ನು ಬಿಟ್ಟುಕೊಟ್ಟ ವಿಷಯವು ಇನ್ನೊಂದು ಶಾಸನದಲ್ಲಿದೆ—''....ಸ್ವಸ್ತಿ ಶ್ರೀಮತ್ ಪೃಥಿವೀವಲ್ಲಭ ಮಂಗ (ಲೀ) ಸು (ಶ) ನಾ ಕಲ್ಮನೆಗೆ ಇತ್ತೊದು ಲಂಜಿಗೇಶ್ವರಂ ದೇವರ್ಕೆ ಪೂನಿ ಇಱುವ ಮಾಲಕಾರರ್ಗೆ ಅರ್ಧ ವಿಸದಿ ಇತ್ತೋದಾನ್ ಅೞಿವೊನ್ ....''[50]. ಐಹೊಳೆಯ ' ನಗರ ' ವು ಮೋನಿಭಟಾರ ಎಂಬ ಮುನಿಗಳಿಗೆ ' ಗುಹೆ ' ಯೊಂದನ್ನು ಕಟ್ಟಿಸಿಕೊಟ್ಟ ಸಂಗತಿ ಒಂದು ಶಾಸನದಲ್ಲಿದೆ.''[51]

## ಕಾವ್ಯ, ನಾಟಕ

ಹಳೆಯ ಕನ್ನಡಸಾಹಿತ್ಯದಲ್ಲಿ ' ನಾಟಕ ' ಗಳಿದ್ದುವೇ ಎಂಬ ಪ್ರಶ್ನೆಗೆ ಒಬ್ಬಿಬ್ಬರು ವಿದ್ವಾಂಸರು ಉತ್ತರ ಕೊಡಲು ಪ್ರಯತ್ನಿಸಿದ್ದಾರೆ.[52] ನಮಗೆ ಇಲ್ಲಿಯವರೆಗೂ ಪ್ರಾಚೀನವೆನ್ನಿಸಿಕೊಳ್ಳುವ ಒಂದು ನಾಟಕವೂ ದೊರಕಿಲ್ಲ. ಶಾಸನಗಳಲ್ಲಿ ಕನ್ನಡ ಕವಿಗಳ ಕಾವ್ಯಗಳ, ಉಲ್ಲೇಖ ಬರುವಂತೆ ಕನ್ನಡ ನಾಟಕಗಳ ಉಲ್ಲೇಖ ಎಲ್ಲಿಯೂ ಬಂದಿಲ್ಲ. ಕೆಲವು ಕಡೆಗಳಲ್ಲಿ ' ನಾಟಕ ' ದ ಪ್ರಸ್ತಾಪ ಇದೆ, ನಿಜ. ಉದಾಹರಣೆಗೆ ಗಂಗರ ದೊರೆ ಶಿವಮಾರನನ್ನು " ಕಾವ್ಯಕುಶಲಃ ಕಲಾನಾಮಾಧಾರೋ ಸಕಳ ನಾಟಕ ವಿಷಯ ಸಂಧಿ ಸಂಧ್ಯಂಗಾದಿ ಯೋಜನಾಚತುರೋ " ಎಂದಿದೆ.[53] ನಾಟಕವು ಅಧ್ಯಯನದ ವಿಷಯಗಳಲ್ಲೊಂದಾಗಿದ್ದಿತು ಎಂಬುದನ್ನು ಜ್ಞಾಪಿಸಿಕೊಂಡರೆ, ಇಂತಹ ಉಲ್ಲೇಖಗಳಲ್ಲಿ ' ನಾಟಕ ' ಎಂಬುದು ಸಂಸ್ಕೃತ ನಾಟಕ ಸಾಹಿತ್ಯವನ್ನು ಸೂಚಿಸುವಂತೆ ಕಾಣುತ್ತದೆ. ಪ್ರಾಸಂಗಿಕವಾಗಿ ' ನಟ ' ಎಂಬ ಮಾತು ಹಲವು ಶಾಸನಗಳಲ್ಲಿ ಬಂದರೂ, ಖಚಿತವಾಗಿ ಕನ್ನಡ ನಾಟಕಗಳಲ್ಲಿ ಪಾತ್ರವಹಿಸಿದ ನಟನೆಂದು ಧೈರ್ಯವಾಗಿ ಹೇಳುವಂತಹ ಒಂದು ಹೆಸರೂ ಕನ್ನಡ ಶಾಸನಗಳಲ್ಲಿಲ್ಲ. ಪಟ್ಟದಕಲ್ಲಿನ ಒಂದು ಶಾಸನದಲ್ಲಿ ಒಬ್ಬ ' ನಟ ' ನ ವರ್ಣನೆ ಬಂದಿದೆ.[54] ಅವನೊಬ್ಬ ನರ್ತಕನಿರಬೇಕು ಎಂಬ ಭಾವನೆ ಬರುತ್ತದೆ. ನಾಟಕಶಾಲೆಯ ಉಲ್ಲೇಖ ಒಂದು ಶಾಸನದಲ್ಲಿದೆ.[55] ಈ ಶಾಸನದಲ್ಲಿ ಬರುವ ತ್ರೈವಿದ್ಯ ಗೋವರ್ಧನರೆಂಬ ಜೈನಗುರುಗಳು ನಾಟಕಸಾಹಿತ್ಯ ಪ್ರವೀಣರಾಗಿದ್ದರು. ಅವರ ಕಾಲದಲ್ಲಿದ್ದ ನಾಡಗಾವುಂಡ ಚಾವುಂಡರಾಯನ ಮೊಮ್ಮಗ ಮಹಾಸಾಮಂತ ಮಾರ್ತಂಡಯ್ಯನು '' ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ ನಾಟಕಶಾಲೆಯಂ ಮಾಡಿಸಿ ತನ್ನ ಕೀರ್ತಿಶಿಲಾಸ್ತಂಭಮನಾಚಂದ್ರಾರ್ಕತಾರಂಬರಂ " ನಿಲ್ಲಿಸಿದನು. ಇದು ಬಹುಶಃ ನರ್ತನಶಾಲೆಯಿರಬಹುದು. (ದೇವಸ್ಥಾನಗಳನ್ನು ವರ್ಣಿಸುವಾಗ ಬರುವ 'ನಾಟ್ಯಶಾಳೆ'[55.1] ಎಂಬುದೂ ಅದೇ ನರ್ತನ ಶಾಲೆಯೆಂಬುದು ಸ್ಪಷ್ಟವಾಗಿದೆ.) ವಿದ್ವಾಂಸರಾದ ಕವಿಗಳು ನಾಟಕಗಳನ್ನು ರಚಿಸಿರದಿದ್ದರೂ, ಜನಸಾಮಾನ್ಯರಲ್ಲಿ ' ಪಗರಣ ' (ಸಂ. ಪ್ರಕರಣ)ಗಳೆಂಬ ಜನಪ್ರಿಯ ನಾಟಕ

---

49 IA. III. p. 305, 578 A.D.—'' ಮಹಾವಿಷ್ಣುಗೃಹಂ ಅತಿದೈವಮಾನುಷ್ಯಕಂ ಅತ್ಯದ್ಭುತಕರ್ಮವಿರಚಿತಂ ಭೂಮಿಭಾಗೋಪಭಾಗೋಪರಿ ಪರ್ಯಂತಾತಿಶಯದರ್ಶನೀಯತಮಂ....''

50 IA. X. p. 60.

51 IA. XII. p. 222, 991–2 A.D.–''ಪೂರ್ವೋಕ್ತಮುನಿಭಿಃ ದೃಷ್ಟಂ ಧರ್ಮಶಾಸ್ತ್ರಪ್ರಚೋದಿತಂ ಯೋಗಿಗಾರಂ ಇದಂ ಪ್ರೋಕ್ತಂ ಸೂರಿಭಿಃ ಪರಿವೇಷ್ಟಿತಂ''

52 ನೋಡಿ, ಎಂ. ಗೋವಿಂದ ಪೈ : ' ಕನ್ನಡ ನಾಟಕದ ಹಳಮೆ ' (ಕನ್ನಡ ಸಾಹಿತ್ಯಪರಿಷತ್ ಪತ್ರಿಕೆ, 31. 2).

53 EC. IX. Nl. 60, 797 A.D.

54 IA. X. p. 167, C. 850 A.D.

55 BKI. I. i. 78, 1045 A.D.

55.1 Kannada Inscriptions of Andhra Pradesh, p. 6.

ಗಳಿದ್ದುವು. ಪಗರಣದ ಉಲ್ಲೇಖ ಅತ್ತಿಮಬ್ಬೆಯ ಲಕ್ಕುಂಡಿ ಶಾಸನದಲ್ಲಿದೆ ("ಪಗರಣಂ ಅಣ್ಮ...."). ಕವಿರಾಜಮಾರ್ಗ, ಧರ್ಮಾಮೃತ, ಕುಮಾರವ್ಯಾಸ ಭಾರತ ಮುಂತಾದ ಕಾವ್ಯಗಳಲ್ಲಿ ಬರುವ ಸಂಗತಿಗಳನ್ನು ನೋಡಿದರೆ, ಪಗರಣವು ವೇಷ, ಅಭಿನಯಗಳೇ ಪ್ರಧಾನವಾಗಿದ್ದು, ವಾಚಿಕಾಂಶವು ಅವುಗಳಿಗೆ ಅಧೀನವಾಗಿದ್ದ ಒಂದು ಬಗೆಯ ವಿನೋದ ವೇಷ ಪ್ರದರ್ಶನ ಎಂಬ ಭಾವನೆ ಬರುತ್ತದೆ.

ರಾಜರು, ಮಂತ್ರಿಗಳು, ಹಿರಿಯ ಅಧಿಕಾರಿಗಳು ಕವಿಗಳಿಗೆ, ವಿದ್ವಾಂಸರಿಗೆ ಆಶ್ರಯದಾತರಾಗಿದ್ದರು ; ಎಷ್ಟೋ ಜನರು ತಾವೇ ಸ್ವತಃ ಕವಿಗಳೂ ಆಗಿದ್ದರು. ಗಂಗರ ದೊರೆ ಶಿವಮಾರನು ಬರೆದ 'ಶಿವಮಾರಮತ' ಎಂಬ ಗಜಾಷ್ಟಕವು ಒನಕೆವಾಡಾಗುವಷ್ಟು ಜನಪ್ರಿಯತೆಯನ್ನು ಪಡೆದಿದ್ದಿತೆಂದು ಈಚಿನ ಒಂದು ಶಾಸನವು ಹೇಳುತ್ತದೆ.[56] ಒನಕೆವಾಡು ಎಂಬುದು ಜನಪ್ರಿಯ ಕಾವ್ಯವೆಂಬುದನ್ನು ಸೂಚಿಸುತ್ತದೆ. ದುರ್ಗಸಿಂಹನ ಒಂದು ಹೇಳಿಕೆಯೂ ಇದನ್ನೇ ಪೋಷಿಸುತ್ತದೆ.[57] ಒನಕೆವಾಡುಗಳು ತ್ರಿಪದೀರೂಪವಾಗಿರುತ್ತಿದ್ದುವೆಂಬುದಕ್ಕೆ ಕೆಲವು ಆಧಾರಗಳಿವೆ. ಒನಕೆ ಕುಟ್ಟುವಾಗ ತ್ರಿಪದಿಗಳನ್ನು ಹಾಡಬೇಕೆಂದು ಮಾನಸೋಲ್ಲಾಸದಲ್ಲಿ ಸೋಮೇಶ್ವರನು ಹೇಳುತ್ತಾನೆ.[58] ನೇಮಿಚಂದ್ರನ ಲೀಲಾವತಿಯಲ್ಲಿ (2.35) ವೇಶ್ಯೆಯರು 'ಸೂಳೆಸಿದ್ಧಾಂತ'ವನ್ನು 'ಒನಕೆವಾಡು'ಗಳಾಗಿ ಮಾಡಿ ಹಾಡುತ್ತಿದ್ದರೆಂದು ಹೇಳಿ, ಕೆಲವು ತ್ರಿಪದಿಗಳನ್ನು ಬರೆದಿದ್ದಾನೆ. ಸುರಂಗಕವಿಯೂ ಇದೇ ರೀತಿಯಲ್ಲಿ 'ಒನಕೆವಾಡು'ಗಳನ್ನು ಬರೆದಿದ್ದಾನೆ.[59] ಆದ್ದರಿಂದ ಶಿವಮಾರನ ಗ್ರಂಥವು ಕನ್ನಡದಲ್ಲಿತ್ತೆಂದು ಖಚಿತವಾಗಿ ಹೇಳಬಹುದು ; ಅದು ತ್ರಿಪದೀರೂಪವಾಗಿದ್ದಿರಬಹುದೆಂದು ಊಹಿಸಬಹುದು. ಮಹಾಪ್ರಧಾನ ವಾಮದೇವಯ್ಯನು ಕರ್ಣನಿಗಿಂತ ಉದಾರಿಯಾಗಿದ್ದನು ; 'ವಿದ್ವಜ್ಜನಾಭೀಷ್ಟಫಳದಾಯಕ'ನಾಗಿದ್ದನು ; 'ಸಂಪೂರ್ಣಕರ್ಣಕಥಾಕರ್ಣನ ಕರ್ಣಾವತಂಸ'ನಾಗಿದ್ದನು.[60] ಸಿಂದಕುಳಕಮಳಮಾರ್ತಾಂಡನಾದ ಪೆರ್ಮಾಡಿದೇವನು 'ಉತ್ತಮ ನಾನಾ ನವ್ಯಕಾವ್ಯ ಶ್ರವಣಸರಸಗೋಷ್ಠೀ ವಿಳಾಸಗಳಿಂದ' ತನ್ನ ದಿನಗಳನ್ನು ಸಫಲಗೊಳಿಸಿಕೊಂಡಿದ್ದನು. ಇವನ ವಿಶೇಷಣಗಳಲ್ಲಿ ಇವು ಕೆಲವು—'ಕವಿಗಮಕವಾದಿ ವಾಗ್ಮಿಜನ ಸಂಸ್ತೂಯಮಾನ', 'ಶಸ್ತ್ರಶಾಸ್ತ್ರಾದಿಸತ್ಕಳಾಪ್ರವೀಣ', 'ಕಾವ್ಯಗೀತರಸಾನುಭವವಿನೋದ.' ಇವನು ಕವಿಗಳಿಗೆ ಆಶ್ರಯ ಕೊಟ್ಟು, ಕಾವ್ಯಗೋಷ್ಠಿಗಳಲ್ಲಿ ಕಾಲವನ್ನು ಕಳೆಯುತ್ತ 'ಅಭಿನವ ಭೋಜ'ನಾಗಿದ್ದನು.[61] ರಾಯಣ ಎಂಬ ದಂಡನಾಥನು 'ಸರಸಕೃತಿ ಶ್ರವಣಸಂಜಾತ ಪುಳಕ'ನಾಗಿದ್ದನು.[62] ವಿಷ್ಣುದಂಡಾಧಿಪನು 'ಸತ್ಕಾವ್ಯಗೋಷ್ಠಿ'ಗಳಲ್ಲಿ ಭಾಗವಹಿಸುತ್ತಿದ್ದನು. ಅವನು ಸದ್ವಿದ್ಯೆಗಳಿಗೆ ಒರೆಗಲ್ಲಿನಂತಿದ್ದನು.[63] ಸಾಮಂತ ಕಕ್ಕರಸನು ಕಾವ್ಯಪ್ರೇಮಿಯೂ, ಗೀತವಾದ್ಯಗಳಲ್ಲಿ ಅಭಿರುಚಿಯನ್ನು ಬೆಳಸಿಕೊಂಡಿದ್ದವನೂ ಸುಭಾವುಕನೂ ಆಗಿದ್ದನು.[64] ಭಟ್ಟಾಕಳಂಕಮುನಿಯು ಸಾಹಿತ್ಯದಲ್ಲಿ ಭಾರವಿಗೆ ಸಮಾನನಾಗಿದ್ದನು ; ಕಾವ್ಯ,

[56] EC. VIII. Nr. 35, 1077 A.D.

[57] ಪಂಚತಂತ್ರ, 1.69—"ಎನಿತೋದನೋದಿಯುಂ ಮನ। ದನಿತೆ ವಲಂ ಬುದ್ಧಿಯಕ್ಕುಮೆಂದು ಸಮುಸ್ತಾವನಿಯ ಜನಮೊನಕೆವಾಡ। ಪ್ಪಿನೆಗಂ ಸಲೆ ನುಡಿದ ನುಡಿ ಯಥಾರ್ಥಂ ನಿನ್ನೊಳ್."

[58] ಡಿ. ಎಲ್. ನರಸಿಂಹಾಚಾರ್: 'ಮಾನಸೋಲ್ಲಾಸದಲ್ಲಿ ಛಂದಸ್ಸು' (ಪ್ರಬುದ್ಧ ಕರ್ಣಾಟಕ, 45.2, ಪು. 56-7,72)

[59] ತ್ರಿಷಷ್ಟಿ ಪುರಾತನ ವಿಲಾಸಂ, 24.149-152.

[60] BKI. I. ii 127, 1082 A.D. ಈ 'ಸಂಪೂರ್ಣ ಕರ್ಣಕಥಾ' ಎಂಬುದು ಕನ್ನಡದಲ್ಲಿದ್ದ ಯಾವುದೋ ಕಾವ್ಯವನ್ನು ಸೂಚಿಸುವಂತಿದೆ. ಇದು ಪಂಪನ ಪಂಪಭಾರತವನ್ನು ಸೂಚಿಸಬಹುದು; ಅಥವಾ ಈಗ ಅನುಪಲಬ್ಧವಾಗಿರುವ, ಕರ್ಣನಿಗೆ ಸಂಬಂಧಿಸಿದ ಯಾವುದೋ ಪ್ರತ್ಯೇಕ ಕಾವ್ಯವನ್ನು ಸೂಚಿಸಬಹುದು.

[61] BKI. I. ii. 119, 948 A.D.

[62] EC. VI. Cm. 137, 1130 A.D.

[63] ಅದೇ.

[64] BKI. I. ii. 178, 1127 A.D.

ಗಮಕ, ವಾಗ್ಮಿತ್ವ, ಗೀತ, ವಾದ್ಯ, ನೃತ್ಯಗಳಲ್ಲಿ ಅವನ ಕೀರ್ತಿ ಹರಡಿದ್ದಿತು.[65] 'ವಾಗ್ಮಿತ್ವ'ವು (oratory) ವಿದ್ವಾಂಸರು ಬೆಳಸಿಕೊಳ್ಳುತ್ತಿದ್ದ ಕಲೆಗಳಲ್ಲೊಂದಾಗಿದ್ದಿತು. ಎಕ್ಕಲರಸನು ಅಂಗ, ವಂಗ, ಕಳಿಂಗ, ಕುರು ಜಾಂಗಳ, ಕೌಶಳ, ಮಧ್ಯದೇಶ, ಭದ್ರಂಗ, ತುರುಷ್ಕ, ಗೌಡ, ಮಗಧ, ಆಂಧ್ರ, ಅವಂತಿ, ವಿರಾಟ, ಚೋಳ ದೇಶಗಳ ಪಂಡಿತರಿಗೆ ಬೇಕಾದಷ್ಟು ಐಶ್ವರ್ಯವನ್ನು ಕೊಡುತ್ತಿದ್ದಂತೆ ಒಂದು ಶಾಸನವು ಉತ್ಪ್ರೇಕ್ಷಿಸಿದೆ.[66] ಪೊಸವಡಂಗಿಲೆ ಎಂಬ ಅಗ್ರಹಾರದ ವರ್ಣನೆ ಈ ರೀತಿ ಇದೆ—"ಪೊಸಕಾವ್ಯಂ ಪೊಸಗೇಯಂ ಪೊಸವಾದ್ಯಂ ಪೊಸವಿನೂತರಸಂ ನೃತ್ತಂ ಪೊಸವಸ್ತು ಪೊಸವಿಳಾಸಂ ಪೊಸದೇಸೆ" ಗಳೇ ಆ ಊರಲ್ಲಿ ಇದ್ದುದು.[67]

ಇಂತಹ ಹೇಳಿಕೆಗಳಿಂದ ಇಷ್ಟು ಸಾರಾಂಶವನ್ನು ಗ್ರಹಿಸಬಹುದು. ಕನ್ನಡಿಗರು ಸಾಹಿತ್ಯವನ್ನು ಬಹುವಾಗಿ ಗೌರವಿಸುತ್ತಿದ್ದರು. ಅದರಲ್ಲಿ ಅವರು ಬಹುವಾದ ಆಸಕ್ತಿಯನ್ನು ಅಭಿರುಚಿಯನ್ನು ಬೆಳಸಿಕೊಂಡಿದ್ದರು. ಕವಿಗಳಿಗೆ, ವಿದ್ವಾಂಸರಿಗೆ ಅಪೂರ್ವವಾದ ಗೌರವವು ಸಂದಿದ್ದಿತು. ಸಾಹಿತ್ಯವು ಜನರ ಜೀವನದಲ್ಲಿ ಹಾಸುಹೊಕ್ಕಾಗಿದ್ದಿತು ; ಅವರ ಜೀವನದ ಮೌಲ್ಯಗಳನ್ನು ನಿರ್ಧರಿಸುವ ಶಕ್ತಿ ಅದಕ್ಕಿದ್ದಿತು. ರಾಜಾಸ್ಥಾನಗಳಲ್ಲಿ, ಅಗ್ರಹಾರಗಳಲ್ಲಿ, ಊರುಗಳಲ್ಲಿ, ಕಾವ್ಯಗೋಷ್ಠಿಗಳು ನಡೆಯುತ್ತಿದ್ದುವು. ಅವು ಕೇವಲ ರಸಾನುಭವಗೋಷ್ಠಿಗಳು ಮಾತ್ರವಲ್ಲದೆ ವಿಮರ್ಶನಗೋಷ್ಠಿಗಳೂ ಆಗಿರುತ್ತಿದ್ದವು. ಅಲ್ಲಿ ಹೊಸ ಕಾವ್ಯಗಳ, ಹೊಸ ಕಾವ್ಯಪ್ರಯೋಗಗಳ ಪರಿಶೀಲನೆಯು ನಡೆಯುತ್ತಿದ್ದಿತು. ಕಾವ್ಯ ವಾಚನ ಅಥವಾ ಗಮಕ ಕಲೆಯು ಜನಪ್ರಿಯವಾಗಿದ್ದ ಕಲೆಗಳಲ್ಲೊಂದಾಗಿದ್ದಿತು.

ಸಂಸ್ಕೃತ ಕವಿಗಳಲ್ಲಿ ವ್ಯಾಸ, ವಾಲ್ಮೀಕಿ, ಕೇಯೂರ, ರಾಜಶೇಖರ, ಭಾರವಿ, ಬಾಣ, ಮಯೂರ, ಕಾಳಿದಾಸರ ಹೆಸರುಗಳು ಕ್ರಿ. ಶ. 1050 ರ ಒಂದು ಶಾಸನದಲ್ಲಿವೆ.[68] ಕಾಳಿದಾಸ, ಭಾರವಿಯರ ಹೆಸರುಗಳು ಐಹೊಳೆಯ ಶಾಸನದಲ್ಲೂ ಇವೆ.[69] ಭಾರವಿಯ ಹೆಸರು ಇನ್ನೂ ಎರಡು ಕಡೆ ಬಂದಿದೆ.[70] ಬಾಣನ ಹೆಸರು ಇನ್ನೊಂದೆಡೆ ಬಂದಿದೆ.[71] ದಂಡಿ,[72] ಸುಬಂಧುಗಳೂ[73] ಶಾಸನೋಕ್ತರಾಗಿದ್ದಾರೆ. ಮಾಧವ ಭಟ್ಟನೆಂಬ ಶಾಸನಕವಿಯ ರಸಭಾವವು 'ಅರ್ಥಗೌರವದೊಳೊಡಂಬಟ್ಟ' ದ್ದಿತೆಂದು ಒಂದು ಶಾಸನವು ಹೇಳುತ್ತದೆ.[74] ಅರ್ಥಗೌರವವು ಭಾರವಿಯ ಶೈಲಿಯ ಪ್ರಮುಖ ಲಕ್ಷಣವೆಂದು ಸಂಸ್ಕೃತ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ ("ಭಾರವೇರರ್ಥಗೌರವಂ"). ಮೇಲೆ ಹೇಳಿದ ಸಂಸ್ಕೃತ ಕವಿಗಳು ಕನ್ನಡ ಕವಿಗಳಿಗೆ ಆದರ್ಶಪ್ರಾಯರಾಗಿದ್ದರು.

ಚಿತ್ರಕವಿತೆಯ ಉಲ್ಲೇಖ ಹಲವು ಶಾಸನಗಳಲ್ಲಿದೆ. ತ್ರೈವಿದ್ಯ ಗೋವರ್ಧನರು 'ಚಿತ್ರಕವಿತಾ ವಿಸ್ತೀರ್ಣ ಸಂದರ್ಭಗರ್ಭ ನಿರುದ್ಧೋನ್ನತಿ'ಯಿಂದ ಪ್ರಸಿದ್ಧರಾಗಿದ್ದರೆಂದು ಒಂದೆಡೆ ಉಕ್ತವಾಗಿದೆ.[75]

---

65 EC. II. 69, C. 1100 A.D.

66 EC. VIII. Sb. 233, 1139 A.D.

67 SII. IX. i. 118, 1057 A.D.

68 EC. VIII. Nagar. 35.

69 IA. VIII. p. 241, 634 A.D.— "ವಿಜಯತಾಂ ರವಿಕೀರ್ತಿಃ ಕವಿತಾಶ್ರಿತಕಾಳಿದಾಸಭಾರವಿಕೀರ್ತಿಃ"

70 BKI. I. ii. 178, 1127 A.D. ; EC. II. 69, C. 1100 A.D.

71 BKI. I. ii. 148, 1099 A.D.

72 EC. II. 67, 1129 A.D.

73 EC. VII. Introd. p. 28, 29.

74 BKI. I. ii. 137, 1092 A.D.— "ಕೊಟ್ಟ ಕುಱುಪಿಗೆ ಬಗೆ ನೇರ್ವಟ್ಟರೆ ರಸಭಾವಮರ್ಥಗೌರವದೊಳೊಡಂಬಟ್ಟರೆ ಪೇಳ್ವಂ ಮಾಧವಭಟ್ಟಂ ವಾಕ್‌ಶ್ರೀ ಲಲಾಟಮಣಿಮಯ ಪಟ್ಟಂ"

75 BKI. I. i 78, 1045 A.D.

ಸು. 1100ರ ಶಾಸನಗಳಲ್ಲಿ ಚಕ್ರಬಂಧ, ಅನುಲೋಮ, ಪ್ರತಿಲೋಮ, ಗತಪ್ರತ್ಯಾಗತ ಶ್ಲೋಕಗಳಿವೆ.[76] ಆಶುಕವಿತೆಯನ್ನು ರಚಿಸುತ್ತಿದ್ದ ಕವಿಗಳಿದ್ದರು. ಅಂತಹ ಕವಿಗಳಲ್ಲೊಬ್ಬ 'ಆಶುಕವಿ ನಿಟಿಲಾಕ್ಷ'. ಇವನು ರಚಿಸಿರುವ ಶಾಸನದಲ್ಲಿ[77] ಪ್ರಕೀರ್ತಿತನಾಗಿರುವ ಮಲ್ಲಿದೇವ ಎಂಬ ವ್ಯಕ್ತಿ ಅತ್ಯಪೂರ್ವ ಶಕ್ತಿಸಂಪನ್ನನಾಗಿದ್ದನು. ಅವನ ಜ್ಞಾಪಕಶಕ್ತಿ ಅದ್ಭುತವಾಗಿದ್ದಿತು. ಅವನ ಅಕ್ಕಪಕ್ಕದಲ್ಲಿ ಇಬ್ಬರು ಕುಳಿತು ಕಾವ್ಯವೊಂದನ್ನು ಕೊನೆಯಿಂದ ಮೊದಲವರೆಗೆ ಬರೆಯುತ್ತ, ಜೊತೆಯಲ್ಲೇ ವಾಚನಮಾಡುತ್ತ ಹೋದರೆ, ಆ ಕಾವ್ಯವನ್ನು ಇವನು ಮೊದಲಿಂದ ಕ್ರಮವಾಗಿ ಹೇಳಬಲ್ಲವನಾಗಿದ್ದನು. ಒಟ್ಟಿಗೆ ನಾಲ್ಕು ಕಥೆಗಳನ್ನು ಕೇಳಿ, ಅಷ್ಟನ್ನೂ ಮತ್ತೆ ಹೇಳಬಲ್ಲವನಾಗಿದ್ದನು. ದೊಡ್ಡ ದೊಡ್ಡ ಸಂಖ್ಯೆಗಳನ್ನು ಮನಸ್ಸಿನಲ್ಲೇ ಗುಣಿಸಬಲ್ಲವನಾಗಿದ್ದನು.[78] ಇವನನ್ನು ಶಾಸನವು 'ಸಹಜಸಾರಸ್ವತ' ನೆಂದೂ, 'ವಾಚಕವಾರಿಜಾಸನ' ನೆಂದೂ, 'ನಾನಾವಿಧಾವಧಾರಣಾ ಚಕ್ರವರ್ತಿ' ಯೆಂದೂ 'ಕವಿಕಂಜಸಂಭವ'ನೆಂದೂ ಕರೆದಿದೆ.

ಶಾಸನಗಳ ಕಾವ್ಯಶೈಲಿಯನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಬಹುದು. ಶಾಸನಗಳ ಮುಖ್ಯ ಉದ್ದೇಶ ಸಂಗತಿಗಳ ನಿರೂಪಣೆ. ಶಾಸನಗಳನ್ನು ಬರೆದವರು ವಿದ್ವಾಂಸರೂ ಕವಿಗಳೂ ಆಗಿದ್ದರೆ ಅಂತಹ ಶಾಸನಗಳಲ್ಲಿ ಕೆಲವು ಭಾಗಗಳು ಕಾವ್ಯಮಯವಾಗಿರುತ್ತವೆ. ಅಷ್ಟು ವಿದ್ಯಾವಂತರಲ್ಲದವರು ಬರೆದಿರುವ ಶಾಸನಗಳಲ್ಲೂ ಕೆಲವು ಕಡೆ ಕಾವ್ಯಮಯವಾದ ಶೈಲಿಯು ಕಂಡುಬರುವುದುಂಟು. ವೀರಗಲ್ಲು ಮಾಸ್ತಿಕಲ್ಲುಗಳಲ್ಲಿ ಬರುವ ಸಂಗತಿಗಳು ಎಂಥವನನ್ನೂ ಕರಗಿಸತಕ್ಕವು. ಆ ಶಾಸನಗಳನ್ನು ಓದುತ್ತಿದ್ದರೆ ಅವುಗಳನ್ನು ಬರೆಯುವಾಗ ಕವಿಗಳು ಭಾವಾವಿಷ್ಟರಾಗಿದ್ದರೆಂದು ಓದುಗರಿಗೆ ಅನ್ನಿಸುತ್ತದೆ. ಬಹುಪಾಲು ಶಾಸನಗಳು ಸಾಹಿತ್ಯದ ದೃಷ್ಟಿಯಿಂದ ನೀರಸವಾಗಿದ್ದರೂ, ಕೆಲವು ಶಾಸನಗಳು ವಿಷಯನಿರೂಪಣಾ ವಿಧಾನದಿಂದ, ಶೈಲಿಯಿಂದ ಓದುಗರನ್ನು ಮರುಳುಗೊಳಿಸುತ್ತವೆ. ಶೋಕ, ಕರುಣೆ, ಅದ್ಭುತ, ಹಾಸ್ಯ, ವೀರ, ಭಕ್ತಿ ಮುಂತಾದ ಭಾವಗಳನ್ನು ಕೆರಳಿಸುತ್ತವೆ. ಕೆಲವು ಶಾಸನಗಳಂತೂ ಪುಟ್ಟ ಕಾವ್ಯಗಳೇ ಸರಿ. ಆ ಕಾಲದ ಕಾವ್ಯಗಳ ಜಾಡನ್ನೇ ಹಿಡಿದು ಅವು ಸಾಗಿರುವುದು ಕಂಡುಬರುತ್ತದೆ. ಕಾವ್ಯಗಳಂತೆಯೇ ಅವು ಸಮುದ್ರ ವರ್ಣನೆಯಿಂದ ಆರಂಭವಾಗಿರುವುದುಂಟು. ಮಧ್ಯೆ ಅಲ್ಲಲ್ಲಿ ಅವಕಾಶಗಳನ್ನು ಕಲ್ಪಿಸಿಕೊಂಡು ದೇಶವನ್ನು, ಪರ್ವತಗಳನ್ನು, ನದಿಗಳನ್ನು, ಹೊಲಗಳನ್ನು ವರ್ಣಿಸಿರುವ ಶಾಸನಗಳು ಇಲ್ಲದಿಲ್ಲ. ವ್ಯಕ್ತಿಚಿತ್ರಗಳನ್ನು ಕೊಡುವಾಗ ಉತ್ಪ್ರೇಕ್ಷೆ ಸಾಮಾನ್ಯವಾಗಿದ್ದರೂ, ಮನುಷ್ಯಸ್ವಭಾವವನ್ನು ಎಷ್ಟೋ ಶಾಸನಗಳು ಸಮರ್ಥವಾದ ರೀತಿಯಲ್ಲಿ ಹಿಡಿದಿಟ್ಟಿವೆ. ಸರಳಶೈಲಿಯ ಶಾಸನಗಳನ್ನೂ, ಪಾಂಡಿತ್ಯ ಪ್ರದರ್ಶನವೇ ಮುಖ್ಯವಾಗಿರುವ ಶಾಸನಗಳನ್ನೂ ನಾವು ಕಾಣಬಹುದು. ಕನ್ನಡ ಕಾವ್ಯಗಳ ಎಲ್ಲ ಗುಣ, ದೋಷಗಳೂ ಶಾಸನಗಳಲ್ಲಿ ಪ್ರತಿಫಲಿತವಾಗಿವೆ. ಕಳಸದ ಶಾಸನ, ವಿಷ್ಣುವರ್ಧನನ ಬೇಲೂರಿನ ಶಾಸನ ಮುಂತಾದ ಶಾಸನಗಳಲ್ಲಿ ವಿರೋಧಾಭಾಸ, ಶ್ಲೇಷೆ, ಉತ್ಪ್ರೇಕ್ಷೆ ಮುಂತಾದ ಅಲಂಕಾರಗಳನ್ನು ಕಾಣಬಹುದು. ಕೆಲವು ಶಾಸನಗಳಲ್ಲಿ ಆಡುಮಾತಿನ ನಿರಲಂಕೃತ ಗದ್ಯಶೈಲಿಯನ್ನು ಕಾಣಬಹುದು. ಕೆಲವು ಕವಿಗಳು ಶಾಸನದ ನೆಪದಲ್ಲಿ ಕಾವ್ಯವನ್ನೇ ಬರೆದಿದ್ದೇವೆ ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ನಾಡಿನ ಇತಿಹಾಸ, ಸಂಸ್ಕೃತಿ ಇವುಗಳ ಅಧ್ಯಯನದ

---

[76] EC. VII. Sk. 222, 223, 224.

[77] EC. VII. Sk. 98, 1103 A.D.

[78] ಅದೇ— "ಪರಿಕಿಸೆ ಮಲ್ಲಿದೇವ ವಿಭುಗಾರ್ ಸಮನಿರ್ಬರುಮಿರ್ಕೆಲಂಗಳೊಳ್ ಬರೆದುವಿನಂತ್ಯದಿಂ ಬರೆವ ಬಾಜಿಪ ಬಾಜಿಪ. ಕಬ್ಬವೆಂತುಟಂತಿರೆ ಪೊಸಗಬ್ಬಮಂ ನುಡಿವ ಭಾವಿಸಿ ಕೇಳ್ವ ಕಥಾಚತುಷ್ಕಮಂ ಧರೆ ಪರಿಕರ್ಮನೆಂದಿನಿತುಮಂ ಗುಣಿಯಿಪ್ಪ ಮತಿಪ್ರಭಾವದೊಳ್ ॥ ಶ್ರೀಮತ್ ಸಹಜಸಾರಸ್ವತ । ವಾಚಕ ವಾರಿಜಾಸನಂ । ನಾನಾವಿಧಾವಧಾರಣಾ ಚಕ್ರವರ್ತಿ ಮಲ್ಲಿಕಾರ್ಜುನ ಭಟ್ಟಂ ಕವಿಕಂಜ ಸಂಭವಂ॥ "

ದೃಷ್ಟಿಯಿಂದ ಶಾಸನಗಳಿಗೆ ಮುಖ್ಯಸ್ಥಾನವು ಸಂದಿದೆ, ಸಲ್ಲುತ್ತಿದೆ. ಅದರ ಜೊತೆಗೆ, ಅವುಗಳ ಕಾವ್ಯ ಗುಣವೂ ಅಲಕ್ಷಿಸುವಂತಹುದಲ್ಲ ಎಂಬುದನ್ನು ನೆನಪಿಡಬೇಕು. ಕನ್ನಡದಲ್ಲಿ ಸಾಹಿತ್ಯಕೃತಿಗಳು ಕಾಣಿಸಿ ಕೊಳ್ಳುವುದಕ್ಕೆ ಬಹುಮುನ್ನವೇ ಸಾಹಿತ್ಯಗುಣದ ಶಾಸನಗಳು ಕಾಣಿಸಿಕೊಂಡಿದ್ದುವು. ಹಿಂದೆ ಒಮ್ಮೆ ಹೇಳಿದಂತೆ, ಶಾಸನಗಳು ಕನ್ನಡ ಸಾಹಿತ್ಯದ ತಲಕಾವೇರಿ. 'ಶಾಸನಸಾಹಿತ್ಯ'ದ ಅಧ್ಯಯನವಿಲ್ಲದೆ ಕನ್ನಡ ಸಾಹಿತ್ಯದ ಅಧ್ಯಯನವು ಪೂರ್ಣವಾಗುವುದಿಲ್ಲ ಎಂದು ಧೈರ್ಯವಾಗಿ ಹೇಳಬಹುದು.

## ಅ. ಶಾಸನ ಸಂಪುಟಗಳು

Epigraphia Carnatica, Vol. I–XVI.
Mysore Archaeological Reports.
South Indian Inscriptions, Vol. III, iii ; VIII ; IX. i ; IX. ii.; XV ; XX.
Bombay Karnatak Inscriptions, Vol. I, Part i and Vol. I, Part ii.
Archaeological Survey of India.
Karnatak Inscriptions, Vol. I, Vol. II, Vol. III, Vol. IV, Vol. V.
Inscriptions in Northern Karnatak and Kolhapur State.
Epigraphia Indica.
Indian Antiquary.
Annual Report on Kannada Research in Bombay Province (1939–40).
Journal of the Bombay Branch of the Royal Asiatic Society.
Jainism in South India and some Jaina Epigraphs.
Kannada inscriptions of Andhrapradesh
Inscriptions from Nanded District.
Select stone Inscriptions of Andhrapradesh.
A corpus of Inscriptions in the Kannada Districts of Hyderabad State.

## ಆ. ಗ್ರಂಥಗಳು

### ಇಂಗ್ಲಿಷ್

Acharya, P. K. .. *Architecture of Mānasāra.*
.. *Mānasāra—an Encyclopaedia of Hindu Architecture.*
Alexander, P.C. .. *Buddhism in Kerala.*
Altekar, A. S. .. *The Rāṣṭrakūṭas and their times.*
.. *Education in Ancient India.*
.. *The Position of Women in Hindu Civilization.*
.. *History of Village Communities in Western India.*
Amulya Chandra Sen .. *Aśoka's Edicts.*
Ananda Coomaraswamy .. *Dance of Shiva.*
Appadorai, A. .. *Economic Conditions in South India, I & II.*
Apte, V. M. .. *Social and Religious Life in the Gṛhya Sūtras.*
Arnold, Mathew .. *Culture and Anarchy.*
Banarjea, Pramathnatha .. *Public Administration in Ancient India.*
Basham, A.L. .. *The Wonder that was India.*
.. *History and Doctrines of the Ājīvikas.*
Benedict, Ruth .. *Patterns of Culture.*
Bhandarkar, R.G. .. *Vaiṣṇavism, Śaivism and Minor Religious Systems (Collected Works, IV.).*

Bhattacharya, B. .. *Buddhist Iconography.*

.. *An Introduction to Buddhist Esoterism.*

Brown, C.J. .. *The Coins of India.*

Buhler, G. .. *Indian Palaeography.*

Burgess, James .. *Archaeological Survey of Western India, Belgaum and Kaladgi Districts.*

Burrow, T. . *The Sanskrit Language.*

Chakladar .. *Social Life in Ancient India.*

Chakraberty, Chandra .. *An Interpretation of Ancient Indian Medicine.*

Chanana, Dev Raj .. *Slavery in Ancient India.*

Cleator, P. E. .. *The Past in Pieces.*

Cousens, Henry .. *The Chalukyan Architecture.*

Dasgupta, C. C. .. *The Development of the Kharoṣṭhi Script.*

Dasgupta, S. B. .. *An Introduction to Tāntric Buddhism.*

Dasgupta, S. N. .. *A History of Indian Philosophy, V.*

Dasgupta, S. N. & De, S. K. .. *History of Sanskrit Literature, I.*

Date, G. T. .. *The Art of War in Ancient India.*

Davids, Rhys .. *Buddhism.*

Davis, Kingsley .. *Human Society.*

De, S. K. .. *Early History of the Vaiṣṇava Faith and Movement in Bengal.*

Deo, S. B. .. *History of Jaina Monarchism.*

Derrett, D. .. *The Hoysaḷas.*

Desai, P. B. .. *Jainism in South India and some Jaina Epigraphs.*

Desai, P. B., Ritti, R.S., & Gopal, B. R. .. *A History of Karnataka*

Dixit, S. K. .. *An Introduction to Archaeology.*

Dixit, G. S. .. *Local Self-government in Mediaeval Karnataka.*

Dixitar, V. R. R. .. *Hindu Administrative Institutions.*

.. *War in Ancient India.*

Dutt, N. K. .. *Origin and Growth of Caste in India.*

Eliot, T. S. .. *Notes towards the definition of Culture.*

Emerson .. *Complete works.*

Fairchild, Henry Pratt .. *Dictionary of Sociology.*

Fergusson, James .. *History of Indian and Eastern Architecture, I & II.*

Fleet, J. F. .. *Epigraphy (Imperial Gazetteer of India, II).*

.. *The Dynasties of the Kanarese Districts (Bombay Gazetteer, I. ii),*

Gandhi, M. K. .. *Women and Social Injustice.*

Ganhar, J. N. & Ganhar, P. N. .. *Buddhism in Kashmir and Ladakh.*

Gevirts, Stonley .. *Curse motifs in the old Testament and in the Ancient Near East: (Ph.D. dissertation, 1959, Univ. of Chicago. Unpublished)*

Ghoshal, U. N. .. *Contributions to the History of the Hindu Revenue System.*

Ghurye, G. S. .. *Caste and Class in India.*

.. *Indian Sadhus.*

Gokhale, B. G. .. *Ancient India.*

Goneim, Zakaria .. *The Buried Pyramid.*

Gopinatha Rao, T. A. .. *Elements of Hindu Iconography.*

Goswami, A. .. *The Art of the Rāṣṭrakūṭas.*

Guy S. Metraux and Francois Crouzet (Editors) .. *Studies in the Cultural History of India.*

Handiqui, K. K. .. *Yaśastilaka and Indian Culture.*

Hillers R. Delbert .. *Treaty curses and the old Testament Prophets (Rome. 1964)*

Hiriyanna, M. .. *Essentials of Indian Philosophy.*

Hutton, J. H. .. *Caste in India.*

Indra .. *The Status of Women in Ancient India.*

Jayaswal, K. P. .. *Hindu Polity.*

Jolly, Julius .. *Indian Medicine (Tr. C. G. Kashikar).*

.. *Hindu Law and Custom (Tr. Balakrishna Ghosh).*

Kailaspathy, K. .. *Tamil Heroic poetry*

Kane, P. V. .. *History of Dharmaśāstra, I—IV.*

Karmarkar, A. P. .. *The Cultural History of Karnāṭak.*

Karmarkar, A. P. & Kalamdani, N. B. .. *Mystic Teachings of the Haridāsas of Karnāṭak.*

Krishna Shastry, H. .. *South Indian Images of gods and goddesses.*

Krishnaswami Iyengar, S. .. *Early History of Vaiṣṇavism in South India.*

.. *Contributions of South India to Indian Culture.*

.. *Ancient India and South Indian History and Culture, II.*

.. *Evolution of the Hindu Administrative Institutions in South India.*

Kunduri Eswara Dutt .. *Inscriptional Glossary of Andhra Pradesh (Telugu)*

Mahalingam, T. V. .. *Administration and Social life under Vijayanagara.*

Majumdar, B. K. .. *The Military System in Ancient India.*

Majumdar, B. P. .. *The socio-economic History of Northern India.*

Majumdar, R. C. .. *Corporate Life in Ancient India.*

(General Editor) .. *The Struggle for Empire (Bharatiya Vidya Bhavan, Bombay).*

Marshall, Sir John .. *Mohenjo-daro and the Indus Civilization, I.*

Mookerji, R. K. .. *Ancient Indian Education.*
.. *History of Indian Shipping.*
.. *Local Government in Ancient India.*
Moraes, G. M. .. *The Kadamba Kula.*
Motwani, Kewal .. *Manudharmaśāstra.*
Mugali, R. S. .. *The Heritage of Karnatak.*
Nandimath, S. C. .. *A Handbook of Vīraśaivism.*
Nanjundayya, H. V. .. *Ethnographical Survey of Mysore.*
Nanjundayya, H. V. and Ananthakrishna Iyer .. *The Mysore Tribes and Castes, IV.*
Narasimhachar, R. .. *History of Kannada Literature.*
.. *Kēśava Temple at Bēlūr.*
Nehru, Jawaharlal .. *The Discovery of India.*
Nilakanthashastry, K. A. .. *The Cōḷas.*
.. *Studies in Cōḷa History and Administration.*
.. *A History of South India.*
Oppert, Gustav .. *On the Weapons, Army Organisation and Political Maxims of the Ancient Hindus, with Special Reference to Gunpowder and Fire-arms.*
Pandey, K. C. .. *Abhinavagupta, a Historical and Philosophical Study.*
Pandey, R. B. .. *Indian Palaeography.*
Patil, D. R. .. *Cultural History from the Vāyupurāṇa.*
Pillay .. *Tamils 1800 Years Ago.*
Prabhu, P. N. .. *Hindu Social Organisation.*
Puri, B. N. .. *India in the Time of Patanjali.*
Pusalkar, A. D. .. *Studies in Epics and Purāṇas of India.*
Radhakrishnan, S. .. *Gautama the Buddha.*
.. *Indian Philosophy, II.*
Ramakrishnananda, Swami .. *Life of Śrī Rāmānuja.*
Rangaswami Iyengar, K. V. .. *Consideration on some Aspects of Ancient Indian Polity.*
Raychaudhuri, Hemchandra .. *Materials for the Study of the Early History of the Vaiṣṇava Sect.*
Rice, B. L. .. *Mysore and Coorg from Inscriptions.*
Sachau, C. E. *Alberuni's India, I and II.*
Sakhare, M. R. .. *History and Philosophy of Lingāyat Religion (Introduction to 'Lingadhāraṇacandrikā').*
Saletore, B. A. .. *India's Diplomatic Relations with the West.*
.. *Social and Political Life in Vijayanagar Empire, I and II.*

.. *Mediaeval Jainism*

.. *Ancient Karnāṭaka, I.*

.. *The Sthānikas and their Historical Importance (Reprinted from the Journal of the Bombay University, VII. i.).*

Sangave .. *Jaina Community—A Social Survey.*

Satyanarayana Rao, R. .. *The Kuḍimiyāmalai Inscription on Music.*

Sewell, Robert .. *A Forgotten Empire.*

Shah, C. J. .. *Jainism in North India.*

Sharma, S. B. .. *Jainism and Karnāṭaka Culture.*

Shivaramamurthy, C. .. *Indian Epigraphy and South Indian scripts.*

Sircar, D. C. .. *Successors of the Śātavāhanas in the Lower Deccan.*

.. *Indian Epigraphy.*

.. *Indian Epigraphical Glossary*

Smith, V. .. *The Early History of India.*

Srikanthashastri, S .. *Sources of Karnāṭaka History, I.*

Stevenson .. *The Heart of Jainism.*

Subba Rao, Adaki .. *A Selection of Stories and Research Papers in the Kanarese Language, etc.*

Thompson, Edward .. *Suttee.*

Thurston, Edgar .. *Castes and Tribes of Southern India, I.*

Tagore, Rabindranath .. *Lectures and Addresses.*

.. *The Centre of Indian Culture.*

Toynbee, Arnold .. *A Study of History (Abridged).*

.. *An Historian's Approach to Religion.*

Upadhyaya, B. S. .. *India in Kālidāsa.*

Venkataramanayya, N. .. *Studies in the History of the Third Dynasty of Vijayanagar.*

Venkatasubbaiah, A .. *The Kalās*

.. *Some Śaka dates in Inscriptions.*

.. *A Twelfth Century University inMysore.*

Venkateswara, S. V. .. *Indian Culture through the Ages, I.*

Wach, Joachim .. *Sociology of Religion.*

Watters, Thomas .. *On Yuan Chwang's Travels in India, I and II.*

Whitney, F. L. .. *Elements of Research.*

Winternitz, M. .. *History of Indian Literature.*

Zimmer, H. .. *Philosophies of India.*

ಕನ್ನಡ (ಪ್ರಾಚೀನ ಕೃತಿಗಳು)

ಅಜಿತಪುರಾಣ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ಅನಂತನಾಥಪುರಾಣ .. ಸಂ. ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್.
ಅಲ್ಲಮನ ವಚನಚಂದ್ರಿಕೆ .. ಸಂ. ಎಲ್. ಬಸವರಾಜು.
ಆದಯ್ಯನ ವಚನಗಳು .. ಸಂ. ಉತ್ತಂಗಿ ಚೆನ್ನಪ್ಪ.
ಆದಿಪುರಾಣ .. ಸಂ. ಕೆ. ಜಿ. ಕುಂದಣಗಾರ.
ಕನ್ನಡದ ಬಾವುಟ .. ಸಂ. ಬಿ. ಎಂ. ಶ್ರೀಕಂಠಯ್ಯ.
ಕವಿರಾಜಮಾರ್ಗ .. ಸಂ. ಎಚ್. ಶೇಷಯ್ಯಂಗಾರ್.
ಕಾದಂಬರಿ .. ಸಂ. ಬಿ. ಮಲ್ಲಪ್ಪ.
ಕಾವ್ಯಸಾರಂ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ಕಾವ್ಯಾವಲೋಕನಂ .. ಸಂ. ಆರ್. ನರಸಿಂಹಾಚಾರ್.
ಗದಾಯುದ್ಧ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ಗದಾಯುದ್ಧ ಸಂಗ್ರಹ .. ಸಂ. ತೀ. ನಂ. ಶ್ರೀಕಂಠಯ್ಯ.
ಗಿರಿಜಾಕಲ್ಯಾಣ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ಚನ್ನಬಸವಣ್ಣನವರ ವಚನಗಳು .. ಸಂ. ಫ. ಗು. ಹಳಕಟ್ಟಿ.
ಜೀವಸಂಬೋಧನೆ
ತತ್ವರತ್ನ ಪ್ರದೀಪಿಕೆ .. ಸಂ. ಎ. ಶಾಂತಿರಾಜ ಶಾಸ್ತ್ರಿ.
ಧರ್ಮನಾಥಪುರಾಣ
ಧರ್ಮಾಮೃತ .. ಸಂ. ಆರ್. ಶಾಮಾಶಾಸ್ತ್ರಿ.
ನಂಬಿಯಣ್ಣನ ರಗಳೆ .. ಸಂ. ತೀ. ನಂ. ಶ್ರೀಕಂಠಯ್ಯ.
ಪಂಚತಂತ್ರ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ಪಂಪಭಾರತ .. ಸಂ. ಬೆಳ್ಳಾವೆ ವೆಂಕಟನಾರಾಯಣಪ್ಪ.
ಪಂಪರಾಮಾಯಣ ಸಂಗ್ರಹ .. ಸಂ. ಡಿ. ಎಲ್. ನರಸಿಂಹಾಚಾರ್.
ಪ್ರಭುಲಿಂಗಲೀಲೆ .. ಸಂ. ಶಿ. ಶಿ. ಬಸವನಾಳ.
ಬಸವಣ್ಣನವರ ಷಟ್ಸ್ಥಲದ ವಚನಗಳು .. ಸಂ. ಶಿ. ಶಿ. ಬಸವನಾಳ.
ಬಸವರಾಜದೇವರ ರಗಳೆ .. ಸಂ. ಟಿ. ಎಸ್. ವೆಂಕಣ್ಣಯ್ಯ.
ಯಶೋಧರ ಚರಿತೆ .. ಸಂ. ಕ. ವೆಂ. ರಾಘವಾಚಾರ್.
ಲೀಲಾವತಿ .. ಸಂ. ಎಂ. ಎ. ರಾಮಾನುಜ ಅಯ್ಯಂಗಾರ್.
ವಡ್ಡಾರಾಧನೆ .. ಸಂ. ಡಿ. ಎಲ್. ನರಸಿಂಹಾಚಾರ್.
ವಿವೇಕ ಚಿಂತಾಮಣಿ .. ಸಂ. ಉಮಾಪತಿಶಾಸ್ತ್ರಿ.
ವ್ಯವಹಾರಗಣಿತ .. ಸಂ. ಎಂ. ಮರಿಯಪ್ಪ ಭಟ್ಟ.
ಶಬ್ದಮಣಿದರ್ಪಣ .. ಸಂ. ಡಿ. ಎಲ್. ನರಸಿಂಹಾಚಾರ್.
ಶಾಂತಿಪುರಾಣ .. ಸಂ. ಎಚ್. ಶೇಷಯ್ಯಂಗಾರ್.
ಶಿವತತ್ವಚಿಂತಾಮಣಿ .. ಸಂ. ಎಸ್. ಬಸಪ್ಪ.
ಸಮಯಪರೀಕ್ಷೆ .. ಸಂ. ಬಿ. ಎಸ್. ಕುಲಕರ್ಣಿ.
ಸಿದ್ಧರಾಮ ಚಾರಿತ್ರ .. ಸಂ. ಟಿ. ಎಸ್. ವೆಂಕಣ್ಣಯ್ಯ ಮತ್ತು ಡಿ. ಎಲ್. ನರಸಿಂಹಾಚಾರ್.
ಸುಕುಮಾರ ಚರಿತೆ .. ಸಂ. ತ. ಸು. ಶಾಮರಾವ್ ಮತ್ತು ಡಿ. ಎಲ್. ನರಸಿಂಹಾಚಾರ್.
ಸೂಕ್ತಿಸುಧಾರ್ಣವ .. ಸಂ. ಎನ್. ಅನಂತರಂಗಾಚಾರ್.

ಹರಿಹರನ ಮೂರು ರಗಳೆಗಳು .. ಸಂ. ಎಸ್. ಎಸ್. ಮಾಳವಾಡ.
ಹರಿಹರನ ರಗಳೆಗಳು (ಭಾಗ 1) .. ಸಂ. ಫ. ಗು. ಹಳಕಟ್ಟಿ.

**ಕನ್ನಡ** (ನೂತನ ಕೃತಿಗಳು)

ಅಣ್ಣಾರಾವ್, ಮಿರ್ಜಿ .. ಜೈನಧರ್ಮ.
ಅಣ್ಣೀಗೇರಿ, ಎ. ಎಂ. ಮತ್ತು ಮಲ್ಲಾರಿ, ಮೇವುಂಡಿ .. ಶಾಸನ ಸಾಹಿತ್ಯ ಸಂಚಯ.
ಕಲಬುರ್ಗಿ, ಎಂ.ಎಂ. .. ಕನ್ನಡ ಗ್ರಂಥ ಸಂಪಾದನ ಶಾಸ್ತ್ರ
ಕಸ್ತೂರಿ, ನಾ. .. ಅಶೋಕ.
ಕೃಷ್ಣ, ಎಂ. ಎಚ್. .. ಕರ್ನಾಟಕದ ಪೂರ್ವಚರಿತ್ರೆ.
.. ಕನ್ನಡ ನಾಡಿನ ಚರಿತ್ರೆ, III.
ಕೃಷ್ಣರಾಯ, ಕಪಟರಾಳ .. ಕರ್ನಾಟಕ ಲಾಕುಳ ಶೈವರ ಇತಿಹಾಸ.
.. ಕರ್ನಾಟಕ ಸಂಸ್ಕೃತಿಯ ಸಂಶೋಧನೆ
ಕೃಷ್ಣಶರ್ಮ, ಬೆಟಗೇರಿ .. ಕರ್ನಾಟಕ ಜನಜೀವನ.
ಕೃಷ್ಣಸ್ವಾಮಿ ಅಯ್ಯಂಗಾರ್, ಎಚ್. ಎಸ್. .. ಶ್ರೀ ರಾಮಾನುಜ.
ಗುಂಡಪ್ಪ, ಡಿ. ವಿ. .. ಸಂಸ್ಕೃತಿ.
ಚಿದಾನಂದಮೂರ್ತಿ, ಎಂ. .. ಶೂನ್ಯಸಂಪಾದನೆಯನ್ನು ಕುರಿತು.
.. ಸಂಶೋಧನ ತರಂಗ.
.. ಸಂಶೋಧನ ತರಂಗ, ಸಂ. 2.
ತಿಮ್ಮಪ್ಪಯ್ಯ, ಮುಳಿಯ .. ಕವಿರಾಜಮಾರ್ಗ ವಿವೇಕ.
ದೇಸಾಯಿ, ಪಿ. ಬಿ. .. ಕನ್ನಡ ನಾಡಿನ ಚರಿತ್ರೆ, I.
ನಂದೀಮಠ, ಎಸ್. ಸಿ. .. ಕನ್ನಡ ನಾಡಿನ ಚರಿತ್ರೆ, II.
ನರಸಿಂಹಮೂರ್ತಿ, ಎ. ವಿ. .. ಸಾಂಸ್ಕೃತಿಕ ಬೃಹದ್ಭಾರತ
ನರಸಿಂಹಾಚಾರ್, ಡಿ. ಎಲ್. .. ಶಬ್ದವಿಹಾರ.
.. ಕನ್ನಡ ಗ್ರಂಥ ಸಂಪಾದನೆ.
ನರಸಿಂಹಾಚಾರ್, ಆರ್. .. ಶಾಸನ ಪದ್ಯಮಂಜರಿ.
.. ಕರ್ನಾಟಕ ಕವಿಚರಿತೆ, I. II.
ಪಂಚಮುಖಿ, ಆರ್. ಎಸ್. .. ಕರ್ನಾಟಕದ ಶಿಲಾಶಾಸನಗಳು.
.. ಕರ್ನಾಟಕದ ಹರಿದಾಸ ಸಾಹಿತ್ಯ
.. ಕರ್ನಾಟಕದ ಇತಿಹಾಸ.
ಪುಟ್ಟಣ್ಣ, ಎಂ. ಎಸ್. .. ಕುಣಿಗಲ ರಾಮಾಶಾಸ್ತ್ರಿಗಳ ಚರಿತ್ರೆ.
.. ಮಾಡಿದ್ದುಣ್ಣೋ ಮಹಾರಾಯ
ಬಂಕಿಮಚಂದ್ರ ಚಟ್ಟೋಪಾಧ್ಯಾಯ .. ಶ್ರೀ ಕೃಷ್ಣಚರಿತ್ರೆ [ಅನು. ಆರ್. ವ್ಯಾಸರಾವ್].
ಮುಗಳಿ, ರಂ. ಶ್ರೀ. .. ಕನ್ನಡಸಾಹಿತ್ಯ ಚರಿತ್ರೆ.
ಮಲ್ಲಾರಿ, ಮೇವುಂಡಿ .. ಕನ್ನಡ ನಾಡಿನ ಕೆಲವು ಶಾಸನಕವಿಗಳು.
ಯಾಮುನಾಚಾರ್ಯ, ಎಂ. .. ಆಚಾರ್ಯ ರಾಮಾನುಜರು.
ರಮೇಶ್, ಕೆ. ವಿ. .. ಕರ್ನಾಟಕ ಶಾಸನ ಸಮೀಕ್ಷೆ.
ಲಕ್ಷ್ಮೀನಾರಾಯಣರಾವ್, ಎನ್. ಮತ್ತು ಪಂಚಮುಖಿ, ಆರ್. ಎಸ್. .. ಕರ್ನಾಟಕದ ಅರಸುಮನೆತನಗಳು.
ವೆಂಕಣ್ಣಯ್ಯ, ಟಿ. ಎಸ್. .. ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಇತರ ಲೇಖನಗಳು.
ಶ್ರೀಕಂಠಯ್ಯ, ತೀ. ನಂ. .. ರಾಕ್ಷಸನ ಮುದ್ರಿಕೆ.
.. ಸಮಾಲೋಕನ.

ಶ್ರೀಕಂಠಶಾಸ್ತ್ರೀ, ಎಸ್. .. ಭಾರತೀಯ ಸಂಸ್ಕೃತಿ.
ಶ್ರೀನಿವಾಸಮೂರ್ತಿ, ಎಂ. ಆರ್. .. ವಚನಧರ್ಮಸಾರ.
ಸೀತಾರಾಮಯ್ಯ, ವಿ. .. ಕವಿರಾಜಮಾರ್ಗ (ಲೇಖನ ಸಂಕಲನ)
ಜ್ಞಾನೋಪಾಸಕ.
ದೇವರದಾಸಿಮಾರ್ಯಪ್ರಶಸ್ತಿ.
ಸಂಭಾವನೆ.
ಹೊಸಬೆಳಕು.

**ಸಂಸ್ಕೃತ**

ಅಭಿಜ್ಞಾನಶಾಕುಂತಲ
ಅಭಿಲಷಿತಾರ್ಥಚಿಂತಾಮಣಿ (ಮೈಸೂರು)
ಅಭಿಲಷಿತಾರ್ಥಚಿಂತಾಮಣಿ ಅಥವಾ ಮಾನಸೋಲ್ಲಾಸ (ಬರೋಡ)
ಅಮರಕೋಶ
ಅರ್ಥಶಾಸ್ತ್ರ .. ಕನ್ನಡಾನುವಾದ: ಕೆ. ಕೃಷ್ಣಭಟ್ಟ.
ಅರ್ಥಶಾಸ್ತ್ರ .. ಸಂ. ಟಿ. ಗಣಪತಿಶಾಸ್ತ್ರಿ.
*Arthaśāstra* .. Tr. ಆರ್. ಶಾಮಾಶಾಸ್ತ್ರಿ.
ಅಷ್ಟಾಂಗ ಹೃದಯಸಂಹಿತಾ, ಒಂದನೆಯ ಭಾಗ ಸೂತ್ರಸ್ಥಾನ. .. ಕರ್ಣಾಟಕ ಭಾಷಾನುವಾದ ಸಹಿತವಾದದ್ದು. ಸಂ. ಎನ್. ಎಲ್. ಭಟ್ಟಾಚಾರ್ಯ.
ಕಾದಂಬರೀ
*Kāmandakīya Nītisāra* .. Tr. M. N. Dutt.
ಕುಮಾರಸಂಭವ
*The Dharmaśāstra, II* .. Tr. M. N. Dutt.
ಪಾಶುಪತಸೂತ್ರಂ .. ಸಂ. ಆರ್. ಅನಂತಕೃಷ್ಣಶಾಸ್ತ್ರಿ.
ಪೂರ್ವಪುರಾಣ (ಕನ್ನಡಾನುವಾದ ಸಹಿತ) .. ಸಂ. ಎ. ಶಾಂತಿರಾಜಶಾಸ್ತ್ರಿ.
ಪ್ರಬೋಧಚಂದ್ರೋದಯ
ಬೃಹದಾರಣ್ಯಕ (ಕನ್ನಡಾನುವಾದ ಸಹಿತ) .. ಸ್ವಾಮೀ ಆದಿದೇವಾನಂದ.
ಬೃಹಸ್ಪತಿ ಸ್ಮೃತಿ
ಬೃಹತ್ಸಂಹಿತಾ
ಮನುಸ್ಮೃತಿ
.. "The Ordinances of Manu"-Tr. Burnell.
.. "Laws of Manu"-Tr. Bühler.
.. ಬಿ. ಶ್ರೀನಿವಾಸಭಟ್ಟ ಅವರ ಕರ್ಣಾಟಕ ಟೀಕಾಸಹಿತ.
*Mānasāra* .. Tr. P. K. Acharya.
ಮಾಲವಿಕಾಗ್ನಿಮಿತ್ರ
ಯಾಜ್ಞವಲ್ಕ್ಯಸ್ಮೃತಿ .. ಮಿತಾಕ್ಷರಾ ಸಮೇತ.
ರಘುವಂಶ
ರತ್ನಕರಂಡಕ-ಶ್ರಾವಕಾಚಾರ .. ಅನು. ಅಣ್ಣಾರಾಯ ಅಪ್ಪಣ್ಣ ಮಿರ್ಜಿ.
ರಾಜತರಂಗಿಣಿ .. "River of Kings"-Tr. R. S. Pandit.
ವಾಚಸ್ಪತ್ಯ
ಶಬ್ದಕಲ್ಪದ್ರುಮ

ಶಿವಸೂತ್ರಗಳು .. ಸಂ. ಜೆ. ರುದ್ರಪ್ಪ.
ಶುಕ್ರನೀತಿಸಾರ
ಸರ್ವದರ್ಶನ ಸಂಗ್ರಹ
ಸುಶ್ರುತ ಸಂಹಿತಾ
ಹರ್ಷಚರಿತ .. Tr. Cowell.
ಹರ್ಷಚರಿತ

**ಹಿಂದಿ**

ಹರ್ಷಚರಿತ್–ಏಕ್ ಸಾಂಸ್ಕೃತಿಕ್ ಅಧ್ಯಯನ್ .. ವಿ. ಎಸ್. ಅಗರವಾಲಾ.

## ಇ. ಪತ್ರಿಕೆಗಳು*

Annals of the Bhandarkar Research Institute.
Asiatic Researches.
Bulletin of the School of Oriental and African Studies.
Epigrphia Indica.
Half-Yearly Journal of the Mysore University.
Indian Antiquary.
Indian Historical Quarterly.
Indian Linguistics.
Journal of Indian History.
Journal of the Asiatic Society of Bombay (New Series)
Journal of the Asiatic Society of Bengal.
Journal of the Bombay Branch of the Royal Asiatic Society.
Journal of the Bombay University.
Journal of the Department of Letters, Calcutta.
Journal of the Karnatak University (Humanities)
Journal of the Royal Asiatic Society.
Kannada Studies.
New Indian Antiquary.
Quarterly Journal of the Mythic Society.
The Illustrated Weekly of India.
The Journal of Oriental Research, Madras.
ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ.
ಪ್ರಬುದ್ಧ ಕರ್ಣಾಟಕ.
ಸಾಧನೆ.
ಕರ್ನಾಟಕ ಭಾರತಿ.
ಭಾರತಿ (ತೆಲುಗು)

*ಬಿಡಿ ಲೇಖನಗಳನ್ನು ಇಲ್ಲಿ ಪಟ್ಟಿ ಮಾಡಿಲ್ಲ. ನಿಬಂಧದಲ್ಲಿ, ಅದರಲ್ಲೂ ಅಡಿಟಿಪ್ಪಣಿಗಳಲ್ಲಿ ಅವುಗಳ ಹೆಸರನ್ನೂ ಆಕರವನ್ನೂ ಸೂಚಿಸಲಾಗಿದೆ.

## ಈ. ಅರ್ಥಕೋಶಗಳು, ವಿಶ್ವಕೋಶಗಳು, ಗೆಜೆಟಿಯರುಗಳು ಇತ್ಯಾದಿ

Encyclopaedia Britannica.
Encyclopaedia of Religion and Ethics.
Encyclopaedia of the Social Sciences.
Karnāṭak Darshan.
Karnāṭaka through the Ages.
Imperial Gazetteer of India, II.
Gazetteer of the Bombay Presidency, VII.
Bombay Gazetteer, XXIII (Bijapur District).
Bombay Gazetteer, XXI (Belgaum District).
Mysore Gazetteer (C. Hayavadana Rao).
Outline of Cultural Materials.
Prof. K. V. Rangaswami Iyengar Commemoration Volume.
Report of the Calendar Reform Committee, Government of India (1955).
A Kannada-English Dictionary (F. Kittel).
Tamil Lexicon.
Telugu-English Dictionary (C. P. Brown).
A Dravidian Etymological Dictionary (T. Burrow and M. B. Emeneau).
The Gospel of Sri Ramakrishna (Tr. M. Nikhilananda).
Two Thousand Five Hundred Years of Buddhism.
Pāla sadda mahaṇṇavo (Pandit Haragovindadas Trikamachand Sheth).
Śrīkaṇṭhikā (S. Srikantha Sastri Felicitation Volume).
Studies in Indian History and Culture (P. B. Desai Felicitation Volume).
ಕನ್ನಡ ಸಾಹಿತ್ಯ ಪರಿಷತ್ತಿನ "ಕನ್ನಡ ನಿಘಂಟು" (ಸಂಪುಟ 1.)

wo 12815—MUPM—1,100—23-8-78

